# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಉದ್ಯೋಗಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೦

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 10**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪





# ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ದಯದಿಂದಲೂ, ಮಹಾಗುರು ವಿನ ಪರಮಾನುಗ್ರಹದಿಂದಲೂ, ಸತ್ಪುರುಷರಾದ ಗ್ರಾಹಕರ ಸಹಕಾರ-ಸದಾಶಯಗಳಿಂದಲೂ—ಮೂವತ್ತು ಕುಸುಮಗಳಲ್ಲಿ ಹತ್ತನೆಯದಾದ ಈ ಕುಸುಮರೂಪವಾದ ಸಂಪುಟವನ್ನು ಹೊರತಂದಿರುತ್ತೇವೆ. ಈ ಕುಸುಮ ಸಂಪುಟವನ್ನು ಸಚ್ಚಿದಾನಂದಸ್ವರೂಪನಾದ ಭಗವಂತನ ಪಾದಾರವಿಂದ ಗಳಲ್ಲರ್ಪಿಸಿ ಅನಂತರ ಪ್ರಸಾದರೂಪವಾದ ಈ ಕುಸುಮಸಂಪುಟವನ್ನು ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಈ ಸಂಪುಟದ ವಾಚನ-ಮನನ-ನಿಧಿಧ್ಯಾಸನಾದಿಗಳಿಂದ ನಮ್ಮ ಪ್ರಿಯವಾಚಕರು ಪರಮಾತ್ಮನ ಪೂಜೆಯಿಂದ ಪಡೆಯಬಹುದಾದಷ್ಟು ಫಲವನ್ನೇ ಪಡೆಯುತ್ತಾರೆಂಬುದು ನಮ್ಮ ಅಭಿಪ್ರಾಯವಾಗಿದೆ.

ಒಂಬತ್ತನೆಯ ಸಂಪುಟವು ಹೊರಬಿದ್ದನಂತರ ಹತ್ತನೆಯ ಸಂಪುಟವು ಹೊರಬೀಳಲು ಸ್ವಲ್ಪ ಸಾವಕಾಶವೇ ಆಯಿತು. ಅನೇಕವಾಚಕರು ತಮ್ಮ ಬೇಸರವನ್ನು ವ್ಯಕ್ತಪಡಿಸಿರುತ್ತಾರೆ. ಆದರೆ ಈ ಸಾವಕಾಶವು ಕಾರಣವಿಲ್ಲದೇ ಆದುದಲ್ಲವೆಂಬುದನ್ನು ನಮ್ಮ ಪ್ರಿಯವಾಚಕರಿಗೆ ತಿಳಿಸಲು ಇಚ್ಛಿಸುತ್ತೇವೆ. ಬ್ಯಾಂಕುಗಳ ಮೂಲಕವಾಗಿ ನೂರಾರು ಮಂದಿ ಹೊಸ ಗ್ರಾಹಕರಾದರು. ಅವರೆಲ್ಲರಿಗೂ ಮುಗಿದುಹೋಗಿದ್ದ ಸಂಪುಟಗಳನ್ನು ಪುನರ್ಮುದ್ರಣ ಮಾಡಿಕೊಡಬೇಕಾದುದು ಅನಿವಾರ್ಯವಾಯಿತು. ಒಂಬತ್ತನೆಯ ಸಂಪು ಟದ ಪ್ರಕಾಶನಾನಂತರ ಮೂರು ಮತ್ತು ನಾಲ್ಕನೆಯ ಸಂಪುಟಗಳನ್ನು ಪುನರ್ಮುದ್ರಣಮಾಡಿ ನೂತನಗ್ರಾಹಕರೆಲ್ಲರಿಗೂ ಕಳುಹಿಸಿದ್ದೇವೆ. ಈಗ ನಮ್ಮ ಐದು ಸಾವಿರ ಮಂದಿ ಗ್ರಾಹಕರೂ ಮೊದಲಿನಿಂದ ಇದುವರೆಗಿನ ಎಲ್ಲ ಸಂಪುಟಗಳನ್ನೂ ಪಡೆದುಕೊಂಡಿರುತ್ತಾರೆ. ಯಾರಿಗಾದರೂ ಯಾವ ಕಾರಣದಿಂದಾದರೂ ಪುನರ್ಮುದ್ರಿತವಾದ ಸಂಪುಟಗಳು ತಲುಪದಿದ್ದರೆ ಕೂಡಲೇ ತರಿಸಿಕೊಳ್ಳಬೇಕಾಗಿ ವಿನಂತಿಸುತ್ತೇವೆ.

ಮೂರು ಮತ್ತು ನಾಲ್ಕನೆಯ ಸಂಪುಟಗಳ ಪುನರ್ಮುದ್ರಣದಿಂದಾಗಿ ಹತ್ತನೆಯ ಸಂಪುಟದ ಮುದ್ರಣವು ಸ್ವಲ್ಪ ಸಾವಕಾಶವಾಯಿತು. ಇದಕ್ಕೆ ಪ್ರಿಯವಾಚಕರು ಸಹಾನುಭೂತಿಯನ್ನು ತೋರುವರೆಂಬ ಭರವಸೆಯಿದೆ.

ಈ ಸಂಪುಟದ ಸಂಖ್ಯೆಯೇ ಸೂಚಿಸುವಂತೆ 'ಹತ್ತು'. ಮೇಲಕ್ಕೇನೋ ಹತ್ತುತ್ತಿದ್ದೇವೆ. ಆದರೆ ಇನ್ನೂ ಇರುವ ಇಪ್ಪತ್ತು ಮೆಟ್ಟಲುಗಳನ್ನು ನೆನೆಸಿ

ಕೊಂಡರೆ ಭಯವೇ ಆಗುತ್ತದೆ. ಆದರೆ ಪರಮಾತ್ಮನು ನಮ್ಮ ಮೇಲಿಟ್ಟಿರುವ ಕರುಣೆಯನ್ನು ನೆನೆಸಿಕೊಂಡಾಗ–'ನಾವು ಹತ್ತುತ್ತಿಲ್ಲ.; ಅವನೇ ಹತ್ತಿಸು ತ್ತಿದ್ದಾನೆ'–ಎಂಬುದನ್ನು ಸ್ಮರಿಸಿಕೊಂಡಾಗ ಭಯವು ಹೊರಟುಹೋಗುತ್ತದೆ. ಪ್ರಿಯವಾಚಕರಿಗೂ ಇದನ್ನೇ ಪುನಃ ಹೇಳಬಯಸುತ್ತೇವೆ. ಶ್ರೀಮನ್ಮಹಾ ಭಾರತಪ್ರಕಾಶನವೆಂಬುದು ಪರಮಾತ್ಮನ ಪವಾಡ. ಅವನ ಪವಾಡದಿಂದ ಈ ಮಹಾಕಾರ್ಯವು ನಡೆಯುತ್ತಿದೆ. ಇದರ ಪ್ರಕಾಶನದ ರೂಪ-ರೇಖೆಗಳು ಮಾನವನ ನಿರ್ಣಯಕ್ಕೆ ನಿಲುಕತಕ್ಕುವುಗಳಾಗಿಲ್ಲ. ತನ್ನದೇ ಆದ ವಿಶಿಷ್ಟರೀತಿಯಲ್ಲಿ ಈ ಮಹಾಕಾರ್ಯವನ್ನು ಅವನು ನಡೆಸಿಕೊಂಡು ಹೋಗುತ್ತಿದ್ದಾನೆ. ಆದುದರಿಂದ ಈ ಮಹಾಕಾರ್ಯವು ಪೂರ್ಣವಾಗಿ ಅವನ ಪಾದಾರವಿಂದಗಳಲ್ಲಿ ಅರ್ಪಿತವಾಗುವುದರಲ್ಲಿ ಯಾರೂ ಎಳ್ಳಷ್ಟೂ ಸಂಶಯಿಸಬೇಕಾಗಿಲ್ಲ.

ಹಿಂದಿನ ಸಂಪುಟಗಳಂತೆಯೇ ಈ ಸಂಪುಟವೂ 612 ಪುಟಗಳಿಂದ ಕೂಡಿದ್ದು ಕಥಾಭಾಗವು ಉದ್ಯೋಗಪರ್ವದ ಸನತ್ಸುಜಾತಪರ್ವದಿಂದ ಪ್ರಾರಂಭವಾಗಿ ಭಗವದ್ಯಾನಪರ್ವದ (ಶ್ರೀಕೃಷ್ಣಸಂಧಾನ) ಮಧ್ಯದಲ್ಲಿ ಮಾಧವೀಕಥೆಯ (ಗಾಲವಚರಿತೆ) ಮಧ್ಯಭಾಗದಲ್ಲಿ ಅಂತ್ಯವಾಗುತ್ತದೆ. ಸನತ್ಸುಜಾತಪರ್ವದಲ್ಲಿ ಉಚ್ಚವೇದಾಂತತತ್ತ್ವವನ್ನೂ–ಭಗವದ್ಯಾನಪರ್ವ ದಲ್ಲಿ ಉಚ್ಚರಾಜಕೀಯತತ್ತ್ವವನ್ನೂ ನಾವು ಈ ಸಂಪುಟದಲ್ಲಿ ಕಾಣಬಹುದಾಗಿದೆ.

ಮಹಾಭಾರತವು ಅಮೃತಸ್ವರೂಪವಾದ ವಿದ್ಯೆಯ ಮುದ್ದೆ. ಇದನ್ನು ಸವಿದಂತೆಲ್ಲಾ ಸವಿಯುತ್ತಲೇ ಇರಬೇಕೆನ್ನಿಸುತ್ತದೆ. ಆತ್ಮಕ್ಕೆ ಆನಂದವೂ, ಮನಸ್ಸಿಗೆ ಶಾಂತಿಯೂ ಉಂಟಾಗುತ್ತದೆ. ಇದು ವಾಚಕರ ಪತ್ರಗಳಿಂದ ಉದ್ಧೃತವಾದ ವಾಕ್ಯಗಳಾಗಿವೆ. ಇದನ್ನು ನಮ್ಮ ಕನ್ನಡಬಾಂಧವರೆಲ್ಲರೂ ಸವಿಯುವಂತಾಗಲೆಂಬ ಆಸೆಯಿದೆ. ಇದನ್ನೂ ಸಹ ಭಗವಂತನೇ ಪೂರ್ಣಮಾಡಿಕೊಡಬೇಕಾಗಿದೆ.

ಈ ನಮ್ಮ ಆಶಯವು ಪೂರ್ಣವಾಗಲು ಭಗವದನುಗ್ರಹದಿಂದ ಹಲವಾರು ಬ್ಯಾಂಕುಗಳು ಮಹಾಭಾರತವನ್ನು ಪಡೆಯುವ ಗ್ರಾಹಕರಿಗೆ ಸಾಲವೊದಗಿಸಲು ಮುಂದೆ ಬಂದಿವೆ. ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್ ಮತ್ತು ಕರ್ಣಾಟಕ ಬ್ಯಾಂಕ್–ಇವುಗಳ ಮೂಲಕವಾಗಿ ಮಹಾಭಾರತದ ಪೂರ್ಣಮಾಲೆಗೆ ಗ್ರಾಹಕರಾಗಬಹುದಾಗಿದೆ.

ಕೇವಲ 8-10 ರೂ.ಗಳ ಮಾಸಿಕ ಸುಲಭಕಂತುಗಳನ್ನು ಕಟ್ಟಿ ಇಪ್ಪತ್ತು ಸಾವಿರ ಪುಟಗಳ ಈ ಮಹಾಗ್ರಂಥವನ್ನು ಸಂಗ್ರಹಿಸಿಕೊಳ್ಳ ಬಹುದಾಗಿದೆ. ಈ ಕಂತು ಕಟ್ಟಲು ಕಡುಬಡವರಿಗೂ ಸಾಧ್ಯ. ಕೇವಲ 150-200 ರೂ. ವರಮಾನವಿರುವವರೂ ಈ ಸದವಕಾಶವನ್ನು ಬ್ಯಾಂಕುಗಳ ಮೂಲಕವಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆಂದು ತಿಳಿಸಲು ಹರ್ಷಿಸುತ್ತೇವೆ. ಆದರೆ ಈಗ ನೂರಾರು ಸಂಖ್ಯೆಯಲ್ಲಿ ಗ್ರಾಹಕರಾಗುತ್ತಿದ್ದಾರೆ. ಸಾವಿರಾರು ಸಂಖ್ಯೆಯಲ್ಲಿ ಗ್ರಾಹಕರಾಗಬೇಕೆಂಬುದು ನಮ್ಮ ಆಶಯವಾಗಿದೆ. ವಿಜಯಾ ಬ್ಯಾಂಕ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕಾರ್ಪೋರೇಷನ್ ಬ್ಯಾಂಕುಗಳೂ ನಮ್ಮ ಪ್ರಾರ್ಥನಾಪತ್ರವನ್ನು ಪರಿಶೀಲಿಸುತ್ತಿವೆ. ಸಾರ್ವಜನಿಕರಿಗೆ ಈ ಮಹಾಗ್ರಂಥವು ಸುಲಭವಾಗಿ ಸಿಕ್ಕುವಂತಾಗಲು ಈ ಬ್ಯಾಂಕಿನವರೂ ಸಹಕರಿಸುವರೆಂಬ ಭರವಸೆಯಿದೆ.

ಸಂಪಾದಕಮಂಡಲಿಯವರ ಕಾರ್ಯವು ಅಧಿಕವಾಗಿದೆ. ಒಂದು ದಿವಸವೂ ಬಿಡುವಿಲ್ಲದೇ ಕಾರ್ಯಮಾಡುವಂತಾಗಿದೆ. ಆದರೂ ಸ್ವಲ್ಪವಾದರೂ ಬೇಸರಿಸದೇ ನಗುಮುಖದಿಂದ ಕಾರ್ಯಮಾಡಿಕೊಟ್ಟು ನಿಃಸ್ಪೃಹತೆಯಿಂದ ಪ್ರೋತ್ಸಾಹಿಸುತ್ತಿರುವ ಈ ವಿದ್ವಾಂಸರ ಸೌಜನ್ಯವನ್ನು ಎಷ್ಟು ಬರೆದರೂ ಸ್ವಲ್ಪವೇ ಸರಿ. ಈ ಮಹಾಗ್ರಂಥದ ಪ್ರಕಟನೆಗೆ ಇವರು ವಜ್ರಕವಚಪ್ರಾಯರಾಗಿರುತ್ತಾರೆ. ದಯಾಮಯನಾದ ಪರಮಾತ್ಮನು ಇವರ ಮನೋಭೀಷ್ಟಗಳನ್ನು ಪೂರೈಸಿಕೊಡಲೆಂಬ ದೈನ್ಯಪ್ರಾರ್ಥನೆಯು ಮಾತ್ರ ನಮ್ಮದಾಗಿದೆ.

ಇದರ ಪ್ರಚಾರಕ್ಕೆ ಬೆಂಬಲಿಗರಾಗಿ ಅನೇಕ ಸುಹೃದರು ಮುಂದೆ ಬಂದಿದ್ದಾರೆ. ಮನೆ-ಮನೆಗೂ ಈ ಮಹಾಗ್ರಂಥವನ್ನು ತಲುಪಿಸಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಈ ಪ್ರಚಾರಕಾರ್ಯಕ್ಕೆ ಎಲ್ಲ ಗ್ರಾಹಕರೂ ಸಂಪೂರ್ಣ ಸಹಕಾರ ನೀಡಬೇಕು. ಕಡೆಯ ಪಕ್ಷ ಇಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಡಲೇಬೇಕೆಂದು ಸಂಕಲ್ಪಿಸಿ ಕಾರ್ಯಮಾಡಬೇಕು. ಮಹಾ ಭಾರತಕ್ಕೆ ಗ್ರಾಹಕರನ್ನಾಗಿ ಮಾಡಿಕೊಡುವುದು ಮಹಾಪುಣ್ಯಪ್ರಾಪಕ ವಾದುದು. ಇದರಿಂದ ವಿದ್ಯಾದಾನಮಾಡಿದ–ಅದಕ್ಕಿಂತಲೂ ಮಿಗಿಲಾಗಿ ಜ್ಞಾನದಾನಮಾಡಿದ–ಪುಣ್ಯವು ಲಭಿಸುತ್ತದೆ. ಆದುದರಿಂದ ನಮ್ಮ ಪ್ರಿಯ

ವಾಚಕರು ಇಬ್ಬರನ್ನು ಹೊಸ ಗ್ರಾಹಕರನ್ನಾಗಿ ಮಾಡಿಕೊಡಬೇಕೆಂಬ ಸತ್ಸಂಕಲ್ಪವನ್ನು ಇಂದೇ ಮಾಡಲಿ. ಈ ಮಹಾಗ್ರಂಥದ ವಿತರಣೆಯಲ್ಲಿ ನೆರವಾಗಲಿ.

ನಮ್ಮ ಕರ್ನಾಟಕರಾಜ್ಯದಲ್ಲಿರುವ ಎಲ್ಲ ಪ್ರೌಢಶಾಲೆಗಳ ವಾಚನಾಲಯ ಗಳಲ್ಲಿಯೂ (ಸುಮಾರು 2,500) ಈ ಮಹಾಗ್ರಂಥಗಳಿರುವಂತೆ ಪ್ರಯತ್ನಿಸುತ್ತಿದ್ದೇವೆ. ಈಗ ಸಾವಿರ ಶಾಲೆಗಳ ವಾಚನಾಲಯಗಳಲ್ಲಿ ಈ ಮಹಾಗ್ರಂಥವು ಉಪಲಬ್ಧವಾಗುವಂತಾಗಿದೆ. ಉಳಿದ ಸಾವಿರದ ಐದು ನೂರು ಶಾಲೆಗಳಲ್ಲಿಯೂ ಈ ಗ್ರಂಥವು ಉಪಲಬ್ಧವಾಗಬೇಕೆಂಬ ಪ್ರಯತ್ನದಲ್ಲಿದ್ದೇವೆ. ಪರಮಾತ್ಮನ ಅನುಗ್ರಹದಿಂದ ಈ ಸತ್ಸಂಕಲ್ಪವೂ ನೆರವೇರಬೇಕಾಗಿದೆ.

ಒಂಬತ್ತನೆಯ ಸಂಪುಟದ ಪ್ರಕಾಶನವು ಬೆಂಗಳೂರು ಶ್ರೀಶಂಕರ ಮಠದಲ್ಲಿ ಶ್ರೀ ಶ್ರೀ ಶಂಕರಾಚಾರ್ಯ ಅಭಿನವವಿದ್ಯಾತೀರ್ಥಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ ನಡೆಯಿತು. ಶ್ರೀ ಶ್ರೀ ಭಾರತೀತೀರ್ಥಸ್ವಾಮಿಗಳವರು ಗ್ರಂಥದ ಪ್ರಕಾಶನಸಮಾರಂಭವನ್ನು ನೆರವೇರಿಸಿದರು. ವಿದ್ವಾಂಸರನ್ನು ಗೌರವಿಸಲು ಶ್ರೀ ಶ್ರೀ ಶಂಕರಾಚಾರ್ಯ ಶ್ರೀ ರಾಮಚಂದ್ರಾಪುರಮಠದ ರಾಘವೇಂದ್ರ ಭಾರತೀ ಶ್ರೀಸ್ವಾಮಿಗಳು ಮತ್ತು ಶ್ರೀ ಪೇಜಾವರ ಮಠಾಧೀಶರು ಸುವರ್ಣಮಂತ್ರಾಕ್ಷತೆಯನ್ನು ಕಳುಹಿಸಿದ್ದರು. ಶ್ರೀ ಶ್ರೀ ಭಾರತೀತೀರ್ಥಸ್ವಾಮಿಗಳವರು ಫಲಮಂತ್ರಾಕ್ಷತೆಯನ್ನು ಆಶೀರ್ವಾದ ಪೂರ್ವಕವಾಗಿ ಸಂಪಾದಕಮಂಡಲಿಯವರಿಗೂ–ಪ್ರಕಾಶನಸಮಿತಿ ಯವರಿಗೂ ದಯಪಾಲಿಸಿದರು. ಶ್ರೀ ಶ್ರೀ ಅಭಿನವವಿದ್ಯಾತೀರ್ಥ ಸ್ವಾಮಿಗಳವರ ಮತ್ತು ಶ್ರೀ ಶ್ರೀ ಭಾರತೀತೀರ್ಥಸ್ವಾಮಿಗಳವರ ಅನುಗ್ರಹಭಾಷಣ ಗಳೊಡನೆ ಸಮಾರಂಭವು ಮುಕ್ತಾಯವಾಯಿತು.

ಈ ಹತ್ತನೆಯ ಸಂಪುಟಕ್ಕೆ ಮುನ್ನುಡಿಯನ್ನು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಶ್ರೀ ಡಿ.ವಿ. ಅರಸ್‌ರವರು ಬರೆದುಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಅಭಿನಂದನೆಗಳು.

ಮಹಾಭಾರತಪ್ರಕಾಶನಕ್ಕೆ ನಾನಾರೂಪಗಳಲ್ಲಿ ಸಹಕಾರ ನೀಡುತ್ತಿರು ವವರು ಅನೇಕಮಂದಿ ಇದ್ದಾರೆ. ಅವರೆಲ್ಲರ ಶುಭನಾಮಗಳನ್ನು ತಿಳಿಸಲು ಆ ಮಹನೀಯರೇ ಇಚ್ಛೆಪಡುತ್ತಿಲ್ಲ. ತೆರೆಮರೆಯಲ್ಲಿ ಭಗವದರ್ಪಣಭಾವ

ದಿಂದ ಈ ಕಾರ್ಯಮಾಡಬೇಕೆಂಬುದು ಅವರ ಇಚ್ಛೆಯಾಗಿದೆ. ಅವರೆಲ್ಲರಿಗೂ ದಯಾಮಯನಾದ ಭಗವಂತನು ಅವರ ಶುಭಕಾಮನೆಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

-ಪ್ರಕಾಶಕರು.

ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ಸರ್ವೇ ಜನಾಃ ಸುಖಿನೋ ಭವನ್ತು
ಸಮಸ್ತಸನ್ಮಙ್ಗಲಾನಿ ಭವನ್ತು

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶ್ರೀಶಂಕರಾಚಾರ್ಯ
ಶ್ರೀರಾಮಚಂದ್ರಾಪುರಮಠಸ್ಥ



ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।
ಶ್ರೀ ಕೇಶವಸುಬ್ರಹ್ಮಣ್ಯ ಕೌಶಿಕ, ಭಾರತ ದರ್ಶನ ಪ್ರಕಾಶನ,
ತ್ಯಾಗರಾಜನಗರ, ಬಸವನಗುಡಿ, ಬೆಂಗಳೂರು ಇವರಿಗೆ
ಶ್ರೀಮನ್ನಾರಾಯಣಸ್ಮರಣಪುರಸ್ಸರಂ ಸಂದಿಷ್ಟೋಽಯಂ ಸಂದೇಶಃ ॥

ಅದಾಗಿ :-ಶ್ರೀಮನ್ಮಹಾಭಾರತವು ವಿದ್ಯಾಹ್ಯೇತಾಶ್ಚತುರ್ದಶ ಎಂಬ ವಚನಾನುಸಾರ ಭಾರತೀಯ ವಿವಿಧ ವಿದ್ಯಾಸಾರಗಳುಳ್ಳ ಮಹಾವಿದ್ಯೆ. ಇಂದು ಇದರ ಅಧ್ಯಯನವು ಅಗತ್ಯವಾಗಿ ಬೇಕಾಗಿದೆ. ಮಾನವನು ಸಂಸ್ಕೃತನಾಗಬೇಕಾದರೆ ಮಹಾಭಾರತದ ಅಧ್ಯಯನವು ಸುತರಾಂ ಅವಶ್ಯಕ. ಕಾರಣ ಇದರ ವಾಚನ-ಮನನ-ನಿಧಿಧ್ಯಾಸನಗಳಿಂದ ಮಾನವನ ನಡೆ-ನುಡಿಗಳಲ್ಲಿಯೇ ವಿಶಿಷ್ಟವಾದ ಬದಲಾವಣೆಯಾಗುವುದೆಂಬುದು ಅನುಭವಸಿದ್ಧವಿಷಯ. ಇಂತಹ ಪರಮೋತ್ಕೃಷ್ಟ ಹಾಗೂ ಭಾರತೀಯರೆಲ್ಲರ ನಿಜಸಂಪದವಾದ ಭಗವದ್ಬಾದರಾಯಣಪ್ರಣೀತ ಶ್ರೀಮಹಾಭಾರತವನ್ನು ಮೂವತ್ತು ಸಂಪುಟಗಳಲ್ಲಿ ಪ್ರಕಾಶನಗೊಳಿಸಲು ಬೆಂಗಳೂರು, ಭಾರತ ದರ್ಶನಪ್ರಕಾಶನದವರು ದೈವೀಪ್ರೇರಣೆಯಿಂದ ಸತ್ಸಂಕಲ್ಪಿಸಿ ಇದೇ ಈಗ ಹತ್ತನೇ ಸಂಪುಟವನ್ನು ಹೊರತರುತ್ತಿರುವುದು ನಮಗೆ ಅತೀವ ಸಂತಸಕರವಾಗಿದೆ. ಈ ಹತ್ತನೇ ಸಂಪುಟದಲ್ಲಿ ಆಧ್ಯಾತ್ಮಿಕ ಮತ್ತು ರಾಜಕೀಯ ವಿಷಯಗಳೆರಡೂ ಸೇರಿರುವುದು ವಿಶಿಷ್ಟ ಹಾಗೂ ಮಹತ್ತ್ವಪೂರ್ಣವಾದ ವಿಷಯ. ಭಗವದ್ಬಾದರಾಯಣರು ಸನತ್ಸುಜಾತರ ಮೂಲಕ ಅಧ್ಯಾತ್ಮವಿಷಯವನ್ನೂ ಹಾಗೂ ಶ್ರೀಕೃಷ್ಣಪರಮಾತ್ಮನ ಮೂಲಕ ರಾಜಕೀಯ ಸಂಧಾನದ ವಿಷಯವನ್ನೂ ಬಹುರಮ್ಯವಾಗಿ ನಿರೂಪಿಸಿದ್ದಾರೆ. ಇಂತಹ ಅಪೂರ್ವವಿಷಯವಿರುವ ಹತ್ತನೇ ಸಂಪುಟವನ್ನು ಕನ್ನಡಿಗರು ಓದಿ ಮನನಮಾಡಿಕೊಳ್ಳುವರೆಂದು ಆಶಿಸುತ್ತೇವೆ.

ಪ್ರಕಾಶನದವರು ಈಗಾಗಲೇ ಹತ್ತು ಮೆಟ್ಟಲನ್ನು ಹತ್ತಿರುತ್ತಾರೆ. ಶ್ರೀ ಸೀತಾರಾಮಚಂದ್ರ-ಚಂದ್ರಮೌಳೀಶ್ವರರ ಪರಮಾನುಗ್ರಹದಿಂದ ಸಂಕಲ್ಪಿತ ಉಳಿದ ಇಪ್ಪತ್ತು ಸಂಪುಟಗಳನ್ನೂ ಸಹ ಸುಗಮವಾಗಿ ಪ್ರಕಾಶಿಸಲು ಸಮರ್ಥರಾಗಲೆಂದು ಹಾರೈಸುತ್ತೇವೆ.

ಇತಿಶ್ರೀಮನ್ನಾರಾಯಣಸ್ಮೃತಯಃ

---

ಮಿತಿ : ನಲನಾಮ ಸಂ. ದ ಶ್ರಾವಣ ಕೃಷ್ಣ ೪ ಯು ಭಾರ್ಗವವಾಸರೇ
(ತಾ|| 13-8-1976)

ವಸತಿ : ಶ್ರೀ ತುಂಗಾತೀರಸ್ಥ ತೀರ್ಥಹಳ್ಳಿ, ಶ್ರೀರಾಮಚಂದ್ರಾಪುರಮಠೇ.

# ಮುನ್ನುಡಿ

ರಾಮಾಯಣ ಮತ್ತು ಮಹಾಭಾರತ ಇವೆರಡೂ ಭಾರತೀಯ ಸಂಸ್ಕೃತಿಯ ಕಣ್ಣುಗಳು.; ಶತಶತಮಾನಗಳಿಂದ ಭಾರತೀಯಚೇತನವನ್ನು ಕೈಹಿಡಿದು ನಡೆಸುತ್ತಿರುವ ಆಸೆಯ ದೀಪಗಳು ; ಎಂದೂ ಆರದ ಸ್ಫೂರ್ತಿಯ ಸ್ರೋತಗಳು. ಬಹುಶಃ ಅರ್ಧಕ್ಕರ್ಧದಷ್ಟು ದೇಶೀಯಸಾಹಿತ್ಯ ಈ ಎರಡು ಮೂಲ ವೃಕ್ಷಗಳ ಟಿಸಿಲುಗಳಾಗಿ ಹಬ್ಬಿ ಹರಡಿವೆ–ಎಂಬ ಮಾತು ಸೂರ್ಯಪ್ರಕಾಶದಷ್ಟು ನಿಚ್ಚಳ.

ಈ ಎರಡು ಮಹಾಕಾವ್ಯಗಳಲ್ಲಿ ಐತಿಹಾಸಿಕವಾಗಿ ಅರ್ವಾಚೀನವಾಗಿ ನಿಲ್ಲುವ ಮಹಾಭಾರತಕ್ಕೆ ತನ್ನದೇ ಆದ ವಿಶಿಷ್ಟಸ್ಥಾನವಿದೆ. ರಾಮಾಯಣ ಮಾನವಚೇತನದ ಆದರ್ಶಗಳ ಉತ್ಕಟ ಅಭಿವ್ಯಕ್ತಿಯಾದರೆ, ಮಹಾಭಾರತ ಆದರ್ಶಗಳ ಸಂಘರ್ಷದ ಚಿತ್ರಣ. ರಾಮಾಯಣದಲ್ಲಿ ಸರಳತೆಯೇ ಗುಣ. ಶುದ್ಧವಿಭಾವಗಳು ಮೈದಳೆದಂತಿವೆ ಇಲ್ಲಿ ಸುಳಿದಾಡುವ ಪಾತ್ರಗಳು. ಆದರೆ ಭಾರತದಲ್ಲಿ ಹಾಗಲ್ಲ.; ಅದು ಹೇಳಿ ಕೇಳಿ ಸಂಕೀರ್ಣ ಹಂದರದ ಮೇಲೆ ಕಟ್ಟಿದ ಕಾವ್ಯ.; ಅಲ್ಲಿ ವಾಸ್ತವದ ಬಿರುಬೇಗೆಯಲ್ಲಿ ಆದರ್ಶದ ಕಂದಲುಗಳು ಕಮರಿ ಹೋಗದೆ ಉಳಿಯುವ ಸವಾಲನ್ನು ಎದುರಿಸಬೇಕಾಗುತ್ತದೆ. ಇಂಥ ಸವಾಲುಗಳ ಹಸಿ ಹಸಿ ಸಂಕೀರ್ಣತೆಯನ್ನು ಮಾನವಸ್ವಭಾವದ ವಿವಿಧ ಮಜಲುಗಳ ಪರಿಚಯದೊಡನೆ ಮೇಳೈಸಿ ನಿಂತ ಈ ಕೃತಿ ಸಹಜವಾಗಿಯೇ ಅನುಭವದ ಒಂದು ವಿಶ್ವಕೋಶವಾಯಿತು. ಸಾಹಿತ್ಯಪಿಪಾಸುಗಳಿಗೆ ಮುಗಿಯದ ಭಂಡಾರವಾಯಿತು.

ಭಾರತ ಐದನೆಯ ವೇದ ಎಂಬ ಮಾತು ಬಳಕೆಯಲ್ಲುಂಟು. ಆದರೆ ಇದು ವೇದಗಳ ವೇದ, ವೇದಗಳ ಸಾರಸರ್ವಸ್ವ ಎಂದು ನನ್ನ ಭಾವನೆ. 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್' (ಇಲ್ಲಿ ಇರುವುದು ಎಲ್ಲೆಡೆಯಲ್ಲಿಯೂ ಇದೆ. ಇಲ್ಲಿ ಇಲ್ಲದುದು ಮತ್ತೆಲ್ಲಿಯೂ ಇಲ್ಲ) ಎಂಬ ಚಾಟೂಕ್ತಿ ಹೊರಟಿದ್ದು ಇದರಿಂದಾಗಿಯೇ. ಈ ಪ್ರಶಂಸಾವಾಕ್ಯ ಈ ಕಾವ್ಯಕ್ಕೆ ಸಾರ್ಥಕವಾಗಿ ಅನ್ವಯಿಸುವಂಥದು ; ಹಾಗೆಯೇ ಈ ದೇಶಕ್ಕೆ ಕೂಡ.

ನಮ್ಮ ಭಾರತಭೂಮಿ ಇಂದು ನಡೆಯುತ್ತಿರುವ ಸಂಕ್ರಮಣದ ಯುಗದಲ್ಲಿ, ನೂರು ಭಾವಗಳು ಮಥಿಸಿ ಹೊಸದೊಂದು ಮುಂಬೆಳಗು ಮೂಡಿಬರಬೇಕಾದಂಥ ಈ ಪರ್ವಕಾಲದಲ್ಲಿ, ಇಂಥ ಕಾವ್ಯಗಳಿಗೆ ಕಾವ್ಯಚಟುವಟಿಕೆಗಳಿಗೆ

ಹೊಸ ಅರ್ಥ ಬರುತ್ತದೆ ; ಹಳೆಯ ಆಖ್ಯಾಯಿಕೆಗಳಿಗೆ ಹೊಸ ಆಯಾಮಗಳು ತೆರೆದುಕೊಳ್ಳುತ್ತವೆ. ಅನುಶಾಸನಪರ್ವದಲ್ಲಿರುವ ನಮಗೆ ಉದ್ಯೋಗಪರ್ವವೂ ಆವಶ್ಯಕವೇ. 'ಭಾರತೇ ಸಾರಮುದ್ಯೋಗಃ' ಎಂಬ ಮಾತು ಭಾರತದಲ್ಲಿ ಇದರ ಹಿರಿಮೆಯನ್ನೂ ಗರಿಮೆಯನ್ನೂ ಎತ್ತಿ ತೋರುತ್ತದೆ. ಹಾಗೆ ನೋಡಿದರೆ, ಈ ಪರ್ವದುದ್ದಕ್ಕೂ ಚಟುಲತೆಯೇ ಸ್ಥಾಯಿಯಾಗಿ ಕಂಡುಬರುವ ಕ್ರಿಯೆಯಾಗಿದೆ. ಇಂದು ನಮಗೆ ವಿದುರ ನೀತಿಯೂ ಬೇಕು, ಸನತ್ಸುಜಾತೀಯವೂ ಬೇಕು, ಸಂಧಾನವೂ ಬೇಕು, ಸಾಮರಸ್ಯವೂ ಬೇಕು ; ಸಮಯಬಿದ್ದರೆ ಧರ್ಮಾವಿರುದ್ಧರಾಗಿರುವ ನಮಗೆ ವಿರುದ್ಧವಾಗಿ ಯಾರಾದರೂ ಸೆಟೆದರೆ ಸೆಣೆಸಿದರೆ ಅವರನ್ನು ಮೆಟ್ಟಿನಿಲ್ಲುವ ಆತ್ಮಬಲವೂ ಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ನಮ್ಮ ಅರ್ಜುನಚೇತನವನ್ನು ಗುರಿಯೆಡೆಗೆ ಮುಟ್ಟಿಸುವ ಕೃಷ್ಣಸಾರಥ್ಯವೂ ಬೇಕು.

ಈ ಅರ್ಥದಲ್ಲಿ ಇಂಥ ಪುಸ್ತಕಗಳ ಪಠಣ-ಮನನಗಳಿಗೆ ನಾಡು ಹೆಚ್ಚಿಗೆ ಗಮನಕೊಡಬೇಕಾದುದು ಅಗತ್ಯ ಎನಿಸುತ್ತದೆ. ತೀರ ಇತ್ತೀಚಿನ ವರ್ಷಗಳ ವರೆಗೂ ಸಮಗ್ರ ಭಾರತ-ರಾಮಾಯಣಗಳ ಕಥೆಗಳು ಪ್ರಾಥಮಿಕಶಾಲೆಯ ವಿದ್ಯಾರ್ಥಿಗಳ ಪಠ್ಯಕ್ರಮದಲ್ಲೇ ಅಳವಟ್ಟಿತ್ತು. ಈಗ ಏಕೋ ಏನೋ-ಬಹುಶಃ ಇವೆಲ್ಲಾ ಧಾರ್ಮಿಕಸಾಹಿತ್ಯ ಎಂಬ ತಪ್ಪು ಗ್ರಹಿಕೆ ಯಿಂದಿರಬಹುದು–ಮೊದಲಿನಷ್ಟು ಪ್ರಾಧಾನ್ಯ ಅವಕ್ಕೆ ದೊರೆಯುತ್ತಿಲ್ಲವೆಂದು ತೋರುತ್ತದೆ. ಹಾಗೆ ನೋಡಿದರೆ, ಇವು ಸಾರತಃ ಸಾಂಸ್ಕೃತಿಕ ಕಾವ್ಯಗಳು ; ಒಂದು ಜನಾಂಗದ ಜೀವಂತಿಕೆಯನ್ನು ಹಿಡಿದಿಡಬಲ್ಲ ಚೈತನ್ಯಾಗಾರಗಳು. ಇದಕ್ಕೆ ಸಂಬಂಧಿಸಿದ ವಾದ-ವಿವಾದಗಳೇನೇ ಇರಲಿ, ನಮ್ಮ ಸಾಂಸ್ಕೃತಿಕ ಪರಂಪರೆಯನ್ನು–ಅದರ ಶುದ್ಧರೂಪದಲ್ಲಿ–ಮುಂದಿನ ಪೀಳಿಗೆಯವರಿಗೆ ತಲುಪಿಸಬೇಕಾದದ್ದು ನಮ್ಮ ಕರ್ತವ್ಯ, ಹೊಣೆಗಾರಿಕೆ ಎಂಬ ಮಾತನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಈ ಕರ್ತವ್ಯವನ್ನು, ಹೊಣೆಗಾರಿಕೆಯನ್ನು ಪ್ರೀತಿಯಿಂದ ಹೊತ್ತುಕೊಂಡು ನಿರ್ವಹಿಸುತ್ತಿರುವ ಭಾರತ ದರ್ಶನ ಪ್ರಕಾಶನದವರಿಗೂ, ಅದರ ಸಂಪಾದಕ ವರ್ಗಕ್ಕೂ ನಮ್ಮ ಜನ ಎಷ್ಟು ಋಣಿಯಾಗಿದ್ದರೂ ಸಾಲದು. ಹಿಂದೆ ರಾಜ-ಮಹಾರಾಜರುಗಳು ಸಾಹಿತ್ಯಕ್ಕೆ ನೀಡುತ್ತಿದ್ದ ರಕ್ಷಣೆ- ಪ್ರೋತ್ಸಾಹಗಳನ್ನು ಈಗ ಸ್ವಯಂಪ್ರಭುಗಳಾದ ಜನತೆ ನೀಡಬೇಕಾದುದು ತುಂಬ ಉಚಿತ. ಸಹಜ ವಾಗಿಯೇ ಉದಾರಿಗಳಾದ ಕನ್ನಡಿಗರಿಗೆ ಈ ವಿಷಯದಲ್ಲಿ ಇನ್ನೂ ಉದಾರತರ

ವಾದ ಅಂತಃಕರಣವನ್ನು ಭಗವಂತನು ದಯಪಾಲಿಸಲಿ, ಈ ಸಂಸ್ಕೃತಿಪ್ರಸಾರಕಾರ್ಯ ಅನುಸ್ಯೂತವಾಗಿ ನಡೆಯಲಿ ಎಂಬುದು ನನ್ನ ಆಶಯ.

ಕ್ರಾಫರ್ಡ್ ಭವನ, ಮೈಸೂರು-5 ಡಿ.ವಿ. ಅರಸ್,
27-8-76 ಕುಲಪತಿ.

## ದ್ವಿತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಈ ಸಂಪುಟದ ಎರಡನೆಯ ಮುದ್ರಣವನ್ನು ಮುಗಿಸಿದ್ದೇವೆ. ಈ ಮುದ್ರಣವು ಸಿದ್ಧವಾಗುವ ವೇಳೆಗೆ 4-5-6-11-14-15-16 ಈ ಏಳು ಸಂಪುಟಗಳು ಸಂಪೂರ್ಣವಾಗಿ ಮುಗಿದಿದ್ದು ಪುನರ್ಮುದ್ರಣವಾಗಬೇಕಾಗಿದೆ. 17-18-19-20 ಈ ಸಂಪುಟಗಳ ಕೆಲವೇ ಪ್ರತಿಗಳು ಉಳಿದಿವೆ. ಕಾಗದದ ದಾಸ್ತಾನು ಇಲ್ಲದೇ ಇರುವುದರಿಂದ ಬೇರೆಯ ಕಡೆ ಮುದ್ರಣಮಾಡಿಸುವುದನ್ನು ನಿಲ್ಲಿಸಿದ್ದೇವೆ. ಈಗ 25ನೇ ಸಂಪುಟದ ಮುದ್ರಣವನ್ನು ಪ್ರಾರಂಭಿಸಲಾಗಿದೆ. ಒಂದು ಹೊಸ ಮತ್ತು ಒಂದು ಹಳೆಯ ಸಂಪುಟವನ್ನು ಮುದ್ರಿಸುತ್ತಾ ಹೋಗುವ ಕಾರ್ಯಕ್ರಮವನ್ನೇ ಮುಂದುವರಿಸುತ್ತೇವೆ. ಇದರಿಂದ ಹಳೆಯ ಗ್ರಾಹಕರಿಗಾಗಲೀ ಹೊಸ ಗ್ರಾಹಕರಿಗಾಗಲೀ ಬೇಸರವಾಗದೆಂಬ ಭಾವನೆಯಿದೆ. ನಮ್ಮ ಪ್ರಾರ್ಥನೆಯಂತೆ ಇತ್ತೀಚೆಗೆ ಹಲವಾರು ಮಂದಿ ನೂತನ ಗ್ರಾಹಕರಾಗುತ್ತಿದ್ದಾರೆ. ಆದರೆ ನಾವು ನಿರೀಕ್ಷಿಸಿದಷ್ಟು ಮಂದಿ ಗ್ರಾಹಕರಾಗಿರುವುದಿಲ್ಲ. ಗ್ರಾಹಕರ ಸಂಖ್ಯೆ ಹೆಚ್ಚಿದಂತೆ ನಮ್ಮ ಕಾರ್ಯಗಳು ಸುಗಮಗೊಳ್ಳುವುವು.

ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟವನ್ನೂ ಪರಿಶೋಧಿಸಿ ಕೊಟ್ಟು ಉಪಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ತಿರುಮಲೆ-ತಿರುಪತಿ ದೇವಸ್ಥಾನದ ಸ್ಥಾಯೀ ಆಜ್ಞೆಯ ಪ್ರಕಾರ ಈ ಸಂಪುಟಕ್ಕೂ 5,000 ರೂ.ಗಳ ಸಹಾಯಧನ ದೊರೆಯಲಿದೆ. ತಿರುಮಲೆ-ತಿರುಪತಿ ದೇವಸ್ಥಾನದ ಆಡಳಿತವರ್ಗದವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಮಹಾಭಾರತದ ಬಳಗದವರೆಲ್ಲರಿಗೂ ಶಾಂತಿಯೂ, ಪುಷ್ಟಿಯೂ, ತುಷ್ಟಿಯೂ ಲಭಿಸಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸಿ ವಿರಮಿಸುವೆವು.

– ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಮಹಾಭಾರತ–ಹತ್ತನೆಯ ಸಂಪುಟದ ಮೂರನೆಯ ಮುದ್ರಣವನ್ನು ಮುಗಿಸುತ್ತಿದ್ದೇವೆ. ಒಂದೊಂದು ಸಂಪುಟವು ಹೊರಬರಬೇಕಾದರೂ ದಯಾಮಯನಾದ ಪರಮಾತ್ಮನ ಅನುಗ್ರಹ ಅತ್ಯಾವಶ್ಯಕ. ಏಕೆಂದರೆ : ಬೆಲೆಗಳು ಗಗನಕ್ಕೆ ಏರುತ್ತಿರುವ ಈ ದಿವಸಗಳಲ್ಲಿ ಮುದ್ರಣಕ್ಕೆ ಕಾಗದವನ್ನು ಒದಗಿಸಿಕೊಳ್ಳುವುದೇ ಒಂದು ಮಹತ್ತರ ಸಾಧನೆಯಾಗುತ್ತಿದೆ. ಪರಮಾತ್ಮನ ಅನುಗ್ರಹವಿಲ್ಲದಿದ್ದರೆ ಇದನ್ನು ಸಾಧಿಸುವುದು ಅತಿಕಷ್ಟವೇ ಸರಿ. ನಮ್ಮ ಯೋಚನೆಗೂ ನಿಲುಕದ ರೀತಿಯಲ್ಲಿ ಅವನ ದಯೆಯಿಂದ ಎಲ್ಲವೂ ನಡೆಯುತ್ತಿದೆ. ಹತ್ತನೆಯ ಸಂಪುಟವು ಮುಗಿದನಂತರ ಏಳನೆಯ ಸಂಪುಟದ ಪುನರ್ಮುದ್ರಣವನ್ನು ಪ್ರಾರಂಭಿಸಿರುತ್ತೇವೆ. 11-12-13-25-26-27 ಈ ಸಂಪುಟಗಳ ದೃಷ್ಟ್ಯಾ ಈ ಸಂಪುಟವು ಇತ್ತೀಚೆಗೆ ಮುಗಿದಿದೆ. ಆದರೆ 6-8ನೇ ಸಂಪುಟಗಳು ತಲುಪಿ ಮಧ್ಯದಲ್ಲಿ 7ನೇ ಸಂಪುಟವಿಲ್ಲದೇ ಅನೇಕ ಗ್ರಾಹಕರು ತೊಂದರೆಪಡುತ್ತಿರುವುದರಿಂದ ಅನಿವಾರ್ಯವಾಗಿ 7ನೇ ಸಂಪುಟವನ್ನು ಮುದ್ರಣಕ್ಕೆ ತೆಗೆದುಕೊಳ್ಳಲಾಯಿತು. ಆದರೆ ಇದರಿಂದ ಸಮಸ್ಯೆಗಳು ಬಗೆಹರಿಯಲಿಲ್ಲ. ಒಂದು ಮತ್ತು ಎರಡನೇ ಸಂಪುಟಗಳೇ ಈಗ ಇಲ್ಲವಾಗಿವೆ. ಆದರೆ 11ರಿಂದ 15ರವರೆಗಿನ ಮತ್ತು 25ರಿಂದ 30ರವರೆಗಿನ ಸಂಪುಟಗಳ ಪುನರ್ಮುದ್ರಣವಾದನಂತರ ಮೊದಲಿನ ಸಂಪುಟಗಳನ್ನು ಪುನರ್ಮುದ್ರಿಸುವ ಆಶಯವಿದೆ. ನೂತನಗ್ರಾಹಕರು ದಯಮಾಡಿ ಸಹಕರಿಸಬೇಕು. ಪ್ರಸಕ್ತ ಈ ಸಂಪುಟವೂ ಸೇರಿ ಮಹಾಭಾರತದ ಮಾಲಿಕೆಯಲ್ಲಿ 15 ಸಂಪುಟಗಳು ಸಿಕ್ಕುತ್ತವೆ. ಉಳಿದ ಸಂಪುಟಗಳನ್ನು ಎರಡು ತಿಂಗಳಿಗೆ ಒಂದು ಸಂಪುಟದಂತೆ ಪುನರ್ಮುದ್ರಣಮಾಡಿ ಗ್ರಾಹಕರಿಗೆ ಕಳುಹಿಸಿಕೊಡಲಾಗುವುದು.

ಈ ಸಂಪುಟದ ಪುನರ್ಮುದ್ರಣಕ್ಕೆ ಮೊದಲು ರಾಮಾಯಣದ 6ನೇ ಸಂಪುಟವು ಹೊರಬಂದಿದ್ದು ಪ್ರಸಕ್ತ ರಾಮಾಯಣ ವಿಭಾಗದಲ್ಲಿ ಇದುವರೆಗೆ ಪ್ರಕಟವಾಗಿರುವ 6 ಸಂಪುಟಗಳೂ ಸಿಕ್ಕುತ್ತವೆ. ರಾಮಾಯಣಕ್ಕೆ ಗ್ರಾಹಕರಾಗದೇ ಇರುವವರು ಕೂಡಲೇ ಗ್ರಾಹಕರಾಗಿ ಪ್ರೋತ್ಸಾಹಿಸಬೇಕಾಗಿ ಪ್ರಾರ್ಥಿಸುತ್ತೇವೆ.

ಸಂಪಾದಕಮಂಡಲಿಯ ವಿದ್ವಾಂಸರು ಯಥಾಪೂರ್ವ ಈ ಸಂಪುಟದ

ತಪ್ಪು-ಒಪ್ಪುಗಳನ್ನು ನೋಡಿಕೊಟ್ಟು ಸಹಕರಿಸಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕವಂದನೆಗಳು.

ನಮ್ಮ ವಾಚಕವರ್ಗದವರಿಗೂ ಸಹಾಯಕವರ್ಗದವರಿಗೂ ದಯಾಮಯನಾದ ಭಗವಂತನು ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಿ ಕೊಡಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ಚತುರ್ಥಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಕೃಪೆಯಿಂದಲೂ ಶ್ರೀರಂಗಮಹಾ ಗುರುಗಳ ದಿವ್ಯಾಶೀರ್ವಾದದಿಂದಲೂ ಸತ್ಪುರುಷರ ಸಹಕಾರ ಸದಾಶಯ ಗಳಿಂದಲೂ ಶ್ರೀಮನ್ಮಹಾಭಾರತದ ಹತ್ತನೆಯ ಸಂಪುಟದ ಪುನರ್ಮು ದ್ರಣವು ಮುಗಿದಿರುತ್ತದೆ. ಹತ್ತನೆಯ ಸಂಪುಟಕ್ಕೆ ಮೊದಲು 3ನೆಯ ಸಂಪುಟವನ್ನು ಗ್ರಾಹಕರಿಗೆ ವಿತರಿಸುವ ಆಶಯವಿದ್ದಿತು. ಆದರೆ ಪರಮಾತ್ಮನ ಇಚ್ಛೆಯೇ ಬೇರೆ. ಮುದ್ರಣಕ್ಕೆ ಸಿದ್ಧವಾಗಿದ್ದ 3ನೇ ಸಂಪುಟದ ಮುದ್ರಣದಲ್ಲಿ ತಾಂತ್ರಿಕದೋಷವು ಕಂಡು ಬಂದು ಅದರ ಮುದ್ರಣವು ಅನಿವಾರ್ಯವಾಗಿ ಒಂದು ತಿಂಗಳು ಮುಂದಕ್ಕೆ ಹೋಗಬೇಕಾಗಿ ಬಂದಿತು. ನಾವೆಷ್ಟೇ ಪ್ರಯತ್ನಿಸಿದರೂ ಭಗವಂತನ ನಿಯಮವನ್ನು ಮೀರಲು ಸಾಧ್ಯವಾಗದುದಕ್ಕೆ ಇದೇ ಸಾಕ್ಷಿ. ಪ್ರಯತ್ನವು ನಮ್ಮ ಕೈಲಿದೆಯೇ ಹೊರತು ಫಲಿಸುವುದು ಫಲಿಸದಿರುವುದು ಪರಮಾತ್ಮನ ಸಂಕಲ್ಪಕ್ಕೆ ಸೇರಿದ್ದಾಗಿದೆ. ಗ್ರಾಹಕರಿಗೆ ಪ್ರಸಕ್ತ 1-2-4-5-8-9-10-21-22-23 (10) ಸಂಪುಟಗಳನ್ನು ಕೊಡಲು ಸಾಧ್ಯವಿದೆ. 3-6-7 ಈ 3 ಸಂಪುಟಗಳೂ ಮುದ್ರಣಕ್ಕೆ ಸಿದ್ಧವಾಗಿವೆ. ಆದರೆ ಇವುಗಳ ಮುದ್ರಣ ಬೇರೆಕಡೆಯೇ ಆಗಬೇಕಾಗಿರುವುದರಿಂದ ಯಾವಾಗ ಆಗುವುದೆಂದು ಖಚಿತವಾಗಿ ಹೇಳಲಾರೆವು. ಅಂದಿನಿಂದಲೂ ಹೇಳುತ್ತಾ ಬಂದಿರುವಂತೆ ತಿಂಗಳಿಗೆ ಒಂದು ಸಂಪುಟದಂತೆ ಗ್ರಾಹಕರಿಗೆ ಕೊಡುವ ಆಶಯವಿದೆ. ನಮ್ಮ ಮಾತು ಸತ್ಯವಾಗಬೇಕಾದರೆ ದಯಾಮಯನಾದ ಭಗವಂತನು "ಅಸ್ತು" ಎನ್ನಬೇಕು. ಅವನ ಅಭಯ ಹಸ್ತದ ಆಶ್ರಯವಿಲ್ಲದಿದ್ದರೆ ನಮ್ಮ ಮಾತೆಲ್ಲವೂ ಹುಸಿಯಾಗುತ್ತದೆ. ಅವನ ಅನುಗ್ರಹದಿಂದಲೇ ನಮ್ಮ ಈ ಸತ್ಸಂಕಲ್ಪಕ್ಕೆ ಭಗವಂತನ ಅಭಯ ಮುದ್ರೆಯ ಅನುಗ್ರಹವಾಗಬೇಕೆಂದು ಎಲ್ಲರೂ ಒಕ್ಕೊರಳಿನಿಂದ ಪ್ರಾರ್ಥಿಸೋಣ.

— ಪ್ರಕಾಶಕರು.

## ಮಹಾಭಾರತ-ಉದ್ಯೋಗಪರ್ವ: ವಿಷಯಾನುಕ್ರಮಣಿಕೆ

ಶ್ರೀಮಹಾಗಣಪತಯೇ ನಮಃ   ಶ್ರೀಮಹಾಸರಸ್ವತ್ಯೈ ನಮಃ   ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ-ಉದ್ಯೋಗಪರ್ವ ; ಹತ್ತನೆಯ ಸಂಪುಟ

೪೧ನೆಯ ಅಧ್ಯಾಯ                    ಸನತ್ಸುಜಾತಪರ್ವ

## ವಿದುರನು ಸ್ಮರಣೆಮಾಡಿದಕೂಡಲೇ ಸನತ್ಸುಜಾತರ ಆಗಮನ: ಧೃತರಾಷ್ಟ್ರನಿಗೆ ಉಪದೇಶಮಾಡಬೇಕೆಂದು ವಿದುರನು ಅವರನ್ನು ಪ್ರಾರ್ಥಿಸಿದುದು

(ಸನತ್ಸುಜಾತರು ಬ್ರಹ್ಮಮಾನಸಪುತ್ರರು. ಸನತ್ ಎಂದರೆ ಸನಾತನ ನಾದ ಬ್ರಹ್ಮ. ತೇನ ಅಥವಾ ತಸ್ಮಾತ್ ಸುಜಾತಃ ಅವನಿಂದ ಜ್ಞಾನ-ವೈರಾಗ್ಯಗಳೊಡನೆ ಕೂಡಿ ಪರಮಶ್ರೇಷ್ಠರಾದವರೆಂದೆನಿಸಿ ಹುಟ್ಟಿದವರು ಸನತ್ಸುಜಾತರು. ಇವರು ಧೃತರಾಷ್ಟ್ರನಿಗೆ ಮಾಡಿದ ಬೋಧನೆಯನ್ನು ಸನತ್ಸುಜಾತೀಯವೆಂದು ಕರೆಯುತ್ತಾರೆ. ಉದ್ಯೋಗಪರ್ವದ ೪೨, ೪೩, ೪೪ ಮತ್ತು ೪೫ನೇ ಅಧ್ಯಾಯಗಳಲ್ಲಿ ಸನತ್ಸುಜಾತರು ಧೃತರಾಷ್ಟ್ರನಿಗೆ ಪರ ಬ್ರಹ್ಮವಿದ್ಯೆಯನ್ನು ಉಪದೇಶಿಸಿರುತ್ತಾರೆ.)

"ಜನಮೇಜಯ! ಧೃತರಾಷ್ಟ್ರನು ವಿದುರನನ್ನು ಪ್ರಶ್ನಿಸುತ್ತಾನೆ :

**ಅನುಕ್ತಂ ಯದಿ ತೇ ಕಿಂಚಿದ್ವಾಚಾ ವಿದುರ ವಿದ್ಯತೇ ।**
**ತನ್ಮೇ ಶುಶ್ರೂಷತೋ ಬ್ರೂಹಿ ವಿಚಿತ್ರಾಣಿ ಹಿ ಭಾಷಸೇ ॥೧॥**

"ವಿದುರ! ನಿನ್ನ ಬಾಯಿಂದ ಹೊರಬರುವ ಗಹನವಾದ ವಿಷಯಗಳು ಇನ್ನೂ ಉಳಿದಿವೆಯೇ? ಹಾಗೇನಾದರೂ ಉಳಿದಿರುವ ಪಕ್ಷದಲ್ಲಿ ನಿನ್ನ ಮಾತುಗಳನ್ನು ಕೇಳುವುದರಲ್ಲಿಯೇ ಅತ್ಯುತ್ಸುಕನಾಗಿರುವ ನನಗೆ ಆ ಮಾತುಗಳನ್ನು ಹೇಳು. ಏಕೆಂದರೆ ನೀನು ವಿಚಿತ್ರವಾಗಿ ಮಾತನಾಡುತ್ತಿರುವೆ."

ವಿದುರನು ಹೇಳುತ್ತಾನೆ :

**ಧೃತರಾಷ್ಟ್ರ ಕುಮಾರೋ ವೈ ಯಃ ಪುರಾಣಃ ಸನಾತನಃ ।**
**ಸನತ್ಸುಜಾತಃ ಪ್ರೋವಾಚ ಮೃತ್ಯುರ್ನಾಸ್ತೀತಿ ಭಾರತ ॥೨॥**

"ಮಹಾರಾಜ! ನಾನು ಹೇಳುವುದೇ ವಿಚಿತ್ರವಾದ ಮಾತುಗಳೆಂದು ಭಾವಿಸಬೇಡ. ಇದಕ್ಕಿಂತಲೂ ವಿಚಿತ್ರತರವಾದ ಮಾತುಗಳನ್ನೂ ಆಡುವವರಿದ್ದಾರೆ. ಹಿಂದೊಂದು ಸಂದರ್ಭದಲ್ಲಿ ಪುರಾಣಪುರುಷರಾದ, ಸನಾತನರಾದ ಕುಮಾರ ಸನತ್ಸುಜಾತರು ಮೃತ್ಯುವೇ ಇಲ್ಲವೆಂದು ಸ್ಪಷ್ಟವಾಗಿ ಹೇಳಿದರು. (ಮೃತ್ಯುವೇ ಇಲ್ಲವೆಂದು ಹೇಳಿರುವುದು ನಾನು ಇದುವರೆಗೆ ಹೇಳಿದುದಕ್ಕಿಂತಲೂ ವಿಚಿತ್ರವಲ್ಲವೇ?)

**ಸ ತೇ ಗುಹ್ಯಾನ್ಪ್ರಕಾಶಾಂಶ್ಚ ಸರ್ವಾನ್ಹೃದಯಸಂಶ್ರಯಾನ್ ।**
**ಪ್ರವಕ್ಷ್ಯತಿ ಮಹಾರಾಜ ಸರ್ವಬುದ್ಧಿಮತಾಂ ವರಃ ॥೩॥**

ಲೋಕದಲ್ಲಿ ಬುದ್ಧಿವಂತರೆನಿಸಿದ ಸಕಲರಿಗೂ ಶ್ರೇಷ್ಠರಾದ ಆ ಸನತ್ಸುಜಾತರೇ ನಿನಗೆ, ಹೃದಯವನ್ನಾಶ್ರಯಿಸಿರುವ ಯೋಗಕಲಾದಿ ರಹಸ್ಯಗಳನ್ನೂ ಮತ್ತು ಶಮಾದಿಗಳನ್ನೂ ಹೇಳುತ್ತಾರೆ."

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಕಿಂ ತ್ವಂ ನ ವೇದ ತದ್ಭೂಯೋ ಯನ್ಮೇ ಬ್ರೂಯಾತ್ಸನಾತನಃ ।**
**ತ್ವಮೇವ ವಿದುರ ಬ್ರೂಹಿ ಪ್ರಜ್ಞಾಶೇಷೋಽಸ್ತಿ ಚೇತ್ತವ ॥೪॥**

"ವಿದುರ! ಸನಾತನರಾದ ಸನತ್ಸುಜಾತರು ನನ್ನನ್ನು ಕುರಿತು ಯಾವ ವಿಷಯವನ್ನು ಹೇಳಲಿದ್ದಾರೆಯೋ ಆ ವಿಷಯವು ನಿನಗೂ ತಿಳಿದಿಲ್ಲವೇನು? ನಿನ್ನ ಬುದ್ಧಿಯಲ್ಲಿ ಹೇಳುವುದೇನಾದರೂ ಉಳಿದಿದ್ದರೆ ನೀನೇ ಅದನ್ನೂ ಹೇಳು. (ನೀನು ಸರ್ವಜ್ಞನಾಗಿರುವುದರಿಂದ 'ಮೃತ್ಯುವೇ ಇಲ್ಲ' ಎಂಬ ಸಿದ್ಧಾಂತವನ್ನು ನೀನೂ ಪ್ರತಿಪಾದಿಸಲು ಸಮರ್ಥನಾಗಿರುವೆ. ಮೇಲಾಗಿ ನೀನೀ ವಿಷಯವನ್ನು ಅವರಿಂದಲೇ ಕೇಳಿ ತಿಳಿದುಕೊಂಡಿರುವೆ. ಆದುದರಿಂದ ನೀನೇ ಆ ವಿಷಯವನ್ನು ನನ್ನೊಡನೆ ಹೇಳಬಹುದಲ್ಲವೇ? ಸನತ್ಸುಜಾತರಿಲ್ಲಿ ಬರಬೇಕಾದ ಕಾರಣವಿಲ್ಲ.)"

ಅದಕ್ಕೆ ವಿದುರನು ಹೇಳುತ್ತಾನೆ :

**ಶೂದ್ರಯೋನಾವಹಂ ಜಾತೋ ನಾತೋಽನ್ಯದ್ವಕ್ತುಮುತ್ಸಹೇ ।**
**ಕುಮಾರಸ್ಯ ತು ಯಾ ಬುದ್ಧಿರ್ವೇದ ತಾಂ ಶಾಶ್ವತೀಮಹಮ್ ॥೫॥**

"ಮಹಾರಾಜ! ನಾನು ಶೂದ್ರಸ್ತ್ರೀಯಲ್ಲಿ ಹುಟ್ಟಿರುವೆನಾದುದರಿಂದ (ಯದ್ಯಪಿ ನನಗೆ ಆ ವಿಷಯವು ತಿಳಿದಿದ್ದರೂ) ನಾನು ಇದುವರೆಗೆ ನಿನ್ನೊಡನೆ ಹೇಳಿದುದಕ್ಕಿಂತಲೂ ಹೆಚ್ಚಿನ ವಿಷಯಗಳನ್ನು ಹೇಳಲು ಉತ್ಸಾಹಿಯಾಗಿಲ್ಲ. (ಇದಕ್ಕಿಂತಲೂ ಮುಂದಿನದೆಂದರೆ ಅಧ್ಯಾತ್ಮವಿದ್ಯೆ). ಭಗವಾನ್ ಕುಮಾರನ ಬುದ್ಧಿಯು ಶಾಶ್ವತವಾದುದೆಂದೂ (ಸದಾಕಾಲದಲ್ಲಿಯೂ ಬ್ರಹ್ಮನಲ್ಲಿಯೇ ವಿರಮಿಸುತ್ತಿರುತ್ತದೆಂದೂ) ನಾನು ತಿಳಿದಿರುತ್ತೇನೆ. (ಸನತ್ಸುಜಾತರಿಗಿರುವ ಶಾಶ್ವತವಾದ ಬ್ರಹ್ಮಜ್ಞಾನವನ್ನು ನಾನೂ ತಿಳಿದಿರುತ್ತೇನೆ.)

**ಬ್ರಾಹ್ಮೀಂ ಹಿ ಯೋನಿಮಾಪನ್ನಃ ಸುಗುಹ್ಯಮಪಿ ಯೋ ವದೇತ್ ।**
**ನ ತೇನ ಗರ್ಹ್ಯೋ ದೇವಾನಾಂ ತಸ್ಮಾದೇತದ್ಬ್ರವೀಮಿ ತೇ ॥೬॥**

ಮೇಲಾಗಿ–ಬ್ರಾಹ್ಮಣಯೋನಿಯಲ್ಲಿ ಯಾವನು ಹುಟ್ಟಿರುತ್ತಾನೆಯೋ ಅಂತಹವನು ಗುಹ್ಯಾದ್ಗುಹ್ಯತಮವಾದುದನ್ನು ಹೇಳಿದರೂ (ಉಪದೇಶಿಸಿದರೂ) ದೇವತೆಗಳ ನಿಂದೆಗೆ ಪಾತ್ರನಾಗುವುದಿಲ್ಲ. ಆದುದರಿಂದ ನಾನು ನಿನಗಿದನ್ನು (ಸನತ್ಸುಜಾತರ ಮೂಲಕವಾಗಿ ಮೃತ್ಯುವಿನ ರಹಸ್ಯವನ್ನು ತಿಳಿಯಬೇಕೆಂಬುದನ್ನು) ಹೇಳುತ್ತಿದ್ದೇನೆ."

**ಬ್ರವೀಹಿ ವಿದುರ ತ್ವಂ ಮೇ ಪುರಾಣಂ ತಂ ಸನಾತನಮ್ ।**
**ಕಥಮೇತೇನ ದೇಹೇನ ಸ್ಯಾದಿಹೈವ ಸಮಾಗಮಃ ॥೭॥**

"ವಿದುರ! ಪುರಾಣಪುರುಷರಾದ, ಸನಾತನರಾದ ಆ ಸನತ್ಸುಜಾತರನ್ನು ಕರೆತರುವುದು ಹೇಗೆಂಬುದನ್ನಾದರೂ ಹೇಳು. ನಮಗಿರತಕ್ಕ ಇದೇ ದೇಹದಿಂದಲೇ–ಈ ಸ್ಥಳದಲ್ಲಿಯೇ ಅವರ ಸಮಾಗಮವು ಹೇಗೆ ಸಾಧ್ಯವಾಗುವುದು?

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಧೃತರಾಷ್ಟ್ರನು ಹೀಗೆ ಹೇಳಿದೊಡನೆಯೇ ವಿದುರನು

ಕಠಿನವ್ರತರಾದ ಸನತ್ಸುಜಾತಮಹರ್ಷಿಗಳನ್ನು ಮನದಲ್ಲಿಯೇ ಧ್ಯಾನಿಸಿದನು. ವಿದುರನು ತಮ್ಮನ್ನು ಸ್ಮರಿಸುತ್ತಿದ್ದಾನೆಂಬುದನ್ನು ಜ್ಞಾನದೃಷ್ಟಿಯಿಂದ ತಿಳಿದ ಸನತ್ಸುಜಾತರು ಮರುಕ್ಷಣದಲ್ಲಿಯೇ ವಿದುರನಿಗೆ ಕಾಣಿಸಿಕೊಂಡರು. ವಿದುರನು ಶಾಸ್ತ್ರವಿಧಿಗೆ ಅನುಸಾರವಾದ ಮಧುಪರ್ಕಾದಿಗಳಿಂದ ಸನತ್ಸುಜಾತರನ್ನು ಸ್ವಾಗತಿಸಿದನು. ಯಥೋಚಿತವಾಗಿ ಸತ್ಕೃತರಾದ, ಸುಖೋಪವಿಷ್ಟರಾಗಿದ್ದ, ವಿಶ್ರಾಂತರಾಗಿದ್ದ ಮಹರ್ಷಿಗಳನ್ನು ಕುರಿತು ವಿದುರನು ಈ ಮಾತುಗಳನ್ನು ಹೇಳಿದನು :

**ಭಗವನ್ಸಂಶಯಃ ಕಶ್ಚಿದ್ಧೃತರಾಷ್ಟ್ರಸ್ಯ ಮಾನಸಃ ।**
**ಯೋ ನ ಶಕ್ಯೋ ಮಯಾ ವಕ್ತುಂ ತ್ವಮಸ್ಮೈ ವಕ್ತುಮರ್ಹಸಿ ॥೧೦॥**

"ಭಗವನ್! ಧೃತರಾಷ್ಟ್ರನ ಮನಸ್ಸಿನಲ್ಲಿ ಕೆಲವೊಂದು ಸಂಶಯಗಳಿವೆ. ನನ್ನಿಂದ ಹೇಳಲು ಅಥವಾ ಪರಿಹರಿಸಲು ಸಾಧ್ಯವಾಗದ ಆ ಸಂಶಯಗಳನ್ನು ಬಗೆಹರಿಸಲು ನೀವು ಸಮರ್ಥರಾಗಿರುವಿರಿ.

**ಯಂ ಶ್ರುತ್ವಾಯಂ ಮನುಷ್ಯೇನ್ದ್ರಃ ಸರ್ವದುಃಖಾತಿಗೋ ಭವೇತ್ ।**
**ಲಾಭಾಲಾಭೌ ಪ್ರಿಯದ್ವೇಷ್ಯೌ ಯಥೈನಂ ನ ಜರಾನ್ತಕೌ ॥೧೧॥**

**ವಿಷಹೇರನ್ಭಯಾಮರ್ಷೌ ಕ್ಷುತ್ಪಿಪಾಸೇ ಮದೋದ್ಭವೌ ।**
**ಅರತಿಶ್ಚೈವ ತನ್ದ್ರೀ ಚ ಕಾಮಕ್ರೋಧೌ ಕ್ಷಯೋದಯೌ ॥೧೨॥**

ಯಾವ ಮಹೋಪದೇಶವನ್ನು ಕೇಳಿದನಂತರ ಮನುಷ್ಯೇಂದ್ರನಾದ ಈ ಧೃತರಾಷ್ಟ್ರನು ಸರ್ವದುಃಖಗಳಿಂದಲೂ ವಿಮುಕ್ತನಾಗುವನೋ – ಲಾಭವಾಗಲೀ, ಅಲಾಭವಾಗಲೀ, ಪ್ರಿಯವಾಗಲೀ-ಅಪ್ರಿಯವಾಗಲೀ, ಮುಪ್ಪಾಗಲೀ-ಮೃತ್ಯುವಾಗಲೀ, ಭಯವಾಗಲೀ-ಅಸಹಿಷ್ಣುತೆಯಾಗಲೀ, ಹಸಿವಾಗಲೀ-ಬಾಯಾರಿಕೆಯಾಗಲೀ, ಮದವಾಗಲೀ-ಐಶ್ವರ್ಯವಾಗಲೀ, ಚಿಂತೆಯಾಗಲೀ-ಆಲಸ್ಯವಾಗಲೀ, ಕಾಮವಾಗಲೀ-ಕ್ರೋಧವಾಗಲೀ, ಅವನತಿಯಾಗಲೀ-ಉನ್ನತಿಯಾಗಲೀ ಇವನನ್ನು ಬಾಧೆಪಡಿಸುವುದಿಲ್ಲವೋ–ಅಂತಹ ಮಹಾವಿದ್ಯೆಯನ್ನು (ಬ್ರಹ್ಮವಿದ್ಯೆಯನ್ನು) ಉಪದೇಶ ಮಾಡಿರಿ."

ಳ೧ನೆಯ ಅಧ್ಯಾಯವು ಮುಗಿಯಿತು.

೪೨ನೆಯ ಅಧ್ಯಾಯ ಸನತ್ಸುಜಾತಪರ್ವ (ಮುಂದುವರಿದಿದೆ.)

## ಸನತ್ಸುಜಾತರು ಧೃತರಾಷ್ಟ್ರನ ಅನೇಕಪ್ರಶ್ನೆಗಳಿಗೆ ಉತ್ತರ ಹೇಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

**ತತೋ ರಾಜಾ ಧೃತರಾಷ್ಟ್ರೋ ಮನೀಷೀ**
**ಸಂಪೂಜ್ಯ ವಾಕ್ಯಂ ವಿದುರೇರಿತಂ ತತ್ ।**
**ಸನತ್ಸುಜಾತಂ ರಹಿತೇ ಮಹಾತ್ಮಾ**
**ಪಪ್ರಚ್ಛ ಬುದ್ಧಿಂ ಪರಮಾಂ ಬುಭೂಷನ್ ॥೧॥**

"ಪಾರಿಕ್ಷಿತ! ಅನಂತರದಲ್ಲಿ ಬುದ್ಧಿವಂತನೂ ಮಹಾತ್ಮನೂ ಆದ ಧೃತರಾಷ್ಟ್ರನು ವಿದುರನಿಂದ ಹೇಳಲ್ಪಟ್ಟ ಆ ಮಾತನ್ನು ಗೌರವಿಸಿ, ಶ್ರೇಷ್ಠವಾದ ಪರವಿದ್ಯೆಯನ್ನು ತಿಳಿಯುವುದಕ್ಕೋಸ್ಕರ ಏಕಾಂತದಲ್ಲಿ ಸನತ್ಸುಜಾತರನ್ನು ಅದರ ಬಗೆಗೆ ಪ್ರಶ್ನೆಮಾಡಿದನು :

**ಸನತ್ಸುಜಾತ ಯದಿದಂ ಶೃಣೋಮಿ**
**ನ ಮೃತ್ಯುರಸ್ತೀತಿ ತವ ಪ್ರವಾದಮ್ ।**
**ದೇವಾಸುರಾ ಹ್ಯಾಚರನ್ ಬ್ರಹ್ಮಚರ್ಯ-**
**ಮಮೃತ್ಯವೇ ತತ್ಕತರನ್ನು ಸತ್ಯಮ್ ॥೨॥**

"ಪೂಜ್ಯರಾದ ಸನತ್ಸುಜಾತರೇ! 'ಮೃತ್ಯುವೆಂಬುದೇ ಇಲ್ಲ' ಎಂಬುದು ತಮ್ಮ ಸಿದ್ಧಾಂತವಾಗಿದೆಯೆಂದು ನಾನು ವಿದುರನ ಮೂಲಕ ಕೇಳಿರುತ್ತೇನೆ. ಮೃತ್ಯುವಿನ ನಿವಾರಣೆಗಾಗಿ ಅಥವಾ ಅಮೃತತ್ವದ ಪ್ರಾಪ್ತಿಗಾಗಿ ದೇವಾಸುರರು ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು ಅನೇಕವರ್ಷಗಳ ಕಾಲ ತಪಸ್ಸನ್ನು ಮಾಡಿದರೆಂಬ ವಿಷಯವನ್ನೂ ಕೇಳಿರುತ್ತೇನೆ. (ಒಂದು ವೇಳೆ ತಮ್ಮ ಸಿದ್ಧಾಂತದಂತೆ ಅಥವಾ ನಿಷ್ಕೃಷ್ಟವಾದ ಅಭಿಪ್ರಾಯದಂತೆ ಮೃತ್ಯುವೇ ಇಲ್ಲದಿದ್ದಲ್ಲಿ ಮೃತ್ಯುವಿನ ನಿವಾರಣೆಗಾಗಿ ದೇವಾಸುರರೇಕೆ ತಪಸ್ಸುಮಾಡಿದರು?) ಮೃತ್ಯುವಿದೆಯೆಂಬುದು ಸತ್ಯವೇ? ಅಥವಾ ಮೃತ್ಯುವೇ ಇಲ್ಲವೆಂಬ ತಮ್ಮ ಸಿದ್ಧಾಂತವು ಸತ್ಯವೇ?"

**ತದ್ಧೋಭಯೇ ದೇವಾ ಅಸುರಾಅನುಬುಬುಧಿರೇ...... ।**
**ತೌ ಹ ದ್ವಾತ್ರಿಂಶತಂ ವರ್ಷಾಣಿ ಬ್ರಹ್ಮಚರ್ಯಮೂಷತುಃ ॥**
**ಏಕಶತಂ ಹ ವೈ ವರ್ಷಾಣಿ ಮಘವಾ ಪ್ರಜಾಪತೌ**
**ಬ್ರಹ್ಮಚರ್ಯಮುವಾಸ (ಛಾಂದೋಗ್ಯ)**

ಪ್ರಜಾಪತಿಬ್ರಹ್ಮನ ಸಮೀಪದಲ್ಲಿ ಇಂದ್ರ-ವಿರೋಚನರಿಬ್ಬರೂ ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು ಮೃತ್ಯುವನ್ನು ಗೆಲ್ಲುವ ಸಲುವಾಗಿ ತಪಸ್ಸುಮಾಡಿದರು.

ವಿರೋಚನನು ಮೂವತ್ತೆರಡು ವರ್ಷಗಳಾಗುತ್ತಲೇ ಬ್ರಹ್ಮನ ನಿರ್ದೇಶದಂತೆ ಸಾಲಂಕೃತವಾದ ತನ್ನ ನೆರಳನ್ನು ನೀರಿನಲ್ಲಿ ನೋಡಿ ದೇಹವೇ ಆತ್ಮವೆಂಬ ಸಿದ್ಧಾಂತಕ್ಕೆ ಬಂದು ತಪಸ್ಸಿನಿಂದ ವಿಮುಖನಾದನು. ಆದರೆ ಇಂದ್ರನು ಮಾತ್ರ ನೀರಿನಲ್ಲಿ ಕಂಡ ತನ್ನ ಪ್ರತಿಕೃತಿಯು ಕಾಲಾಂತರದಲ್ಲಿ ವ್ಯತ್ಯಾಸ ಹೊಂದುವುದೆಂದೂ, ಆದುದರಿಂದ ದೇಹವು ಆತ್ಮವಾಗಲು ಸಾಧ್ಯವಿಲ್ಲವೆಂದೂ ಮನಗಂಡು ನೂರೊಂದು ವರ್ಷಗಳ ಪರ್ಯಂತವಾಗಿ ಬ್ರಹ್ಮಚರ್ಯವ್ರತಾನುಷ್ಠಾನದಿಂದಿದ್ದು ಮೃತ್ಯುವನ್ನು ಗೆಲ್ಲುವ ಸಲುವಾಗಿ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಆತ್ಮಜ್ಞಾನವನ್ನು ಪಡೆದು ಮೃತ್ಯುವನ್ನು ಗೆದ್ದನು.)

ಸನತ್ಸುಜಾತರು ಹೇಳುತ್ತಾರೆ.

**ಅಮೃತ್ಯುಃ ಕರ್ಮಣಾ ಕೇಚಿನ್ಮೃತ್ಯುರ್ನಾಸ್ತೀತಿ ಚಾಪರೇ ।**
**ಶೃಣು ಮೇ ಬ್ರುವತೋ ರಾಜನ್ಯಥೈತನ್ಮಾ ವಿಶಙ್ಕಿಥಾಃ ॥೩॥**

“ಧೃತರಾಷ್ಟ್ರ! ‘ಮೃತ್ಯುವೆಂಬುದಿದೆ. ಆದರೆ ಮೃತ್ಯುವನ್ನು ಜಯಿಸಲು ಕರ್ಮಾನುಷ್ಠಾನವನ್ನು ಮಾಡಬೇಕು. ಕರ್ಮಾನುಷ್ಠಾನವನ್ನು ಮಾಡಿ ತಪಶ್ಚರ್ಯಾದಿಗಳನ್ನು ಮಾಡಿ ಮೃತ್ಯುವನ್ನು ಜಯಿಸಬಹುದು’–ಎಂಬುದು ಕೆಲವರ ಅಭಿಪ್ರಾಯವಾಗಿದೆ. ‘ಮೃತ್ಯುವೆಂಬುದೇ ಇಲ್ಲ’–ಎಂಬುದು ಮತ್ತೆ ಕೆಲವರ ಅಭಿಪ್ರಾಯವಾಗಿದೆ. ‘ಮೃತ್ಯುವೆಂಬುದೊಂದಿರುವುದೇ? ಒಂದು ವೇಳೆ ಇರುವುದಾದಲ್ಲಿ ಅದು ಯಾವುದು? ಯಾವುದನ್ನು ಮೃತ್ಯು ಎಂದು ಕರೆಯಬೇಕು?’– ಈ ಎಲ್ಲವನ್ನೂ ಯಥಾವತ್ತಾಗಿ ನಿನಗೆ ತಿಳಿಸು

ತ್ತೇನೆ. ನಾನು ಹೇಳಲಿರುವ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸುವ ಕಾರಣವಿಲ್ಲ.

**ಉಭೇ ಸತ್ಯೇ ಕ್ಷತ್ರಿಯೈತಸ್ಯ ವಿದ್ಧಿ**
**ಮೋಹೋ ಮೃತ್ಯುಃ ಸಂಮತೋ ಯಃ ಕವೀನಾಮ್ ।**
**ಪ್ರಮಾದಂ ವೈ ಮೃತ್ಯುಮಹಂ ಬ್ರವೀಮಿ**
**ತಥಾಪ್ರಮಾದಮಮೃತತ್ವಂ ಬ್ರವೀಮಿ ॥೪॥**

ಧೃತರಾಷ್ಟ್ರ! '**ಅಮೃತ್ಯುಃ ಕರ್ಮಣಾ**' 'ಬ್ರಹ್ಮಚರ್ಯವ್ರತಾನುಷ್ಠಾನದ ಸಾಧನೆಯಿಂದ ಅಮೃತತ್ವವುಂಟಾಗುತ್ತದೆ'–ಎಂಬ ಮತ್ತು ಮೃತ್ಯುವೇ ಇಲ್ಲವೆಂಬ ಎರಡು ಪಕ್ಷಗಳೂ ಸತ್ಯವಾದುವುಗಳೇ ಆಗಿವೆ. ಜ್ಞಾನಿಗಳು ಮೃತ್ಯು ಎಂದು ಯಾವುದನ್ನು ತಿಳಿಯುತ್ತಾರೆಯೋ–ಅದು ಮೋಹ. (ಬ್ರಹ್ಮಚರ್ಯಾದಿ ವ್ರತಾನುಷ್ಠಾನಗಳಿಂದ, ಯಮ-ನಿಯಮಾದಿಗಳಿಂದ ಈ ಮೋಹವನ್ನು, ಮಾಯೆಯನ್ನು ಅಥವಾ ಪ್ರಕೃತಿಯನ್ನು ಜಯಿಸಬೇಕು.) ಆದರೆ ನಾನು ಮಾತ್ರ ಪ್ರಮಾದವನ್ನೇ ಮೃತ್ಯುವೆನ್ನುತ್ತೇನೆ. ಪ್ರಮಾದವೆಂದರೆ : **ಸ್ವಾಭಾವಿಕಬ್ರಹ್ಮಭಾವಾತ್** ಪ್ರಚ್ಯುತಿಃ-ಸ್ವಾಭಾವಿಕಬ್ರಹ್ಮಭಾವದಿಂದ ಚ್ಯುತನಾಗುವುದು. ಸದಾ ಅಪ್ರಮಾದದಿಂದಿರುವುದೇ, ಸದಾ ಬ್ರಹ್ಮನಲ್ಲಿ ನಿಷ್ಠನಾಗಿರುವುದೇ–ಅಮೃತತ್ವವೆಂದೂ, ಮರಣವಿಲ್ಲದಿರುವಿಕೆಯೆಂದೂ ನಾನು ಭಾವಿಸುತ್ತೇನೆ. (ಇದರ ಅರ್ಥವನ್ನು ಹೀಗೆ ನಿರೂಪಿಸಬಹುದಾಗಿದೆ. ಸನತ್ಸುಜಾತರಂತೆ ಹುಟ್ಟಿದಾಗಿನಿಂದಲೂ ಸದಾ ಬ್ರಹ್ಮವಸ್ತುವಿನಲ್ಲಿಯೇ ನೆಟ್ಟಮನಸ್ಸುಳ್ಳವರು ಕೆಲವರು. (ಆಜನ್ಮಸಿದ್ಧರು.) ಅಂತಹವರು ಯಾವಾಗಲೂ ಸಮಾಧಿಸ್ಥಿತಿಯಲ್ಲಿಯೇ ಇರತಕ್ಕವರು. ಅವರಿಗೆ ಮೋಹ-ಮದಗಳ ಅರಿವೂ ಇರುವುದಿಲ್ಲ. ಇಂತಹ ಬ್ರಹ್ಮಜ್ಞಾನಕ್ಕೆ ಪ್ರಮಾದವು ಅಥವಾ ಪ್ರಚ್ಯುತಿಯು ಒಂದು ಕ್ಷಣಮಾತ್ರವೇ ಆದರೂ ಅದು ಅವರಿಗೆ ಮೃತ್ಯುಸ್ವರೂಪವಾಗುತ್ತದೆ. ಅವರು ಸದಾ ಸಮಾಧಿಸ್ಥಿತಿಯಲ್ಲಿಯೇ ಇರುವುದರಿಂದ ಅವರಿಗೆ ಮೃತ್ಯುವೆಂಬುದೇ ಇಲ್ಲವೆನಿಸುತ್ತದೆ. ಮತ್ತೆ ಕೆಲವು ಜ್ಞಾನಿಗಳು ಕರ್ಮದಿಂದಲೇ ಅಮೃತತ್ವದ ಸಾಧಕರು. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಇಂದ್ರನು ಕರ್ಮದಿಂದಲೇ ಅಮೃತತ್ವವನ್ನು ಪಡೆದನು. ನೂರೊಂದು ವರ್ಷಗಳ ಪರ್ಯಂತವಾಗಿ

ಬ್ರಹ್ಮಚರ್ಯದಿಂದಿದ್ದು ಬ್ರಹ್ಮೋಪಾಸನೆಯನ್ನು ಮಾಡಿ ಅದನ್ನು ಸಾಧಿಸಿದನು. ಅಂತಹ ಸಾಧಕರಿಗೆ ಮೋಹವೆಂಬುದೇ ಮೃತ್ಯುವಾಗಿರುತ್ತದೆ. ಮೋಹವು ಅಥವಾ ಮಾಯೆಯು ಅವರ ಸಾಧನೆಗೆ ಅಡ್ಡಿಯನ್ನುಂಟು ಮಾಡುವುದರಿಂದ ಅವರು ಮೋಹವನ್ನೇ ಮೃತ್ಯುವೆನ್ನುತ್ತಾರೆ.)

**ಪ್ರಮಾದಾದ್ವೈ ಅಸುರಾಃ ಪರಾಭವ-**
**ನ್ನಪ್ರಮಾದಾದ್ಬ್ರಹ್ಮಭೂತಾಃ ಸುರಾಶ್ಚ ।**
**ನ ವೈ ಮೃತ್ಯುರ್ವ್ಯಾಘ್ರ ಇವಾತ್ತಿ ಜನ್ತೂ-**
**ನ್ನಾಪ್ಯಸ್ಯ ರೂಪಮುಪಲಭ್ಯತೇ ಹಿ ॥೫॥**

ಬ್ರಹ್ಮಜ್ಞಾನದಿಂದ ಪ್ರತಿನಿವೃತ್ತರಾದುದರಿಂದಲೇ ಅಸುರರು ಪರಾಭವವನ್ನು ಹೊಂದಿದರು (ಮೃತ್ಯುವಶರಾದರು.) ಬ್ರಹ್ಮಜ್ಞಾನಸಾಧನೆಯ ಮಾರ್ಗದಿಂದ ಪ್ರತಿನಿವೃತ್ತರಾಗದೇ ಅನೇಕವರ್ಷಗಳವರೆಗೆ ಬ್ರಹ್ಮಚರ್ಯ ವ್ರತಾನುಷ್ಠಾನಗಳನ್ನು ಮಾಡುತ್ತಾ ಬ್ರಹ್ಮೋಪಾಸನೆಯನ್ನು ಮಾಡಿದುದರಿಂದ ದೇವತೆಗಳು ಬ್ರಹ್ಮಭೂತರಾದರು. ಮೃತ್ಯುವು ವ್ಯಾಘ್ರದಂತೆ ಪ್ರಾಣಿಗಳನ್ನು ತಿಂದುಬಿಡುವುದಿಲ್ಲ. ಮೃತ್ಯುವಿಗೆ ಆಕಾರವಿರುವುದೆಂಬುದೂ ನಮಗೆ ಕಂಡುಬಂದಿಲ್ಲ. (ಇಲ್ಲಿ ಸುರ ಮತ್ತು ಅಸುರ ಎಂಬುದಕ್ಕೆ ಬೇರೆಯ ವಿಧವಾಗಿಯೂ ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ. ಈ ಅರ್ಥವೂ ಸಮಂಜಸವಾಗಿಯೇ ಇದೆ. **ಅಸುಷು ರಮನ್ತೇ ಇತ್ಯಸುರಾಃ** = ಇಂದ್ರಿಯಸುಖಗಳಲ್ಲಿ ಆಸಕ್ತರಾದ ವಿಷಯಿಗಳೇ ಅಸುರರು. **ಸ್ವಸ್ಮಿನ್ ರಮನ್ತೇ ಇತಿ ಸುರಾಃ** = ಆತ್ಮದರ್ಶನಸುಖದಲ್ಲಿಯೇ ಸದಾ ಇರತಕ್ಕವರು ಸುರರು, ಆತ್ಮಜ್ಞಾನಿಗಳು.

**ಆತ್ಮನ್ಯೇವ ರತಿರ್ಯೇಷಾಂ ಸ್ವಸ್ಮಿನ್ಬ್ರಹ್ಮಣಿ ಚಾಚಲೇ ।**
**ತೇ ಸುರಾ ಇತಿ ವಿಖ್ಯಾತಾಃ ಸೂರಯಶ್ಚ ಸುರಾ ಮತಾಃ ॥)**

ಸಾವಿತ್ರಿಯ ಉಪಾಖ್ಯಾನದಲ್ಲಿ, ಯಮನು ಸಾವಿತ್ರಿಗೆ ಕಾಣಿಸಿಕೊಂಡನೆಂಬ ವರ್ಣನೆಯಿದೆ. ಆ ಯಮನಾರು? ಅವನು ಮೃತ್ಯುರಾಜನಲ್ಲವೇ? ಇದರ ವಿಷಯವಾಗಿ ಸನತ್ಸುಜಾತರು ಹೇಳುತ್ತಾರೆ :

**ಯಮಂ ತ್ವೇಕೇ ಮೃತ್ಯುಮತೋಽನ್ಯಮಾಹು-**
**ರಾತ್ಮಾವಸನ್ನಮಮೃತಂ ಬ್ರಹ್ಮಚರ್ಯಮ್ ।**

ಪಿತೃಲೋಕೇ ರಾಜ್ಯಮನುಶಾಸ್ತಿ ದೇವಃ
ಶಿವಃ ಶಿವಾನಾಮಶಿವೋಽಶಿವಾನಾಮ್ ॥೬॥

“ಮಹಾರಾಜ! ಕೆಲವರು–ಬುದ್ಧಿಯಲ್ಲಿ ವಾಸಿಸತಕ್ಕವನೂ, ಮರಣ ರಹಿತನೂ, ಬ್ರಹ್ಮನಿಷ್ಠನೂ ಆದ ಯಮನನ್ನೇ ಮೃತ್ಯುವೆಂದು ಕರೆಯುತ್ತಾರೆ. ಆ ಯಮದೇವನು ಪಿತೃಲೋಕದಲ್ಲಿದ್ದುಕೊಂಡು ಪುಣ್ಯವಂತರಿಗೆ ಸುಖಪ್ರದನೂ–ಪಾಪಿಗಳಿಗೆ ದುಃಖಪ್ರದನೂ ಆಗಿ ಪಿತೃಲೋಕದಲ್ಲಿ ರಾಜ್ಯಭಾರಮಾಡುತ್ತಿದ್ದಾನೆಂದು ಹೇಳುತ್ತಾರೆ.

(ಪಾಶವನ್ನು ಧರಿಸಿರುವ ಯಮನು ಅಂಗುಷ್ಠಮಾತ್ರವಿರುವ ಸೂಕ್ಷ್ಮ ಶರೀರವನ್ನು ಸತ್ಯವಂತನ ಶರೀರದಿಂದ ಸೆಳೆದನೆಂಬ ಆಖ್ಯೆಯಿರುವುದು ನಿಜ. ಅವನು ಮನುಷ್ಯದೇಹದಿಂದ ಜೀವವನ್ನು ಪ್ರತ್ಯೇಕಿಸುತ್ತಾನೆಯೇ ಹೊರತು ಜೀವವನ್ನು ವಿನಾಶಗೊಳಿಸುವುದಿಲ್ಲ. ಹೀಗೆ ಶರೀರದಿಂದ ಜೀವನನ್ನು ಪ್ರತ್ಯೇಕಿಸಿದ ಮಾತ್ರದಿಂದ ಯಮನು ಮೃತ್ಯುವಾಗಲಾರನು. ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿರುವಂತೆ–'ಮೃತ್ಯುರ್ವೈ ತಮಃ । ಜ್ಯೋತಿರಮೃತಂ'–ತಮಸ್ಸೇ ಮೃತ್ಯುವಾಗಿರುತ್ತದೆ. ಬೆಳಕೇ ಅಮೃತಸ್ವರೂಪವಾಗಿರುತ್ತದೆ. ಇಂತಹ ಮೃತ್ಯುವಿಗೆ ಅಥವಾ ತಮಸ್ಸಿಗೆ ಮೂಲವಾವುದೆಂಬುದನ್ನು ಮುಂದೆ ಹೇಳಿದ್ದಾರೆ.)

ಅಸ್ಯಾದೇಶಾನ್ನಿಃಸರತೇ ನರಾಣಾಂ
ಕ್ರೋಧಃ ಪ್ರಮಾದೋ ಲೋಭರೂಪಶ್ಚ ಮೃತ್ಯುಃ ।
ಅಹಂಗತೇನೈವ ಚರನ್ವಿಮಾರ್ಗಾ–
ನ್ನ ಚಾತ್ಮನೋ ಯೋಗಮುಪೈತಿ ಕಶ್ಚಿತ್ ॥೭॥

ಜೀವನಾಶಕನಲ್ಲದಿದ್ದರೂ ಯಮನನ್ನು ಮೃತ್ಯುವೆಂದು ಕರೆಯುವುದೇಕೆಂದರೆ : ಮೃತ್ಯುರೂಪಗಳಾದ ಕಾಮ-ಕ್ರೋಧ-ಲೋಭಗಳ ನಿರ್ದೇಶಕನೇ ಇವನಾಗಿದ್ದಾನೆ. ಯಮನ ಆದೇಶದಿಂದಲೇ ಕಾಮ-ಕ್ರೋಧಗಳು ಮತ್ತು ಪ್ರಮಾದರೂಪದ ಮೃತ್ಯುಗಳು ಮನುಷ್ಯನಲ್ಲಿ ಆವಿರ್ಭವಿಸುತ್ತವೆ. ಜೀವನು ಅಹಂಕಾರದಲ್ಲಿಯೇ ಇದ್ದು ವಿಪರೀತಮಾರ್ಗದಲ್ಲಿ ನಡೆಯುತ್ತಾ ಪರಮಾತ್ಮ ಯೋಗವನ್ನು ಪಡೆಯುವುದಿಲ್ಲ.

(ಆಸ್ಯಾದೇಶಾತ್ ಎಂಬ ಪಾಠಾಂತರದ ಪ್ರಕಾರ ಆಸತೇ ಸರ್ವ

ಪುರುಷಾರ್ಥಃ ಅನೇನ ಇತ್ಯಾಸ್ಯಃ ಅರ್ಥಾತ್ ಅಹಂಕಾರಃ–ಸಕಲ ಪುರುಷಾರ್ಥಗಳೂ ಯಾವುದರಿಂದ ದೂರ ತಳ್ಳಲ್ಪಡುವುವೋ–ಅದು ಆಸೆ ಅಥವಾ ಅಹಂಕಾರ. ಈ ಅಹಂಕಾರದ ಕಾರಣದಿಂದಾಗಿ ಮನುಷ್ಯನಲ್ಲಿ ಕಾಮ-ಕ್ರೋಧಾದಿಗಳು ಪ್ರಾದುರ್ಭವಿಸುತ್ತವೆ.)

**ತೇ ಮೋಹಿತಾಸ್ತದ್ವಶೇ ವರ್ತಮಾನಾ**
**ಇತಃ ಪ್ರೇತಾಸ್ತತ್ರ ಪುನಃ ಪತನ್ತಿ ।**
**ತತಸ್ತಾನ್ದೇವಾ ಅನುವಿಪ್ಲವನ್ತೇ**
**ಅತೋ ಮೃತ್ಯುರ್ಮರಣಾಖ್ಯಾಮುಪೈತಿ ॥೮॥**

ಅಹಂಕಾರಾದಿಗಳಿಂದ ದೇಹವೇ ಆತ್ಮವೆಂದು ಮೋಹಗೊಂಡು ಸದಾಕಾಲದಲ್ಲಿಯೂ ಮೃತ್ಯುವಶರಾಗಿಯೇ ಇದ್ದುಕೊಂಡು (ಕಾಮ-ಕ್ರೋಧ-ಪ್ರಮಾದಪರವಶರಾಗಿದ್ದುಕೊಂಡು) ಕಾಲಾಂತರದಲ್ಲಿ ಈ ಲೋಕ ದಿಂದ ಹೊರಟುಹೋಗಿ ಅಲ್ಲಿ (ಯಮಲೋಕದಲ್ಲಿ) ಪುನಃ ಪುನಃ ಬೀಳು ತ್ತಲೇ ಇರುತ್ತಾರೆ. (ಅರ್ಥಾತ್ ಜೀವಿಗಳು ಮರಣವೆಂಬ ಹೆಸರಿನಿಂದ ಒಂದು ಶರೀರವನ್ನು ತ್ಯಾಗಮಾಡಿದರೂ ವಿನಾಶಹೊಂದುವುದಿಲ್ಲ. ಭೂಲೋಕ, ಅನಂತರ ನರಕ ಅಥವಾ ಸ್ವರ್ಗ, ಪುನಃ ಭೂಲೋಕ–ಹೀಗೆ ಪುನಃ ಪುನಃ ಸುತ್ತಾಡುತ್ತಲೇ ಇರುತ್ತಾರೆ. ಇವರ ಈ ಅಲೆದಾಟಕ್ಕೆ ದೇವತೆಗಳೇ (ಇಂದ್ರಿಯಗಣಗಳೇ) ಕಾರಣ. ಜೀವನನ್ನು ವಿಷಯಾಸಕ್ತವಾದ ಇಂದ್ರಿಯಗಳೂ ಹಿಂಬಾಲಿಸಿ ಹೋಗುತ್ತವೆ. ಈ ಕಾರಣದಿಂದಾಗಿ ಮರಣದ ದೆಸೆಯಿಂದಲೂ (ದೇಹಪರಿತ್ಯಾಗದಿಂದಲೂ) ಇವನು ಮೃತ್ಯುವನ್ನೇ (ಅಜ್ಞಾನವನ್ನೇ) ಪಡೆಯುತ್ತಾನೆ. ಜೀವನು ಯಾವ ರೂಪದಲ್ಲಿಯೇ ಇರಲಿ ; ಎಲ್ಲಿಯೇ ಇರಲಿ–ಎಲ್ಲಿಯವರೆಗೆ ಇವನಿಗೆ ವಿಷಯವಾಸನೆಗಳಿರುವುವೋ ಅಲ್ಲಿಯವರೆಗೂ ಇವನಿಗೆ ಮೃತ್ಯುವು ತಪ್ಪಿದ್ದಲ್ಲ. ಸರ್ವದಾ ಇವನು ಮೃತ್ಯುವಿನಿಂದ (ಅಜ್ಞಾನದಿಂದ) ಆವೃತನಾಗಿಯೇ ಇರುತ್ತಾನೆ. ಅನುದಿನವೂ ಜೀವಿಯ ಗಾಢನಿದ್ರೆ, ಎಚ್ಚರಗೊಳ್ಳುವಿಕೆ–ಇವುಗಳಂತೆಯೇ ಜನನ-ಮರಣಗಳೂ ಸಹ ಇವನಿಗೆ ಸ್ವಾಭಾವಿಕವಾಗಿಯೇ ಇರುತ್ತವೆ. ಜೀವನು ಯಾವಾಗಲೂ (ಕಾಮ-ಕ್ರೋಧ-ಪ್ರಮಾದಗಳ) ಪರವಶ ನಾಗಿಯೇ ಇರುತ್ತಾನೆ. ದೇಹನಾಶವೇ ಮೃತ್ಯುವೆಂದು ಭ್ರಮಿಸ

ಬಾರದು. ಜೀವನು ಒಂದಂಗಿಯನ್ನು ಕಳಚಿ ಮತ್ತೊಂದಂಗಿಯನ್ನು ಧರಿಸಿ ಕೊಳ್ಳುವ ವಿಧಾನವೇ ಮರಣ-ಜನನ ಸಂಜ್ಞಕವಾದುದು. ಆದುದರಿಂದ ಈ ಮರಣದಿಂದ ಜೀವನಿಗೆ ಹೆಚ್ಚಿನ ವ್ಯತ್ಯಾಸವೇನೂ ಉಂಟಾಗುವುದಿಲ್ಲ. ಇವನೆಲ್ಲಿಯೇ ಹೋದರೂ ಮೃತ್ಯುರೂಪವಾದ ವಿಷಯವಾಸನೆಗಳು ಇವನನ್ನು ಅನುಸರಿಸಿಯೇ ಇರುತ್ತವೆ. ಆದುದರಿಂದ ನಿಜವಾದ ಮೃತ್ಯುವು ಕಾಮ-ಕ್ರೋಧ-ಪ್ರಮಾದಗಳೇ ಆಗಿವೆ. ದೇವಾಃ ಎಂದರೆ ಇಂದ್ರಿಯಗಳು. **ದೇವಾ ವೈಕಾರಿಕಾ ದಶ** ಎಂದು ವಿಷ್ಣುಪುರಾಣದಲ್ಲಿ ದೇವಶಬ್ದಕ್ಕೆ ಹತ್ತು ಇಂದ್ರಿಯಗಳೆಂದು ಹೇಳಿದ್ದಾರೆ. 'ತಸ್ಯ ದೇವಾ ಅಸನ್ವಶೇ' (ಪುರುಷಸೂಕ್ತ.) ಇಲ್ಲಿಯೂ ಸಹ ದೇವಶಬ್ದಕ್ಕೆ ಇಂದ್ರಿಯಗಳೆಂದೇ ವ್ಯಾಖ್ಯಾನಮಾಡಿರುತ್ತಾರೆ.)

**ಕರ್ಮೋದಯೇ ಕರ್ಮಫಲಾನುರಾಗಾ–**
**ಸ್ತತ್ರಾನುಯಾನ್ತಿ ನ ತರನ್ತಿ ಮೃತ್ಯುಮ್ ।**
**ಸದರ್ಥಯೋಗಾನವಗಮಾತ್ಸಮನ್ತಾ–**
**ತ್ಪ್ರವರ್ತತೇ ಭೋಗಯೋಗೇನ ದೇಹೀ ॥೯॥**

(ಅಮೃತ್ಯುಂ ಕರ್ಮಣಾ ಕೇಚಿತ್ ಎಂಬ ವಿಷಯವನ್ನು ಇಲ್ಲಿ ವಿಶ್ಲೇಷಣೆ ಮಾಡಿದ್ದಾರೆ.) ಕರ್ಮದ ಉದಯವಾಯಿತೆಂದರೆ ಮಾಡಿದ ಕಾರ್ಯಕ್ಕೆ ಫಲವನ್ನಪೇಕ್ಷಿಸುವುದು ಸ್ವಾಭಾವಿಕವಾಗಿರುತ್ತದೆ. ಕರ್ಮದ ಫಲವನ್ನು ಅಪೇಕ್ಷಿಸಿದೊಡನೆಯೇ ಜೀವನು ಅದರಿಂದ ಬಂಧಿತನಾಗಿಬಿಡು ತ್ತಾನೆ. (ಇಲ್ಲಿ ದುಷ್ಕರ್ಮ ಅಥವಾ ಸತ್ಕರ್ಮ–ಎಂಬ ವಿವೇಚನೆಯಿಲ್ಲ.) ಒಳ್ಳೆಯದೇ ಆಗಲಿ ; ಕೆಟ್ಟದ್ದೇ ಆಗಲೀ–ಕರ್ಮಫಲವೆಂಬುದೇ ಒಂದು ಬಂಧನ. ಕರ್ಮಫಲವನ್ನು ಅನುಸರಿಸಿಯೇ ಜೀವನು ನಡೆದುಕೊಳ್ಳ ಬೇಕಾಗುತ್ತದೆ. ಕರ್ಮಫಲವು ಜೀವನನ್ನು ನಿಯಂತ್ರಿಸುತ್ತದೆ. ಈ ಕಾರಣದಿಂದವನು ಮೃತ್ಯುವನ್ನು ದಾಟಲಾರನು. ಸತ್ಕರ್ಮದಿಂದ ಪ್ರಾಪ್ತವಾದ ಸತ್ಫಲಗಳು ಇವನನ್ನು ಸ್ವರ್ಗವೇ ಮುಂತಾದ ಸುಖಪಡೆಯಬಹುದಾದ ಲೋಕಗಳಿಗೆ ಒಯ್ಯುವುವೇ ಹೊರತು ಬೇರೇನೂ ಮಾಡಲಾರವು. ಸತ್ಕರ್ಮದ ಸತ್ಫಲಗಳು ಮುಗಿದೊಡನೆಯೇ ಪುನಃ ಜೀವಿಯು ಜನನ-ಮರಣಗಳ ಚಕ್ರದಲ್ಲಿ ಸಿಕ್ಕಿಬೀಳುತ್ತಾನೆ. ಈ ಕಾರಣದಿಂದವನು ಮೃತ್ಯುವನ್ನು ದಾಟಿದಂತಾಗಲಿಲ್ಲ.

ಕರ್ಮಫಲಕ್ಕೆ ಬಂಧಿತನಾಗುವ ಕಾರಣವೇನೆಂದರೆ : ಜೀವಿಗೆ ಸದ್ವಸ್ತುವಿನ ಯೋಗದ (ಪರಬ್ರಹ್ಮವಸ್ತುವಿನ ಯೋಗದ) ಜ್ಞಾನವಿರುವುದಿಲ್ಲ. ಪರಬ್ರಹ್ಮ ವಸ್ತುವಿನ ಪ್ರಾಪ್ತಿಗೆ ಕಾರಣವಾದ ಯಮ-ನಿಯಮಾದ್ಯಷ್ಟಾಂಗಯೋಗಗಳ ಸಾಧನವಿಲ್ಲದಿರುವ ಕಾರಣದಿಂದಲೇ ದೇಹಿಯು (ಮನುಷ್ಯನು) ಭೋಗ ಯೋಗವನ್ನು ಹೊಂದಿ ಎಲ್ಲೆಲ್ಲಿಯೂ ಅಲೆದಾಡುತ್ತಿರುತ್ತಾನೆ. ಅಷ್ಟಾಂಗ ಯೋಗಸಾಧನೆಯೂ ಒಂದು ಕರ್ಮವೇ ಸರಿ. ಆದರೆ ಬ್ರಹ್ಮಜ್ಞಾನಕ್ಕೆ ಸಾಧಕವಾದ, ಮನಃಶುದ್ಧಿಗೆ ಕಾರಣವಾದ ಇಂತಹ ಕರ್ಮದಿಂದಲೇ ಮಾನವನು ಮೃತ್ಯುವನ್ನು ಜಯಿಸಬಲ್ಲನು.

ತದ್ವೈ ಮಹಾಮೋಹನಮಿನ್ದ್ರಿಯಾಣಾಂ
ಮಿಥ್ಯಾರ್ಥಯೋಗಸ್ಯ ಗತಿರ್ಹಿ ನಿತ್ಯಾ ।
ಮಿಥ್ಯಾರ್ಥಯೋಗಾಭಿಹತಾನ್ತರಾತ್ಮಾ
ಸ್ಮರನ್ನುಪಾಸ್ತೇ ವಿಷಯಾನ್ಸಮನ್ತಾತ್ ॥೧೦॥

ಭೋಗಪ್ರವೃತ್ತಿಯೇ ಇಂದ್ರಿಯಗಳಿಗೆ ಮಹಾಮೋಹಕವಾದುದು. ಏಕೆಂದರೆ : ಭೋಗಲಾಲಸೆಯು ಜೀವನಿಗೆ ಮಿಥ್ಯಾಪದಾರ್ಥಗಳ ವಿಷಯದಲ್ಲಿ ನಿಶ್ಚಿತವಾದ ಪ್ರವೃತ್ತಿಯನ್ನುಂಟುಮಾಡುತ್ತದೆ. ಈ ರೀತಿಯಲ್ಲಿ ಮಿಥ್ಯಾಪದಾರ್ಥಗಳೊಡನೆ ಸಂಯೋಗಹೊಂದುವುದರಿಂದ ಜೀವನು ತನ್ನ ಸ್ವರೂಪದಿಂದ ಭ್ರಷ್ಟನಾಗಿ ವಿಷಯಗಳನ್ನೇ ಸ್ಮರಿಸುತ್ತಾ ಅವುಗಳನ್ನೇ ಎಲ್ಲ ರೀತಿಯಿಂದಲೂ ಸೇವಿಸುತ್ತಾನೆ. (ಇಂದ್ರಿಯಗಳಿಗೆ ಭೋಗೇಚ್ಛೆಯು ಸ್ವಾಭಾವಿಕವಾಗಿಯೇ ಉಂಟಾಗುತ್ತದೆ. ಆದರೆ ಭೋಗವಸ್ತುಗಳೆಲ್ಲವೂ (ಕಾಮಿನೀ-ಕಾಂಚನಾದಿಗಳು) ಅಶಾಶ್ವತವಾದುವುಗಳು. ಮೇಲಾಗಿ ಅವುಗಳನ್ನು ಅನುಭವಿಸಹೊರಟ ಇಂದ್ರಿಯಗಳಿಗೆ ತೃಪ್ತಿಯೆಂಬುದೇ ಇರುವುದಿಲ್ಲ. ಅನುಭವಿಸಿದಷ್ಟೂ ಇನ್ನೂ ಹೆಚ್ಚು-ಹೆಚ್ಚು ಅನುಭವಿಸಬೇಕೆನ್ನುವ ಆಸೆಯೇ ಹೆಚ್ಚುತ್ತಿರುತ್ತದೆ.)

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥೧೧॥

ಭೋಗವನ್ನು ಅನುಭವಿಸುವುದರಿಂದ ಭೋಗಾಭಿಲಾಷೆಯು ಇಂಗಿ ಹೋಗುವುದಿಲ್ಲ. ತುಪ್ಪವನ್ನು ಸುರಿದಷ್ಟೂ ಬೆಂಕಿಯು ಧಗ-ಧಗಿಸಿ ಪ್ರಜ್ವ

ಲಿಸುವಂತೆ–ಭೋಗಾಭಿಲಾಷೆಯು ಇನ್ನೂ ವರ್ಧಿಸುತ್ತಲೇ ಹೋಗುತ್ತದೆ. ಆದರೆ ಇಂದ್ರಿಯಗಳಿಗೆ ಸಂಬಂಧಿಸಿದ ಈ ಸುಖಗಳೆಲ್ಲವೂ ಮಿಥ್ಯಾಸುಖಗಳು. ಶಾಶ್ವತವಾದ ಸುಖಗಳಲ್ಲ. ಇಂದ್ರಿಯಪಟುತ್ವವು ಕಡಿಮೆಯಾದೊಡನೆಯೇ– ಚಾಪಲ್ಯವು ಮಾತ್ರ ಮನಸ್ಸಿಗಂಟಿಕೊಂಡಿರುವುದೇ ಹೊರತು–ಹಿಂದೆ ಅನುಭವಿಸಿದ ಸುಖವನ್ನು ಮುಂದೆ ಅನುಭವಿಸಲು ಅಸಮರ್ಥನಾಗುತ್ತಾನೆ. ಆ ಸಮಯದಲ್ಲಿಯೂ ವಿಷಯಾಸಕ್ತನಾದ ಜೀವಿಯು ಇಂದ್ರಿಯಸುಖಗಳನ್ನು ಮಿಥ್ಯೆಯೆಂದು ಭಾವಿಸುವುದಿಲ್ಲ. ಅಶಾಶ್ವತವೆಂದು ಭಾವಿಸುವುದಿಲ್ಲ. ಆಗ ತಾನು ಅನುಭವಿಸಲಾಗದುದಕ್ಕಾಗಿ ಸಂಕಟಪಡುತ್ತಾನೆ. ಅದನ್ನೇ ಸರ್ವಕಾಲದಲ್ಲಿಯೂ ಸ್ಮರಿಸುತ್ತಿರುತ್ತಾನೆ. ದೇಹನಾಶವಾದರೂ ವಿಷಯವಾಸನೆಯು ಹೋಗುವುದಿಲ್ಲ. ಹಿಂದೆ ಹೇಳಿದಂತೆ ಇಂದ್ರಿಯಗಳಿಂದ ನಿಯಂತ್ರಿತನಾದವನು ಪುನಃ ಪುನಃ ನಾನಾಯೋನಿಗಳಲ್ಲಿ ಹುಟ್ಟುತ್ತಾನೆ. ಈ ಕಾರಣದಿಂದಲೇ ಕಾಮ-ಕ್ರೋಧ-ಲೋಭ-ಮೋಹಗಳು ಮೃತ್ಯುಸ್ವರೂಪಗಳು. ಸ್ವಸ್ವರೂಪವನ್ನರಿತುಕೊಳ್ಳಲು ಇವುಗಳು ಜೀವನಿಗೆ ಎಂದೆಂದಿಗೂ ಅವಕಾಶ ಕೊಡುವುದಿಲ್ಲ.)

ಅಭಿಧ್ಯಾ ವೈ ಪ್ರಥಮಂ ಹನ್ತಿ ಲೋಕಾ–
ನ್ಕಾಮಕ್ರೋಧೌ ಗೃಹ್ಯ ಚೈನಂ ತು ಪಶ್ಚಾತ್ ।
ಏತೇ ಬಾಲಾನ್ಮೃತ್ಯವೇ ಪ್ರಾಪಯನ್ತಿ
ಧೀರಾಸ್ತು ಧೈರ್ಯೇಣ ತರನ್ತಿ ಮೃತ್ಯುಮ್ ॥೧೧॥

ವಿಷಯಗಳ ಅಥವಾ ಭೋಗವಸ್ತುಗಳ ಮೇಲಿನ ಚಿಂತೆಯೇ ಜನರನ್ನು ಸಾಯಿಸಿಬಿಡುತ್ತದೆ. ಪಡೆಯಲಾಗದ ಮಿಥ್ಯಾವಸ್ತುವನ್ನು ಪಡೆದುಕೊಳ್ಳುವ ಸಲುವಾಗಿ ಹಗಲಿರುಳೆನ್ನದೇ ಚಿಂತಿಸುತ್ತಾ ಜೀವನು ಬಹಳ ಸಂಕಟಪಡುತ್ತಾನೆ. ವಸ್ತುವು ಇತರರಿಗೆ ಸೇರಿದ್ದೇ ಆದರೂ ಅದನ್ನು ಹೇಗಾದರೂ ಮಾಡಿ ಪಡೆದುಕೊಳ್ಳಲು ಯತ್ನಿಸುವನೇ ಹೊರತು ಪರರ ಸ್ವತ್ತೆಂಬ ಕಾರಣದಿಂದ ಸುಮ್ಮನಾಗುವುದಿಲ್ಲ. ಇಲ್ಲಿ ಅಭಿಧ್ಯಾ ಎಂಬುದಕ್ಕೆ 'ಅಭಿಧ್ಯಾ ತು ಪರಸ್ವೇಹಾ' 'ಇತರರ ಸ್ವತ್ತನ್ನು ಅಪಹರಿಸುವ ಆಸೆ' ಎಂದೇ ಸುಸ್ಪಷ್ಟವಾಗಿದೆ. ಪರಸ್ವಾಪಹರಣದ ಕಾರಣಕ್ಕಾಗಿ ಇವನನ್ನು ಕಾಮ-ಕ್ರೋಧಗಳು ಆಕ್ರಮಿಸಿ ಆಶೆಬಡುಕನಾದ ಈ ಮೂಢನನ್ನು ಮೃತ್ಯು

ವಿಗೆ ಒಪ್ಪಿಸಿಬಿಡುತ್ತವೆ. (ಮೃತ್ಯುರೂಪವಾದ ಸಂಸಾರಸಾಗರದಲ್ಲಿ ಹಾಕಿಬಿಡುತ್ತವೆ.) ಧೀರನಾದವನು ಮಾತ್ರವೇ ಪರಸ್ವಾಪಹರಣಕ್ಕೆ ಪ್ರಯತ್ನಿಸದೇ, ವಿಷಯಾಭಿಲಾಷೆಗಳನ್ನು ಸಂಪೂರ್ಣವಾಗಿ ತೊರೆದು, ಕಾಮ-ಕ್ರೋಧಾದಿಗಳನ್ನು ಬಹುದೂರದಲ್ಲಿಯೇ ನಿಲ್ಲುವಂತೆ ಮಾಡಿ ಮೃತ್ಯುರೂಪವಾದ (ಬಂಧನರೂಪವಾದ) ಈ ಸಂಸಾರಸಾಗರವನ್ನು ದಾಟುತ್ತಾನೆ.

ಕಠೋಪನಿಷತ್ತಿನ ಈ ಮಂತ್ರವೂ ಇದೇ ಅರ್ಥವನ್ನು ಕೊಡುತ್ತದೆ.

ಪರಾಚಃ ಕಾಮಾನನುಯನ್ತಿ ಬಾಲಾಃ
ತೇ ಮೃತ್ಯೋರ್ಯನ್ತಿ ವಿತತಸ್ಯ ಪಾಶಮ್ ।
ಅಥ ಧೀರಾ ಅಮೃತತ್ವಂ ವಿದಿತ್ವಾ
ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯನ್ತೇ ॥

* * * * *

ಯೋಽಭಿಧ್ಯಾಯನ್ನುತ್ಪತಿತಾನ್ನಿಹನ್ಯಾ-
ದನಾದರೇಣಾಪ್ರತಿಬುಧ್ಯಮಾನಃ ।
ಸ ವೈ ಮೃತ್ಯುಂ ಮೃತ್ಯುರಿವಾತ್ತಿ ಭೂತ್ವಾ
ಏವಂ ವಿದ್ವಾನ್ಯೋ ವಿನಿಹನ್ತಿ ಕಾಮಾನ್ ॥೧೨॥

ಯಾವ ಧೀರಪುರುಷನು ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯೋಪಭೋಗಗಳನ್ನು ಅಶಾಶ್ವತವಾದುವುಗಳೆಂದೂ ದುಃಖಕಾರಿಗಳೆಂದೂ ಸಮಾಲೋಚಿಸಿ–ನಿಶ್ಚಯಿಸಿ, ಪ್ರತಿಕ್ಷಣದಲ್ಲಿಯೂ ಮೇಲೆ ಮೇಲೆ ಬೀಳಲು ಬರುವ (ಇಂದ್ರಿಯಗಳ ಮೂಲಕವಾಗಿ ಮನಸ್ಸನ್ನು ಆಕ್ರಮಿಸಿಬಿಡುವ) ಭೋಗವಿಷಯಗಳನ್ನೆದುರಿಸಿ ಅವುಗಳನ್ನು ಧ್ವಂಸಮಾಡುವನೋ, ಅವುಗಳ ವಿಷಯದಲ್ಲಿ ಸಂಪೂರ್ಣತಿರಸ್ಕಾರಭಾವದಿಂದಿರುತ್ತಾ ಭೋಗವಿಷಯಗಳನ್ನು ಚಿಂತಿಸದೆಯೇ ಇರುತ್ತಾನೆಯೋ, ಅದೇ ರೀತಿಯಲ್ಲಿಯೇ ಸರ್ವದಾ ವರ್ತಿಸುತ್ತಿದ್ದು ಪರಮಶತ್ರುಗಳಾದ ಮತ್ತು ಮೃತ್ಯುಸ್ವರೂಪಗಳಾದ ಕಾಮಗಳನ್ನು ಜಯಿಸುವನೋ–ಅವನೇ ವಿದ್ವಾಂಸನೆಂದು ಪರಿಗಣಿತನಾಗುತ್ತಾನೆ. ಅವನು ಮೃತ್ಯುರೂಪವಾದ ಕಾಮ-ಕ್ರೋಧಗಳಿಗೇ ಮೃತ್ಯುರೂಪನಾಗಿ ಅವುಗಳನ್ನೇ ತಿಂದುಹಾಕಿಬಿಡುತ್ತಾನೆ. (ಮೃತ್ಯುವಿಗೂ ಮೃತ್ಯುವಾಗುತ್ತಾನೆ.)

ಇದನ್ನೇ ಮತ್ತೊಂದು ಕಡೆ ಹೀಗೆ ಹೇಳಿದ್ದಾರೆ :

**ವಿಷಯಪ್ರತಿಸಂಹಾರಂ ಯಃ ಕರೋತಿ ವಿವೇಕತಃ ।**
**ಮೃತ್ಯೋರ್ಮೃತ್ಯುರಿತಿ ಖ್ಯಾತಃ ಸ ವಿದ್ವಾನಾತ್ಮವಿತ್ಕವಿಃ ॥**

* * * *

**ಕಾಮಾನುಸಾರೀ ಪುರುಷಃ ಕಾಮಾನನು ವಿನಶ್ಯತಿ ।**
**ಕಾಮಾನ್ವ್ಯುದಸ್ಯ ಧುನುತೇ ಯತ್ಕಿಂಚಿತ್ಪುರುಷೋ ರಜಃ ॥೧೩॥**

ವಿಷಯಸುಖಗಳಲ್ಲಿಯೇ ಆಸಕ್ತನಾದ ಮನುಷ್ಯನು ಮೃತ್ಯುರೂಪವಾದ ಕಾಮದ ಅನುಸರಣೆಯಿಂದಾಗಿ ವಿನಾಶಹೊಂದುತ್ತಾನೆ. ಯಾವಾತನು ವಿಷಯೋಪಭೋಗಗಳನ್ನು ಮೃತ್ಯುವೆಂದು ಮನಗಂಡು ಅವುಗಳೆಲ್ಲವನ್ನೂ ದೂರೀಕರಿಸುತ್ತಾನೆಯೋ–ಅವನು ತನ್ನಲ್ಲಿರಬಹುದಾದ ಪಾಪಗಳೆಲ್ಲವನ್ನೂ ವಿನಾಶಗೊಳಿಸುತ್ತಾನೆ. (ಕಾಮವನ್ನೇ ಅನುಸರಣೆಮಾಡಿದರೆ ಸ್ವಯಂ ವಿನಾಶಹೊಂದುತ್ತಾನೆ. ಕಾಮವನ್ನು ದೂರೀಕರಿಸಿದರೆ ತನ್ನಲ್ಲಿರುವ ಪಾಪ ಗಳನ್ನು ವಿನಾಶಗೊಳಿಸಲು ಸಮರ್ಥನಾಗುತ್ತಾನೆ.)

**ತಮೋಽಪ್ರಕಾಶೋ ಭೂತಾನಾಂ ನರಕೋಽಯಂ ಪ್ರದೃಶ್ಯತೇ ।**
**ಮುಹ್ಯನ್ತ ಇವ ಧಾವನ್ತಿ ಗಚ್ಛನ್ತಃ ಶ್ವಭ್ರವತ್ಸುಖಮ್ ॥೧೪॥**

ಅಜ್ಞಾನರೂಪವಾದ ಈ ಕಾಮವು ಜೀವರಿಗೆ ವಿಷಯವಿವೇಕವಿಲ್ಲದ ಅಂಧಕಾರರೂಪವಾಗಿದೆ. ಕಾಮವು ನರಕಕ್ಕೆ ಸಮಾನವಾಗಿಯೂ ಇದ್ದು ಅತ್ಯಂತದುಃಖದಾಯಕವಾಗಿ ಕಾಣುತ್ತದೆ. ಮದ್ಯಪಾಯಿಯು ಶರೀರದ ಮೇಲಿನ ಪರಿಜ್ಞಾನವೇ ಇಲ್ಲದೆ ಅಲ್ಲಲ್ಲಿ ಪರಿಭ್ರಮಿಸುತ್ತಾ ಹಳ್ಳದಲ್ಲಿ ಬೀಳುವಂತೆ–ಮನುಷ್ಯನು ಭೋಗಸುಖವನ್ನೇ ನಿಜವಾದ ಸುಖವೆಂದು ಭ್ರಮಿಸಿ ತಮಸ್ಸೆಂಬ ನರಕದಲ್ಲಿ ಬೀಳುವುದನ್ನೂ ಅರಿಯದೇ ಆ ಸುಖದ ಕಡೆಗೇ ಓಡುತ್ತಾನೆ.

ಈ ಶ್ಲೋಕಕ್ಕೆ ಈ ಪಾಠಾಂತರವಿದೆ :

**ದೇಹೋಽಪ್ರಕಾಶೋ ಭೂತಾನಾಂ ನರಕೋಽಯಂ ಪ್ರದೃಶ್ಯತೇ ।**
**ಗೃಧ್ಯನ್ತ ಇವ ಧಾವನ್ತಿ ಗಚ್ಛನ್ತಃ ಶ್ವಭ್ರಮುನ್ಮುಖಾಃ ॥**

ಈ ದೇಹವು ನಿಶ್ಚಯವಾಗಿಯೂ ಅನೇಕಕಲ್ಮಷಗಳಿಂದ ಕೂಡಿದ್ದು

ಪ್ರತ್ಯಕ್ಷನರಕದಂತೆಯೇ ವಿವೇಕಿಗಳಿಗೆ ಕಾಣುತ್ತದೆ. ಆದರೆ ಸಾಧಾರಣ ಜೀವಿಗಳಿಗಿದು ಅತ್ಯಂತಸುಂದರವಾಗಿರುವಂತೆ ಕಾಣುತ್ತದೆ. (ಚರ್ಮದ ಹೊದ್ದಿಕೆಯಿಂದ ದೇಹವು ಸುಂದರವಾಗಿದೆಯೇ ಹೊರತು ಆ ಹೊದ್ದಿಕೆಯನ್ನು ತೆಗೆದುಬಿಟ್ಟರೇನಾಗುವುದೆಂದೂ, ದೇಹವು ಹೇಗೆ ಕಾಣುವುದೆಂದೂ ಯಾವನೊಬ್ಬನೂ ಎಂದಿಗೂ ಚಿಂತಿಸುವುದಿಲ್ಲ.) ಇಂತಹ ದೇಹಕ್ಕೆ ಅಥವಾ ದೈಹಿಕಸುಖಕ್ಕೆ ಆಸೆಪಟ್ಟುಕೊಂಡು ಜೀವಿಗಳು ಅದಕ್ಕಾಗಿಯೇ ಹಾತೊರೆಯುತ್ತಿರುತ್ತಾರೆ. ಕುರುಡರು ಓಡುವಾಗ ಹಳ್ಳದಲ್ಲಿ ಬೀಳುವಂತೆ ಈ ಜೀವಿಗಳು ಭೋಗಸುಖದೆಡೆಗೆ ಧಾವಿಸುತ್ತಾ ನರಕದಲ್ಲಿ ಬೀಳುತ್ತಾರೆ.

(ಈ ದೇಹವು ರಕ್ತ-ಮಾಂಸ-ಮೂತ್ರ-ಪುರೀಷಗಳಿಂದ ಕಶ್ಮಲವಾಗಿರುವುದೆಂದು ಮನುಸ್ಮೃತಿಯಲ್ಲಿ ಹೇಳಿದೆ.

ಅಸ್ಥಿಸ್ಥೂಣಂ ಸ್ನಾಯುಬದ್ಧಂ ಮಾಂಸಶೋಣಿತವೇಷ್ಟಿತಮ್ ।
ಚರ್ಮಾಪಿನದ್ಧಂ ದುರ್ಗನ್ಧಿಪೂರ್ಣಂ ಮೂತ್ರಪುರೀಷಯೋಃ ॥

ಜರಾಶೋಕಸಮಾವಿಷ್ಟಂ ರೋಗಾಯತನಮಾರುತಮ್ ।
ರಜಸ್ವಲಮನಿತ್ಯಂ ಚ ಭೂತಾವಾಸಮಿಮಂ ತ್ಯಜೇತ್ ॥)

* * * *

ಅಮೂಢವೃತ್ತೇಃ ಪುರುಷಸ್ಯೇಹ ಕುರ್ಯಾ-
ತ್ಕಿಂ ವೈ ಮೃತ್ಯುಸ್ತಾರ್ಣ ಇವಾಸ್ಯ ವ್ಯಾಘ್ರಃ ।
ಅಮನ್ಯಮಾನಃ ಕ್ಷತ್ರಿಯ ಕಿಂಚಿದನ್ಯ-
ನ್ನಾಧೀಯೀತ ನಿರ್ಣುದನ್ನಿವಾಸ್ಯ ಚಾಯುಃ ॥೧೫॥

ಕಾಮದಿಂದ ಮೂಢನಾಗದ (ಕಾಮಕ್ಕೆ ಒಳಗಾಗದ ಚಿತ್ತವೃತ್ತಿಯುಳ್ಳ) ಮನುಷ್ಯನನ್ನು ಮೃತ್ಯುವು ಏನೂ ಮಾಡಲಾರದು. ಜ್ಞಾನಿಯ ವಿಷಯದಲ್ಲಿ ಹುಲ್ಲಿನ ವ್ಯಾಘ್ರದ ಪರಿಣಾಮವನ್ನು ಹೊಂದಿರುವ ಈ ಮೃತ್ಯುವು ಏನು ತಾನೇ ಮಾಡಬಲ್ಲುದು? (ಹುಲ್ಲಿನ ಹುಲಿಯು ಯಾರನ್ನೂ ಏನೂ ಮಾಡಲಾರದು.) ಆದುದರಿಂದ, ಧೃತರಾಷ್ಟ್ರ! ಜ್ಞಾನಿಯಾದವನು ವಿಷಯಭೋಗಗಳ ಮೂಲಕಾರಣರೂಪವಾದ ಅಜ್ಞಾನವನ್ನು ನಿರಸನಮಾಡುತ್ತಾ, ವಿಷಯೋಪಭೋಗಗಳಿಗೆ ಸಂಬಂಧಿಸಿದ ವಸ್ತುಗಳನ್ನು

ದೂರೀಕರಿಸುತ್ತಾ, ಅವುಗಳೆಲ್ಲವನ್ನೂ ಸಂಪೂರ್ಣವಾಗಿ ಮರೆತುಬಿಡಬೇಕು. ಅವುಗಳ ಧ್ಯಾನವನ್ನು ಒಮ್ಮೆಯಾದರೂ ಮಾಡಬಾರದು.

ವಿಸ್ಮರಣೆಯೇ ಸರ್ವೋತ್ಕೃಷ್ಟವಾದುದೆಂಬುದಕ್ಕೆ ವಸಿಷ್ಠರು ಹೀಗೆ ಹೇಳಿದ್ದಾರೆ :

ಭ್ರಮಸ್ಯ ಜಾಗ್ರತಸ್ಯಾಸ್ಯ ಜಾತಸ್ಯಾಕಾಶವರ್ಣವತ್ ।
ಅಪುನಃಸ್ಮರಣಂ ಮನ್ಯೇ ಸಾಧೋ ವಿಸ್ಮರಣಂ ವರಮ್ ।
ತಥಾಪಿ ತವ ನ ಸ್ವಾಸ್ಥ್ಯಂ ಸರ್ವವಿಸ್ಮರಣಾದೃತೇ ॥

* * * *

(೧೫ನೆಯ ಶ್ಲೋಕದ ಪಾಠಾಂತರವು ಹೀಗಿರುತ್ತದೆ :

ಅಮನ್ಯಮಾನಃ ಕ್ಷತ್ರಿಯ ಕಶ್ಚಿದನ್ಯಂ
ನಾಧೀಯತೇ ತಾರ್ಣ ಇವಾಸ್ಯ ವ್ಯಾಘ್ರಃ ।
ಕ್ರೋಧಾಲ್ಲೋಭಾನ್ಮೋಹಭಯಾನ್ತರಾತ್ಮಾ
ಸ ವೈ ಮೃತ್ಯುಸ್ತ್ವಚ್ಛರೀರೇ ಯ ಏಷಃ ॥೧೫॥

ಪರಮಾತ್ಮನೇ ತನ್ನ ಆತ್ಮಭೂತನೆಂದು ತಿಳಿಯದ ಮನುಷ್ಯನು ಅಧ್ಯಾತ್ಮಶಾಸ್ತ್ರವನ್ನು ಅಧ್ಯಯನಮಾಡುವುದಿಲ್ಲ. ಆತನ ಶರೀರವು ತೃಣ ನಿರ್ಮಿತವಾದ ಹುಲಿಯಂತೆ ನಿರರ್ಥಕವಾಗಿರುತ್ತದೆ. ಕ್ರೋಧ-ಲೋಭ ಗಳಿಗೊಳಗಾಗಿ ಮೋಹ-ಭಯಗಳಿಂದ ಯುಕ್ತವಾದ ಮನಸ್ಸೇ ಮನುಷ್ಯನಿಗೆ ಮೃತ್ಯು. ಎಲೈ ಕ್ಷತ್ರಿಯನೇ! ನಿನ್ನಲ್ಲಿರುವ ಈ ಮನಸ್ಸೇ ನಿನಗೆ ಮೃತ್ಯು.)

ಸ ಕ್ರೋಧಲೋಭೌ ಮೋಹವಾನನ್ತರಾತ್ಮಾ
ಸ ವೈ ಮೃತ್ಯುಸ್ತ್ವಚ್ಛರೀರೇ ಯ ಏಷಃ ।
ಏವಂ ಮೃತ್ಯುಂ ಜಾಯಮಾನಂ ವಿದಿತ್ವಾ
ಜ್ಞಾನೇ ತಿಷ್ಠನ್ನ ಬಿಭೇತೀಹ ಮೃತ್ಯೋಃ ॥
ವಿನಶ್ಯತೇ ವಿಷಯೇ ತಸ್ಯ ಮೃತ್ಯು-
ರ್ಮೃತ್ಯೋರ್ಯಥಾ ವಿಷಯಂ ಪ್ರಾಪ್ಯ ಮರ್ತ್ಯಃ ॥

ಕ್ರೋಧ-ಲೋಭ-ಮೋಹಗಳಿಂದ ಕೂಡಿದ ಅಂತರಾತ್ಮನು ಯಾವ ನಲ್ಲಿರುವನೋ–ಆ ಅಂತರಾತ್ಮನೇ ಅವನಿಗೆ ಮೃತ್ಯುಪ್ರಾಯನಾಗಿರುತ್ತಾನೆ.

ನಿನ್ನ ಶರೀರದಲ್ಲಿ ಮೋಹದಿಂದ ಕೂಡಿರುವ ಯಾವ ಅಂತರಾತ್ಮವುಂಟೋ–ಅದೇ ಕ್ರೋಧ ಮತ್ತು ಲೋಭರೂಪವಾದ ಮೃತ್ಯುವು. ಹೀಗೆ ಮೃತ್ಯುವು ಮೋಹದಿಂದುಂಟಾಗುತ್ತದೆಯೆಂಬುದನ್ನರಿತು ಜ್ಞಾನ ದಲ್ಲಿಯೇ ನೆಲೆಸಿದವನು ಇಲ್ಲಿ ಮೃತ್ಯುವಿಗೆ ಹೆದರುವುದಿಲ್ಲ. ಮರ್ತ್ಯನು ಮೃತ್ಯುವಿಗೆ ವಿಷಯನಾದಾಗ (ಮೃತ್ಯುವಿನ ಅಧಿಕಾರಕ್ಕೆ ಒಳಪಟ್ಟಾಗ) ನಾಶಹೊಂದುವಂತೆ–ಮೃತ್ಯುವು ಜ್ಞಾನಕ್ಕೆ ವಿಷಯವಾದಾಗ ಅದೇ ವಿನಾಶಹೊಂದುತ್ತದೆ." (ಮೃತ್ಯುವು ಸಾಧಾರಣಮಾನವರನ್ನು ಅಥವಾ ಅಜ್ಞರನ್ನು ವಿನಾಶಗೊಳಿಸುವುದೇ ಹೊರತು ಜ್ಞಾನಿಗಳನ್ನು ಏನೂ ಮಾಡಲಾರದು. ಜ್ಞಾನಿಗಳೇ ಮೃತ್ಯುವನ್ನು ವಿನಾಶಗೊಳಿಸಲು ಸಮರ್ಥರಾಗಿರುತ್ತಾರೆ.)

ಜ್ಞಾನಮಹೋದಧಿಯಲ್ಲಿ ಜ್ಞಾನಿಯ ವಿಷಯವಾಗಿ ಹೀಗೆ ಹೇಳಿದೆ :

**ಜ್ಞಾನಸಂಸ್ಥಾನಸದ್ಭಾವೋ ಜ್ಞಾನಾಗ್ನಿಃ ಜ್ಞಾನವಜ್ರಭೃತ್ ।**
**ಮೃತ್ಯುಂ ಹನ್ತೀತಿ ವಿಖ್ಯಾತಃ ಸ ವೀರೋ ವೀತಮತ್ಸರಃ ॥**

* * * *

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

**ಯಾನೇವಾಹುರಿಜ್ಯಯಾ ಸಾಧುಲೋಕಾ-**
**ನ್ದ್ವಿಜಾತೀನಾಂ ಪುಣ್ಯತಮಾನ್ಸನಾತನಾನ್ ।**
**ತೇಷಾಂ ಪರಾರ್ಥಂ ಕಥಯನ್ತೀಹ ವೇದಾ**
**ಏತದ್ವಿದ್ವಾನ್ನೋಪೈತಿ ಕಥಂ ನು ಕರ್ಮ ॥೧೭॥**

"ವೇದಗಳು, ಯಜ್ಞ-ಯಾಗಾದಿಗಳ ಮೂಲಕವಾಗಿ ದ್ವಿಜರಿಗೆ ಪುಣ್ಯತಮವೂ ನಿತ್ಯವೂ ಆದ ಯಾವ ಲೋಕಗಳ ಪ್ರಾಪ್ತಿಯನ್ನು ಹೇಳಿವೆಯೋ ಅವುಗಳನ್ನೇ ಪರಮಪುರುಷಾರ್ಥವೆಂದೂ ಹೇಳಿವೆ. ಅದನ್ನು ತಿಳಿದೂ ಕೂಡ ಬ್ರಹ್ಮವಿದನಾದ ವಿದ್ವಾಂಸನು ಶ್ರುತಿಸಿದ್ಧವಾದ ವೇದವಿಹಿತ ವಾದ ಯಜ್ಞ-ಯಾಗಾದಿ ಕರ್ಮಗಳಲ್ಲಿ ಏಕೆ ತೊಡಗುವುದಿಲ್ಲ?"

ಸನತ್ಸುಜಾತರು ಉತ್ತರಿಸುತ್ತಾರೆ :

**ಏವಂ ಹ್ಯವಿದ್ವಾನುಪಯಾತಿ ತತ್ರ**
**ತತ್ರಾರ್ಥಜಾತಂ ಚ ವದನ್ತಿ ವೇದಾಃ ।**

**ಅನೀಹ ಆಯಾತಿ ಪರಂ ಪರಾತ್ಮಾ**
**ಪ್ರಯಾತಿ ಮಾರ್ಗೇಣ ನಿಹತ್ಯ ಮಾರ್ಗಾನ್ ॥೧೮॥**

"ಧೃತರಾಷ್ಟ್ರ! ಹೀಗೆ ಕರ್ಮಗಳ ಕಡೆಗೆ ಹೋಗುವವನು ನಿಶ್ಚಯವಾಗಿಯೂ ಅಜ್ಞಾನಿಯೇ ಸರಿ. ಅಂತಹವರಿಗೋಸ್ಕರವೇ ವೇದಗಳು ಅನೇಕ ವಿಧವಾದ ಕರ್ಮಗಳನ್ನೂ ಮತ್ತು ಅವುಗಳಿಂದ ಪ್ರಾಪ್ತವಾಗಬಹುದಾದ ಫಲಗಳನ್ನೂ ಹೇಳುತ್ತವೆ. ಆದರೆ ಬ್ರಹ್ಮವಿದನು ಅಂತಹ ಅಶಾಶ್ವತವಾದ ಫಲಗಳನ್ನು ಕೊಡುವ ಕರ್ಮಗಳಲ್ಲಿ ತೊಡಗುವುದಿಲ್ಲ. ಅವನಾದರೋ ಪ್ರಾಪಂಚಿಕವಾದ ಆಶೆಗಳೆಲ್ಲವನ್ನೂ ತೊರೆದು ಪರಮಾತ್ಮಭಾವದಲ್ಲಿದ್ದು ಪರಮಾತ್ಮನನ್ನೇ ಹೊಂದುತ್ತಾನೆ ಮತ್ತು ತನ್ನ ಜ್ಞಾನಮಾರ್ಗದಿಂದ ಕುತ್ಸಿತಮಾರ್ಗಗಳನ್ನು ಧ್ವಂಸಮಾಡುತ್ತಾನೆ."

ಜ್ಞಾನಮಾರ್ಗವನ್ನು ತಿಳಿಯದೆ ಫಲದಾಯಕವಾದ ಕರ್ಮಮಾರ್ಗವನ್ನೇ ಅನುಸರಿಸುವವರು ಯಾವ ಲೋಕಗಳಿಗೆ ಹೋಗುತ್ತಾರೆಂಬ ವಿಷಯವಾಗಿ ಬೃಹದಾರಣ್ಯಕದಲ್ಲಿ ಹೀಗೆ ಹೇಳಿದೆ :

**ಅನನ್ದಾ ನಾಮ ತೇ ಲೋಕಾ ಅನ್ಧೇನ ತಮಸಾವೃತಾಃ ।**
**ತಾಂಸ್ತೇ ಪ್ರೇತ್ಯ ಹಿ ಗಚ್ಛನ್ತಿ ಅವಿದ್ವಾಂಸೋಽಬುಧಾ ಜನಾಃ ॥**

* * * *

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

**ಕೋಽಸೌ ನಿಯುಙ್ಕ್ತೇ ತಮಜಂ ಪುರಾಣಂ**
**ಸ ಚೇದಿದಂ ಸರ್ವಮನುಕ್ರಮೇಣ ।**
**ಕಿಂ ವಾಸ್ಯ ಕಾರ್ಯಮಥವಾ ಸುಖಂ ಚ**
**ತನ್ಮೇ ವಿದ್ವನ್ಬ್ರೂಹಿ ಸರ್ವಂ ಯಥಾವತ್ ॥೧೯॥**

"ಜ್ಞಾನಿಗಳೇ! ಜ್ಞಾನಿ, ಅಜ್ಞಾನಿ–ಎಲ್ಲರಲ್ಲಿಯೂ ಪರಮಾತ್ಮನಿದ್ದಾನೆ. ಜ್ಞಾನಿಯಾದವನು ಕಾಮ-ಕ್ರೋಧಾಹಂಕಾರಾದಿಗಳನ್ನು ತೊರೆದು ಮೃತ್ಯುವನ್ನು ದಾಟಿ ಬ್ರಹ್ಮಭಾವದಲ್ಲಿಯೇ ಇರುತ್ತಾನೆ. ಅಜ್ಞಾನಿಯಾದವನು ಹಾಗೆ ಮಾಡದೇ ಸಂಸಾರದಲ್ಲಿಯೇ ಇರುತ್ತಾನೆ. ಜ್ಞಾನಿಯ ಹೃದಯದಲ್ಲಿರುವ ಚಿದ್ರೂಪನೇ ಅಜ್ಞಾನಿಯ ಹೃದಯದಲ್ಲಿಯೂ ಇದ್ದಾನೆ. ಅರ್ಥಾತ್

ಸರ್ವತ್ರ ಪರಮಾತ್ಮನಿದ್ದಾನೆ. ಆದರೆ ಹುಟ್ಟು-ಸಾವುಗಳಿಲ್ಲದ, ಪುರಾಣಪುರುಷನಾದ, ಸರ್ವಹೃದಯಸ್ಥನಾದ ಪರಮಾತ್ಮನನ್ನು ಎಲ್ಲ ಕಡೆಗಳಲ್ಲಿಯೂ ಇರುವಂತೆ ನಿಯಂತ್ರಿಸುವವನಾರು? ಸಂಸಾರದಲ್ಲಿರಲು ಪ್ರೇರಿಸತಕ್ಕವನು ಯಾರು? **ತತ್ಸೃಷ್ಟ್ವಾ । ತದೇವಾನುಪ್ರವಿಶತಿ ।** ಎಂಬ ಶ್ರುತಿಯಂತೆ ಅವನೇ ಸೃಷ್ಟಿಮಾಡುತ್ತಾನೆ. ಅವನೇ ತಾನು ಸೃಷ್ಟಿಸಿದ ವಸ್ತುಗಳಲ್ಲಿ ಸೇರಿಕೊಳ್ಳುತ್ತಾನೆಂದು ಹೇಳುವುದಾದರೆ ಕಾಮ-ಕ್ರೋಧಾದಿಗಳಲ್ಲಿ ತನ್ನನ್ನು ತಾನೇ ತೊಡಗಿಸಿಕೊಳ್ಳುವುದೇಕೆ? ಹೀಗೆ ಮಾಡುವುದರಿಂದ ಅವನಿಗಾಗುವ ಪ್ರಯೋಜನವಾದರೂ ಏನು? ಹೀಗೆ ಮಾಡದೇ ತನ್ನ ನಿಷ್ಕ್ರಿಯಸ್ವರೂಪದಲ್ಲಿಯೇ ಇದ್ದರೆ ಅವನಿಗಾಗುವ ತೊಂದರೆಯೇನು? ಅಥವಾ ಅವನಿಗಾಗುತ್ತಿದ್ದ ನಷ್ಟವೇನು?–ತಾವು ಇವೆಲ್ಲವನ್ನೂ ನನಗೆ ಯಥಾವತ್ತಾಗಿ ಯಥಾಕ್ರಮವಾಗಿ ತಿಳಿಯಹೇಳಿರಿ."

ಸನತ್ಸುಜಾತರು ಉತ್ತರಿಸುತ್ತಾರೆ :

**ದೋಷೋ ಮಹಾನತ್ರ ವಿಭೇದಯೋಗೇ**
**ಹ್ಯನಾದಿಯೋಗೇನ ಭವನ್ತಿ ನಿತ್ಯಾಃ ।**
**ತಥಾಸ್ಯ ನಾಧಿಕ್ಯಮುಪೈತಿ ಕಿಂಚಿ–**
**ದನಾದಿಯೋಗೇನ ಭವನ್ತಿ ಪುಂಸಃ ॥೨೦॥**

"ಮಹಾರಾಜ! ಹೀಗೆ ನಾನಾತ್ವವನ್ನು ಭಾವಿಸುವುದರಲ್ಲಿ ದೊಡ್ಡ ದೋಷವುಂಟು. ಮಾಯೆಯೂ ಅನಾದಿಯೇ ಆಗಿದೆ. ಅನಾದಿಯಾದ ಮಾಯೆಯ ಪ್ರಭಾವದಿಂದಲೇ ಅನೇಕ ನಿತ್ಯವಸ್ತುಗಳು ಆಗುತ್ತವೆ. ಹೀಗಿರುವಾಗ ಬ್ರಹ್ಮನ ಮಹಿಮೆಯಲ್ಲಿ ಸ್ವಲ್ಪವೂ ಕುಂದುಂಟಾಗುವುದಿಲ್ಲ. ಏಕೆಂದರೆ : ಅನಾದಿಮಾಯೆಯ ಯೋಗದಿಂದಲೇ ಆ ಪರಮಪುರುಷನಿಂದ ಎಲ್ಲವೂ ಅಭಿವ್ಯಕ್ತವಾಗುತ್ತವೆ.

**ಯ ಏತದ್ವಾ ಭಗವಾನ್ಸ ನಿತ್ಯೋ**
**ವಿಕಾರಯೋಗೇನ ಕರೋತಿ ವಿಶ್ವಮ್ ।**
**ತಥಾ ಚ ತಚ್ಛಕ್ತಿರಿತಿ ಸ್ಮ ಮನ್ಯತೇ**
**ತಥಾರ್ಥಯೋಗೇ ಚ ಭವನ್ತಿ ವೇದಾಃ ॥೨೧॥**

ಭಗವಂತನು ನಿತ್ಯಸತ್ಯಸ್ವರೂಪನು. ನಿರ್ವಿಕಾರನು. ಆದರೆ ಈ ವಿಶ್ವವನ್ನು ಅವನು ವಿಕಾರಯೋಗದಿಂದ (ಮಾಯಾಯೋಗದಿಂದ) ಸೃಷ್ಟಿಸುತ್ತಾನೆ. ಮಾಯೆಯನ್ನೂ ನಿತ್ಯಸತ್ಯಸ್ವರೂಪನಾದ ಭಗವಂತನ ಶಕ್ತಿಯೆಂದೇ ಮಹಾತ್ಮರಾದವರು ತಿಳಿದಿರುತ್ತಾರೆ. ವೇದಗಳೂ ಈ ವಿಷಯವನ್ನೇ ಪ್ರತಿಪಾದಿಸುತ್ತವೆ.”

ಮಾಯೆಯು ಪರಮಾತ್ಮನ ಶಕ್ತಿಯೆಂಬುದಕ್ಕೆ ವೇದವಾಕ್ಯಗಳು ಹೀಗಿವೆ :

**ಇನ್ದ್ರೋ ಮಾಯಾಭಿಃ ಪುರರೂಪ ಈಯತೇ ॥**
**ಅಸ್ಮಾನ್ಮಾಯಾ ಸೃಜತೇ ವಿಶ್ವಮೇತತ್ ॥**
**ಮಾಯಿನಂ ತು ಮಹೇಶ್ವರಮ್ ॥** ಇತ್ಯಾದಿ

* * * *

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಯಸ್ಮಾದ್ಧರ್ಮಾನಾಚರನ್ತೀಹ ಕೇಚಿ–**
**ತ್ತಥಾಧರ್ಮಾನ್ಕೇಚಿದಿಹಾಚರನ್ತಿ ।**
**ಧರ್ಮಃ ಪಾಪೇನ ಪ್ರತಿಹನ್ಯತೇ ವಾ**
**ಉತಾಹೋ ಧರ್ಮಃ ಪ್ರತಿಹನ್ತಿ ಪಾಪಮ್ ॥೨೨॥**

“ಪೂಜ್ಯರೇ! ಈ ಲೋಕದಲ್ಲಿ ಕೆಲವರು ಧರ್ಮವನ್ನಾಚರಿಸುತ್ತಾರೆ ; ಮತ್ತೆ ಕೆಲವರು ಅಧರ್ಮವನ್ನಾಚರಿಸುತ್ತಾರೆ. ಹೀಗಿರುವಾಗ ಧರ್ಮವು ಪಾಪದಿಂದ ವಿನಾಶಿತವಾಗುತ್ತದೆಯೋ? ಅಥವಾ ಧರ್ಮವೇ ಪಾಪವನ್ನು ತೊಡೆದುಹಾಕುತ್ತದೆಯೋ?

ಈ ಶ್ಲೋಕದ ಪಾಠಾಂತರವು ಈ ರೀತಿಯಾಗಿದೆ :

**ಯೇಽಸ್ಮಿನ್ಧರ್ಮಾನ್ನಾಚರನ್ತೀಹ ಕೇಚಿ–**
**ತ್ತಥಾ ಧರ್ಮಾನ್ಕೇಚಿದಿಹಾಚರನ್ತಿ ।**
**ಧರ್ಮಃ ಪಾಪೇನ ಪ್ರತಿಹನ್ಯತೇ ಸ್ವಿ–**
**ದುತಾಹೋ ಧರ್ಮಃ ಪ್ರತಿಹನ್ತಿ ಪಾಪಮ್ ॥೨೨॥**

“ಪೂಜ್ಯರೇ! ಇಲ್ಲಿ ಕೆಲವರು (ಮೋಕ್ಷಸಾಧಕರು) ಅಗ್ನಿಹೋತ್ರಾದಿ

ವೇದವಿಹಿತಕರ್ಮಗಳನ್ನು ಮಾಡುವುದಿಲ್ಲ. ಸಂನ್ಯಾಸಯೋಗದಿಂದಲೇ ಇರುತ್ತಾ ಯಮ-ನಿಯಮಾದಿಗಳ ಮೂಲಕವಾಗಿ ಮೋಕ್ಷಸಾಧನೆಗೆ ಪ್ರಯತ್ನಿಸುತ್ತಾರೆ. ಮತ್ತೆ ಕೆಲವರು ಅಗ್ನಿಹೋತ್ರಾದಿ ವೇದವಿಹಿತಕರ್ಮಗಳನ್ನು ಆಚರಿಸುತ್ತಿರುತ್ತಾರೆ. ಅವರು ಆಚರಿಸುವ ಧರ್ಮವು ಅವರಲ್ಲಿರಬಹುದಾದ ರಾಗ-ದ್ವೇಷ-ಮೋಹಾದಿಗಳಿಂದ (ಪಾಪದಿಂದ) ವಿನಷ್ಟವಾಗಿ ಹೋಗುವುದೋ ಅಥವಾ ಧರ್ಮವು ಅವರಲ್ಲಿರಬಹುದಾದ ರಾಗ-ದ್ವೇಷಾದಿಗಳನ್ನೇ (ಪಾಪವನ್ನೇ) ವಿನಾಶಗೊಳಿಸುವುದೋ? ಹೇಳಿರಿ." (ನಿತ್ಯ-ನೈಮಿತ್ತಿಕಕರ್ಮಗಳೂ ಮೋಕ್ಷಕ್ಕೆ ಸಾಧಕವಾದುವುಗಳೇ. ಸಂಧ್ಯಾವಂದನೆಯನ್ನು ಮಹಾಯೋಗವೆಂದು ಕರೆಯುತ್ತಾರೆ. ಆದರೆ ಈ ವಿಧವಾದ ಕರ್ಮಾಚರಣೆಯಿಂದ ಅಥವಾ ಧರ್ಮಾಚರಣೆಯಿಂದ ಮದ-ಮಾತ್ಸರ್ಯಾದಿಗಳು ಹೆಚ್ಚುವುದೂ ಉಂಟು. ಕರ್ಮಫಲದ ಮೇಲೆ ಅಭಿಲಾಷೆ ಹುಟ್ಟುವುದೂ ಸಹಜವಾಗಿಯೇ ಇದೆ. ಆದುದರಿಂದ ಧೃತರಾಷ್ಟ್ರನಿಲ್ಲಿ ಧರ್ಮಾಚರಣೆಯಿಂದ ಪಾಪರೂಪವಾದ ರಾಗ-ದ್ವೇಷಾದಿಗಳು ಹೆಚ್ಚಿ ಧರ್ಮವೇ ವಿನಾಶವಾಗಿ ಹೋಗುವುದೋ? ಅಥವಾ (ಪಾಪವು) ರಾಗ-ದ್ವೇಷಾದಿಗಳು ವಿನಾಶ ಹೊಂದಿ ಧರ್ಮದ ಪ್ರಾಬಲ್ಯವು ಹೆಚ್ಚುವುದೋ? ಈ ಕರ್ಮಗಳಿಂದಲೂ ಮನುಷ್ಯನು ಮೋಕ್ಷವನ್ನು ಸಾಧಿಸಿಕೊಳ್ಳಬಲ್ಲನೇ?—ಎಂದು ಪ್ರಶ್ನಿಸುತ್ತಾನೆ.)

ಸನತ್ಸುಜಾತರು ಹೇಳುತ್ತಾರೆ :

ಉಭಯಮೇವ ತತ್ರೋಪಯುಜ್ಯತೇ
ಫಲಂ ಧರ್ಮಸ್ಯೈವೇತರಸ್ಯ ಚ ॥೨೩॥

"ಮಹಾರಾಜ! ಧರ್ಮದ ಫಲದಿಂದ ಪಾಪ ವಿಮೋಚನೆಯಾಗಬಹುದು ; ಪಾಪದ ಹೆಚ್ಚಳದಿಂದ ಧರ್ಮವೂ ಅಳಿಸಿಹೋಗಬಹುದು. ಎರಡು ವಿಧವಾಗಿಯೂ ಆಗಬಹುದಾಗಿದೆ.

ತಸ್ಮಿನ್ ಸ್ಥಿತೋ ವಾಪ್ಯುಭಯಂ ಹಿ ನಿತ್ಯಂ
ಜ್ಞಾನೇನ ವಿದ್ವಾನ್ಪ್ರತಿಹನ್ತಿ ಸಿದ್ಧಮ್ ।
ತಥಾನ್ಯಥಾ ಪುಣ್ಯಮುಪೈತಿ ದೇಹೀ
ತಥಾಗತಂ ಪಾಪಮುಪೈತಿ ಸಿದ್ಧಮ್ ॥೨೪॥

ವಿದ್ವಾಂಸನಾದವನು ಕರ್ಮನಿರತನಾಗಿಯೇ ಇದ್ದರೂ (ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡುತ್ತಿದ್ದರೂ, ಪುಣ್ಯವನ್ನು ಪಡೆಯಬಹುದಾದ ಧರ್ಮಕಾರ್ಯಗಳನ್ನು ಮಾಡುತ್ತಿದ್ದರೂ) ಪುಣ್ಯ-ಪಾಪಗಳ ಸೋಂಕೇ ತನಗಿಲ್ಲದಂತೆ ಇದ್ದುಬಿಡುತ್ತಾನೆ. ಅವನಿಗೆ ಪುಣ್ಯ-ಪಾಪಗಳ ಲೇಪವಿರುವುದಿಲ್ಲ. ಇದು ಶಾಸ್ತ್ರಪ್ರಸಿದ್ಧವಾಗಿದೆ. ನಿಶ್ಚಯಜ್ಞಾನವಿಲ್ಲದೇ ಕೇವಲ ಕರ್ಮಾನುಷ್ಠಾನವನ್ನು ಮಾಡುತ್ತಿದ್ದರೆ–ಧರ್ಮಕಾರ್ಯಗಳನ್ನು ಮಾಡುತ್ತಿದ್ದರೆ–ಅಂತಹವನು ತತ್ತತ್ಕರ್ಮಫಲಗಳನ್ನು ಪಡೆಯುತ್ತಾನೆ. ಅಂತೆಯೇ ಕೆಲವು ಕರ್ಮಗಳ ಲೋಪ-ದೋಷಗಳಿಂದಾಗಿ ಪಾಪಫಲವನ್ನೂ ಪಡೆಯುತ್ತಾನೆ. ಇದೂ ಸಹ ಶಾಸ್ತ್ರಪ್ರಸಿದ್ಧವಾಗಿದೆ. (ಜ್ಞಾನಿಯಾದವನು ರಾಗ-ದ್ವೇಷರಹಿತನಾಗಿರುವುದರಿಂದ ನಿಷ್ಕಾಮನೆಯಿಂದ ಭಗವದರ್ಪಣ ಬುದ್ಧಿಯಿಂದ ಕರ್ಮಮಾಡುವುದರಿಂದ ಅವನಿಗೆ ಪಾಪ-ಪುಣ್ಯಗಳೆರಡರ ಸಂಬಂಧವೂ ಇರುವುದಿಲ್ಲ. ಜ್ಞಾನಿಯಲ್ಲದವನು ಅದೇ ಕರ್ಮಗಳನ್ನು ಫಲಾಕಾಂಕ್ಷೆಯಿಂದ ಮಾಡುತ್ತಾನೆ. 'ಕಾಮನೆ' ಎಂಬುದೇ ಪುಣ್ಯ-ಪಾಪಗಳಿಗೆ ಮೂಲವಾದುದು. ಪಾಪ-ಪುಣ್ಯಚಕ್ರದಲ್ಲಿ ಸಿಕ್ಕಿದವನಿಗೆ ಮೋಕ್ಷದ ಸಾಧನೆಯಾಗಲಾರದು. ಆದುದರಿಂದ ಕರ್ಮಕಾರಿಯು ಜ್ಞಾನಿಯಾಗದಿದ್ದ ಪಕ್ಷದಲ್ಲಿ ಧರ್ಮವು ಪಾಪದಿಂದ ಪ್ರತಿಹತವಾಗುತ್ತದೆ. ಜ್ಞಾನಿಯಾದ ಪಕ್ಷದಲ್ಲಿ ಪಾಪವು ಧರ್ಮದಿಂದ ಪ್ರತಿಹತವಾಗುತ್ತದೆ.)

**ಗತ್ವೋಭಯಂ ಕರ್ಮಣಾ ಯುಜ್ಯತೇಽಸ್ಥಿರಂ**
**ಶುಭಸ್ಯ ಪಾಪಸ್ಯ ಸ ಚಾಪಿ ಕರ್ಮಣಾ ।**
**ಧರ್ಮೇಣ ಪಾಪಂ ಪ್ರಣುದತೀಹ ವಿದ್ವಾ-**
**ನ್ಧರ್ಮೋ ಬಲೀಯಾನಿತಿ ತಸ್ಯ ಸಿದ್ಧಿಃ ॥೨೫॥**

ದೇಹಾತ್ಮಬುದ್ಧಿಯುಳ್ಳ ಜೀವಿಯು ಪರಲೋಕಕ್ಕೆ ಹೋಗಿ ತಾನು ಮಾಡಿದ ಕರ್ಮದಿಂದ ಪ್ರಾಪ್ತವಾದ ಪಾಪ-ಪುಣ್ಯಗಳೆರಡರ ಫಲವನ್ನೂ ಅನುಭವಿಸುತ್ತಾನೆ. ಇವೆರಡರ ಫಲಗಳೂ ಅಸ್ಥಿರವಾದುವುಗಳು. ಇವೆರಡರ ಫಲಗಳು ತೀರಿದ ನಂತರ ಅವನಿಗೆ ಪುನಃ ಜನ್ಮವು ತಪ್ಪಿದ್ದಲ್ಲ. ಕೆಲವು ವಿಧ ವಾದ ಕರ್ಮಫಲಗಳನ್ನು ಪುನರ್ಜನ್ಮಪಡೆದೂ ಅನುಭವಿಸಬೇಕಾಗುತ್ತದೆ.

ಆದರೆ ಜ್ಞಾನಿಯಾದವನು ಪಾಪ-ಪುಣ್ಯಗಳೆರಡಕ್ಕೂ ಹೊರತಾದವನು. ದೇಹಾತ್ಮಬುದ್ಧಿಯನ್ನು ತೊರೆದಿರತಕ್ಕವನು. ಜ್ಞಾನಾಗ್ನಿಯಿಂದ ತನ್ನ ಪಾಪ-ಪುಣ್ಯಗಳ ಫಲಗಳೆರಡನ್ನೂ ಭಸ್ಮಮಾಡುತ್ತಾನೆ. ಮುಂದೆ ಪುಣ್ಯ ಮತ್ತು ಪಾಪಗಳ ಸಂಚಯನಕ್ಕಾಗಿ ಯಾವ ಕರ್ಮವನ್ನೂ ಮಾಡಲು ಹೋಗುವುದಿಲ್ಲ. ಈ ವಿಧವಾಗಿ ಜ್ಞಾನಿಯು ಆತ್ಮಧರ್ಮದಿಂದ ಪಾಪವನ್ನು ಹೋಗಲಾಡಿಸಿಕೊಳ್ಳುತ್ತಾನೆ. ಅವನಲ್ಲಿ ಆತ್ಮಧರ್ಮವೇ ಬಲವತ್ತರವಾಗಿರುತ್ತದೆ." (ಇಲ್ಲಿ ಧರ್ಮವೆಂದರೆ ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಸಾಧನವಾದ ಧರ್ಮ, ಅರ್ಥಾತ್ ಯೋಗಧರ್ಮ.)

ಧೃತರಾಷ್ಟ್ರನು ಕೇಳುತ್ತಾನೆ :

**ಯಾನಿಹಾಹುಃ ಸ್ವಸ್ಯ ಧರ್ಮಸ್ಯ ಲೋಕಾ-**
**ನ್ದ್ವಿಜಾತೀನಾಂ ಪುಣ್ಯಕೃತಾಂ ಸನಾತನಾನ್ ।**
**ತೇಷಾಂ ಕ್ರಮಾನ್ಕಥಯ ತತೋಽಪಿ ಚಾನ್ಯಾ-**
**ನ್ನೈತದ್ವಿದ್ವನ್ವೇತ್ತುಮಿಚ್ಛಾಮಿ ಕರ್ಮ ॥೨೬॥**

"ವಿದ್ವಾಂಸರೇ! ಪುಣ್ಯಮಾಡಿದ ದ್ವಿಜರಿಗೆ ಅವರ ಧರ್ಮಕ್ಕೆ ಅನುಗುಣವಾಗಿ ಯಾವ ನಿತ್ಯಲೋಕಗಳು ತೆರೆದಿರುತ್ತವೆಯೋ–ಅವುಗಳ ಕ್ರಮಗಳನ್ನೂ, ಹಾಗೆಯೇ ಪ್ರತ್ಯಗಾನಂದವನ್ನು ಕೊಡುವ ಮೋಕ್ಷಸುಖವನ್ನೂ ತಿಳಿಸುವವರಾಗಿರಿ. (ಅದನ್ನು ಬಿಟ್ಟು ಉಳಿದ ಕರ್ಮಗಳನ್ನು–ನಿಷಿದ್ಧ ಕಾಮ್ಯಕರ್ಮಗಳನ್ನು ತಿಳಿಯಲು ನನಗೆ ಇಷ್ಟವಿಲ್ಲ.)"

ಸನತ್ಸುಜಾತರು ಉತ್ತರಿಸುತ್ತಾರೆ :

**ಯೇಷಾಂ ವ್ರತೇಽಥ ವಿಸ್ಪರ್ಧಾ ಬಲೇ ಬಲವತಾಮಿವ ।**
**ತೇ ಬ್ರಾಹ್ಮಣಾ ಇತಃ ಪ್ರೇತ್ಯ ಬ್ರಹ್ಮಲೋಕಪ್ರಕಾಶಕಾಃ ॥೨೭॥**

"ರಾಜೇಂದ್ರ! ಬಲಶಾಲಿಗಳಿಗೆ ಬಲದ ವಿಷಯದಲ್ಲಿ ಸ್ಪರ್ಧೆಯು ಇರುವಂತೆ–ವ್ರತಗಳ ವಿಷಯಗಳಲ್ಲಿ (ಮೋಕ್ಷಸಾಧನನಿಯಮಗಳಲ್ಲಿ) ಯಾರಿಗೆ ಸ್ಪರ್ಧೆಯು ಇರುತ್ತದೆಯೋ–ಅಂತಹ ಬ್ರಾಹ್ಮಣರು ಮರಣಾನಂತರ ಬ್ರಹ್ಮಲೋಕದಲ್ಲಿ ಪ್ರಕಾಶಿಸುತ್ತಾರೆ.

**ಯೇಷಾಂ ಧರ್ಮೇ ಚ ವಿಸ್ಪರ್ಧಾ ತೇಷಾಂ ತಜ್ಜ್ಞಾನಸಾಧನಮ್ ।**
**ತೇ ಬ್ರಾಹ್ಮಣಾ ಇತೋ ಮುಕ್ತಾಃ ಸ್ವರ್ಗಂ ಯಾನ್ತಿ**
**ತ್ರಿವಿಷ್ಟಪಮ್ ॥೨೮॥**

ಯಾರಿಗೆ ಧರ್ಮದಲ್ಲಿ ವಿಶೇಷವಾದ ಸ್ಪರ್ಧೆಯಿರುವುದೋ–ಅವರಿಗೆ ಅದು ಜ್ಞಾನಕ್ಕೆ ಸಾಧನವಾಗುತ್ತದೆ. ಅಂತಹ ಬ್ರಹ್ಮಜ್ಞಾನಿಗಳು ಈ ಲೋಕ ದಿಂದ ಮುಕ್ತರಾಗಿ ತ್ರಿವಿಷ್ಟಪವೆಂಬ (ಮುಬ್ಬಗೆಯ ತಾಪಗಳಿಲ್ಲದ) ಸ್ವರ್ಗವನ್ನು (ಪರಮಸುಖವನ್ನು) ಹೊಂದುತ್ತಾರೆ. (ಈ ಎರಡು ಶ್ಲೋಕಗಳಿಗೂ ಪಾಠಾಂತರವಿದೆ. ಆ ಪಾಠಾಂತರವೂ ಸ್ವಾರಸ್ಯಕರವಾಗಿರುವುದರಿಂದ ಈ ಎರಡು ಶ್ಲೋಕಗಳನ್ನೂ–ಅರ್ಥವನ್ನೂ ಕೊಡಲಾಗಿದೆ.)

**ಯೇಷಾಂ ಧರ್ಮೇಷು ವಿಸ್ಪರ್ಧಾ ಬಲೇ ಬಲವತಾಮಿವ ।**
**ತೇ ಬ್ರಾಹ್ಮಣಾ ಇತಃ ಪ್ರೇತ್ಯ ಸ್ವರ್ಗೇ ಯಾನ್ತಿ ಪ್ರಕಾಶತಾಮ್ ॥**

ಇತರರನ್ನು ಗೆಲ್ಲಬೇಕೆಂದು ತಮ್ಮ ಬಲದ ವಿಷಯದಲ್ಲಿ ಬಲವಂತರಿಗೆ ಹೇಗೆ ಸ್ಪರ್ಧೆಯಿರುತ್ತದೆಯೋ–ಹಾಗೆಯೇ ಧರ್ಮದ ವಿಷಯದಲ್ಲಿ ಸ್ಪರ್ಧೆಯಿರುವ ಬ್ರಾಹ್ಮಣರು ಇಲ್ಲಿಂದ ಸ್ವರ್ಗಕ್ಕೆ ಹೋಗಿ ಪ್ರಕಾಶಿಸುತ್ತಾರೆ.

ಜನರು ಸ್ವರ್ಗದಲ್ಲಿ ಪುಣ್ಯವಂತರಿಗೆ ನಾನಾಭೋಗಗಳು ದೊರೆಯುತ್ತವೆಯೆಂದು ವಿಷಯಾಸಕ್ತರಾಗಿ ಸ್ಪರ್ಧೆಯಿಂದ ಧರ್ಮಕಾರ್ಯ ಗಳನ್ನು ಮಾಡುತ್ತಾರೆ. ಅಂತಹವರಿಗೆ ಅನಿತ್ಯವಾದ ಸ್ವರ್ಗವು ದೊರೆಯುತ್ತದೆ. ಏಕೆಂದರೆ: ಅವರು ಫಲದಲ್ಲಿ ಆಸೆಯನ್ನಿಟ್ಟಿರುತ್ತಾರೆ.

**ಯೇಷಾಂ ಧರ್ಮೇ ನ ಚ ಸ್ಪರ್ಧಾ ತೇಷಾಂ ತಜ್ಜ್ಞಾನಸಾಧನಮ್ ।**
**ತೇ ಬ್ರಾಹ್ಮಣಾ ಇತೋ ಮುಕ್ತಾಃ ಸ್ವರ್ಗಂ ಯಾನ್ತಿ ತ್ರಿವಿಷ್ಟಪಮ್ ॥**

ಯಾರಿಗೆ ಧರ್ಮದಲ್ಲಿ ಸ್ಪರ್ಧೆಯೇ ಇಲ್ಲವೋ ಎಂದರೆ ಯಾರು ಫಲಾಪೇಕ್ಷೆಯಿಲ್ಲದೇ ಕರ್ಮವನ್ನು ಈಶ್ವರಪ್ರೀತ್ಯರ್ಥವಾಗಿ ಮಾಡು ವರೋ–ಅಂತಹವರಿಗೆ ಆ ಕರ್ಮವು ಚಿತ್ತಶುದ್ಧಿಯನ್ನುಂಟುಮಾಡಿ ಜ್ಞಾನಕ್ಕೆ ಸಾಧಕವಾಗುತ್ತದೆ. ಅವರು ತ್ರಿವಿಷ್ಟಪವೆನಿಸುವ ಪೂರ್ಣಾನಂದರೂಪವಾದ ಸ್ವರ್ಗವನ್ನು ಪಡೆಯುತ್ತಾರೆ.

(25ನೆಯ ಶ್ಲೋಕದಲ್ಲಿ ಹೇಳಿದ ಸ್ವರ್ಗಕ್ಕಿಂತಲೂ ಇದು ಬೇರೆಯಾದುದೆಂದು ತೋರಿಸುವುದಕ್ಕಾಗಿ 'ತ್ರಿವಿಷ್ಟಪ'ವೆಂಬ ವಿಶೇಷಣವನ್ನು ಕೊಟ್ಟಿದ್ದಾರೆ. ತ್ರಿಭಿಃ= ಸತ್ತ್ವ, ರಜಸ್, ತಮಸ್ಸುಗಳೆಂಬ ಮೂರು ಗುಣಗಳಿಂದ ಅಥವಾ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯಗಳಿಂದ, ವಿಷ್ಟಂ = ಕೂಡಿದವನನ್ನು, ಪಂ = ಪಾಲಿಸತಕ್ಕ ಸ್ವರ್ಗ. ಅಂತಹುದು ಪೂರ್ಣಾನಂದಸ್ವರೂಪವಾದ ಬ್ರಹ್ಮವೇ ಸರಿ.)

**ತಸ್ಯ ಸಮ್ಯಕ್ಸಮಾಚಾರಮಾಹುರ್ವೇದವಿದೋ ಜನಾಃ ।**
**ನೈನಂ ಮನ್ಯೇತ ಭೂಯಿಷ್ಠಂ ಬಾಹ್ಯಮಾಭ್ಯನ್ತರಂ ಜನಮ್ ॥೨೯॥**

ವೇದವನ್ನು ಬಲ್ಲ ಜನರು ಬ್ರಹ್ಮಜ್ಞಾನಿಯ ಆಚರಣೆಯನ್ನು ಹೀಗೆ ವರ್ಣಿಸುತ್ತಾರೆ : 'ಅವನ ಒಳ-ಹೊರಗಿನ ಜನರು (ಪುತ್ರ, ಮಿತ್ರ, ಪತ್ನೀ ಮುಂತಾದ ಆತ್ಮೀಯರು ಮತ್ತು ಹೊರಗಿನ ಬಂಧುಗಳು) ಅವನನ್ನು ಚೆನ್ನಾಗಿ (ಬಹುಮಟ್ಟಿಗೆ) ತಿಳಿಯಲಾರರು.' (ಬ್ರಹ್ಮಜ್ಞಾನಿಯು ತನ್ನ ಪುತ್ರ-ಮಿತ್ರಾದಿಗಳಿಗೂ ಅರಿವಿಗೆ ಬರದಂತೆ ವ್ಯವಹರಿಸುತ್ತಾ ಅವರಿಗೆ ಅಗೋಚರವಾಗಿಯೇ ತನ್ನ ಸಾಧನೆಯಲ್ಲಿರುತ್ತಾನೆ. ಅವನ ನಿಕಟಸಂಬಂಧಿಗಳೂ ಅವನನ್ನು ಅರ್ಥಮಾಡಿಕೊಳ್ಳಲಾರರು.)

**ಯತ್ರ ಮನ್ಯೇತ ಭೂಯಿಷ್ಠಂ ಪ್ರಾವೃಷೀವ ತೃಣೋಪಲಮ್ ।**
**ಅನ್ನಂ ಪಾನಂ ಬ್ರಾಹ್ಮಣಸ್ಯ ತಜ್ಜೀವೇನ್ನಾನುಸಂಜ್ವರೇತ್ ॥೩೦॥**

ಮಳೆಗಾಲದಲ್ಲಿ ಹುಲ್ಲು ಹೇರಳವಾಗಿ ಬೆಳೆಯುವಂತೆ–ಯಾವ ಜಾಗದಲ್ಲಿ ಅನ್ನ, ನೀರು ಹೆಚ್ಚಾಗಿ ಇರುವುದಾಗಿ ತಿಳಿದುಬರುತ್ತದೆಯೋ–ಆ ಜಾಗದಲ್ಲಿ ಬ್ರಹ್ಮಜ್ಞಾನಿಯು ಜೀವನಯಾತ್ರೆಯನ್ನು ನಡೆಸಬೇಕು. ಬ್ರಹ್ಮಜ್ಞಾನಿಯಾದವನು ಅನ್ನ-ನೀರುಗಳಿಲ್ಲದೇ ಸಂತಾಪಪಡಬಾರದು.

**ಯಚ್ಚಾಕಥಯಮಾನಸ್ಯ ಪ್ರಯಚ್ಛತ್ಯಶಿವಂ ಭಯಮ್ ।**
**ಅತಿರಿಕ್ತಮಿವಾಕುರ್ವನ್ಸ ಶ್ರೇಯಾನ್ನೇತರೋ ಜನಃ ॥೩೧॥**

ಆತನು ಮಾತನಾಡದೇ ಸುಮ್ಮನಿರುವಾಗ ಯಾವ ಜಾಗದಲ್ಲಿ ಜನರು ಅವನಿಗೆ ಅಮಂಗಲಕರವಾದುದನ್ನು (ಅವಮಾನ ಮುಂತಾದುವನ್ನು) ಮಾಡುತ್ತಾರೆಯೋ– ಅದಕ್ಕೆ ವಿರುದ್ಧವಾದುದನ್ನು ಮಾಡುವುದಿಲ್ಲವೋ

(ಅವನನ್ನು ಗೌರವಿಸಹೋಗುವುದಿಲ್ಲವೋ)–ಅಂತಹ ಜನಸಮೂಹವೇ ಸಾಧಕನಿಗೆ ಕಲ್ಯಾಣಕರವಾದುದು. ಇದಕ್ಕೆ ವಿರುದ್ಧವಾಗಿ ಸಾಧಕನನ್ನು ಗೌರವಿಸುವ ಜನಸಮುದಾಯವಿರುವುದಾದಲ್ಲಿ ಅಂತಹ ಜನತೆಯು ಸಾಧಕನಿಗೆ ಕಲ್ಯಾಣಕರವಲ್ಲ.

(ಜ್ಞಾನಿಯು ತನ್ನ ಹಿರಿಮೆಯನ್ನು ಅಥವಾ ಮಹಿಮೆಯನ್ನು ಯಾರಲ್ಲಿಯೂ ಹೇಳಿಕೊಳ್ಳುವುದಿಲ್ಲ. ಆಹಾರ-ವಿಹಾರಗಳಲ್ಲಿ ನಿಯಮ ವನ್ನಿಟ್ಟಿರುವುದಿಲ್ಲ. ಜಡನಂತೆಯೂ, ಮೂಕನಂತೆಯೂ, ಬಾಲಕನಂತೆಯೂ ನಡೆದುಕೊಳ್ಳುತ್ತಾನೆ. ಜನರಿಂದ ಯಾವ ಮರ್ಯಾದೆಯನ್ನೂ ಅಪೇಕ್ಷಿಸುವುದಿಲ್ಲ. ಅಪೇಕ್ಷಿಸಲೂ ಕೂಡದೆಂದು ಮನುಸ್ಮೃತಿಯಲ್ಲಿ ಹೇಳಿದೆ.

**ಸಮ್ಮಾನಾದ್ಬ್ರಾಹ್ಮಣೋ ನಿತ್ಯಂ ಉದ್ವಿಜೇತ ವಿಷಾದಿವ ।**
**ಅಮೃತಸ್ಯೇವ ಚಾಕಾಂಕ್ಷೇದವಮಾನಸ್ಯ ಸರ್ವದಾ ॥**

**ಸಮ್ಮಾನಾನಾಂ ಪರಾಂ ಹಾನಿಂ ಯೋಗರ್ಧೇಃ ಕುರುತೇ ಯತಃ ।**
**ಜನೇನಾವಮತೋ ಯೋಗೀ ಯೋಗಸಿದ್ಧಿಂ ಚ ವಿನ್ದತಿ ॥**

ಮನುಸ್ಮೃತಿ

ವಿದ್ವಾಂಸನಾದ ಬ್ರಾಹ್ಮಣನು ವಿಷದಂತೆ ಸಮ್ಮಾನಕ್ಕೆ ಅಂಜಬೇಕು. ಅವಮಾನವನ್ನು ಅಮೃತದಂತೆ ಯಾವಾಗಲೂ ಬಯಸಬೇಕು. ಸಮ್ಮಾನವು ಯೋಗಸಿದ್ಧಿಗೆ ಬಹಳ ಹಾನಿಯನ್ನುಂಟುಮಾಡುತ್ತದೆ.

ಆದುದರಿಂದ ಜನಗಳ ಉಪೇಕ್ಷೆಗೆ ಪಾತ್ರನಾದ ಯೋಗಿಯೇ ಯೋಗ ಸಿದ್ಧಿಯನ್ನು ಪಡೆಯುತ್ತಾನೆ.)

*  *  *  *

**ಯಚ್ಚಾಕಥಯಮಾನಸ್ಯ ಹ್ಯಾತ್ಮಾನಂ ನಾನುಸಂಜ್ವರೇತ್ ।**
**ಬ್ರಹ್ಮಸ್ವಂ ನೋಪಭುಞ್ಜೀತ ತದನ್ನಂ ಸಮ್ಮತಂ ಸತಾಮ್ ॥೩೨॥**

ಮೌನಿಯಾಗಿರುವ ಯೋಗಿಗೆ ಯಾವನು ಸಂತಾಪವನ್ನುಂಟುಮಾಡು ವುದಿಲ್ಲವೋ ಮತ್ತು ಅವನ ಬ್ರಹ್ಮಸಾಕ್ಷಾತ್ಕಾರದ ಸಾಧನೆಗೆ ಸಾಧನವಾದುವು ಗಳನ್ನು (ನಾರುಮಡಿ, ಕೃಷ್ಣಾಜಿನ, ದರ್ಭೆ ಇತ್ಯಾದಿಗಳು) ಅಪಹರಿಸುವು ದಿಲ್ಲವೋ–ಅಂತಹವನ ಅನ್ನವು ಸತ್ಪುರುಷರಿಗೆ ಇಷ್ಟವಾದುದು. (ಯೋ ವಾ

**ಕಥಯಮಾನಸ್ಯ** ಎಂಬ ಪಾಠಾಂತರದಂತೆ–ಆತ್ಮಪ್ರಶಂಸೆಮಾಡಿಕೊಳ್ಳು ತ್ತಿರುವವನನ್ನು ನೋಡಿ ಅವನ ಐಶ್ವರ್ಯದ ವಿಷಯವಾಗಿ ಯಾವನು ಮಾತ್ಸರ್ಯಹೊಂದುವುದಿಲ್ಲವೋ ಮತ್ತು ಬ್ರಾಹ್ಮಣನ ಸ್ವತ್ತನ್ನು ಯಾವನು ಅಪಹರಿಸುವುದಿಲ್ಲವೋ–ಅಂತಹವನ ಅನ್ನವು ಸತ್ಪುರುಷರಿಗೆ ಸಮ್ಮತವಾಗಿರುತ್ತದೆ.)

**ಯಥಾ ಸ್ವಂ ವಾನ್ತಮಶ್ನಾತಿ ಶ್ವಾ ವೈ ನಿತ್ಯಮಭೂತಯೇ ।**
**ಏವಂ ತೇ ವಾನ್ತಮಶ್ನನ್ತಿ ಸ್ವವೀರ್ಯಸ್ಯೋಪಸೇವನಾತ್ ॥೩೩॥**

ಯಾವ ವಿದ್ವಾಂಸರು ತಮ್ಮ-ತಮ್ಮ ಮಹಿಮೆಗಳನ್ನು ಹೊಗಳಿಕೊಳ್ಳುತ್ತಾ ತಾವು ಮಾಡಿದ ಉಪಾಸನಾಶಕ್ತಿಯಿಂದಲೇ ಜೀವನವನ್ನು ನಡೆಸುತ್ತಾರೆಯೋ ಅವರು–ತಾನು ಕಕ್ಕಿದುದನ್ನೇ ಮತ್ತೆ ತಿನ್ನುವ ನಾಯಿಯಂತೆ–ಅನರ್ಥಕ್ಕೆ ಕಾರಣರಾಗುತ್ತಾರೆ. (ಬ್ರಾಹ್ಮಣರು ಅನೇಕವಿಧವಾದ ಉಪಾಸನೆಗಳನ್ನು ಮಾಡಿ ಅಮಾನುಷವಾದ ಶಕ್ತಿಯನ್ನು ಗಳಿಸಿರುತ್ತಾರೆ. ಅವರು ಆ ಶಕ್ತಿಯನ್ನು ತಮ್ಮ ಉದ್ಧಾರಕ್ಕೆ ಮತ್ತು ಪರೋಪಕಾರಕ್ಕೆ ನಿಯೋಜಿಸಿಕೊಳ್ಳಬೇಕು. ಆದರೆ ಹಾಗೆ ಮಾಡದೇ ಅನೇಕರು ತಾವು ಪಡೆದುಕೊಂಡ ಶಕ್ತಿಯನ್ನು ದುರ್ವಿನಿಯೋಗಮಾಡಿ ಅದರಿಂದಲೇ ಜೀವಿಸುತ್ತಾರೆ. ಅಂತಹವರಿಗೆ ಅಧಃಪತನವು ತಪ್ಪಿದ್ದಲ್ಲ.)

**ನಿತ್ಯಮಜ್ಞಾತಚರ್ಯಾ ಮೇ ಇತಿ ಮನ್ಯೇತ ಬ್ರಾಹ್ಮಣಃ ।**
**ಜ್ಞಾತೀನಾಂ ತು ವಸನ್ಮಧ್ಯೇ ತಂ ವಿದುರ್ಬ್ರಾಹ್ಮಣಂ ಬುಧಾಃ ॥೩೪॥**

ಅಣ್ಣ-ತಮ್ಮ ಬಂಧು-ಭಗಿನಿಯರು ಇವರ ಮಧ್ಯದಲ್ಲಿ ವಾಸಮಾಡಿಕೊಂಡಿದ್ದೂ ಯಾವ ಬ್ರಾಹ್ಮಣನು ಅಜ್ಞಾತೇ–ವಾಗಗೋಚರವಾದ ಬ್ರಹ್ಮಸ್ವರೂಪದಲ್ಲಿ, ಚರ್ಯಾ-ನಿಷ್ಠೆಯು ತನಗೆ ಯೋಗ್ಯವೆಂದು ಭಾವಿಸುತ್ತಾನೆಯೋ (ಯೋಗ್ಯವೆಂದು ಭಾವಿಸಿ ಯಾರಿಗೂ ತಿಳಿಯದಂತೆ ರಹಸ್ಯದಲ್ಲಿ ತನ್ನ ಸಾಧನೆಯನ್ನು ಮುಂದುವರಿಸು ತ್ತಿರುತ್ತಾನೆಯೋ)–ಅಂತಹವನನ್ನು ವಿದ್ವಾಂಸರು ಬ್ರಾಹ್ಮಣನೆಂದು ಕರೆಯುತ್ತಾರೆ.

**ಕೋ ಹ್ಯನನ್ತರಮಾತ್ಮಾನಂ ಬ್ರಾಹ್ಮಣೋ ಹನ್ತುಮರ್ಹತಿ ।**
**ನಿರ್ಲಿಙ್ಗಮಚಲಂ ಶುದ್ಧಂ ಸರ್ವದ್ವೈತವಿವರ್ಜಿತಮ್ ॥೩೫॥**

ಲಿಂಗರಹಿತವೂ, ಅಚಲವೂ, ಶುದ್ಧವೂ, ಎಲ್ಲ ದ್ವೈತಭಾವಗಳಿಂದ ವರ್ಜಿತವೂ, ಸ್ವಸ್ವರೂಪವಾದುದರಿಂದ ಅವ್ಯವಹಿತವೂ (ಅವಿಚ್ಛಿನ್ನವೂ) ಆದ ಈ ಆತ್ಮನನ್ನು ಯಾವ ಬ್ರಾಹ್ಮಣನೂ ಘಾತಮಾಡಬಾರದು. (ಆತ್ಮನ ಅರಿವನ್ನು ಸಂಪಾದಿಸಿಕೊಳ್ಳದಿದ್ದರೆ ಆತ್ಮನನ್ನು ಕೊಂದಂತೆ ಅಥವಾ ಆತ್ಮಹತ್ಯೆಯನ್ನು ಮಾಡಿಕೊಂಡಂತೆ. ಆತ್ಮಘಾತಮಾಡುವುದೆಂದರೆ ಆತ್ಮನ ವಿಷಯದಲ್ಲಿ ಅಜ್ಞಾನಹೊಂದುವುದು. ಇದೇ ಆತ್ಮಹತ್ಯೆಯ ವಿಷಯವಾಗಿ ಈಶಾವಾಸ್ಯದಲ್ಲಿ ಹೀಗೆ ಹೇಳಿದೆ :

**ಅಸೂರ್ಯಾ ನಾಮ ತೇ ಲೋಕಾ ಅನ್ಧೇನ ತಮಸಾವೃತಾಃ ।**
**ತಾಗ್ಂಸ್ತೇ ಪ್ರತ್ಯಭಿಗಚ್ಛನ್ತಿ ಯೇ ಕೇ ಚಾತ್ಮಹನೋ ಜನಾಃ ॥**

ಆತ್ಮಹಂತೃಗಳಾದ (ಆತ್ಮವನ್ನು ತಿಳಿದುಕೊಳ್ಳದ) ಜನರು ಅಂಧ ತಮಸ್ಸಿನಿಂದ ಆವೃತವಾದ ಅಸೂರ್ಯಾ ಎಂಬ ಹೆಸರಿನ ಲೋಕಗಳಿಗೆ ಹೋಗುತ್ತಾರೆ.)

(ದ್ವೈತಭಾವಗಳು = ಸುಖ-ದುಃಖ, ಶೋಕ-ಮೋಹ, ಶೀತೋಷ್ಣ, ಹಸಿವು-ಬಾಯಾರಿಕೆ–ಇತ್ಯಾದಿಗಳು.)

(ಈ ಶ್ಲೋಕದ ಪಾಠಾಂತರವು ಈ ರೀತಿಯಾಗಿರುತ್ತದೆ :

**ಕೋ ಹ್ಯೇವಮನ್ತರಾತ್ಮಾನಂ ಬ್ರಾಹ್ಮಣೋ ಮನ್ತುಮರ್ಹತಿ ।**
**ನಿರ್ಲಿಙ್ಗಮಚಲಂ ಶುದ್ಧಂ ಸರ್ವದ್ವಂದ್ವವಿವರ್ಜಿತಮ್ ॥**

ಅನುಮಾನಾದಿ ಪ್ರಮಾಣಗಳಿಗೆ ಅಗಮ್ಯನೂ, ಅಕ್ರಿಯನೂ, ಪರಿಶುದ್ಧನೂ, ಹಸಿವು-ಬಾಯಾರಿಕೆ ಮುಂತಾದ ದ್ವಂದ್ವಗಳಿಂದ ವಿಮುಕ್ತನೂ ಆದ ಅಂತರಾತ್ಮನನ್ನು ಯಾವ ಬ್ರಹ್ಮವಿದನು ತಾನೇ ದೇಹಧರ್ಮವುಳ್ಳವನೆಂದು ತಿಳಿಯುತ್ತಾನೆ? ಯಾವನೂ ತಿಳಿಯುವುದಿಲ್ಲ.)

**ತಸ್ಮಾದ್ಧಿ ಕ್ಷತ್ರಿಯಸ್ಯಾಪಿ ಬ್ರಹ್ಮಾವಸತಿ ಪಶ್ಯತಿ ॥೩೬॥**

ಆದುದರಿಂದ ಈ ನಿಯಮಕ್ಕೆ ಒಳಪಟ್ಟಿರುವ (ದೇಹಾತ್ಮಬುದ್ಧಿಯಿಲ್ಲದ) ಕ್ಷತ್ರಿಯನಲ್ಲಿಯೂ ಬ್ರಹ್ಮವು ಮನೆಮಾಡಿಕೊಳ್ಳುತ್ತದೆ. ಅವನೂ ಬ್ರಹ್ಮಭಾವವನ್ನು ಹೊಂದುತ್ತಾನೆ.

**ಯೋಽನ್ಯಥಾ ಸನ್ತಮಾತ್ಮಾನಮನ್ಯಥಾ ಪ್ರತಿಪದ್ಯತೇ ।**
**ಕಿಂ ತೇನ ನ ಕೃತಂ ಪಾಪಂ ಚೌರೇಣಾತ್ಮಾಪಹಾರಿಣಾ ॥೩೭॥**

ಯಾವನು ಬೇರೆ ರೀತಿಯಲ್ಲಿರುವ (ಜ್ಞಾನಾತ್ಮನಾಗಿ, ಅಲಿಂಗನೂ, ಅಚಲನೂ, ಶುದ್ಧನೂ ಆಗಿರುವ) ದ್ವೈತವರ್ಜಿತನಾಗಿರುವ ಆತ್ಮನನ್ನು ಬೇರೆ ರೀತಿಯಲ್ಲಿ (ದೇಹವೇ ಆತ್ಮಾ ಇತ್ಯಾದಿಯಾಗಿ) ತಿಳಿಯುತ್ತಾನೆಯೋ ಅಂತಹ ಆತ್ಮನನ್ನು ಅಪಹರಿಸಿದ ಕಳ್ಳನು ಯಾವ ಪಾಪವನ್ನು ತಾನೇ ಮಾಡಿದಂತಾಗಲಿಲ್ಲ? (ಮಹಾಪಾತಕವೇ ಮುಂತಾದ ಎಲ್ಲ ಪಾಪಗಳನ್ನೂ ಅವನು ಮಾಡಿದಂತೆಯೇ ಸರಿ.)

**ಅಶ್ರಾನ್ತಃ ಸ್ಯಾದನಾದಾತಾ ಸಮ್ಮತೋ ನಿರುಪದ್ರವಃ ।**
**ಶಿಷ್ಟೋ ನ ಶಿಷ್ಟವತ್ಸ ಸ್ಯಾದ್ಬ್ರಾಹ್ಮಣೋ ಬ್ರಹ್ಮವಿತ್ಕವಿಃ ॥೩೮॥**

ಬ್ರಹ್ಮಜ್ಞಾನಿಯೂ, ವ್ಯಾಪಕವಾದ ದೃಷ್ಟಿಯುಳ್ಳವನೂ ಆದ ಬ್ರಾಹ್ಮಣನು–ದೇಹೇಂದ್ರಿಯಗಳನ್ನಾಗಲೀ ಅವುಗಳ ಧರ್ಮಗಳನ್ನಾಗಲೀ ಆತ್ಮವೆಂದು ಭಾವಿಸದೇ ಇರುವುದರಿಂದ ಸಂಸಾರದಲ್ಲಿ ಶ್ರಮಯುಕ್ತನಾಗಿರುವುದಿಲ್ಲ. (ಅವನು ಯಾವಾಗಲೂ ಆತ್ಮನಲ್ಲಿ ವಿಶ್ರಾಂತಿಪಡೆಯುವುದರಿಂದ ಅವನಿಗೆ ಶ್ರಮವೆಂಬುದೇ ಇರದು.) ಕ್ರೋಧ-ಹರ್ಷ ಮುಂತಾದ ಉಪದ್ರವಗಳೂ ಅವನಿಗಿರುವುದಿಲ್ಲ. ಅವನು ಶಿಷ್ಟನೆಂದು ವಿದ್ವಾಂಸರಿಗೆ ಸಮ್ಮತನಾಗುವನು. ಆದರೆ ಅವನು ಶಿಷ್ಟನಂತೆ ತೋರಿಸಿಕೊಳ್ಳುವುದಿಲ್ಲ.

**ಅನಾಢ್ಯಾ ಮಾನುಷೇ ವಿತ್ತೇ ಆಢ್ಯಾ ದೈವೇ ತಥಾ ಕ್ರತೌ ।**
**ತೇ ದುರ್ಧರ್ಷಾ ದುಷ್ಪ್ರಕಮ್ಪ್ಯಾಸ್ತಾನ್ವಿದ್ಯಾದ್ಬ್ರಹ್ಮಣಸ್ತನುಮ್ ॥೩೯॥**

ಯಾವ ದ್ವಿಜರು ಮಾನುಷವಾದ ಸಂಪತ್ತಿನಲ್ಲಿ (ಹಣಕಾಸಿನಲ್ಲಿ) ದರಿದ್ರರಾಗಿದ್ದು, ದೇವತೆಗಳ ಸಂಬಂಧವಾದ ತಪಸ್ಸಿನಲ್ಲಿಯೂ ಮತ್ತು ಯಜ್ಞದ ವಿಷಯದಲ್ಲಿಯೂ ಸಂಪನ್ನರಾಗಿರುತ್ತಾರೆಯೋ–ಅವರೇ ದುರ್ಧರ್ಷರು. ಅಂತಹವರನ್ನು ಎದುರಿಸಿ ನಿಲ್ಲಲು ಯಾರಿಗೂ ಸಾಧ್ಯವಾಗುವುದಿಲ್ಲ. ತಪೋಧನರಾದ ಅವರನ್ನು ಬ್ರಹ್ಮಸ್ವರೂಪರೆಂದೇ ತಿಳಿಯಬೇಕು.

**ಸರ್ವಾನ್ಸ್ವಿಷ್ಟಕೃತೋ ದೇವಾನ್ವಿದ್ಯಾದ್ಯ ಇಹ ಕಶ್ಚನ ।**
**ನ ಸಮಾನೋ ಬ್ರಾಹ್ಮಣಸ್ಯ ತಸ್ಮಿನ್ಪ್ರಯತತೇ ಸ್ವಯಮ್ ॥೪೦॥**

ಯಾವನು ಇಷ್ಟಾರ್ಥಸಿದ್ಧಿಯನ್ನುಂಟುಮಾಡುವ ಎಲ್ಲ ದೇವತೆಗಳನ್ನೂ ಚೆನ್ನಾಗಿ ತಿಳಿದಿದ್ದಾನೆಯೋ (ಅರಿತಿದ್ದಾನೆಯೋ) ಅವನೂ ಇಂತಹ ಬ್ರಹ್ಮ

ಜ್ಞಾನಿಯಾದ ಬ್ರಾಹ್ಮಣನಿಗೆ ಸಮಾನನಾಗುವುದಿಲ್ಲ. ಕ್ರತುಗಳಲ್ಲಿ ನಿಷ್ಠನಾದ ಬ್ರಾಹ್ಮಣನು ಯಾವ ದೇವತೆಯನ್ನು ಕುರಿತು ಯಜ್ಞಮಾಡುತ್ತಾನೆಯೋ ಆ ದೇವತೆಯೂ ಬ್ರಹ್ಮವಿದನಿಗೆ ಸಮಾನನೆನಿಸುವುದಿಲ್ಲ.

(ಬ್ರಹ್ಮಜ್ಞಾನಿಗಳ ವಿಷಯದಲ್ಲಿ ಮನುವು ಹೀಗೆ ಹೇಳಿದ್ದಾನೆ :

**ಬ್ರಹ್ಮವಿದ್ಭ್ಯಃ ಪರಂ ಭೂತಂ ನ ಕಿಂಚಿದಿಹ ವಿದ್ಯತೇ ॥**

ಬ್ರಹ್ಮಜ್ಞಾನಿಗಿಂತಲೂ ಶ್ರೇಷ್ಠವಾದ ಇನ್ನೊಂದು ವಸ್ತುವೇ ಇಲ್ಲ. ಇದೇ ಅರ್ಥಬರುವ ಶ್ಲೋಕವು ಮೋಕ್ಷಧರ್ಮಪರ್ವದಲ್ಲಿಯೂ ಇದೆ.

**ಬ್ರಾಹ್ಮಣಸ್ಯ ನ ಸಾದೃಶ್ಯೇ ವರ್ತತೇ ಸೋಽಪಿ ಕಿಂ ಪುನಃ ।**
**ಇಜ್ಯತೇ ಯೇನ ಮನ್ತ್ರೇಣ ಯಜಮಾನೋ ದ್ವಿಜೋತ್ತಮಃ ॥**

ಈ ಎರಡು ಶ್ಲೋಕಗಳಲ್ಲಿ ವೇದವಿದನಾದ, ಶ್ರೋತ್ರಿಯನಾದ ಬ್ರಾಹ್ಮಣನಿಗೂ–ಬ್ರಹ್ಮಜ್ಞಾನಿಗೂ ತಾರತಮ್ಯವನ್ನು ಹೇಳಿದ್ದಾರೆ. ವೇದವೇ ಧನವಾಗಿ ಉಳ್ಳವನು, ಯಜ್ಞ-ಯಾಗಾದಿಗಳ ಪ್ರಕ್ರಿಯೆಗಳನ್ನು ಸಂಪೂರ್ಣವಾಗಿ ತಿಳಿದವನು, ಯಾವ ದೇವತೆಯನ್ನೇ ಆದರೂ ಮಂತ್ರದ ಮೂಲಕವಾಗಿ ಆಹ್ವಾನಿಸುವ ಸಾಮರ್ಥ್ಯವುಳ್ಳವನು–ಇತರ ಧನ-ಕನಕಾದಿ ಐಶ್ವರ್ಯವನ್ನು ಹೊಂದಿರುವವರಿಗಿಂತಲೂ ಶ್ರೇಷ್ಠನಾದವನೇ ಸರಿ. ಆದರೆ ಅವನು ಬ್ರಹ್ಮಜ್ಞಾನಿಗೆ ಕಿಂಚಿತ್ತಾದರೂ ಸಮಾನನೆನಿಸುವುದಿಲ್ಲ. ವೇದವಿದನು ಆರಾಧಿಸುವ ದೇವತೆಯೇ ಅಥವಾ ದೇವತೆಗಳೇ ಬ್ರಹ್ಮವಿದನಿಗೆ ಸಮಾನರಾಗಲಾರರೆಂದು ಹೇಳುವುದಾದರೆ ವೇದವಿದರು ಬ್ರಹ್ಮಜ್ಞಾನಿಗೆ ಸಮಾನರಾಗುವರೆಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. **ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ** (ಋಗ್ವೇದ ೧-೧೬೪-೩೯) ಅದನ್ನು (ಬ್ರಹ್ಮನನ್ನು) ತಿಳಿಯದವನು ಬರಿಯ ಋಕ್ಕುಗಳನ್ನು ಹೇಳುವುದರಿಂದ ಏನನ್ನು ತಾನೇ ಸಾಧಿಸುವನು? ಎಂದು ಶ್ರುತಿವಾಕ್ಯವೇ ಇದೆ. ಈ ಕಾರಣಗಳಿಂದ ಬ್ರಹ್ಮಜ್ಞಾನಿಯು ದೇವತೆಗಳಿಗಿಂತಲೂ ಅಧಿಕನು.)

**ಯಮಪ್ರಯತಮಾನಂ ತು ಮಾನಯನ್ತಿ ಸ ಮಾನಿತಃ ।**
**ನ ಮಾನ್ಯಮಾನೋ ಮನ್ಯೇತ ನ ಮಾನ್ಯಮಭಿಸಂಜ್ವರೇತ್ ॥೪೧॥**

ಮೌನದಿಂದ ತಟಸ್ಥನಾಗಿರುವ ಬ್ರಹ್ಮಜ್ಞಾನಿಯನ್ನು ಜನರು ಗೌರವಿಸಿದರೆ–ತನಗೆ ಗೌರವವು ಸಲ್ಲುತ್ತಿದೆಯೆಂದು–ಬ್ರಹ್ಮಜ್ಞಾನಿಯು ಹಿಗ್ಗಬಾರದು.

ಒಂದು ವೇಳೆ ಜನರು ಅವಮಾನಮಾಡಿದರೆ ಅಗೌರವಮಾಡಿದರೆಂದು ಕುಗ್ಗಲೂಬಾರದು.

ಲೋಕಃ ಸ್ವಭಾವವೃತ್ತಿರ್ಹಿ ನಿಮೇಷೋನ್ಮೇಷವತ್ಸದಾ ।
ವಿದ್ವಾಂಸೋ ಮಾನಯನ್ತೀಹ ಇತಿ ಮನ್ಯೇತ ಮಾನಿತಃ ॥೪೨॥

ವಿದ್ವಾಂಸರು ಬ್ರಹ್ಮಜ್ಞಾನಿಯನ್ನು ಸಮ್ಮಾನಿಸಿದರೆ–'ಇದು ಲೋಕ ಸ್ವಭಾವ ; ಕಣ್ಣನ್ನು ಮುಚ್ಚುವುದು ಮತ್ತು ಬಿಡುವುದು ಇದ್ದಂತೆ'–ಎಂದು ತಿಳಿಯಬೇಕು.

ಅಧರ್ಮನಿಪುಣಾ ಮೂಢಾ ಲೋಕೇ ಮಾಯಾವಿಶಾರದಾಃ ।
ನ ಮಾನ್ಯಂ ಮಾನಯಿಷ್ಯನ್ತಿ ಮಾನ್ಯಾನಾಮವಮಾನಿನಃ ॥೪೩॥

ಜನರು ತನ್ನನ್ನು ಅಪಮಾನಗೊಳಿಸಿದರೆ–'ಜನರು ಧರ್ಮಜ್ಞಾನವಿಲ್ಲದ ಮೂಢರು ; ಲೋಕವನ್ನು ಅರಿಯದವರು ; ಶಾಸ್ತ್ರವನ್ನೂ ಅರಿಯದವರು ; ಸಮ್ಮಾನ್ಯನನ್ನು ಸಮ್ಮಾನಿಸುವುದಿಲ್ಲ ; ಇದಕ್ಕೆ ಪ್ರತಿಯಾಗಿ ಮಾನ್ಯರನ್ನು ಅವಮಾನಿಸುತ್ತಾರೆ'–ಎಂದು ತಿಳಿಯಬೇಕು.

ನ ವೈ ಮಾನಂ ಚ ಮೌನಂ ಚ ಸಹಿತೌ ವಸತಃ ಸದಾ ।
ಅಯಂ ಮಾನಸ್ಯ ವಿಷಯೋ ಹ್ಯಸೌ ಮೌನಸ್ಯ ತದ್ವಿದುಃ ॥೪೪॥

ಮಾನ ಮತ್ತು ಮೌನಗಳು ಒಟ್ಟಿಗೆ ಒಂದುಕಡೆ ಇರುವುದಿಲ್ಲ. ಈ ಪ್ರಪಂಚವು ಮಾನಕ್ಕೆ ವಿಷಯವಾಗಿರುತ್ತದೆ. ಪರಲೋಕವು ಮೌನಕ್ಕೆ ವಿಷಯವಾಗಿರುತ್ತದೆ. ಆ ಪರಲೋಕವನ್ನು 'ತತ್' ಎಂದು ತಿಳಿಯುತ್ತಾರೆ.

(ಪರಲೋಕವೆಂದರೆ ಬ್ರಹ್ಮವಸ್ತು. ಅದಕ್ಕೆ 'ತತ್' ಎಂದು ಹೆಸರಿದೆ. 'ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ' ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಬ್ರಹ್ಮವು ಮೌನಕ್ಕೆ ವಿಷಯ, ತಾತ್ಪರ್ಯವೇನೆಂದರೆ : ಮಾನದಿಂದ ಸಂಸಾರಪ್ರಾಪ್ತಿ ; ಮೌನದಿಂದ ಬ್ರಹ್ಮಪ್ರಾಪ್ತಿ. ಮಾನವೆಂದರೇನು ?

ಅನ್ನಾಂಗನಾದಿಯೋಗೇಷು ಭಾವೋ ಮಾನ ಇತಿ ಸ್ಮೃತಃ ।
ಬ್ರಹ್ಮಾನನ್ದಸುಖಪ್ರಾಪ್ತಿಹೇತುರ್ಮೌನಮಿತಿ ಸ್ಮೃತಃ ॥

ಹೈರಣ್ಯಗರ್ಭಃ

ಅನ್ನ, ಸ್ತ್ರೀ–ಮುಂತಾದ ಭೋಗವಸ್ತುಗಳ ಅಭಿಲಾಷೆಗೆ ಮಾನವೆಂದೂ, ಬ್ರಹ್ಮಾನಂದವನ್ನು ದೊರಕಿಸಿಕೊಡುವ ಅಭಿಲಾಷೆಗೆ ಮೌನವೆಂದೂ ಹೆಸರು.)

ಶ್ರೀಃ ಸುಖಸ್ಯೇಹ ಸಂವಾಸಃ ಸಾ ಚಾಪಿ ಪರಿಪನ್ಥಿನೀ ।
ಬ್ರಾಹ್ಮೀ ಸುದುರ್ಲಭಾ ಶ್ರೀರ್ಹಿ ಪ್ರಜ್ಞಾಹೀನೇನ ಕ್ಷತ್ರಿಯ ॥೪೫॥

ಧೃತರಾಷ್ಟ್ರ! ಮಾನಕ್ಕೆ ವಿಷಯವಾದ ಪ್ರಪಂಚದಲ್ಲಿ ತೊಳಲಾಡುವವನಿಗೆ ಐಶ್ವರ್ಯವು ದೊರಕಬಹುದು. ಆದರೆ ಅದು ಶ್ರೇಯೋಮಾರ್ಗಕ್ಕೆ ವಿರೋಧಿಯಾಗಿರುತ್ತದೆ. ಅಂತಹ ಐಶ್ವರ್ಯದಿಂದ ಮೂಢನಾದವನಿಗೆ ಬ್ರಹ್ಮಾನಂದವೆಂಬ ಐಶ್ವರ್ಯವು ದೊರಕುವುದಿಲ್ಲ.

ದ್ವಾರಾಣಿ ಸಮ್ಯಕ್ಪ್ರವದನ್ತಿ ಸನ್ತೋ
ಬಹುಪ್ರಕಾರಾಣಿ ದುರಾಧರಾಣಿ ।
ಸತ್ಯಾರ್ಜವೇ ಹ್ರೀರ್ದಮಶೌಚವಿದ್ಯಾಃ
ಷಣ್ಮಾನಮೋಹಪ್ರತಿಬಂಧಕಾನಿ ॥೪೬॥

ಬ್ರಹ್ಮಾನಂದವನ್ನು ಪಡೆಯಲು ಹಲವಾರು ದ್ವಾರಗಳಿವೆ. ಅವು ಅನೇಕರೀತಿಯಲ್ಲಿರುವುದರಿಂದ ಆಚರಿಸಲು ಕಷ್ಟಕರವಾಗಿಯೂ ಇವೆ. ಸತ್ಯ, ಆರ್ಜವ, ಹ್ರೀ, ದಮ, ಶೌಚ, ವಿದ್ಯಾ–ಎಂಬಿವೇ ಆರು ಮುಖ್ಯ ದ್ವಾರಗಳು."

ಸತ್ಯಂ–ಪ್ರಾಣಿಗಳಿಗೆ ಹಿತಕರವೂ, ಯಥಾರ್ಥವೂ ಆದ ಮಾತು ; ಆರ್ಜವಂ–ಕುಟಿಲತೆ ಇಲ್ಲದಿರುವುದು ; ಹ್ರೀಃ–ಅಕೃತ್ಯವನ್ನು ಮಾಡಲು ನಾಚಿಕೆ ; ದಮಃ–ಮನಸ್ಸಿನ ನಿಗ್ರಹ ; ಶೌಚಃ–ಪಾಪವನ್ನು ತೊಳೆದುಕೊಳ್ಳುವುದು ; ವಿದ್ಯಾ–ಬ್ರಹ್ಮವಿದ್ಯೆ.)

ಳ೨ನೆಯ ಅಧ್ಯಾಯವು ಮುಗಿಯಿತು.

## ಮೌನ, ತಪಸ್ಸು, ತ್ಯಾಗ, ಅಪ್ರಮಾದ-ಇವುಗಳ ವಿಷಯವಾಗಿ ಸನತ್ಸುಜಾತರ ಉಪದೇಶ

ಜನಮೇಜಯ! ಧೃತರಾಷ್ಟ್ರನು ಕೇಳುತ್ತಾನೆ :

**ಕಸ್ಯೈಷ ಮೌನಃ ಕತರನ್ನು ಮೌನಂ**
**ಪ್ರಬ್ರೂಹಿ ವಿದ್ವನ್ನಥ ಮೌನಭಾವಮ್ ।**
**ಮೌನೇನ ವಿದ್ವಾನುತ ಯಾತಿ ಮೌನಂ**
**ಕಥಂ ಮುನೇ ಮೌನಮಿಹಾಚರನ್ತಿ ॥೧॥**

('ಮೌನವನ್ನಾಚರಿಸಿದರು', 'ಮೌನವ್ರತವನ್ನು ಕೈಗೊಂಡಿದ್ದಾರೆ'-ಎಂಬ ವಾರ್ತೆಗಳನ್ನು ನಾವು ಹಲವು ಬಾರಿ ಕೇಳಿದ್ದೇವೆ. ಮೌನವ್ರತಧಾರಿಗಳನ್ನೂ ಕಂಡಿದ್ದೇವೆ. ಸಂತಾಪಸೂಚನೆಗಾಗಿ ಮೌನವನ್ನಾಚರಿಸುವುದು ಇಂದಿನ ರೂಢಿಯಾಗಿದೆ. ಮೌನವ್ರತಧಾರಿಗಳು ನಿಯಮಿತಕಾಲದಲ್ಲಿ ಮಾತನಾಡದಿದ್ದರೂ ಸನ್ನೆಯ ಮೂಲಕವಾಗಿ ಮಾತನಾಡುತ್ತಲೇ ಇರುತ್ತಾರೆ. ನಿಜವಾದ ಅರ್ಥವನ್ನು ಯಾರೂ ತಿಳಿದವರಾಗಿಲ್ಲ. ಅಂತಹ ಮೌನದ ವಿಷಯವಾಗಿಯೇ ಧೃತರಾಷ್ಟ್ರನು ಸನತ್ಸುಜಾತರನ್ನು ಪ್ರಶ್ನಿಸುತ್ತಾನೆ.)

"ಮುನಿಗಳೇ! ಮೌನವು ಯಾವ ಪ್ರಯೋಜನಕ್ಕಾಗಿ? ಮೌನವೆಂದರೆ ಯಾವುದು? ಅದರ ಲಕ್ಷಣವೇನು? ವಿದ್ವಾಂಸನು ಮೌನದಿಂದ ಮೌನಸ್ವರೂಪನಾದ ಬ್ರಹ್ಮನನ್ನು ಪಡೆಯುತ್ತಾನೆಯೇ? ಮೌನವನ್ನಾಚರಿಸುವ ವಿಧಾನವಾವುದು?"

ಧೃತರಾಷ್ಟ್ರನು ಇಲ್ಲಿ ಐದು ಪ್ರಶ್ನೆಗಳನ್ನು ಕೇಳಿದ್ದಾನೆ. ಎಲ್ಲ ಪ್ರಶ್ನೆಗಳಿಗೂ ಉತ್ತರ ಬರುವಂತೆ ಸನತ್ಸುಜಾತರು ಸಂಕ್ಷೇಪವಾಗಿ ಉತ್ತರಿಸುತ್ತಾರೆ :

**ಯತೋ ನ ವೇದಾ ಮನಸಾ ಸಹೈನ-**
**ಮನುಪ್ರವಿಶನ್ತಿ ತತೋಽಥ ಮೌನಮ್ ।**

ಯತ್ರೋತ್ಥಿತೋ ವೇದಶಬ್ದಸ್ತಥಾಯಂ
ಸ ತನ್ಮಯತ್ವೇನ ವಿಭಾತಿ ರಾಜನ್ ॥೨॥

('ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।' ಎಂಬ ಶ್ರುತ್ಯರ್ಥವೇ ಈ ಶ್ಲೋಕದ ಮೊದಲನೆಯ ಪಾದವಾಗಿದೆ.) "ಮಹಾರಾಜ! ಮನಸ್ಸಿನಿಂದ ಕೂಡಿದ ವಾಕ್ಕುಗಳು ಅಥವಾ ವೇದಗಳು ಅವನನ್ನು ಸೇರಲಾರದೇ ಹಿಂದಿರುಗುತ್ತವೆ. ಅವನ ಸಮೀಪಕ್ಕೆ ಹೋದರೆ, ಅನಂತಾನಂತ ವೇದಗಳೇ ಮೌನಧರಿಸಬೇಕಾಗುತ್ತದೆ. ವಾಙ್ಮನಸ್ಸುಗಳಿಗೆ ಅತೀತನಾದ ಆತ್ಮನ ಮುಂದೆ ವೇದಗಳು ಮೌನಧರಿಸಿ ನಿಲ್ಲುತ್ತವೆ. ಆತ್ಮನು ವಾಕ್ಕುಗಳಿಗೇ (ವೇದಗಳಿಗೇ) ಮೌನವನ್ನುಂಟುಮಾಡುವವನಾದುದರಿಂದ ಅವನನ್ನು ಮೌನಿಯೆಂದೂ ಕರೆಯುತ್ತಾರೆ. ಮೌನಸ್ವರೂಪನಾದ ಆತ್ಮನಿಂದಲೇ ವೇದಶಬ್ದವಾದ ಓಂಕಾರವು ಪ್ರಾದುರ್ಭವಿಸಿದೆ. ಲೌಕಿಕಶಬ್ದವೂ ಆತ್ಮನಿಂದಲೇ ಹುಟ್ಟಿದೆ. ಅಂತಹ ಆತ್ಮನು ಶಬ್ದಮಯನಾಗಿ ತೋರುತ್ತಾನೆ."

(ವಾಙ್ಮನಸ್ಸುಗಳಿಗೆ ಅತೀತವಾದ ಸ್ಥಾನವನ್ನು ಪಡೆಯುವುದು ಮೌನಕ್ಕೆ ಪ್ರಯೋಜನವೆಂದು ಪ್ರಥಮಪ್ರಶ್ನೆಗೆ ಉತ್ತರ. ವಾಗಾದಿ ಬಾಹ್ಯೇಂದ್ರಿಯಗಳ ನಿಗ್ರಹ ಮತ್ತು ಮನೋನಿಗ್ರಹವೇ ಮೌನವೆಂದು ಎರಡನೆಯ ಪ್ರಶ್ನೆಗೆ ಉತ್ತರ. ಬಾಹ್ಯ ಮತ್ತು ಆಭ್ಯಂತರವಾದ ಪ್ರಪಂಚವು ತೋರದಿರುವುದೇ ಅದರ ಸ್ವರೂಪವೆಂದು ಮೂರನೆಯ ಪ್ರಶ್ನೆಗೆ ಉತ್ತರ. ಮೌನಸ್ವರೂಪವಾದ ಬ್ರಹ್ಮವನ್ನು ಪಡೆಯುತ್ತಾನೆಂಬುದು ನಾಲ್ಕನೆಯ ಪ್ರಶ್ನೆಗೆ ಉತ್ತರ. ಐದನೆಯ ಪ್ರಶ್ನೆಗೆ ಉತ್ತರವೇನೆಂದರೆ : ವೇದಶಬ್ದದಿಂದ ಸಾರತಮವಾದ ಪ್ರಣವವನ್ನು ಗ್ರಹಿಸಬೇಕು. ಅಕಾರ-ಉಕಾರ-ಮಕಾರಗಳು ಸ್ಥೂಲ-ಸೂಕ್ಷ್ಮ-ಕಾರಣ ಪ್ರಪಂಚಗಳ ಸಂಕೇತಗಳು. ಗುರೂಪದೇಶದಿಂದ ರಹಸ್ಯವನ್ನರಿತು ಅಕಾರವನ್ನು ಉಕಾರದಲ್ಲಿಯೂ–ಉಕಾರವನ್ನು ಮಕಾರದಲ್ಲಿಯೂ ವಿಲಯನಮಾಡತಕ್ಕುದು. ಸ್ಥೂಲವು ಸೂಕ್ಷ್ಮದಲ್ಲಿಯೂ–ಸೂಕ್ಷ್ಮವು ಕಾರಣದಲ್ಲಿಯೂ ಲಯವನ್ನು ಹೊಂದುತ್ತದೆ. ಇದೇ ಮೌನವನ್ನಾಚರಿಸುವ ವಿಧಾನ.)

ಧೃತರಾಷ್ಟ್ರನು ಹೇಳುತ್ತಾನೆ :

ಋಚೋ ಯಜೂಂಷ್ಯಧೀತೋ ಯಃ
ಸಾಮವೇದಂ ಚ ಯೋ ದ್ವಿಜಃ ।
ಪಾಪಾನಿ ಕುರ್ವನ್ಪಾಪೇನ
ಲಿಪ್ಯತೇ ಕಿಂ ನ ಲಿಪ್ಯತೇ ॥೩॥



“ಯಾವ ಬ್ರಾಹ್ಮಣನು ಋಗ್ಯಜುಸ್ಸಾಮಗಳನ್ನು ಅಧ್ಯಯನ ಮಾಡುತ್ತಾನೆಯೋ ಆ ಬ್ರಾಹ್ಮಣನೇ ಪಾಪಕರ್ಮಗಳನ್ನು ಮಾಡುತ್ತಿದ್ದರೆ ಆ ಪಾಪದ ಲೇಪವು ಅವನಿಗಿರುವುದೇ ಅಥವಾ ಇಲ್ಲವೇ?”

(ವೇದಾಧ್ಯಯನವು ಸಕಲಪಾಪಗಳನ್ನೂ ತೊಡೆದುಹಾಕುವುದೆಂಬುದೇನೋ ನಿಜ. ಆದರೆ ವೇದಾಧ್ಯಾಯಿಯು ಪಾಪಕರ್ಮಗಳನ್ನು ಮಾಡಿದರೆ ವೇದಾಧ್ಯಯನದ ಪ್ರಭಾವದಿಂದ ಪಾಪಕರ್ಮಗಳ ಫಲರೂಪವಾದ ಪಾಪವು ಅವನಿಗಿರುವುದಿಲ್ಲವೇ? ವೇದಾಧ್ಯಯನಮಾಡಿದವನು ಇಚ್ಛಾನುಸಾರವಾಗಿ

ಪಾಪಕರ್ಮಗಳನ್ನೂ ಮಾಡುತ್ತಾ ಹೋಗಬಹುದೇ?–ಎಂಬುದು ಧೃತರಾಷ್ಟ್ರನ ಪ್ರಶ್ನೆಯಾಗಿದೆ.)

ಇದಕ್ಕೆ ಸನತ್ಸುಜಾತರು ಬಹುಸ್ಪಷ್ಟವಾಗಿ ಉತ್ತರಿಸುತ್ತಾರೆ :

**ನೈನಂ ಸಾಮಾನ್ಯೃಚೋ ವಾಪಿ ನ ಯಜೂಂಷಿ ವಿಚಕ್ಷಣ ।**
**ತ್ರಾಯನ್ತೇ ಕರ್ಮಣಃ ಪಾಪಾನ್ನ ತೇ ಮಿಥ್ಯಾ ಬ್ರವೀಮ್ಯಹಮ್ ॥**

"ಮಹಾರಾಜ! ಸಾಮಗಳಾಗಲೀ, ಋಕ್ಕುಗಳಾಗಲೀ, ಯಜುಸ್ಸುಗಳಾಗಲೀ ವೇದಾಧ್ಯಾಯಿಯನ್ನು ಪಾಪಕರ್ಮದ ಫಲದಿಂದ ರಕ್ಷಿಸಹೋಗುವುದಿಲ್ಲ. ವೇದಾಧ್ಯಯನವನ್ನು ಮಾಡಿದ ಮಾತ್ರಕ್ಕೆ ಅವನು ಮಾಡಿದ ಪಾಪಕರ್ಮಕ್ಕೆ ಫಲವಿಲ್ಲವೆಂದಿಲ್ಲ. ಪಾಪಕರ್ಮದಿಂದ ಅವನು ಪಾಪಭೂಯಿಷ್ಠನೇ ಆಗುತ್ತಾನೆ. ಈ ವಿಷಯದಲ್ಲಿ ನಾನು ಸುಳ್ಳು ಹೇಳುವುದಿಲ್ಲ.

**ನ ಛನ್ದಾಂಸಿ ವೃಜಿನಾತ್ತಾರಯನ್ತಿ**
**ಮಾಯಾವಿನಂ ಮಾಯಯಾ ವರ್ತಮಾನಮ್ ।**
**ನೀಡಂ ಶಕುನ್ತಾ ಇವ ಜಾತಪಕ್ಷಾ–**
**ಶ್ಛನ್ದಾಂಸ್ಯೇನಂ ಪ್ರಜಹತ್ಯನ್ತಕಾಲೇ ॥೫॥**

ಮಾಯಾವಿಯೂ, ಮಿಥ್ಯಾಚಾರಿಯೂ ಆದ ಪಾಪಿಷ್ಠನನ್ನು ವೇದಗಳು ಪಾಪದಿಂದ ರಕ್ಷಿಸುವುದಿಲ್ಲ. ರೆಕ್ಕೆಬಂದ ಹಕ್ಕಿಗಳು ಗೂಡನ್ನು ಬಿಟ್ಟು ಹೊರಬರುವಂತೆ ಮರಣಕಾಲದಲ್ಲಿ ವೇದಗಳು ಪಾಪಿಯನ್ನು ತ್ಯಜಿಸಿಬಿಡುತ್ತವೆ."

ಧೃತರಾಷ್ಟ್ರನು ಕೇಳುತ್ತಾನೆ :

**ನ ಚೇದ್ವೇದಾ ವೇದವಿದಂ ತ್ರಾತುಂ ಶಕ್ತಾ ವಿಚಕ್ಷಣ ।**
**ಅಥ ಕಸ್ಮಾತ್ಪ್ರಲಾಪೋಽಯಂ ಬ್ರಾಹ್ಮಣಾನಾಂ ಸನಾತನಃ ॥೬॥**

"ವಿಚಕ್ಷಣರೇ! ವೇದಗಳು ವೇದವಿದನನ್ನು ಅಥವಾ ತನ್ನನ್ನೇ ಆಶ್ರಯಿಸಿರುವವನನ್ನು ರಕ್ಷಿಸಲು ಅಸಮರ್ಥವಾಗಿರುವುದಾದರೆ–"ವೇದಗಳೇ ಸರ್ವಧರ್ಮಗಳಿಗೂ ಮೂಲಭೂತವಾದುವುಗಳು." "ಧರ್ಮೋ ರಕ್ಷತಿ ರಕ್ಷಿತಃ" "ಋಗ್ಯಜುಃಸಾಮಭಿಃ ಪೂತೋ ಬ್ರಹ್ಮಲೋಕೇ ಮಹೀಯತೇ"–ಇತ್ಯಾದಿ ಬ್ರಾಹ್ಮಣರ ಪ್ರಲಾಪದ ಅವಶ್ಯಕತೆಯಾದರೂ ಏನಿದೆ?

ಈ ಪ್ರವಾದವು ಕೇವಲ ಇಂದಿನದಾಗಿಲ್ಲ. ಬಹಳ ಹಿಂದಿನಿಂದಲೂ ಬ್ರಾಹ್ಮಣರು ಹೀಗೆಯೇ ಹೇಳಿಕೊಂಡು ಬಂದಿರುತ್ತಾರೆ."

ಸನತ್ಸುಜಾತರು ಹೇಳುತ್ತಾರೆ :

ತಸ್ಯೈವ ನಾಮಾದಿವಿಶೇಷರೂಪೈ-
ರಿದಂ ಜಗದ್ಭಾತಿ ಮಹಾನುಭಾವ ।
ನಿರ್ದಿಶ್ಯ ಸಮ್ಯಕ್ಪ್ರವದನ್ತಿ ವೇದಾ-
ಸ್ತದ್ವಿಶ್ವವೈರೂಪ್ಯಮುದಾಹರನ್ತಿ ॥೭॥

(ಇತ್ತ ಪಾಪಮಾಡುತ್ತಾ ಅತ್ತ ವೇದಾಧ್ಯಯನಮಾಡುತ್ತಿದ್ದರೆ ಅಂತಹ ಪಾಪಗಳನ್ನು ವೇದಗಳೂ ತೊಡೆದುಹಾಕಲಾರವು. ಈ ಕೆಲಸವು ವೇದಗಳದ್ದಲ್ಲ.) "ಮಹಾನುಭಾವ! ಧೃತರಾಷ್ಟ್ರ! ಪರಮಾತ್ಮನ ನಾಮಾದಿ ವಿಶೇಷಗಳಿಂದ ಈ ಜಗತ್ತು ಪ್ರಕಾಶಿಸುತ್ತಿದೆ. ವೇದಗಳು ಜಗತ್ತಿನ ಸ್ವರೂಪವನ್ನು ನಿರ್ದೇಶಿಸಿ ಪರಮಾತ್ಮನ ಸತ್ಯಸ್ವರೂಪವನ್ನು ಹೇಳುತ್ತವೆ. ಅಂತೆಯೇ ಮುನಿಗಳೂ ಕೂಡ ಪರಮಾತ್ಮನ ಸ್ವರೂಪವು ಜಗತ್ತಿನ ರೂಪಕ್ಕಿಂತಲೂ ವಿಲಕ್ಷಣವಾದುದೆಂದು ಹೇಳುತ್ತಾರೆ. ಆದುದರಿಂದ ಪರಮಾತ್ಮನ ಸತ್ಯಸ್ವರೂಪವನ್ನು ತೋರಿಸಿಕೊಟ್ಟು ವೇದಗಳು ವೇದವಿದನನ್ನು ರಕ್ಷಿಸಿಯೇ ರಕ್ಷಿಸುತ್ತವೆ. ಆದುದರಿಂದ ಬ್ರಾಹ್ಮಣರ ಸನಾತನವಾದ (ಬಹಳ ಹಿಂದಿನಿಂದಲೂ ಹೇಳಿಕೊಂಡು ಬಂದಿರುವ) ಪ್ರವಾದವು ಅನರ್ಥಕರವಾದುದಲ್ಲ.

ತದರ್ಥಮುಕ್ತಂ ತಪ ಏತದಿಜ್ಯಾ
ತಾಭ್ಯಾಮಸೌ ಪುಣ್ಯಮುಪೈತಿ ವಿದ್ವಾನ್ ।
ಪುಣ್ಯೇನ ಪಾಪಂ ವಿನಿಹತ್ಯ ಪಶ್ಚಾ-
ತ್ಸಂಜಾಯತೇ ಜ್ಞಾನವಿದೀಪಿತಾತ್ಮಾ ॥೮॥

ಅಂತಹ ಬ್ರಹ್ಮನನ್ನು ಪಡೆಯಲು ತಪಸ್ಸು ಮತ್ತು ಯಜ್ಞಗಳು ಸಹಕರಿಸುತ್ತವೆ. (ಯಜ್ಞಗಳ ಪ್ರಕ್ರಿಯೆಗಳನ್ನು ತಿಳಿಯುವ ಸಲುವಾಗಿ ವೇದಾಧ್ಯಯನಮಾಡಬೇಕು.) ಅವುಗಳಿಂದ ವಿದ್ವಾಂಸನು ಪುಣ್ಯವನ್ನು ಸಂಪಾದಿಸುತ್ತಾನೆ. ಪುಣ್ಯದಿಂದ ಪಾಪಗಳನ್ನು ಕಳೆದುಕೊಂಡು ಜ್ಞಾನಪ್ರಕಾಶಿತವಾದ ಆತ್ಮಸ್ವರೂಪನಾಗುತ್ತಾನೆ.

ಜ್ಞಾನೇನ ಚಾತ್ಮಾನಮುಪೈತಿ ವಿದ್ವಾ–
ನಥಾನ್ಯಥಾ ವರ್ಗಫಲಾನುಕಾಂಕ್ಷೀ ।
ಅಸ್ಮಿನ್ಕೃತಂ ತತ್ಪರಿಗೃಹ್ಯ ಸರ್ವ–
ಮಮುತ್ರ ಭುಙ್ಕ್ತ್ವಾ ಪುನರೇತಿ ಮಾರ್ಗಮ್ ॥೯॥

ಜ್ಞಾನದಿಂದಲೇ ಪರಮಾತ್ಮನನ್ನು ಸೇರುತ್ತಾನೆ. ಜ್ಞಾನವಿಲ್ಲದಿದ್ದರೆ ಇಂದ್ರಿಯಸುಖವನ್ನು ಬಯಸಿ ಈ ಲೋಕದಲ್ಲಿ ಮಾಡಿದ ಯಜ್ಞಾದಿಕರ್ಮಗಳಿಂದ ಪರಲೋಕದಲ್ಲಿ ಅದರ ಫಲವನ್ನು ಅನುಭವಿಸಿ ಕರ್ಮಶೇಷದಿಂದ ಮತ್ತೆ ಸಂಸಾರಮಾರ್ಗಕ್ಕೆ ಬಂದು ಸೇರುತ್ತಾನೆ.

(ಎಂಟು ಮತ್ತು ಒಂಬತ್ತನೆಯ ಶ್ಲೋಕಗಳಲ್ಲಿನ ಸಂಗ್ರಹಾರ್ಥವನ್ನು ಹೀಗೆ ನಿರೂಪಿಸಬಹುದಾಗಿದೆ : ದ್ವಿಜನು ವೇದಾಧ್ಯಯನಮಾಡಬೇಕು. ವೇದಾಧ್ಯಯನಮಾಡಿ ವೇದವಿಹಿತವಾದ ಯಜ್ಞ-ಯಾಗಾದಿಗಳನ್ನೂ–ತಪಸ್ಸನ್ನೂ ಮಾಡಬೇಕು. ಯಜ್ಞಮಾಡುವುದೇ ವೇದಾಧ್ಯಯನಕ್ಕೆ ಫಲ. ಹೀಗೆ ವೇದವಿಹಿತವಾದ ಯಜ್ಞಮಾಡುವಿಕೆಯಿಂದ ಪುಣ್ಯಪ್ರಾಪ್ತಿಯಾಗುತ್ತದೆ. ಪಾಪಗಳ ನಿರಸನವಾಗುತ್ತದೆ. ಅಂತಹವನು ಜ್ಞಾನಿಯಾಗಿ ಹುಟ್ಟುತ್ತಾನೆ. ಜ್ಞಾನಯೋಗದಿಂದ ಮಾತ್ರವೇ ಆತ್ಮಸಾಕ್ಷಾತ್ಕಾರವಾಗುವುದು. ಹಾಗಿಲ್ಲದೇ ಇಂದ್ರಿಯಸುಖಗಳನ್ನೇ ಮತ್ತೂ ಅಪೇಕ್ಷಿಸಿ ಕರ್ಮಮಾಡಿದರೆ ಪುನಃ ಪುನಃ ಅವನು ಅನೇಕಜನ್ಮಗಳನ್ನು ಪಡೆಯಬೇಕಾಗುವುದು. ಆದುದರಿಂದ ವೇದವಿಹಿತವಾದ ಯಜ್ಞ-ಯಾಗಾದಿಗಳನ್ನೂ ಈಶ್ವರಾರ್ಪಣ ಬುದ್ಧಿಯಿಂದಲೇ ಮಾಡಬೇಕು. ಕಾಮ್ಯಫಲಗಳನ್ನು ಅಪೇಕ್ಷಿಸಿ ಮಾಡಬಾರದು.)

ಅಸ್ಮಿಲ್ಲೋಕೇ ತಪಸ್ತಪ್ತಂ ಫಲಮನ್ಯತ್ರ ಭುಜ್ಯತೇ ।
ಬ್ರಾಹ್ಮಣಾನಾಮಿಮೇ ಲೋಕಾ ಋದ್ಧೇ ತಪಸಿ ತಿಷ್ಠತಾಮ್ ॥೧೦॥

ಈ ಲೋಕದಲ್ಲಿ ಆಚರಿಸಿದ ತಪಸ್ಸಿನ ಫಲವನ್ನು ಪರಲೋಕದಲ್ಲಿ ಅನುಭವಿಸಬೇಕೆಂಬುದು ಎಲ್ಲರಿಗೂ ಸಮಾನವೇ. ನಿಷ್ಕಾಮಭಾವದಿಂದ ಗುರುತರವಾದ ತಪಸ್ಸುಮಾಡುವ ಬ್ರಾಹ್ಮಣರಿಗೆ ಈ ಲೋಕಗಳೇ ತತ್ತ್ವಜ್ಞಾನರೂಪವಾದ ಫಲಗಳನ್ನು ಕೊಡುತ್ತವೆ.” (ಎಲ್ಲ ಆನಂದಗಳಿಗೂ ಮಿಗಿಲಾದ ಬ್ರಹ್ಮಾನಂದವನ್ನು ಪಡೆಯಲು ಜ್ಞಾನಿಯಾದವನೊಬ್ಬನಿಗೆ

ಮಾತ್ರವೇ ಸಾಧ್ಯ. ಆ ಬ್ರಹ್ಮಾನಂದವನ್ನು ಪಡೆಯಲು ಜ್ಞಾನಿಯು ಪರಲೋಕಕ್ಕೆ ಹೋಗಬೇಕಾಗಿಲ್ಲ. ಈ ಲೋಕದಲ್ಲಿಯೇ–ಈ ದೇಹದಲ್ಲಿಯೇ ಜ್ಞಾನಿಯಾದವನು ಸಮಾಧಿಯ ಮೂಲಕವಾಗಿ ಬ್ರಹ್ಮಾನಂದವನ್ನು ಪಡೆದುಕೊಳ್ಳಬಲ್ಲನು.

'ಯದೇವ ವಿದ್ಯಯಾ ಕರೋತಿ ಶ್ರದ್ಧಯಾ ಉಪನಿಷದಾ ತದೇವ ವೀರ್ಯವತ್ತರಂ ಭವತಿ'–ಎಂದು ಜ್ಞಾನಪೂರ್ವಕವಾದ ಕರ್ಮಕ್ಕೆ ಅತಿಶಯವಾದ ಫಲವುಂಟು.)

ಸನತ್ಸುಜಾತರ ಅಭಿಪ್ರಾಯದಂತೆ ಒಂದೇ ತಪಸ್ಸು ಎರಡು ರೀತಿಯ ಫಲಗಳನ್ನೂ ಕೊಡುತ್ತದೆ. ಇದು ಹೇಗೆ ಸಾಧ್ಯವಾಗುವುದೆಂದು ಧೃತರಾಷ್ಟ್ರನು ಶಂಕಿಸಿ ಪ್ರಶ್ನಿಸುತ್ತಾನೆ :

**ಕಥಂ ಸಮೃದ್ಧಮತ್ಯರ್ಥಂ ತಪೋ ಭವತಿ ಕೇವಲಮ್ ।**
**ಸನತ್ಸುಜಾತ ತದ್ಬ್ರೂಹಿ ಕಥಂ ವಿದ್ಯಾಮಹಂ ಪ್ರಭೋ ॥೧೧॥**

"ಕೇವಲ ತಪಸ್ಸೇ ಅತಿಶಯಿತಫಲವನ್ನು ಹೇಗೆ ಕೊಡುತ್ತದೆ? ಸನತ್ಸುಜಾತರೇ! ಅದನ್ನು ಹೇಳಿರಿ. ನಾನು ತಿಳಿದುಕೊಳ್ಳಬೇಕಾಗಿದೆ."

ಸನತ್ಸುಜಾತರು ಹೇಳುತ್ತಾರೆ :

**ನಿಷ್ಕಲ್ಮಷಂ ತಪಸ್ತ್ವೇತತ್ಕೇವಲಂ ಪರಿಚಕ್ಷತೇ ।**
**ಏತತ್ಸಮೃದ್ಧಮತ್ಯರ್ಥಂ ತಪೋ ಭವತಿ ನಾನ್ಯಥಾ ॥೧೨॥**

"ನಿಷ್ಕಲ್ಮಷವಾದ ತಪಸ್ಸು 'ಕೇವಲತಪಸ್ಸು' ಎನಿಸಿಕೊಳ್ಳುತ್ತದೆ. 'ಕೇವಲ ತಪಸ್ಸು' ಮಾತ್ರವೇ ಅತಿಶಯವಾದ ಫಲವನ್ನು ಕೊಡುತ್ತದೆ. ಬೇರೆಯದಲ್ಲ."

(ಸರ್ವಪ್ರಪಂಚಕ್ಕೂ ನಿಮಿತ್ತಭೂತವಾದುದು ಕೇವಲತತ್ತ್ವವೆಂದು ಉಶನಸರು ಹೇಳಿದ್ದಾರೆ.

**ಗುಣಸಾಮ್ಯೇ ಸ್ಥಿತಂ ತತ್ತ್ವಂ ಕೇವಲಂ ಪರಿಚಕ್ಷತೇ ॥**

ತ್ರಿಗುಣಗಳೂ ಸಮಸ್ಥಿತಿಯಲ್ಲಿರುವ ಮೂಲತತ್ತ್ವವು ಕೇವಲವೆನಿಸಿಕೊಳ್ಳುತ್ತದೆ.)

ಸನತ್ಸುಜಾತರು ಮುಂದುವರಿದು ಹೇಳುತ್ತಾರೆ :

**ತಪೋಮೂಲಮಿದಂ ಸರ್ವಂ ಯನ್ಮಾಂ ಪೃಚ್ಛಸಿ ಕ್ಷತ್ರಿಯ ।**
**ತಪಸಾ ವೇದವಿದ್ವಾಂಸಃ ಪರಂ ತ್ವಮೃತಮಾಪ್ನುಯುಃ ॥೧೩॥**

"ಕ್ಷತ್ರಿಯೋತ್ತಮ! ಯಾವ ತಪಸ್ಸಿನ ವಿಷಯವಾಗಿ ನೀನು ನನ್ನನ್ನು ಪ್ರಶ್ನಿಸುತ್ತಿರುವೆಯೋ–ಆ ತಪಸ್ಸೇ ಸಕಲಭೋಗ್ಯವಸ್ತುಗಳಿಗೂ ಕಾರಣಭೂತವಾದುದು. ಅದೇ ತಪಸ್ಸಿನಿಂದಲೇ ವೇದವಿದ್ವಾಂಸರು ಶ್ರೇಷ್ಠವಾದ ಅಮೃತತತ್ವವನ್ನೂ ಅಥವಾ ಮುಕ್ತಿಯನ್ನೂ ಪಡೆದರು." (ಅರ್ಥಾತ್ ಐಹಿಕಸುಖಕ್ಕೂ ತಪಸ್ಸೇ ಕಾರಣ. ಆಮುಷ್ಮಿಕಫಲಕ್ಕೂ ತಪಸ್ಸೇ ಕಾರಣ. 'ತಪಸ್ಯೈವ ಸರ್ವಂ ವಿನ್ದತೇ ತಸ್ಮಾತ್ತಪಸಿ ರಮನ್ತೇ ।' ಉಪನಿಷತ್.)

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

**ಕಲ್ಮಷಂ ತಪಸೋ ಬ್ರೂಹಿ ಶ್ರುತಂ ನಿಷ್ಕಲ್ಮಷಂ ತಪಃ ।**
**ಸನತ್ಸುಜಾತ ಯೇನೇದಂ ವಿದ್ಯಾಂ ಗುಹ್ಯಂ ಸನಾತನಮ್ ॥೧೪॥**

"ಸನತ್ಸುಜಾತರೇ! ನಿಷ್ಕಲ್ಮಷತಪಸ್ಸು ಅಥವಾ ಕೇವಲತಪಸ್ಸು ಎಂದರೆ ಯಾವುದೆಂಬುದನ್ನು ನಾನು ತಮ್ಮಿಂದ ಕೇಳಿ ತಿಳಿದೆನು. ಈಗ ತಾವು ತಪಸ್ಸಿನ ಕಲ್ಮಷದ ವಿಷಯವಾಗಿ ಹೇಳಿರಿ. ತಾವು ಈ ಎರಡರ ವ್ಯತ್ಯಾಸವನ್ನೂ ನಿರೂಪಣೆಮಾಡಿ ಹೇಳುವುದರಿಂದ ಸನಾತನವಾದ ಮತ್ತು ರಹಸ್ಯವಾದ ಬ್ರಹ್ಮವಿದ್ಯೆಯನ್ನು ತಿಳಿಸಿದಂತಾಗುತ್ತದೆ."

ಸನತ್ಸುಜಾತರು ಹೇಳುತ್ತಾರೆ :

**ಕ್ರೋಧಾದಯೋ ದ್ವಾದಶ ಯಸ್ಯ ದೋಷಾ-**
**ಸ್ತಥಾ ನೃಶಂಸಾನಿ ದಶತ್ರಿ ರಾಜನ್ ।**
**ಜ್ಞಾನಾದಯೋ ದ್ವಾದಶೈತೇ ಪಿತೃಣಾಂ**
**ಶಾಸ್ತ್ರೇ ಗುಣಾ ಯೇ ವಿದಿತಾ ದ್ವಿಜಾನಾಮ್ ॥೧೫॥**

"ಮಹಾರಾಜ! ಕ್ರೋಧವೇ ಮೊದಲಾದ ಹನ್ನೆರಡು ದೋಷಗಳೂ, ಹದಿಮೂರು ನೃಶಂಸಗಳೂ ತಪಸ್ಸಿನ ಕಲ್ಮಷಗಳು. ಇವುಗಳನ್ನೂ ಮತ್ತು ಶಾಸ್ತ್ರದಲ್ಲಿನ ಜ್ಞಾನವೇ ಮುಂತಾದ ಯಾವ ಹನ್ನೆರಡು ಗುಣಗಳು ಬ್ರಾಹ್ಮಣ

ರಿಗೂ ಮತ್ತು ಪಿತೃದೇವತೆಗಳಿಗೂ ತಿಳಿದಿದ್ದಿತೋ–ಆ ಹನ್ನೆರಡು ಗುಣಗಳನ್ನೂ ಹೇಳುತ್ತೇನೆ. ಅವಹಿತನಾಗಿ ಕೇಳು.

ಕ್ರೋಧಃ ಕಾಮೋ ಲೋಭಮೋಹೌ ವಿಧಿತ್ಸಾ–
ಕೃಪಾಸೂಯೇ ಮಾನಶೋಕೌ ಸ್ಪೃಹಾ ಚ ।
ಈರ್ಷ್ಯಾ ಜುಗುಪ್ಸಾ ಚ ಮಹಾಗುಣೇನ
ಸದಾ ವರ್ಜ್ಯಾ ದ್ವಾದಶೈತೇ ನರೇಣ ॥೧೬॥

ಕ್ರೋಧ, ಕಾಮ, ಲೋಭ, ಮೋಹ, ವಿಧಿತ್ಸಾ, ಅಕೃಪೆ, ಅಸೂಯೆ, ಮಾನ, ಶೋಕ, ಸ್ಪೃಹೆ, ಈರ್ಷ್ಯೆ, ಜುಗುಪ್ಸೆ–ಈ ಹನ್ನೆರಡು ದೋಷಗಳನ್ನೂ ಗುಣಶಾಲಿಯಾದ ಮನುಷ್ಯನು ವರ್ಜಿಸಬೇಕು.

ಕ್ರೋಧಃ : ನಮ್ಮ ಇಚ್ಛೆಗೆ ಅಡ್ಡಿಯಾದಾಗ ಮನಸ್ಸಿನಲ್ಲಾಗುವ ಕ್ಷೋಭೆ ; ಸಿಟ್ಟು.

ಕಾಮಃ : (ಸ್ತ್ರೀ ಮುಂತಾದ) ಭೋಗಸಾಮಗ್ರಿಗಳ ಅಭಿಲಾಷೆ.

ಲೋಭಃ : ಪರಧನೇಚ್ಛೆ, ಅತ್ಯಾಶೆ, ದುರಾಶೆ, ಜಿಪುಣತನ.

ಮೋಹಃ : ಮೈಮರೆಯುವಿಕೆ.

ವಿಧಿತ್ಸಾ : ಪ್ರಾಪಂಚಿಕವ್ಯವಹಾರಗಳಲ್ಲಿ ಆಸಕ್ತಿ.

ಅಕೃಪಾ : ನಿಷ್ಠುರತೆ.

ಮಾನಃ : ಅಭಿಮಾನ.

ಅಸೂಯಾ: ಇತರರ ಗುಣಗಳಲ್ಲಿ ದೋಷವನ್ನು ಹುಡುಕುವುದು.

ಶೋಕಃ : ಇಷ್ಟವಸ್ತುವಿನ ವಿಯೋಗದಿಂದ ಆಗುವ ಮನಸ್ಸಿನ ವಿಕ್ಷೇಪ.

ಸ್ಪೃಹಾ : ಆಶೆ.

ಈರ್ಷ್ಯಾ : ಇತರರ ಅಭಿವೃದ್ಧಿಯನ್ನು ಸಹಿಸದಿರುವಿಕೆ, ಹೊಟ್ಟೆ ಕಿಚ್ಚು.

ಜುಗುಪ್ಸಾ : (ಪರ) ನಿಂದೆ, ದೂಷಣೆ.

ಏಕೈಕಃ ಪರ್ಯುಪಾಸ್ತೇ ಹ ಮನುಷ್ಯಾನ್ಮನುಜರ್ಷಭ ।
ಲಿಪ್ಸಮಾನೋಽನ್ತರಂ ತೇಷಾಂ ಮೃಗಾಣಾಮಿವ ಲುಬ್ಧಕಃ ॥೧೭॥

ಧೃತರಾಷ್ಟ್ರ! ಕ್ರೋಧಾದಿ ಈ ಹನ್ನೆರಡು ದೋಷಗಳಲ್ಲಿ ಒಂದೊಂದು ದೋಷವೂ–ಬೇಟೆಗಾರನು ಸಮಯವನ್ನು ಕಾಯ್ದು, ಎಚ್ಚರತಪ್ಪಿನಿಂತಿರುವ ಪ್ರಾಣಿಗಳನ್ನು ಬೇಟೆಯಾಡಿ ಕೊಲ್ಲುವಂತೆ–ಅಜಾಗರೂಕತೆಯಿಂದಿರುವ ಮನುಷ್ಯನನ್ನು ಆಕ್ರಮಿಸಿ ಅವನ ವಿನಾಶಕ್ಕೇ ಕಾರಣವಾಗುತ್ತದೆ.

ವಿಕತ್ಥನಃ ಸ್ಪೃಹಯಾಲುರ್ಮನಸ್ವೀ
ಬಿಭ್ರತ್ಕೋಪಂ ಚಪಲೋಽರಕ್ಷಣಶ್ಚ ।
ಏತಾನ್ಪಾಪಾಃ ಷಣ್ನರಾಃ ಪಾಪಧರ್ಮಾ–
ನ್ಪ್ರಕುರ್ವತೇ ನೋ ತ್ರಸನ್ತಃ ಸುದುರ್ಗೇ ॥೧೮॥

ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುವುದು, ದುರಾಸೆಪಡುವುದು, ಅಹಂಕಾರಮದದಿಂದ ಕೊಬ್ಬಿದವನಾಗಿ ಇತರರನ್ನು ಅವಮಾನಗೊಳಿಸಲು ಯತ್ನಿಸುವುದು, ಕಾರಣವಿಲ್ಲದೆಯೇ ಕೋಪಗೊಳ್ಳುವುದು, ಅಸ್ಥಿರವಾದ ಚಿತ್ತದಿಂದ ಕೂಡಿರುವುದು, ರಕ್ಷಿಸುವ ಶಕ್ತಿಯಿದ್ದರೂ ರಕ್ಷಿಸಬೇಕಾದವರನ್ನು ರಕ್ಷಿಸದೇ ಇರುವುದು–ಈ ಆರು ಪಾಪಧರ್ಮಗಳನ್ನು ಪಾಪಿಷ್ಠರಾದವರು ಆಚರಿಸುತ್ತಿರುತ್ತಾರೆ. ತಮ್ಮ ಪಾಪಕರ್ಮಗಳಿಂದ ಅವರು ಕಷ್ಟಕ್ಕೀಡಾಗಿದ್ದರೂ ಸ್ವಲ್ಪವೂ ಭೀತರಾಗದೇ ಆರು ವಿಧವಾದ ಇಂತಹ ಪಾಪಕರ್ಮಗಳನ್ನು ಮಾಡುತ್ತಲೇ ಇರುತ್ತಾರೆ.

ಸಮ್ಭೋಗಸಂವಿದ್ವಿಷಮೋಽತಿಮಾನೀ
ದತ್ತಾನುತಾಪೀ ಕೃಪಣೋಽಬಲೀಯಾನ್ ।
ವರ್ಗಪ್ರಶಂಸೀ ವನಿತಾಸು ದ್ವೇಷ್ಟಾ
ಏತೇ ಪರೇ ಸಪ್ತ ನೃಶಂಸವರ್ಗಾಃ ॥೧೯॥

ಸ್ತ್ರೀಸಹವಾಸವೇ ಮೊದಲಾದ ವಿಷಯಸುಖಗಳೇ ಪರಮಾರ್ಥವೆಂದು ತಿಳಿದುಕೊಂಡು ಅವ್ಯವಸ್ಥಿತಚಿತ್ತನಾಗಿರುವವನು, ಅತ್ಯಂತದರ್ಪಿಷ್ಠನು, (ಸಂಭೋಗಸಂವಿದ್ವಿಷಮೇಧಮಾನಃ–ಎಂಬ ಪಾಠಾಂತರದಂತೆ ವಿಷಯ ಸುಖದಲ್ಲಿಯೇ ಆಸಕ್ತನು.; ವಿಷದಂತೆ ಪರರಿಗೆ ಉಪದ್ರವವನ್ನು ಕೊಟ್ಟು ವೃದ್ಧಿಹೊಂದತಕ್ಕವನು), ದಾನಕೊಟ್ಟನಂತರ ತನ್ನ ಐಶ್ವರ್ಯವು ನಷ್ಟವಾಗಿ ಹೋಯಿತೆಂದು ಅನುತಾಪಪಡುವವನು, ಪ್ರಾಣೋತ್ಕ್ರಮಣಸಮಯ

ದಲ್ಲಿಯೂ ತಾನು ಗಳಿಸಿಟ್ಟ ಹಣದ ವ್ಯಯವನ್ನು ಸಹಿಸಿಕೊಳ್ಳದವನು, ಜ್ಞಾನಬಲಹೀನನು (ಬಲೀಯಾನ್ ಎಂದು ಪದವಿಭಾಗಮಾಡುವ ಪಾಠಾಂತರದಂತೆ : ಬಲೀಯಾನ್ = ಅತಿಶಯೇನ ಬಲವಾನ್ ಹಿಂದಿನ ರಾಜರು ಪ್ರಜೆಗಳಿಂದ ತೆಗೆದುಕೊಳ್ಳುತ್ತಿದ್ದ ರಾಜಾದಾಯಕ್ಕಿಂತಲೂ ಹೆಚ್ಚಾದ ರಾಜಾದಾಯವನ್ನು ಪ್ರಜೆಗಳಿಂದ ಬಲಾತ್ಕಾರಪೂರ್ವಕವಾಗಿ ತೆಗೆದುಕೊಳ್ಳುವವನು), ಇಂದ್ರಿಯಗಳ ಸುಖವನ್ನೇ ಪರಮಸುಖವೆಂದು ಭಾವಿಸಿ ಅದನ್ನೇ ಪ್ರಶಂಸಿಸತಕ್ಕವನು ಅಥವಾ ಇತರರ ಕಷ್ಟಗಳನ್ನೇ ಬಾರಿ-ಬಾರಿಗೂ ಹೇಳುತ್ತಾ ಸಂತೋಷಪಡುವವನು, ಸ್ತ್ರೀಯರನ್ನು ದ್ವೇಷಿಸುವವನು–ಈ ಏಳು ಬಗೆಯ ಕ್ರೂರಿಗಳೂ ಮತ್ತು ಈ ಹಿಂದೆ ಹೇಳಿದ ಆರು ಬಗೆಯ ಕ್ರೂರಿಗಳೂ ಸೇರಿ ಒಟ್ಟು ಹದಿಮೂರು ಬಗೆಯ ಕ್ರೂರಿಗಳಿದ್ದಾರೆ.

ಧರ್ಮಶ್ಚ ಸತ್ಯಂ ಚ ದಮಸ್ತಪಶ್ಚ
ಅಮಾತ್ಸರ್ಯಂ ಹ್ರೀಸ್ತಿತಿಕ್ಷಾನಸೂಯಾ ।
ಯಜ್ಞಶ್ಚ ದಾನಂ ಚ ಧೃತಿಃ ಶ್ರುತಂ ಚ
ವ್ರತಾನಿ ವೈ ದ್ವಾದಶ ಬ್ರಾಹ್ಮಣಸ್ಯ ॥೨೦॥

ಧರ್ಮ, ಸತ್ಯ, ದಮ (ಇಂದ್ರಿಯನಿಗ್ರಹ), ತಪಸ್ಸು, ಅಸೂಯೆಯಿಲ್ಲದಿರುವಿಕೆ, ಕೆಟ್ಟಕೆಲಸಮಾಡುವ ವಿಷಯದಲ್ಲಿ ಲಜ್ಜೆ, ಸಹನೆ, ಇತರರ ದೋಷಗಳನ್ನು ಪ್ರಕಾಶಪಡಿಸದಿರುವಿಕೆ, ಯಜ್ಞ, ದಾನ, ಧೈರ್ಯ, ಶಮ (ಅಂತರಿಂದ್ರಿಯನಿಗ್ರಹ)–ಈ ಹನ್ನೆರಡು ಬ್ರಾಹ್ಮಣನಿಗೆ ಪರಮಪುರುಷಾರ್ಥವನ್ನು ಕೊಡುವ ಮಹಾವ್ರತಗಳು.

ಧರ್ಮಃ = ವರ್ಣಾಶ್ರಮೋಕ್ತವಾದ ಧರ್ಮಾಚರಣೆ. (ಸಂಧ್ಯೋಪಾಸನಾದಿಗಳು.)

ಸತ್ಯಂ = ಇತರರಿಗೆ ಹಿಂಸೆಯಾಗದ ರೀತಿಯಲ್ಲಿ ಯಥಾರ್ಥವಾದ ಮಾತುಗಳನ್ನಾಡುವುದು.

ದಮಃ = ನಾಲಿಗೆ ಕಣ್ಣು–ಮೊದಲಾದ ಬಹಿರಿಂದ್ರಿಯಗಳ ಚಾಪಲ್ಯವನ್ನು ವರ್ಜಿಸುವುದು.

ತಪಃ = ಕೃಚ್ಛ್ರ-ಚಾಂದ್ರಾಯಣಾದಿಗಳು.

ಅಮಾತ್ಸರ್ಯಂ = ಇತರರ ಗುಣಗಳ ವಿಷಯದಲ್ಲಿ ಸಹನೆಯಿಲ್ಲದಿರುವುದು ಮಾತ್ಸರ್ಯ ; ಅದಿಲ್ಲದಿರುವುದು ಅಮಾತ್ಸರ್ಯ ಅಥವಾ ಸರ್ವಪ್ರಾಣಿಗಳ ವಿಷಯದಲ್ಲಿಯೂ ಸಹನೆ.

ಹ್ರೀಃ = ಅಕೃತ್ಯದ ವಿಷಯದಲ್ಲಿ ನಾಚಿಕೆಪಡುವುದು.

ತಿತಿಕ್ಷಾ = ಕೋಪಗೊಳ್ಳಲು ಕಾರಣವಿದ್ದರೂ ಕೋಪಗೊಳ್ಳದಿರುವುದು.

ಅನಸೂಯಾ = ಇತರರ ಗುಣದಲ್ಲಿ ದೋಷವನ್ನೆಣಿಸುವುದು ಅಸೂಯೆ ; ಅದಿಲ್ಲದಿರುವುದು ಅಥವಾ ಇತರರ ಗುಣಗಳನ್ನು ಪ್ರಶಂಸಿಸುವುದು ಅನಸೂಯೆ.

ಯಜ್ಞಃ = ಜ್ಯೋತಿಷ್ಟೋಮಾದಿ ಯಜ್ಞಗಳು.

ದಾನಂ = ಕೊಡುಗೆ.

ಧೃತಿಃ = ಧೈರ್ಯ ; ಆಪತ್ಕಾಲದಲ್ಲಿಯೂ ನಿತ್ಯ-ನೈಮಿತ್ತಿಕ ಕರ್ಮಾನುಷ್ಠಾನಗಳನ್ನು ಬಿಡದಿರುವುದು.

ಶ್ರುತಂ = ಅರ್ಥಸಹಿತವಾಗಿ ವೇದಾಧ್ಯಯನಮಾಡುವುದು.

**ಯಸ್ತ್ವೇತೇಭ್ಯಃ ಪ್ರಭವೇದ್ದ್ವಾದಶಭ್ಯಃ**
**ಸರ್ವಾಮಪೀಮಾಂ ಪೃಥಿವೀಂ ಸ ಶಿಷ್ಯಾತ್ ।**
**ತ್ರಿಭಿರ್ದ್ವಾಭ್ಯಾಮೇಕತೋ ವಾರ್ಥಿತೋ ಯ–**
**ಸ್ತಸ್ಯ ಸ್ವಮಸ್ತೀತಿ ಸ ವೇದಿತವ್ಯಃ ॥೨೧॥**

ಈ ಹನ್ನೆರಡು ಗುಣಗಳಿಂದಲೂ ಯಾವನು ಸಂಪನ್ನನಾಗಿರುವನೋ ಅವನು ಈ ಭೂಮಂಡಲವನ್ನೇ ವಶಪಡಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಈ ಹನ್ನೆರಡು ಗುಣಗಳಲ್ಲಿ ಮೂರು, ಎರಡು ಅಥವಾ ಒಂದೇ ಗುಣವಿದ್ದರೂ ಸಾಕು. ಒಂದೇ ಗುಣದಿಂದಲೇ ಉಳಿದ ಹನ್ನೆರಡನ್ನೂ ಸಾಧಿಸಿಕೊಂಡು ದೈವೀಸಂಪತ್ತನ್ನು ಅಥವಾ ಆತ್ಮಸಂಪತ್ತನ್ನು ಪಡೆಯುವನೆಂದು ತಿಳಿದುಕೊಳ್ಳಬೇಕು.

**ದಮಸ್ತ್ಯಾಗೋಽಪ್ರಮಾದಶ್ಚ ಏತೇಷ್ವಮೃತಮಾಹಿತಮ್ ।**
**ತಾನಿ ಸತ್ಯಮುಖಾನ್ಯಾಹುರ್ಬ್ರಾಹ್ಮಣಾ ಯೇ ಮನೀಷಿಣಃ ॥೨೨॥**

ದಮ, ತ್ಯಾಗ ಮತ್ತು ಅಪ್ರಮಾದ–ಈ ಮೂರು ಗುಣಗಳಲ್ಲಿ ಅಮೃತತ್ವವಿರುವುದೆಂದೂ, ಸತ್ಯಸ್ವರೂಪನಾದ ಪರಮಾತ್ಮಪ್ರಾಪ್ತಿಗೆ ಈ ಮೂರು ಗುಣಗಳೇ ಮುಖ್ಯವಾಗಿರುವುದೆಂದೂ ಮನನಶೀಲರಾದ (ಬುದ್ಧಿವಂತರಾದ) ಬ್ರಾಹ್ಮಣರು ಹೇಳುತ್ತಾರೆ. (ದಮಃ = ಜಿತೇಂದ್ರಿಯತೆ, ತ್ಯಾಗಃ = ಮಾಡಿದ ಕರ್ಮವನ್ನೂ ಮತ್ತು ಅದರ ಫಲವನ್ನೂ ಭಗವಂತನಲ್ಲಿ ಸಮರ್ಪಿಸುವುದು. ಅಪ್ರಮಾದಃ = ಜಾಗರೂಕತೆ.)

**ದಮೋಽಷ್ಟಾದಶಗುಣಃ ಪ್ರತಿಕೂಲಂ ಕೃತಾಕೃತೇ ।**
**ಅನೃತಂ ಚಾಭ್ಯಸೂಯಾ ಚ ಕಾಮಾರ್ಥೌ ಚ ತಥಾ ಸ್ಪೃಹಾ ॥೨೩॥**

**ಕ್ರೋಧಃ ಶೋಕಸ್ತಥಾ ತೃಷ್ಣಾ ಲೋಭಃ ಪೈಶುನ್ಯಮೇವ ಚ ।**
**ಮತ್ಸರಶ್ಚ ವಿಹಿಂಸಾ ಚ ಪರಿತಾಪಸ್ತಥಾರತಿಃ ॥೨೪॥**

**ಅಪಸ್ಮಾರಶ್ಚಾತಿವಾದಸ್ತಥಾ ಸಮ್ಭಾವನಾತ್ಮನಿ ।**
**ಏತೈರ್ವಿಮುಕ್ತೋ ದೋಷೈರ್ಯಃ ಸ ದಾನ್ತಃ ಸದ್ಭಿರುಚ್ಯತೇ ॥೨೫॥**

ದಮಕ್ಕೆ ಹದಿನೆಂಟು ಗುಣಗಳಿವೆ. ಮುಂದೆ ನಿರೂಪಿಸಿರುವ ಹದಿನೆಂಟು ದೋಷಗಳ ಪರಿತ್ಯಾಗವೇ ದಮದ ಗುಣಗಳು. ಮಾಡಬೇಕಾದ ಕಾರ್ಯವನ್ನು ಮಾಡದಿರುವುದು, ಮಾಡಬಾರದ ಕಾರ್ಯವನ್ನು ಮಾಡುವುದು, ಅಸತ್ಯಭಾಷಣ, ಗುಣದಲ್ಲಿ ದೋಷವನ್ನೆಣಿಸುವುದು, ಕಾಮುಕತೆ, ಸರ್ವದಾ ಧನಸಂಗ್ರಹಣೆಯ ಚಿಂತೆಯಲ್ಲಿಯೇ ಇದ್ದುಬಿಡುವುದು, ಸರ್ವದಾ ಭೋಗಾಸಕ್ತಿ, ವೃಥಾ ಕೋಪಗೊಳ್ಳುವುದು, ಶೋಕಮಗ್ನನಾಗಿರುವುದು, ದುರಾಸೆ, ಲೋಭ, ಚಾಡಿ ಹೇಳುವುದು, ಇತರರ ಐಶ್ವರ್ಯವನ್ನು ಕಂಡರೆ ಸಹಿಸದಿರುವುದು, ಕಾರಣವಿಲ್ಲದೇ ಮತ್ತೊಬ್ಬರನ್ನು ಹಿಂಸಿಸುವುದು, ತನ್ನ ಕಷ್ಟ-ದುಃಖಗಳಿಗಾಗಿ ಸಂಕಟ ಪಡುವುದು, ವೇದ-ಶಾಸ್ತ್ರಗಳಲ್ಲಿ ಶ್ರದ್ಧೆಯಿಲ್ಲದಿರುವುದು. ಮಾಡಬೇಕಾದುದನ್ನು ಮರೆತುಬಿಡುವುದು, ಹೆಚ್ಚು ಮಾತನಾಡುವುದು, ತಾನೇ ದೊಡ್ಡವನೆಂದೂ ಸರ್ವಜ್ಞನೆಂದೂ ಭಾವಿಸಿಕೊಳ್ಳುವುದು–ಈ ಹದಿನೆಂಟು ದೋಷಗಳಿಂದ ವಿಮುಕ್ತನಾದವನನ್ನು ದಾಂತನೆಂದು ಸತ್ಪುರುಷರು ಹೇಳುತ್ತಾರೆ.

(ಇದರ ಪಾಠಾಂತರವು ಈ ರೀತಿಯಾಗಿರುವುದು :

**ದಮೋಽಷ್ಟಾದಶದೋಷಃ ಸ್ಯಾತ್ಪ್ರತಿಕೂಲಂ ಕೃತೇ ಭವೇತ್ ।**
**ಅನೃತಂ ಪೈಶುನಂ ತೃಷ್ಣಾ ಪ್ರಾತಿಕೂಲ್ಯಂ ತಮೋ ರತಿಃ ॥೨೩॥**

**ಲೋಕದ್ವೇಷೋಽಭಿಮಾನಶ್ಚ ವಿವಾದಂ ಪ್ರಾಣಿಪೀಡನಮ್ ।**
**ಪರಿವಾದೋಽತಿವಾದಶ್ಚ ಪರಿತಾಪೋಽಕ್ಷಮಾ ಧೃತಿಃ ॥೨೪॥**

**ಅಸಿದ್ಧಿಃ ಪಾಪಕೃತ್ಯಂ ಚ ಹಿಂಸಾ ಚೇತಿ ಪ್ರಕೀರ್ತಿತಾಃ ।**
**ಏತೈರ್ದೋಷೈರ್ವಿಮುಕ್ತೋ ಯಃ ಸ ದಮಃ ಸದ್ಭಿರುಚ್ಯತೇ ॥೨೫॥**

ದಮಗುಣಕ್ಕೆ ಹದಿನೆಂಟು ದೋಷಗಳು ಸಂಭವಿಸುತ್ತವೆ. ಇವುಗಳಲ್ಲೊಂದನ್ನು ಆಚರಿಸಿದರೂ ದಮಕ್ಕೆ ಪ್ರತಿಕೂಲವಾಗುತ್ತದೆ : ಅನೃತ, ಪೈಶುನ, ತೃಷ್ಣಾ, ಪ್ರಾತಿಕೂಲ್ಯ, ತಮಸ್ಸು, ರತಿ, ಲೋಕದ್ವೇಷ, ಅಭಿಮಾನ, ವಿವಾದ, ಪ್ರಾಣಿಪೀಡೆ, ಪರಿವಾದ, ಅತಿವಾದ, ಪರಿತಾಪ, ಅಕ್ಷಮೆ, ಅಧೃತಿ, ಅಸಿದ್ಧಿ, ಪಾಪಕೃತ್ಯ ಮತ್ತು ಹಿಂಸೆ–ಇವುಗಳೇ ಆ ಹದಿನೆಂಟು ದೋಷಗಳು.

ಅನೃತಂ: ಅಸತ್ಯವನ್ನು ನುಡಿಯುವುದು, ಪೈಶುನಂ: ಪರೋಕ್ಷದಲ್ಲಿ ಪರರನ್ನು ದೂಷಿಸುವುದು, ತೃಷ್ಣಾ: ವಿಷಯೇಚ್ಛೆ, ಪ್ರಾತಿಕೂಲ್ಯಂ: ಸರ್ವರಿಗೂ ಪ್ರತಿಕೂಲವಾಗಿ ನಡೆದುಕೊಳ್ಳುವುದು. **ತಮಃ:** ಅಜ್ಞಾನ, **ರತಿಃ:** ಕಾಮಾಸಕ್ತಿ, **ಲೋಕದ್ವೇಷಃ:** ಜನರಲ್ಲಿ ಹಗೆತನ, **ಅಭಿಮಾನಃ:** ಇತರರಿಗಿಂತಲೂ ತಾನೇ ಹೆಚ್ಚೆಂದು ತಿಳಿದುಕೊಳ್ಳುವುದು, **ವಿವಾದಃ:** ಜನರೊಡನೆ ಜಗಳವಾಡುವುದು, **ಪ್ರಾಣಿಪೀಡನಂ:** ತನ್ನ ಹೊಟ್ಟೆತುಂಬಿಕೊಳ್ಳುವುದಕ್ಕಾಗಿ ಮಾಡುವ ಪ್ರಾಣಿಹಿಂಸೆ, **ಪರಿವಾದಃ:** ಪ್ರತ್ಯಕ್ಷದಲ್ಲಿ ಪರರನ್ನು ದೂಷಿಸುವುದು (ಮುಖಭಂಗ; ತೇಜೋವಧೆ), **ಅತಿವಾದಃ:** ನಿರರ್ಥಕವಾಗಿ ಹೆಚ್ಚು ಮಾತನಾಡುವುದು. **ಪರಿತಾಪಃ:** ತನ್ನ ದುಃಖವನ್ನು ಕುರಿತು ವೃಥಾ ಚಿಂತಿಸುವುದು, **ಅಕ್ಷಮಾ:** ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸಿಕೊಳ್ಳದಿರುವುದು. **ಅಧೃತಿಃ:** ಇಂದ್ರಿಯಭೋಗ ಗಳಲ್ಲಿ ಚಾಪಲ್ಯ, **ಅಸಿದ್ಧಿ:** ಧರ್ಮ-ಜ್ಞಾನ-ವೈರಾಗ್ಯಗಳ ಅಸಿದ್ಧಿ, **ಪಾಪಕೃತ್ಯಂ:** ಪ್ರತಿಷಿದ್ಧವಾದುದನ್ನು ಮಾಡುವುದು **ಹಿಂಸಾ:** ಶಾಸ್ತ್ರದಲ್ಲಿ

ಅವಿಹಿತವಾದ ಹಿಂಸೆ–ಈ ದೋಷಗಳಿಂದ ಮುಕ್ತವಾದ ಗುಣವೇ ದಮವೆನಿಸಿಕೊಳ್ಳುತ್ತದೆ.

**ಮದೋಽಷ್ಟಾದಶದೋಷಃ ಸ್ಯಾತ್ತ್ಯಾಗೋ ಭವತಿ ಷಡ್ವಿಧಃ ।**
**ವಿಪರ್ಯಯಾಃ ಸ್ಮೃತಾ ಏತೇ ಮದದೋಷಾ ಉದಾಹೃತಾಃ ॥೨೬॥**

ಮದದಲ್ಲಿ ಹದಿನೆಂಟು ದೋಷಗಳಿವೆ. ತ್ಯಾಗದಲ್ಲಿ ಆರು ಭೇದ ಗಳಿರುತ್ತವೆ. ದಮಕ್ಕೆ ಹೇಳಿದ ಹದಿನೆಂಟು ದೋಷಗಳನ್ನೇ ವಿಪರ್ಯಾಸ ಮಾಡಿದರೆ–ದಮಶಬ್ದವು ವಿಪರ್ಯಾಸದಿಂದ ಮದಶಬ್ದವಾಗುವಂತೆ– ಅವು ಮದದೋಷಗಳಾಗುತ್ತವೆ. ಎಂದರೆ ಅವು ಮದವನ್ನು ಪರಿಹರಿಸ ತಕ್ಕುವುಗಳಾಗುತ್ತವೆ. ಅನೃತ, ಅಸೂಯಾ–ಇವುಗಳು ದಮದ ದೋಷಗಳು. ಸತ್ಯ, ಅಪೈಶುನ, ಅನಸೂಯಾ–ಇವುಗಳು ಮದದ ದೋಷಗಳು. ಈ ಕಾರಣದಿಂದ ಹದಿನೆಂಟು ವಿಧವಾದ ದಮದೋಷಗಳಿರುವಂತೆ ಅದಕ್ಕೆ ವ್ಯತಿರಿಕ್ತವಾಗಿ ಹದಿನೆಂಟು ವಿಧವಾದ ಮದದೋಷಗಳಿವೆ.

**ಶ್ರೇಯಾಂಸ್ತು ಷಡ್ವಿಧಸ್ತ್ಯಾಗಸ್ತೃತೀಯೋ ದುಷ್ಕರೋ ಭವೇತ್ ।**
**ತೇನ ದುಃಖಂ ತರತ್ಯೇವ ತಸ್ಮಿನ್ ತ್ಯಕ್ತೇ ಜಿತಂ ಭವೇತ್ ॥೨೭॥**

ಆರು ಬಗೆಯ ತ್ಯಾಗಗಳೂ ಶ್ರೇಯಸ್ಕರವಾದುವುಗಳೇ. ಆದರೆ ಅವುಗಳಲ್ಲಿ ಮೂರನೆಯ ತ್ಯಾಗವು ಅತ್ಯಂತಕಠಿನವಾದುದು–ಆ ಮೂರನೆಯ ತ್ಯಾಗದಿಂದ ಮನುಷ್ಯನು ಅಪಾರವಾದ ಸಂಸಾರಸಾಗರವನ್ನು ದಾಟಲು ಸಮರ್ಥನಾಗುತ್ತಾನೆ. ಅದನ್ನು ತ್ಯಾಗಮಾಡಿದರೆ ಎಲ್ಲವನ್ನೂ ಜಯಿಸಿ ದಂತೆಯೇ ಸರಿ.

**ಶ್ರೇಯಾಂಸ್ತು ಷಡ್ವಿಧಸ್ತ್ಯಾಗಃ ಶ್ರಿಯಂ ಪ್ರಾಪ್ಯ ನ ಹೃಷ್ಯತಿ ।**
**ಇಷ್ಟಾಪೂರ್ತೇ ದ್ವಿತೀಯಂ ಸ್ಯಾನ್ನಿತ್ಯವೈರಾಗ್ಯಯೋಗತಃ ॥೨೮॥**

**ಕಾಮತ್ಯಾಗಶ್ಚ ರಾಜೇನ್ದ್ರ ಸ ತೃತೀಯ ಇತಿ ಸ್ಮೃತಃ ।**
**ಅಪ್ಯವಾಚ್ಯಂ ವದನ್ತ್ಯೇತಂ ಸ ತೃತೀಯೋ ಗುಣಃ ಸ್ಮೃತಃ ॥೨೯॥**

ರಾಜೇಂದ್ರ! ಆರು ವಿಧವಾದ ತ್ಯಾಗಗಳೂ ಶ್ರೇಯಸ್ಕರವಾದುವು ಗಳು. ಅತುಲೈಶ್ವರ್ಯವನ್ನು ಹೊಂದಿಯೂ ಐಶ್ವರ್ಯವನ್ನು ಪಡೆದು ಕೊಂಡಿರುವ ಕಾರಣದಿಂದ ಸಂತೋಷಪಡದಿರುವುದು ಒಂದು ವಿಧ

ವಾದ ತ್ಯಾಗ. ಯಜ್ಞ-ಯಾಗಾದಿಗಳನ್ನು ಮಾಡುವುದು ಮತ್ತು ಕೆರೆಗಳನ್ನು ಕಟ್ಟಿಸುವುದು (ಇವುಗಳ ಮೂಲಕವಾಗಿ ಧನವನ್ನು ಸದ್ವ್ಯಯಮಾಡುವುದು) ಎರಡನೆಯ ತ್ಯಾಗ. (ಯಜ್ಞ-ಯಾಗಾದಿಗಳ ಮೂಲಕವಾಗಿ ಮತ್ತು ಕೆರೆ-ಕುಂಟೆಗಳನ್ನು ಕಟ್ಟಿಸುವುದರ ಮೂಲಕವಾಗಿ ಲಭಿಸುವ ಫಲವನ್ನೂ ತ್ಯಾಗಮಾಡುವುದು ಅಥವಾ ಮಾಡಿದ ಕರ್ಮಫಲವನ್ನು ಪರಮಾತ್ಮನಿಗರ್ಪಿಸುವುದು–ಎರಡನೆಯ ತ್ಯಾಗ.) ವೀತರಾಗನಾಗಿದ್ದುಕೊಂಡು ಹೃದಯಾಂತರಾಳದಲ್ಲಿರುವ ಪರಮಾತ್ಮನಲ್ಲಿ ಮಾತ್ರವೇ ಅನುರಾಗವನ್ನು ಹೊಂದಿ ಐಹಿಕವಾದ ಕಾಮನೆಗಳನ್ನು ತ್ಯಾಗಮಾಡುವುದು ಮೂರನೆಯ ತ್ಯಾಗವೆಂದು ಹೇಳಲ್ಪಟ್ಟಿದೆ. ಮಹರ್ಷಿಗಳಿದನ್ನು ಅನಿರ್ವಚನೀಯವಾದ ಮೋಕ್ಷಪ್ರಾಪ್ತಿಗೆ ಉಪಾಯವೆಂಬುದಾಗಿ ಹೇಳುತ್ತಾರೆ. ಆದುದರಿಂದ ಈ ಮೂರನೆಯ ತ್ಯಾಗವು ವಿಶೇಷಗುಣಯುಕ್ತವಾದುದೆಂದು ತಿಳಿಯತಕ್ಕದ್ದು.

(ಈ ಶ್ಲೋಕಗಳ ಪಾಠಾಂತರವು ಈ ರೀತಿಯಾಗಿದೆ :

**ಅರ್ಹತೇ ಯಾಚಮಾನಾಯ ಪುತ್ರಾನ್ವಿತ್ತಂ ದದಾತಿ ಯತ್ ।**
**ಇಷ್ಟಾಪೂರ್ತಂ ದ್ವಿತೀಯಂ ಸ್ಯಾತ್ ನಿತ್ಯಂ ವೈರಾಗ್ಯಯೋಗತಃ ॥**

**ಕಾಮತ್ಯಾಗಶ್ಚ ರಾಜೇನ್ದ್ರ ಸ ತೃತೀಯ ಇತಿ ಸ್ಮೃತಃ ।**
**ಅಪ್ರಮಾದೀ ಭವೇದೇತೈಃ ಸ ಚಾಪ್ಯಷ್ಟಗುಣೋ ಮತಃ ॥೨೯॥**

ಯಾಚಿಸತಕ್ಕ ಯೋಗ್ಯಪಾತ್ರನಿಗೆ ಮಕ್ಕಳನ್ನು ದಾನಮಾಡುವುದು ಅಥವಾ ಧನವನ್ನು ದಾನಮಾಡುವುದು–ಮೊದಲನೆಯದು. ಇಷ್ಟಾಪೂರ್ತಗಳನ್ನು (ಯಜ್ಞ-ಯಾಗಾದಿಗಳನ್ನು ಮಾಡುವುದು, ಕೆರೆ-ಕಟ್ಟೆಗಳನ್ನು ಕಟ್ಟಿಸುವುದು) ಎರಡನೆಯದಾಗುತ್ತದೆ. ನಿತ್ಯವೂ ರಾಗರಹಿತನಾಗಿದ್ದುಕೊಂಡು ಕಾಮವನ್ನು ತ್ಯಾಗಮಾಡುವುದು ಮೂರನೆಯ– ಮಹಾತ್ಯಾಗ. ಈ ಮೂರು ಮಹಾತ್ಯಾಗಗಳನ್ನೂ ಮಾಡಿದ ಪುರುಷನು ಅಪ್ರಮಾದಿಯಾಗುತ್ತಾನೆ. ಅಪ್ರಮಾದವು ಎಂಟು ಬಗೆ.

(ಇಷ್ಟವೆಂದರೆ ಶ್ರೌತಕರ್ಮದಲ್ಲಿ ಮಾಡುವ ದಾನ : ದೇವತೆಗಳಿಗೆ

ಅರ್ಪಣೆಮಾಡುವುದೆಂದು ಕೆಲವರ ಮತ. ಪೂರ್ತವೆಂದರೆ ಸ್ಮಾರ್ತಕರ್ಮಗಳಲ್ಲಿ ಮಾಡುವ ದಾನ.; ಪಿತೃಗಳಿಗೆ ಅರ್ಪಿಸುವುದೆಂದು ಕೆಲವರ ಮತ. ಈ ಶ್ಲೋಕದಲ್ಲಿ ಎರಡೆರಡು ತ್ಯಾಗಗಳನ್ನು ಸೇರಿಸಿ ಪ್ರಥಮ, ದ್ವಿತೀಯ, ತೃತೀಯ–ಎಂದು ಹೇಳಿದ್ದಾರೆ. ಒಟ್ಟು ಆರು ತ್ಯಾಗಗಳಾಗುತ್ತವೆ. ಹಿಂದಿನ ಶ್ಲೋಕದಲ್ಲಿ ಹೇಳಿದ 'ಮೂರನೆಯ ತ್ಯಾಗ'ವೆಂದರೆ ವೈರಾಗ್ಯದಿಂದ ಧನಾದಿಗಳನ್ನು ತ್ಯಾಗಮಾಡುವುದು ಮತ್ತು ಕಾಮವನ್ನು ತ್ಯಾಗಮಾಡುವುದು.)

**ತ್ಯಕ್ತೈರ್ದ್ರವ್ಯೈರ್ಯದ್ಭವತಿ ನೋಪಯುಕ್ತೈಶ್ಚ ಕಾಮತಃ ।**
**ನ ಚ ದ್ರವ್ಯೈಸ್ತದ್ಭವತಿ ನೋಪಯುಕ್ತೈಶ್ಚ ಕಾಮತಃ ॥೩೦॥**

ವೈರಾಗ್ಯಪೂರ್ವಕವಾಗಿ ಕಾಮೋಪಭೋಗವಸ್ತುಗಳನ್ನು ತ್ಯಾಗಮಾಡಿದರೆ ಮಾನವನಿಗೆ ನಿಷ್ಕಾಮನೆಯುಂಟಾಗಲು ಸಾಧ್ಯ. ಅದರ ಹೊರತಾಗಿ ಸ್ವೇಚ್ಛೆಯಿಂದ ಕಾಮೋಪಭೋಗಗಳನ್ನು ಅನುಭವಿಸಿ ತೃಪ್ತಿಹೊಂದುವೆನೆಂಬುದು ಸಾಧ್ಯವಾಗದ ಮಾತು. ಕಾಮೋಪಭೋಗವಸ್ತುಗಳನ್ನು ಉಪಭೋಗಿಸುತ್ತಿದ್ದರೆ ಮತ್ತೂ ಉಪಭೋಗಿಸಬೇಕೆಂಬ ಆಶೆಯುಂಟಾಗುವುದೇ ಹೊರತು ಆ ವಸ್ತುಗಳು ಸಾಕೆನ್ನಿಸುವುದಿಲ್ಲ. (ಈ ವಿಷಯದಲ್ಲಿ 'ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ' ಎಂಬ ಯಯಾತಿಯ ಅನುಭವಯುಕ್ತವಾದ ಮಾತನ್ನು ಸ್ಮರಿಸಬಹುದಾಗಿದೆ. ಇದೇ ರೀತಿಯಲ್ಲಿ ಯಜ್ಞ-ಯಾಗಾದಿಗಳನ್ನು ಮಾಡಬೇಕೆಂಬ ವ್ಯಾಜದಿಂದ ಧನವನ್ನು ಅರ್ಜಿಸುತ್ತಾ ಹೋದರೂ ನಿಷ್ಕಾಮನೆಯುಂಟಾಗುವುದಿಲ್ಲ. ಧನದಾಶೆಯೇ ಹೆಚ್ಚುತ್ತಾ ಹೋಗುತ್ತದೆ. ಸ್ವೇಚ್ಛೆಯಿಂದ ಸಂಗ್ರಹಿಸಿದ ಹಣವನ್ನು ಇಷ್ಟಾಪೂರ್ತಗಳಿಗೇ ವ್ಯಯಮಾಡಿದರೂ ನಿಷ್ಕಾಮನೆಯುಂಟಾಗಲಾರದು. ಕಾಮತ್ಯಾಗವು ಅಷ್ಟು ಮಹತ್ತ್ವಪೂರ್ಣವಾದುದು.)

**ನ ಚ ಕರ್ಮಸ್ವಸಿದ್ಧೇಷು ದುಃಖಂ ತೇನ ಚ ನ ಗ್ಲಪೇತ್ ।**
**ಸರ್ವೈರೇವ ಗುಣೈರ್ಯುಕ್ತೋ ದ್ರವ್ಯವಾನಪಿ ಯೋ ಭವೇತ್ ॥**

ಯಾವನು ಸಕಲಗುಣಪರಿಪೂರ್ಣನೂ ಮತ್ತು ದ್ರವ್ಯವಂತನೂ ಆಗಿರುತ್ತಾನೆಯೋ–ಅಂತಹವನು ಯಾವುದಾದರೂ ಕಾರ್ಯವು ಸಾಧನೆ

ಯಾಗದಿದ್ದರೆ ದುಃಖಿಸಬಾರದು ಮತ್ತು ದುಃಖದಿಂದ ಗ್ಲಾನಿಯನ್ನೂ ಹೊಂದಬಾರದು.

**ಅಪ್ರಿಯೇ ಚ ಸಮುತ್ಪನ್ನೇ ವ್ಯಥಾಂ ಜಾತು ನ ಗಚ್ಛತಿ ।**
**ಇಷ್ಟಾನ್ಪುತ್ರಾಂಶ್ಚ ದಾರಾಂಶ್ಚ ನ ಯಾಚೇತ ಕದಾಚನ ॥೩೨॥**

ಅಪಕೀರ್ತಿ ಮತ್ತು ವಿತ್ತನಾಶಕವಾದ ಅಪ್ರಿಯವಾದ ಪ್ರಸಂಗಗಳು ಒದಗಿಬಂದಾಗಲೂ ವ್ಯಥೆಯನ್ನೇ ಹೊಂದದಿರುವುದು, ಎಂತಹ ಕಷ್ಟ ಸಮಯದಲ್ಲಿಯೂ ತನಗೆ ಇಷ್ಟರಾದವರನ್ನೂ, ಪತ್ನಿಯರನ್ನೂ ಮತ್ತು ಪುತ್ರರನ್ನೂ ತನ್ನ ಕಷ್ಟದ ನಿವಾರಣೆಗಾಗಿ ಯಾಚಿಸಲು ಹೋಗದಿರುವುದು–ಈ ಎರಡೂ ನಾಲ್ಕನೆಯ ಮತ್ತು ಐದನೆಯ ತ್ಯಾಗಗಳು.

**ಅರ್ಹತೇ ಯಾಚಮಾನಾಯ ಪ್ರದೇಯಂ ತಚ್ಛುಭಂ ಭವೇತ್ ।**
**ಅಪ್ರಮಾದೀ ಭವೇದೇತೈಃ ಸ ಚಾಪ್ಯಷ್ಟಗುಣೋ ಭವೇತ್ ॥೩೩॥**

ದಾನವನ್ನು ಪಡೆಯಲು ಅರ್ಹನಾಗಿರುವ ಯಾಚಕನಿಗೆ ಯಥೇಚ್ಛವಾಗಿ ದಾನಮಾಡಬೇಕು. (ಇದು ಆರನೆಯ ತ್ಯಾಗವಾಗುತ್ತದೆ.) ಹೀಗೆ ಸತ್ಪಾತ್ರನಲ್ಲಿ ದಾನಮಾಡುವುದರಿಂದ ಶುಭವುಂಟಾಗುತ್ತದೆ. ಈ ರೀತಿಯಾದ ಆರು ವಿಧವಾದ ತ್ಯಾಗಗಳನ್ನು ಮಾಡುವುದರಿಂದ ಮಾನವನು ಅಪ್ರಮಾದೀ ಅಥವಾ ಬ್ರಹ್ಮನಿಷ್ಠನಾಗುತ್ತಾನೆ. ಅಪ್ರಮಾದವೆಂಬುದು ಅಥವಾ ಬ್ರಹ್ಮನಿಷ್ಠೆಯೆಂಬುದು ಎಂಟು ವಿಧವಾದ ಗುಣಗಳಿಂದ ಕೂಡಿದ್ದಾಗಿರುವುದು.

**ಸತ್ಯಂ ಧ್ಯಾನಂ ಸಮಾಧಾನಂ ಚೋದ್ಯಂ ವೈರಾಗ್ಯಮೇವ ಚ ।**
**ಅಸ್ತೇಯಂ ಬ್ರಹ್ಮಚರ್ಯಂ ಚ ತಥಾಸಂಗ್ರಹ ಏವ ಚ ॥೩೪॥**

ಸತ್ಯ, ಧ್ಯಾನ, ಸಮಾಧಾನ, ಚೋದ್ಯ, ವೈರಾಗ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ–ಇವೇ ಅಪ್ರಮಾದದ ಎಂಟು ಗುಣಗಳು.

**ಸತ್ಯ** = ಯಥಾರ್ಥವನ್ನು ನುಡಿಯುವುದು.

**ಧ್ಯಾನಂ** =ತೈಲಧಾರೆಯಂತೆ ಸತತವಾಗಿ, ವಿಚ್ಛೇದವಿಲ್ಲದಂತೆ ಮನಸ್ಸನ್ನು ಇಷ್ಟದೇವತೆಯಲ್ಲಿ ಲೀನಗೊಳಿಸುವುದು.

**ಸಮಾಧಾನಂ** = ಸಚ್ಚಿದಾನಂದಸ್ವರೂಪವನ್ನು ತನ್ನಲ್ಲಿ ಕಂಡುಕೊಂಡು ಮನಸ್ಸನ್ನು ಶಾಂತಗೊಳಿಸುವುದು.

ಚೋದ್ಯಂ =ನಾನು ಯಾರು? ಎಲ್ಲಿಂದ ಬಂದೆ? ಏಕೆ ಬಂದೆ? ಎಂದು ವಿಮರ್ಶಿಸುವುದು.

ಅಸ್ತೇಯಂ = ಪರದ್ರವ್ಯವನ್ನು ಅಪಹರಿಸದಿರುವುದು ಅಥವಾ ಆತ್ಮಸ್ವರೂಪವನ್ನು ತಪ್ಪಾಗಿ ತಿಳಿದುಕೊಳ್ಳದಿರುವುದು.

ಬ್ರಹ್ಮಚರ್ಯ= ಅಷ್ಟವಿಧ ಮೈಥುನತ್ಯಾಗ.

ಅಸಂಗ್ರಹಃ = ಪುತ್ರ-ದಾರ-ಕ್ಷೇತ್ರ-ಗೃಹಾದಿ ವಸ್ತುಗಳನ್ನು ಸಂಗ್ರಹಮಾಡದಿರುವುದು.

**ಏವಂ ದೋಷಾ ಮದಸ್ಯೋಕ್ತಾಸ್ತಾನ್ದೋಷಾನ್ಪರಿವರ್ಜಯೇತ್ ।**
**ತಥಾ ತ್ಯಾಗೋಽಪ್ರಮಾದಶ್ಚ ಸ ಚಾಪ್ಯಷ್ಟಗುಣೋ ಮತಃ ॥೩೫॥**

ಹೀಗೆ ಮದದಲ್ಲಿರುವ ಹದಿನೆಂಟು ದೋಷಗಳನ್ನೂ ವರ್ಜಿಸುವುದರಿಂದ ಪುರುಷನು ಅಪ್ರಮಾದಿಯಾಗುತ್ತಾನೆ. ಅಪ್ರಮಾದದಲ್ಲಿ ಎಂಟು ಗುಣಗಳಿವೆಯೆಂದು ತಿಳಿಸಿದ್ದೇನೆ.

**ಅಷ್ಟೌ ದೋಷಾಃ ಪ್ರಮಾದಸ್ಯ ತಾನ್ದೋಷಾನ್ಪರಿವರ್ಜಯೇತ್ ।**
**ಇನ್ದ್ರಿಯೇಭ್ಯಶ್ಚ ಪಞ್ಚಭ್ಯೋ ಮನಸಶ್ಚೈವ ಭಾರತ ।**
**ಅತೀತಾನಾಗತೇಭ್ಯಶ್ಚ ಮುಕ್ತ್ಯುಪೇತಃ ಸುಖೀ ಭವೇತ್ ॥೩೬॥**

ಪ್ರಮಾದಕ್ಕೆ ಎಂಟು ದೋಷಗಳಿವೆ. ಆ ದೋಷಗಳೆಲ್ಲವನ್ನೂ ವರ್ಜಿಸಬೇಕು. ಐದು ಇಂದ್ರಿಯಗಳಿಂದ ಐದು ವಿಧವಾದ ದೋಷಗಳು ಹುಟ್ಟುತ್ತವೆ. ಮನಸ್ಸಿನಿಂದ ಆರನೆಯ ಪ್ರಮಾದದೋಷವು ಹುಟ್ಟುತ್ತದೆ. ಪುತ್ರ-ಪತ್ನೀ ಮುಂತಾದವರು ನಷ್ಟರಾಗಿ ಹೋಗುವುದರಿಂದ ಉಂಟಾಗುವುದು ಅತೀತಪ್ರಮಾದದೋಷ. ಮಕ್ಕಳಾಗದೇ ಇರುವವರು ಜೀವನಪರ್ಯಂತವಾಗಿ ಮಕ್ಕಳಿಗಾಗಿ ಕೊರಗುತ್ತಾ ಇರುವುದು ಅನಾಗತ ಪ್ರಮಾದದೋಷ. ಇದೇ ಎಂಟನೆಯದು. ಈ ಎಂಟು ದೋಷಗಳಿಂದ ಮುಕ್ತನಾದವನು ಸುಖವಾಗಿರುತ್ತಾನೆ.

**ಸತ್ಯಾತ್ಮಾ ಭವ ರಾಜೇನ್ದ್ರ ಸತ್ಯೇ ಲೋಕಾಃ ಪ್ರತಿಷ್ಠಿತಾಃ ।**
**ತಾಂಸ್ತು ಸತ್ಯಮುಖಾನಾಹುಃ ಸತ್ಯೇ ಹ್ಯಮೃತಮಾಹಿತಮ್ ॥೩೭॥**

ಧೃತರಾಷ್ಟ್ರಮಹಾರಾಜ! ನೀನು ಸತ್ಯಸ್ವರೂಪನಾಗು. ಸತ್ಯದಲ್ಲಿ ಎಲ್ಲ ಶುಭಲೋಕಗಳೂ ನಿಂತಿರುವುವು. ದಮ, ತ್ಯಾಗ, ಅಪ್ರಮಾದಾದಿ ಸದ್ಗುಣಗಳೆಲ್ಲವೂ ಸತ್ಯರೂಪನಾದ ಪರಮಾತ್ಮನ ಮುಖಸ್ವರೂಪಗಳಾಗಿವೆ. (ಅವುಗಳ ಮೂಲಕವಾಗಿ ಸತ್ಯಸ್ವರೂಪನಾದ ಪರಮಾತ್ಮನನ್ನು ಹೊಂದ ಬಹುದಾಗಿದೆ.) ಸತ್ಯಕ್ಕೆ ಅಧೀನವಾದ ಆತ್ಮಲಾಭವೇ ಶುಭಲೋಕ. ಸತ್ಯದಲ್ಲಿಯೇ ಮೋಕ್ಷವಿದೆ.

**ನಿವೃತ್ತೇನೈವ ದೋಷೇಣ ತಪೋವ್ರತಮಿಹಾಚರೇತ್ ।**
**ಏತದ್ಧಾತೃಕೃತಂ ವೃತ್ತಂ ಸತ್ಯಮೇವ ಸತಾಂ ವ್ರತಮ್ ॥೩೮॥**

ಹಿಂದೆ ಹೇಳಿದ ಎಲ್ಲ ದೋಷಗಳನ್ನೂ ಹೋಗಲಾಡಿಸಿಕೊಂಡು ತಪೋವ್ರತವನ್ನು ಆಚರಿಸಬೇಕು. ಇದು ಪರಮಾತ್ಮನಿಂದಲೇ ವಿಧಿಸಲ್ಪಟ್ಟ ನಿಯಮವಾಗಿದೆ. ಸತ್ಯವೇ ಸತ್ಪುರುಷರಿಗೆ ಶ್ರೇಷ್ಠವಾದ ವ್ರತವಾಗಿರುತ್ತದೆ.

**ದೋಷೈರೇತೈರ್ವಿಮುಕ್ತಂ ತು ಗುಣೈರೇತೈಃ ಸಮನ್ವಿತಮ್ ।**
**ಏತತ್ಸಮೃದ್ಧಮತ್ಯರ್ಥಂ ತಪೋ ಭವತಿ ಕೇವಲಮ್ ॥೩೯॥**

ಹಿಂದೆ ಹೇಳಿದ ಕ್ರೋಧಾದಿದೋಷಗಳಿಂದ ವಿಮುಕ್ತನಾಗಿ (ರಹಿತ ನಾಗಿ) ಸತ್ಯ, ಅಕ್ರೋಧ, ಅಪೈಶುನಾದಿ ಗುಣಗಳಿಂದ ಯುಕ್ತವಾಗಿರು ವುದೇ ಕೇವಲತಪಸ್ಸೆನಿಸಿಕೊಳ್ಳುತ್ತದೆ. ಇಂತಹ ತಪಸ್ಸು ಅತಿಶಯವಾಗಿ ವೃದ್ಧಿಹೊಂದುತ್ತದೆ.

**ಯನ್ಮಾಂ ಪೃಚ್ಛಸಿ ರಾಜೇನ್ದ್ರ ಸಂಕ್ಷೇಪಾತ್ತದ್ಬ್ರವೀಮಿ ತೇ ।**
**ಏತತ್ಪಾಪಹರಂ ಪುಣ್ಯಂ ಜನ್ಮಮೃತ್ಯುಜರಾಪಹಮ್ ॥೪೦॥**

ನಿನ್ನ ಪ್ರಶ್ನೆಗೆ ಉತ್ತರವನ್ನು ಸಂಕ್ಷೇಪವಾಗಿ ತಿಳಿಸಿರುತ್ತೇನೆ. ಇದು ಪಾಪಹರವೂ, ಶುದ್ಧವೂ, ಜನನ-ಮರಣ-ವಾರ್ಧಕ್ಯಗಳನ್ನು ಪರಿಹರಿಸ ತಕ್ಕದ್ದೂ ಆಗಿದೆ.”

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಆಖ್ಯಾನಪಞ್ಚಮೈರ್ವೇದೈರ್ಭೂಯಿಷ್ಠಂ ಕಥ್ಯತೇ ಜನಃ ।**
**ತಥಾ ಚಾನ್ಯೇ ಚತುರ್ವೇದಾಸ್ತ್ರಿವೇದಾಶ್ಚ ತಥಾ ಪರೇ ॥೪೧॥**

**ದ್ವಿವೇದಾಶ್ಚೈಕವೇದಾಶ್ಚಾಪ್ಯನೃಚಶ್ಚ ತಥಾ ಪರೇ ।**
**ತೇಷಾಂ ತು ಕತರಃ ಸ ಸ್ಯಾದ್ಯಮಹಂ ವೇದ ವೈ ದ್ವಿಜಮ್ ॥೪೨॥**

"ಕೆಲವರು ನಾಲ್ಕು ವೇದಗಳನ್ನೂ, ಪುರಾಣಗಳನ್ನೂ ಓದಿ ಪಂಚವೇದಿಗಳೆಂದು ಪ್ರಸಿದ್ಧರಾಗಿದ್ದಾರೆ. ಇನ್ನು ಕೆಲವರು ಚತುರ್ವೇದಿಗಳು. ಮತ್ತೆ ಕೆಲವರು ತ್ರಿವೇದಿಗಳು. ದ್ವಿವೇದಿಗಳೂ, ಏಕವೇದಿಗಳೂ, ವೇದವನ್ನೇ ಕಲಿಯದವರೂ ಇದ್ದಾರೆ. ಇವರಲ್ಲಿ ಯಾರು ಅಧಿಕರು? ಯಾರನ್ನು ನಾನು ಬ್ರಾಹ್ಮಣನೆಂದು ತಿಳಿದುಕೊಳ್ಳಲಿ."

(ಈ ಶ್ಲೋಕದಲ್ಲಿ ಒಂದು ಸ್ವಾರಸ್ಯವಿದೆ.

ಇತಿಹಾಸದಿಂದ ಕೂಡಿದ ಚತುರ್ವೇದಗಳನ್ನೂ ಅಧ್ಯಯನ ಮಾಡಿದವನು–ಚತುರ್ವೇದೀ, ತ್ರಿವೇದೀ, ದ್ವಿವೇದೀ ಮತ್ತು ಏಕವೇದಿಗಿಂತಲೂ ಹೆಚ್ಚಿನವನೆಂಬುದು ಜನಸಾಮಾನ್ಯನಿಗೂ ತಿಳಿದಿರುವ ವಿಷಯವೇ ಆಗಿದೆ. ಹೀಗಿರುವಾಗ ಈ ವಿಷಯವನ್ನು ಮಹಾಮಹಿಮರಾದ ಸನತ್ಸುಜಾತರನ್ನು ಕೇಳಿ ತಿಳಿದುಕೊಳ್ಳಬೇಕೇ? ಧೃತರಾಷ್ಟ್ರನು ಪ್ರಶ್ನಿಸಿದ ಉದ್ದೇಶವನ್ನು ವಿವರಿಸುತ್ತಾ ವ್ಯಾಖ್ಯಾನಕಾರರು ಹೀಗೆ ಹೇಳಿದ್ದಾರೆ :

**ಆಖ್ಯಾನಂ ಇತಿಹಾಸಪುರಾಣಾದಿಪಞ್ಚಮಂ ಯೇಷು ತೈಃ ವೇದೈಃ** = ಇತಿಹಾಸ-ಪುರಾಣಗಳನ್ನು ಐದನೆಯ ವೇದವಾಗಿ ಹೊಂದಿರುವ ವೇದಗಳಿಂದ, **ಸರ್ವಂ ಖಲ್ವಿದಂ ಬ್ರಹ್ಮ । ಬ್ರಹ್ಮೈವೇದಂ ವಿಶ್ವಂ । ಪುರುಷ ಏವೇದಗ್ಂ ಸರ್ವಂ ।** ಇವೇ ಮುಂತಾಗಿ ತತ್ತ್ವಗಳು ಘೋಷಿಸಲ್ಪಡುತ್ತವೆ. **ಭೂಯಿಷ್ಠಂ = ನಾಮಾದಿ ಪ್ರಪಞ್ಚಾದಧಿಕತಮಂ** = ನಾಮಾದಿಪ್ರಪಂಚಗಳಿಗಿಂತಲೂ ಅಧಿಕತಮವಾದುದು. **ಭೂಮಾಖ್ಯಂ ಪರಂ ಬ್ರಹ್ಮ** = ಭೂಮಾ ಎಂಬ ಹೆಸರಿನ ಪರಬ್ರಹ್ಮದ ವಿಷಯವಾಗಿ ಹೇಳುತ್ತೇವೆ. ಇದಕ್ಕೆ ಜನವೆಂದು ಹೆಸರು. ಈ ಜನವೇ ಸ್ಥಾವರ ಮತ್ತು ಜಂಗಮಗಳೆಂದು ಎರಡು ವಿಭಾಗಗಳಾಗಿ ವಿಭಾಗಿಸಲ್ಪಟ್ಟಿದೆ. ಇದು ನಿಜವೇ? ಮತ್ತೆ ಕೆಲವರು ಚತುರ್ವೇದಿಗಳೂ ಇದ್ದಾರೆ. ಅವರು ಶರೀರಪುರುಷ, ಛಂದಃಪುರುಷ, ವೇದಪುರುಷ, ಮಹಾಪುರುಷ–ಹೀಗೆ ನಾಲ್ವರು ಪುರುಷರಿದ್ದಾರೆಂದು ಹೇಳುತ್ತಾರೆ. ಇದರ ಯಾಥಾರ್ಥ್ಯವೇನು? ಮತ್ತೆ ಕೆಲವರು ತ್ರಿವೇದಿಗಳು. ಇವರು ಇದೇ ಪುರುಷನನ್ನೇ ಕ್ಷರ, ಅಕ್ಷರ, ಉತ್ತಮ–ಎಂದು ಮೂರು ಪ್ರಕಾರವಾಗಿ ಹೇಳುತ್ತಾರೆ. ದ್ವಿವೇದಿಗಳಾಗಿರುವವರು ಶಬ್ದಬ್ರಹ್ಮ ಮತ್ತು ಪರಬ್ರಹ್ಮ–ಎಂಬ ಎರಡೇ ವಸ್ತುಗಳಲ್ಲಿ ವಿಶ್ವವೆಲ್ಲವೂ ಅಡಕವಾಗಿರು

ವುದೆಂದು ಹೇಳುತ್ತಾರೆ. ಏಕವೇದಿಗಳ ಅಭಿಮತವೇನೆಂದರೆ : ಇರುವವನು ಒಬ್ಬನೇ ಬ್ರಹ್ಮ. ಅವನೇ ಪ್ರಪಂಚ. ಅನೃಚರು ಎಂದರೆ **ಋಚ್ಯತೇ–ಸ್ತೂಯತೇ ಇತಿ 'ಋಕ್'**–ಸ್ತೋತ್ರಮಾಡಲ್ಪಡುವುದಕ್ಕೆ **ಋಕ್** ಎಂದು ಹೆಸರು. ಅದೇ ಈಶ್ವರ. ಅವನು ನಮ್ಮಿಂದ ಪ್ರತ್ಯೇಕವಾಗಿಲ್ಲ– ಎಂಬುದೇ ಅನೃಚರ ಸಿದ್ಧಾಂತ. ಅವರೇ ಬ್ರಹ್ಮಾದ್ವೈತವಾದಿಗಳು. ಈ ರೀತಿಯ ಜನರಲ್ಲಿ ಯಾರು ಶ್ರೇಷ್ಠರು? ಎಂಬುದು ಧೃತರಾಷ್ಟ್ರನ ಆಂತರಂಗಿಕ ಪ್ರಶ್ನೆಯಾಗಿದೆ.)

ಸನತ್ಸುಜಾತರು ಹೇಳುತ್ತಾರೆ :

**ಏಕಸ್ಯ ವೇದಸ್ಯಾಜ್ಞಾನಾದ್ವೇದಾಸ್ತೇ ಬಹವಃ ಕೃತಾಃ ।**
**ಸತ್ಯಸ್ಯೈಕಸ್ಯ ರಾಜೇನ್ದ್ರ ಸತ್ಯೇ ಕಶ್ಚಿದವಸ್ಥಿತಃ ॥೪೩॥**

"ರಾಜೇಂದ್ರ! ಸೃಷ್ಟ್ಯಾದಿಯಲ್ಲಿ ಅಖಂಡವಾಗಿದ್ದ ವೇದವನ್ನು ತಿಳಿಯಲು ಸಾಮರ್ಥ್ಯವಿಲ್ಲದುದರಿಂದ ವೇದವು ನಾಲ್ಕು ಭಾಗಗಳಾಗಿ ವಿಭಾಗಿಸಲ್ಪಟ್ಟಿತು. ಅದ್ವಿತೀಯನಾದ ಪರಮಾತ್ಮನೇ ನಿತ್ಯಸ್ವರೂಪನು (ವೇದಸ್ವರೂಪನು). ಮಹಾರಾಜ! ಸತ್ಯಸ್ವರೂಪವಾದ ಆ ಅಖಂಡ ವೇದದ ಸಾರತತ್ತ್ವವನ್ನು ತಿಳಿದವರು ಬಹಳ ವಿರಳ.

**ಏವಂ ವೇದಮವಿಜ್ಞಾಯ ಪ್ರಾಜ್ಞೋಽಹಮಿತಿ ಮನ್ಯತೇ ।**
**ದಾನಮಧ್ಯಯನಂ ಯಜ್ಞೋ ಲೋಭಾದೇತತ್ಪ್ರವರ್ತತೇ ॥೪೪॥**

ಈ ರೀತಿಯಾಗಿ ವೇದದ ತತ್ತ್ವವನ್ನು ತಿಳಿಯದೇ–ವೇದದ ಮೂಲವನ್ನು ತಿಳಿಯದೇ ಕೇವಲ ಪಂಚವೇದ-ಚತುರ್ವೇದ-ತ್ರಿವೇದಾಧ್ಯಯನಗಳಿಂದ ತಾನು ಪ್ರಾಜ್ಞನೆಂದು ಮಾನವನು ತಿಳಿದುಕೊಳ್ಳುತ್ತಾನೆ. ದಾನ, ಅಧ್ಯಯನ ಮತ್ತು ಯಜ್ಞ–ಇವುಗಳು ಲೋಭದಿಂದ (ಫಲಾಪೇಕ್ಷೆಯಿಂದ) ನಡೆಯುತ್ತವೆ.

(ಪಾಠಾಂತರದ ರೀತ್ಯಾ-

**ಯ ಏವಂ ವೇದ ತತ್ಸತ್ಯಂ ಪ್ರಾಜ್ಞೋ ಭವತಿ ನಿತ್ಯದಾ ।**
**ದಾನಮಧ್ಯಯನಂ ಯಜ್ಞೋ ಲೋಭಾದೇವ ಪ್ರವರ್ತತೇ ॥೪೪॥**

ಇಂತಹ ಸತ್ಯವನ್ನು ತಿಳಿದವನೇ ಜ್ಞಾನೀ. ಸತ್ಯವನ್ನರಿಯದವರ ದಾನ, ಅಧ್ಯಯನ, ಯಜ್ಞಗಳು ಲೋಭದಿಂದ ನಡೆಯುತ್ತವೆ.)

**ಸತ್ಯಾತ್ಪ್ರಚ್ಯವಮಾನಾನಾಂ ಸಂಕಲ್ಪಶ್ಚ ತಥಾ ಭವೇತ್ ।**
**ತತೋ ಯಜ್ಞಃ ಪ್ರತಾಯೇತ ಸತ್ಯಸ್ಯೈವಾವಧಾರಣಾತ್ ॥೪೫॥**

ಏಕೆಂದರೆ : ಸತ್ಯಸ್ವರೂಪನಾದ ಪರಮಾತ್ಮನಿಂದ ಯಾರು ಪ್ರಚ್ಯುತರಾಗುತ್ತಾರೆಯೋ–ಅವರ ಸಂಕಲ್ಪವೂ ಅದಕ್ಕೆ ಅನುಗುಣವಾಗಿಯೇ ಇರುತ್ತದೆ. ಆದುದರಿಂದ ಸತ್ಯಸ್ವರೂಪವನ್ನು ನಿಶ್ಚಯಿಸಿಕೊಂಡೇ ಯಜ್ಞವನ್ನು ವಿಸ್ತರಿಸಬೇಕು.

(ಈ ಶ್ಲೋಕದ ಪಾಠಾಂತರದ ರೀತ್ಯಾ-

**ಸತ್ಯಾತ್ಪ್ರಚ್ಯವಮಾನಾನಾಂ ಸಂಕಲ್ಪಾ ವಿತಥಾಭವನ್ ।**
**ತತಃ ಕರ್ಮ ಪ್ರತಾಯೇತ ಸತ್ಯಸ್ಯಾನವಧಾರಣಾತ್ ॥೪೫॥**

ಸತ್ಯಸ್ವರೂಪನಾದ ಬ್ರಹ್ಮವನ್ನು ತಿಳಿಯದೇ ಅದರಿಂದ ಜಾರುವವರ ಸಂಕಲ್ಪಗಳು ವ್ಯರ್ಥವಾಗುತ್ತವೆ. ಅಜ್ಞಾನದಿಂದ ಕರ್ಮಗಳು ಹುಟ್ಟುತ್ತವೆ. ಸತ್ಯವನ್ನು ತಿಳಿಯದೇ ಇರುವುದರಿಂದ ಹೀಗಾಗುತ್ತದೆ.)

**ಮನಸಾನ್ಯಸ್ಯ ಭವತಿ ವಾಚಾನ್ಯಸ್ಯಾಥ ಕರ್ಮಣಾ ।**
**ಸಂಕಲ್ಪಸಿದ್ಧಃ ಪುರುಷಃ ಸಂಕಲ್ಪಾನಧಿತಿಷ್ಠತಿ ॥೪೬॥**

ಒಬ್ಬನಿಗೆ ಮನಸ್ಸಿನಿಂದ ಅನುಸಂಧಾನಮಾಡುವ ದೇವತಾಧ್ಯಾನಾದಿಗಳೇ ಯಜ್ಞವಾಗುತ್ತವೆ. ಮತ್ತೊಬ್ಬನಿಗೆ ಬ್ರಹ್ಮಯಜ್ಞ-ಜಪಾದಿಗಳು ಯಜ್ಞಗಳಾಗುತ್ತವೆ. ಕೆಲವರಿಗೆ ಕ್ರಿಯಾರೂಪವಾದ ಜ್ಯೋತಿಷ್ಟೋಮಾದಿಗಳು ಯಜ್ಞಗಳಾಗುತ್ತವೆ. ಸಿದ್ಧಸಂಕಲ್ಪನಾದವನು ಅಥವಾ ಸತ್ಯಸಂಕಲ್ಪನಾದ ಬ್ರಹ್ಮನಿಷ್ಠನಾದ ಪುರುಷನು ಈ ಸಂಕಲ್ಪಗಳೆಲ್ಲವನ್ನೂ ಮೆಟ್ಟಿ ನಿಲ್ಲುವವನಾಗಿರುತ್ತಾನೆ. (ನಿಸ್ಸಂಕಲ್ಪನಾಗಿರುತ್ತಾನೆ.)

**ಅನೈಭೃತ್ಯೇನ ಚೈತಸ್ಯ ದೀಕ್ಷಿತವ್ರತಮಾಚರೇತ್ ।**
**ನಾಮೈತದ್ಧಾತುನಿರ್ವೃತ್ತಂ ಸತ್ಯಮೇವ ಸತಾಂ ಪರಮ್ ॥೪೭॥**

(ಆತ್ಮಜ್ಞಾನವು ಲಭಿಸದಿದ್ದ ಪಕ್ಷದಲ್ಲಿ) ಯಜ್ಞ-ಮೌನ ಇವೇ ಮೊದಲಾದ ದೀಕ್ಷಾವ್ರತಗಳನ್ನಾಚರಿಸಬೇಕು. ದೀಕ್ಷಿತ ಎಂಬ ಪದವು ದೀಕ್ಷ-ವ್ರತಾದೇಶೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಕ್ತಾ ಪ್ರತ್ಯಯಾಂತವಾಗಿದೆ. 'ದೀಕ್ಷಿತನಾಗಿದ್ದಾನೆ'–-ಎಂಬುದರಿಂದಲೇ ಯಾವುದೋ

ವ್ರತದಲ್ಲಿ ನಿಷ್ಠನಾಗಿದ್ದಾನೆ–ಎಂಬ ಅರ್ಥವಾಗುತ್ತದೆ. ಸತ್ಪುರುಷರಿಗೆ ಸತ್ಯವೇ (ಪರಬ್ರಹ್ಮಸಾಕ್ಷಾತ್ಕಾರವೇ) ಶ್ರೇಷ್ಠವಾದುದು.

**ಜ್ಞಾನಂ ವೈ ನಾಮ ಪ್ರತ್ಯಕ್ಷಂ ಪರೋಕ್ಷಂ ಜಾಯತೇ ತಪಃ ।**
**ವಿದ್ಯಾದ್ಬಹು ಪಠನ್ತಂ ತು ದ್ವಿಜಂ ವೈ ಬಹುಪಾಠಿನಮ್ ॥೪೮॥**

ಆತ್ಮಜ್ಞಾನದ ಫಲವು ಪ್ರತ್ಯಕ್ಷವಾದುದು. (ಸಾಧಕನು ಈ ಶರೀರ ದಲ್ಲಿಯೇ ಆತ್ಮದರ್ಶನವನ್ನು ಮಾಡಬಹುದು.) ಕಾಯಿಕ, ವಾಚಿಕ, ಮಾನಸಿಕ–ಈ ಮೂರು ಬಗೆಯ ತಪಸ್ಸಿನ ಫಲಗಳೂ ಪರೋಕ್ಷವಾದುವು. (ಯಜ್ಞ, ಯಾಗ, ದಾನ–ಇತ್ಯಾದಿಗಳಿಂದ ಪರೋಕ್ಷದಲ್ಲಿರುವ ಉತ್ತಮ ಲೋಕಗಳು ಸಿಕ್ಕುತ್ತವೆ.) ಇತಿಹಾಸವೂ ಸೇರಿ ಐದಾದ ವೇದಗಳನ್ನು ಅಧ್ಯಯನಮಾಡಿರುವ ಬ್ರಾಹ್ಮಣನನ್ನು ಬಹುಪಾಠೀ–ದೊಡ್ಡ ವಿದ್ಯಾವಂತ ಎಂದು ಮಾತ್ರ ಕರೆಯಬಹುದಾಗಿದೆ.

**ತಸ್ಮಾತ್ಕ್ಷತ್ರಿಯ ಮಾಮಂಸ್ಥಾ ಜಲ್ಪಿತೇನೈವ ವೈ ದ್ವಿಜಮ್ ।**
**ಯ ಏವ ಸತ್ಯಾನ್ನಾಪೈತಿ ಸ ಜ್ಞೇಯೋ ಬ್ರಾಹ್ಮಣಸ್ತ್ವಯಾ ॥೪೯॥**

ಕ್ಷತ್ರಿಯಸತ್ತಮ! ಆದುದರಿಂದ, ನಾಲ್ಕು, ಮೂರು, ಎರಡು ಅಥವಾ ಒಂದು ವೇದವನ್ನು ಅಧ್ಯಯನಮಾಡಿದ ಮಾತ್ರದಿಂದಲೇ ಅವನು ಬ್ರಾಹ್ಮಣ ನಾಗಿಬಿಡುವನೆಂದು ಭಾವಿಸಬೇಡ. ಯಾವಾತನು ಸತ್ಯದಿಂದ ಬೇರೆ ಯಾಗಿರುವುದಿಲ್ಲವೋ–ಸತ್ಯಸ್ವರೂಪನೇ ಆಗಿಬಿಟ್ಟಿರುವನೋ–ಅವನೇ ನಿಜವಾದ ಬ್ರಾಹ್ಮಣನೆಂದು ತಿಳಿಯುವವನಾಗು. (ಅಪರೋಕ್ಷವಾದ ಆತ್ಮಜ್ಞಾನವು–ಆತ್ಮಸಾಕ್ಷಾತ್ಕಾರವು ಯಾವನಿಗೆ ಆಗಿರುತ್ತದೆಯೋ ಅವನೇ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ.)

(ಪಾಠಾಂತರದಂತೆ :

**ವಿದ್ಯಾದ್ಬಹುಪಠಂ ತಂ ತು ಬಹುವಾಗಿತಿ ಬ್ರಾಹ್ಮಣಮ್ ।**
**ಯ ಏವ ಸತ್ಯಾನ್ನಾಪೈತಿ ಸ ಜ್ಞೇಯೋ ಬ್ರಾಹ್ಮಣಸ್ತ್ವಯಾ ॥೪೯॥**

ತ್ರಿವೇದೀ, ಚತುರ್ವೇದೀ–ಮೊದಲಾದವರನ್ನು ಬಹುಜ್ಞರೆಂದು ನೀನು ತಿಳಿಯಬೇಕು. ಅವರು ಬಹುಜ್ಞರಾದ ಬ್ರಾಹ್ಮಣರು. ಯಾವಾತನು ಸತ್ಯದಿಂದ ಬೇರ್ಪಡುವುದಿಲ್ಲವೋ–ಅವನೇ ನಿಜವಾದ ಬ್ರಾಹ್ಮಣ.)

ಛನ್ದಾಂಸಿ ನಾಮ ಕ್ಷತ್ರಿಯ ತಾನ್ಯಥರ್ವಾ
ಪುರಾ ಜಗೌ ಮಹರ್ಷಿಸಙ್ಘ ಏಷಃ ।
ಛನ್ದೋವಿದಸ್ತೇ ಯ ಉತ ನಾಧೀತವೇದಾ
ನ ವೇದವೇದ್ಯಸ್ಯ ವಿದುರ್ಹಿ ತತ್ತ್ವಮ್ ॥೫೦॥
ಛನ್ದಾಂಸಿ ನಾಮ ದ್ವಿಪದಾಂ ವರಿಷ್ಠ
ಸ್ವಚ್ಛನ್ದಯೋಗೇನ ಭವನ್ತಿ ತತ್ರ ।
ಛನ್ದೋವಿದಸ್ತೇನ ಚ ತಾನಧೀತ್ಯ
ಗತಾ ನ ವೇದಸ್ಯ ನ ವೇದ್ಯಮಾರ್ಯಾಃ ॥೫೧॥

ಹಿಂದೆ ಅಥರ್ವಋಷಿಯು ಋಷಿಗಳ ಮಧ್ಯದಲ್ಲಿ ಯಾವುದನ್ನು ಹಾಡಿದನೋ–ಅದಕ್ಕೆ ಛಂದಸ್ಸು ಅಥವಾ ವೇದ ಎಂದು ಹೆಸರು. ಪರಮಾತ್ಮನಿಗೆ ವೇದವೇದ್ಯನೆಂದೇ ಹೆಸರು. ಸಂಪೂರ್ಣವಾಗಿ ವೇದಾಧ್ಯಯನಮಾಡಿಯೂ ಯಾವನು ವೇದವೇದ್ಯನಾದ, ವೇದಪ್ರತಿಪಾದ್ಯನಾದ ಪರಮಾತ್ಮನನ್ನು ತಿಳಿದುಕೊಳ್ಳುವುದಿಲ್ಲವೋ ಅಂತಹವನು–ವೇದಾಧ್ಯಯನಮಾಡಿದವನೇ ಅಲ್ಲ. (ವೇದವಿದ್ವಾಂಸನಲ್ಲ.)

ಮಾನವಶ್ರೇಷ್ಠನೇ! ವೇದಗಳು ಸ್ವತಂತ್ರವಾಗಿ ಪರಮಾತ್ಮನ ವಿಷಯದಲ್ಲಿ ಪ್ರಮಾಣಭೂತಗಳಾಗಿವೆ. ಈ ಕಾರಣದಿಂದ ಛಂದೋವಿದರಾದ ಆರ್ಯರು (ವೇದವಿದರು) ವೇದಗಳನ್ನು ಅಧ್ಯಯನಮಾಡಿ ವೇದವೇದ್ಯನಾದ ಪರಮಾತ್ಮನನ್ನು ಕಂಡುಕೊಳ್ಳುವುದಿಲ್ಲವೆಂದಲ್ಲ. (ವೇದವಿದರೂ ವೇದವೇದ್ಯನಾದ ಪರಮಾತ್ಮನನ್ನು ಕಂಡುಕೊಳ್ಳುತ್ತಾರೆ. ಗತಾ ಹಿ ವೇದಸ್ಯ ನ ವೇದಮಾರ್ಯಾಃ ಎಂಬ ಪಾಠಾಂತರದ ಪ್ರಕಾರ : ಆರ್ಯರು ಜ್ಞಾನಸ್ವರೂಪನಾದ ಪರಮಾತ್ಮನನ್ನು ಕಂಡುಕೊಳ್ಳುತ್ತಾರೆ. ವೇದ್ಯವಾದ ಪ್ರಪಂಚದ ಸ್ವರೂಪವನ್ನಲ್ಲ.)

ನ ವೇದಾನಾಂ ವೇದಿತಾ ಕಶ್ಚಿದಸ್ತಿ
ಕಶ್ಚಿತ್ತ್ವೇತಾನ್ಬುಧ್ಯತೇ ವಾಪಿ ರಾಜನ್ ।
ಯೋ ವೇದ ವೇದಾನ್ನ ಸ ವೇದ ವೇದ್ಯಂ
ಸತ್ಯೇ ಸ್ಥಿತೋ ಯಸ್ತು ಸ ವೇದ ವೇದ್ಯಮ್ ॥೫೨॥

ಧೃತರಾಷ್ಟ್ರ! ವೇದಗಳ ರಹಸ್ಯಗಳನ್ನು ವಾಸ್ತವವಾಗಿ ತಿಳಿದವನು

ಯಾವನೊಬ್ಬನೂ ಇಲ್ಲ ಅಥವಾ ವೇದಾಧ್ಯಯನಮಾಡಿದವರಲ್ಲಿ ಒಬ್ಬಿಬ್ಬರಾದರೂ ವೇದದ ಅರ್ಥವನ್ನು ತಿಳಿದಿದ್ದರೂ ಇರಬಹುದು. ಆದರೆ ವೇದಾಧ್ಯಯನಮಾಡಿ ವೇದಾರ್ಥವನ್ನು ತಿಳಿದುಕೊಂಡಿದ್ದರೂ ಅವನು ವೇದ ವೇದ್ಯನಾದ ಪರಮಾತ್ಮನ ನಿಜಸ್ವರೂಪವನ್ನು ಕಾಣಲಾರನು.

ಯಾವನು ಸತ್ಯಸ್ವರೂಪನಾದ ಪರಮಾತ್ಮನಲ್ಲಿಯೇ ತನ್ನ ಮನಸ್ಸನ್ನು ಯಾವಾಗಲೂ ಲೀನಗೊಳಿಸಿರುವನೋ–ಅಂತಹವನು ಮಾತ್ರವೇ ವೇದ ವೇದ್ಯನಾದ ಪರಮಾತ್ಮನನ್ನು ಕಂಡುಕೊಳ್ಳಬಲ್ಲನು.

(ವೇದವನ್ನು ಅಧ್ಯಯನಮಾಡುವುದರಿಂದಲೇ ವೇದವೇದ್ಯನಾದ ಪರಮಾತ್ಮನನ್ನು ತಿಳಿದುಕೊಳ್ಳುವ ಸಾಧ್ಯತೆಯಿಲ್ಲ. ವೇದಗಳು ಪರಮಾತ್ಮನ ಸ್ವರೂಪವನ್ನು ನಾನಾವಿಧವಾಗಿ ಬಣ್ಣಿಸುತ್ತವೆ. ಇಷ್ಟು ಮಾತ್ರ ತಿಳಿವಳಿಕೆಯನ್ನು ವೇದಾಧ್ಯಯನದಿಂದ ಪಡೆದುಕೊಳ್ಳಬಹುದೇ ಹೊರತು ಪರಮಾತ್ಮನ ದರ್ಶನವು ಅಥವಾ ಆತ್ಮಸಾಕ್ಷಾತ್ಕಾರವು ಕೇವಲ ವೇದಾಧ್ಯಯನದಿಂದ ಸಾಧ್ಯವಾಗುವುದಿಲ್ಲ.)

ನ ವೇದಾನಾಂ ವೇದಿತಾ ಕಶ್ಚಿದಸ್ತಿ
ವೇದ್ಯೇನ ವೇದಂ ನ ವಿದುರ್ನ ವೇದ್ಯಮ್ ।
ಯೋ ವೇದ ವೇದಂ ಸ ಚ ವೇದ ವೇದ್ಯಂ
ಯೋ ವೇದ ವೇದ್ಯಂ ನ ಸ ವೇದ ಸತ್ಯಮ್ ॥೫೩॥

ಧೃತರಾಷ್ಟ್ರ! ನಾನು ಹಿಂದೆ ಹೇಳಿದಂತೆ ವೇದಗಳ ರಹಸ್ಯಗಳನ್ನು ವಾಸ್ತವವಾಗಿ ತಿಳಿದವನು ಯಾವೊಬ್ಬನೂ ಇಲ್ಲ. ವೇದಗಳು ಅನಂತ ವಾಗಿವೆ–'ಅನಂತಾ ವೈ ವೇದಾಃ' ಪ್ರಾಪಂಚಿಕಜ್ಞಾನವನ್ನು ಗ್ರಹಿಸಲು ಶಕ್ತವಾದ ಬುದ್ಧಿ-ಮನಸ್ಸುಗಳಿಂದ ವೇದರಹಸ್ಯವನ್ನು ಮತ್ತು ವೇದವೇದ್ಯನಾದ ಪರಮಾತ್ಮನನ್ನು ತಿಳಿದುಕೊಳ್ಳಲಾರರು. ಯಾವನು 'ವೇದ' ಜ್ಞಾನಸ್ವರೂಪನಾದ ಪರಮಾತ್ಮನನ್ನು ತಿಳಿದಿರುವನೋ–ಅವನು ಬುದ್ಧಿ ಮತ್ತು ಮನಸ್ಸುಗಳಿಂದ ಗ್ರಹಿಸಬಹುದಾದ ಪ್ರಪಂಚವನ್ನು ತಿಳಿಯಬಲ್ಲನು. ಆದರೆ ಕೇವಲ ಮನಸ್ಸು-ಬುದ್ಧಿಗಳಿಗೆ ಗ್ರಾಹ್ಯವಾಗುವ ಪ್ರಪಂಚವನ್ನು ತಿಳಿದವನು ಸತ್ಯಸ್ವರೂಪನಾದ ಪರಮಾತ್ಮನನ್ನು ತಿಳಿದಿರುವುದಿಲ್ಲ.

'ಯತೋ ವಾಚೋ ನಿವರ್ತನ್ತೇ' ಎಂದು ವೇದವು–

ಹೇಳುತ್ತದೆ. ಬರಿಯ ವೇದಗಳನ್ನೋದುವುದರಿಂದ ಬ್ರಹ್ಮನ ಅರಿವು ಆಗಲಾರದು. ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ–ಎಂಬ ವಾಕ್ಯದಂತೆ ಬ್ರಹ್ಮವನ್ನರಿತಲ್ಲಿ ಮಾತ್ರ ಜಗತ್ತಿನ ಸರ್ವಜ್ಞಾನವಾದೀತು. ಹೇಗೆಂದರೆ : ಬ್ರಹ್ಮವು ಜಗತ್ತಿನಲ್ಲಿ ಓತ-ಪ್ರೋತವಾಗಿದೆ. ಆದರೆ ಜಗತ್ತನ್ನು ತಿಳಿದರೆ ಬ್ರಹ್ಮವನ್ನು ತಿಳಿದಂತಾಗಲಿಲ್ಲ. ಜಗತ್ತಿಗೆ ಬ್ರಹ್ಮವು ಅಧಿಷ್ಠಾನವಾಗಿದೆ.

ಯೋ ವೇದ ವೇದಾನ್ನ ಚ ವೇದ ವೇದ್ಯಂ
ನ ತಂ ವಿದುರ್ವೇದವಿದೋ ನ ವೇದಾಃ ।
ತಥಾಪಿ ವೇದೇನ ವಿದನ್ತಿ ವೇದಂ
ಯೇ ಬ್ರಾಹ್ಮಣಾ ವೇದವಿದೋ ಭವನ್ತಿ ॥೫೪॥

ಯಾವನು ಋಗಾದಿ ವೇದಗಳನ್ನು ತಿಳಿದಿರುವನೋ–ಅವನು ತಿಳಿಯಲು ಶಕ್ಯವಾದ ಈ ಪ್ರಪಂಚಸ್ವರೂಪವನ್ನು ತಿಳಿಯಬಲ್ಲನು. ಆದರೆ ವಾಚಾಮಗೋಚರನಾದ ಪರಮಾತ್ಮನನ್ನು ವೇದವಿದರೂ ತಿಳಿಯಲಾರರು ; ವೇದಗಳೂ ತಿಳಿಯಲಾರವು. ಆದರೆ ಯಾವ ಬ್ರಹ್ಮಜ್ಞಾನಿಗಳು ವೇದಗಳು ಪ್ರತಿಪಾದಿಸುವ ಪ್ರಕಾರವನ್ನು ತಿಳಿದಿರುವರೋ–ಅಂತಹ ಬ್ರಹ್ಮಜ್ಞಾನಿಗಳೇ ಪರಮಾತ್ಮನನ್ನು ತಿಳಿಯಬಲ್ಲರು.

ಯಾಮಾಂಶಭಾಗಸ್ಯ ತಥಾ ಹಿ ವೇದಾ
ಯಥಾ ಹಿ ಶಾಖಾ ಚ ಮಹೀರುಹಸ್ಯ ।
ಸಂವೇದನೇ ಚೈವ ಯಥಾಮನನ್ತಿ
ತಸ್ಮಿನ್ಹಿ ಸತ್ಯೇ ಪರಮಾತ್ಮನೋಽರ್ಥೇ ॥೫೫॥

ಚಂದ್ರಾಂಶಭಾಗವನ್ನು (ಪ್ರತಿಪಚ್ಚಂದ್ರಕಲೆಯನ್ನು) ನೋಡಲು ವೃಕ್ಷಶಾಖೆಯು ಹೇಗೆ ಕಾರಣವಾಗುತ್ತದೆಯೋ–ಹಾಗೆ ಪರಮಾತ್ಮನ ನಿತ್ಯವಾದ ಸ್ವರೂಪವನ್ನು ತಿಳಿಯಲು ವೇದಗಳು ಕಾರಣವೆಂದು ವಿದ್ವಾಂಸರು ಹೇಳುತ್ತಾರೆ.

('ತ್ರಿಯಾಮಶ್ಚಂದ್ರಃ' ಎಂದು ಶ್ರುತಿಯಿರುವುದರಿಂದ ಯಾಮವೆಂದರೆ ಚಂದ್ರನೆಂದು ಅರ್ಥ. ಪ್ರತಿಪಚ್ಚಂದ್ರನು ಅತಿಸೂಕ್ಷ್ಮರೂಪದಲ್ಲಿರುವುದರಿಂದ ಗಮನವಿಟ್ಟು ಹುಡುಕಿ ನೋಡಬೇಕಾಗುತ್ತದೆ.

ಈ ಮರದ ಕೊಂಬೆಯ ಸಂದಿನಿಂದ ಚಂದ್ರನನ್ನು ನೋಡಬಹುದೆಂದು ತೋರಿಸುವುದುಂಟು. ಆ ಸಂದಿನಲ್ಲಿ ನೋಡಿದಾಗ ಪ್ರತಿಪಚ್ಚಂದ್ರದರ್ಶನವು ಸಾಧ್ಯ. ಇದಕ್ಕೆ ಉಪದೇಶಕನೊಬ್ಬ ಬೇಕು. ಪ್ರೇಕ್ಷಕನೂ ಸೂಕ್ಷ್ಮವಸ್ತುವನ್ನು ಗಮನಿಸುವ ಸಾಮರ್ಥ್ಯವುಳ್ಳವನಾಗಿರಬೇಕು. ಮರದ ಕೊಂಬೆಯು ಉಪಾಯಮಾತ್ರ. ಇದಕ್ಕೆ ಶಾಖಾಚಂದ್ರನ್ಯಾಯವೆಂದು ಹೇಳುತ್ತಾರೆ. ಇದೇ ರೀತಿಯಲ್ಲಿ ಆತ್ಮದರ್ಶನಕ್ಕೆ ವೇದವು ಉಪಾಯ ಮಾತ್ರ. ಜ್ಞಾನಿಯಾದ ಗುರುವು ಬೇಕು. ನಿಷ್ಠೆಯುಳ್ಳ ಶಿಷ್ಯನೂ ಬೇಕು.)

**ಅಭಿಜಾನಾಮಿ ಬ್ರಾಹ್ಮಣಂ ವ್ಯಾಖ್ಯಾತಾರಂ ವಿಚಕ್ಷಣಮ್ ।**
**ಯಶ್ಛಿನ್ನವಿಚಿಕಿತ್ಸಃ ಸ ವ್ಯಾಚಷ್ಟೇ ಸರ್ವಸಂಶಯಾನ್ ॥೫೬॥**

ಈ ರೀತಿಯಲ್ಲಿ ವೇದಗಳ ಪ್ರತಿಪಾದನಪ್ರಕಾರವನ್ನು ಯಾವಾತನು ತಿಳಿದಿರುವನೋ, ಈ ವಿಷಯವನ್ನು ನಿಷ್ಕೃಷ್ಟನಾಗಿ ಯಾವನು ಪ್ರತಿಪಾದನೆ ಮಾಡುವನೋ, ಯಾವನು ಸಂಶಯವರ್ಜಿತನಾಗಿರುವನೋ ಮತ್ತು ಯಾವನು ಇತರರ ಮನಸ್ಸಿನಲ್ಲುಂಟಾಗುವ ಸಂಶಯವನ್ನು ಪರಿಹರಿಸುವ ಸಾಮರ್ಥ್ಯದಿಂದ ಕೂಡಿರುವನೋ--ಅಂತಹವನನ್ನೇ ನಾನು ಬ್ರಾಹ್ಮಣನೆಂದು ತಿಳಿಯುತ್ತೇನೆ.

(ಪಾಠಾಂತರದ ಪ್ರಕಾರ :

**ಅಭಿಜಾನಾಮಿ ಬ್ರಾಹ್ಮಣಮಾಖ್ಯಾತಾರಂ ವಿಚಕ್ಷಣಮ್ ।**
**ಏವಂ ಯೋಽಭಿವಿಜಾನಾತಿ ಸ ಜಾನಾತಿ ಪರಂ ಹಿ ತತ್ ॥**

ಈ ರೀತಿಯಲ್ಲಿ ವೇದಗಳ ಪ್ರತಿಪಾದನಪ್ರಕಾರವನ್ನು ಯಾವಾತನು ತಿಳಿದಿರುವನೋ–ಅವನನ್ನು ವಾಗ್ಮಿಯಾದ ಬ್ರಾಹ್ಮಣನೆಂದು ನಾನು ತಿಳಿಯುತ್ತೇನೆ. ಏಕೆಂದರೆ : ಈ ಪ್ರಕಾರವನ್ನು ಬಲ್ಲವನು ಪರಬ್ರಹ್ಮನನ್ನು ತಿಳಿದಿರುತ್ತಾನೆ.)

**ನಾಸ್ಯ ಪರ್ಯೇಷಣಂ ಗಚ್ಛೇತ್ಪ್ರಾಚೀನಂ ನೋತ ದಕ್ಷಿಣಮ್ ।**
**ನಾರ್ವಾಚೀನಂ ಕುತಸ್ತಿರ್ಯಙ್ನಾದಿಶಂ ತು ಕಥಞ್ಚನ ॥೫೭॥**

ಆತ್ಮನ ಅನ್ವೇಷಣೆಗಾಗಿ ಪೂರ್ವದಿಕ್ಕಿಗಾಗಲೀ, ದಕ್ಷಿಣದಿಕ್ಕಿಗಾಗಲೀ, ಪಶ್ಚಿಮದಿಕ್ಕಿಗಾಗಲೀ, ಉತ್ತರದಿಕ್ಕಿಗಾಗಲೀ–ಪ್ರಯಾಣಮಾಡಬೇಕಾಗಿಲ್ಲ ವೆಂದ ಮೇಲೆ ಆಗ್ನೇಯಾದಿ ಉಪದಿಕ್ಕುಗಳ ಕಡೆಗೆ ಹೋಗಬೇಕೆಂಬ ವಿಷಯವೇ

ಇಲ್ಲ. ಯಾವ ದಿಕ್ಕಿನಲ್ಲಿಯೂ ಆತ್ಮನು ಸಿಕ್ಕತಕ್ಕವನೂ ಅಲ್ಲ. (ದಿಕ್ಕುಗಳೇ ಇಲ್ಲದ ಜ್ಞಾನಾಕಾಶದಲ್ಲಿ ಮಾತ್ರವೇ ಸಿಕ್ಕುತ್ತಾನೆ.)

**ತಸ್ಯ ಪರ್ಯೇಷಣಂ ಗಚ್ಛೇತ್ಪ್ರತ್ಯರ್ಥಿಷು ಕಥಞ್ಚನ ।**
**ಅವಿಚಿನ್ವನ್ನಿಮಂ ವೇದೇ ತಪಃ ಪಶ್ಯತಿ ತಂ ಪ್ರಭುಮ್ ॥೫೮॥**

ಆತ್ಮವೆಂದೇ ಭ್ರಾಂತಿಗೊಳಿಸುವ ದೇಹೇಂದ್ರಿಯಾದಿ ಪಂಚಕೋಶಗಳಲ್ಲಿ ಕಷ್ಟಪಟ್ಟಾದರೂ ಆತ್ಮನನ್ನು ಹುಡುಕಲು ಯತ್ನಿಸಬೇಕು. ವೇದವಾಕ್ಯಗಳ ಮೂಲಕವಾಗಿ ಅವನನ್ನು ಹುಡುಕಿ ತಪಸ್ಸನ್ನು ಮಾಡಿ ಆ ಪ್ರಭುವನ್ನು ಕಾಣಬೇಕು. (ದೇಹೇಂದ್ರಿಯಾದಿಗಳಲ್ಲಿ ಹುಡುಕಾಡಿ ಆತ್ಮನೆಂದು ತೋರಿಕೆಗೆ ಕಾಣಿಸಿಕೊಳ್ಳುವ ದೇಹೇಂದ್ರಿಯಾದಿಗಳು ಆತ್ಮವಲ್ಲವೆಂದು ವೇದೋಪನಿಷತ್ತುಗಳ ಅಧ್ಯಯನದಿಂದ ನಿರ್ಧಾರಮಾಡಿಕೊಂಡು, ತಪಸ್ಸಿನ ಮೂಲಕವಾಗಿ ಅನುಸಂಧಾನಮಾಡುತ್ತಾ ಆತ್ಮಪ್ರಭುವಿನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು.)

(ಪಾಠಾಂತರದ ಪ್ರಕಾರ :

**ನಾಸ್ಯ ಪರ್ಯೇಷಣಂ ಗಚ್ಛೇತ್ಪ್ರತ್ಯರ್ಥಿಷು ಕದಾಚನ ।**
**ಅವಿಚಿನ್ವನ್ನಿಮಂ ವೇದೇ ತತಃ ಪಶ್ಯತಿ ತಂ ಪ್ರಭುಮ್ ॥೫೮॥**

ಆತ್ಮನಿಗೆ ಪ್ರತಿಪಕ್ಷವಾದ ದೇಹೇಂದ್ರಿಯಾದಿ ವಸ್ತುಗಳಲ್ಲಿ ಆತ್ಮನನ್ನು ಅರಸಬಾರದು. ಹಾಗೆ ಅರಸದೇ ಇರತಕ್ಕವನು ಅವುಗಳಿಗೆ ಸಾಕ್ಷಿಯಾದ ಆತ್ಮನು ಎಲ್ಲಿರುವನೆಂಬುದನ್ನು ಸಾಂಗವೇದಾಧ್ಯಯನದ ಮೂಲಕವಾಗಿ ಕಂಡುಕೊಂಡು ಅನಂತರ ತನ್ನ ಹೃದಯಕಮಲಮಧ್ಯದಲ್ಲಿ ಆ ಪ್ರಭುವನ್ನು ನೋಡುತ್ತಾನೆ.

ಸದಾ ಆತ್ಮನಿಷ್ಠನಾಗಬೇಕೆಂದೂ, ವಿಷಯಗಳಲ್ಲಿ ಆಸಕ್ತನಾಗಬಾರದೆಂದೂ ತಾತ್ಪರ್ಯ.)

**ತೂಷ್ಣೀಮ್ಭೂತ ಉಪಾಸೀತ ನ ಚೇಷ್ಟೇನ್ಮನಸಾಪಿ ಚ ।**
**ಉಪಾವರ್ತಸ್ವ ತದ್ಬ್ರಹ್ಮ ಅನ್ತರಾತ್ಮನಿ ವಿಶ್ರುತಮ್ ॥೫೯॥**

ವಾಗಾದಿ ಇಂದ್ರಿಯಗಳ ಸರ್ವಕರ್ಮಗಳನ್ನೂ ನಿಲ್ಲಿಸಿ ಪರಮಾತ್ಮನನ್ನು ಉಪಾಸನೆಮಾಡಬೇಕು. ಮನಸ್ಸಿನಿಂದಲೂ ಯಾವ ವಿಧವಾದ ಚೇಷ್ಟೆಯನ್ನೂ ಮಾಡಬಾರದು. (ಮನಸ್ಸೇ ಮಾನವನನ್ನು ಪ್ರತಿಕ್ಷಣ

ದಲ್ಲಿಯೂ ವಿಶ್ವಪರ್ಯಟನ ಮಾಡಿಸುತ್ತಿರುತ್ತದೆ.) ಮಹಾರಾಜ! ನೀನೂ ಸಹ ಹೃದಯಾಕಾಶದಲ್ಲಿರುವ ವಿಖ್ಯಾತನಾದ ಪರಮೇಶ್ವರನನ್ನು ಉಪಾಸನೆ ಮಾಡು.

(ಪಾಠಾಂತರದ ಪ್ರಕಾರ :

**ತೂಷ್ಣೀಮ್ಭೂತ ಉಪಾಸೀತ ನ ಚೇಚ್ಛೇನ್ಮನಸಾ ಅಪಿ ।**
**ಅಭ್ಯಾವರ್ತೇತ ಬ್ರಹ್ಮಾಸ್ಮೈ ಬಹ್ವನನ್ತರಮಾಪ್ನುಯಾತ್ ॥೫೯॥**

ತೂಷ್ಣೀಂಭೂತನಾಗಿ ಎಂದರೆ ಮೌನದಿಂದ ಕೇವಲಾತ್ಮನನ್ನು ಉಪಾಸನೆ ಮಾಡಬೇಕು. ಮನಸ್ಸಿನಿಂದಲೂ ವಿಷಯಗಳನ್ನು ಅಪೇಕ್ಷಿಸಬಾರದು. ಅನಂತರ ಭೂಮಸ್ವರೂಪವಾದ ಬ್ರಹ್ಮನನ್ನು ಪಡೆಯುತ್ತಾನೆ.

'ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ'–ಎಂಬ ಶ್ರುತಿವಾಕ್ಯವನ್ನು ಹೋಲಿಸಿಕೊಳ್ಳಬೇಕು.)

**ಮೌನಾನ್ನ ಸ ಮುನಿರ್ಭವತಿ ನಾರಣ್ಯವಸನಾನ್ಮುನಿಃ ।**
**ಸ್ವಲಕ್ಷಣಂ ತು ಯೋ ವೇದ ಸ ಮುನಿಃ ಶ್ರೇಷ್ಠ ಉಚ್ಯತೇ ॥೬೦॥**

ಮಾತನಾಡದೇ ಇರುವಿಕೆಯಿಂದಲೇ ಒಬ್ಬನು ಮುನಿಯಾಗುವುದಿಲ್ಲ. ಅಥವಾ ಅರಣ್ಯದಲ್ಲಿ ವಾಸಮಾಡುವುದರಿಂದಲೂ ಮುನಿಯಾಗುವುದಿಲ್ಲ. ತನ್ನ ಆತ್ಮಸ್ವರೂಪವನ್ನು ಯಾವನು ತಿಳಿದಿರುತ್ತಾನೋ ಅವನೇ ಮುನಿಶ್ರೇಷ್ಠನೆನಿಸಿಕೊಳ್ಳುತ್ತಾನೆ.

(ಪಾಠಾಂತರದ ಪ್ರಕಾರ :

**ಮೌನಾದ್ಧಿ ಮುನಿರ್ಭವತಿ ನಾರಣ್ಯವಸನಾನ್ಮುನಿಃ ।**
**ಅಕ್ಷರಂ ತಂ ತು ಯೋ ವೇದ ಸ ಮುನಿಃ ಶ್ರೇಷ್ಠ ಉಚ್ಯತೇ ॥೬೦॥**

ಮೌನದಿಂದ ಮುನಿಯಾಗುತ್ತಾನೆ ; ಅರಣ್ಯವಾಸವನ್ನು ಮಾಡುವುದರಿಂದಲ್ಲ. ಮೌನಿಗಳಲ್ಲಿಯೂ ಯಾವನು ಅವಿನಾಶಿಯಾದ ಪರಮಾತ್ಮನನ್ನು ತಿಳಿದಿರುವನೋ–ಅವನೇ ಮುನಿಶ್ರೇಷ್ಠನು.)

(ಆತ್ಮವ್ಯತಿರಿಕ್ತವಾದ ಸಕಲವಿಷಯಗಳಲ್ಲಿಯೂ ಅಭಿಲಾಷೆಯನ್ನು ವರ್ಜಿಸುವುದೇ ಮೌನ : ಮೌನಂ = ತೂಷ್ಣೀಂ ಭಾವಃ : ಮುನಿಃ = ತೂಷ್ಣೀಂ ಭೂತಃ.)

**ಸರ್ವಾರ್ಥಾನಾಂ ವ್ಯಾಕರಣಾದ್ವೈಯಾಕರಣ ಉಚ್ಯತೇ ।**
**ತನ್ಮೂಲತೋ ವ್ಯಾಕರಣಂ ವ್ಯಾಕರೋತೀತಿ ತತ್ತಥಾ ॥೬೧॥**

ಸರ್ವಪದಾರ್ಥಗಳನ್ನೂ ಬಿಡಿಸಿ ವಿಂಗಡಿಸಿ ತೋರಿಸತಕ್ಕವನು ವೈಯಾಕರಣನೆನಿಸುವನು. ಆತ್ಮನಿಂದಲೇ ಸಕಲಪದಾರ್ಥಗಳ ವ್ಯಾಕರಣವು ನಡೆದಿದೆ. **'ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'** ಎಂಬ ಶ್ರುತಿಯಂತೆ ಪರಮಾತ್ಮನೇ ನಿಜವಾದ ವೈಯಾಕರಣ. ಪರಮಾತ್ಮನನ್ನು ತಿಳಿದವನು ವೈಯಾಕರಣಿಯೇ ಸರಿ. ಏಕೆಂದರೆ : ಬ್ರಹ್ಮವಸ್ತುವನ್ನು ಈತನು ವ್ಯಾಕರಣ (ವಿವರಣೆ) ಮಾಡುತ್ತಾನೆ.

**ಪ್ರತ್ಯಕ್ಷದರ್ಶೀ ಲೋಕಾನಾಂ ಸರ್ವದರ್ಶೀ ಭವೇನ್ನರಃ ।**
**ಸತ್ಯೇ ವೈ ಬ್ರಾಹ್ಮಣಸ್ತಿಷ್ಠಂಸ್ತದ್ವಿದ್ವಾನ್ಸರ್ವವಿದ್ಭವೇತ್ ॥೬೨॥**

ಸತ್ಯವಾದ ಬ್ರಹ್ಮನಲ್ಲಿ ನಿರತನಾದ ವಿದ್ವಾಂಸನು ಸಕಲಲೋಕಗಳನ್ನೂ ಪ್ರತ್ಯಕ್ಷವಾಗಿ ನೋಡುತ್ತಾನೆ. ಅವನು ಸರ್ವಾತ್ಮನಾದ ಭಗವಂತನನ್ನು ನೋಡುತ್ತಾನೆ. ಅವನೇ ಸರ್ವಜ್ಞ.

**ಧರ್ಮಾದಿಷು ಸ್ಥಿತೋಽಪ್ಯೇವಂ ಕ್ಷತ್ರಿಯ ಬ್ರಹ್ಮ ಪಶ್ಯತಿ ।**
**ವೇದಾನಾಂ ಚಾನುಪೂರ್ವ್ಯೇಣ ಏತದ್ಬುದ್ಧ್ಯಾ ಬ್ರವೀಮಿ ತೇ ॥೬೩॥**

ಮಹಾರಾಜ! ಹಿಂದೆ ಹೇಳಿರುವ ಧರ್ಮಗಳನ್ನಾಚರಿಸುತ್ತಾ, ವೇದಗಳನ್ನು ವಿಧಿವತ್ತಾಗಿ ಅಧ್ಯಯನಮಾಡುತ್ತಾ ಇರತಕ್ಕವನು ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾನೆ. ನಾನೀ ವಿಷಯವನ್ನು ಬುದ್ಧಿಪೂರ್ವಕವಾಗಿ ಹೇಳುತ್ತಿದ್ದೇನೆ."

(ಪಾಠಾಂತರದ ಪ್ರಕಾರ :

**ಜ್ಞಾನಾದಿಷು ಸ್ಥಿತೋಽಪ್ಯೇವಂ ಕ್ಷತ್ರಿಯ ಬ್ರಹ್ಮ ಪಶ್ಯತಿ ।**
**ವೇದಾನಾಂ ಚಾನುಪೂರ್ವ್ಯೇಣ ಚೈತದ್ವಿದ್ವನ್ ಬ್ರವೀಮಿ ತೇ ॥೬೪॥**

ಧೃತರಾಷ್ಟ್ರ! ಜ್ಞಾನ, ಸತ್ಯ ಮುಂತಾದ ಗುಣಗಳನ್ನು ಪಡೆದಿರುವವನು ವೇದಾಂತವನ್ನು ಕ್ರಮವಾಗಿ ಶ್ರವಣಮಾಡಿ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ವೇದಾಂತಗಳ ವಿಚಾರಪ್ರಕಾರವನ್ನು ಇನ್ನು ಮುಂದೆ ನಿನಗೆ ತಿಳಿಸುತ್ತೇನೆ.")

ಳ೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ಸನತ್ಸುಜಾತಪರ್ವ (ಮುಂದುವರಿದಿದೆ.)

## ಬ್ರಹ್ಮಚರ್ಯದ ಮತ್ತು ಪರಬ್ರಹ್ಮವಸ್ತುವಿನ ನಿರೂಪಣೆ

ಜನಮೇಜಯ! ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಸನತ್ಸುಜಾತ ಯಾಮಿಮಾಂ ಪರಾಂ ತ್ವಂ**
**ಬ್ರಾಹ್ಮೀಂ ವಾಚಂ ವದಸೇ ವಿಶ್ವರೂಪಾಮ್ ।**
**ಪರಾಂ ಹಿ ಕಾಮೇನ ಸುದುರ್ಲಭಾಂ ಕಥಾಂ**
**ಪ್ರಬ್ರೂಹಿ ಮೇ ವಾಕ್ಯಮಿದಂ ಕುಮಾರ ॥೧॥**

"ಸನತ್ಸುಜಾತರೇ! ನೀವು ಸರ್ವೋತ್ತಮವಾದ, ಬಹುರೂಪವಾದ, ಬ್ರಹ್ಮಸಂಬಂಧಿಯಾದ ಮಾತನ್ನು ಹೇಳುತ್ತಿದ್ದೀರಿ. ಇದು ವಿಷಯೇಚ್ಛೆಯುಳ್ಳವರಿಗೆ ಸುದುರ್ಲಭವಾದ, ಶ್ರೇಷ್ಠವಾದ ವಿದ್ಯೆಯೆಂದೂ ಹೇಳುತ್ತಿದ್ದೀರಿ. ಈ ಬ್ರಾಹ್ಮೀವಾಣಿಯನ್ನೇ ತಾವು ಮತ್ತೂ ವಿಶದವಾಗಿ, ಸ್ಪಷ್ಟವಾಗಿ ಹೇಳಿರಿ."

(ಪಾಠಾಂತರದ ಪ್ರಕಾರ :

**ಸನತ್ಸುಜಾತ ಯದಿಮಾಂ ಪರಾರ್ಥಾಂ**
**ಬ್ರಾಹ್ಮೀಂ ವಾಚಂ ವದಸೇ ವಿಶ್ವರೂಪಾಮ್ ।**
**ಪರಾಂ ಹಿ ಕಾರ್ಯೇಷು ಸುದುರ್ಲಭಾಂ ಕಥಾಂ**
**ಪ್ರಬ್ರೂಹಿ ಮೇ ವಾಕ್ಯಮೇವಂ ಕುಮಾರ ॥೧॥**

"ಸನತ್ಸುಜಾತರೇ! ಪರಮಪುರುಷಾರ್ಥಕ್ಕೆ ಸಾಧನವಾದ ಬ್ರಹ್ಮಸಂಬಂಧಿಯಾದ ವಾಣಿಯು ಅನೇಕರೂಪವಾಗಿದೆಯೆಂದೂ, ಪ್ರಪಂಚದಲ್ಲಿ ಉತ್ಕೃಷ್ಟವಾದ ಈ ವಿಚಾರವಾಣಿಯು ಸುದುರ್ಲಭವೆಂದೂ–ತಾವು ಹೇಳುತ್ತಿದ್ದೀರಿ. ಇದನ್ನು ತಾವೇ ನನಗೆ ವಿವರಿಸಿ ಹೇಳಬೇಕು.")

ಸನತ್ಸುಜಾತರು ಹೇಳುತ್ತಾರೆ :

**ನೈತದ್ಬ್ರಹ್ಮ ತ್ವರಮಾಣೇನ ಲಭ್ಯಂ**
**ಯನ್ಮಾಂ ಪೃಚ್ಛಸ್ಯತಿ ಹೃಷ್ಯತೀವ ।**

**ಬುದ್ಧೌ ವಿಲೀನೇ ಮನಸಿ ಪ್ರಚಿನ್ತ್ಯಾ**
**ವಿದ್ಯಾ ಹಿ ಸಾ ಬ್ರಹ್ಮಚರ್ಯೇಣ ಲಭ್ಯಾ ॥೨॥**

"ನಿಜ, ಧೃತರಾಷ್ಟ್ರ! ಇದು ಸಾಮಾನ್ಯರಿಗೆ, ವಿಷಯಾಸಕ್ತರಿಗೆ ಸುದುರ್ಲಭವಾದುದೇ ಸರಿ. ಈ ಬ್ರಹ್ಮವಿದ್ಯೆಯು ಅವಸರಪಡತಕ್ಕವನಿಗೆ ಲಭ್ಯವಾಗತಕ್ಕುದ್ದಲ್ಲ. ನೀನೇನೋ ಬ್ರಹ್ಮಸಾಕ್ಷಾತ್ಕಾರವೇ ಆಗಿಬಿಡುವುದೆಂಬ ಭ್ರಾಂತಿಯಿಂದ ನನ್ನ ಮಾತುಗಳನ್ನು ಕೇಳಿ ಹರ್ಷಿತನಾಗಿ ಪುನಃ ಪುನಃ ಪ್ರಶ್ನಿಸುತ್ತಿರುವೆ. ಬುದ್ಧಿಯಲ್ಲಿ ಲೀನಗೊಳಿಸಿದ ಮನಸ್ಸಿನಿಂದ (ಸಂಕಲ್ಪ-ವಿಕಲ್ಪಗಳಿಲ್ಲದ ಮನಸ್ಸಿನಿಂದ) ಈ ಬ್ರಹ್ಮವಿದ್ಯೆಯು ಬ್ರಹ್ಮಚರ್ಯವ್ರತಾನುಷ್ಠಾನವುಳ್ಳವನಿಗೆ ಮಾತ್ರ ಲಭ್ಯವಾಗುತ್ತದೆ."

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

**ಅತ್ಯನ್ತವಿದ್ಯಾಮಿತಿ ಯತ್ಸನಾತನೀಂ**
**ಬ್ರವೀಷಿ ತ್ವಂ ಬ್ರಹ್ಮಚರ್ಯೇಣ ಸಿದ್ಧಾಮ್ ।**
**ಅನಾರಭ್ಯಾಂ ವಸತೀಹ ಕಾರ್ಯಕಾಲೇ**
**ಕಥಂ ಬ್ರಾಹ್ಮಣ್ಯಮಮೃತತ್ವಂ ಲಭೇತ ॥೩॥**

"ಅವಿನಾಶಿಯಾದ, ಸನಾತನವಾದ ಪರಬ್ರಹ್ಮವಿದ್ಯೆಯೆಂಬುದು ಯಾವುದಿರುವುದೋ–ಅದನ್ನು ನೀವು ಬ್ರಹ್ಮಚರ್ಯೆಯಿಂದ ಸಿದ್ಧಿಯಾಗುವುದೆಂದು ಹೇಳುತ್ತಿರುವಿರಿ. ಆದರೆ ಬ್ರಹ್ಮವಿದ್ಯೆಗೆ ಕರ್ಮವೆಂಬುದೊಂದಿಲ್ಲ. ಆದುದರಿಂದ ಕರ್ಮದ ಆರಂಭವೂ ಇಲ್ಲ. ಎಲ್ಲ ಕರ್ಮಗಳನ್ನೂ ಮಾಡುವ ಎಲ್ಲ ಕಾಲಗಳಲ್ಲಿಯೂ ಇದು ಸರ್ವತ್ರ ವ್ಯಾಪಿಸಿರುತ್ತದೆ. ಅಥವಾ ಸರ್ವತ್ರ ವಾಸಮಾಡಿಕೊಂಡಿರುತ್ತದೆ."

('ಈ ವಿದ್ಯೆಯಿಂದ ಬ್ರಹ್ಮಸಂಬಂಧವಾದ ಅಮೃತತ್ವವು ಹೇಗೆ ಉಂಟಾಗುತ್ತದೆ? ಬ್ರಹ್ಮಚರ್ಯದಿಂದ ಈ ವಿದ್ಯೆಯು ಸಿದ್ಧಿಯಾಗುತ್ತದೆ ಎಂದು ಹೇಳಿದ್ದರಿಂದ ಬ್ರಹ್ಮಚರ್ಯವ್ರತಸ್ಥನಾಗಿರುವಾಗ ಬ್ರಹ್ಮವಿದ್ಯೆಯನ್ನು ಪಡೆಯಲು ಯಾವುದಾದರೂ ಕರ್ಮವಾದರೂ ಇರಬೇಕು. ಬ್ರಹ್ಮವು ಸರ್ವವ್ಯಾಪಿಯಾದುದು.; ಸರ್ವತ್ರ ಇರತಕ್ಕದ್ದು.; ಸರ್ವರಲ್ಲಿಯೂ ಇರತಕ್ಕದ್ದು–ಎಂದು ಹೇಳುವುದಾದರೆ ಬ್ರಹ್ಮಚರ್ಯವ್ರತಸ್ಥನಿಂದಲೇ ಇದರ ಸಾಧನೆಯಾಗ

ಬೇಕು-ಎಂಬ ನಿಯಮದ ಕಾರಣವೇನು? ತನ್ನೊಳಗೇ ಇರುವುದನ್ನು ಬುದ್ಧಿಯಲ್ಲಿ ವಿಲೀನವಾದ ಮನಸ್ಸಿನ ಮೂಲಕವಾಗಿ ಅನ್ವೇಷಣೆಮಾಡ ಬೇಕೆಂದು ಹೇಳಿದನಂತರ ಬ್ರಹ್ಮಚರ್ಯೆಯಿಂದ ಇದು ಸಿದ್ಧವಾಗುತ್ತದೆ ಎಂದೇಕೆ ಹೇಳಿದಿರಿ?'-ಎಂಬುದು ಧೃತರಾಷ್ಟ್ರನ ಪ್ರಶ್ನೆಯಾಗಿದೆ.)

ಸನತ್ಸುಜಾತರು ಉತ್ತರಿಸುತ್ತಾರೆ.:

**ಅವ್ಯಕ್ತವಿದ್ಯಾಮಭಿಧಾಸ್ಯೇ ಪುರಾಣೀಂ**
**ಬುದ್ಧ್ಯಾ ಚ ತೇಷಾಂ ಬ್ರಹ್ಮಚರ್ಯೇಣ ಸಿದ್ಧಾಮ್ ।**
**ಯಾಂ ಪ್ರಾಪ್ಯೈನಂ ಮರ್ತ್ಯಲೋಕಂ ತ್ಯಜನ್ತಿ**
**ಯಾ ವೈ ವಿದ್ಯಾ ಗುರುವೃದ್ಧೇಷು ನಿತ್ಯಾ ॥೪॥**

"ಧೃತರಾಷ್ಟ್ರ! ನಾನೀಗ ಸನಾತನವಾದ ಅವ್ಯಕ್ತವಿದ್ಯೆಯ ವಿಷಯವನ್ನು ನಿನಗೆ ಹೇಳುತ್ತೇನೆ. (ಇದು ಬಾಹ್ಯಪ್ರಪಂಚಕ್ಕೆ ತೋರಿಸಬಹುದಾದ ವಿದ್ಯೆಯಲ್ಲ. ಅಂತರಂಗದಲ್ಲಿ ಮಾತ್ರವೇ ಸಚ್ಚಿದಾನಂದಘನಸ್ವರೂಪನಾದ ಪರಬ್ರಹ್ಮನನ್ನು ಕಂಡುಕೊಳ್ಳುವ ವಿದ್ಯೆ.) ಈ ಮಹಾವಿದ್ಯೆಯ ಪ್ರಾಪ್ತಿಗೆ ಮುಖ್ಯವಾಗಿ ಬೇಕಾದುದು ಬ್ರಹ್ಮಚರ್ಯೆ. ಬ್ರಹ್ಮಚರ್ಯೆಯಿಂದಲೂ ಮತ್ತು ನಿರ್ವಿಕಾರವಾದ ಬುದ್ಧಿಯಿಂದಲೂ ಸಿದ್ಧಿಯಾಗುವ ಮಹಾವಿದ್ಯೆಯಿದು. ಬ್ರಹ್ಮಚರ್ಯೆ ಮತ್ತು ನಿರ್ವಿಕಾರಬುದ್ಧಿ-ಈ ಎರಡೇ ಮಹಾವಿದ್ಯೆಯ ಸಾಧನೆಗೆ ಬೇಕಾದ ಮುಖ್ಯವಾದ ಉಪಕರಣಗಳು. ಈ ಮಹಾವಿದ್ಯೆಯ ಸಾಧನೆಯಿಂದಾಗಿ ಸಾಧಕನು ಜನನ-ಮರಣಧರ್ಮಗಳುಳ್ಳ ಈ ಶರೀರವನ್ನು ತ್ಯಜಿಸುತ್ತಾನೆ. ಈ ಮಹಾವಿದ್ಯೆಯು ಗುರುವಿನಿಂದ ಉಪದೇಶದ ಮೂಲಕ ವರ್ಧಿತರಾದ ಶಿಷ್ಯರಲ್ಲಿ ನಿಯತವಾಗಿರುತ್ತದೆ."

(ಪಾಠಾಂತರದ ಪ್ರಕಾರ :

ಆದ್ಯಾಂ ವಿದ್ಯಾಂ ವದಸಿ ಹಿ ಸತ್ಯರೂಪಾಂ
ಯಾ ಪ್ರಾಪ್ಯತೇ ಬ್ರಹ್ಮಚರ್ಯೇಣ ಸದ್ಭಿಃ ।
ಯಾಂ ಪ್ರಾಪ್ಯೈನಂ ಮರ್ತ್ಯಭಾವಂ ತ್ಯಜನ್ತಿ
ಯಾ ವೈ ವಿದ್ಯಾ ಗುರುವೃದ್ಧೇಷು ನೀತಾ ॥೪॥

"ಪರಮಾರ್ಥರೂಪವಾದ ಆದ್ಯವಿದ್ಯೆಯನ್ನು ಹೇಳಬೇಕೆಂದು ಕೇಳು

ತ್ತಿರುವೆಯಲ್ಲವೆ? ಈ ವಿದ್ಯೆಯು ಬ್ರಹ್ಮಚರ್ಯಾದಿ ಸಾಧನಗಳಿಂದ ಮಾತ್ರವೇ ಸಾಧುಜನರಿಗೆ ಲಭ್ಯವಾಗುತ್ತದೆ. ಇದರಿಂದ ಮನುಷ್ಯನು ಸಾವನ್ನು ತಪ್ಪಿಸಿ ಕೊಂಡು ಅಮರನಾಗುತ್ತಾನೆ. ಈ ವಿದ್ಯೆಯು ಗುರುವಿನಿಂದ ವಿದ್ಯೋಪದೇಶದ ಮೂಲಕ ವರ್ಧಿತರಾದ ಶಿಷ್ಯಜನರಲ್ಲಿ ನಿಯತವಾಗಿರುತ್ತದೆ."

(ಸರ್ವಪ್ರಪಂಚಕ್ಕೂ ಆದಿಯಾದುದು ಬ್ರಹ್ಮ. ಆದ್ದರಿಂದ ಬ್ರಹ್ಮ ವಿದ್ಯೆಯು ಆದ್ಯವಿದ್ಯೆ ಎನಿಸಿಕೊಂಡಿದೆ. **ಗುರುವೃದ್ಧೇಷು = ಗುರುಣಾ ವೃದ್ಧೇಷು ವರ್ಧಿತೇಷು.**)

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

**ಬ್ರಹ್ಮಚರ್ಯೇಣ ಯಾ ವಿದ್ಯಾ ಶಕ್ಯಾ ವೇದಿತುಮಞ್ಜಸಾ ।**
**ತತ್ಕಥಂ ಬ್ರಹ್ಮಚರ್ಯಂ ಸ್ಯಾದೇತದ್ವಿದ್ವನ್ಬ್ರವೀಹಿ ಮೇ ॥೫॥**

"ಪಂಡಿತೋತ್ತಮರೇ! ಯಾವ ಮಹಾವಿದ್ಯೆಯು ಬ್ರಹ್ಮಚರ್ಯೆಯಿಂದ ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯವಾಗುವುದೋ–ಅಂತಹ ಮಹಾವಿದ್ಯೆಗೆ ಸಾಧನಭೂತವಾದ ಬ್ರಹ್ಮಚರ್ಯದ ಲಕ್ಷಣಗಳೇನೆಂಬುದನ್ನು ದಯಮಾಡಿ ತಿಳಿಸಿರಿ."

ಸನತ್ಸುಜಾತರು ಹೇಳುತ್ತಾರೆ :

**ಆಚಾರ್ಯಯೋನಿಮಿಹ ಯೇ ಪ್ರವಿಶ್ಯ**
**ಭೂತ್ವಾ ಗರ್ಭೇ ಬ್ರಹ್ಮಚರ್ಯಂ ಚರನ್ತಿ ।**
**ಇಹೈವ ತೇ ಶಾಸ್ತ್ರಕಾರಾ ಭವನ್ತಿ**
**ಪ್ರಹಾಯ ದೇಹಂ ಪರಮಂ ಯಾನ್ತಿ ಯೋಗಮ್ ॥**

"ಮಹಾರಾಜ! ಯಾರು ಆಚಾರ್ಯರ ಯೋನಿಯನ್ನು (ಆಶ್ರಮವನ್ನು) ಪ್ರವೇಶಿಸಿ ಆಚಾರ್ಯರ ಗರ್ಭದಲ್ಲಿದ್ದುಕೊಂಡು (ಆಚಾರ್ಯರ ರಕ್ಷಣೆಗೊಳಪಟ್ಟು) ಬ್ರಹ್ಮಚರ್ಯವ್ರತಾನುಷ್ಠಾನಮಾಡುತ್ತಾ ಗುರುಗಳ ದಿವ್ಯಾನುಗ್ರಹಕ್ಕೆ ಪಾತ್ರರಾಗುತ್ತಾರೆಯೋ–ಅಂತಹವರು ಈ ಲೋಕ ದಲ್ಲಿಯೇ ಶಾಸ್ತ್ರಕಾರರಾಗುತ್ತಾರೆ. (ಬ್ರಹ್ಮಭಾವವನ್ನು ಹೊಂದುತ್ತಾರೆ.) ಪರಬ್ರಹ್ಮನ ಹೊರತಾಗಿ ಮತ್ತಾರೂ ಶಾಸ್ತ್ರಕಾರರಾಗುವುದಿಲ್ಲ. 'ಮಹತೋ ಭೂತಸ್ಯ ನಿಶ್ವಸಿತಮೇತದೃಗ್ವೇದಃ' ಇತ್ಯಾದಿ ವಾಕ್ಯ

ಗಳಿಂದ ಬ್ರಹ್ಮಸ್ವರೂಪರು ಮಾತ್ರವೇ ಶಾಸ್ತ್ರವನ್ನು ರಚಿಸಬಲ್ಲರು. ಈ ಲೋಕದಲ್ಲಿಯೇ ಮತ್ತು ಈ ಶರೀರದಲ್ಲಿಯೇ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು, ದೇಹವನ್ನು ತೊರೆದನಂತರವೂ ಬ್ರಹ್ಮನಲ್ಲಿ ಐಕ್ಯಹೊಂದಿ ಪುನರಾವೃತ್ತಿರಹಿತರಾಗುತ್ತಾರೆ.

('ವಿಹಾಯ ದೇಹಂ ಪರಮಂ ಯಾನ್ತಿ ಸತ್ಯಂ' ಎಂಬ ಪಾಠಾಂತರದಂತೆ 'ಪ್ರಾರಬ್ಧಕರ್ಮವು ತೀರಿದ ಮೇಲೆ ದೇಹವನ್ನು ಬಿಟ್ಟು ಪರಮಾತ್ಮನನ್ನು ಸೇರುತ್ತಾರೆ.' )

ಅಸ್ಮಿಲ್ಲೋಕೇ ವೈ ಜಯನ್ತೀಹಕಾಮಾ-
ನ್ಬ್ರಾಹ್ಮೀಂ ಸ್ಥಿತಿಂ ಹ್ಯನುತಿತಿಕ್ಷಮಾಣಾಃ ।
ತ ಆತ್ಮಾನಂ ನಿರ್ಹರನ್ತೀಹ ದೇಹಾ-
ನ್ಮುಂಜಾದಿಷೀಕಾಮಿವ ಸತ್ತ್ವಸಂಸ್ಥಾಃ ॥೭॥

ಯಾರು ಈ ಲೋಕದಲ್ಲಿಯೇ ಇದ್ದುಕೊಂಡಿದ್ದರೂ ಸಕಲಕಾಮನೆಗಳನ್ನೂ ಜಯಿಸಿ (ಪರಿತ್ಯಜಿಸಿ), ಬ್ರಾಹ್ಮೀಸ್ಥಿತಿಯನ್ನೇ – ಬ್ರಹ್ಮಭಾವವನ್ನೇ ಅಪೇಕ್ಷಿಸುತ್ತಾ, ಸರ್ವಕಾಲಗಳಲ್ಲಿಯೂ ಅದಕ್ಕಾಗಿಯೇ ಸಾಧನೆಮಾಡುತ್ತಿರುತ್ತಾರೆಯೋ–ಅಂತಹವರು ಮೌಂಜಿ ಹುಲ್ಲಿನಿಂದ ಅದರೊಳಗಿರುವ ಮೃದುವಾದ ಕಾಂಡವನ್ನು ಬೇರ್ಪಡಿಸುವಂತೆ–ಅಂತಹ ಸತ್ತ್ವಗುಣದಲ್ಲಿರುವವರು ದೇಹಾತ್ಮಗಳನ್ನು ಪ್ರತ್ಯೇಕಿಸಿ ಎರಡರ ಸ್ವರೂಪಗಳನ್ನೂ ತಿಳಿದುಕೊಳ್ಳುತ್ತಾರೆ.

(ಮುಂಜವೆಂಬುದು ಒಂದು ಬಗೆಯ ಹುಲ್ಲು. (ನೊಜೆಹುಲ್ಲು) ವಟುವಿಗೆ ಮೌಂಜೀದಾರವನ್ನು ಇದರಿಂದ ಮಾಡುತ್ತಾರೆ. (ಇದರೊಳಗಿರುವ ಮೃದುವಾದ ಕಾಂಡವೇ ಇಷೀಕಾ. ದೇಹದಿಂದ ಆತ್ಮನನ್ನು ಬೇರ್ಪಡಿಸುವುದೆಂದರೆ : ಆತ್ಮನು ಅನ್ನಮಯಾದಿಪಂಚಕೋಶಾತಿರಿಕ್ತನೆಂದು ತಿಳಿಯುವುದು.)

ಶರೀರಮೇತೌ ಕುರುತಃ ಪಿತಾ ಮಾತಾ ಚ ಭಾರತ ।
ಆಚಾರ್ಯಶಾಸ್ತಾ ಯಾ ಜಾತಿಃ ಸಾ ಪುಣ್ಯಾ ಸಾಜರಾಮರಾ ॥೮॥

ಮಹಾರಾಜ! ಮಾತಾ-ಪಿತೃಗಳು ಈ ಶರೀರವನ್ನು ಮಾತ್ರ ಕಲ್ಪಿಸುತ್ತಾರೆ. ಆದರೆ ಮಾತಾ-ಪಿತೃದತ್ತವಾದ ಈ ಶರೀರವು ಅನ್ವರ್ಥವಾಗಿ

ನಶಿಸಿಹೋಗುವುದೇ ಆಗಿರುತ್ತದೆ. ಆದರೆ ಆಚಾರ್ಯನ ಉಪದೇಶದಿಂದ ಪ್ರಾಪ್ತವಾಗುವ ಮತ್ತೊಂದು ಜನ್ಮವು ಪರಮಪವಿತ್ರವಾದುದೂ, ಮುಪ್ಪು–ಸಾವುಗಳಿಂದ ವಿಹೀನವಾದುದೂ ಆಗಿರುತ್ತದೆ. (ಆಚಾರ್ಯನ ಉಪದೇಶ ದಿಂದ ಪ್ರಾಪ್ತವಾಗುವ ಬ್ರಹ್ಮಜ್ಞಾನದಿಂದ 'ಶರೀರವು ನಾನಲ್ಲ' ಎಂಬ ಜ್ಞಾನವು ಉಂಟಾಗಿಬಿಟ್ಟರೆ ಬ್ರಹ್ಮನಲ್ಲಿ ತಾದಾತ್ಮ್ಯಭಾವವುಂಟಾದರೆ ಜರಾ-ಮರಣಗಳ ಭಯವೇ ಇರುವುದಿಲ್ಲ.)

(ಪಾಠಾಂತರದಂತೆ :

**ಶರೀರಮೇತೌ ಕುರುತಃ ಪಿತಾ ಮಾತಾ ಚ ಭಾರತ ।**
**ಆಚಾರ್ಯತಸ್ತು ಯಜ್ಜನ್ಮ ತತ್ಸತ್ಯಂ ವೈ ತಥಾಮೃತಮ್ ॥೮॥**

ಧೃತರಾಷ್ಟ್ರ! ಮಾತಾ-ಪಿತೃಗಳು ಈ ಶರೀರವನ್ನು ಮಾತ್ರ ನಿರ್ಮಾಣಮಾಡುತ್ತಾರೆ. ಆಚಾರ್ಯರಿಂದ ಆಗುವ ಜ್ಞಾನವೇ ಸತ್ಯವಾದುದು. ಅಮೃತವಾದುದು.)

ಆರನೆಯ ಶ್ಲೋಕದಲ್ಲಿ ಆಚಾರ್ಯನನ್ನು ಗರ್ಭಕೋಶವೆಂದು ಕರೆದಿದೆ. ಆಚಾರ್ಯನು ಗರ್ಭಕೋಶವಾಗುವ ಅಥವಾ ಜನಕನಾಗುವ ಬಗೆ ಹೇಗೆಂದು ಇಲ್ಲಿ ವಿವರಿಸಿದ್ದಾರೆ. ಆಚಾರ್ಯನಿಂದ ಶಿಷ್ಯನು ತನ್ನ ಜೀವತ್ವವನ್ನು ಕಳೆದುಕೊಂಡು ಅದ್ವಿತೀಯಬ್ರಹ್ಮಸ್ವರೂಪನಾಗುತ್ತಾನೆ. ಈ ಸ್ಥಿತಿಯೇ ನಾಶವರ್ಜಿತವಾದ ಜನ್ಮ. ಆದ್ದರಿಂದ ಆಚಾರ್ಯನು ಜನ್ಮದಾತನಾಗಿ ನಿಜವಾದ ಜನಕನೆನಿಸುತ್ತಾನೆ. ಪ್ರಶ್ನೋಪನಿಷತ್ತಿನಲ್ಲಿ ಸುಕೇಶ–ಮುಂತಾದ ಶಿಷ್ಯರು ಪಿಪ್ಪಲಾದಮುನಿಯಿಂದ ಬ್ರಹ್ಮೋಪದೇಶವನ್ನು ಪಡೆದು ಹೀಗೆ ಹೇಳುತ್ತಾರೆ : **'ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರಯಸಿ'**. 'ಅವಿದ್ಯೆಯ ಆಚೆಯ ದಡಕ್ಕೆ ದಾಟಿಸಿದ ನೀನೇ ನಮ್ಮ ತಂದೆ.'

ಆಪಸ್ತಂಬರೂ ಆಚಾರ್ಯನೇ ನಿಜವಾದ ತಂದೆಯೆಂದು ಹೇಳುತ್ತಾರೆ :

**'ಸ ಹಿ ವಿದ್ಯಾತಸ್ತಂ ಜನಯತಿ । ತಚ್ಛ್ರೇಷ್ಠಂ ಜನ್ಮ । ಶರೀರಮೇವ ಮಾತಾಪಿತರೌ ಜನಯತಃ'**

'ಆಚಾರ್ಯನು ವಿದ್ಯೋಪದೇಶದಿಂದ ಶಿಷ್ಯನನ್ನು ಉತ್ಪಾದಿಸು

ತ್ತಾನೆ. ಅದೇ ಶ್ರೇಷ್ಠವಾದ ಜನ್ಮ. ತಂದೆ-ತಾಯಿಗಳು ದೇಹವನ್ನು ಮಾತ್ರ ಉತ್ಪಾದಿಸುತ್ತಾರೆ.'

ದ್ವಿಜ-ದ್ವಿಜನ್ಮ ಎಂಬ ಶಬ್ದಗಳೂ ಈ ಅಭಿಪ್ರಾಯದಿಂದಲೇ ಬಂದಿವೆ. ಬ್ರಹ್ಮೋಪದೇಶವು ಎರಡನೆಯ ಜನ್ಮ.

* * * *

ಯಃ ಪ್ರಾವೃಣೋತ್ಯವಿತಥೇನ ವರ್ಣಾ–
ನೃತಂ ಕುರ್ವನ್ನಮೃತಂ ಸಮ್ಪ್ರಯಚ್ಛನ್ ।
ತಂ ಮನ್ಯೇತ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ಕೃತಮಸ್ಯ ಜಾನನ್ ॥೯॥

ಯಾವ ಮಹಾಗುರುವು ಬ್ರಾಹ್ಮಣಾದಿ ವರ್ಣಗಳನ್ನು ಸುಳ್ಳಿನಿಂದ ಹೊರತಾದ ಸತ್ಯದಿಂದ ಮುಚ್ಚಿಬಿಡುತ್ತಾನೆಯೋ, ಎಲ್ಲರನ್ನೂ ಪರಬ್ರಹ್ಮ ಸ್ವರೂಪರನ್ನಾಗಿ ಪರಿವರ್ತಿಸಿ ಅಮೃತತ್ವವನ್ನು ದಯಪಾಲಿಸುತ್ತಾನೆಯೋ– ಅಂತಹ ಮಹಾಗುರುವನ್ನು ತಂದೆಯೆಂದೂ, ತಾಯಿಯೆಂದೂ ಭಾವಿಸಬೇಕು. ಮಾನವನನ್ನು ಅಮರನನ್ನಾಗಿ ಮಾಡುವ ಮಹಾಗುರುವಿನ ಅನುಗ್ರಹವನ್ನು ಬಾರಿ-ಬಾರಿಗೂ ನೆನೆಯುತ್ತಾ ಮನಸ್ಸಿನಿಂದಲೂ ಅಂತಹ ಪರಮಗುರುವಿಗೆ ದ್ರೋಹವನ್ನೆಸಗಬಾರದು.

ಗುರುಂ ಶಿಷ್ಯೋ ನಿತ್ಯಮಭಿವಾದಯೀತ
ಸ್ವಾಧ್ಯಾಯಮಿಚ್ಛೇಚ್ಛುಚಿರಪ್ರಮತ್ತಃ ।
ಮಾನಂ ನ ಕುರ್ಯಾನ್ನಾದಧೀತ ರೋಷ –
ಮೇಷ ಪ್ರಥಮೋ ಬ್ರಹ್ಮಚರ್ಯಸ್ಯ ಪಾದಃ ॥೧೦॥

ಶಿಷ್ಯನಾದವನು ಪ್ರತಿನಿತ್ಯವೂ ಗುರುವಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಮಾಡಬೇಕು. ಅಂತಃಶುದ್ಧನಾಗಿಯೂ–ಬಹಿಃಶುದ್ಧನಾಗಿಯೂ ಇರಬೇಕು. ಸರ್ವದಾ ಅಪ್ರಮತ್ತನಾಗಿದ್ದುಕೊಂಡು ವೇದಾಧ್ಯಯನದಲ್ಲಿ ನಿರತನಾಗಿರಬೇಕು. ದೇಹಾಭಿಮಾನವನ್ನಿಟ್ಟುಕೊಳ್ಳಕೂಡದು. ಯಾವುದೇ ಸಂದರ್ಭದಲ್ಲಿಯೂ ಕೋಪಕ್ಕೆ ಎಡೆಗೊಡಬಾರದು. ಇವಿಷ್ಟೂ ಬ್ರಹ್ಮಚರ್ಯವ್ರತದ ಮೊದಲನೆಯ ಪಾದಕ್ಕೆ ಸೇರಿದ ನಿಯಮಗಳಾಗಿವೆ.

(ಪಾಠಾಂತರದಂತೆ :

ಸ ಆವೃಣೋತ್ಯಮೃತಂ ಸಮ್ಪ್ರಯಚ್ಛನ್
ತಸ್ಮೈ ನ ದ್ರುಹ್ಯೇತ್ಕೃತಮಸ್ಯ ಜಾನನ್ ।
ಗುರುಂ ಶಿಷ್ಯೋ ನಿತ್ಯಮಭಿವಾದಯೀತ
ಸ್ವಾಧ್ಯಾಯಮಿಚ್ಛೇಚ್ಚ ಸದಾಪ್ರಮತ್ತಃ ॥

ಗುರುವು ಅಮೃತರೂಪವಾದ ಪೂರ್ಣಾನಂದಬ್ರಹ್ಮವನ್ನು ಸಾಕ್ಷಾತ್ಕರಿಸಿ ಕೊಟ್ಟು ಶಿಷ್ಯನನ್ನು ರಕ್ಷಿಸುತ್ತಾನೆ. ತನಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು ಶಿಷ್ಯನು ಗುರುವಿಗೆ ಯಾವ ಸಂದರ್ಭದಲ್ಲಿಯೂ ದ್ರೋಹಮಾಡಕೂಡದು. ನಿತ್ಯವೂ ಗುರುವಿನ ಸೇವೆಮಾಡುತ್ತಾ, ಅಪ್ರಮತ್ತನಾಗಿ ಶ್ರವಣ- ಮನನಾದಿಗಳಲ್ಲಿ ನಿರತನಾಗಿರಬೇಕು.)

ಶಿಷ್ಯವೃತ್ತಿಕ್ರಮೇಣೈವ ವಿದ್ಯಾಮಾಪ್ನೋತಿ ಯಃ ಶುಚಿಃ ।
ಬ್ರಹ್ಮಚರ್ಯವ್ರತಸ್ಯಾಸ್ಯ ಪ್ರಥಮಃ ಪಾದ ಉಚ್ಯತೇ ॥೧೧॥

ಅಂತಃಶುದ್ಧಿ-ಬಹಿಃಶುದ್ಧಿಗಳಿಂದ ಕೂಡಿರುವ ಯಾವ ಬ್ರಹ್ಮಚಾರಿಯು ಶಿಷ್ಯವೃತ್ತಿಕ್ರಮದಿಂದಲೇ ವಿದ್ಯೆಯನ್ನು ಅಭ್ಯಸಿಸುತ್ತಾನೆಯೋ–ಅಂತಹ ಬ್ರಹ್ಮ ಚಾರಿಯು ಗುರುಶುಶ್ರೂಷೆಯಿಂದಲೇ ಪಡೆಯುವ ವಿದ್ಯಾಭ್ಯಾಸವೂ ಬ್ರಹ್ಮ ಚರ್ಯವ್ರತಕ್ಕೆ ಪ್ರಥಮಪಾದವೆನಿಸಿಕೊಳ್ಳುತ್ತದೆ.

ಆಚಾರ್ಯಸ್ಯ ಪ್ರಿಯಂ ಕುರ್ಯಾತ್ಪ್ರಾಣೈರಪಿ ಧನೈರಪಿ ।
ಕರ್ಮಣಾ ಮನಸಾ ವಾಚಾ ದ್ವಿತೀಯಃ ಪಾದ ಉಚ್ಯತೇ ॥೧೨॥

ಶಿಷ್ಯನು ಧನವನ್ನು ಕೊಟ್ಟಾದರೂ, ಪ್ರಾಣವನ್ನು ತೆತ್ತಾದರೂ– ಆಚಾರ್ಯನಿಗೆ ಕರ್ಮದಿಂದಲೂ, ಮಾತಿನಿಂದಲೂ, ಮನಸ್ಸಿನಿಂದಲೂ ಪ್ರಿಯ ವಾದುದನ್ನೇ ಮಾಡಬೇಕು. ಇದು ಬ್ರಹ್ಮಚರ್ಯವ್ರತದ ಎರಡನೆಯ ಪಾದ ವೆನಿಸಿಕೊಳ್ಳುತ್ತದೆ.

ಸಮಾ ಗುರೌ ಯಥಾ ವೃತ್ತಿರ್ಗುರುಪತ್ನ್ಯಾಂ ತಥಾಚರೇತ್ ।
ತತ್ಪುತ್ರೇ ಚ ತಥಾ ಕುರ್ವನ್ದ್ವಿತೀಯಃ ಪಾದ ಉಚ್ಯತೇ ॥೧೩॥

ಶಿಷ್ಯನಿಗೆ ಗುರುವಿನ ವಿಷಯದಲ್ಲಿ ಯಾವ ವಿಧವಾದ ವೃತ್ತಿಯಿರು ವುದೋ (ನಡತೆಯಿರುವುದೋ) ಗುರುಪತ್ನಿಯ ವಿಷಯದಲ್ಲಿಯೂ ಅದೇ ವಿಧವಾದ ವೃತ್ತಿ–ಗೌರವಗಳಿರಬೇಕು. ಗುರುಪುತ್ರರನ್ನೂ ಅದೇ ವಿಧವಾದ

ಗೌರವದಿಂದಲೇ ಕಾಣಬೇಕು. (**ಗುರುವದ್ಗುರುಪುತ್ರೇಷು ಗುರುವದ್ಗುರು ಬಂಧುಷು**–ಎಂಬಂತೆ ಗುರು, ಗುರುಪತ್ನೀ ಮತ್ತು ಗುರುಪುತ್ರ–ಇವರುಗಳಲ್ಲಿ ಯಾವ ವಿಧವಾದ ಭೇದವನ್ನೂ ಎಣಿಸದೇ ಎಲ್ಲರನ್ನೂ ಸಮಾನವಾಗಿ ಗೌರವಿಸಬೇಕು.) ಇದೂ ಸಹ ಬ್ರಹ್ಮಚರ್ಯವ್ರತದ ಎರಡನೆಯ ಪಾದವೆನಿಸಿಕೊಳ್ಳುತ್ತದೆ.

(ಈ ಶ್ಲೋಕದ ಪಾಠಾಂತರವು ಈ ರೀತಿಯಾಗಿದೆ :

**ಯಥಾ ನಿತ್ಯಂ ಗುರೌ ವೃತ್ತಿರ್ಗುರುಪತ್ನ್ಯಾಂ ತಥಾಚರೇತ್ ।**
**ತತ್ಪುತ್ರೇ ಚ ತಥಾ ಕುರ್ವನ್ದ್ವಿತೀಯಃ ಪಾದ ಉಚ್ಯತೇ ॥**

ಗುರುವಿನಲ್ಲಿ ನಡೆದುಕೊಳ್ಳುವಂತೆ ಗುರುಪತ್ನೀ ಮತ್ತು ಗುರುಪುತ್ರರ ವಿಷಯದಲ್ಲಿಯೂ ನಡೆದುಕೊಳ್ಳುವುದು ಬ್ರಹ್ಮಚರ್ಯದ ದ್ವಿತೀಯಪಾದ.)

**ಆಚಾರ್ಯೇಣಾತ್ಮಕೃತಂ ವಿಜಾನನ್**
**ಜ್ಞಾತ್ವಾ ಚಾರ್ಥಂ ಭಾವಿತೋಽಸ್ಮೀತ್ಯನೇನ ।**
**ಯನ್ಮನ್ಯತೇ ತಂ ಪ್ರತಿಹೃಷ್ಟಬುದ್ಧಿಃ**
**ಸ ವೈ ತೃತೀಯೋ ಬ್ರಹ್ಮಚರ್ಯಸ್ಯ ಪಾದಃ ॥೧೪॥**

ಗುರುವಿನಿಂದ ತನಗಾದ ಉಪಕಾರವನ್ನು ಸ್ಮರಿಸಿಕೊಳ್ಳುತ್ತಾ–'ವೇದಾರ್ಥವನ್ನು ತಿಳಿದು ಈ ಗುರುವಿನಿಂದ ನಾನು ಪರಿಶುದ್ಧನಾದೆನು'–ಎಂದು ಭಾವಿಸಿಕೊಂಡು, ಗುರುವಿನ ವಿಷಯದಲ್ಲಿ ಹರ್ಷವನ್ನು ತಳೆದು, ತಾನು ಕೃತಕೃತ್ಯನಾದೆನೆಂದು ತಿಳಿಯುವುದು–ಬ್ರಹ್ಮಚರ್ಯದ ತೃತೀಯ ಪಾದವೆನಿಸಿಕೊಳ್ಳುತ್ತದೆ.

**ನಾಚಾರ್ಯಸ್ಯಾನಪಾಕೃತ್ಯ ಪ್ರವಾಸಂ**
**ಪ್ರಾಜ್ಞಃ ಕುರ್ವೀತ ನೈತದಹಂ ಕರೋಮಿ ।**
**ಇತೀವ ಮನ್ಯೇತ ನ ಭಾಷಯೇತ**
**ಸ ವೈ ಚತುರ್ಥೋ ಬ್ರಹ್ಮಚರ್ಯಸ್ಯ ಪಾದಃ ॥೧೫॥**

ವಿದ್ಯಾಭ್ಯಾಸವು ಅಥವಾ ಬ್ರಹ್ಮವಿದ್ಯೋಪದೇಶವು ಮುಗಿದನಂತರ ಬ್ರಹ್ಮೋಪದೇಶವನ್ನು ಮಾಡಿದ ಆಚಾರ್ಯನಿಗೆ ಗುರುದಕ್ಷಿಣೆಯನ್ನು ಕೊಡುವುದರ ಮೂಲಕವಾಗಿ ಗೌರವಿಸದೇ ಪ್ರಾಜ್ಞನಾದವನು (ಪ್ರಾಜ್ಞನಾದ

ಶಿಷ್ಯನು) ಗುರುವನ್ನು ಬಿಟ್ಟು ಪ್ರವಾಸ ಹೊರಟುಬಿಡಬಾರದು. ಗುರುವು ಆಶಿಸಿದ ಗುರುದಕ್ಷಿಣೆಯನ್ನು ಕೊಟ್ಟನಂತರವೂ–'ನಾನು ಗುರುಗಳಿಗೆ ಈ ವಿಧವಾದ ಉಪಕಾರಮಾಡುತ್ತಿದ್ದೇನೆ'–ಎಂದು ಭಾವಿಸಲೂಬಾರದು. 'ವಿದ್ಯೆಯನ್ನು ಹೇಳಿಕೊಟ್ಟ ಗುರುಗಳಿಗೆ ಈ ರೀತಿಯಲ್ಲಿ ನಾನು ಉಪಕಾರ ಮಾಡಿದೆನು'–ಎಂದೂ ಸಹ ಯಾರೊಬ್ಬರಲ್ಲಿಯೂ ಹೇಳಲೂಬಾರದು. ಈ ನಿಯಮವು ಬ್ರಹ್ಮಚರ್ಯವ್ರತದ ನಾಲ್ಕನೆಯ ಪಾದವಾಗಿರುತ್ತದೆ.

**ಕಾಲೇನ ಪಾದಂ ಲಭತೇ ತಥಾರ್ಥಂ**
**ತತಶ್ಚ ಪಾದಂ ಗುರುಯೋಗತಶ್ಚ ।**
**ಉತ್ಸಾಹಯೋಗೇನ ಚ ಪಾದಮೃಚ್ಛೇ-**
**ಚ್ಛಾಸ್ತ್ರೇಣ ಪಾದಂ ಚ ತತೋಽಭಿಯಾತಿ ॥೧೬॥**

ಶಿಷ್ಯನು ಮೊದಲು ಗುರುವಿನಿಂದ ವಿದ್ಯೆಯ ಒಂದು ಭಾಗವನ್ನೂ–ಆಮೇಲೆ ಉತ್ಸಾಹಪೂರಿತವಾದ ತನ್ನ ವಿಚಾರಶಕ್ತಿಯಿಂದ ಇನ್ನೊಂದು ಭಾಗವನ್ನೂ, ಕಾಲಕ್ರಮದಲ್ಲಿ ಉಂಟಾಗುವ ಬುದ್ಧಿಪರಿಪಾಕದಿಂದ ಮತ್ತೊಂದು ಭಾಗವನ್ನೂ, ಶಾಸ್ತ್ರಚಿಂತನೆಮಾಡುವುದರಿಂದ ಉಳಿದೊಂದು ಭಾಗವನ್ನೂ ಪಡೆಯುತ್ತಾನೆ.

(ಈ ಶ್ಲೋಕದಲ್ಲಿ ಕ್ರಮವು ವಿವಕ್ಷಿತವಲ್ಲ. ಆದುದರಿಂದ ಅರ್ಥ ಮಾಡುವಾಗ ಕ್ರಮವನ್ನು ಸ್ವಲ್ಪ ಮಾರ್ಪಡಿಸಿದೆ. ಇದಕ್ಕೆ ಅನುಗುಣವಾದ ಈ ಶ್ಲೋಕವನ್ನು ಗಮನಿಸಬೇಕು :

**ಆಚಾರ್ಯಾತ್ಪಾದಮಾದತ್ತೇ ಪಾದಂ ಶಿಷ್ಯಃ ಸ್ವಮೇಧಯಾ ।**
**ಕಾಲೇನ ಪಾದಮಾದತ್ತೇ ಪಾದಂ ಸಬ್ರಹ್ಮಚಾರಿಭಿಃ ॥**

ಆಚಾರ್ಯನಿಂದ ವಿದ್ಯೆಯ ಒಂದು ಭಾಗವನ್ನೂ, ಸ್ವಬುದ್ಧಿಶಕ್ತಿಯಿಂದ ಎರಡನೆಯ ಭಾಗವನ್ನೂ, ಕಾಲಕ್ರಮದಿಂದ ಉಂಟಾದ ಅನುಭವದಿಂದ ಮೂರನೆಯ ಭಾಗವನ್ನೂ, ಸಹಪಾಠಿಗಳೊಡನೆ ಶಾಸ್ತ್ರಚಿಂತನೆಮಾಡುತ್ತಾ ನಾಲ್ಕನೆಯ ಭಾಗವನ್ನೂ ತಿಳಿದುಕೊಳ್ಳುತ್ತಾನೆ.)

**ಧರ್ಮಾದಯೋ ದ್ವಾದಶ ಯಸ್ಯ ರೂಪ-**
**ಮನ್ಯಾನಿ ಚಾಙ್ಗಾನಿ ತಥಾ ಬಲಂ ಚ ।**

ಆಚಾರ್ಯಯೋಗೇ ಫಲತೀತಿ ಚಾಹು–
ರ್ಬ್ರಹ್ಮಾರ್ಥಯೋಗೇನ ಚ ಬ್ರಹ್ಮಚರ್ಯಮ್ ॥೧೭॥

ಶಿಷ್ಯನಿಗೆ ಯಾವ ಧರ್ಮಾದಿ ದ್ವಾದಶಗುಣಗಳೂ, ತ್ಯಾಗ-ಸತ್ಯಾದಿಗಳೂ ಮತ್ತು ಅವನ್ನು ಪರಿಪಾಲಿಸುವ ಸಾಮರ್ಥ್ಯವೂ ಇರುವುವೋ–ಅವೆಲ್ಲವೂ ಆಚಾರ್ಯನ ನೆರವಿನಿಂದಲೇ ಫಲಿಸುತ್ತವೆ. ಬ್ರಹ್ಮಚರ್ಯವೂ ಬ್ರಹ್ಮವಸ್ತು ಲಾಭವಾಗುವುದರ ಮೂಲಕ ಸಫಲವಾಗುತ್ತದೆ.

(ಆಚಾರ್ಯಸನ್ನಿಧಾನದಿಂದಲೇ ಫಲಸಿದ್ಧಿಯೆಂದು ಈ ಶ್ಲೋಕದ ಅಭಿಪ್ರಾಯ. ಈ ಹಿಂದೆ ಧರ್ಮಾದಿ ದ್ವಾದಶಗುಣಗಳನ್ನೂ, ತ್ಯಾಗ-ಸತ್ಯಗಳನ್ನೂ ವಿವರಿಸಿ ಹೇಳಿದೆ. 'ಆಚಾರ್ಯವಾನ್ ಪುರುಷೋ ವೇದ'–ಎಂಬ ಶ್ರುತಿಯೇ ಇದಕ್ಕೆ ಆಧಾರ.)

ಏವಂ ಪ್ರವೃತ್ತೋ ಯದುಪಾಲಭೇತ ವೈ
ಧನಮಾಚಾರ್ಯಾಯ ತದನುಪ್ರಯಚ್ಛೇತ್ ।
ಸತಾಂ ವೃತ್ತಿಂ ಬಹುಗುಣಾಮೇವಮೇತಿ
ಗುರೋಃ ಪುತ್ರೇ ಭವತಿ ಚ ವೃತ್ತಿರೇಷಾ ॥೧೮॥

ಈ ವಿಧವಾಗಿ ನಾಲ್ಕು ಪಾದಗಳಿಂದ ಪೂರ್ಣವಾದ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸಿಕೊಂಡಿದ್ದು ವಿದ್ಯಾಭ್ಯಾಸವು ಮುಗಿದನಂತರದಲ್ಲಿ ಜೀವನ ನಿರ್ವಹಣೆಗೆ ಯೋಗ್ಯವಾದ ವಸ್ತುಗಳನ್ನು ಸ್ವಸಾಮರ್ಥ್ಯದಿಂದ ಪಡೆದುಕೊಂಡು ಅದನ್ನು ಆಚಾರ್ಯನಿಗೆ ಸಮರ್ಪಿಸಬೇಕು. ಹೀಗೆ ಮಾಡುವುದರಿಂದ ಬ್ರಹ್ಮಚಾರಿಯು ಸತ್ಪುರುಷರಲ್ಲಿರಬೇಕಾದ ಅನೇಕವಿಧವಾದ ಸದ್ಗುಣಗಳನ್ನು ಪಡೆದುಕೊಳ್ಳುತ್ತಾನೆ. ಬ್ರಹ್ಮಚಾರಿಯಾದವನು ಗುರುಪುತ್ರನ ವಿಷಯದಲ್ಲಿಯೂ ಹೀಗೆಯೇ ನಡೆದುಕೊಳ್ಳಬೇಕು.

ಏವಂ ವಸನ್ಸರ್ವತೋ ವರ್ಧತೀಹ
ಬಹೂನ್ಪುತ್ರಾಲ್ಲಭತೇ ಚ ಪ್ರತಿಷ್ಠಾಮ್ ।
ವರ್ಷನ್ತಿ ಚಾಸ್ಮೈ ಪ್ರದಿಶೋ ದಿಶಶ್ಚ
ವಸನ್ತ್ಯಸ್ಮಿನ್ಬ್ರಹ್ಮಚರ್ಯೇ ಜನಾಶ್ಚ ॥೧೯॥

ಈ ರೀತಿಯಲ್ಲಿ ಬ್ರಹ್ಮಚರ್ಯವ್ರತವನ್ನು ಪರಿಸಮಾಪ್ತಿಗೊಳಿಸಿದ ಬ್ರಹ್ಮಚಾರಿಯು ಮುಂದೆ ಸರ್ವತೋಮುಖವಾಗಿ ಅಭಿವೃದ್ಧಿಹೊಂದುತ್ತಾನೆ.

ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಅನೇಕಪುತ್ರರನ್ನೂ ಮತ್ತು ಕೀರ್ತಿಯನ್ನೂ ಪಡೆಯುತ್ತಾನೆ. ದಶದಿಕ್ಕುಗಳಿಂದಲೂ ಇವನಿಗೆ ಧನದ ಮಳೆಯೇ ಸುರಿದು ಹೋಗುತ್ತದೆ. (ಎಲ್ಲ ಕಡೆಗಳಲ್ಲಿರುವ ಜನರು ಆಗಮಿಸಿ ಧನ-ಕನಕ-ವಸ್ತುಗಳನ್ನಿತ್ತು ಇವನನ್ನು ಗೌರವಿಸುತ್ತಾರೆ.) ಇವನು ತನ್ನ ಗುರುಗಳ ಸಮೀಪಕ್ಕೆ ಹೋಗಿ ಬ್ರಹ್ಮವಿದ್ಯೆಯನ್ನು ತಿಳಿದುಕೊಂಡು ಬಂದಂತೆ–ಇವನ ಸಮೀಪಕ್ಕೂ ಜನರು ಬ್ರಹ್ಮವಿದ್ಯೆಯನ್ನು ತಿಳಿಯುವ ಸಲುವಾಗಿ ಬಂದು ಬ್ರಹ್ಮಚರ್ಯವ್ರತದ ಪರಿಪಾಲನಮಾಡುತ್ತಾ ಇವನ ಆಶ್ರಯದಲ್ಲಿರುತ್ತಾರೆ.

**ಏತೇನ ಬ್ರಹ್ಮಚರ್ಯೇಣ ದೇವಾ ದೇವತ್ವಮಾಪ್ನುವನ್ ।**
**ಋಷಯಶ್ಚ ಮಹಾಭಾಗಾ ಬ್ರಹ್ಮಲೋಕಂ ಮನೀಷಿಣಃ ॥೨೦॥**

**ಗನ್ಧರ್ವಾಣಾಮನೇನೈವ ರೂಪಮಪ್ಸರಸಾಮಭೂತ್ ।**
**ಏತೇನ ಬ್ರಹ್ಮಚರ್ಯೇಣ ಸೂರ್ಯೋಽಪ್ಯಹ್ನಾಯ ಜಾಯತೇ ॥೨೧॥**

ಈ ಬ್ರಹ್ಮಚರ್ಯವ್ರತದ ಅನುಷ್ಠಾನದಿಂದಲೇ ದೇವತೆಗಳು ದೇವತ್ವವನ್ನು ಪಡೆದರು. ಮಹಾಭಾಗರಾದ ಮನನಶೀಲರಾದ ಋಷಿಗಳು ಬ್ರಹ್ಮಲೋಕವನ್ನು ಪಡೆದರು. ಗಂಧರ್ವರೂ, ಅಪ್ಸರೆಯರೂ ಸುಂದರವಾದ ರೂಪವನ್ನು ಪಡೆದರು. ಈ ಬ್ರಹ್ಮಚರ್ಯದಿಂದಲೇ ಸೂರ್ಯನು ಜಗತ್ತನ್ನು ಬೆಳಗಲು ಸಮರ್ಥನಾಗಿರುತ್ತಾನೆ.

**ಆಕಾಂಕ್ಷಾರ್ಥಸ್ಯ ಸಂಯೋಗಾದ್ರಸಭೇದಾರ್ಥಿನಾಮಿವ ।**
**ಏವಂ ಹ್ಯೇತೇ ಸಮಾಜ್ಞಾಯ ತಾದೃಗ್ಭಾವಂ ಗತಾ ಇಮೇ ॥೨೨॥**

ಬೇರೆ-ಬೇರೆ ರಸವಸ್ತುಗಳನ್ನು ಬಯಸುವವರಿಗೆ ಚಿಂತಾಮಣಿ-ಕಲ್ಪವೃಕ್ಷಾದಿಗಳು ಆಯಾ ವಸ್ತುಗಳನ್ನು ಕೊಡುವಂತೆ–ಬ್ರಹ್ಮಚರ್ಯವು ಅಭೀಷ್ಟಾರ್ಥವನ್ನು ಕರುಣಿಸುತ್ತದೆ. ಆದುದರಿಂದ ಬ್ರಹ್ಮಚರ್ಯೆಯನ್ನು ಆಚರಿಸಿ ದೇವಾದಿಗಳೂ ಅನಂತವಿಭೂತಿಗಳನ್ನು ಪಡೆದುಕೊಂಡಿದ್ದಾರೆ.

**ಯ ಆಶ್ರಯೇತ್ಪಾವಯೇಚ್ಚಾಪಿ ರಾಜ–**
**ನ್ಸರ್ವಂ ಶರೀರಂ ತಪಸಾ ತಪ್ಯಮಾನಃ ।**
**ಏತೇನ ವೈ ಬಾಲ್ಯಮಭ್ಯೇತಿ ವಿದ್ವಾ–**
**ನ್ಮೃತ್ಯುಂ ತಥಾ ಸ ಜಯತ್ಯನ್ತಕಾಲೇ ॥೨೩॥**

ಯಾವನು ಬ್ರಹ್ಮಚರ್ಯಾಶ್ರಮದಲ್ಲಿದ್ದುಕೊಂಡು ಗುರುಶುಶ್ರೂಷಾ ರೂಪವಾದ ತಪಸ್ಸಿನಿಂದಲೂ, ಯಮ-ನಿಯಮಾದಿಗಳಿಂದಲೂ ತನ್ನ ಸಂಪೂರ್ಣ ಶರೀರವನ್ನೂ ಪವಿತ್ರಗೊಳಿಸುತ್ತಾನೆಯೋ–ಅಂತಹವನಿಗೆ ಈ ವಿಧವಾದ ತಪಸ್ಸಿನಿಂದಾಗಿ ಅಂತಃಶುದ್ಧಿ-ಬಹಿಃಶುದ್ಧಿಗ್ಗಳೆರಡೂ ಆಗುತ್ತವೆ. ಈ ವಿಧವಾದ ಬ್ರಹ್ಮಚರ್ಯವ್ರತಾನುಷ್ಠಾನದಿಂದ ವಿದ್ವಾಂಸನು ಬಾಲ್ಯಭಾವವನ್ನು (ರಾಗ-ದ್ವೇಷಗಳಿಂದ ಶೂನ್ಯವಾದ ಒಂದು ಸ್ಥಿತಿಯನ್ನು) ಪಡೆದುಕೊಳ್ಳುತ್ತಾನೆ. ಅಂತ್ಯದಲ್ಲಿ ಆ ಬ್ರಹ್ಮಚಾರಿಯು ಮೃತ್ಯುವನ್ನೂ ಜಯಿಸುತ್ತಾನೆ.

ಅನ್ತವತಃ ಕ್ಷತ್ರಿಯ ತೇ ಜಯನ್ತಿ
ಲೋಕಾಞ್ಜನಾಃ ಕರ್ಮಣಾ ನಿರ್ಮಲೇನ ।
ಬ್ರಹ್ಮೈವ ವಿದ್ವಾಂಸ್ತೇನ ಚಾಭ್ಯೇತಿ ಸರ್ವಂ
ನಾನ್ಯಃ ಪನ್ಥಾ ಅಯನಾಯ ವಿದ್ಯತೇ ॥೨೪॥

ಕ್ಷತ್ರಿಯಸತ್ತಮ! ಸತ್ಕರ್ಮಗಳಿಂದ ಪ್ರಾಪ್ತವಾಗುವ ಪುಣ್ಯವಿಶೇಷದಿಂದ ಅವಿದ್ವಾಂಸರು ಅಶಾಶ್ವತವಾದ ಸ್ವರ್ಗಾದಿಲೋಕಗಳನ್ನು ಜಯಿಸುತ್ತಾರೆ. (ಪಡೆಯುತ್ತಾರೆ.) ಆದರೆ ಬ್ರಹ್ಮಭೂತರಾದ, ಆತ್ಮಸಾಕ್ಷಾತ್ಕಾರಮಾಡಿಕೊಂಡ ವಿದ್ವಾಂಸರು ಬ್ರಹ್ಮಸಾಕ್ಷಾತ್ಕಾರದಿಂದಾಗಿ ಸಕಲವನ್ನೂ ಪಡೆದುಕೊಳ್ಳುತ್ತಾರೆ. ಮೋಕ್ಷಕ್ಕೆ ಆತ್ಮಜ್ಞಾನದ ಹೊರತಾಗಿ ಬೇರೆಯ ಮಾರ್ಗವೇ ಇಲ್ಲ.

(ಜ್ಞಾನೇನ ವಿದ್ವಾನ್ತೇಜ ಅಭ್ಯೇತಿ ನಿತ್ಯಂ ।
ನ ವಿದ್ಯತೇ ಹ್ಯನ್ಯಥಾ ತಸ್ಯ ಪನ್ಥಾಃ ॥
ಎಂಬ ಪಾಠಾಂತರದ ಪ್ರಕಾರ :

ಜ್ಞಾನದಿಂದ ಅವಿನಾಶಿಯಾದ ಆತ್ಮಜ್ಯೋತಿಯನ್ನು ಪಡೆಯುತ್ತಾನೆ. ಜ್ಞಾನವನ್ನು ಬಿಟ್ಟರೆ ಮೋಕ್ಷಾರ್ಥಿಗಳಿಗೆ ಅನ್ಯಮಾರ್ಗವೇ ಇಲ್ಲ.” )

ಧೃತರಾಷ್ಟ್ರನು ಪ್ರಶ್ನಿಸುತ್ತಾನೆ :

ಆಭಾತಿ ಶುಕ್ಲಮಿವ ಲೋಹಿತಮಿವಾಥೋ
ಕೃಷ್ಣಮಥಾಞ್ಜನಂ ಕಾದ್ರವಂ ವಾ ।

**ಸದ್ಬ್ರಹ್ಮಣಃ ಪಶ್ಯತಿ ಯೋಽತ್ರ ವಿದ್ವಾ–**
**ನ್ಕಥಂ ರೂಪಂ ತದಮೃತಮಕ್ಷರಂ ಪದಮ್ ॥೨೫॥**

"ವಿದ್ವಾಂಸನಾದ ಬ್ರಹ್ಮಜ್ಞಾನಿಯು ನೋಡಬಹುದಾದ ಅಮೃತ ಸ್ವರೂಪವಾದ ಪರಬ್ರಹ್ಮವು ಯಾವ ರೂಪವುಳ್ಳದ್ದು? ಅದು ಬೆಳ್ಳಗಿರುವುದೋ? ಕಪ್ಪುಬಣ್ಣದ್ದೋ? ಅಥವಾ ಅದು ಹೊಗೆಯಂತೆ ಮಾಸಲಾಗಿರುವುದೋ? ಅದು ಯಾವ ಸ್ಥಳದಲ್ಲಿರುವುದು?"

ಸನತ್ಸುಜಾತರು ಉತ್ತರಿಸುತ್ತಾರೆ :

**ಆಭಾತಿ ಶುಕ್ಲಮಿವ ಲೋಹಿತಮಿವಾಥೋ**
**ಕೃಷ್ಣಮಾಯಸಮರ್ಕವರ್ಣಮ್ ।**
**ನ ಪೃಥಿವ್ಯಾಂ ತಿಷ್ಠತಿ ನಾನ್ತರಿಕ್ಷೇ**
**ನೈತತ್ಸಮುದ್ರೇ ಸಲಿಲಂ ಬಿಭರ್ತಿ ॥೨೬॥**

"ಮಹಾರಾಜ! ಪರಬ್ರಹ್ಮವಸ್ತುವು ಬಿಳುಪಾಗಿರುವಂತೆಯೂ, ಕೆಂಪಾಗಿರುವಂತೆಯೂ, ಕಪ್ಪಾಗಿರುವಂತೆಯೂ, ಲೋಹಸದೃಶವಾಗಿಯೂ, ಸೂರ್ಯನಿಗೆ ಸಮಾನವಾದ ಕಾಂತಿಯುತವಾಗಿಯೂ–ನಾನಾರೂಪಗಳಿಂದ ಭಾಸಮಾನವಾಗುವುದೇನೋ ನಿಜ. ಆದರೆ ಅದು ಭೂಮಿಯ ಮೇಲಾಗಲೀ, ಅಂತರಿಕ್ಷದಲ್ಲಾಗಲೀ, ಸಮುದ್ರದಲ್ಲಾಗಲೀ ಇಲ್ಲ. ಏಕೆಂದರೆ : ಅದು ಪಂಚಭೂತಾತ್ಮಕವಾದ ಶರೀರವನ್ನು ಧರಿಸಿಲ್ಲ. (ಹೀಗೆ ಕಾಣಿಸಿಕೊಳ್ಳುವುದು ಬ್ರಹ್ಮಪ್ರಾಪ್ತಿಯ ಚಿಹ್ನೆಗಳೇ ಹೊರತಾಗಿ ಇದೇ ಸಾಕ್ಷಾತ್ ಬ್ರಹ್ಮಸ್ವರೂಪವಲ್ಲ.)

(ಈ ವಿಷಯವನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೀಗೆ ಹೇಳಿದೆ :

ನೀಹಾರಧೂಮಾರ್ಕಾನಿಲಾನಲಾನಾಂ
ಖದ್ಯೋತವಿದ್ಯುತ್ಸ್ಫಟಿಕಶಶೀನಾಮ್ ।
ಏತಾನಿ ರೂಪಾಣಿ ಪುರಃಸರಾಣಿ
ಬ್ರಹ್ಮಣ್ಯಭಿವ್ಯಕ್ತಿಕರಾಣಿ ಯೋಗೇ ॥

ಬ್ರಹ್ಮಸಾಕ್ಷಾತ್ಕಾರವಾಗುವ ಮೊದಲು ಮಂಜು, ಹೊಗೆ, ಸೂರ್ಯ, ಬೆಂಕಿ, ನಕ್ಷತ್ರ, ಮಿಂಚು, ಸ್ಫಟಿಕ, ಚಂದ್ರ–ಇತ್ಯಾದಿ ರೂಪಗಳೆಲ್ಲವೂ ಕಾಣಿಸಿಕೊಳ್ಳುತ್ತವೆ.)

(ಪಾಠಾಂತರದ ಪ್ರಕಾರ :

ನಾಭಾತಿ ಶುಕ್ಲಮಿವ ಲೋಹಿತಮಿವಾಥೋ
ಕೃಷ್ಣಮಥಾರ್ಜುನಂ ಕಾದ್ರವಂ ವಾ ।
ನ ಪೃಥಿವ್ಯಾಂ ತಿಷ್ಠತಿ ನಾನ್ತರಿಕ್ಷೇ
ನೈತತ್ಸಮುದ್ರೇ ಸಲಿಲಂ ಬಿಭರ್ತಿ ॥

ಪರಬ್ರಹ್ಮವು ಬೆಳ್ಳಗಿಲ್ಲ, ಕೆಂಪಗಿಲ್ಲ, ಕಪ್ಪಾಗಿಯೂ ಇಲ್ಲ. ಹೊಗೆಯಂತೆ ಮಾಸಲಾಗಿಯೂ ಇಲ್ಲ. ಅದು ಭೂಮಿಯ ಮೇಲಾಗಲೀ, ಅಂತರಿಕ್ಷದಲ್ಲಾಗಲೀ, ಸಮುದ್ರದಲ್ಲಾಗಲೀ ಇಲ್ಲ. ಏಕೆಂದರೆ : ಅದು ಪಂಚಭೂತಾತ್ಮಕವಾದ ಶರೀರವನ್ನು ಧರಿಸಿಲ್ಲ.

'ಅಶಬ್ದಮಸ್ಪರ್ಶಮರೂಪಮವ್ಯಯಂ' 'ತತೋ ಯದುತ್ತರತರಂ ತದರೂಪಮನಾಮಯಂ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮವಸ್ತುವಿಗೆ ರೂಪವೇ ಇಲ್ಲವೆಂದು ಸಿದ್ಧವಾಗುವುದರಿಂದ ಶುಕ್ಲಾದಿ ರೂಪಗಳೂ ಎಂದಿಗೂ ಸಂಭವಿಸುವುದಿಲ್ಲ. ಅದು 'ಸ್ವೇ ಮಹಿಮ್ನಿ' ತನ್ನ ಮಹಿಮೆಯಲ್ಲಿ ತನಗೆ ತಾನೇ ಆಧಾರವಾಗಿ ನಿಂತಿದೆ. ಪೃಥಿವ್ಯಾದಿ ವಸ್ತುಗಳಲ್ಲಿ ಅದು ನಿಂತಿಲ್ಲ. ಏಕೆಂದರೆ : ಅದಕ್ಕೆ ದೇಹವೇ ಇಲ್ಲ. ಅದು 'ಅಶರೀರ'. ಮೇಲ್ಕಂಡ ಶ್ಲೋಕದಲ್ಲಿ 'ಸಲಿಲ' ಶಬ್ದವು ಪಂಚಭೂತಗಳಿಗೂ ಉಪಲಕ್ಷಣವೆಂದು ತಿಳಿಯಬೇಕು. 'ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್' ಎಂಬ ಮನುಸ್ಮೃತಿಯಲ್ಲಿಯೂ ಅಪ್‌ಶಬ್ದಕ್ಕೆ ಪಂಚಭೂತಗಳೆಂದೇ ತಾತ್ಪರ್ಯ. ಬ್ರಹ್ಮವು ಸಂಸಾರದೊಳಗೆ ಸೇರಿದ್ದರೆ–ಆಗ ಘಟ-ಪಟಗಳಂತೆ ಅದರ ರೂಪ-ಸ್ಥಾನಗಳನ್ನು ಹೇಳಬಹುದಿತ್ತು. ಆದರೆ ಅದು ಸಂಸಾರದಿಂದ ಆಚೆಗೆ ನಿಂತಿದೆಯಾದ್ದರಿಂದ ರೂಪಾದಿಗಳು ಅದಕ್ಕೆ ಸಂಭವಿಸುವುದಿಲ್ಲ.)

ನ ತಾರಕಾಸು ನ ಚ ವಿದ್ಯುದಾಶ್ರಿತಂ
ನ ಚಾಭ್ರೇಷು ದೃಶ್ಯತೇ ರೂಪಮಸ್ಯ ।
ನ ಚಾಪಿ ವಾಯೌ ನ ಚ ದೇವತಾಸು
ನೈತಚ್ಚನ್ದ್ರೇ ದೃಶ್ಯತೇ ನೋತ ಸೂರ್ಯೇ ॥೨೭॥

ಮಹಾರಾಜ! ಪರಬ್ರಹ್ಮವಸ್ತುವು ನಕ್ಷತ್ರಗಳಲ್ಲಿ ಕಾಣುವುದಿಲ್ಲ.

ಮಿಂಚಿನಲ್ಲಿ ಅದು ಆಶ್ರಯವನ್ನು ಹೊಂದಿಲ್ಲ. ಅದರ ರೂಪವು ಮೋಡಗಳಲ್ಲಿಯೂ ಕಂಡುಬರುವುದಿಲ್ಲ. ವಾಯುವಿನಲ್ಲಿಯೇ ಆಗಲೀ, ದೇವತೆಗಳಲ್ಲಿಯೇ ಆಗಲೀ, ಚಂದ್ರನಲ್ಲಿಯೇ ಆಗಲೀ ಮತ್ತು ಸೂರ್ಯನಲ್ಲಿಯೇ ಆಗಲೀ–ಅದರ ರೂಪವು ಕಂಡುಬರುವುದಿಲ್ಲ.

ನೈವರ್ಕ್ಷು ತನ್ನ ಯಜುಃಷ್ಷು ನಾಪ್ಯಥರ್ವಸು
ನ ದೃಶ್ಯತೇ ವೈ ವಿಮಲೇಷು ಸಾಮಸು ।
ರಥನ್ತರೇ ಬಾರ್ಹದ್ರಥೇ ವಾಪಿ ರಾಜ–
ನ್ಮಹಾವ್ರತೇ ನೈವ ದೃಶ್ಯೇದ್ಧ್ರುವಂ ತತ್ ॥೨೮॥

ಆ ಬ್ರಹ್ಮವಸ್ತುವು ಋಗ್ವೇದದಲ್ಲಿ ಸಿಕ್ಕುವುದಿಲ್ಲ. ಯಜುರ್ವೇದದಲ್ಲಿ ಸಿಕ್ಕುವುದಿಲ್ಲ. ಅಥರ್ವಣಮಂತ್ರದಲ್ಲಿ ಸಿಕ್ಕುವುದಿಲ್ಲ. ವೈಶ್ವಾನರ-ರಥಂತರ-ಬಾರ್ಹದ್ರಥಸಾಮಗಳಲ್ಲಿಯೂ ಸಿಕ್ಕುವುದಿಲ್ಲ. ನಾನಾವಿಧವಾದ ಯಜ್ಞಗಳಲ್ಲಿಯೂ ಆ ಬ್ರಹ್ಮವಸ್ತುವು ಸಿಕ್ಕುವುದಿಲ್ಲ. (ನಾಸ್ತ್ಯಕೃತಃ ಕೃತೇನ ಎಂಬ ಶ್ರುತಿವಾಕ್ಯದಂತೆ ಅಕೃತಃ ಮೋಕ್ಷವು, ಕೃತೇನ ಕರ್ಮಗಳಿಂದ ಪ್ರಾಪ್ತವಾಗತಕ್ಕದ್ದಲ್ಲ.) ಅದು ನಿತ್ಯವಾದುದರಿಂದ ಈ ಯಾವ ವಸ್ತುಗಳಲ್ಲಿಯೂ ಸಿಕ್ಕುವುದಿಲ್ಲ.

(ಪಾಠಾಂತರದ ಪ್ರಕಾರ :

ನೈವರ್ಕ್ಷು ತನ್ನ ಯಜುಃಷ್ಷು ನಾಪ್ಯಥರ್ವಸು
ನ ದೃಶ್ಯತೇ ವೈ ವಿಮಲೇಷು ಸಾಮಸು ।
ರಥನ್ತರೇ ಬಾರ್ಹತೇ ವಾಪಿ ರಾಜ–
ನ್ಮಹಾವ್ರತಸ್ಯಾತ್ಮನಿ ದೃಶ್ಯತೇ ಹಿ ತತ್ ॥೨೮॥

ಅದು ಋಗ್ವೇದ, ಯಜುರ್ವೇದ ಅಥರ್ವವೇದ, ವಿಮಲವಾದ ಸಾಮವೇದ ಮುಂತಾದುವುಗಳಲ್ಲೂ ಇಲ್ಲ. ಜ್ಞಾನ-ಸತ್ಯಾದಿ ದ್ವಾದಶ ಮಹಾವ್ರತಗಳುಳ್ಳ ಪುರುಷನ ಆತ್ಮದಲ್ಲಿ ಕಂಡುಬರುತ್ತದೆ. ಆತ್ಮರೂಪವಾಗಿಯೇ ಇದೆಯೆಂದು ಭಾವ.)

ಅಪಾರಣೀಯಂ ತಮಸಃ ಪರಸ್ತಾ–
ತ್ತದನ್ತಕೋಽಪ್ಯೇತಿ ವಿನಾಶಕಾಲೇ ।

**ಅಣೀಯೋ ರೂಪಂ ಕ್ಷುರಧಾರಯಾ ಸಮಂ**
**ಮಹಚ್ಚ ರೂಪಂ ತದ್ವೈ ಪರ್ವತೇಭ್ಯಃ ॥೨೯॥**

ಬ್ರಹ್ಮವಸ್ತುವು ಪಾಪರಹಿತವಾದುದು. ಅದರ ಅಂತ್ಯವನ್ನು ತಿಳಿದವರು ಯಾರೂ ಇರುವುದಿಲ್ಲ. ಅಜ್ಞಾನರೂಪವಾದ ಅಂಧಕಾರದಿಂದ ಅತೀತವಾದುದು. ಪ್ರಳಯಕಾಲದಲ್ಲಿ ಪ್ರಪಂಚವನ್ನೇ ಅಂತ್ಯಗೊಳಿಸುವ ಕಾಲನೂ ಆ ಪರಬ್ರಹ್ಮವಸ್ತುವಿನಲ್ಲಿ ಲೀನನಾಗಿಬಿಡುತ್ತಾನೆ. ಅದರ ರೂಪವು ಕತ್ತಿಯ ಅಲುಗಿಗೆ ಸಮಾನವಾಗಿದ್ದು ಕಂಡೂ ಕಾಣದಂತೆ ಬಹುಸೂಕ್ಷ್ಮವಾಗಿರುತ್ತದೆ. ಪರ್ವತಗಳಿಗಿಂತಲೂ ದೊಡ್ಡದಾದ ಮಹಾರೂಪವನ್ನು ಅದು ಹೊಂದಿರುತ್ತದೆ.

(ಪಾಠಾಂತರದ ರೀತ್ಯಾ :

**ಅವಾರಣೀಯಂ ತಮಸಃ ಪರಸ್ತಾ-**
**ತ್ತದನ್ತತೋಽಭ್ಯೇತಿ ವಿನಾಶಕಾಲೇ ।**
**ಅಣೀಯರೂಪಂ ಚ ತಥಾಪ್ಯಣೀಯಸಾಂ**
**ಮಹತ್ಸ್ವರೂಪಂ ತ್ವಪಿ ಪರ್ವತೇಭ್ಯಃ ॥೨೯॥**

ಆ ಪರಬ್ರಹ್ಮವಸ್ತುವು 'ಅವಾರಣೀಯ' ಎಂದರೆ ಅದು ಸರ್ವಗತವಾದ್ದರಿಂದ ಅಲ್ಲಗಳೆಯಲು ಶಕ್ಯವಿಲ್ಲದ್ದು. ಅಥವಾ ವಸ್ತ್ರಾದಿಗಳಿಂದ ಮರೆಮಾಡಲು ಶಕ್ಯವಿಲ್ಲದ್ದು. ಅಜ್ಞಾನದಿಂದ ಆಚೆಗೆ ಇರತಕ್ಕದ್ದು. ಪ್ರಳಯಕಾಲದಲ್ಲಿ ಜಗತ್ತು ಅದರಲ್ಲೇ ಅಡಗಿಹೋಗುತ್ತದೆ. ಅದು ಅಣುಗಳಿಗಿಂತಲೂ ಅಣು. ಪರ್ವತಗಳಿಗಿಂತಲೂ ಮಹತ್ತು. **'ಅಣೋರಣೀಯಾನ್ ಮಹತೋ ಮಹೀಯಾನ್')**

**ಸಾ ಪ್ರತಿಷ್ಠಾ ತದಮೃತಂ ಲೋಕಾಸ್ತದ್ಬ್ರಹ್ಮ ತದ್ಯಶಃ ।**
**ಭೂತಾನಿ ಜಜ್ಞಿರೇ ತಸ್ಮಾತ್ಪ್ರಲಯಂ ಯಾನ್ತಿ ತತ್ರ ಹಿ ॥೩೦॥**

ಆ ಬ್ರಹ್ಮವಸ್ತುವೇ ಸಕಲಲೋಕಗಳಿಗೂ ಆಧಾರಭೂತವಾಗಿದೆ. ಅದು ಅಮೃತಸ್ವರೂಪವಾಗಿದೆ. ಸಕಲಲೋಕಗಳೂ ಬ್ರಹ್ಮಸ್ವರೂಪಗಳೇ. **'ತಸ್ಯ ನಾಮ ಮಹದ್ಯಶಃ'**– ಎಂಬ ಶ್ರುತ್ಯನುಸಾರವಾಗಿ ಬ್ರಹ್ಮವಸ್ತುವಿನ

ಹೆಸರೇ ಮಹತ್. ಅದೇ ಬ್ರಹ್ಮ. ಸರ್ವಲೋಕಗಳ ಸಕಲವಸ್ತುಗಳೂ, ಸಕಲಪ್ರಾಣಿಗಳೂ ಆ ಬ್ರಹ್ಮವಸ್ತುವಿನಿಂದಲೇ ಹುಟ್ಟುತ್ತವೆ ಮತ್ತು ಆ ಬ್ರಹ್ಮವಸ್ತುವಿನಲ್ಲಿಯೇ ಲೀನವಾಗುತ್ತವೆ. (ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ಪ್ರಯ - ನ್ತ್ಯಭಿಸಂವಿಶನ್ತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ । ಎಂಬ ಉಪನಿಷದ್ವಾಕ್ಯಗಳ ಅರ್ಥವು ಈ ಶ್ಲೋಕದಲ್ಲಿದೆ.)

ಅನಾಮಯಂ ತನ್ಮಹದುದ್ಯತಂ ಯಶೋ
ವಾಚೋ ವಿಕಾರಂ ಕವಯೋ ವದನ್ತಿ ।
ಯಸ್ಮಿಞ್ಜಗತ್ಸರ್ವಮಿದಂ ಪ್ರತಿಷ್ಠಿತಂ
ಯೇ ತದ್ವಿದುರಮೃತಾಸ್ತೇ ಭವನ್ತಿ ॥೩೧॥

ಆ ಪರಬ್ರಹ್ಮವಸ್ತುವು ದ್ವೈತವರ್ಜಿತವಾದುದು. ಜಗದಾಕಾರರೂಪ ವಾಗಿ ಸರ್ವತ್ರ ವ್ಯಾಪಿಸಿರತಕ್ಕದ್ದು. ಜ್ಞಾನಿಗಳಾದವರು ಆ ಪರಬ್ರಹ್ಮವಸ್ತುವನ್ನು ವಾಚೋವಿಕಾರವೆಂದು ಹೇಳುತ್ತಾರೆ. ಆ ಪರಬ್ರಹ್ಮವಸ್ತುವನ್ನು ನಾನಾವಿಧವಾದ ಶಬ್ದಗಳಿಂದ (ವಿಕಾರವಾದ ವಾಕ್ಕುಗಳಿಂದ) ಕರೆಯುತ್ತಾರೆಯೇ ಹೊರತು ಆ ಪರಬ್ರಹ್ಮವಸ್ತುವಿನಲ್ಲಿ ಯಾವ ವಿಧವಾದ ವಿಕಾರವೂ ಇರುವುದಿಲ್ಲ. ಇದು ನಿರ್ವಿಕಾರವಾದುದು. ಯಾವ ಬ್ರಹ್ಮವಸ್ತು ವಿನಲ್ಲಿ ಸಕಲಜಗತ್ತುಗಳೂ ಅಡಗಿವೆಯೋ–ಆ ಪರಬ್ರಹ್ಮವಸ್ತುವನ್ನು ತಿಳಿದಿರತಕ್ಕವರು ಅಮೃತರಾಗುತ್ತಾರೆ (ಮುಕ್ತರಾಗುತ್ತಾರೆ.)”

(ಪಾಠಾಂತರದಂತೆ :

ತದೇತದಹ್ನಾ ಸಂಸ್ಥಿತಂ ಭಾತಿ ಸರ್ವಂ
ಸದಾತ್ಮವಿತ್ಪಶ್ಯತಿ ಜ್ಞಾನಯೋಗಾತ್ ।
ತಸ್ಮಿಞ್ಜಗತ್ಸರ್ವಮಿದಂ ಪ್ರತಿಷ್ಠಿತಂ
ಯ ಏತದ್ವಿದುರಮೃತಾಸ್ತೇ ಭವನ್ತಿ ॥

ಈ ಪ್ರಪಂಚವೆಲ್ಲವೂ ಪ್ರಕಾಶರೂಪವಾದ ಬ್ರಹ್ಮನಲ್ಲಿದ್ದು ಬ್ರಹ್ಮವಸ್ತು ವಿನಿಂದಲೇ ಪ್ರಕಾಶವನ್ನು ಪಡೆದಿದೆ. ಆತ್ಮವಿದನು ಜ್ಞಾನಯೋಗದಿಂದ

ಇದನ್ನು ಕಂಡುಕೊಳ್ಳುತ್ತಾನೆ. ಪರಮಾತ್ಮನಲ್ಲಿ ಇವೆಲ್ಲವೂ ಪ್ರತಿಷ್ಠಿತವಾಗಿವೆ. ಇದನ್ನರಿತವರು ಅಮರರಾಗುತ್ತಾರೆ.)

ನಲನೆಯ ಅಧ್ಯಾಯವು ಮುಗಿಯಿತು.

೪೫ನೆಯ ಅಧ್ಯಾಯ ಸನತ್ಸುಜಾತಪರ್ವ (ಮುಂದುವರಿದಿದೆ.)

## ಗುಣ–ದೋಷಗಳ ಲಕ್ಷಣಗಳು ಮತ್ತು ಬ್ರಹ್ಮವಿದ್ಯಾಪ್ರತಿಪಾದನೆ

ಸನತ್ಸುಜಾತರು ಹೇಳುತ್ತಾರೆ :

**ಶೋಕಃ ಕ್ರೋಧಶ್ಚ ಲೋಭಶ್ಚ ಕಾಮೋ ಮಾನಃ ಪರಾಸುತಾ ।**
**ಈರ್ಷ್ಯಾ ಮೋಹೋ ವಿಧಿತ್ಸಾ ಚ ಕೃಪಾಸೂಯಾ ಜುಗುಪ್ಸುತಾ ।**
**ದ್ವಾದಶೈತೇ ಮಹಾದೋಷಾ ಮನುಷ್ಯಪ್ರಾಣನಾಶನಾಃ ॥೧॥**

“ಮಹಾರಾಜ! ಶೋಕ, ಕೋಪ, ಲೋಭ, ಕಾಮ, ಮಾನ, ಬಹು ನಿದ್ರೆ, ಈರ್ಷ್ಯೆ, ಮೋಹ, ಧನದಾಹ, ಅತಿಸ್ನೇಹ, ಗುಣಗಳಲ್ಲಿ ದೋಷವನ್ನೆಣಿಸುವುದು, ಪರನಿಂದೆ–ಈ ಹನ್ನೆರಡು ಮನುಷ್ಯನ ಪ್ರಾಣನಾಶಕಗಳಾದ ಮಹಾದೋಷಗಳು.

**ಏಕೈಕಮೇತೇ ರಾಜೇನ್ದ್ರ ಮನುಷ್ಯಾನ್ಪರ್ಯುಪಾಸತೇ ।**
**ಯೈರಾವಿಷ್ಟೋ ನರಃ ಪಾಪಂ ಮೂಢಸಂಜ್ಞೋ ವ್ಯವಸ್ಯತಿ ॥೨॥**

ಈ ದೋಷಗಳು ಒಂದೊಂದಾಗಿ ಮನುಷ್ಯನನ್ನು ಆಕ್ರಮಿಸುತ್ತವೆ. ಇವಕ್ಕೆ ಅಧೀನನಾದ ಪುರುಷನು ಬುದ್ಧಿಶೂನ್ಯನಾಗಿ ಪಾಪಕರ್ಮಗಳನ್ನು ಮಾಡಲು ಉದ್ಯುಕ್ತನಾಗುತ್ತಾನೆ.

**ಸ್ಪೃಹಯಾಲುರುಗ್ರಃ ಪರುಷೋ ವಾ ವದಾನ್ಯಃ**
**ಕ್ರೋಧಂ ಬಿಭ್ರನ್ಮನಸಾ ವೈ ವಿಕತ್ಥೀ ।**
**ನೃಶಂಸಧರ್ಮಾಃ ಷಡಿಮೇ ಜನಾ ವೈ**
**ಪ್ರಾಪ್ಯಾಪ್ಯರ್ಥಂ ನೋತ ಸಭಾಜಯನ್ತೇ ॥೩॥**

ಆಶೆಬಡುಕ, ಕ್ರೂರಿ, ಕಠಿನವಾಗಿ ಮಾತನಾಡುವವನು, ಪರಮಲೋಭಿ, ಸರ್ವದಾ ಕೋಪಿಷ್ಠನಾಗಿರುವವನು, ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವವನು–ಈ ಆರು ಬಗೆಯ ಜನರು ನಿಶ್ಚಯವಾಗಿಯೂ ಕ್ರೂರಕರ್ಮಿಗಳಾಗಿರುತ್ತಾರೆ. ಇವರು ಅತ್ಯಧಿಕವಾದ ಸಂಪತ್ತನ್ನು ಗಳಿಸಿದ್ದರೂ ಅದನ್ನು

ಸದುಪಯೋಗಪಡಿಸಿಕೊಳ್ಳಲು ಸಮರ್ಥರಾಗುವುದಿಲ್ಲ. (ಸಂಭಾವಿತರ ಗೌರವವನ್ನು ಇವರು ಗಳಿಸಿಕೊಳ್ಳಲಾರರು.)

ಸಮ್ಭೋಗಸಂವಿದ್ವಿಷಮೋಽತಿಮಾನೀ
ದತ್ತ್ವಾ ವಿಕತ್ಥೀ ಕೃಪಣೋ ದುರ್ಬಲಶ್ಚ ।
ಬಹುಪ್ರಶಂಸೀ ವನ್ದಿತದ್ವಿಟ್ಸದೈವ
ಸಪ್ತೈವೋಕ್ತಾಃ ಪಾಪಶೀಲಾ ನೃಶಂಸಾಃ ॥೪॥

ಸ್ತ್ರೀಸಹವಾಸದಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವನು, ಇತರರಿಗೆ ಕೇಡನ್ನೇ ಬಯಸುವವನು, ದುರಭಿಮಾನೀ, ದಾನಕೊಟ್ಟನಂತರ ಆ ವಿಷಯವನ್ನು ಎಲ್ಲರಲ್ಲಿಯೂ ಹೇಳುವವನು (ತಾನು ಇಂತಹ ಮಹಾದಾನಿಯೆಂಬುದನ್ನು ಪ್ರಕಟಿಸಿಕೊಳ್ಳುವವನು), ಕೃಪಣನು, ದುರ್ಬಲನಾಗಿದ್ದರೂ ತಾನೇ ಮಹಾಪರಾಕ್ರಮಿಯೆಂದು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವವನು, ಸಮ್ಮಾನ್ಯರನ್ನೂ ಮತ್ತು ಸತ್ಪುರುಷರನ್ನೂ ಸದಾ ದ್ವೇಷಿಸತಕ್ಕವನು–ಈ ಏಳು ಮಂದಿಯೂ ಪಾಪಶೀಲರೆಂದೂ ಕ್ರೂರಿಗಳೆಂದೂ ಪರಿಗಣಿತರಾಗುತ್ತಾರೆ.

ಧರ್ಮಶ್ಚ ಸತ್ಯಂ ಚ ತಪೋ ದಮಶ್ಚ
ಅಮಾತ್ಸರ್ಯಂ ಹ್ರೀಸ್ತಿತಿಕ್ಷಾನಸೂಯಾ ।
ದಾನಂ ಶ್ರುತಂ ಚೈವ ಧೃತಿಃ ಕ್ಷಮಾ ಚ
ಮಹಾವ್ರತಾ ದ್ವಾದಶ ಬ್ರಾಹ್ಮಣಸ್ಯ ॥೫॥

ಧರ್ಮ, ಸತ್ಯ, ತಪಸ್ಸು, ಇಂದ್ರಿಯಸಂಯಮ, ಮಾತ್ಸರ್ಯವಿಲ್ಲದಿರುವಿಕೆ, ಪಾಪಕಾರ್ಯಮಾಡಲು ನಾಚುವುದು, ಸಹನಶೀಲತೆ, ಯಾರೊಬ್ಬರಲ್ಲಿಯೂ ದೋಷವೆಣಿಸದಿರುವಿಕೆ, ದಾನಮಾಡುವ ಸ್ವಭಾವವಿರುವುದು, ಶಾಸ್ತ್ರಜ್ಞಾನ, ಧೈರ್ಯ ಮತ್ತು ಕ್ಷಮೆ–ಈ ಹನ್ನೆರಡು ಬ್ರಾಹ್ಮಣನ ಮಹಾವ್ರತಗಳು.

ಯೋ ನೈತೇಭ್ಯಃ ಪ್ರಚ್ಯವೇದ್ದ್ವಾದಶಭ್ಯಃ
ಸರ್ವಾಮಪೀಮಾಂ ಪೃಥಿವೀಂ ಸ ಶಿಷ್ಯಾತ್ ।
ತ್ರಿಭಿರ್ದ್ವಾಭ್ಯಾಮೇಕತೋ ವಾನ್ವಿತೋ ಯೋ
ನಾಸ್ಯ ಸ್ವಮಸ್ತೀತಿ ಚ ವೇದಿತವ್ಯಮ್ ॥೬॥

ಯಾವನು ಈ ಹನ್ನೆರಡು ಮಹಾವ್ರತಗಳಿಂದ ಚ್ಯುತನಾಗುವುದಿಲ್ಲವೋ– ಅವನು ಈ ಅಖಂಡವಾದ ಪೃಥ್ವಿಯನ್ನೇ ಆಳಿಯಾನು. ಹನ್ನೆರಡು ಮಹಾವ್ರತಗಳಲ್ಲದಿದ್ದರೂ ಕೇವಲ ಮೂರು (ಧರ್ಮ-ಸತ್ಯ-ತಪಸ್ಸು), ಎರಡು (ಧರ್ಮ-ಸತ್ಯ) ಅಥವಾ ಒಂದೇ ಒಂದು (ಧರ್ಮ) ಮಹಾವ್ರತಗಳಿಂದ ಕೂಡಿದವನಾಗಿದ್ದರೂ ಅಂತಹವನಿಗೆ ಮಮಕಾರವೆಂಬುದೇ ಇರುವುದಿಲ್ಲವೆಂದು ತಿಳಿಯಬೇಕು. (ಈ ಮಹಾವ್ರತದ ಮಹತ್ತ್ವವೇ ಅಂತಹುದು.)

**ದಮಸ್ತ್ಯಾಗೋಽಥಾಪ್ರಮಾದ ಇತ್ಯೇತೇಷ್ವಮೃತಂ ಸ್ಥಿತಮ್ ।**
**ಏತಾನಿ ಬ್ರಹ್ಮಮುಖ್ಯಾನಾಂ ಬ್ರಾಹ್ಮಣಾನಾಂ ಮನೀಷಿಣಾಮ್ ॥೭॥**

ಇಂದ್ರಿಯನಿಗ್ರಹ, ತ್ಯಾಗ ಮತ್ತು ಅಪ್ರಮಾದ–ಇವುಗಳಲ್ಲಿ ಅಮೃತವಡಗಿದೆ. ಇವೇ ಅಮೃತತ್ವಕ್ಕೆ ಸಾಧನಭೂತಗಳಾಗಿವೆ. ಬ್ರಹ್ಮದರ್ಶನಾಕಾಂಕ್ಷಿಗಳಾದ ಬುದ್ಧಿವಂತರಾದ ಬ್ರಾಹ್ಮಣರಿಗೂ ದಮ, ತ್ಯಾಗ ಮತ್ತು ಅಪ್ರಮಾದ–ಇವುಗಳೇ ಮುಖ್ಯಸಾಧನಗಳು.

**ಸದ್ವಾಸದ್ವಾ ಪರೀವಾದೋ ಬ್ರಾಹ್ಮಣಸ್ಯ ನ ಶಸ್ಯತೇ ।**
**ನರಕಪ್ರತಿಷ್ಠಾಸ್ತೇ ವೈ ಸ್ಯುರ್ಯ ಏವಂ ಕುರ್ವತೇ ಜನಾಃ ॥೮॥**

ಒಬ್ಬನಲ್ಲಿ ದೋಷವು ಯಥಾರ್ಥವಾಗಿಯೇ ಇದ್ದರೂ ಅಥವಾ ಆರೋಪಿತವಾಗಿಯೇ ಇದ್ದರೂ–ಬ್ರಾಹ್ಮಣನಾದವನು ಅವನನ್ನು ನಿಂದಿಸಹೋಗಬಾರದು. ಯಾವನು ಯಾವುದೇ ಕಾರಣದಿಂದಲಾದರೂ ಪರನಿಂದೆಯನ್ನು ಮಾಡುವನೋ–ಅವನು ಖಂಡಿತವಾಗಿಯೂ ನರಕದಲ್ಲಿ ಬೀಳುತ್ತಾನೆ. ('ಮಾಡಿದವರ ಪಾಪ ಆಡಿದವರ ಬಾಯಲ್ಲಿ' ಎಂಬ ನಾಣ್ಣುಡಿಯಂತೆ ನಿಂದ್ಯನಾದವನು ಮಾಡಿದ ಪಾಪಗಳೆಲ್ಲವೂ ಅವನನ್ನು ನಿಂದೆಮಾಡುವವರಿಂದ ಸ್ವೀಕೃತವಾಗುತ್ತವೆ. ಆದುದರಿಂದಲೇ ಪುರಂದರದಾಸರು 'ನಿಂದಕರಿರಬೇಕು' ಎಂದು ಹಾಡಿದ್ದಾರೆ. ಪರನಿಂದೆಯೆಂಬುದು ಮಹಾದೋಷಯುಕ್ತವಾದುದು. ಒಬ್ಬನು ನಿಂದಾರ್ಹವಾದ ಕಾರ್ಯಮಾಡದೇ ಇದ್ದರೂ ಊಹಾಪೋಹಗಳಿಂದ ನಿಂದೆಗೆ ಗುರಿಯಾದರೆ ಅವನ ಮನಸ್ಸಿನ ಸಂಕಟವು ನಿಂದಕನನ್ನು ಖಂಡಿತವಾಗಿಯೂ ಬಾಧೆಪಡಿಸುತ್ತದೆ. ನಿಂದ್ಯವಾದ ಕಾರ್ಯವನ್ನು ಮಾಡಿ ನಿಂದೆಗೆ ಗುರಿಯಾಗಿ ಇತರರಿಂದ ನಿಂದಿಸಲ್ಪಟ್ಟರೆ ಅವನ ಪಾಪಗಳು ಪರಿಹಾರ

ವಾಗುತ್ತಾ ಹೋಗುತ್ತವೆ. ನಿಂದೆಮಾಡಿದವರು ಅವನ ಪಾಪಗಳನ್ನು ಹೊರುತ್ತಿರುತ್ತಾರೆ. ನಿಂದೆಗೊಳಪಟ್ಟು ಮಹಾರೋಗಗಳನ್ನು ಪರಿಹಾರ ಮಾಡಿಕೊಂಡ ನಿದರ್ಶನಗಳೂ ಉಂಟು. ಈ ಕಾರಣಗಳಿಂದ ಪರನಿಂದೆಯು ಮಹಾಪಾಪಕರವೆಂದು ಹೇಳಲ್ಪಟ್ಟಿದೆ.)

**ಮದೋಽಷ್ಟಾದಶದೋಷಃ ಸಃ ಸ್ಯಾತ್ಪುರಾ ಯೋಽಪ್ರಕೀರ್ತಿತಃ ।**
**ಲೋಕದ್ವೇಷ್ಯಂ ಪ್ರಾತಿಕೂಲ್ಯಮಭ್ಯಸೂಯಾ ಮೃಷಾ ವಚಃ ॥೯॥**

**ಕಾಮಕ್ರೋಧೌ ಪಾರತನ್ತ್ರ್ಯಂ ಪರಿವಾದೋಽಥ ಪೈಶುನಮ್ ।**
**ಅರ್ಥಹಾನಿರ್ವಿವಾದಶ್ಚ ಮಾತ್ಸರ್ಯಂ ಪ್ರಾಣಿಪೀಡನಮ್ ॥೧೦॥**

**ಈರ್ಷ್ಯಾ ಮೋಹೋಽತಿವಾದಶ್ಚ ಸಂಜ್ಞಾನಾಶೋಽಭ್ಯಸೂಯಿತಾ ।**
**ತಸ್ಮಾತ್ಪ್ರಾಜ್ಞೋ ನ ಮಾದ್ಯೇತ ಸದಾ ಹ್ಯೇತದ್ವಿಗರ್ಹಿತಮ್ ॥೧೧॥**

ಮದವು ಹದಿನೆಂಟು ದೋಷಗಳಿಂದ ಕೂಡಿರುವುದು. ಈ ಹದಿನೆಂಟು ದೋಷಗಳನ್ನು ಈ ಹಿಂದೆ ಸ್ಪಷ್ಟವಾಗಿ ಹೇಳಿರುವುದಿಲ್ಲ. ದಮಕ್ಕೆ ವಿರೋಧಿಯಾದ ಮದದ ದೋಷಗಳು ಹದಿನೆಂಟೆಂದು ಪರ್ಯಾಯವಾಗಿ ಹೇಳಿದ್ದೇನೆ. ಮದದ ಹದಿನೆಂಟು ದೋಷಗಳನ್ನು ಈಗ ಸ್ಪಷ್ಟವಾಗಿ ಹೇಳುತ್ತೇನೆ. ಧೃತರಾಷ್ಟ್ರ! ಲೋಕವಿರುದ್ಧವಾದ ಕಾರ್ಯಮಾಡುವುದು, ಶಾಸ್ತ್ರವಿರುದ್ಧವಾದ ಕಾರ್ಯಮಾಡುವುದು, ಗುಣಗಳಲ್ಲಿ ಅಥವಾ ಗುಣಿಗಳಲ್ಲಿ ದೋಷಗಳನ್ನೆಣಿಸುವುದು, ಸುಳ್ಳುಹೇಳುವುದು, ಕಾಮಾಸಕ್ತಿ, ಕ್ರೋಧ, ಪರಾಧೀನತೆ, ಪರನಿಂದೆ, ಪರಮಲೋಭಿತ್ವ, ಧನದ ಅಪವ್ಯಯ, ಇತರರೊಡನೆ ಜಗಳವಾಡುವುದು, ಹೊಟ್ಟೆಕಿಚ್ಚು, ಪ್ರಾಣಿಪೀಡನ, ಈರ್ಷ್ಯೆ, ಅತಿಹರ್ಷ, ಹೆಚ್ಚು ಮಾತನಾಡುವುದು, ವಿವೇಕಶೂನ್ಯತೆ, ಇತರರ ಗುಣಗಳಲ್ಲಿ ಮತ್ತು ಅಭಿವೃದ್ಧಿಯಲ್ಲಿ ದೋಷವೆಣಿಸುವ ಬುದ್ಧಿ–ಈ ಹದಿನೆಂಟು ಮದದ ದೋಷಗಳು. ಈ ಮದದ ದೋಷಗಳು ಸರ್ವಕಾಲದಲ್ಲಿಯೂ ನಿಂದನೀಯವಾಗಿವೆ. ಈ ಕಾರಣದಿಂದ ವಿದ್ವಾಂಸನಾದವನು ಮದಕ್ಕೆ ಅಧೀನನಾಗಕೂಡದು.

**ಸೌಹೃದೇ ವೈ ಷಡ್ಗುಣಾ ವೇದಿತವ್ಯಾಃ**
**ಪ್ರಿಯೇ ಹೃಷ್ಯನ್ತ್ಯಪ್ರಿಯೇ ಚ ವ್ಯಥನ್ತೇ ।**

ಸ್ಯಾದಾತ್ಮನಃ ಸುಚಿರಂ ಯಾಚತೇ ಯೋ
ದದಾತ್ಯಯಾಚ್ಯಮಪಿ ದೇಯಂ ಖಲು ಸ್ಯಾತ್ ।
ಇಷ್ಟಾನ್ಪುತ್ರಾನ್ವಿಭವಾನ್ಸ್ವಾಂಶ್ಚ ದಾರಾ–
ನಭ್ಯರ್ಥಿತಶ್ಚಾರ್ಹತಿ ಶುದ್ಧಭಾವಃ ॥೧೨॥

ಸೌಹಾರ್ದಕ್ಕೆ (ಮೈತ್ರಿಯ ಸಂಪಾದನೆಗೆ) ಆರು ಗುಣಗಳಿವೆ. ಅವನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು. ಮಿತ್ರನಾದವನಿಗೆ ಸಂತೋಷವುಂಟಾಗುವಂತಹ ಪ್ರಸಂಗವು ಒದಗಿಬಂದಲ್ಲಿ ತಾನೂ ಮಿತ್ರನ ಸಂತೋಷದಲ್ಲಿ ಭಾಗಿಯಾಗಬೇಕು. ಮಿತ್ರನಿಗೆ ಕಷ್ಟವೊದಗಿ ಬಂದಾಗ ಅವನ ಕಷ್ಟಕ್ಕಾಗಿ ತಾನೂ ಪರಿತಪಿಸಬೇಕು. 'ಅವನ ಕಷ್ಟವೇ ತನ್ನ ಕಷ್ಟ ; ಅವನ ಸುಖವೇ ತನ್ನ ಸುಖ'–ಎಂಬ ಭಾವನೆಯನ್ನಿಟ್ಟುಕೊಳ್ಳಬೇಕು. ಇವು ಸೌಹಾರ್ದದ ಎರಡು ಗುಣಗಳು. ತನ್ನಲ್ಲಿ ಬಹಳ ಕಾಲದಿಂದಲೂ ಇದ್ದ ಪ್ರಿಯವಾದ ವಸ್ತುವೊಂದನ್ನು ತನ್ನ ಮಿತ್ರನಾದವನು ಯಾಚಿಸಿದರೆ ಒಡನೆಯೇ ಕೊಟ್ಟು ಬಿಡಬೇಕು. ಒಂದು ವೇಳೆ ಮಿತ್ರನು ಕೇಳುವ ವಸ್ತುವು ಯಾಚಿಸಲು ಅಥವಾ ದಾನಕೊಡಲು ಯೋಗ್ಯವಲ್ಲದ ವಸ್ತುವಾಗಿದ್ದರೂ ಸಮಯಗಳಲ್ಲಿ ಕೊಟ್ಟುಬಿಡಬೇಕಾಗುತ್ತದೆ. ಶುದ್ಧಭಾವವುಳ್ಳ (ಶುದ್ಧಾತ್ಮನಾದ) ಮಿತ್ರನು–ಅತ್ಯಂತಪ್ರಿಯರಾದವರನ್ನೂ, ಪುತ್ರರನ್ನೂ, ಐಶ್ವರ್ಯವನ್ನೂ, ಪತ್ನಿಯನ್ನೂ ಪ್ರಾರ್ಥಿಸಿ ಪಡೆದುಕೊಳ್ಳಲು ಅರ್ಹನಾಗಿರುತ್ತಾನೆ. (ಶುದ್ಧಾತ್ಮನಾದ ಸುಹೃದನು ಕೇಳಬಾರದೆಂಬ ಅಥವಾ ಪಡೆದುಕೊಳ್ಳಬಾರದೆಂಬ ವಸ್ತುವೇ ಇರುವುದಿಲ್ಲ.) ಇದು ಮೂರನೆಯ ಗುಣವಾಗಿರುತ್ತದೆ.

ತ್ಯಕ್ತದ್ರವ್ಯಃ ಸಂವಸೇನ್ನೇಹ ಕಾಮಾ–
ದ್ಭುಙ್ಕ್ತೇ ಕರ್ಮ ಸ್ವಾಶಿಷಂ ಬಾಧತೇ ಚ ॥೧೩॥

ಮಿತ್ರನಾದವನಿಗೆ ಸಮಯಗಳಲ್ಲಿ ಧನಾದಿಗಳನ್ನಿತ್ತು ಉಪಕರಿಸಿದ ನಂತರ ಅವನು ತನಗೆ ಪ್ರತ್ಯುಪಕಾರಮಾಡಬೇಕೆಂಬ ಅಥವಾ ಪ್ರತ್ಯುಪಕಾರ ಮಾಡುವನೆಂಬ ಭಾವನೆಯನ್ನು ಖಂಡಿತವಾಗಿಯೂ ಇಟ್ಟುಕೊಳ್ಳಬಾರದು. ತಾನು ಆರ್ಜಿಸಿದ ಹಣದಿಂದ ಜೀವನವನ್ನು ನಡೆಸಬೇಕು. (ತನ್ನ ಜೀವನಕ್ಕೆ ಮಿತ್ರನನ್ನು ಅವಲಂಬಿಸಬಾರದು.) ತನ್ನ ಮಿತ್ರನಿಗೆ ಸಹಕಾರನೀಡಲು

ಹೋಗಿ ತನ್ನ ಜೀವನವನ್ನು ಹಾಳುಮಾಡಿಕೊಳ್ಳಲೂ ಬಾರದು. (ತಾನು ತೊಂದರೆಪಟ್ಟುಕೊಂಡು ಸಹಾಯಮಾಡಲು ಹೋಗಬಾರದು.) ಈ ಮೂರು ಗುಣಗಳೂ ಸೇರಿ ಒಟ್ಟು ಆರು ಸೌಹಾರ್ದದ ಗುಣಗಳಾಗಿವೆ.)

ದ್ರವ್ಯವಾನ್ಗುಣವಾನೇವಂ ತ್ಯಾಗೀ ಭವತಿ ಸಾತ್ತ್ವಿಕಃ ।
ಪಞ್ಚಭೂತಾನಿ ಪಞ್ಚಭ್ಯೋ ನಿವರ್ತಯತಿ ತಾದೃಶಃ ॥೧೪॥

ಯಾವ ಐಶ್ವರ್ಯವಂತನು ಈ ವಿಧವಾದ ಗುಣಗಳುಳ್ಳವನೂ, ತ್ಯಾಗಿಯೂ, ಸಾತ್ತ್ವಿಕನೂ ಆಗಿರುವನೋ-ಅಂತಹ ಧನಿಕನು ಚಕ್ಷುಃ ಶ್ರೋತ್ರಾದಿ ಆಕಾರಗಳನ್ನು ಹೊಂದಿರುವ ಪಂಚಭೂತಗಳನ್ನು ರೂಪ ಶಬ್ದಾದಿ ಐದು ವಿಷಯಗಳಿಂದ ಪ್ರತ್ಯೇಕಿಸಲು ಸಮರ್ಥನಾಗುತ್ತಾನೆ. (ಪಂಚೇಂದ್ರಿಯಗಳನ್ನೂ ನಿಗ್ರಹಿಸಬಲ್ಲನು.)

ಏತತ್ಸಮೃದ್ಧಮಪ್ಯೂರ್ಧ್ವಂ ತಪೋ ಭವತಿ ಕೇವಲಮ್ ।
ಸತ್ತ್ವಾತ್ಪ್ರಚ್ಯವಮಾನಾನಾಂ ಸಂಕಲ್ಪೇನ ಸಮಾಹಿತಮ್ ॥೧೫॥

ಬ್ರಹ್ಮಜ್ಞಾನಕ್ಕೆ ಸತ್ತ್ವಗುಣವೇ ಪ್ರಧಾನಭೂತವಾದುದು. ಇಂದ್ರಿಯಗಳ ನಿಗ್ರಹದಿಂದಲೇ ಶುದ್ಧಸಾತ್ತ್ವಿಕತೆಯ ಸಾಧನೆಯಾಗುವುದೆಂದು ಹೇಳಲಾಗುವುದಿಲ್ಲ. ಇಂದ್ರಿಯಗಳ ನಿಗ್ರಹವೂ ಒಂದು ತಪಸ್ಸು. ಸಂಕಲ್ಪದಿಂದ ಕೂಡಿದ ಇಂದ್ರಿಯನಿಗ್ರಹವೆಂಬ ತಪಸ್ಸು ಅವರಿಗೆ ಉತ್ತಮ ಲೋಕಪ್ರಾಪ್ತಿಗೆ ಮಾತ್ರವೇ ಸಾಧನಭೂತವಾಗುತ್ತದೆ. ಶುದ್ಧಸಾತ್ತ್ವಿಕತೆಯಿಲ್ಲದೇ ಬ್ರಹ್ಮಜ್ಞಾನವು ಲಭಿಸುವುದಿಲ್ಲ. (ಶುದ್ಧಸತ್ತ್ವವೆಂದರೆ ಯಾವ ವಿಧವಾದ ಸಂಕಲ್ಪಗಳಾಗಲೀ, ಕಾಮನೆಗಳಾಗಲೀ ಇಲ್ಲದಿರುವುದು.)

ಯತೋ ಯಜ್ಞಾಃ ಪ್ರವರ್ಧನ್ತೇ ಸತ್ಯಸ್ಯೈವಾವರೋಧನಾತ್ ।
ಮನಸಾನ್ಯಸ್ಯ ಭವತಿ ವಾಚಾನ್ಯಸ್ಯಾಥ ಕರ್ಮಣಾ ॥೧೬॥

ಶುದ್ಧಸಾತ್ತ್ವಿಕತೆಯಿಂದ ಪ್ರಾಪ್ತವಾಗುವ ಸತ್ಯಸ್ವರೂಪನಾದ ಶುದ್ಧಬ್ರಹ್ಮನ ದರ್ಶನವಾಗದೇ (ಆತ್ಮಸಾಕ್ಷಾತ್ಕಾರವಾಗದೇ) ಇರುವುದರಿಂದ ಕಾಮನಾರೂಪವಾದ ಯಜ್ಞಗಳು ಹೆಚ್ಚುತ್ತವೆ. ಆ ಯಜ್ಞಗಳಾದರೋ ನಾನಾರೂಪಗಳಾಗಿವೆ. ಕೆಲವರು ಮನಸ್ಸಿನಲ್ಲಿಯೇ ಯಜ್ಞವನ್ನು ಮಾಡುತ್ತಾರೆ. (ಸಗುಣಬ್ರಹ್ಮನ ಆರಾಧನೆ ಮಾಡುತ್ತಾರೆ.) ಮತ್ತೆ ಕೆಲವರು

ಜಪಯಜ್ಞವನ್ನು ಮಾಡುತ್ತಾರೆ. ಇನ್ನೂ ಕೆಲವರು ಕ್ರಿಯಾರೂಪವಾದ ಯಜ್ಞವನ್ನು ಮಾಡುತ್ತಾರೆ.

**ಸಂಕಲ್ಪಸಿದ್ಧಂ ಪುರುಷಮಸಂಕಲ್ಪೋಽಧಿತಿಷ್ಠತಿ ।**
**ಬ್ರಾಹ್ಮಣಸ್ಯ ವಿಶೇಷೇಣ ಕಿಞ್ಚಾನ್ಯದಪಿ ಮೇ ಶೃಣು ॥೧೭॥**

ಬ್ರಹ್ಮವಿದನ ನಿಸ್ಸಂಕಲ್ಪವು, ತನ್ನ ಮನೋಭಿಲಷಿತಗಳನ್ನು ಕೇವಲ ಸಂಕಲ್ಪಮಾತ್ರದಿಂದಲೇ ಪಡೆದುಕೊಳ್ಳಲು ಸಮರ್ಥನಾದ ಪುರುಷನನ್ನೂ ವಿಶೇಷವಾಗಿ ಮೀರಿರುತ್ತದೆ. (ಸಂಕಲ್ಪಸಿದ್ಧನಾದ ಸಿದ್ಧಪುರುಷನಿಗಿಂತಲೂ ನಿಸ್ಸಂಕಲ್ಪನಾದ ಬ್ರಹ್ಮಜ್ಞಾನಿಯು ಶ್ರೇಷ್ಠನು.) ಈ ವಿಷಯದಲ್ಲಿ ಇನ್ನೂ ಹೆಚ್ಚಿನ ವಿಷಯಗಳನ್ನು ಹೇಳುವೆನು ಕೇಳು, ಧೃತರಾಷ್ಟ್ರ!

**ಅಧ್ಯಾಪಯೇನ್ಮಹದೇತದ್ಯಶಸ್ಯಂ**
**ವಾಚೋ ವಿಕಾರಾಃ ಕವಯೋ ವದನ್ತಿ ।**
**ಅಸ್ಮಿನ್ಯೋಗೇ ಸರ್ವಮಿದಂ ಪ್ರತಿಷ್ಠಿತಂ**
**ಯೇ ತದ್ವಿದುರಮೃತಾಸ್ತೇ ಭವನ್ತಿ ॥೧೮॥**

ಮಹತ್ತ್ವಪೂರ್ಣವಾದ ಈ ಯೋಗಶಾಸ್ತ್ರವನ್ನು ಸಚ್ಛಿಷ್ಯರಿಗೆ ಉಪದೇಶಿಸಬೇಕು. ಏಕೆಂದರೆ : ಈ ಯೋಗಶಾಸ್ತ್ರವು ಯಶಸ್ಸಿಗೆ ಅಥವಾ (ಯಶಸೇ = ಬ್ರಹ್ಮಣೇ, ತತ್ಪ್ರಾಪ್ತ್ಯೈ ಹಿತಂ) ಬ್ರಹ್ಮಪ್ರಾಪ್ತಿಗೆ ಅಥವಾ ಆತ್ಮದರ್ಶನಕ್ಕೆ ಸಾಧಕವಾದ ಯೋಗಶಾಸ್ತ್ರವಾಗಿರುತ್ತದೆ. ಇತರ ಶಾಸ್ತ್ರಗಳೆಲ್ಲವೂ ಕೇವಲ ವಾಚೋವಿಕಾರಗಳೆಂದು (ವಾಗಾಡಂಬರಗಳೆಂದು) ಪಂಡಿತರಾದವರೇ ಹೇಳುತ್ತಾರೆ. ಆಧ್ಯಾತ್ಮಯೋಗವೆಂಬ ಈ ಶಾಸ್ತ್ರದಲ್ಲಿಯೇ ಸಕಲಶಾಸ್ತ್ರಗಳೂ ಪ್ರತಿಷ್ಠಿತವಾಗಿವೆ. ಯಾರು ಈ ಯೋಗಶಾಸ್ತ್ರವನ್ನು ತಿಳಿದುಕೊಂಡು ಆತ್ಮದರ್ಶನಮಾಡಿಕೊಳ್ಳುವರೋ–ಅವರು ಜನನ-ಮರಣ ಗಳಿಂದ ಮುಕ್ತರಾಗಿ ಅಮೃತಸ್ವರೂಪರಾಗುತ್ತಾರೆ.

**ನ ಕರ್ಮಣಾ ಸುಕೃತೇನೈವ ರಾಜ–**
**ನ್ಸತ್ಯಂ ಜಯೇಜ್ಜುಹುಯಾದ್ವಾ ಯಜೇದ್ವಾ ।**
**ನೈತೇನ ಬಾಲೋಽಮೃತ್ಯುಮಭ್ಯೇತಿ ರಾಜ–**
**ನ್ರತಿಂ ಚಾಸೌ ನ ಲಭತ್ಯನ್ತಕಾಲೇ ॥೧೯॥**

ನಿಷ್ಕಾಮಭಾವನೆಯಿಲ್ಲದಿದ್ದರೆ ವಾಪೀ-ಕೂಪ-ತಟಾಕಾದಿಗಳ ನಿರ್ಮಾಣವೇ ಮೊದಲಾದ ಯಾವ ಸತ್ಕರ್ಮಗಳಿಂದಲೇ ಆಗಲಿ– ಸತ್ಯಸ್ವರೂಪನಾದ ಭಗವಂತನನ್ನು ಕಂಡುಕೊಳ್ಳುವ ಸಾಧ್ಯತೆಯಿಲ್ಲ. ಹೋಮ-ಜಪ-ಯಜ್ಞ-ಯಾಗಾದಿಗಳಿಂದಲೂ ಅಜ್ಞಾನಿಯಾದವನು ಅಮೃತತ್ವವನ್ನು (ಜರಾ-ಮರಣರಾಹಿತ್ಯವನ್ನು) ಪಡೆಯಲಾರನು. ಅಂತ್ಯಕಾಲದಲ್ಲಿಯೂ ಇಂತಹವನಿಗೆ ಶಾಂತಿಯು ಲಭಿಸದು.

**ತೂಷ್ಣೀಮೇಕ ಉಪಾಸೀತ ಚೇಷ್ಟೇತ ಮನಸಾಪಿ ನ ।**
**ತಥಾ ಸಂಸ್ತುತಿನಿನ್ದಾಭ್ಯಾಂ ಪ್ರೀತಿರೋಷೌ ವಿವರ್ಜಯೇತ್ ॥೨೦॥**

ಯಾವ ವಿಧವಾದ ಆಡಂಬರಗಳೂ ಇಲ್ಲದೇ ಏಕಾಗ್ರಚಿತ್ತನಾಗಿ ಏಕಾಂತಸ್ಥಳದಲ್ಲಿ ಒಬ್ಬನೇ ಕುಳಿತು ಬ್ರಹ್ಮೋಪಾಸನೆಯನ್ನು ಮಾಡಬೇಕು. ಒಂದೆಡೆಯಲ್ಲಿ ಮೌನಧರಿಸಿ ಕುಳಿತುಬಿಟ್ಟಮಾತ್ರಕ್ಕೆ ಇಂದ್ರಿಯಗಳು ಚಲಿಸದಿರವು. ಮನಸ್ಸೆಂಬ ಸಾರಥಿಯು ಇಂದ್ರಿಯಗಳೆಂಬ ಕುದುರೆಗಳನ್ನು ಅತ್ತಿಂದಿತ್ತ ಓಡಾಡಿಸುತ್ತಲೇ ಇರುತ್ತದೆ. ಆದುದರಿಂದ ಮಾನಸಿಕ ಚೇಷ್ಟೆಗಳನ್ನು ಸಂಪೂರ್ಣವಾಗಿ ನಿಲ್ಲಿಸಬೇಕು. ಅರ್ಥಾತ್ ಮನಸ್ಸನ್ನು ಬಾಹ್ಯೇಂದ್ರಿಯವ್ಯಾಪಾರಗಳಿಂದ ನಿರೋಧಿಸಿ ಹೃದಯಕಮಲದಲ್ಲಿರುವ ಜ್ಯೋತಿಃಸ್ವರೂಪನಾದ ಪರಮಾತ್ಮನೆಡೆಗೆ ಕಷ್ಟಪಟ್ಟು ತಿರುಗಿಸಬೇಕು. ಯಾರಾದರೂ ನಿಂದಿಸಿದರೆ ಮನಸ್ಸಿಗೆ ಕುಗ್ಗಲೂ ಅವಕಾಶವನ್ನೀಯಬಾರದು. ನಿಂದಾ-ಸ್ತುತಿಗಳೆರಡೂ ಮನಸ್ಸಿನ ಮೇಲೆ ಬಹಳಬೇಗ ಪರಿಣಾಮವನ್ನುಂಟುಮಾಡುತ್ತವೆ. ಅದರ ಪರಿಣಾಮವೇ ಪ್ರೀತಿ ಮತ್ತು ರೋಷಗಳಿಗೆ ಕಾರಣವಾಗುತ್ತದೆ. ನಿಂದಾ-ಸ್ತುತಿಗಳನ್ನು ನಿರ್ಲಕ್ಷಿಸುವುದರ ಮೂಲಕ ಪ್ರೀತಿ-ರೋಷಗಳನ್ನೂ ವಿವರ್ಜಿಸಬೇಕು.

**ಅತ್ರೈವ ತಿಷ್ಠನ್ ಕ್ಷತ್ರಿಯ ಬ್ರಹ್ಮಾವಿಶತಿ ಪಶ್ಯತಿ ।**
**ವೇದೇಷು ಚಾನುಪೂರ್ವ್ಯೇಣ ಏತದ್ವಿದ್ವನ್ಬ್ರವೀಮಿ ತೇ ॥೨೧॥**

ಕ್ಷತ್ರಿಯಸತ್ತಮ! ಮೇಲೆ ಹೇಳಿದಂತೆ ಸಾಧನೆಮಾಡುವುದರಿಂದ ಮಾನವನು ಇಲ್ಲಿಯೇ–ಈ ಶರೀರದಲ್ಲಿಯೇ ಬ್ರಹ್ಮನ ಸಾಕ್ಷಾತ್ಕಾರವನ್ನು ಪಡೆಯಬಹುದು. ಅವನಲ್ಲಿಯೇ ವಿಲೀನನೂ ಆಗಿಬಿಡಬಹುದು. ವೇದಗಳ

ಅನುಕ್ರಮವಾದ ಅಧ್ಯಯನ ಮತ್ತು ಅನುಸಂಧಾನಗಳಿಂದ ನಾನು ಯಾವ ವಿಷಯವನ್ನು ತಿಳಿದುಕೊಂಡಿರುವೆನೋ–ಅದನ್ನೇ ನಿನಗೂ ಹೇಳುತ್ತಿದ್ದೇನೆ.”

ಳ೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ಸನತ್ಸುಜಾತಪರ್ವ (ಮುಂದುವರಿದಿದೆ.)

## ಪರಮಾತ್ಮನ ಸ್ವರೂಪವರ್ಣನೆ ಮತ್ತು ಯೋಗಿಜನರಿಂದ ಬ್ರಹ್ಮಸಾಕ್ಷಾತ್ಕಾರದ ಪ್ರತಿಪಾದನೆ

ಜನಮೇಜಯ! ಸನತ್ಸುಜಾತರು ಮುಂದುವರಿದು ಹೇಳುತ್ತಾರೆ :

**ಯತ್ತಚ್ಛುಕ್ರಂ ಮಹಜ್ಜ್ಯೋತಿರ್ದೀಪ್ಯಮಾನಂ ಮಹದ್ಯಶಃ ।**
**ತದ್ವೈ ದೇವಾ ಉಪಾಸನ್ತೇ ತಸ್ಮಾತ್ಸೂರ್ಯೋ ವಿರಾಜತೇ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧॥**

“ಧೃತರಾಷ್ಟ್ರ! ವಿಶ್ವದ ಉತ್ಪಾದನೆಗೆ ಮೂಲಕಾರಣವಾಗಿ, ಆನಂದರೂಪವಾಗಿ, ಸರ್ವಚೇಷ್ಟಾಪ್ರವರ್ತಕವಾಗಿ, ಬೀಜರೂಪವಾಗಿ ಯಾವುದಿರುವುದೋ–ಜ್ಯೋತಿಃಸ್ವರೂಪದಲ್ಲಿ ದೇದೀಪ್ಯಮಾನವಾಗಿ ಯಾವುದಿರುವುದೋ–‘ಮಹದ್ಯಶಃ’ ಎಂಬ ಹೆಸರನ್ನು ಯಾವುದು ಪಡೆದು ಕೊಂಡಿರುವುದೋ–ಅಂತಹ ಬ್ರಹ್ಮವನ್ನು ಸಕಲದೇವತೆಗಳೂ ಉಪಾಸನೆ ಮಾಡುತ್ತಾರೆ. ವಿಶ್ವಬೀಜರೂಪವಾದ ಬ್ರಹ್ಮವಸ್ತುವಿನಿಂದಲೇ ಸೂರ್ಯನು ಪ್ರಕಾಶಿಸುತ್ತಾನೆ. ಇಂತಹ ಸನಾತನನಾದ ಭಗವಂತನನ್ನು ಮನಸ್ಸಿನ ಚೇಷ್ಟೆಯನ್ನು ನಿಲ್ಲಿಸಲು ಸಮರ್ಥರಾದ ಯೋಗಿಗಳು ತಮ್ಮ ಹೃದಯ ಗುಹೆಗಳಲ್ಲಿ ಬಹುಸ್ಪಷ್ಟವಾಗಿ ನೋಡುತ್ತಾರೆ. (ದಕ್ಷಬ್ರಹ್ಮನು ಈ ಆತ್ಮಾನಂದದ ವಿಷಯವಾಗಿ ಹೀಗೆ ಹೇಳಿದ್ದಾನೆ ; ಆತ್ಮಾನಂದವು ಸ್ವಯಂ ಅನುಭವಿಸಲು ಸಾಧ್ಯವಾಗತಕ್ಕುದೇ ಹೊರತು ಆ ಆನಂದವನ್ನು ವಿವರಿಸಿ ಹೇಳುವ ಸಾಧ್ಯತೆಯಿಲ್ಲ.

**ಸ್ವಯಂವೇದ್ಯಂ ಹಿ ತದ್ಬ್ರಹ್ಮ ಕುಮಾರೀ ಸ್ತ್ರೀಸುಖಂ ಯಥಾ ।**
**ಅಯೋಗೀ ನೈವ ಜಾನಾತಿ ಜಾತ್ಯನ್ಧೋ ಹಿ ಯಥಾ ಘಟಮ್ ॥**

ಕುಮಾರಿಯಾದವಳು ವಿವಾಹವಾದನಂತರ ಸ್ತ್ರೀಸುಖವನ್ನು ಅನು

ಭವಿಸುತ್ತಾಳೆ. ಆ ಸುಖವು ಎಂತಹುದೆಂದರೆ ಅದನ್ನವಳು ವಿವರಿಸಿ ಹೇಳಲಾರಳು. ಅಂತೆಯೇ ಆತ್ಮಾನಂದವು ಸ್ವಯಂವೇದ್ಯವಾದುದು. ಅದು ಹೀಗಿರುವುದೆಂಬುದನ್ನು ವಿವರಿಸಿ ಹೇಳುವ ಸಾಧ್ಯತೆಯಿಲ್ಲ. ಆ ಆತ್ಮಾನಂದವನ್ನು ಯೋಗಿಯಾದವನು ಮಾತ್ರವೇ ಅನುಭವಿಸಬಲ್ಲನು. ಜಾತ್ಯಂಧನು ಮಡಕೆಯನ್ನು ಅಥವಾ ಮಡಕೆಯು ಹೇಗಿರುವುದೆಂಬುದನ್ನು ತಿಳಿಯಲು ಹೇಗೆ ಅಸಮರ್ಥನೋ–ಅದೇ ರೀತಿಯಲ್ಲಿ ಯೋಗಿಯಲ್ಲದವನು ಬ್ರಹ್ಮಾನಂದವೆಂದರೇನೆಂಬುದನ್ನು ತಿಳಿದುಕೊಳ್ಳಲಾರನು. ಅವನ ಊಹೆಗೂ ಅದು ನಿಲುಕದ ವಿಷಯವಾಗಿರುತ್ತದೆ.)

**ಶುಕ್ರಾದ್ಬ್ರಹ್ಮ ಪ್ರಭವತಿ ಬ್ರಹ್ಮ ಶುಕ್ರೇಣ ವರ್ಧತೇ ।**
**ತಚ್ಛುಕ್ರಂ ಜ್ಯೋತಿಷಾಂ ಮಧ್ಯೇऽತಪ್ತಂ ತಪತಿ ತಾಪನಮ್ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨॥**

ಆ ಸಚ್ಚಿದಾನಂದಪರಬ್ರಹ್ಮವಸ್ತುವಿನಿಂದಲೇ ಪರಮವ್ಯೋಮಾಖ್ಯವಾದ ಜಗತ್ತಿನ ವಿಸ್ತರಣೆಗೆ ಕಾರಣವಾದ ಬ್ರಹ್ಮವು ಹುಟ್ಟಿಕೊಳ್ಳುತ್ತದೆ. ಅದರಿಂದಲೇ ಅಭಿವೃದ್ಧಿಗೊಳ್ಳುತ್ತದೆ. ಅದೇ ಸಚ್ಚಿದಾನಂದಪರಬ್ರಹ್ಮವಸ್ತುವು ಸೂರ್ಯಾದಿಗಳಲ್ಲಿ ಪ್ರವೇಶಿಸಿ ಬೆಳಕನ್ನು ಕೊಡುತ್ತದೆ.

**(ಯದಾದಿತ್ಯಗತಂ ತೇಜೋ ಜಗದ್ಭಾಸಯತೇऽಖಿಲಮ್ ।**
**ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**
ಗೀತಾ ಅಧ್ಯಾಯ ೧೫ ಶ್ಲೋಕ ೧೨

ಎಂಬ ಭಗವದ್ಗೀತೆಯಲ್ಲಿನ ಈ ಶ್ಲೋಕವೂ ಇದನ್ನೇ ವಿವರಿಸುತ್ತದೆ. ಅನ್ಯವಸ್ತುವಿನಿಂದ ಇದು ತಪ್ತವಾಗತಕ್ಕದ್ದಲ್ಲ. ಇದು ಸ್ವಯಂಜ್ಯೋತಿಃ ಸ್ವರೂಪವಾಗಿದೆ. ಸೂರ್ಯಾದಿಗಳಿಗೂ ಇದು ಭಯಪ್ರದವಾದುದು.

**ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ ।**
**ಭೀಷಾಸ್ಮಾದಗ್ನಿಶ್ಚೇನ್ದ್ರಶ್ಚ । ಮೃತ್ಯುರ್ಧಾವತಿ ಪಞ್ಚಮ ಇತಿ ।**

ತೈತ್ತಿರೀಯ ಉಪನಿಷತ್ತಿನ ಈ ವಾಕ್ಯದಲ್ಲಿ ಪರಬ್ರಹ್ಮವಸ್ತುವನ್ನು ಭೀಷಾ = ಭಯಂಕರವಾದುದು ಎಂದೇ ಕರೆದಿದ್ದಾರೆ.

ಇಂತಹ ಸನಾತನನಾದ ಭಗವಂತನನ್ನು ಯೋಗಿಗಳು ತಮ್ಮ ಜ್ಞಾನದೃಷ್ಟಿಯಿಂದ ಸ್ಪಷ್ಟವಾಗಿ ಕಂಡುಕೊಳ್ಳುತ್ತಾರೆ.)

[ಪಾಠಾಂತರದಲ್ಲಿ ಈ ಅಧ್ಯಾಯದ ಮೊದಲನೆಯ ಶ್ಲೋಕವು ಹೀಗಿರುತ್ತದೆ :

**ಪೂರ್ಣಾತ್ಪೂರ್ಣಮುದ್ಧರನ್ತಿ ಪೂರ್ಣಾತ್ಪೂರ್ಣಂ ಪ್ರಚಕ್ಷತೇ ।**
**ಹರನ್ತಿ ಪೂರ್ಣಾತ್ಪೂರ್ಣಂ ಚ ಪೂರ್ಣೇನೈವಾವಶಿಷ್ಯತೇ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥**

ಪೂರ್ಣನಾದ ಪರಮಾತ್ಮನಿಂದ ಪೂರ್ಣನಾದ ಜೀವನನ್ನು ವಿದ್ವಾಂಸರು ಬೇರ್ಪಡಿಸುತ್ತಾರೆ. ಪೂರ್ಣದಿಂದ ಬೇರ್ಪಡಿಸಿದ್ದರಿಂದಲೇ ಜೀವನು ಪೂರ್ಣನೆಂದು ಹೇಳುತ್ತಾರೆ. ಪೂರ್ಣನಾದ ಜೀವಾತ್ಮನಿಂದ ಪೂರ್ಣನಾದ ಪರಮಾತ್ಮನನ್ನೂ ಬೇರ್ಪಡಿಸುತ್ತಾರೆ. ಆಗ ಜೀವನು ಪೂರ್ಣಾನಂದಸ್ವರೂಪನಾದ ಪರಮಾತ್ಮನೇ ಆಗಿ ಉಳಿಯುತ್ತಾನೆ.

ದೇಶ-ಕಾಲ-ವಸ್ತುಗಳಿಂದ ಯಾವುದು ಅಪರಿಚ್ಛಿನ್ನವೋ ಅದು ಪೂರ್ಣವೆನಿಸುತ್ತದೆ. ಘಟ-ಪಟಾದಿ ಸಕಲವಸ್ತುಗಳೂ ಅಪೂರ್ಣ. ಹೇಗೆಂದರೆ : ದೇಶ-ಕಾಲ-ವಸ್ತುಗಳಿಂದ ಅವು ಪರಿಚ್ಛಿನ್ನವಾಗಿವೆ. ಏಕೆಂದರೆ–'ಈ ಘಟವು ಈ ಸ್ಥಳದಲ್ಲಿದೆ–ಆ ಸ್ಥಳದಲ್ಲಿಲ್ಲ ; ಇದು ಹಿಂದೆ ಇತ್ತು–ಈಗ ಇಲ್ಲ. ಇದು ತಾಮ್ರದ ಬಿಂದಿಗೆಗಿಂತಲೂ ಚಿಕ್ಕದು ಅಥವಾ ದೊಡ್ಡದು'–ಎಂಬುದಾಗಿ ಘಟಾದಿ ವಸ್ತುಗಳನ್ನು ಪ್ರಮಾಣ-ಪರಿಮಿತಿಗಳಿಗೆ ಒಳಪಡಿಸಬಹುದು. ಪರಮಾತ್ಮನು ಇಂತಹ ಅಳತೆಗೆ ಸಿಕ್ಕತಕ್ಕವನಲ್ಲವಾದ್ದರಿಂದ ಅವನು ಪೂರ್ಣ. ಆತನೇ ಜೀವಸ್ವರೂಪದಿಂದ ಇದ್ದಾನೆಂದು ವಿದ್ವಾಂಸರು ಹೇಳುತ್ತಾರೆ. ಪರಮಾರ್ಥದಲ್ಲಿ ಜೀವಾತ್ಮನೇ ಪರಮಾತ್ಮನೆಂದೂ ವಿದ್ವಾಂಸರ ಮತ. ಜ್ಞಾನವಾದ ಮೇಲೆ ಈ ಜೀವನು ಪರಮಾತ್ಮನಲ್ಲಿ ಐಕ್ಯಹೊಂದುತ್ತಾನೆ.

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

ಎಂಬ ಈಶಾವಾಸ್ಯೋಪನಿಷತ್ತಿನ ಅರ್ಥವನ್ನೇ ಇಲ್ಲಿ ಹೇಳಿದ್ದಾರೆ. ಉಪನಿಷತ್ತಿನ ಅರ್ಥವನ್ನು ಇಲ್ಲಿ ಕೊಡಲಾಗಿದೆ.

ಅದಃ = ಜಗತ್ಕಾರಣವಾದ ಈ ಬ್ರಹ್ಮವು **ಪೂರ್ಣಂ** = ಪೂರ್ಣವಾದುದು. ಇದಂ = ತ್ವಂಶಬ್ದವಾಚ್ಯವಾದ ಈ ಜೀವಾತ್ಮವು **ಪೂರ್ಣಂ** =

ಪೂರ್ಣವಾದುದು. ಏಕೆಂದರೆ : **ಪೂರ್ಣಾತ್** = ಪೂರ್ಣವಸ್ತುವಿನಿಂದ, **ಪೂರ್ಣಮೇವ** = ಪೂರ್ಣವಾದ ವಸ್ತುವೇ, **ಉದಚ್ಯತೇ** = ಪ್ರಕಟ ವಾಗುತ್ತದೆ. **ಪೂರ್ಣಸ್ಯ** = ಪೂರ್ಣವಾದ ಬ್ರಹ್ಮವಸ್ತುವಿನ, **ಪೂರ್ಣಂ** = ಪೂರ್ಣ ಸ್ವರೂಪವನ್ನು, **ಆದಾಯ** = ತಿಳಿದುಕೊಂಡು, (**ತತ್ ತ್ವಂ**, ಪದಾರ್ಥಗಳನ್ನು ಶೋಧಿಸಿ), **ಪೂರ್ಣಮೇವ** = ಪೂರ್ಣವಾದ ಬ್ರಹ್ಮವಾಗಿಯೇ, **ಅವಶಿಷ್ಯತೇ** = ಉಳಿಯುತ್ತದೆ.]

**ಅಪೋಽಥ ಅದ್ಭ್ಯಃ ಸಲಿಲಸ್ಯ ಮಧ್ಯೇ**
**ಉಭೌ ದೇವೌ ಶಿಶ್ರಿಯಾತೇಽನ್ತರಿಕ್ಷೇ ।**
**ಅತನ್ದ್ರಿತಃ ಸವಿತುರ್ವಿವಸ್ವಾ–**
**ನುಭೌ ಬಿಭರ್ತಿ ಪೃಥಿವೀಂ ದಿವಂ ಚ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೩॥**

ಈ ಶ್ಲೋಕದಲ್ಲಿ **ಅಪಃ ಅದ್ಭ್ಯಃ, ಸಲಿಲಸ್ಯ**–ಎಂದು ನೀರಿನ ಮೂರು ಪರ್ಯಾಯಶಬ್ದಗಳನ್ನೇ ಬಳಸಿದ್ದಾರೆ. **ರಸೋ ವೈ ಸಃ**–ನೀರು ರಸರೂಪ ವಾದುದು. ಆ ರಸವೇ ಪರಬ್ರಹ್ಮವಸ್ತು. ಆ ಪರಬ್ರಹ್ಮವಸ್ತುವಿನಿಂದ ಮೊದಲು ನೀರೇ ಮೊದಲಾದ ಪಂಚಭೂತಗಳು ಸೂಕ್ಷ್ಮರೂಪದಲ್ಲಿ ಹುಟ್ಟಿದುವು. ಅನಂತರದಲ್ಲಿ ಸೂಕ್ಷ್ಮರೂಪದ ಪಂಚಭೂತಗಳಿಂದ ಪಂಚಭೂತಾತ್ಮಕವಾದ ಸ್ಥೂಲಶರೀರದ ಉತ್ಪತ್ತಿಯಾಯಿತು. ಆ ಪಂಚಭೂತಾತ್ಮಕವಾದ ಶರೀರ ದಲ್ಲಿಯೂ ಸಹ ಸಲಿಲವಿದೆ. ಆ ಸಲಿಲದ ಮಧ್ಯದಲ್ಲಿ–"**ಸಲಿಲಸ್ಯ ಮಧ್ಯೇ। ಆತ್ಮಾ ಗುಹಾಯಾಂ** ನಿಹಿತೋಽಸ್ಯ ಜನ್ತೋಃ ॥" ಎಂಬ ಶ್ರುತಿವಚನ ದಂತೆ ಪ್ರಾಣಿಯ ಹೃದಯಗುಹೆಯಲ್ಲಿ ಅಥವಾ ಹೃದಯಾಕಾಶದಲ್ಲಿ ಆತ್ಮನಿದ್ದಾನೆ. ಜೀವಾತ್ಮನೂ ಇದ್ದಾನೆ. ಜೀವಾತ್ಮ- ಪರಮಾತ್ಮರಿಬ್ಬರೂ ಈ ಹೃದಯಗುಹೆಯಲ್ಲಿದ್ದಾರೆ. ಅದರಲೊಬ್ಬನು **ಅತನ್ದ್ರಿತಃ** ಎಂದರೆ ಮಾಯೆಯಿಂದ ರಹಿತನಾದವನು. ಜಗತ್ಪ್ರಕಾಶಕನಾದ ಸೂರ್ಯನಿಗೂ ಸೂರ್ಯನು. (ವಿವಸ್ವಾನ್ ಪದದ ಅರ್ಥವನ್ನು ವ್ಯಾಖ್ಯಾನಕಾರರು ಹೀಗೆ ನಿರೂಪಿಸಿದ್ದಾರೆ. 'ವಸ ಆಚ್ಛಾದನೇ' ಎಂಬ ಧಾತುವಿನಿಂದ ನಿಷ್ಪನ್ನ ವಾಗಿರುವ ವಸ್ವಾನ್ ಪದಕ್ಕೆ ಆಚ್ಛಾದನೆಯುಳ್ಳವನೆಂದು ಅರ್ಥ. ವಿವಸ್ವಾನ್

ಎಂದರೆ ಯಾವ ವಿಧವಾದ ಆಚ್ಛಾದನೆಯೂ ಇಲ್ಲದೇ ಉದಯಾಸ್ತಗಳಿಲ್ಲದೇ ಸದಾ ಸರ್ವದಾ ಪ್ರಕಾಶಿಸತಕ್ಕವನು.)

ಜೀವೇಶ್ವರರಿಬ್ಬರೂ ಈ ಪೃಥ್ವಿಯನ್ನೂ ಮತ್ತು ಸ್ವರ್ಗವನ್ನೂ ಧರಿಸಿರುತ್ತಾರೆ. ಅಂತಹ ಸನಾತನನಾದ ಭಗವಂತನನ್ನು ಯೋಗಿಗಳು ತಮ್ಮ ಹೃದಯಾಕಾಶದಲ್ಲಿ ಕಂಡುಕೊಳ್ಳುತ್ತಾರೆ.

(ಪಾಠಾಂತರದ ಪ್ರಕಾರ :

**ಅಪೋಽಥಾದ್ಭ್ಯಃ ಸಲಿಲಂ ತಸ್ಯ ಮಧ್ಯೇ**
**ಉಭೌ ದೇವೌ ಶಿಶ್ರಿಯಾತೇಽನ್ತರಿಕ್ಷೇ ।**
**ಆವಧ್ರೀಚೀಃ ಸವಿಷೂಚೀರ್ವಸಾನೌ**
**ಉಭೌ ಬಿಭರ್ತಿ ಪೃಥಿವೀಂ ದಿವಂ ಚ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥**

ಪರಮಾತ್ಮನಿಂದ ಮೊದಲು ಜಲವು ಎಂದರೆ ಸೂಕ್ಷ್ಮಭೂತಪಂಚಕವು ಸೃಜಿಸಲ್ಪಟ್ಟಿತು. ಅದರಿಂದ ಸಲಿಲ ಎಂದರೆ ಸ್ಥೂಲಭೂತಪಂಚಕವು ಸೃಜಿಸಲ್ಪಟ್ಟಿತು. ಅದರಿಂದ ರಚಿತವಾದ ದೇಹದ ಮಧ್ಯದಲ್ಲಿರುವ ಹೃದಯಾಕಾಶದಲ್ಲಿ ಜೀವಾತ್ಮ-ಪರಮಾತ್ಮರು ವಾಸವಾಗಿದ್ದಾರೆ. ಅವರು ಎಲ್ಲ ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ ವ್ಯಾಪಿಸಿದ್ದಾರೆ. ಅವರಲ್ಲೊಬ್ಬನಾದ ಜೀವಾತ್ಮನು ಭೌತಿಕವಾದ ದೇಹವನ್ನೂ, ಸುಖ-ದುಃಖಗಳನ್ನೂ ಪಡೆದಿದ್ದಾನೆ. ಪರಮಾತ್ಮನು ಪ್ರಕಾಶಸ್ವರೂಪವಾದ ಸ್ವಾತ್ಮರೂಪವನ್ನು ಧರಿಸಿದ್ದಾನೆ.

(**ಅಪ ಏವ ಸಸರ್ಜಾದೌ** ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಅಪ್ ಎಂದರೆ ಶಬ್ದ-ಸ್ಪರ್ಶಾದಿಯಾದ ಸೂಕ್ಷ್ಮಭೂತಗಳೆಂದು ತಾತ್ಪರ್ಯ. ಅದರಿಂದ 'ಸಲಿಲ' ಹುಟ್ಟಿತು. ಸಲಿಲವೆಂದರೆ ಆಕಾಶಾದಿಯಾದ ಸ್ಥೂಲಭೂತಗಳೆಂದು ತಾತ್ಪರ್ಯ. ಆವಧ್ರೀಚೀ–ದಿಕ್ಕು, ವಿಷೂಚೀ– ಉಪದಿಕ್ಕು, ಪೃಥಿವೀ-ಪಾರ್ಥಿವಾಂಶಪ್ರಧಾನವಾದ ಶರೀರ, ದಿವ್-ಪ್ರಕಾಶ. "ದ್ವಾಸುಪರ್ಣಾ ಸಯುಜಾ ಸಖಾಯೌ"–ಎಂಬ ಶ್ರುತ್ಯರ್ಥವನ್ನೇ ಈ ಶ್ಲೋಕದಲ್ಲಿ ಹೇಳಿದೆ.)

**ಉಭೌ ಚ ದೇವೌ ಪೃಥಿವೀಂ ದಿವಂ ಚ**
**ದಿಶಃ ಶುಕ್ರೋ ಭುವನಂ ಬಿಭರ್ತಿ ।**

**ತಸ್ಮಾದ್ದಿಶಃ ಸರಿತಶ್ಚ ಸ್ರವನ್ತಿ**
**ತಸ್ಮಾತ್ಸಮುದ್ರಾ ವಿಹಿತಾ ಮಹಾನ್ತಃ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೪॥**

ಮೇಲೆ ಹೇಳಿದ ಜೀವಾತ್ಮ-ಪರಮಾತ್ಮರಲ್ಲಿ ಪರಮಾತ್ಮನು ಈ ಪೃಥ್ವಿಯನ್ನೂ, ಆಕಾಶವನ್ನೂ, ಸಮಸ್ತದಿಕ್ಕುಗಳನ್ನೂ, ಸಕಲಲೋಕಗಳನ್ನೂ ಧರಿಸಿರುತ್ತಾನೆ. ಅವನಿಂದಲೇ ದಿಕ್ಕುಗಳು ಪ್ರಕಾಶಗೊಳ್ಳುತ್ತವೆ ; ನದಿಗಳು ಪ್ರವಹಿಸುತ್ತವೆ ; ಮಹಾಸಮುದ್ರಗಳೂ ಪ್ರಕಟವಾಗುತ್ತವೆ. ಅಂತಹ ಸನಾತನನಾದ ಭಗವಂತನನ್ನು ಯೋಗಿಗಳು ತಮ್ಮ ಹೃದಯಾಕಾಶದಲ್ಲಿ ಕಾಣುತ್ತಾರೆ.

**ಚಕ್ರೇ ರಥಸ್ಯ ತಿಷ್ಠನ್ತೋಽಧ್ರುವಸ್ಯಾವ್ಯಯಕರ್ಮಣಃ ।**
**ಕೇತುಮನ್ತಂ ವಹನ್ತ್ಯಶ್ವಾಸ್ತಂ ದಿವ್ಯಮಜರಂ ದಿವಿ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೫॥**

ಅಶಾಶ್ವತವಾದ, ವಿನಾಶಶೀಲವಾದ, ಕರ್ಮಬಂಧನದಿಂದ ಬಂಧಿತವಾಗಿರುವ ರಥರೂಪವಾದ ಶರೀರದಲ್ಲಿ–ಹಿಂದಿನ ಕರ್ಮಾನುಸಾರವಾಗಿ ಚಕ್ರದಂತೆ ಚಲಿಸುವ ಮನಸ್ಸಿನಿಂದ ಯುಕ್ತವಾದ ಅಶ್ವರೂಪಗಳಾದ ಪಂಚೇಂದ್ರಿಯಗಳು– ಪ್ರಜ್ಞಾವಂತನಾದ ಜೀವನನ್ನು ಹೃದಯಾಕಾಶದಲ್ಲಿರುವ ದಿವ್ಯನಾದ ಮತ್ತು ಜರಾ-ಮರಣವರ್ಜಿತನಾದ ಪರಮಾತ್ಮನ ಕಡೆಗೆ ಒಯ್ಯುತ್ತವೆ. ಅಂತಹ ಸನಾತನನಾದ ಭಗವಂತನನ್ನು ಯೋಗಿಗಳಾದವರು ಹೃದಯಾಕಾಶದಲ್ಲಿ ಕಂಡುಕೊಳ್ಳುತ್ತಾರೆ.

(**'ಚಕ್ರೇ ರಥಸ್ಯ ತಿಷ್ಠನ್ತಂ ಧ್ರುವಸ್ಯಾವ್ಯಯಕರ್ಮಣಃ'** ಎಂಬ ಪಾಠಾಂತರದಂತೆ :

ನಿತ್ಯನೂ, ಅವ್ಯಯನೂ ಆದ ಪರಮಾತ್ಮನ ರಥರೂಪವಾದ ಶರೀರವೇ ಈ ಜಗತ್ತ್ರಯ. ಅಂತಹ ರಥದ ಚಕ್ರಗಳೇ ಪ್ರಾಣಿಗಳ ದೇಹಗಳು. ಅದರಲ್ಲಿರುವ ಪ್ರಜ್ಞಾವಂತನೂ, ದಿವ್ಯನೂ, ಜರಾ-ಮರಣಾದಿ ರಹಿತನೂ ಆದ ಜೀವನನ್ನು ಅಶ್ವದಂತಿರುವ ಇಂದ್ರಿಯಗಳು ಪ್ರಕಾಶಸ್ವರೂಪನಾದ ಪರಮಾತ್ಮನ ಕಡೆಗೆ ಒಯ್ಯುತ್ತವೆ.)

(ಇಂದ್ರಿಯಗಳು ಸ್ವಾಭಾವಿಕವಾಗಿ ಮನುಷ್ಯನನ್ನು ವಿಷಯಗಳ

ಕಡೆಗೆ ಜಗ್ಗುತ್ತವೆ. ಆದರೂ ಜಿತೇಂದ್ರಿಯನಾದ ಪ್ರಜ್ಞಾಶಾಲಿಯನ್ನು ಪರಮಾತ್ಮನ ಕಡೆಗೆ ಕರೆದುಕೊಂಡು ಹೋಗುತ್ತವೆ. ಕಾಠಕೋಪನಿಷತ್ತಿನಲ್ಲಿ "ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು'' ಎಂಬುದಾಗಿ ಇದೇ ವಿಷಯವನ್ನು ವಿವರಿಸಿದೆ.)

**ನ ಸಾದೃಶ್ಯೇ ತಿಷ್ಠತಿ ರೂಪಮಸ್ಯ**
**ನ ಚಕ್ಷುಷಾ ಪಶ್ಯತಿ ಕಶ್ಚಿದೇನಮ್ ।**
**ಮನೀಷಯಾಥೋ ಮನಸಾ ಹೃದಾ ಚ**
**ಯ ಏನಂ ವಿದುರಮೃತಾಸ್ತೇ ಭವನ್ತಿ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೬॥**

ಪರಮಾತ್ಮನ ರೂಪವು ಯಾವ ಹೋಲಿಕೆಗೂ ನಿಲುಕುವುದಿಲ್ಲ. ಯಾವನೂ ಕಣ್ಣಿನಿಂದ ಅವನನ್ನು ನೋಡಲಾರನು. "ಅಶಬ್ದಮಸ್ಪರ್ಶಮರೂಪಮನನ್ತಮವ್ಯಯಂ'' ಎಂಬ ಶ್ರುತಿವಾಕ್ಯದಂತೆ ಅವನು ಶಬ್ದಾತೀತನು ; ಸ್ಪರ್ಶಕ್ಕೂ ಲಕ್ಷ್ಯನಲ್ಲ. ಅವನಿಗೆ ಯಾವ ವಿಧವಾದ ರೂಪವೂ ಇಲ್ಲ. ಅವನು ಕ್ಷಯರಹಿತನು. ಆದರೆ ನಿಶ್ಚಯಾತ್ಮಕವಾದ ಬುದ್ಧಿಯಿಂದಲೂ ಸಂಸ್ಕೃತವಾದ ಮನಸ್ಸಿನಿಂದಲೂ ಕೆಲವರು ಅವನನ್ನು ಹೃದಯದಲ್ಲಿ ಕಾಣಬಲ್ಲರು. ಅಂತಹವರು ಅಮೃತರಾಗುತ್ತಾರೆ.

(ಪರಮಾತ್ಮನ ಸಾಕ್ಷಾತ್ಕಾರವು ಹೃದಯದಲ್ಲಿ ಮಾತ್ರ ಸಂಭವಿಸುತ್ತದೆಯಾದ್ದರಿಂದ 'ಹೃದಾ' ಎಂದು ಶ್ಲೋಕದಲ್ಲಿ ಹೇಳಿದೆ. **ಹೃದಯಕಮಲ ಮಧ್ಯೇ ದೀಪವದ್ವೇದಸಾರಂ** = ವೇದಸಾರನಾಗಿರುವ ಪರಮಾತ್ಮನು ಹೃದಯಕಮಲಮಧ್ಯದಲ್ಲಿ ದೀಪದಂತಿದ್ದಾನೆಂದು ಹೇಳುತ್ತಾರೆ. ಆತ್ಮಸಿದ್ಧಿಯು ಗುರು-ದೇವತಾನುಗ್ರಹವಿಲ್ಲದೇ ಲಭಿಸುವುದಿಲ್ಲ.

**ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶನ್ತೇ ಮಹಾತ್ಮನಃ ॥**

ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿದೆ. ಯಾವನಿಗೆ ಪರಮಾತ್ಮನಲ್ಲಿ ಪರಮೋತ್ಕೃಷ್ಟವಾದ ಭಕ್ತಿಯಿರುವುದೋ ಪರಮಾತ್ಮನಲ್ಲಿರು

ವಂತೆಯೇ ಗುರುವಿನಲ್ಲಿಯೂ ಭಕ್ತಿಯಿರುವುದೋ–ಅಂತಹ ಮಹಾತ್ಮನಿಗೆ ಎಲ್ಲ ವಿಷಯಗಳೂ ಪ್ರಕಾಶಕ್ಕೆ ಬರುತ್ತವೆ. ಅಂತಹವನು ಸರ್ವಜ್ಞನಾಗುತ್ತಾನೆ.

ಕಠೋಪನಿಷತ್ತಿನಲ್ಲಿಯೂ ಇದೇ ಅರ್ಥಕೊಡುವ ಮಂತ್ರವು ಈ ರೀತಿಯಾಗಿದೆ.

ನ ಸಂದೃಶೇ ತಿಷ್ಠತಿ ರೂಪಮಸ್ಯ
ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।
ಹೃದಾ ಮನೀಷಾ ಮನಸಾಭಿಕ್ಲೃಪ್ತೋ–
ಯ ಏತದ್ವಿದುರಮೃತಾಸ್ತೇ ಭವನ್ತಿ ॥)

* * * *

ದ್ವಾದಶಪೂಗಾಂ ಸರಿತಂ ಪಿಬನ್ತೋ ದೇವರಕ್ಷಿತಾಮ್ ।
ಮಧ್ವೀಕ್ಷನ್ತಶ್ಚ ತೇ ತಸ್ಯಾಃ ಸಂಚರನ್ತೀಹ ಘೋರಾಮ್ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೭॥

ಪೂಗಗಳು ಅಥವಾ ಸಮುದಾಯಗಳು ಹನ್ನೆರಡು.

ಚಿತ್ತಾದಿಪೂಗಃ ಸ್ಮರಣಾದಿಪೂಗಃ
ಶ್ರೋತ್ರಾದಿಪೂಗಃ ಶ್ರವಣಾದಿಪೂಗಃ ।
ವಾಗಾದಿಪೂಗೋ ವಚನಾದಿಪೂಗಃ
ಶಬ್ದಾದಿಪೂಗೋ ವಿಯದಾದಿಪೂಗಃ ॥
ಪ್ರಾಣಾದಿಪೂಗಃ ಶ್ವಸನಾದಿಪೂಗಃ
ಸಂಸ್ಕಾರಪೂಗಃ ಸುಕೃತಾದಿಪೂಗಃ ।
ಏತೈರ್ಮಹಾಪೂಗವರೈರವಿದ್ಯಾ–
ನದ್ಯಾಮಧಶ್ಚೋಪರಿ ಚೈತಿ ಜೀವಃ ॥

ಚಿತ್ತಾದಿಸಮುದಾಯ, ಸ್ಮರಣಾದಿಸಮುದಾಯ, ಶ್ರೋತ್ರಾದಿಸಮುದಾಯ, ಶ್ರವಣಾದಿಸಮುದಾಯ, ವಾಗಾದಿಸಮುದಾಯ, ವಚನಾದಿಸಮುದಾಯ, ಶಬ್ದಾದಿಸಮುದಾಯ, ವಿಯದಾದಿಸಮುದಾಯ, ಪ್ರಾಣಾದಿಸಮುದಾಯ, ಶ್ವಸನಾದಿಸಮುದಾಯ, ಸಂಸ್ಕಾರಸಮುದಾಯ, ಸುಕೃತಾದಿಸಮುದಾಯ–ಈ ಹನ್ನೆರಡು ಮಹಾಸಮುದಾಯಗಳಿಂದ ಪೂರಿತವಾದುದು ಅವಿದ್ಯಾನದೀ. ಆ ನದಿಯಾದರೋ ದೇವರಕ್ಷಿತವಾದುದು. ಸಮುದಾಯ

ಗಳಿಗೆ ವಿಷಯಗ್ರಹಣಶಕ್ತಿಯನ್ನು ದಯಪಾಲಿಸುವವರು ಸೂರ್ಯ-ಚಂದ್ರಾದಿ ದೇವತೆಗಳು. ದೇವರಕ್ಷಿತವಾದ ಘೋರವಾದ ಅವಿದ್ಯಾನದಿಯ ನೀರನ್ನು ಕುಡಿಯುತ್ತಾ (ಸಂಸಾರದ ಸವಿಯನ್ನು ಸವಿಯುತ್ತಾ), ಜೇನು ತುಪ್ಪದಂತೆ ಕಾಣುವ ಸಂಸಾರದಲ್ಲಿನ ಪಶು-ಪತ್ನೀ-ಪುತ್ರರನ್ನು ಸರ್ವದಾ ವೀಕ್ಷಿಸುತ್ತಾ ಜೀವರೂಪಗಳು ಈ ಘೋರಸಂಸಾರನದಿಯಲ್ಲಿಯೇ ಬಿದ್ದು ಮೇಲಿಂದ ಕೆಳಕ್ಕೆ–ಕೆಳಗಿನಿಂದ ಮೇಲಕ್ಕೆ ಸಂಚರಿಸುತ್ತಾರೆ. ಇಂತಹ ಘೋರಸಂಸಾರವನ್ನು ದಾಟಿಸಲು ಸಮರ್ಥನಾದ ಸನಾತನನಾದ ಭಗವಂತ ನನ್ನು ಯೋಗಿಗಳಾದವರು ತಮ್ಮ ಹೃದಯಗುಹೆಯಲ್ಲಿ ಕಂಡುಕೊಳ್ಳುತ್ತಾರೆ.

(ಪಾಠಾಂತರದ ಪ್ರಕಾರ :

**ದ್ವಾದಶಪೂಗಾಃ ಸರಿತೋ ದೇವರಕ್ಷಿತಾ ಮಧ್ವೀಶತೇ ।**
**ತದನುವಿಧಾಯಿನಸ್ತದಾ ಸಂಚರನ್ತಿ ಘೋರಾಮ್ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥**

ನದಿಗಳಂತೆ (ವಿಷಯಗಳತ್ತ) ಹರಿಯುವ ಸ್ವಭಾವವುಳ್ಳ ದ್ವಾದಶ ಸಮುದಾಯಗಳು (೫ ಜ್ಞಾನೇಂದ್ರಿಯಗಳು, ೫ ಕರ್ಮೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ) ಪರಮಾತ್ಮನ ರಕ್ಷಣೆಯನ್ನು ಪಡೆದು ತಮ್ಮ ತಮ್ಮ ವಿಷಯಗಳನ್ನು ಅನುಭವಿಸುತ್ತವೆ. ವಿಷಯಪರರಾದವರು ಅವುಗಳನ್ನೇ ಅನುಸರಿಸಿ ಘೋರವಾದ ಸಂಸಾರವನ್ನು ಪ್ರವೇಶಿಸುತ್ತಾರೆ.

ಆದುದರಿಂದ ಇಂದ್ರಿಯಗಳನ್ನು ವಿಷಯಗಳತ್ತ ಹರಿಯಬಿಡದೇ ತನ್ನ ಅಧೀನದಲ್ಲಿಟ್ಟುಕೊಳ್ಳಬೇಕೆಂಬುದು ಅಭಿಪ್ರಾಯ.

**ಮಧು** = ಜೇನುತುಪ್ಪದಂತಿರುವ ಶಬ್ದ-ಸ್ಪರ್ಶಾದಿ ವಿಷಯಗಳು.)

**ತದರ್ಧಮಾಸಂ ಪಿಬತಿ ಸಂಚಿತ್ಯ ಭ್ರಮರೋ ಮಧು ।**
**ಈಶಾನಃ ಸರ್ವಭೂತೇಷು ಹವಿರ್ಭೂತಮಕಲ್ಪಯತ್ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೮॥**

ಭ್ರಮಣಶೀಲನಾದ ಜೀವನು **ಮಧು** ಎಂದರೆ ಕರ್ಮಫಲವನ್ನು **ಸಂಚಿತ್ಯ** = ಸಂಚಯಿಸಿಕೊಂಡು, ತನ್ನ ಕರ್ಮಫಲದಲ್ಲಿ **ಅರ್ಧಮಾಸಂ** = ಸೋಮರೂಪವಾದ ಅರ್ಧಫಲವನ್ನು **ಪಿಬತಿ** = ಈ ಜನ್ಮದಲ್ಲಿ ಅನುಭವಿಸು

ತ್ತಾನೆ. ಯಾವುದೇ ಕರ್ಮಮಾಡಿದರೂ ಅದರ ಫಲವು ಐಹಿಕಫಲ ಮತ್ತು ಆಮುಷ್ಮಿಕ್ರಫಲ–ಎಂದು ಎರಡು ವಿಧವಾಗಿರುತ್ತವೆ. ಜೀವನು ಮಾಡಿದ ಕರ್ಮಗಳು ಒಂದೇ ಜನ್ಮದಲ್ಲಿ ಪೂರ್ಣಫಲವನ್ನು ಕೊಟ್ಟುಬಿಡುವುದಿಲ್ಲ. ಅರ್ಧವನ್ನು ಈಗ ಅನುಭವಿಸುತ್ತಾನೆ. ಉಳಿದರ್ಧವು ಜೀವನ ಜೊತೆ ಯಲ್ಲಿಯೇ ಅಂಟಿಕೊಂಡು ಆಮುಷ್ಮಿಕ್ರಫಲವನ್ನೂ ಕೊಡುತ್ತದೆ. ನಾನಾವಿಧ ವಾದ ಯೋನಿಗಳಲ್ಲಿ ಹುಟ್ಟಲು ಕೂಡ ಈ ಕರ್ಮಫಲವೇ ಕಾರಣವಾಗುತ್ತದೆ. ಸರ್ವಭೂತಗಳ (ಸರ್ವಪ್ರಾಣಿಗಳ) ಹೃದಯಗಳಲ್ಲಿಯೂ ಉಪಸ್ಥಿತ ನಾಗಿರುವ ಪರಮೇಶ್ವರನು ಹವಿಸ್ಸಿನಿಂದ ಸಿದ್ಧವಾಗುವ ಯಜ್ಞಗಳನ್ನು ಕಲ್ಪಿಸಿದನು. ಹೃದಯಗುಹೆಯಲ್ಲಿರುವ ಪರಮಾತ್ಮನು ವೈದಿಕಮಾರ್ಗ ಪ್ರವರ್ತಕನೂ ಆದನು. ಅಂತಹ ಸನಾತನನಾದ ಭಗವಂತನನ್ನು ಯೋಗಿ ಗಳು ತಮ್ಮ ಹೃದಯಕಮಲಗಳಲ್ಲಿ ಕಂಡುಕೊಳ್ಳುತ್ತಾರೆ.

(ಪಾಠಾಂತರದಂತೆ :

ತದರ್ಧಮಾಸಂ ಪಿಬತಿ ಸಂಚಿತಂ ಭ್ರಮರೋ ಮಧು ।
ಈಶಾನಃ ಸರ್ವಭೂತೇಷು ಹವಿರ್ಭೂತಮಕಲ್ಪಯತ್ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥

ಅರ್ಧಮಾಸದವರೆಗೆ ಸಂಚಿತವಾದ ಜೇನುತುಪ್ಪವನ್ನು ಭ್ರಮರವು ಮುಂದಿನ ಅರ್ಧಮಾಸಪರ್ಯಂತ ಕುಡಿಯುತ್ತದೆ. ಎಂದರೆ ಪೂರ್ವಜನ್ಮ ದಲ್ಲಿ ಮಾಡಿದ ಕರ್ಮದ ಫಲವನ್ನು ಜೀವನು ಈ ಜನ್ಮದಲ್ಲಿ ಅನುಭವಿಸು ತ್ತಾನೆ. ಪರಮೇಶ್ವರನು ಎಲ್ಲ ಪ್ರಾಣಿಗಳಿಗೂ ಕರ್ಮಾನುಸಾರವಾಗಿ ಅನ್ನಾದಿಗಳನ್ನು ಕಲ್ಪಿಸಿದ್ದಾನೆ.)

ಹಿರಣ್ಯಪರ್ಣಮಶ್ವತ್ಥಮಭಿಪದ್ಯ ಹ್ಯಪಕ್ಷಕಾಃ ।
ತೇ ತತ್ರ ಪಕ್ಷಿಣೋ ಭೂತ್ವಾ ಪ್ರಪತನ್ತಿ ಯಥಾ ದಿಶಮ್ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೯॥

'ಹಿರಣ್ಯಪರ್ಣಂ' ಎಂದರೆ ಸುವರ್ಣಮಯಪತ್ರಗಳು. ವ್ಯಾಖ್ಯಾನ ಕಾರರ ಪ್ರಕಾರ ಹಿರಣ್ಯಾನಿ–ಹರಣಶೀಲಾನಿ ಆಪಾತರಮಣೀಯ ತ್ವಾತ್ ಪರ್ಣಾನೀವ ಪರ್ಣಾನಿ–ಅವಯವಾಃ ಸ್ತ್ರೀಪುತ್ರಾದಯೋ ಯಸ್ಯ ತಂ–ಹಿರಣ್ಯಪರ್ಣಂ–ಮನಸ್ಸನ್ನು ಅಪಹರಿಸತಕ್ಕಂತಹ ಆಪಾತ

ರಮಣೀಯವಾದ ಅವಯವಗಳನ್ನು ಹೊಂದಿರುವ ಸ್ತ್ರೀ-ಪುತ್ರರನ್ನು ಹೊಂದಿರುವುದು ಹಿರಣ್ಯಪರ್ಣ. ಅಂತಹ ಹಿರಣ್ಯಪರ್ಣಗಳುಳ್ಳದ್ದು ಅಶ್ವತ್ಥ. ಅಶಾಶ್ವತವಾದ ಅವಿದ್ಯಾವೃಕ್ಷ. ನ-ಶ್ವೋಽಪಿ ತಿಷ್ಠತಿ ಇತಿ ಅಶ್ವತ್ಥಃ = ನಶ್ವರಃ ಅವಿದ್ಯಾವೃಕ್ಷಃ ನಶ್ವರವಾದ ಅವಿದ್ಯಾವೃಕ್ಷ, ಅರ್ಥಾತ್ ಸಂಸಾರವೃಕ್ಷ. ಆ ವೃಕ್ಷಕ್ಕೆ ರೆಕ್ಕೆಗಳಿಲ್ಲದ ಜೀವಾತ್ಮಗಳು ಬಂದು ಸೇರಿಕೊಳ್ಳುತ್ತವೆ. ಒಡನೆಯೇ ಇವುಗಳು ವಾಸನಾರೂಪವಾದ ರೆಕ್ಕೆಗಳನ್ನು ಪಡೆದು ನಾನಾದಿಕ್ಕುಗಳಲ್ಲಿ ನಾನಾಯೋನಿಗಳಲ್ಲಿ ಜನ್ಮತಾಳುತ್ತವೆ. ಇಂತಹ ಪರಿಭ್ರಮಣೆಗೆ ಮೂಲಕಾರಣನಾದ, ಸನಾತನನಾದ ಭಗವಂತನನ್ನು ಯೋಗಿಗಳು ತಮ್ಮ ಹೃದಯಾಕಾಶದಲ್ಲಿ ಕಂಡುಕೊಳ್ಳುತ್ತಾರೆ.

(ಪಾಠಾಂತರದ ಪ್ರಕಾರ :

**ಹಿರಣ್ಯಪರ್ಣಮಶ್ವತ್ಥಮಭಿಪತ್ಯ ಹ್ಯಪತ್ರಕಾಃ ।**
**ತತ್ರ ತೇ ಪಕ್ಷಿಣೋ ಭೂತ್ವಾ ಪ್ರಪತನ್ತಿ ಯಥಾಸುಖಮ್ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥**

ರೆಕ್ಕೆಗಳಿಲ್ಲದ ಭ್ರಮರಗಳು ಚಿನ್ನದ ಎಲೆಗಳುಳ್ಳ ಅಶ್ವತ್ಥವೃಕ್ಷದಲ್ಲಿ ಸೇರಿಕೊಂಡು ರೆಕ್ಕೆಗಳನ್ನು ಪಡೆಯುತ್ತವೆ. ಅನಂತರ ಸುಖವಾಗಿ ಹಾರಿಹೋಗುತ್ತವೆ. ಯಾರನ್ನು ತಿಳಿದು ಅವು ಹಾರಿಹೋಗುತ್ತವೆಯೋ–ಆ ಪರಮಾತ್ಮನನ್ನು ಯೋಗಿಗಳು ಮಾತ್ರ ನೋಡಬಲ್ಲರು.

ಮುಮುಕ್ಷುವಿಗೆ ಜ್ಞಾನವೇ ರೆಕ್ಕೆ. ಅದಿಲ್ಲದಿದ್ದರೆ ಅವನು ಸಂಸಾರದಲ್ಲಿಯೇ ತೊಳಲುತ್ತಾನೆ. ಚಿನ್ನದ ಎಲೆಗಳೆಂದರೆ ವೇದಗಳು. 'ಛಂದಾಂಸಿ ಯಸ್ಯ ಪರ್ಣಾನಿ' ಎಂದು ಭಗವದ್ಗೀತೆಯಲ್ಲಿ ಹೇಳಿದೆ. ವೇದಾಭ್ಯಾಸಮಾಡತಕ್ಕ ಸತ್ಕುಲದಲ್ಲಿ ಜನ್ಮವನ್ನು ತಳೆದು ರೆಕ್ಕೆಯನ್ನು ಪಡೆಯುತ್ತಾರೆ ಎಂದರೆ ಜ್ಞಾನಿಗಳಾಗುತ್ತಾರೆ. 'ಯೇ ವೈ ವಿದ್ವಾಂಸಸ್ತೇ ಪಕ್ಷಿಣೋ ಯೇ ಅವಿದ್ವಾಂಸಸ್ತೇ ಅಪಕ್ಷಾಃ' ಎಂದು ಬ್ರಾಹ್ಮಣದಲ್ಲಿದೆ. ವಿದ್ವಾಂಸರು ರೆಕ್ಕೆಯುಳ್ಳವರು, ಮೂರ್ಖರಿಗೆ ರೆಕ್ಕೆಗಳಿಲ್ಲ' ಎಂದು ಅದರ ಅರ್ಥ. ಸುಖವಾಗಿ ಹಾರಿಹೋಗುತ್ತಾರೆಂದರೆ ಮುಕ್ತರಾಗುತ್ತಾರೆ.)

ಪೂರ್ಣಾತ್ಪೂರ್ಣಾನ್ಯುದ್ಧರನ್ತಿ ಪೂರ್ಣಾತ್ಪೂರ್ಣಾನಿ ಚಕ್ರಿರೇ ।
ಹರನ್ತಿ ಪೂರ್ಣಾತ್ಪೂರ್ಣಾನಿ ಪೂರ್ಣಮೇವಾವಶಿಷ್ಯತೇ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೦॥

ಪೂರ್ಣದ ದೆಸೆಯಿಂದ ಪೂರ್ಣಗಳೇ ಉತ್ಪನ್ನವಾಗುತ್ತವೆ. ಪೂರ್ಣದ ದೆಸೆಯಿಂದ ಉತ್ಪನ್ನವಾದ ಆ ಪೂರ್ಣವೂ ಪುನಃ ಪೂರ್ಣಗಳನ್ನೇ ಸೃಷ್ಟಿಸುತ್ತದೆ. ಪುನಃ ಆ ಪೂರ್ಣದಿಂದಲೇ ಅವನು ಸೃಷ್ಟಿಸಿದ ಪೂರ್ಣರೂಪಗಳು ಉಪಹೃತವಾಗುತ್ತವೆ. (ಉಪಸಂಹಾರಹೊಂದುತ್ತವೆ.) ಪುನಃ ಪೂರ್ಣವೊಂದೇ ಉಳಿಯುತ್ತದೆ.

ಇದೊಂದು ದೊಡ್ಡ ವಿಜ್ಞಾನ. ಸಚ್ಚಿದಾನಂದಪರಬ್ರಹ್ಮವಸ್ತುವು ಪೂರ್ಣರೂಪವಾದುದು. ಆ ಪೂರ್ಣದಿಂದ ಬ್ರಹ್ಮಾಂಡವು ಹುಟ್ಟುತ್ತದೆ. ಆ ಬ್ರಹ್ಮಾಂಡವೂ ಪೂರ್ಣವಾದುದೇ. ಬ್ರಹ್ಮಾಂಡದಲ್ಲಿ ಸಕಲಚರಾಚರ ಪ್ರಾಣಿಗಳೂ ಹುಟ್ಟುತ್ತವೆ. ಅವುಗಳೂ ಪೂರ್ಣವಾದುವುಗಳೇ. ಮನುಷ್ಯನು ಪೂರ್ಣನು. ಅವನಲ್ಲಿ ಹುಟ್ಟುವ ಅವನ ಮಗನೂ ಪೂರ್ಣನೇ ಆಗಿರುತ್ತಾನೆ. ಮಗನು ಪೂರ್ಣನಾಗಿ ಹುಟ್ಟಿದನಂತರವೂ ತಂದೆಯೂ ಪೂರ್ಣನಾಗಿಯೇ ಉಳಿಯುತ್ತಾನೆ. ಇದು ಸಾದೃಶ್ಯ ; ಸಮುದ್ರದ ನೀರನ್ನು ಎಷ್ಟು ಪಾತ್ರೆಗಳಲ್ಲಿ ಬೇಕಾದರೂ ತುಂಬಬಹುದು. ಪಾತ್ರೆಗಳೂ ಪೂರ್ಣವಾಗುತ್ತವೆ. ಸಮುದ್ರವೂ ಪೂರ್ಣವಾಗಿಯೇ ಇರುತ್ತದೆ. ಪ್ರಳಯಕಾಲದಲ್ಲಿ ಅನಾದಿಯಾದ ಪೂರ್ಣವಾದ ಪರಬ್ರಹ್ಮವಸ್ತುವು ತನ್ನಿಂದಲೇ ಪ್ರಾದುರ್ಭಾವವನ್ನು ಹೊಂದಿದ್ದ ಪೂರ್ಣವಸ್ತುಗಳೆಲ್ಲವನ್ನೂ ತನ್ನೊಳಕ್ಕೇ ಸೆಳೆದುಕೊಳ್ಳುತ್ತದೆ. ಆಗಲೂ ಪರಬ್ರಹ್ಮವಸ್ತುವು ಪೂರ್ಣರೂಪದಲ್ಲಿಯೇ ಉಳಿಯುತ್ತದೆ. ಬ್ರಹ್ಮಾಂಡದ ಸೃಷ್ಟಿಯಿಂದ ಅದರ ಪೂರ್ಣತ್ವಕ್ಕೆ ನ್ಯೂನತೆಯಿಲ್ಲ. ಕಡೆಯಲ್ಲಿ ಬ್ರಹ್ಮಾಂಡವನ್ನು ತನ್ನಲ್ಲಿಯೇ ಅಡಗಿಸಿಕೊಂಡಿದ್ದರಿಂದ ಎರಡು ಪೂರ್ಣರೂಪಗಳಾಗುವುದಿಲ್ಲ. ದೊಡ್ಡ ದೊಡ್ಡ ಪಾತ್ರೆಗಳಲ್ಲಿ ತುಂಬಿದ ನೀರನ್ನು ಪುನಃ ಸಮುದ್ರಕ್ಕೇ ಸುರಿದರೆ ಸಮುದ್ರವು ಉಕ್ಕಿ ಮೇಲೆ ಹರಿಯುವುದಿಲ್ಲ. ಮೊದಲಿನ ಪೂರ್ಣಾಕಾರದಲ್ಲಿಯೇ ಇರುತ್ತದೆ. ಹುಟ್ಟಿದ ಪ್ರಾಣಿಗಳೆಲ್ಲವೂ ಕಡೆಯಲ್ಲಿ ಬ್ರಹ್ಮನಲ್ಲಿಯೇ ಲೀನವಾಗಿಬಿಡುತ್ತವೆಂಬುದು ಇದರ ತಾತ್ಪರ್ಯ.

ವಿಷ್ಣುಪುರಾಣದಲ್ಲಿ ಅಭೇದದ ವಿಷಯವಾಗಿ ಹೀಗೆ ಹೇಳಿದ್ದಾರೆ :

ವಿಭೇದಜನಕೇऽಜ್ಞಾನೇ ನಾಶಮಾತ್ಯನ್ತಿಕಂ ಗತೇ ।
ಆತ್ಮನೋ ಬ್ರಹ್ಮಣಾ ಭೇದಮಸನ್ತಂ ಕಃ ಕರಿಷ್ಯತಿ ॥

* * * *

ತಸ್ಮಾದ್ವೈ ವಾಯುರಾಯಾತಸ್ತಸ್ಮಿಂಶ್ಚ ಪ್ರಯತಃ ತದಾ ।
ತಸ್ಮಾದಗ್ನಿಶ್ಚ ಸೋಮಶ್ಚ ತಸ್ಮಿಂಶ್ಚ ಪ್ರಾಣ ಆತತಃ ॥೧೧॥

(ಈ ಶ್ಲೋಕದಲ್ಲಿ ಹಿಂದಿನ ಶ್ಲೋಕದ ವಿವರಣೆಯನ್ನು ಕೊಡಲಾಗಿದೆ.) ಪೂರ್ಣರೂಪವಾದ ಪರಬ್ರಹ್ಮವಸ್ತುವಿನಿಂದ ವಾಯುವೇ ಮೊದಲಾದ ಪಂಚಭೂತಗಳು ಹೊರಬಂದುವು. ಆ ಪೂರ್ಣವಸ್ತುವಿನಲ್ಲಿಯೇ ಪಂಚಭೂತಗಳೂ ಸರ್ವಕಾಲದಲ್ಲಿಯೂ ಲೀನವಾಗಿರುತ್ತವೆ. ಪೂರ್ಣವಸ್ತುವಿನಿಂದಲೇ ಅಗ್ನಿ, ಸೋಮ–ಇವರ ಪ್ರಾದುರ್ಭಾವವಾಗುತ್ತದೆ. ಪ್ರಾಣವೂ ಆ ಪೂರ್ಣವಸ್ತುವಿನಿಂದಲೇ ವಿತತವಾಗಿದೆ.

(ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಮ್ಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ। ಅದ್ಭ್ಯಃ ಪೃಥಿವೀ । ಈ ಮಂತ್ರಾರ್ಥವನ್ನೇ ಮೇಲಿನ ಶ್ಲೋಕದಲ್ಲಿ ವಿವರಿಸಲಾಗಿದೆ.)

ಸರ್ವಮೇವ ತತೋ ವಿದ್ಯಾತ್ತತ್ತದ್ವಕ್ತುಂ ನ ಶಕ್ನುಮಃ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೨॥

ಅಖಂಡಬ್ರಹ್ಮಾಂಡವೆಲ್ಲವೂ ಅವನಿಂದಲೇ ಪ್ರಾದುರ್ಭಾವಹೊಂದಿದೆ. ಯಾವ ಪೂರ್ಣವಸ್ತುವಿನಿಂದ ಯಾವ ವಸ್ತುವು ಹುಟ್ಟಿತೆಂಬ ವಿವರಣೆಯನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಕೊಡಲು ನಾವು ಅಸಮರ್ಥರಾಗಿರುತ್ತೇವೆ. ಅಂತಹ ಪೂರ್ಣನಾದ ಸನಾತನನಾದ ಭಗವಂತನನ್ನು ಯೋಗಿಗಳಾದವರು ತಮ್ಮ ಹೃತ್ಕಮಲಗಳಲ್ಲಿ ಕಂಡುಕೊಳ್ಳುತ್ತಾರೆ.

ಅಪಾನಂ ಗಿರತಿ ಪ್ರಾಣಃ ಪ್ರಾಣಂ ಗಿರತಿ ಚನ್ದ್ರಮಾಃ ।
ಆದಿತ್ಯೋ ಗಿರತೇ ಚನ್ದ್ರಮಾದಿತ್ಯಂ ಗಿರತೇ ಪರಃ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೩॥

ಪ್ರಾಣವು ಅಪಾನವನ್ನು ನುಂಗುತ್ತದೆ. ಚಂದ್ರನು ಪ್ರಾಣವನ್ನು

ನುಂಗುತ್ತಾನೆ. ಸೂರ್ಯನು ಚಂದ್ರನನ್ನು ನುಂಗುತ್ತಾನೆ. ಪರಮಾತ್ಮನು ಸೂರ್ಯನನ್ನು ನುಂಗುತ್ತಾನೆ.

ಚಂದ್ರನು ಮನಸ್ಸಿಗೆ ಅಧಿದೇವತೆಯಾದ್ದರಿಂದ ಚಂದ್ರನೆಂದರೆ ಮನಸ್ಸೆಂದೇ ತಿಳಿಯಬೇಕು. ಸೂರ್ಯನು ಬುದ್ಧಿಗೆ ಅಧಿದೇವತೆಯಾದ್ದರಿಂದ ಸೂರ್ಯನೆಂದರೆ ಬುದ್ಧಿಯೆಂದು ತಿಳಿಯಬೇಕು.

ತಾತ್ಪರ್ಯವೇನೆಂದರೆ.: ಸಮಾಧಿಕಾಲದಲ್ಲಿ ಅಪಾನವಾಯುವು ಪ್ರಾಣ ವಾಯುವಿನಲ್ಲಿ ಉಪಸಂಹಾರಹೊಂದುತ್ತದೆ. ಪ್ರಾಣವನ್ನು ಪರಮಾತ್ಮ ನಲ್ಲಿಯೇ ಉಪಸಂಹರಿಸುವುದೇ ನಿರ್ವಿಕಲ್ಪಸಮಾಧಿ ಎನಿಸುವುದು. ಅಂತಹ ಸಮಾಧಿಯನ್ನು ಪಡೆದವನೇ ಮುಕ್ತನು.

(ಯಮ-ನಿಯಮಾದಿ ಅಷ್ಟಾಂಗಯೋಗಸಾಧಕರ ಅನುಭವಕ್ಕೆ ವೇದ್ಯ ವಾಗುವ ಶ್ಲೋಕವಿದು.

**ಪಾರ್ಷ್ಣಿನಾ ಗುದಮಾಪೀಡ್ಯ ದನ್ತೈರ್ದನ್ತಾನಸಂಸ್ಪೃಶನ್ ।**
**ದೃಢಾಸನೇಽಪಾನವಾಯುಮುನ್ನಯೇಚ್ಚ ಶನೈಃ ಶನೈಃ ॥**
**ತಂ ಪ್ರಾಣೇನೈಕತಾಂ ನೀತ್ವಾ ಸ್ಥಿರಂ ಕೃತ್ವಾ ಹೃದನ್ತರೇ ।**
**ಚೇತೋಮಾತ್ರೇಣ ತಿಷ್ಠೇತ ತಚ್ಚ ಬುದ್ಧೌ ವಿಲಾಪಯೇತ್ ॥**

ಯೋಗಶಾಸ್ತ್ರದಲ್ಲಿರುವ ಈ ಶ್ಲೋಕಗಳ ಅರ್ಥವನ್ನೇ ಮೇಲಿನ ಶ್ಲೋಕವು ಪರ್ಯಾಯವಾಗಿ ಹೇಳುತ್ತದೆ. ಎರಡು ಹಿಮ್ಮಡಿಗಳಿಂದಲೂ ಗುದದ್ವಾರವನ್ನು ಭದ್ರವಾಗಿ ಅಮುಕಿಕೊಂಡು, ಹಲ್ಲುಗಳಿಗೆ ಹಲ್ಲುಗಳನ್ನು ತಾಕಿಸದೇ ದೃಢಾಸನದಲ್ಲಿ ಕುಳಿತು, ಅಪಾನವಾಯುವನ್ನು ನಿಧಾನವಾಗಿ ಮೇಲಕ್ಕೆಳೆದುಕೊಂಡು, ಅಪಾನವಾಯುವನ್ನು ಪ್ರಾಣವಾಯುವಿನೊಡನೆ ಪ್ರಾಣಕ್ಕೆ ಸ್ವಸ್ಥಾನವಾದ ಹೃದಯದಲ್ಲಿ ನಿಲ್ಲಿಸಿ, ಅನಂತರದಲ್ಲಿ ಅದನ್ನು ಮನಸ್ಸಿನಲ್ಲಿ ಲೀನಗೊಳಿಸಿ, ಮನಸ್ಸನ್ನು ಬುದ್ಧಿಯಲ್ಲಿ ಲೀನಗೊಳಿಸಬೇಕು. ಇದನ್ನು ಬಾಹ್ಯಕುಂಭಪ್ರಾಣಾಯಾಮ ಅಥವಾ ರೇಚಕಪ್ರಾಣಾಯಾಮ ವೆನ್ನುತ್ತಾರೆ. ಗೀತೆಯಲ್ಲಿಯೂ ಈ ಅರ್ಥಕೊಡುವ ಶ್ಲೋಕವಿದೆ.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣಾಪಾನೌ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥**

ಅಧ್ಯಾಯ ೪ ಶ್ಲೋಕ ೨೯

ಆದರೆ ಇಲ್ಲಿ ಅಪಾನವಾಯುವು ಅಗ್ನಿರೂಪವಾಗಿದೆ. ಪ್ರಾಣವಾಯುವು ಹವಿಸ್ಸಿನ ರೂಪದಲ್ಲಿದೆ. ಈ ವಿಧವಾದ ಪ್ರಾಣಾಯಾಮಕ್ಕೆ ಅಭ್ಯನ್ತರಕುಂಭಕ ವೆಂದು ಹೇಳುತ್ತಾರೆ. ಇಂತಹ ಪ್ರಾಣಾಯಾಮಪರಾಯಣರಾದ ಯೋಗಿಗಳು ಪರಮಾತ್ಮನನ್ನು ತಮ್ಮ ಹೃದಯಗುಹೆಗಳಲ್ಲಿ ಕಂಡುಕೊಳ್ಳುತ್ತಾರೆ.)

**ಏಕಂ ಪಾದಂ ನೋತ್ಕ್ಷಿಪತಿ ಸಲಿಲಾದ್ಧಂಸ ಉಚ್ಚರನ್ ।**
**ತಂ ಚೇತ್ಸಂತತಮೂರ್ಧ್ವಾಯ ನ ಮೃತ್ಯುರ್ನಾಮೃತಂ ಭವೇತ್ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೪॥**

ಹಂಸಪಕ್ಷಿಯು ನೀರಿನ ಮೇಲೆ–ನೀರಿಗೆ ಸಂಬಂಧಿಸದಂತೆ–ಹೋಗು ತ್ತಿರುತ್ತದೆ. ಆದರೆ ಅದರ ಒಂದು ಕಾಲು ಮಾತ್ರ ಯಾವಾಗಲೂ ನೀರಿ ನಲ್ಲಿಯೇ ಇರುತ್ತದೆ. ಒಂದು ವೇಳೆ ಸಾಧಾರಣಹಂಸದಂತೆ ಈ ವಿಚಿತ್ರ ಹಂಸವೂ ಇನ್ನೊಂದು ಕಾಲನ್ನೂ ಮೇಲೆತ್ತಿಕೊಂಡು ಹಾರಾಡತೊಡಗಿದರೆ ಮೃತ್ಯುವೂ ಇಲ್ಲ ; ಅಮೃತವೂ ಇಲ್ಲ. (ಅಖಂಡಬ್ರಹ್ಮಾಂಡವೂ ಒಂದೇ ಆಗಿ ಉಳಿದುಕೊಳ್ಳುತ್ತದೆ.)

(ಹಂಸವೆಂದರೆ ಪರಮಾತ್ಮನು. **ಹನ್ತಿ ಅವಿದ್ಯಾಂ ತತ್ಕಾರ್ಯಂ ಚೇತಿ ಹಂಸಃ**= ಅವಿದ್ಯೆಯನ್ನೂ, ಅದರ ಕಾರ್ಯವಾದ ಸಂಸಾರವನ್ನೂ ನಾಶಮಾಡುವವನು. ಸಂಸಾರವೇ ಸಲಿಲ–ನೀರು ; ಪರಮಾತ್ಮನು ಸಂಸಾರ ದಿಂದ ಆಚೆಗೆ ಇದ್ದಾನೆ. ಸಂಸಾರದ ಬಂಧನದಲ್ಲಿ ಸಿಕ್ಕಿಲ್ಲ. ಆದರೆ ಜೀವಾತ್ಮ ವೆಂಬ ಒಂದು ಪಾದವನ್ನು ಮಾತ್ರ ಸಂಸಾರದಲ್ಲಿ ಬಿಟ್ಟಿದ್ದಾನೆ. ಪರಮಾತ್ಮನ ಪ್ರತಿಬಿಂಬವೇ ಜೀವ. '**ಪಾದೋಽಸ್ಯ ವಿಶ್ವಾ ಭೂತಾನಿ। ತ್ರಿಪಾದಸ್ಯಾಮೃತಂ ದಿವಿ**'–ಎಂಬ ಶ್ರುತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಪರಮಾತ್ಮನ ಒಂದು ಅಂಶವು ಸ್ಥಾವರ-ಜಂಗಮರೂಪದಿಂದ ಸಂಸಾರದಲ್ಲಿ ಇದ್ದೇ ಇರುತ್ತದೆ. ಒಂದು ಪಾದ ನೀರಿನಲ್ಲಿದೆ ಎಂದರೆ ಒಂದು ಅಂಶ ಸಂಸಾರದಲ್ಲಿದೆ ಎಂದು ಅರ್ಥ. ಈ ಪಾದವನ್ನು ನೀರಿನಿಂದ ಮೇಲಕ್ಕೆತ್ತಿದರೆ– ನಿಖಿಲಶರೀರಗಳಲ್ಲಿ ಮಾಯೆಯಿಂದ ಜೀವನಾಗಿ ಅನುಪ್ರವೇಶಮಾಡಿರುವುದನ್ನು ಪರಮಾತ್ಮನು ಉಪಸಂಹರಿಸಿದರೆ–ಜನನ-ಮರಣರೂಪವಾದ ಸಂಸಾರವೇ ಇರುವುದಿಲ್ಲ. ಏಕೆಂದರೆ : ಜೀವನೇ ಆಗ ಇರುವುದಿಲ್ಲ. ಇನ್ನು ಮೋಕ್ಷ ಯಾರಿಗೆ?)

ಅಙ್ಗುಷ್ಠಮಾತ್ರಃ ಪುರುಷೋಽನ್ತರಾತ್ಮಾ
ಲಿಙ್ಗಸ್ಯ ಯೋಗೇನ ಸ ಯಾತಿ ನಿತ್ಯಮ್ ।
ತಮೀಶಮೀಡ್ಯಮನುಕಲ್ಪಮಾದ್ಯಂ
ಪಶ್ಯನ್ತಿ ಮೂಢಾ ನ ವಿರಾಜಮಾನಮ್ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೫॥

ಸಕಲಪ್ರಾಣಿಗಳ ಹೃದಯಗುಹೆಗಳಲ್ಲಿಯೂ ಇರುವ ಅಂತರಾತ್ಮನು ಹೆಬ್ಬೆರಳು ಗಾತ್ರದವನು. ಆಯಾ ಪ್ರಾಣಿಗಳ ಹೆಬ್ಬೆರಳಿಗೆ ಅನುರೂಪನಾಗಿ ಅವನು ಆಯಾ ಪ್ರಾಣಿಗಳ ಹೃದಯಗುಹೆಯಲ್ಲಿರುತ್ತಾನೆ. ಪಂಚಪ್ರಾಣಗಳು, ಮನಸ್ಸು, ಬುದ್ಧಿ ಮತ್ತು ದಶೇಂದ್ರಿಯಾತ್ಮಕವಾದ ಲಿಂಗಶರೀರಗಳ ಸಂಬಂಧದಿಂದ ಅವನು ಅನುದಿನವೂ ಹುಟ್ಟುವ ಲಕ್ಷೋಪಲಕ್ಷ ಪ್ರಾಣಿಗಳ ಹೃದಯಗಳನ್ನು ಸೇರುತ್ತಲೇ ಇರುತ್ತಾನೆ. ಸಕಲಪ್ರಾಣಿಗಳ ಹೃದಯಕಮಲಗಳಲ್ಲಿಯೂ ಅಡಗಿರುವ, ಸರ್ವೇಶ್ವರನೂ, ಸ್ತೋತ್ರಾರ್ಹನೂ, ಸರ್ವಕಾರ್ಯಸಮರ್ಥನೂ, ಆದಿಪುರುಷನೂ, ಆಗಿ ಪ್ರಕಾಶಿಸುತ್ತಿರುವ ಪರಮಾತ್ಮನನ್ನು ಅವಿವೇಕಿಗಳು ನೋಡಲಾರರು. ಆದರೆ ಅಂತಹ ಚಿನ್ಮಯಮೂರ್ತಿಯನ್ನು ಯೋಗಿಗಳು ಬಹುಸ್ಪಷ್ಟವಾಗಿ ಕಂಡುಕೊಳ್ಳುತ್ತಾರೆ.

ಅಸಾಧನಾ ವಾಪಿ ಸಸಾಧನಾ ವಾ
ಸಮಾನಮೇತದ್ದೃಶ್ಯತೇ ಮಾನುಷೇಷು ।
ಸಮಾನಮೇತದಮೃತಸ್ಯೇತರಸ್ಯ
ಮುಕ್ತಾಸ್ತತ್ರ ಮಧ್ವ ಉತ್ಸಂ ಸಮಾಪುಃ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೬॥

ಶಮ-ದಮಾದಿಗಳಿಂದ ವಿಹೀನರಾದವರೇ ಆಗಿರಲಿ ; ಶಮ-ದಮಾದಿಗಳಿಂದ ಯುಕ್ತರಾದವರೇ ಆಗಿರಲಿ–ಅಂಗುಷ್ಠಮಾತ್ರದ ಚಿದಾನಂದವಸ್ತುವು ಮನುಷ್ಯರಲ್ಲಿ ಸರ್ವಸಮಾನವಾಗಿಯೇ ಇರುತ್ತದೆ. ಆತ್ಮಜ್ಞಾನವನ್ನು ಪಡೆದವನಲ್ಲಿಯೂ ಮತ್ತು ಮೂಢನಲ್ಲಿಯೂ ಆತ್ಮವಸ್ತುವು ಇದ್ದೇ ಇರುತ್ತದೆ. ಆದರೆ ಮುಕ್ತರಾದವರು ಬ್ರಹ್ಮರಸದ ಉತ್ಕರ್ಷವನ್ನು ಪಡೆದುಕೊಳ್ಳುತ್ತಾರೆ.

ನಮ್ಮ ಮನಸ್ಸನ್ನು ಪರಮಾತ್ಮನೆಡೆಗೆ ತಿರುಗಿಸಿ ಅವನನ್ನು ಸಾಕ್ಷಾ

ತ್ಕರಿಸಿಕೊಂಡರೆ ವಿಶ್ವಜ್ಞಾನವು ತಾನಾಗಿಯೇ ತಿಳಿದುಹೋಗುತ್ತದೆ. ಆದುದರಿಂದ ಜ್ಞಾನಿಗಳಾದವರಿಗೆ ತಿಳಿಯದ ವಿಷಯವೇ ಇಲ್ಲವೆಂದು ಹೇಳುತ್ತಾರೆ.

ಉಭೌ ಲೋಕೌ ವಿದ್ಯಯಾ ವ್ಯಾಪ್ಯ ಯಾತಿ
ತದಾ ಹುತಂ ಚಾಹುತಮಗ್ನಿಹೋತ್ರಮ್ ।
ಮಾ ತೇ ಬ್ರಾಹ್ಮೀ ಲಘುತಾಮಾದಧೀತ
ಪ್ರಜ್ಞಾನಂ ಸ್ಯಾನ್ನಾಮ ಧೀರಾ ಲಭನ್ತೇ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೭॥

ಬ್ರಹ್ಮವಿದ್ಯೆಯಿಂದ ಇಹಲೋಕ-ಪರಲೋಕಗಳೆರಡನ್ನೂ ಜಯಿಸಿ ಪೂರ್ಣಾನಂದರೂಪನಾದ ಬ್ರಹ್ಮನನ್ನು ಪಡೆಯುತ್ತಾರೆ. ಬ್ರಹ್ಮಜ್ಞಾನಿಗಳು ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡದಿದ್ದರೂ ಮಾಡಿದಂತೆಯೇ ಸರಿ. ಈ ಬ್ರಹ್ಮವಿದ್ಯೆಯು ಮರ್ತ್ಯಭಾವವನ್ನು ನಿನಗೆ ಉಂಟುಮಾಡುವುದಿಲ್ಲ. ಬ್ರಹ್ಮಜ್ಞಾನಿಗೆ 'ಪ್ರಜ್ಞಾನ' ಎಂಬ ಹೆಸರೇ ಬರುತ್ತದೆ. ಇಂತಹ ಬ್ರಹ್ಮವಸ್ತುವನ್ನು ಧೀರರಾದವರು ಮಾತ್ರ ಪಡೆಯುತ್ತಾರೆ.

(ಬ್ರಹ್ಮಜ್ಞಾನಿಯು ಕರ್ಮವನ್ನು ತ್ಯಜಿಸಿದರೆ ಯಾವ ದೋಷವೂ ಇಲ್ಲ. ಸಕಾಮಕರ್ಮಾಚರಣೆಯಿಂದ ಮನುಷ್ಯನು ಮರ್ತ್ಯನಾಗಿಯೇ ಉಳಿಯುತ್ತಾನೆ. ಜನನ-ಮರಣಗಳು ಅವನಿಗೆ ತಪ್ಪಿದ್ದಲ್ಲ. ಜ್ಞಾನದಿಂದ ಮಾತ್ರವೇ ಜನನ-ಮರಣಗಳನ್ನು ಜಯಿಸಬಹುದು. 'ಪ್ರಜ್ಞಾನಂ ಬ್ರಹ್ಮ' ಎಂಬ ಶ್ರುತಿಯು ಬ್ರಹ್ಮವು ಜ್ಞಾನರೂಪವೇ ಎಂದು ಹೇಳಿದೆ. ಬ್ರಹ್ಮ ಜ್ಞಾನಿಯು ಬ್ರಹ್ಮನೇ ಆಗುತ್ತಾನೆ. 'ಬ್ರಹ್ಮವಿದ್ ಬ್ರಹ್ಮೈವ ಭವತಿ'. ಆದುದರಿಂದಲೇ ಬ್ರಹ್ಮಜ್ಞಾನಿಗೆ 'ಪ್ರಜ್ಞಾನ' ಎಂಬ ಹೆಸರು ಬರುತ್ತದೆ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ.)

ಏವಂ ರೂಪೋ ಮಹಾತ್ಮಾ ಸ ಪಾವಕಂ ಪುರುಷೋ ಗಿರನ್ ।
ಯೋ ವೈ ತಂ ಪುರುಷಂ ವೇದ ತಸ್ಯೇಹಾರ್ಥೋ ನ ರಿಷ್ಯತೇ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೧೮॥

ಯಾವ ಪುರುಷನು ಹೀಗೆ ಪ್ರಜ್ಞಾನೈಕಸ್ವರೂಪನಾಗಿರುವನೋ ಅವನು ಮಹಾನ್ ಆತ್ಮನೇ ಆಗಿರುವನು. ಸರ್ವೋಪಸಂಹರ್ತೃವಾದ ಅಗ್ನಿಯನ್ನು

ತನ್ನಲ್ಲಿಯೇ ನುಂಗಿಕೊಳ್ಳುವ ಯಾವ ಪುರುಷನು ಜ್ಞಾನೈಕರಸನಾದ ಪರಮಾತ್ಮನನ್ನು ಅರಿತುಕೊಳ್ಳುವನೋ–ಅವನ ಆತ್ಮವು ವಿನಾಶವನ್ನೈದು ವುದಿಲ್ಲ.

(ಬ್ರಹ್ಮವೇ ಅಗ್ನಿ. ಅಗ್ನಿಯು ಸಕಲವಸ್ತುಗಳನ್ನೂ ದಹಿಸಿ ನಿರ್ನಾಮ ಮಾಡುವಂತೆ–ಬ್ರಹ್ಮವಸ್ತುವು ಸಕಲವಿಶ್ವವನ್ನೂ ದಹಿಸಿ ತನ್ನಲ್ಲಿ ಅಡಗಿಸಿ ಕೊಳ್ಳುತ್ತದೆ. ಸರ್ವವೂ ಬ್ರಹ್ಮವೆಂಬ ಜ್ಞಾನವು ಉಂಟಾದಾಗ ಬ್ರಹ್ಮಾತಿ ರಿಕ್ತವಸ್ತುಗಳೇ ಕಾಣಿಸುವುದಿಲ್ಲ. ಆದುದರಿಂದ ಬ್ರಹ್ಮವೇ ಅಗ್ನಿ, ಅದನ್ನು ನುಂಗಿಕೊಳ್ಳುವುದೆಂದರೆ : ಅದೇ ತಾನೆಂದು ಭಾವಿಸುವುದು. ಮುಕ್ತಾತ್ಮನ ಪ್ರಾಣಗಳು ದೇಹವನ್ನು ಬಿಟ್ಟು ಉತ್ಕ್ರಾಂತಿಯನ್ನೈದುವುದಿಲ್ಲ. ಉತ್ಕ್ರಾಂತಿಯನ್ನು ಹೊಂದಿದರೆ ವಿನಾಶವಾದಂತೆ. ಆದುದರಿಂದ ಆತನ ಆತ್ಮಕ್ಕೆ ವಿನಾಶವಿಲ್ಲ.

'ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ । ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಶ್ರುತಿವಾಕ್ಯವು ಇದನ್ನೇ ಹೇಳುತ್ತದೆ.)

**ಯಃ ಸಹಸ್ರಂ ಸಹಸ್ರಾಣಾಂ ಪಕ್ಷಾನ್ಸಂತತ್ಯ ಸಮ್ಪತೇತ್ ।**
**ಮಧ್ಯಮೇ ಮಧ್ಯ ಆಗಚ್ಛೇದಪಿ ಚೇತ್ಸ್ಯಾನ್ಮನೋಜವಃ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೯॥**

ಒಬ್ಬನು ಹತ್ತು ಲಕ್ಷ ರೆಕ್ಕೆಗಳನ್ನು ತನ್ನ ಸುತ್ತಲೂ ಕಟ್ಟಿಕೊಂಡು ಅಪರಿಮಿತವಾದ ವೇಗದಲ್ಲಿ ಹಾರಿಹೋಗಲೂಬಹುದು. ಮನಸ್ಸಿನ ವೇಗ ದಲ್ಲಿಯೂ ಪ್ರಯಾಣಮಾಡಬಹುದು. ಎಷ್ಟು ಹಾರಿದರೂ ಅವನು ಯಾವ ನೆಲೆಯಲ್ಲಿಯೂ ನಿಲ್ಲಲಾರನು. ಅವನಿಗೆ ನಿರ್ದಿಷ್ಟವಾದ ನೆಲೆಯೊಂದು ಸಿಗಲಾರದು. ಹೃದಯಸ್ಥನಾಗಿರುವ ಪರಮಾತ್ಮನ ಕಡೆಗೇ ಅವನು ಪುನಃ ಬರಲೇಬೇಕು. (ಪ್ರತಿಯೊಬ್ಬ ಜೀವಿಯೂ ಪರಮಾತ್ಮನಿಂದಲೇ ಹೊರಡು ತ್ತಾನೆ. ಸಾವಿರಾರು ಲಕ್ಷೋಪಲಕ್ಷ ಜನ್ಮಗಳನ್ನು ಪಡೆದ ಮೇಲಾದರೂ ಆ ಜೀವಿಯು ಪುನಃ ಪರಮಾತ್ಮನಲ್ಲಿಯೇ ವಿಲೀನನಾಗಬೇಕು. ಪ್ರಕೃತಿಯಲ್ಲಿನ ವಿಜ್ಞಾನದ ಶೋಧನೆಗೆ ಮಿತಿ ಎಂಬುದಿಲ್ಲ. ಮುಂದಿನ ಸಾವಿರಾರು ವರ್ಷಗಳನಂತರವೂ ಪ್ರಕೃತಿಯಲ್ಲಿ ಶೋಧಿಸಲಾಗದೇ ಉಳಿಯುವ ರಹಸ್ಯವಿದ್ದೇ ಇರುತ್ತದೆ. ಇದರಲ್ಲಿ ಬೇಸರಗೊಂಡವನು ಅಧ್ಯಾತ್ಮಜ್ಞಾನದ

ಕಡೆಗೆ ತಿರುಗಲೇಬೇಕು. ಹೃದಯದಲ್ಲಿಯೇ ಕುಳಿತಿರುವ ಪರಮಾತ್ಮನೆಡೆಗೆ ನಮ್ಮ ಮನಸ್ಸನ್ನೂ ತಿರುಗಿಸಿ ಅವನನ್ನು ಸಾಕ್ಷಾತ್ಕರಿಸಿಕೊಂಡರೆ ವಿಶ್ವವಿಜ್ಞಾನವು ತಾನಾಗಿಯೇ ತಿಳಿದುಹೋಗುತ್ತದೆ. ಆದುದರಿಂದ ಜ್ಞಾನಿಗಳಾದವರಿಗೆ ತಿಳಿಯದ ವಿಷಯವೇ ಇಲ್ಲವೆಂದು ಹೇಳುತ್ತಾರೆ.)

ನ ದರ್ಶನೇ ತಿಷ್ಠತಿ ರೂಪಮಸ್ಯ
ಪಶ್ಯನ್ತಿ ಚೈನಂ ಸುವಿಶುದ್ಧಸತ್ತ್ವಾಃ ।
ಹಿತೋ ಮನೀಷೀ ಮನಸಾ ನ ತಪ್ಯತೇ
ಯೇ ಪ್ರವ್ರಜೇಯುರಮೃತಾಸ್ತೇ ಭವನ್ತಿ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨೦॥

ಪರಮಾತ್ಮನನ್ನು ಕಾಣಬೇಕೆಂದರೆ ಅವನಿಗೆ ನಿರ್ದಿಷ್ಟವಾದ ರೂಪವೊಂದಿಲ್ಲ. ಹಿಂದೆ ಹೇಳಿದಂತೆ 'ನ ಚಕ್ಷುಷಾ ಪಶ್ಯತಿ ಕಶ್ಚನೈನಮ್' ಆ ಸಚ್ಚಿದಾನಂದಮೂರ್ತಿಯನ್ನು ಪ್ರಾಕೃತವಾದ ಕಣ್ಣಿನಿಂದ ಯಾರೂ ನೋಡಲಾರರು. ಯಾರಿಗೆ ಅಂತಃಕರಣಶುದ್ಧಿಯಿರುವುದೋ, ಯಾರು ಶುದ್ಧಸತ್ತ್ವರೋ–ಅಂತಹವರು ಮಾತ್ರವೇ ಸಚ್ಚಿದಾನಂದಸ್ವರೂಪನಾದ ಭಗವಂತನನ್ನು ತಮ್ಮ ಹೃನ್ಮಂದಿರಗಳಲ್ಲಿ ಕಂಡುಕೊಳ್ಳುತ್ತಾರೆ. ಯಾರು ಸರ್ವಪ್ರಾಣಿಗಳಿಗೂ ಹಿತಕರರೋ, ಮನೋನಿಗ್ರಹವುಳ್ಳವರೋ, ಎಂತಹ ಉದ್ವಿಗ್ನತೆಯ ಸಂದರ್ಭದಲ್ಲಿಯೂ ಯಾರು ಮನಸ್ಸಿಗೆ ತಾಪವನ್ನುಂಟು ಮಾಡಿಕೊಳ್ಳುವುದಿಲ್ಲವೋ, ಶಾಂತಮನಸ್ಕರಾಗಿರುವರೋ ಮತ್ತು ಯಾರು ಸಂಸಾರವನ್ನೇ ತೊರೆದು ಆತ್ಮದರ್ಶನಮಾಡಿಕೊಳ್ಳಬೇಕೆಂಬ ದೃಢ ಸಂಕಲ್ಪದಿಂದ ಹೊರಟುಬಿಡುತ್ತಾರೆಯೋ–ಅಂತಹವರು ಮಾತ್ರವೇ ಆತ್ಮ ದರ್ಶನಸಾಧನೆಗೆ ಅರ್ಹರಾಗುತ್ತಾರೆ ಮತ್ತು ಆತ್ಮದರ್ಶನಮಾಡಿಕೊಂಡು ಅಮೃತರೂ ಆಗುತ್ತಾರೆ.

ಗೂಹನ್ತಿ ಸರ್ಪಾ ಇವ ಗಹ್ವರಾಣಿ
ಸ್ವಶಿಕ್ಷಯಾ ಸ್ವೇನ ವೃತ್ತೇನ ಮರ್ತ್ಯಾಃ ।
ತೇಷು ಪ್ರಮುಹ್ಯನ್ತಿ ಜನಾ ವಿಮೂಢಾ
ಯಥಾಧ್ವಾನಂ ಮೋಹಯನ್ತೇ ಭಯಾಯ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨೧॥

ತಮ್ಮ ದೋಷಗಳನ್ನು ಹೊರಗೆಡಹಿದರೆ ಶಿಕ್ಷಿಸುತ್ತೇವೆಂಬ ಭಯಪಡಿಸುವಿಕೆಯಿಂದಲೂ ಮತ್ತು ತಮ್ಮ ತೋರಿಕೆಯ ಸದ್ವೃತ್ತಿಗಳಿಂದಲೂ ದಾಂಭಿಕರಾದ ಮನುಷ್ಯರು–ಸರ್ಪಗಳು ತಮ್ಮ ಶರೀರವನ್ನು ಬಿಲದಲ್ಲಿ ಮುಚ್ಚಿಡುವಂತೆ–ತಮ್ಮ ದುರ್ವೃತ್ತಗಳನ್ನು ಮುಚ್ಚಿಟ್ಟುಕೊಳ್ಳುತ್ತಾರೆ. ಅವರಲ್ಲಿರುವ ದುರ್ವ್ಯಾಪಾರಗಳನ್ನು ತಿಳಿಯದ ಮೂರ್ಖಜನರು ಅವರಲ್ಲಿ ವಿಶ್ವಾಸವಿಡುತ್ತಾರೆ. ಸರಿಯಾದ ಹಾದಿಯಲ್ಲಿ ಹೋಗುತ್ತಿರುವವನೊಬ್ಬನಿಗೆ ದಾರಿಯನ್ನು ತಪ್ಪಿಸಿ ಭಯವನ್ನುಂಟುಮಾಡುವಂತೆ–ದಾಂಭಿಕರು ತಿಳಿಯದೇ ತಮ್ಮನ್ನು ಅನುಸರಣೆಮಾಡುವ ಜನರನ್ನು ಅಪಮಾರ್ಗದಲ್ಲೊಯ್ದು ನರಕದಲ್ಲಿ ಬೀಳಿಸುತ್ತಾರೆ.

(ನಿಜವಾದ ಜ್ಞಾನಿಗಳಿಗಿಂತಲೂ ಲೋಕದಲ್ಲಿ ತೋರಿಕೆಯ ಅಥವಾ ಠಕ್ಕಿನ ಸಂನ್ಯಾಸಿಗಳೇ ಹೆಚ್ಚೆಂಬುದನ್ನು ಈ ಶ್ಲೋಕವು ಸೂಚಿಸುತ್ತದೆ. ಇಂದಿನ ದಿನಗಳಲ್ಲಿ ನಾವಿದನ್ನು ಹಲವಾರು ನಿದರ್ಶನಗಳಿಂದ ಕಂಡುಕೊಳ್ಳಬಹುದಾಗಿದೆ. ಕಾಷಾಯವಸ್ತ್ರಗಳನ್ನು ಧರಿಸಿರುತ್ತಾರೆ. ಹೃದಯಂಗಮವಾಗಿ ಶಾಸ್ತ್ರಗಳನ್ನು ಉದ್ಧರಿಸಿ ಮಾತನಾಡುತ್ತಾರೆ. ಎಲ್ಲರೂ ತ್ಯಾಗಿಗಳಾಗಬೇಕೆಂದು ಬೋಧಿಸುತ್ತಿರುತ್ತಾರೆ. ಆದರೆ ಇವರ ಮನಸ್ಸು ಮಾತ್ರ ಕಾಮಿನೀ-ಕಾಂಚನಗಳಲ್ಲಿಯೇ ಕೇಂದ್ರೀಕೃತವಾಗಿರುತ್ತದೆ. ಅಧ್ಯಾತ್ಮಪಿಪಾಸುಗಳಾದ ಅನೇಕರು ಇವರನ್ನು ಅನುಸರಿಸಿ ಇವರ ಶಿಷ್ಯರೂ ಆಗುತ್ತಾರೆ. ಆದರೆ ಕಡೆಯಲ್ಲಿ ಇಂತಹ ಕಾಷಾಯವಸ್ತ್ರಧಾರಿಗಳಿಂದ ಆತ್ಮದರ್ಶನಕ್ಕೆ ಯಾವ ವಿಧವಾದ ಮಾರ್ಗವನ್ನೂ ಕಂಡುಕೊಳ್ಳಲಾಗದೇ ಹತಾಶರಾಗುತ್ತಾರೆ. ಇಂತಹ ಕಪಟಮಹರ್ಷಿಗಳನ್ನು ಯೋಗೀಶ್ವರರೆಂದು ಪ್ರಚಾರಮಾಡಲು ಕೂಡ ದೊಡ್ಡದೊಂದು ಸಮೂಹವೇ ಇರುತ್ತದೆ. ಅನೇಕ ವಿದ್ವಾಂಸರೂ ಇಂತಹ ಕಪಟಯತಿಗಳ ಬಳಿಯಲ್ಲಿ ಸುತ್ತಾಡುತ್ತಿರುತ್ತಾರೆ. ಇದನ್ನು ನೋಡಿದ ಸಾಮಾನ್ಯಜನತೆಯು ಬಹಳ ಬೇಗ ಮರುಳಾಗಿಬಿಡುತ್ತದೆ. ಇಂತಹ ದಾಂಭಿಕರೆಂದಿಗೂ ಭಗವಂತನನ್ನು ಕಾಣಲಾರರು. ಕೇವಲ ಯೋಗಿಗಳಾದವರು ಮಾತ್ರವೇ ತಮ್ಮ ಹೃನ್ಮಂದಿರಗಳಲ್ಲಿ ಚಿನ್ಮಯನಾದ ಪರಮಾತ್ಮನನ್ನು ಕಂಡುಕೊಳ್ಳುತ್ತಾರೆ.)

ನಾಹಂ ಸದಾಸತ್ಕೃತಃ ಸ್ಯಾಂ ನ ಮೃತ್ಯು–
ರ್ನ ಚಾಮೃತ್ಯುರಮೃತಂ ಮೇ ಕುತಃ ಸ್ಯಾತ್ ।
ಸತ್ಯಾನೃತೇ ಸತ್ಯಸಮಾನಬನ್ಧೇ
ಸತಶ್ಚ ಯೋನಿರಸತಶ್ಚೈಕ ಏವ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨೨॥

ನಾನು ಯಾರೊಬ್ಬರ ಅಸತ್ಕಾರ ಅಥವಾ ತಿರಸ್ಕಾರಕ್ಕೂ ಪಾತ್ರನಾಗ ತಕ್ಕವನಲ್ಲ. ನನಗೆ ಮರಣವೆಂಬುದಾಗಲೀ-ಮರಣವಿಲ್ಲವೆಂಬುದಾಗಲೀ ಇಲ್ಲ. ಮೃತ್ಯು ಮತ್ತು ಅಮೃತ್ಯು–ಈ ಎರಡು ಅವಸ್ಥೆಗಳೂ ಇಲ್ಲದ ನನಗೆ ಅಮೃತತ್ತ್ವವೆಂಬುದು ತಾನೇ ಇರಲು ಹೇಗೆ ಸಾಧ್ಯವಾಗುವುದು? ಸತ್ಯ ಮತ್ತು ಅಸತ್ಯಗಳೆರಡೂ ಸತ್ಯಸ್ವರೂಪಪರಬ್ರಹ್ಮವಸ್ತುವಿನಲ್ಲಿ ಸಮಾನ ರೂಪಗಳಾಗಿವೆ. ಸತ್ ಮತ್ತು ಅಸತ್–ಈ ಎರಡಕ್ಕೂ ನಾನು ಏಕಮಾತ್ರ ಯೋನಿಯಾಗಿದ್ದೇನೆ. ಇಂತಹ ನನ್ನನ್ನು (ಪರಮಾತ್ಮನನ್ನು) ಯೋಗಿಗಳಾದವರು ತಮ್ಮ ಹೃದಯಾಂತರಾಳದಲ್ಲಿ ನೋಡಿಕೊಳ್ಳುತ್ತಾರೆ.

(ಇದು ಹೃದಯಾಂತರಾಳದಲ್ಲಿರುವ ಚಿದಾನಂದಸ್ವರೂಪನು ಹೇಳುವ ಮಾತಾಗಿದೆ. ಪ್ರಮಾದವೆಂದರೇನೆಂಬುದನ್ನೇ ತಿಳಿಯದ, ಮೃತ್ಯುವೇ ಇಲ್ಲವೆಂದು ಘೋಷಿಸಿದ, ಪರಬ್ರಹ್ಮಸ್ವರೂಪರಾದ ಸನತ್ಸುಜಾತರೂ ಈ ಮಾತನ್ನು ಹೇಳಿಕೊಂಡರೆಂದರೆ ಅಸಂಗತವಾಗಲಾರದು. ಎಲ್ಲರ ಹೃದಯಗಳಲ್ಲಿಯೂ ಅಡಗಿರುವ ಚಿನ್ಮಯರೂಪನನ್ನು ನಾಸ್ತಿಕರು ಕೂಡ ತಿರಸ್ಕಾರಮಾಡಲಾರರು. ಹೃದಯದಲ್ಲಿ ಮಾಂಸ-ರಕ್ತಗಳ ಹೊರತಾಗಿ ಬೇರೇನಿದೆ?–ಎಂದು ಹೇಳುವವರು ಕೂಡ ಅವನನ್ನು ಯಾವ ರೀತಿಯಲ್ಲಿಯೂ ಅಸತ್ಕಾರಮಾಡಲಾರರು. ಏಕೆಂದರೆ.: ಹೃದಯಾಂತರಾಳದಲ್ಲಿದ್ದೂ ದೇಹಕ್ಕೆ ಅಂಟಿಕೊಳ್ಳದೇ ಇರುವ ಮಹಾವಸ್ತುವದು. ಇದನ್ನೇ ವ್ಯಾಖ್ಯಾನಕಾರರು ಹೀಗೆ ವಿಶ್ಲೇಷಣೆಯನ್ನು ಮಾಡಿರುತ್ತಾರೆ.

ಅಹಂ ಸದಾ = ಕಾಲತ್ರಯೇಽಪಿ, ಅಸತ್ಕೃತಃ = ಅಸತಾ = ದೇಹೇನ್ದ್ರಿಯದಿನಾ =ದೇಹೇಂದ್ರಿಯಗಳಿಂದ ತಾದಾತ್ಮ್ಯಾಧ್ಯಾಸೇನ = ದೇಹವೇ ನಾನು ಎಂಬ ಭಾವನೆಯಿಂದ, ತದ್ವತ್ಕೃತ-ಸುಖದುಃಖಜರಾಮರಣಾದಿ ಜನ್ಮವಾನ್ ಕೃತಃ = ಸುಖ-ದುಃಖ-ಜರಾ-ಮರಣಗಳಿಂದ ಕೂಡಿದ ಶರೀರಿ

ಯಂತೆ ಮಾಡಲ್ಪಟ್ಟವನು, ನ = ಆಗಿರುವುದಿಲ್ಲ. ಮರಣವಿಲ್ಲದವನು ನಾನು. ಮರಣವಿಲ್ಲವೆಂದ ಮೇಲೆ ಮರಣವಿಲ್ಲದಿರುವಿಕೆಯ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅಮರತ್ತ್ವವೆಂಬುದಿಲ್ಲ. ತಾನೇ ಸಚ್ಚಿದಾನಂದ ಸ್ವರೂಪನಾಗಿರುವಾಗ ಅಮೃತಸ್ವರೂಪನಾಗಿರುವಾಗ ಪುನಃ ಅದನ್ನು ಪಡೆದುಕೊಳ್ಳಬೇಕೆಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಸತ್ಯಾನೃತಗಳೂ ಬ್ರಹ್ಮನಲ್ಲಿಯೇ ಸ್ಥಾನವುಳ್ಳವುಗಳಾಗಿವೆ. ವ್ಯಾಖ್ಯಾನಕಾರರ ಪ್ರಕಾರ.: ಸತ್ಯಂ = **ಅಬಾಧಿತಂ ಸಮಾನಂ = ಸರ್ವದಾ ಸರ್ವದೇಶೇಷು ಚ ಏಕರೂಪಂ ಬ್ರಹ್ಮ, ತದೇವ ಬನ್ಧಃ = ನಿಗ್ರಹಸ್ಥಾನಂ ಯಯೋಃ ತೇ ಸತ್ಯಸಮಾನಬನ್ಧೇ. 'ಸತಶ್ಚ ಯೋನಿಮಸತಶ್ಚ ವಿವಃ'** ಎಂಬ ಶ್ರುತಿವಾಕ್ಯವೇ ಇಲ್ಲಿ **ಸತಶ್ಚಯೋನಿರಸತಶ್ಚೈಕ ಏವ** ಎಂದು ಹೇಳಲ್ಪಟ್ಟಿದೆ. ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿದ್ದಾರೆ. **ಸತಃ= ಕಾರ್ಯಸ್ಯ, ಅಸತಃ = ಕಾರಣಸ್ಯ, ಯೋನಿಃ = ಉತ್ಪತ್ತಿ ಪ್ರಳಯಸ್ಥಾನಂ** = ಕಾರ್ಯ ಮತ್ತು ಕಾರಣಗಳಿಗೆ ಅರ್ಥಾತ್ ಉತ್ಪತ್ತಿ ಮತ್ತು ಪ್ರಳಯಗಳಿಗೆ ನಾನೇ ಮೂಲಸ್ಥಾನ ನಾಗಿರುತ್ತೇನೆ.)

(ಪಾಠಾಂತರದ ಪ್ರಕಾರ :

**ತಸ್ಮಾತ್ಸದಾ ಸತ್ಕೃತಃ ಸ್ಯಾನ್ನ ಮೃತ್ಯುರಮೃತಂ ಕುತಃ ।**
**ಸತ್ಯಾನೃತೇ ಸತ್ಯಸಮಾನುಬನ್ಧಿನೀ ಸತಶ್ಚಯೋನಿರಸತಶ್ಚೈಕ ಏವ ।**
**ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥**

ಆದುದರಿಂದ ಮನುಷ್ಯನು ಸರ್ವದಾ ಸತ್ಕೃತನಾಗಿರಬೇಕು. ಅವನಿಗೆ ಮರಣದ ಭಯವಿಲ್ಲ ಎಂದ ಮೇಲೆ ಅಮೃತನಾಗುವ ಪ್ರಸಂಗವೆಲ್ಲಿ? ಪರಮಾರ್ಥಸತ್ಯವನ್ನೇ ಅನುಸರಿಸಿ ಸತ್ಯಾನೃತಗಳೆರಡೂ ಇರುತ್ತವೆ. ಅದ್ವಿತೀಯವಾದ ಬ್ರಹ್ಮವು ಒಂದೇ. ಸತ್ಯ-ಅಸತ್ಯಗಳೆರಡಕ್ಕೂ ಆಶ್ರಯ.

ಸಚ್ಚಿದಾನಂದಾದ್ವಿತೀಯಬ್ರಹ್ಮಸ್ವರೂಪನೆಂದು ತನ್ನನ್ನು ಭಾವಿಸಿಕೊಳ್ಳು ವುದೇ ಸತ್ಕಾರ. ಈ ಭಾವನೆಯನ್ನು ಬೆಳೆಸಿಕೊಂಡವನು ಸತ್ಕೃತನು. ಅವನಿಗೆ ಮರಣವಿಲ್ಲ. ಅಮೃತತ್ತ್ವವೆಂದರೆ ಮರಣರಾಹಿತ್ಯ. ಅದು ಮರಣಸಾಪೇಕ್ಷ. ಮರಣವೇ ಇಲ್ಲದ ಮೇಲೆ ಮರಣರಾಹಿತ್ಯವಿದೆಯೆಂಬ

ಅಂಶವೇ ಉಳಿಯುವುದಿಲ್ಲ. ಸರ್ಪವನ್ನು ರಜ್ಜುವೆಂದು ಭ್ರಮಿಸಿದ ಸ್ಥಳದಲ್ಲಿ ಸರ್ಪವು ಸತ್ಯ. ರಜ್ಜುವು ಅಸತ್ಯ. ಇವೆರಡಕ್ಕೂ ಬ್ರಹ್ಮನೇ ಅಧಿಷ್ಠಾನ.

ನ ಸಾಧುನಾ ನೋತ ಅಸಾಧುನಾ ವಾ–
ಸಮಾನಮೇತದ್ದೃಶ್ಯತೇ ಮಾನುಷೇಷು ।
ಸಮಾನಮೇತದಮೃತಸ್ಯ ವಿದ್ಯಾ–
ದೇವಂಯುಕ್ತೋ ಮಧು ತದ್ವೈ ಪರೀಪ್ಸೇತ್ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨೩॥

ಹಿಂದೆ ಹೇಳಿದುದನ್ನೇ ಇಲ್ಲಿ ಮತ್ತೂ ವಿಶದಪಡಿಸಿದ್ದಾರೆ.

ಮನುಷ್ಯನು ಮಾಡುವ ಸತ್ಕರ್ಮದಿಂದಾಗಲೀ, ಅಸತ್ಕರ್ಮದಿಂದಾಗಲೀ–ಅವನ ಹೃದಯಗುಹೆಯಲ್ಲಿರುವ ಬ್ರಹ್ಮಸ್ವರೂಪವು ವ್ಯತ್ಯಾಸವಾಗಿ ಕಾಣುವುದಿಲ್ಲ. ನಾಸ್ತಿಕನ ಹೃದಯದಲ್ಲಿಯೂ, ಆಸ್ತಿಕನ ಹೃದಯದಲ್ಲಿಯೂ ಕೊಲೆಗಾರನ ಹೃದಯದಲ್ಲಿಯೂ, ಅಹಿಂಸಾವಾದಿಯ ಹೃದಯದಲ್ಲಿಯೂ ಅರ್ಥಾತ್ ಎಲ್ಲರ ಹೃದಯಗಳಲ್ಲಿಯೂ ಇದು ಸಮಾನರೂಪವಾಗಿಯೇ ಇರುತ್ತದೆ. ಬ್ರಹ್ಮನ ಅಧಿಷ್ಠಾನವು ಸರ್ವತ್ರಸಮಾನವಾಗಿರುವುದೆಂದು ತಿಳಿಯಬೇಕು. ದೇಹಾಭಿಮಾನಿಗಳಾದ ಮನುಷ್ಯರಲ್ಲಿ ಮಾತ್ರ ಈ ವಿಷಮತೆಯು ಕಾಣುತ್ತದೆ. ಇಂತಹ ಪರಬ್ರಹ್ಮನನ್ನು ಯೋಗಿಗಳಾದವರು ತಮ್ಮ ಹೃದಯಗುಹೆಯಲ್ಲಿ ಕಂಡುಕೊಳ್ಳುತ್ತಾರೆ.

ನಾಸ್ಯಾತಿವಾದಾ ಹೃದಯಂ ತಾಪಯನ್ತಿ
ನಾನಧೀತಂ ನಾಹುತಮಗ್ನಿಹೋತ್ರಮ್ ।
ಮನೋ ಬ್ರಾಹ್ಮೀ ಲಘುತಾಮಾದಧೀತ
ಪ್ರಜ್ಞಾಂ ಚಾಸ್ಮೈ ನಾಮ ಧೀರಾ ಲಭನ್ತೇ ।
ಯೋಗಿನಸ್ತಂ ಪ್ರಪಶ್ಯನ್ತಿ ಭಗವನ್ತಂ ಸನಾತನಮ್ ॥೨೪॥

ಹಿಂದಿನ ಶ್ಲೋಕಗಳಲ್ಲಿ ಪರಬ್ರಹ್ಮವಸ್ತುವಿನ ಸ್ವರೂಪವನ್ನು ಹೇಳಿ ಈ ಶ್ಲೋಕದಲ್ಲಿ ಪರಬ್ರಹ್ಮವಸ್ತುವನ್ನು ಕಂಡುಕೊಂಡವನ ಲಕ್ಷಣಗಳನ್ನು ಹೇಳಿದ್ದಾರೆ. ಬ್ರಹ್ಮವಿದನಾದವನಿಗೆ ತನ್ನನ್ನು ಕುರಿತು ಮಾಡುವ ನಿಂದೆಗಳು

ಯಾವ ವಿಧವಾದ ಪರಿಣಾಮವನ್ನೂ ಅಥವಾ ಪರಿತಾಪವನ್ನೂ ಉಂಟು ಮಾಡಲಾರವು. ನಿಂದೆಯಿಂದ ಅವನ ಮನಸ್ಸು ತಲ್ಲಣಿಸದು. ಸ್ತುತಿಯಿಂದ ಅವನ ಮನಸ್ಸು ಹಿಗ್ಗದು. ಅಧ್ಯಯನವನ್ನು ಮಾಡಲಿಲ್ಲವೆಂದಾಗಲೀ–ಅಗ್ನಿಹೋತ್ರವನ್ನು ಮಾಡಲಿಲ್ಲವೆಂದಾಗಲೀ ಅವನ ಮನಸ್ಸು ಖಿನ್ನವಾಗುವುದಿಲ್ಲ. ಅಧ್ಯಯನ ಮತ್ತು ಅಗ್ನಿಹೋತ್ರಗಳ ಪೂರ್ಣಫಲವನ್ನೇ ಅವನು ಪಡೆದಿರುತ್ತಾನಾದುದರಿಂದ ಅವನಿಗೆ ಇವುಗಳ ಅವಶ್ಯಕತೆಯೂ ಇಲ್ಲವೆನ್ನಬಹುದು.

ಅನುಷ್ಠಾನಪರನಿಗೆ–ಸಾಧಕನಿಗೆ ಬ್ರಹ್ಮಸಂಬಂಧವಾದ ವಿದ್ಯೆಯು ಸ್ಥಿರಬುದ್ಧಿಯನ್ನು ಕೊಡುತ್ತದೆ. ಧೀರಾಃ ಎಂದರೆ ಧ್ಯಾನಮಗ್ನರಾದವರು ಇಂತಹ ಬ್ರಹ್ಮಜ್ಞಾನವನ್ನು ನಿಶ್ಚಯವಾಗಿ ಪಡೆದುಕೊಳ್ಳುತ್ತಾರೆ. ಇಂತಹ ಯೋಗಿಗಳೇ ತಮ್ಮ ಹೃದಯಗುಹೆಯಲ್ಲಿರುವ ಸನಾತನನಾದ ಪರಮಾತ್ಮನನ್ನು ಕಂಡುಕೊಳ್ಳುತ್ತಾರೆ.

**ಏವಂ ಯಃ ಸರ್ವಭೂತೇಷು ಆತ್ಮಾನಮನುಪಶ್ಯತಿ ।**
**ಅನ್ಯತ್ರಾನ್ಯತ್ರ ಯುಕ್ತೇಷು ಕಿಂ ಸ ಶೋಚೇತ್ತತಃ ಪರಮ್ ॥**

ಈ ರೀತಿಯಾಗಿ ಯಾವನು ಸರ್ವಭೂತಗಳಲ್ಲಿಯೂ (ಸರ್ವಪ್ರಾಣಿಗಳಲ್ಲಿಯೂ) ತನ್ನಲ್ಲಿರುವ ಆತ್ಮನನ್ನೇ ಕಾಣುವನೋ–ಅವನು ವಿಷಯ ಭೋಗಗಳಲ್ಲಿ ಆಸಕ್ತರಾಗಿರುವವರ ವಿಷಯದಲ್ಲಿ ಯಾವ ಕಾರಣದಿಂದ ತಾನೇ ಶೋಕಿಸುತ್ತಾನೆ? ಮನುಷ್ಯರನ್ನು ಮನುಷ್ಯರೆಂದು ಪರಿಗಣಿಸಿ ಆ ದೃಷ್ಟಿಯಿಂದ ಅವರನ್ನು ನೋಡಿದರೆ ಅವರಲ್ಲಿರುವ ಗುಣ-ದೋಷಗಳೆಲ್ಲವೂ ಇವನಿಗೆ ಕಾಣುತ್ತವೆ. ಪ್ರಾಣಿಮಾತ್ರವನ್ನೇ ಪರಬ್ರಹ್ಮವಸ್ತುವೆಂದು ಪರಿಗಣಿಸಿ, ಎಲ್ಲ ಪ್ರಾಣಿಗಳ ಹೃದಯದಲ್ಲಿಯೂ ಇರುವ ಪರಮಾತ್ಮನನ್ನೇ ಕಾಣುವವನಿಗೆ ಆ ಪ್ರಾಣಿಗಳಲ್ಲಿರುವ ಗುಣ-ದೋಷಗಳ ವಿಷಯವಾಗಿ ವಿವೇಚನೆಯೇ ಇರುವುದಿಲ್ಲ. ಇತರರು ಮಾಡುವ ಕೆಟ್ಟ ಕೆಲಸ ಅಥವಾ ಒಳ್ಳೆಯ ಕೆಲಸಗಳ ವಿಷಯವಾಗಿ ಬ್ರಹ್ಮವಿದನು ಶೋಕಿಸಹೋಗುವುದಿಲ್ಲ ಅಥವಾ ಸಂತೋಷಿಸುವುದೂ ಇಲ್ಲ.

**‘ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ’** ಎಂದು ಉಪನಿಷತ್ತು ಸಾರುತ್ತದೆ. ಸಕಲಪ್ರಾಣಿಗಳನ್ನೂ ಏಕತ್ವದಿಂದ

ನೋಡುವವನಿಗೆ–ಸರ್ವಾತ್ಮನೂ ತಾನೇ ಎಂದು ತಿಳಿದವನಿಗೆ ಶೋಕವೆಲ್ಲಿ? ಮೋಹವೆಲ್ಲಿ? ಅವನು ಕೃತಾರ್ಥ ; ಧನ್ಯ.

**ಯಥೋದಪಾನೇ ಮಹತಿ ಸರ್ವತಃ ಸಮ್ಪ್ಲುತೋದಕೇ ।**
**ಏವಂ ಸರ್ವೇಷು ವೇದೇಷು ಆತ್ಮಾನಮನುಜಾನತಃ ॥೨೬॥**

ಸರ್ವತ್ರ ನೀರಿನಿಂದ ವ್ಯಾಪ್ತವಾಗಿರುವ ಕೊಳದಲ್ಲಿ ಮನುಷ್ಯನಿಗೆ ಬಾಯಾರಿಕೆಯನ್ನು ತೀರಿಸಿಕೊಳ್ಳಲು ಅತ್ಯಲ್ಪವಾದ ನೀರು ಮಾತ್ರ ಸಾಕಾಗು ವಂತೆ–ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಲಿಚ್ಛಿಸುವವನಿಗೆ ಸಕಲವೇದ ಗಳಿಂದಲೂ ಬೇಕಾಗಿರುವುದು ಕೆಲವು ವಾಕ್ಯಗಳು ಮಾತ್ರ. '**ಆತ್ಮಾ–ಗುಹಾಯಾಂ ನಿಹಿತೋಽಸ್ಯ ಜನ್ತೋಃ**' ಇತ್ಯಾದಿ ವಾಕ್ಯಗಳೇ ಆತ್ಮದರ್ಶನಕ್ಕೆ ಪರ್ಯಾಪ್ತವಾಗುತ್ತವೆ. (ಶ್ರೀಗೀತೆ-ಅ. ೨ ಶ್ಲೋ.೪೬)

(ಪಾಠಾಂತರದ ಪ್ರಕಾರ :

**ಯಥೋದಪಾನೇ ಮಹತಿ ಸರ್ವತಃ ಸಮ್ಪ್ಲುತೋದಕೇ ।**
**ಏವಂ ಭೂತೇಷು ಸರ್ವೇಷು ಬ್ರಾಹ್ಮಣಸ್ಯ ವಿಶೇಷತಃ ॥**

ನೀರಿನಿಂದ ತುಂಬಿ ತುಳುಕುತ್ತಿರುವ ಕೂಪ-ತಟಾಕಾದಿಗಳಿದ್ದರೂ ಬಾಯಾರಿಕೆಯಿಲ್ಲದವನಿಗೆ ಅವುಗಳಿಂದ ಆಗಬೇಕಾದುದೇನೂ ಇಲ್ಲ. ಹಾಗೆಯೇ ಬ್ರಹ್ಮಜ್ಞಾನಿಗೆ ಸಕಲಪ್ರಾಣಿವರ್ಗಗಳಿಂದಲೂ ಆಗಬೇಕಾದುದೇನೂ ಇಲ್ಲ.

'ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಬ್ರಹ್ಮಜ್ಞಾನಿಗೆ ಜಗತ್ತಿನಿಂದ ಆಗಬೇಕಾದು ದೇನೂ ಇಲ್ಲವೆಂದು ಹೇಳಿದ್ದಾನೆ. ಆದುದರಿಂದಲೇ ಅವನಿಗೆ ಶೋಕ-ಮೋಹಗಳು ಒದಗುವುದಿಲ್ಲ.)

**ಅಙ್ಗುಷ್ಠಮಾತ್ರಃ ಪುರುಷೋ ಮಹಾತ್ಮಾ**
**ನ ದೃಶ್ಯತೇಽಸೌ ಹೃದಿ ಸಂನಿವಿಷ್ಟಃ ।**
**ಅಜಶ್ಚರೋ ದಿವಾರಾತ್ರಮತನ್ದ್ರಿತಶ್ಚ**
**ಸ ತಂ ಮತ್ವಾ ಕವಿರಾಸ್ತೇ ಪ್ರಸನ್ನಃ ॥೨೭॥**

ಎಲ್ಲ ಪ್ರಾಣಿಗಳ ಹೃದಯಕಮಲಗಳಲ್ಲಿರುವ ಪುರುಷನು ಕೇವಲ ಅಂಗುಷ್ಠಮಾತ್ರನು. ಅಷ್ಟಿದ್ದರೂ ಮಹಾತ್ಮನು ; ವಿಶ್ವವ್ಯಾಪಕನು ;

ಪ್ರಪಂಚವನ್ನೇ ಆವರಿಸಿ ನಿಂತಿದ್ದಾನೆ. ಎಲ್ಲರ ಹೃದಯಗಳಲ್ಲಿಯೂ ಅಚಲನಾಗಿ ಕುಳಿತಿದ್ದಾನೆ. ಚರ್ಮದ ಕಣ್ಣುಗಳಿಗಿವನು ಕಾಣತಕ್ಕವನಲ್ಲ. (ಬಾಹ್ಯೇಂದ್ರಿಯಗಳಿಗೆ ಇವನು ವಿಷಯನಲ್ಲ.) ಇವನು ಶಾಶ್ವತನು. ಇವನಿಗೆ ಹುಟ್ಟು-ಸಾವುಗಳಿಲ್ಲ. ಸ್ವಲ್ಪವಾದರೂ ಅಲಸಿಕೆಯೇ ಇಲ್ಲದೇ ಹಗಲಿರುಳೂ ಇವನು ಸುತ್ತುತ್ತಿರುತ್ತಾನೆ. ಜಗತ್ತಿನ ನಿಯಮನದಲ್ಲಿ ಸರ್ವದಾ ಉದ್ಯುಕ್ತನಾಗಿರುತ್ತಾನೆ. ಇಂತಹ ಸಚ್ಚಿದಾನಂದಸ್ವರೂಪನನ್ನು ಜ್ಞಾನಿಯು ಕಂಡುಕೊಂಡು ಪರಮಾನಂದದಲ್ಲಿ ನಿಮಗ್ನನಾಗಿ ಹೋಗುತ್ತಾನೆ.

**ಅಹಮೇವ ಸ್ಮೃತೋ ಮಾತಾ ಪಿತಾ ಪುತ್ರೋಽಸ್ಮ್ಯಹಂ ಪುನಃ ।**
**ಆತ್ಮಾಹಮಪಿ ಸರ್ವಸ್ಯ ಯಚ್ಚ ನಾಸ್ತಿ ಯದಸ್ತಿ ಚ ॥೨೮॥**

ಧೃತರಾಷ್ಟ್ರ! ನಾನೇ ಎಲ್ಲರಿಗೂ ತಾಯಿಯಾಗಿದ್ದೇನೆ. ಎಲ್ಲರಿಗೂ ತಂದೆಯಾಗಿದ್ದೇನೆ. ಮಗನೂ ಆಗಿರುತ್ತೇನೆ. ಎಲ್ಲರ ಆತ್ಮಗಳಲ್ಲೂ ನಾನೇ ಇರುತ್ತೇನೆ. ಹಿಂದೆ ಇದ್ದು ಈಗ ಇಲ್ಲದಿರುವ ವಸ್ತುಗಳಲ್ಲಿಯೂ ನಾನೇ ಇದ್ದೆನು. ಈಗ ಇರುವ ಸಕಲವಸ್ತುಗಳಲ್ಲಿಯೂ ನಾನೇ ಇರುತ್ತೇನೆ.

(ಪಾಠಾಂತರದ ಪ್ರಕಾರ :

**ಅಹಮೇವಾಸ್ಮಿ ವೋ ಮಾತಾ ಪಿತಾ ಪುತ್ರೋಽಸ್ಮ್ಯಹಂ ಪುನಃ ।**
**ಆತ್ಮಾಹಮಸ್ಮಿ ಸರ್ವಸ್ಯ ಯಚ್ಚ ನಾಸ್ತಿ ಯದಸ್ತಿ ಚ ॥**

ಧೃತರಾಷ್ಟ್ರ! ನಿಮ್ಮೆಲ್ಲರನ್ನೂ ಹಡೆದ ತಾಯಿ ನಾನೇ ; ನಾನೇ ತಂದೆ ; ನಿಮ್ಮ ಮಕ್ಕಳಾದ ದುರ್ಯೋಧನಾದಿಗಳೂ ನಾನೇ. ಹೆಚ್ಚೇನು? ಸಕಲಪ್ರಾಣಿವರ್ಗದ ಆತ್ಮನೂ ನಾನೇ. ಈಗ ಇರುವ ಮತ್ತು ಇಲ್ಲದಿರುವ ಸಕಲವಸ್ತುಗಳೂ ನಾನೇ.

ವಾಮದೇವಮಹರ್ಷಿಗಳು ಬ್ರಹ್ಮಾತ್ಮಭಾವನೆಯಿಂದ-'ಅಹಂ ಮನುರಭವಂ ಸೂರ್ಯಶ್ಚ'–ಎಂದು ಹೇಳಿದ್ದಾರೆ. ಅದರಂತೆ ಸನತ್ಸು ಜಾತರೂ ಕೂಡ ಬ್ರಹ್ಮಾತ್ಮಾನುಭವದಿಂದ ತಾವೇ ಸರ್ವಾತ್ಮಸ್ವರೂಪರೆಂದು ಹೇಳಿದ್ದಾರೆ.)

**ಪಿತಾಮಹೋಽಸ್ಮಿ ಸ್ಥವಿರಃ**
**ಪಿತಾ ಪುತ್ರಶ್ಚ ಭಾರತ ।**

**ಮಮೈವ ಯೂಯಮಾತ್ಮಸ್ಥಾ**
**ನ ಮೇ ಯೂಯಂ ನ ವೋ ವಯಮ್ ॥೨೯॥**

ಧೃತರಾಷ್ಟ್ರ! ನಿಮ್ಮೆಲ್ಲರ ವೃದ್ಧಪಿತಾಮಹನೂ ನಾನೇ ; ನಿಮ್ಮ ತಂದೆಯೂ ನಾನೇ ; ನಿಮ್ಮ ಪುತ್ರನೂ ನಾನೇ. ನೀವೆಲ್ಲರೂ ನನ್ನಲ್ಲಿ ಅಂತರ್ಗತರಾಗಿದ್ದೀರಿ. ಪರಮಾರ್ಥದಲ್ಲಿ ನೀವು ನನ್ನಲ್ಲಿಯೂ ಇಲ್ಲ. ನಾನು ನಿಮ್ಮಲ್ಲಿಯೂ ಇಲ್ಲ.

**ಆತ್ಮೈವ ಸ್ಥಾನಂ ಮಮ ಜನ್ಮ ಚಾತ್ಮಾ**
**ಓತಪ್ರೋತೋಽಹಮಜರಪ್ರತಿಷ್ಠಃ ।**
**ಅಜಶ್ಚರೋ ದಿವಾರಾತ್ರಮತನ್ದ್ರಿತೋಽಹಂ**
**ಮಾಂ ವಿಜ್ಞಾಯ ಕವಿರಾಸ್ತೇ ಪ್ರಸನ್ನಃ ॥೩೦॥**

ಆತ್ಮವೇ ನನಗೆ ಆಶ್ರಯ. ಆತ್ಮವೇ ನನ್ನ ಉಗಮ. ಈ ಜಗತ್ತಿನಲ್ಲಿ ನಾನು ಓತ-ಪ್ರೋತವಾಗಿ ನಿಂತಿದ್ದೇನೆ. ಜರಾ-ಮರಣವರ್ಜಿತವಾದ ನನ್ನ ಮಹಿಮೆಯಲ್ಲಿ ನಾನು ಪ್ರತಿಷ್ಠಿತನಾಗಿದ್ದೇನೆ. ಜನ್ಮರಹಿತನೂ, ಸದಾ ಗತಿ ಶಾಲಿಯೂ, ಅಲಸಿಕೆಯಿಂದ ವರ್ಜಿತನೂ ಆಗಿದ್ದೇನೆ. ನನ್ನನ್ನು ತಿಳಿದ ಜ್ಞಾನಿಯು ಪರಮಾನಂದದಲ್ಲಿ ನಿಮಗ್ನನಾಗಿರುತ್ತಾನೆ.

**ಅಣೋರಣೀಯಾನ್ಸುಮನಾಃ ಸರ್ವಭೂತೇಷು ಜಾಗ್ರತಿ ।**
**ಪಿತರಂ ಸರ್ವಭೂತೇಷು ಪುಷ್ಕರೇ ನಿಹಿತಂ ವಿದುಃ ॥೩೧॥**

ನಾನು ಅಣುವಿಗಿಂತಲೂ ಸೂಕ್ಷ್ಮನಾಗಿದ್ದೇನೆ.; ಶೋಕ-ಮೋಹಾದಿ ಗಳಿಂದ ವರ್ಜಿತಮನಸ್ಕನಾಗಿದ್ದೇನೆ. ಸರ್ವಭೂತಗಳಲ್ಲಿಯೂ ನಾನಿದ್ದೇನೆ. ಸನಕ-ಸನಂದನ-ವಾಮದೇವಾದಿ ಮಹಾಜ್ಞಾನಿಗಳೂ ಕೂಡ–ಸರ್ವಪ್ರಾಣಿ ಗಳಿಗೂ ಜನಕನಾದ ಪರಮೇಶ್ವರನು ಹೃದಯಪುಂಡರೀಕದಲ್ಲಿ ನೆಲೆಸಿದ್ದಾನೆಂದು ತಿಳಿದಿದ್ದಾರೆ."

ಹೀಗೆಂದು ಹೇಳಿ ಸನತ್ಸುಜಾತರು ಅಂತರ್ಹಿತರಾದರು.

(ಪರಮಾತ್ಮನೇ ಆತ್ಮನೆಂದು ಜ್ಞಾನಿಗಳೆಲ್ಲರೂ ತಿಳಿದಿದ್ದಾರೆ. 'ಅಹಂ ಮನುರಭವಂ ಸೂರ್ಯಶ್ಚ' 'ಏತತ್ಸಾಮಗಾಯನ್ನಾಸ್ತೇ'

'ಅಹಮನ್ನಾದಃ'.....'ಅಹಮನ್ನಂ' ಇತ್ಯಾದಿ ವಾಕ್ಯಗಳು ಜ್ಞಾನಿಯ ಸ್ವಾನುಭವವನ್ನು ವಿಶದಪಡಿಸುತ್ತವೆ.

ಮಹಾಯೋಗವೆನಿಸಿದ ಸಂಧ್ಯಾವಂದನೆಯಲ್ಲಿ ಅನೇಕರು ಅನುದಿನವೂ ಹೇಳುವ ಪ್ರಾರ್ಥನಾಶ್ಲೋಕವು ಸನತ್ಸುಜಾತರ ಬ್ರಹ್ಮತತ್ತ್ವವನ್ನೇ ಸಂಪೂರ್ಣವಾಗಿ ಪ್ರತಿಪಾದಿಸುತ್ತದೆ.

ಹೃದಯಕಮಲಮಧ್ಯೇ ದೀಪವದ್ವೇದಸಾರಂ
ಪ್ರಣವಮಯಮತರ್ಕ್ಯಂ ಯೋಗಿಹೃದ್ಧ್ಯಾನಗಮ್ಯಮ್ ।
ಹರಿಗುರುಶಿವಯೋಗಂ ಸರ್ವಭೂತಸ್ಥಮೇಕಂ
ಸಕೃದಪಿ ಮನಸಾ ಮಾಂ ಧ್ಯಾಯತೇ ಯಃ ಸ ಮುಕ್ತಃ ॥
(ಸಕೃದಪಿ ಮನಸಾ ವೈ ಚಿಂತಯೇದ್ಯಃ ಸ ಮುಕ್ತಃ)

ಹೃದಯಕಮಲದ ಮಧ್ಯದಲ್ಲಿ ದೀಪದಂತಿರುವ, ವೇದಸಾಗರನಾಗಿರುವ, ಪ್ರಣವಮಯನಾಗಿರುವ (ಓಂಕಾರರೂಪನಾಗಿರುವ,) ತರ್ಕಕ್ಕೆ ಸಿಕ್ಕದಿರುವ, ಯೋಗಿಗಳ ಹೃತ್ಪೂರ್ವಕವಾದ ಧ್ಯಾನಕ್ಕೆ ಸಿಕ್ಕುವ, ಹರಿ-ಗುರು-ಶಿವಸ್ವರೂಪಿಯಾದ, ಸರ್ವಭೂತಗಳಲ್ಲಿಯೂ ಇರುವ, ಏಕೈಕನಾದ ನನ್ನನ್ನು ಒಮ್ಮೆಯಾದರೂ ಯಾವನು ಧ್ಯಾನಿಸುತ್ತಾನೆಯೋ ಅವನು–ಮುಕ್ತನಾಗುತ್ತಾನೆ. (ಒಂದು ಬಾರಿಯಾದರೂ ಮನಸ್ಸಿನಿಂದ ಚಿಂತಿಸುವವನೇ ಮುಕ್ತನು.)

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ ಯಾನಸಂಧಿಪರ್ವ

## ಪಾಂಡವರೊಡನೆ ಮಾತುಕತೆ ನಡೆಸಿದ ಸಂಜಯನು ಕೌರವರ ಸಭೆಗೆ ಪುನರಾಗಮಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಈ ರೀತಿಯಾಗಿ ಸನತ್ಸುಜಾತರೊಡನೆಯೂ ಧೀಮಂತನಾದ ವಿದುರನೊಡನೆಯೂ ಮಾತನಾಡುತ್ತಿದ್ದ ಧೃತರಾಷ್ಟ್ರನಿಗೆ ಆ ರಾತ್ರಿಯು ಕಳೆಯಿತು. (ಸನತ್ಸುಜಾತ-ವಿದುರರೊಡನೆ ಮಾತನಾಡುತ್ತಲೇ ಧೃತರಾಷ್ಟ್ರನು ಆ ರಾತ್ರಿಯನ್ನು ಕಳೆದನು.) ಬೆಳಗಾಗುತ್ತಲೇ ಎಲ್ಲ ರಾಜರೂ ಪಾಂಡವರ

ಸಮೀಪಕ್ಕೆ ಸಂಧಾನಕ್ಕಾಗಿ ಹೋಗಿದ್ದ ಸಂಜಯನನ್ನು ಕಾಣುವ ಸಲುವಾಗಿ ಅತಿಶಯವಾದ ಸಂತೋಷದಿಂದ ಸಭಾಭವನವನ್ನು ಪ್ರವೇಶಿಸಿದರು. ಪೃಥಾದೇವಿಯ ಮಕ್ಕಳಾದ ಧರ್ಮಾದಿಗಳ ಧರ್ಮಾರ್ಥಯುಕ್ತವಾದ ಮಾತುಗಳನ್ನು ಕೇಳುವ ಇಚ್ಛೆಯಿಂದಾಗಿ ಧೃತರಾಷ್ಟ್ರಪ್ರಮುಖರಾದ ಎಲ್ಲ ರಾಜರೂ–ಶುಭಪ್ರದವಾದ, ಸುಂದರವಾದ, ವಿಸ್ತಾರವಾದ, ಸುವರ್ಣ ಮಯವಾದ ಪ್ರಾಂಗಣದಿಂದ ರಾರಾಜಿಸುತ್ತಿದ್ದ, ಚಂದ್ರನ ಬೆಳದಿಂಗಳಿನಂತೆ ಪ್ರಕಾಶಮಾನವಾಗಿದ್ದ, ಮನೋಹರವಾಗಿದ್ದ, ನೀರಿನಿಂದ ಸಂಸಿಕ್ತವಾಗಿದ್ದ ಸಭಾಮಂಟಪವನ್ನು ಪ್ರವೇಶಿಸಿದರು. ಆ ಸಭಾಮಂಟಪವು ಸ್ವರ್ಣಮಯ ವಾದ, ದಾರುಮಯವಾದ, ಅಶ್ಮಮಯವಾದ ಮತ್ತು ದಂತದ ಕೆತ್ತನೆಗಳಿಂದ ಕೂಡಿದ ನಯನಮನೋಹರವಾದ ಆಸನಗಳಿಂದ ಅಲಂಕೃತವಾಗಿದ್ದಿತು. ಆಸನಗಳು ಮೆತ್ತನೆಯ ಕೂರುದಿಂಬುಗಳಿಂದ ಅಲಂಕೃತವಾಗಿದ್ದುವು. ಭೀಷ್ಮ, ದ್ರೋಣ, ಕೃಪ, ಶಲ್ಯ, ಕೃತವರ್ಮಾ, ಜಯದ್ರಥ, ಅಶ್ವತ್ಥಾಮಾ, ವಿಕರ್ಣ, ಸೋಮದತ್ತ, ಬಾಹ್ಲಿಕ, ಮಹಾಪ್ರಾಜ್ಞನಾದ ವಿದುರ, ಮಹಾರಥನಾದ ಯುಯುತ್ಸು–ಇವರೇ ಮೊದಲಾದ ಶೂರರಾದ ರಾಜರು ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ದಿವ್ಯವಾದ ಶುಭಪ್ರದವಾದ ಸಭಾಮಂಟಪವನ್ನು ಪ್ರವೇಶಿಸಿದರು.

ದುಃಶಾಸನ, ಚಿತ್ರಸೇನ, ಸುಬಲನ ಮಗನಾದ ಶಕುನಿ, ದುರ್ಮುಖ, ದುಃಸಹ, ಕರ್ಣ, ಉಲೂಕ, ವಿವಿಂಶತಿ–ಇವರೇ ಮೊದಲಾದ ರಾಜಕುಮಾರರು ಅಸಹಿಷ್ಣುವಾದ, ಕುರುರಾಜನಾದ ದುರ್ಯೋಧನನನ್ನು ಮುಂದೆಮಾಡಿಕೊಂಡು–ದೇವತೆಗಳು ಇಂದ್ರನನ್ನು ಪುರಸ್ಕರಿಸಿ ದೇವಸಭೆ ಯನ್ನು ಪ್ರವೇಶಿಸುವಂತೆ–ಶುಭಾವಹವಾದ ಆ ದಿವ್ಯಸಭೆಯನ್ನು ಪ್ರವೇಶಿಸಿದರು.

ಕಬ್ಬಿಣದ ಪರಿಘಕ್ಕೆ ಸಮಾನವಾದ ಬಾಹುಗಳಿಂದ ಕೂಡಿದ್ದ ಶೂರರಾದ ರಾಜರು ಪ್ರವೇಶಿಸುತ್ತಿರಲಾಗಿ, ಸಭಾಮಂಟಪವು–ಸಿಂಹಗಳಿಂದ ಕೂಡಿದ ಗಿರಿಗುಹೆಯಂತೆ–ಶೋಭಿಸುತ್ತಿದ್ದಿತು. ಮಹಾಧನುಷ್ಮಂತರಾದ, ಸೂರ್ಯಸಮಾನವರ್ಚಸ್ಕರಾದ, ಮಹೌಜಸ್ಕರಾದ ಆ ಎಲ್ಲ ರಾಜರೂ ಸಭಾಮಂಟಪವನ್ನು ಪ್ರವೇಶಿಸಿ ವಿಚಿತ್ರವಾದ ಆಸನಗಳಲ್ಲಿ ಉಪವಿಷ್ಟ ರಾದರು.

ಎಲ್ಲ ರಾಜರೂ ಯಥೋಚಿತವಾದ ಆಸನಗಳಲ್ಲಿ ಕುಳಿತುಕೊಳ್ಳಲಾಗಿ

ದ್ವಾರಪಾಲಕನು ಆಗಮಿಸಿ ಸಂಜಯನು ಆಗಮಿಸಿರುವ ವಾರ್ತೆಯನ್ನು ಬಿನ್ನವಿಸಿದನು :

**ಅಯಂ ಸ ರಥ ಆಯಾತಿ ಯೋऽಯಾಸೀತ್ಪಾಣ್ಡವಾನ್ಪ್ರತಿ ।**
**ದೂತೋ ನ ಸ್ತೂರ್ಣಮಾಯಾತಃ ಸೈನ್ಧವೈಃ ಸಾಧುವಾಹಿಭಿಃ ॥**



"ಪಾಂಡವರ ಸಮೀಪಕ್ಕೆ ಕಳುಹಿಸಿದ್ದ ರಥವು ಹಿಂದಿರುಗಿಬಂದಿದೆ. ಬಹಳ ವೇಗವಾಗಿ ರಥವನ್ನು ಎಳೆಯುವ ಸಿಂಧುದೇಶದ ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತು ಸಂಜಯನು ಆಗಮಿಸಿದ್ದಾನೆ."

ದ್ವಾರಪಾಲಕನು ಹೀಗೆಂದು ಹೇಳುತ್ತಿರುವಾಗಲೇ ಕರ್ಣಕುಂಡಲಗಳನ್ನು ಧರಿಸಿದ್ದ ಸಂಜಯನು ಕ್ಷಿಪ್ರವಾಗಿ ರಥದಿಂದಿಳಿದು, ಮಹಾತ್ಮರಾದ

ಮಹೀಪಾಲರಿಂದ ಪೂರ್ಣವಾಗಿದ್ದ ಸಭಾಮಂಟಪವನ್ನು ಪ್ರವೇಶಿಸಿದನು. ಸಭಾಮಂಟಪವನ್ನು ಪ್ರವೇಶಿಸುತ್ತಲೇ ಸಂಜಯನು ಕೌರವರನ್ನು ಉದ್ದೇಶಿಸಿ ಹೇಳಿದನು :

"ಕೌರವರೇ! ನೀವು ಭಾವಿಸಿರುವಂತೆಯೇ ಪಾಂಡವರ ಸಮೀಪಕ್ಕೆ ಹೋಗಿದ್ದ ನಾನು ಹಿಂದಿರುಗಿ ಬಂದಿದ್ದೇನೆ. ಪಾಂಡವರು ನಿಮ್ಮ ನಿಮ್ಮ ವಯಸ್ಸಿಗೆ ಅನುಸಾರವಾಗಿ ನಿಮ್ಮನ್ನು ಯಥಾಯೋಗ್ಯವಾಗಿ ಅಭಿನಂದಿಸಿದ್ದಾರೆ. ವೃದ್ಧರಿಗೆ ಅಭಿವಾದನಪೂರ್ವಕವಾಗಿ ನಮಸ್ಕಾರಗಳನ್ನು ಸಲ್ಲಿಸಿರುತ್ತಾರೆ. ಸಮವಯಸ್ಕರನ್ನು–ಮಿತ್ರರನ್ನು ಅಭಿವಂದಿಸುವ ರೀತಿಯಲ್ಲಿ–ಅಭಿವಂದಿಸಿದ್ದಾರೆ. ನವಯುವಕರನ್ನೂ ಅವರವರ ವಯಸ್ಸಿಗೆ ಅನುಗುಣವಾಗಿ ಗೌರವಿಸಿ ಪ್ರೇಮಪೂರ್ವಕವಾಗಿ ಎಲ್ಲರ ಕುಶಲಪ್ರಶ್ನೆಗಳನ್ನೂ ಮಾಡಿದ್ದಾರೆ. ಧೃತರಾಷ್ಟ್ರನಿಂದ ನಿರ್ದೇಶಿತನಾದ ನಾನು ಇಲ್ಲಿಂದ ಪಾಂಡವರ ಸಮೀಪಕ್ಕೆ ಹೋಗಿ ಧೃತರಾಷ್ಟ್ರನ ಆಶಯವನ್ನು ಅವರಿಗೆ ತಿಳಿಸಿದೆನು. ಅದಕ್ಕುತ್ತರವಾಗಿ ಅವರೇನು ಹೇಳಿದರೆಂಬುದನ್ನು ನೀವೆಲ್ಲರೂ ಆಲಿಸಿರಿ."

ಳ೭ನೆಯ ಅಧ್ಯಾಯವು ಮುಗಿಯಿತು.

ಳ೮ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಸಂಜಯನು ಕೌರವರ ಸಭೆಯಲ್ಲಿ ಅರ್ಜುನನ ಸಂದೇಶವನ್ನು ಸಾರಿದುದು

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಇಲ್ಲಿ ನೆರೆದಿರುವ ರಾಜರ ಮಧ್ಯದಲ್ಲಿ ನಾನು ನಿನ್ನನ್ನು ಪ್ರಶ್ನಿಸುತ್ತೇನೆ. ಯಥಾವತ್ತಾಗಿ ಉತ್ತರಿಸು. ಮಹಾಪರಾಕ್ರಮಿಯಾದ, ಯುದ್ಧಗಳ ಸಂಚಾಲನೆಯಲ್ಲಿ ನಿಪುಣನಾದ, ದುರಾತ್ಮರಾದವರ ಪ್ರಾಣಾಪಹಾರಕನಾದ, ಉದಾರಹೃದಯನಾದ, ಮಹಾತ್ಮನಾದ ಧನಂಜಯನೇನೆಂದು ಹೇಳಿದನು?"

ಸಂಜಯನು ಉತ್ತರಿಸುತ್ತಾನೆ :

"ಯುದ್ಧಾಕಾಂಕ್ಷಿಯಾದ ಧನಂಜಯನು ಯುಧಿಷ್ಠಿರನ ಅನುಮತಿಯನ್ನು ಪಡೆದು ಕೇಶವನ ಸಮಕ್ಷದಲ್ಲಿ ಯಾವ ಮಾತನ್ನು ಹೇಳಿದನೆಂಬುದನ್ನು

ಈ ದುರ್ಯೋಧನನು ಕೇಳಲಿ! ತನ್ನ ಬಾಹುಗಳಲ್ಲಿ ಬಲವೆಷ್ಟಿರುವುದೆಂಬು ದನ್ನು ಚೆನ್ನಾಗಿ ಮನಗಂಡಿರುವ, ಧೀರನಾದ, ಯುದ್ಧೋತ್ಸುಕನಾದ ಕಿರೀಟಿಯು ವಾಸುದೇವನ ಸಮೀಪದಲ್ಲಿ ಕುಳಿತು ನನ್ನೊಡನೆ ಈ ರೀತಿ ಹೇಳಿದನು :

"ಸಂಜಯ! ನಾನೀಗ ಹೇಳಲಿರುವ ಮಾತನ್ನು ಕುರುವೀರರ ಮಧ್ಯ ದಲ್ಲಿ ಉಪವಿಷ್ಟನಾಗಿರುವ ದುರ್ಯೋಧನನಿಗೆ ಹೇಳಬೇಕು. ಇಂದು ಕಾಲವು ಪರಿಪಕ್ವವಾಗಿದೆ. ಕಾಲವಶನಾಗಿ ಹೋಗಿರುವ, ಮಂದಬುದ್ಧಿಯಾದ, ಅತಿಮೂಢನಾದ, ದುರ್ಭಾಷಿಯಾದ, ದುರಾತ್ಮನಾದ, ನನ್ನೊಡನೆ ಯುದ್ಧ ಮಾಡಲು ಸದಾ ಇಚ್ಛೆಯನ್ನು ವ್ಯಕ್ತಪಡಿಸುವ ಸೂತಪುತ್ರನಿಗೂ ಕೇಳಿಸುವ ರೀತಿಯಲ್ಲಿ ನಾನು ಹೇಳಲಿರುವ ಮಾತುಗಳನ್ನು ದುರ್ಯೋಧನನಿಗೆ ಹೇಳು. ಯಾವ ಯಾವ ರಾಜರು ದುರ್ಯೋಧನನೊಡನೆ ಸೇರಿಕೊಂಡು ಪಾಂಡವರೊಡನೆ ಯುದ್ಧಮಾಡಲು ಆಹ್ವಾನಿತರಾಗಿ ಬಂದಿರುವರೋ– ಅವರೆಲ್ಲರೂ ಕೇಳುವಂತೆ ನನ್ನ ಮಾತುಗಳನ್ನು ದುರ್ಯೋಧನನಿಗೆ ತಿಳಿಸುವವನಾಗು. ನಾನು ಹೇಳಲಿರುವ ಪ್ರತಿಯೊಂದು ಮಾತನ್ನೂ ಅಮಾತ್ಯಸಹಿತನಾದ ದುರ್ಯೋಧನನಿಗೆ ಮನದಟ್ಟಾಗುವಂತೆ ಹೇಳಬೇಕು."

ಮಹಾರಾಜ! ಯಾವ ರೀತಿಯಲ್ಲಿ ವಜ್ರಹಸ್ತನಾದ ದೇವರಾಜನ ಮಾತುಗಳನ್ನು ಎಲ್ಲ ದೇವತೆಗಳೂ ಶ್ರದ್ಧೆಯಿಂದಲೂ ಅವಿಚಲಿತವಾದ ಮನಸ್ಸಿನಿಂದಲೂ ಕೇಳುತ್ತಾರೆಯೋ–ಅದೇ ರೀತಿಯಲ್ಲಿ ಪಾಂಡವರೂ ಮತ್ತು ಸೃಂಜಯರೂ ಕಿರೀಟಿಯು ನನ್ನೊಡನೆ ಹೇಳಿದ ವೀರ್ಯವತ್ತಾದ ಆ ಮಾತುಗಳನ್ನು ಕೇಳಿದರು.

ಯುದ್ಧದ ವಿಷಯದಲ್ಲಿ ಬಹಳ ಉತ್ಸುಕನಾಗಿದ್ದ, ಗಾಂಡೀವಧನ್ವನಾದ, ಕೆಂಪಾಗಿಯೂ ಪದ್ಮದಳದಂತೆ ವಿಶಾಲವಾಗಿಯೂ ಇರುವ ಕಣ್ಣುಗಳಿಂದ ಕೂಡಿದ್ದ ಅರ್ಜುನನು ಹೀಗೆಂದು ಹೇಳಿದನು :

"ಅಜಮೀಢಕುಲಪ್ರದೀಪನಾದ ಯುಧಿಷ್ಠಿರನಿಗೆ ಧೃತರಾಷ್ಟ್ರನ ಮಗ ನಾದ ದುರ್ಯೋಧನನು ರಾಜ್ಯವನ್ನೇನಾದರೂ ಹಿಂತಿರುಗಿಕೊಡದಿದ್ದರೆ ಧೃತರಾಷ್ಟ್ರನ ಮಕ್ಕಳಿಂದ ಪೂರ್ವಜನ್ಮದಲ್ಲಿ ಮಾಡಲ್ಪಟ್ಟಿರಬಹುದಾದ, ಅಳಿಸಿ

ಹೋಗದ ಪಾಪಕರ್ಮದ ಫಲವು ನಿಶ್ಚಯವಾಗಿಯೂ ಹಾಗೆಯೇ ಉಳಿಯುವುದು. ಅವರು ಯಾರೊಡನೆ ಯುದ್ಧಮಾಡಲಿರುವರೆಂಬುದನ್ನು ಈಗಲೇ ಮನಗಾಣಲಿ. ಭೀಮಸೇನಾರ್ಜುನರೊಡನೆಯೂ, ನಕುಲ-ಸಹದೇವರೊಡನೆಯೂ, ವಾಸುದೇವನೊಡನೆಯೂ, ಶಸ್ತ್ರಾಸ್ತ್ರಗಳಿಂದ ಸುಸಜ್ಜಿತನಾದ ಸಾತ್ಯಕಿಯೊಡನೆಯೂ, ಧೃಷ್ಟದ್ಯುಮ್ನನೊಡನೆಯೂ, ಶಿಖಂಡಿಯೊಡನೆಯೂ, ಕೇವಲ ಅನಿಷ್ಟಚಿಂತನೆಯಿಂದಲೇ ಭೂಲೋಕವನ್ನೂ ಮತ್ತು ಸ್ವರ್ಗಲೋಕವನ್ನೂ ದಹಿಸಬಲ್ಲ ಇಂದ್ರತುಲ್ಯನಾದ ಯುಧಿಷ್ಠಿರನೊಡನೆಯೂ–ಅವರು ಯುದ್ಧಮಾಡಬೇಕಾಗಿದೆ. ಧಾರ್ತರಾಷ್ಟ್ರನೇನಾದರೂ ಭೀಮಸೇನಾದಿಗಳೊಡನೆ ಯುದ್ಧಮಾಡುವುದೇ ಒಳ್ಳೆಯದೆಂದು ಭಾವಿಸುವುದಾದರೆ ಆ ನಿರ್ಧಾರದಿಂದಾಗಿ ಪಾಂಡವರ ಸಕಲಮನೋರಥಗಳೂ ಈಡೇರಿಯೇ ತೀರುವುವು. ಪಾಂಡವರಿಗೆ ಒಳ್ಳೆಯದನ್ನು ಮಾಡಬೇಕೆಂಬ ಅಭಿಪ್ರಾಯದಿಂದ ನೀನು ಅವರೊಡನೆ ಸಂಧಿಮಾಡಿಕೊಳ್ಳುವ ಅವಶ್ಯಕತೆಯಿಲ್ಲ. ಅವರಿಗೆ ಅರ್ಧರಾಜ್ಯವನ್ನು ಕೊಡುವ ಅಗತ್ಯವಿಲ್ಲ. (ಸಂಧಿಯಾಗಬೇಕಾಗಿರುವುದು ನಿನ್ನ ಒಳಿತಿಗಾಗಿಯೇ ಎಂಬುದನ್ನು ನೀನು ಮನಗಾಣಬೇಕಾಗಿದೆ. ನೀನು ಅರ್ಧರಾಜ್ಯವನ್ನು ಉಳಿಸಿಕೊಳ್ಳುವ ಸಲುವಾಗಿ ಮಾತ್ರವೇ ನಮ್ಮೊಡನೆ ಸಂಧಿಮಾಡಿಕೊಳ್ಳಬೇಕೇ ಹೊರತು ನಮ್ಮ ಹಿತಾರ್ಥವಾಗಿ ಸಂಧಿ ಮಾಡಿಕೊಳ್ಳುವ ಕಾರಣವಿಲ್ಲ.) ನಮ್ಮ ಹಿತವನ್ನು ನೀನು ಬಯಸುವುದಾದರೆ, ನಾವು ಕೃತಕೃತ್ಯರಾಗಬೇಕಾದರೆ, ನಮ್ಮ ಮನೋವಾಂಛಿತವಾದ ಫಲಗಳು ಸಿಕ್ಕಬೇಕಾದರೆ–ನೀನು ಯುದ್ಧಭೂಮಿಗೇ ಬರಬೇಕು.

ಧರ್ಮಾತ್ಮನಾದ ಯುಧಿಷ್ಠಿರನು ಕುತ್ಸಿತಮಾರ್ಗದಿಂದ ಅರಣ್ಯಕ್ಕೆ ದೂಡಲ್ಪಟ್ಟವನಾಗಿ ಘೋರಾರಣ್ಯದಲ್ಲಿ ಯಾವ ದುಃಖವೆಂಬ ಶಯ್ಯೆಯಲ್ಲಿಯೇ ಮಲಗುತ್ತಿದ್ದನೋ, ಅಂತೆಯೇ ಧೃತರಾಷ್ಟ್ರನ ಮಗನಾದ ದುರ್ಯೋಧನನೂ ರಣಾಂಗಣದಲ್ಲಿ ಪ್ರಾಣಗಳನ್ನು ತೊರೆದು ದುಃಖಕರವಾದ, ಅನರ್ಥಕರವಾದ ಮತ್ತು ಕಡೆಯದಾದ ಮೃತ್ಯುಶಯ್ಯೆಯ ಮೇಲೆ ಮಲಗುವಂತಾದೀತು.

ಧರ್ಮದಿಂದ ರಾಜ್ಯಪರಿಪಾಲನೆಮಾಡಬೇಕಾದರೆ ಲಜ್ಜಾ-ಜ್ಞಾನಾದಿ ಸಕಲಗುಣಪರಿಪೂರ್ಣನಾಗಿರಬೇಕು. ಅನ್ಯಾಯವೃತ್ತಿಯುಳ್ಳ, ದುರಾಚಾರಿ

ಯಾದ, ದುರಾತ್ಮನಾದ ದುರ್ಯೋಧನನು–ಲಜ್ಜೆಯಿಂದ, ಜ್ಞಾನದಿಂದ, ತಪಸ್ಸಿನಿಂದ, ಇಂದ್ರಿಯನಿಗ್ರಹದಿಂದ, ಶೌರ್ಯದಿಂದ, ಧರ್ಮದ ರಕ್ಷಣೆಯಿಂದ, ಕಡೆಯದಾಗಿ ಐಶ್ವರ್ಯದಿಂದ ಕುರು-ಪಾಂಡವರನ್ನು ಆಳಲು ಸಮರ್ಥನಾಗಿರುವನೇ? ಅನ್ಯಾಯವೃತ್ತಿಯುವನಾದ ದುರ್ಯೋಧನ ನಿಗೆ ಇಂತಹ ಸದ್ಗುಣಗಳು ಹೇಗೆ ತಾನೇ ಬರಲು ಸಾಧ್ಯ? ಆದರೆ ನಮ್ಮ ರಾಜನಾದ ಯುಧಿಷ್ಠಿರನು ವಿನಯಶೀಲತೆ, ಸರಳತೆ, ತಪಸ್ಸು, ಇಂದ್ರಿಯಸಂಯಮ, ಧರ್ಮರಕ್ಷಣೆ ಮತ್ತು ಶೌರ್ಯ–ಈ ಎಲ್ಲ ಗುಣಗಳಿಂದಲೂ ಪರಿಪೂರ್ಣನಾಗಿದ್ದಾನೆ. ಇವನು ಅನೇಕ ದಿವಸಗಳಿಂದ ಅನೇಕಪ್ರಕಾರವಾದ ಕ್ಲೇಶಗಳನ್ನನುಭವಿಸುತ್ತಿದ್ದರೂ ಸತ್ಯನಿಷ್ಠನಾಗಿಯೇ ಇದ್ದಾನೆ. ಕೌರವರ ಕಪಟಪೂರ್ಣವಾದ ವ್ಯವಹಾರವನ್ನೂ ಮತ್ತು ನಿಷ್ಠುರವಾದ ಮಾತುಗಳನ್ನೂ ಸಹಿಸಿಕೊಂಡಿರುತ್ತಾನೆ. ಆದರೆ :

**ಯದಾ ಜ್ಯೇಷ್ಠಃ ಪಾಣ್ಡವಃ ಸಂಶಿತಾತ್ಮಾ**
**ಕ್ರೋಧಂ ಯತ್ತಂ ವರ್ಷಪೂಗಾನ್ಸುಘೋರಮ್ ।**
**ಅವಸ್ರಷ್ಟಾ ಕುರುಷೂದ್ವೃತ್ತಚೇತಾ–**
**ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥**

ಶುದ್ಧಹೃದಯನಾದ, ಕಠೋರವ್ರತನಿಷ್ಠನಾದ, ಪಾಂಡವಜ್ಯೇಷ್ಠನಾದ, ಧರ್ಮಾತ್ಮನಾದ ಯುಧಿಷ್ಠಿರನು ಅನೇಕವರ್ಷಗಳಿಂದ ತಡೆಹಿಡಿದಿರುವ, ಅತ್ಯಂತಭಯಂಕರವಾದ ಕೋಪವನ್ನು ಯಾವ ಸಮಯದಲ್ಲಿ ಕೌರವರ ಮೇಲೆ ವಿಸರ್ಜಿಸುತ್ತಾನೆಯೋ–ಆ ಸಮಯದಲ್ಲಿ ಘೋರವಾದ ಯುದ್ಧವೂ ನಡೆಯುತ್ತದೆ ಮತ್ತು ಆ ಯುದ್ಧದ ಬೇಗೆಯಿಂದ ದುರ್ಯೋಧನನೂ ಪರಿತಪಿಸುತ್ತಾನೆ. ಗ್ರೀಷ್ಮರ್ತುವಿನಲ್ಲಿ ಪ್ರಜ್ವಲಿಸುವ ಅಗ್ನಿಯು ನಾಲ್ಕು ದಿಕ್ಕುಗಳಲ್ಲಿಯೂ ಧಗ-ಧಗಿಸಿ ಉರಿಯುತ್ತಾ ಮಧ್ಯದಲ್ಲಿರುವ ಹುಲ್ಲಿನ ರಾಶಿಯನ್ನು ಕ್ಷಣಮಾತ್ರದಲ್ಲಿ ಭಸ್ಮಮಾಡಿಬಿಡುವಂತೆ–ಕ್ರೋಧದಿಂದ ಜಾಜ್ವಲ್ಯಮಾನನಾಗಿ ಪ್ರಕಾಶಿಸುವ ಯುಧಿಷ್ಠಿರನು ದುರ್ಯೋಧನನ ಅಸಂಖ್ಯಾತಸೇನೆಯನ್ನೂ ಕೇವಲ ವೀಕ್ಷಣಮಾತ್ರದಿಂದಲೇ ದಹಿಸಿಬಿಡುತ್ತಾನೆ.

**ಯದಾ ದ್ರಷ್ಟಾ ಭೀಮಸೇನಂ ರಥಸ್ಥಂ**
**ಗದಾಹಸ್ತಂ ಕ್ರೋಧವಿಷಂ ವಮನ್ತಮ್ ।**

ಅಮರ್ಷಣಂ ಪಾಣ್ಡವಂ ಭೀಮವೇಗಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೧೬॥

ಕ್ರೋಧವೆಂಬ ವಿಷವನ್ನು ಕಾರುತ್ತಾ ಗದಾಪಾಣಿಯಾಗಿ ರಥದ ಮೇಲೆ ಕುಳಿತಿರುವ, ಭಯಂಕರವೇಗವುಳ್ಳ, ಅಸಹಿಷ್ಣುವಾದ ಪಾಂಡವ ದ್ವಿತೀಯನಾದ ಭೀಮಸೇನನನ್ನು ಯಾವ ಸಮಯದಲ್ಲಿ ದುರ್ಯೋಧನನು ನೋಡುತ್ತಾನೆಯೋ–ಆಗವನು ಯುದ್ಧವನ್ನು ಕುರಿತು ಪರಿತಾಪ ಪಡಬೇಕಾಗುತ್ತದೆ. ಯಾವ ಸಮಯದಲ್ಲಿ ಭೀಮಸೇನನು ಕವಚವನ್ನು ಧರಿಸಿದವನಾಗಿ ಶತ್ರುಪಕ್ಷದ ವೀರರನ್ನು ಸಂಹಾರಮಾಡುತ್ತಾ, ತನ್ನ ಪಕ್ಷದವರಿಗೂ ನೋಡಲು ಭಯಂಕರನಾಗಿ ಕಾಣುತ್ತಾ, ಎದುರಿಗೆ ಸಿಕ್ಕುವ ಸೈನ್ಯಸಮೂಹವನ್ನು ಯಮಪ್ರಾಯನಾಗಿ ಸಂಹಾರಮಾಡುತ್ತಾ ಇರುವು ದನ್ನು ನೋಡುತ್ತಾನೆಯೋ–ಆಗ ದುರಭಿಮಾನಿಯಾದ ದುರ್ಯೋಧನನು ನಾನು ಹೇಳಿದ ಮಾತುಗಳನ್ನು ಸ್ಮರಿಸಿಕೊಳ್ಳುತ್ತಾನೆ.

ಯದಾ ದೃಷ್ಟ್ವಾ ಭೀಮಸೇನ ನಾಗಾ–
ನ್ನಿಪಾತಿತಾನ್ಗಿರಿಕೂಟಪ್ರಕಾಶಾನ್ ।
ಕುಮ್ಭೈರಿವಾಸೃಗ್ವಮತೋ ಭಿನ್ನಕುಮ್ಭಾಂ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥

ಪರ್ವತಶಿಖರೋಪಮವಾದ ಮದಿಸಿದ ಆನೆಗಳು ಭೀಮಸೇನನಿಂದ ಯಾವ ಸಮಯದಲ್ಲಿ ಘೋರರಣಾಂಗಣದಲ್ಲಿ ಸಂಹರಿಸಲ್ಪಡುವುವೋ ಮತ್ತು ಒಡೆದ ಗಡಿಗೆಯಿಂದ ನೀರು ಹೊರಚಿಮ್ಮಿ ಚೆಲ್ಲಿಹೋಗುವಂತೆ–ಭೀಮನ ಪ್ರಹಾರದಿಂದ ವಿಭಿನ್ನವಾದ ಕುಂಭಸ್ಥಳಗಳಿಂದ ರಕ್ತವನ್ನು ಹೊರಸೂಸುತ್ತಿರುವ ಆನೆಗಳನ್ನು ನೋಡುವನೋ–ಆ ಸಮಯದಲ್ಲಿ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪ ಪಡುತ್ತಾನೆ.

ಮಹಾಸಿಂಹೋ ಗಾವ ಇವ ಪ್ರವಿಶ್ಯ
ಗದಾಪಾಣಿರ್ಧಾರ್ತರಾಷ್ಟ್ರಾನುಪೇತ್ಯ ।
ಯದಾ ಭೀಮೋ ಭೀಮರೂಪೋ ನಿಹನ್ತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೧೮॥

ಮಹಾಸಿಂಹವು ಹಸುಗಳ ಕೊಟ್ಟಿಗೆಯನ್ನು ಪ್ರವೇಶಿಸುವಂತೆ–ಗದಾಪಾಣಿಯಾದ ಸಿಂಹಸದೃಶನಾದ ಭೀಮಸೇನನು ಗೋವ್ರಜಸದೃಶವಾದ ಧಾರ್ತರಾಷ್ಟ್ರಸೇನೆಯನ್ನು ಪ್ರವೇಶಿಸಿ–ಸಿಂಹವು ಗೋವುಗಳನ್ನು ಸಂಹರಿಸುವಂತೆ– ಬಹುಭಯಂಕರಾಕಾರನಾಗಿ ಕುರುಸೈನ್ಯವನ್ನು ಯಾವಾಗ ಸಂಹರಿಸುತ್ತಾನೆಯೋ–ಆಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪ ಪಡುತ್ತಾನೆ.

**ಮಹಾಭಯೇ ವೀತಭಯಃ ಕೃತಾಸ್ತ್ರಃ**
**ಸಮಾಗಮೇ ಶತ್ರುಬಲಾವಮರ್ದೀ ।**
**ಸಕೃದ್ರಥೇನಾಪ್ರತಿಮಾನ್ರಥೌಘಾ–**
**ನ್ಪದಾತಿಸಂಘಾನ್ಗದಯಾಭಿನಿಘ್ನನ್**
**ಶೈಕ್ಯೇನ ನಾಗಾಂಸ್ತರಸಾ ವಿಗೃಹ್ಣ-**
**ನ್ಯದಾ ಛೇತ್ತಾ ಧಾರ್ತರಾಷ್ಟ್ರಸ್ಯ ಸೈನ್ಯಮ್ ।**
**ಛಿನ್ದನ್ವನಂ ಪರಶುನೇವ ಶೂರ–**
**ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೨೧॥**

ಯಾವನು ಮಹಾಭಯದ ಸನ್ನಿವೇಶದಲ್ಲಿಯೂ ನಿರ್ಭಯವಾಗಿಯೇ ಇರುವನೋ, ಯಾವನು ಸಕಲಶಸ್ತ್ರಾಸ್ತ್ರಗಳನ್ನೂ ತಿಳಿದವನಾಗಿರುವನೋ, ಯಾವನು ಯುದ್ಧದಲ್ಲಿ ಶತ್ರುಗಳ ಸಮಾಗಮವಾದಾಗ ಅವರ ಸಂಪೂರ್ಣ ಬಲವನ್ನೂ ವಿನಾಶಗೊಳಿಸುವನೋ, ಯಾವನು ಏಕಾಕಿಯಾಗಿ ರಥದಲ್ಲಿ ಕುಳಿತು ರಥಗಳ ಸಮೂಹವನ್ನೂ ಮತ್ತು ಅಸಂಖ್ಯಾತವಾದ ಪದಾತಿ ಸಮೂಹವನ್ನೂ ಗದೆಯಿಂದ ಧ್ವಂಸಮಾಡುತ್ತಾ, ಪಾಶಾಯುಧದಿಂದ ಮಹಾಗಜಗಳನ್ನೂ ಸೆಳೆದು ಧ್ವಂಸಮಾಡುತ್ತಾ–ಕೊಡಲಿಯಿಂದ ಅರಣ್ಯದ ಮರಗಳೆಲ್ಲವನ್ನೂ ಕಡಿದುಹಾಕುವಂತೆ–ದುರ್ಯೋಧನನ ಸೈನ್ಯವನ್ನೂ ಕಚ-ಕಚನೆ ಕತ್ತರಿಸಿಹಾಕುವನೋ–ಅಂತಹ ಭೀಮಸೇನನ ಭೀಮಕರ್ಮವನ್ನು ನೋಡಿ ದುರಭಿಮಾನಿಯಾದ ದುರ್ಯೋಧನನು ಯುದ್ಧವನ್ನಾರಂಭಿಸಿದುದು ತಪ್ಪಾಯಿತೆಂದು ಪಶ್ಚಾತ್ತಾಪಪಡುತ್ತಾನೆ.

**ತೃಣಪ್ರಶಯಂ ಜ್ವಲನೇನೇವ ದಗ್ಧಂ**
**ಗ್ರಾಮಂ ಯಥಾ ಧಾರ್ತರಾಷ್ಟ್ರಾನ್ಸಮೀಕ್ಷ್ಯ ।**

ಪಕ್ವಂ ಸಸ್ಯಂ ವೈದ್ಯುತೇನೇವ ದಗ್ಧಂ
ಪರಾಸಿಕ್ತಂ ವಿಪುಲಂ ಸ್ವಂ ಬಲೌಘಮ್ ॥೨೨॥
ಹತಪ್ರವೀರಂ ವಿಮುಖಂ ಭಯಾರ್ತಂ
ಪರಾಙ್ಮುಖಂ ಪ್ರಾಯಶೋಽಧೃಷ್ಟಯೋಧಮ್ ।
ಶಸ್ತ್ರಾರ್ಚಿಷಾ ಭೀಮಸೇನೇನ ದಗ್ಧಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೨೩॥

ದುರಭಿಮಾನಿಯಾದ ದುರ್ಯೋಧನನು–ಪ್ರಜ್ವಲಿಸುವ ಯಜ್ಞೇಶ್ವರನಿಂದ ಭಸ್ಮವಾಗಿಹೋಗುವ ಹುಲ್ಲಿನ ಮನೆಗಳಿರುವ ಗ್ರಾಮದಂತೆ ಅಥವಾ ಗದ್ದೆಯಲ್ಲಿ ತೆನೆಗಳು ಬಿಟ್ಟು ಮಾಗಿರುವ ಸಸ್ಯಗಳ ಸಮೂಹವು ಸಿಡಿಲಿನ ಹೊಡೆತದಿಂದ ದಗ್ಧವಾಗಿ ಹೋಗುವಂತೆ–ಭೀಮನಿಂದ ನಿಃಶೇಷವಾಗಿ ವಿನಾಶಹೊಂದುವ ಧಾರ್ತರಾಷ್ಟ್ರಸೇನಾಸಮೂಹವನ್ನೂ, ಹತರಾದ ಸೇನಾಪ್ರಮುಖರನ್ನೂ, ಭಯದಿಂದ ವಿಮುಖರಾಗಿ ಓಡಿಹೋಗುವ ಸೈನಿಕರನ್ನೂ, ಪ್ರಾಯಶಃ ಎಲ್ಲ ಯೋಧಸಮೂಹವೂ ಶಸ್ತ್ರವೆಂಬ ಬೆಂಕಿಯ ಮೂಲಕ ದಗ್ಧರಾಗಿ ಹೋಗುವುದನ್ನೂ ಯಾವಾಗ ನೋಡುತ್ತಾನೆಯೋ– ಆಗ ಅವನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ಉಪಾಸಂಗಾನಾಚರೇದ್ದಕ್ಷಿಣೇನ
ವರಾಜ್ಞಾನಾಂ ನಕುಲಶ್ಚಿತ್ರಯೋಧೀ ।
ಯದಾ ರಥಾಗ್ರ್ಯೋ ರಥಿನಃ ಪ್ರಣೇತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೨೪॥

ರಥಿಕರಲ್ಲಿ ಶ್ರೇಷ್ಠನಾದ ಮತ್ತು ವಿಚಿತ್ರರೀತಿಯಲ್ಲಿ ಯುದ್ಧಮಾಡಲು ಸಮರ್ಥನಾದ ನಕುಲನು ರಥದಲ್ಲಿ ಕುಳಿತು ಬಲಗೈಯಿಂದ ಬತ್ತಳಿಕೆಯಲ್ಲಿರುವ ಬಾಣಗಳನ್ನು ಬಹುವೇಗವಾಗಿ ತೆಗೆದುಕೊಂಡು ಧನುಸ್ಸಿನಲ್ಲಿ ಯೋಜಿಸಿ, ಶತ-ಸಹಸ್ರಸಂಖ್ಯೆಯಲ್ಲಿ ತನ್ನ ಮುಂದಿರುವ ರಥಿಕರ ಮೇಲೆ ಪ್ರಯೋಗಿಸಿ, ಅವರನ್ನು ಯಮಲೋಕಕ್ಕೆ ಕಳುಹಿಸುತ್ತಿರುವಾಗ ದುರ್ಯೋಧನನು ಯುದ್ಧವನ್ನಾರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ.

ಸುಖೋಚಿತೋ ದುಃಖಶಯ್ಯಾಂ ವನೇಷು
ದೀರ್ಘಂ ಕಾಲಂ ನಕುಲೋ ಯಾಮಶೇತ ।

ಆಶೀವಿಷಃ ಕ್ರುದ್ಧ ಇವೋದ್ವಮನ್ವಿಷಂ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಯತ್ ॥೨೫॥

ಸುಖವನ್ನು ಉಪಭೋಗಿಸಲು ಅರ್ಹನಾದ ನಕುಲನು ಅರಣ್ಯಗಳಲ್ಲಿ ಬಹುದೀರ್ಘಕಾಲ ಯಾವ ದುಃಖದ ಹಾಸಿಗೆಯಲ್ಲಿ ಮಲಗಿದ್ದನೋ ಅದನ್ನವನು ಸ್ಮರಿಸಿಕೊಂಡು–ಹನ್ನೆರಡು ವರ್ಷಗಳಾದರೂ ಛಲವನ್ನು ಬಿಡದಿರುವ ಕೋಪಗೊಂಡ ವಿಷಸರ್ಪದಂತೆ–ಕೋಪವೆಂಬ ವಿಷವನ್ನು ಕಾರುತ್ತಾ ಯುದ್ಧಮಾಡುವುದನ್ನು ನೋಡಿದಾಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ನಿಶ್ಚಯವಾಗಿಯೂ ಪರಿತಪಿಸುತ್ತಾನೆ.

ತ್ಯಕ್ತಾತ್ಮಾನಃ ಪಾರ್ಥಿವಾ ಯೋಧನಾಯ
ಸಮಾದಿಷ್ಟಾ ಧರ್ಮರಾಜೇನ ಸೂತ ।
ರಥೈಃ ಶುಭ್ರೈಃ ಸೈನ್ಯಮಭಿದ್ರವನ್ತೋ
ದೃಷ್ಟ್ವಾ ಪಶ್ಚಾತ್ತಪ್ಸ್ಯತೇ ಧಾರ್ತರಾಷ್ಟ್ರಃ ॥೨೬॥

ಧರ್ಮರಾಜನಿಂದ ಯುದ್ಧಕ್ಕಾಗಿ ಆಹ್ವಾನಿತರಾದ ರಾಜರು ತಮ್ಮ ಪ್ರಾಣಗಳ ಹಂಗನ್ನೂ ಸಂಪೂರ್ಣವಾಗಿ ತ್ಯಜಿಸಿದವರಾಗಿ, ಬಲಿಷ್ಠವಾದ ರಥಗಳಲ್ಲಿ ಕುಳಿತು, ದುರ್ಯೋಧನನ ಸೈನ್ಯವನ್ನು ಆಕ್ರಮಿಸಿ ನಿಲ್ಲುವುದನ್ನು ನೋಡಿದನಂತರ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ಶಿಶೂನ್ಕೃತಾಸ್ತ್ರಾನಶಿಶುಪ್ರಕಾಶಾ–
ನ್ಯದಾ ದ್ರಷ್ಟಾ ಕೌರವಃ ಪಞ್ಚ ಶೂರಾನ್ ।
ತ್ಯಕ್ತ್ವಾ ಪ್ರಾಣಾನ್ಕೌರವಾನಾದ್ರವನ್ತ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಯತ್ ॥೨೭॥

ವಯಸ್ಸಿನಲ್ಲಿ ಶಿಶುಗಳೇ ಆಗಿದ್ದರೂ ಸಕಲಾಸ್ತ್ರಗಳಲ್ಲಿಯೂ ಪರಿಶ್ರಮವುಳ್ಳವರಾಗಿರುವುದರಿಂದ ನವಯುವಕರಂತೆ ಕಾಣುವ ಮಹಾಶೂರರಾದ ದ್ರೌಪದಿಯ ಐವರು ಮಕ್ಕಳನ್ನು ರಣಾಂಗಣದಲ್ಲಿ ಕಂಡನಂತರ ಮತ್ತು ಆ ಮಹಾವೀರರು ಪ್ರಾಣದ ಹಂಗನ್ನೂ ತೊರೆದು ಕೌರವಸೇನೆಯನ್ನು ಅಟ್ಟಿಸಿಕೊಂಡು ಹೋಗುತ್ತಿರುವುದನ್ನು ನೋಡಿದ ನಂತರ ಯುದ್ಧವನ್ನಾರಂಭಿಸಿದುದಕ್ಕಾಗಿ ದುರ್ಯೋಧನನು ಪಶ್ಚಾತ್ತಾಪಪಡುತ್ತಾನೆ.

ಯದಾ ಗತೋದ್ವಾಹಮಕೂಜನಾಕ್ಷಂ
ಸುವರ್ಣತಾರಂ ರಥಮುತ್ತಮಾಶ್ವೈಃ ।
ದಾನ್ತೈರ್ಯುಕ್ತಂ ಸಹದೇವೋಽಧಿರೂಢಃ
ಶಿರಾಂಸಿ ರಾಜ್ಞಾಂ ಕ್ಷೇಪ್ಸ್ಯತೇ ಮಾರ್ಗಣೌಘೈಃ ॥೨೮॥

ಮಹಾಭಯೇ ಸಮ್ಪ್ರವೃತ್ತೇ ರಥಸ್ಥಂ
ವಿವರ್ತಮಾನಂ ಸಮರೇ ಕೃತಾಸ್ತ್ರಮ್ ।
ಸರ್ವಾ ದಿಶಃ ಸಮ್ಪತನ್ತಂ ಸಮೀಕ್ಷ್ಯ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೨೯॥

ಸಹದೇವನು ಉತ್ತಮಜಾತಿಯ–ಸುಶಿಕ್ಷಿತವಾದ ಕುದುರೆಗಳಿಂದ ಯುಕ್ತವಾದ, ಶಬ್ದವೇ ಆಗದ ಚಕ್ರಗಳಿಂದ ಕೂಡಿರುವ, ಸುವರ್ಣಮಯವಾದ ನಕ್ಷತ್ರದಂತೆ ಪರಿಶೋಭಿಸುತ್ತಿರುವ ರಥದಲ್ಲಿ ಕುಳಿತು ಬಾಣಗಳ ಸಮೂಹದಿಂದ ರಾಜರ ತಲೆಗಳನ್ನು ಕತ್ತರಿಸುತ್ತಾನೆ. ಭಯಂಕರವಾದ ಯುದ್ಧವು ಪ್ರಾಪ್ತವಾಗಲಾಗಿ, ಶಸ್ತ್ರಗಳ ಪ್ರಯೋಗೋಪಸಂಹಾರಗಳಲ್ಲಿ ಸಂಪೂರ್ಣಪರಿಶ್ರಮವನ್ನು ಪಡೆದಿರುವ ಸಹದೇವನು ರಥದಲ್ಲಿ ಕುಳಿತಿರುವುದನ್ನೂ, ಯುದ್ಧದಲ್ಲಿ ಅತ್ತಿಂದಿತ್ತ ನಿರ್ಭಯನಾಗಿ ತಿರುಗಾಡುತ್ತಿರುವುದನ್ನೂ ಎಲ್ಲ ದಿಕ್ಕುಗಳಲ್ಲಿಯೂ ಶತ್ರುಗಳ ಮೇಲೆ ಬೀಳುತ್ತಿರುವುದನ್ನೂ ದುರ್ಯೋಧನನು ಯಾವಾಗ ನೋಡುವನೋ–ಆಗ ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ.

ಹ್ರೀನಿಷೇವೋ ನಿಪುಣಃ ಸತ್ಯವಾದೀ
ಮಹಾಬಲಃ ಸರ್ವಧರ್ಮೋಪಪನ್ನಃ ।
ಗಾನ್ಧಾರಿಮಾರ್ಚ್ಛಂಸ್ತುಮುಲೇ ಕ್ಷಿಪ್ರಕಾರೀ
ಕ್ಷೇಪ್ತಾ ಜನಾನ್ಸಹದೇವಸ್ತರಸ್ವೀ ॥೩೦॥

ಯದಾ ದೃಷ್ಟ್ವಾ ದ್ರೌಪದೇಯಾನ್ಮಹೇಷೂ-
ಞ್ಶೂರಾನ್ಕೃತಾಸ್ತ್ರಾನ್ರಥಯುದ್ಧಕೋವಿದಾನ್ ।
ಆಶೀವಿಷಾನ್ಘೋರವಿಷಾನಿವಾಯತ-
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೧॥

ಲಜ್ಜಾಶೀಲನಾದ, ಯುದ್ಧನಿಪುಣನಾದ, ಸತ್ಯನಿಷ್ಠನಾದ, ಮಹಾಬಲನಾದ, ಸರ್ವಧರ್ಮಸಂಪನ್ನನಾದ, ಕ್ಷಿಪ್ರಕರ್ಮಿಯಾದ, ವೇಗವಂತನಾದ ಸಹದೇವನು ಯುದ್ಧದಲ್ಲಿ ಶಕುನಿಯನ್ನು ಅಟ್ಟಿಸಿಕೊಂಡು ಹೋಗುತ್ತಾ ಇರುವಾಗ ಎದುರಾಗಿ ಸಿಕ್ಕುವ ಸೈನಿಕರನ್ನು ಕತ್ತರಿಸುತ್ತಾ ಹೋಗುವುದನ್ನೂ ಮತ್ತು ಮಹಾಧನುರ್ಧಾರಿಗಳಾದ, ಶೂರರಾದ, ಅಸ್ತ್ರವಿದ್ಯೆಯಲ್ಲಿ ಬಹುನಿಪುಣರಾದ, ರಥಯುದ್ಧದಲ್ಲಿ ಕೋವಿದರಾದ ದ್ರೌಪದಿಯ ಮಕ್ಕಳು– ಭಯಂಕರವಾದ ವಿಷವನ್ನು ಧರಿಸಿರುವ ವಿಷಸರ್ಪಗಳಂತೆ–ಬುಸುಗುಟ್ಟುತ್ತಾ ಕುರುಸೈನ್ಯದ ಮೇಲೆ ಬೀಳುವುದನ್ನೂ ನೋಡಿದಾಗ ದುರ್ಯೋಧನನು ತಾನು ಆರಂಭಿಸಿದ ಯುದ್ಧಕ್ಕಾಗಿ ಪರಿತಪಿಸುತ್ತಾನೆ.

**ಯದಾಭಿಮನ್ಯುಃ ಪರವೀರಘಾತೀ**
**ಶರೈಃ ಪರಾನ್ಮೇಘ ಇವಾಭಿವರ್ಷನ್ ।**
**ವಿಗಾಹಿತಾ ಕೃಷ್ಣಸಮಃ ಕೃತಾಸ್ತ್ರ-**
**ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಯತ್ ॥೩೨॥**

ಅಭಿಮನ್ಯುವು ಶ್ರೀಕೃಷ್ಣನ ಪರಾಕ್ರಮಕ್ಕೆ ಅನುಗುಣವಾದ ಪರಾಕ್ರಮವುಳ್ಳವನಾಗಿದ್ದಾನೆ. ಶತ್ರುಪಕ್ಷದ ವೀರರನ್ನು ಸಂಹರಿಸಲು ಸಮರ್ಥನಾಗಿದ್ದಾನೆ. ಅಸ್ತ್ರವಿದ್ಯೆಯಲ್ಲಿ ಮಹಾನಿಪುಣನಾಗಿದ್ದಾನೆ. ಇಂತಹ ಮಹಾವೀರನಾದ ಅಭಿಮನ್ಯುವು–ಮೇಘವು ಮಳೆಗರೆಯುವಂತೆ ಯಾವಾಗ ಶತ್ರುಗಳ ಮೇಲೆ ಶರವರ್ಷವನ್ನೇ ಕರೆಯುತ್ತಾ ಶತ್ರುಸೈನ್ಯದೊಳಗೆ ನುಗ್ಗಿಹೋಗುತ್ತಾನೆಯೋ–ಆಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ.

**ಯದಾ ದೃಷ್ಟ್ವಾ ಬಾಲಮಬಾಲವೀರ್ಯಂ**
**ದ್ವಿಷಚ್ಚಮೂಂ ಮೃತ್ಯುಮಿವೋತ್ಪತನ್ತಮ್ ।**
**ಸೌಭದ್ರಮಿನ್ದ್ರಪ್ರತಿಮಂ ಕೃತಾಸ್ತ್ರಂ**
**ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಯತ್ ॥೩೩॥**

ವಯಸ್ಸಿನಿಂದ ಬಾಲಕನೇ ಆಗಿದ್ದರೂ ಯುವಕರಿಗಿರಬೇಕಾದ ವೀರ್ಯ-ಪರಾಕ್ರಮಗಳಿಂದ ಕೂಡಿರುವ, ಶತ್ರುಗಳ ಸೇನೆಯ ಮೇಲೆ ಮೃತ್ಯುವಿನೋಪಾದಿಯಲ್ಲಿ ಎರಗುವ, ಅಸ್ತ್ರಕುಶಲನಾದ, ಇಂದ್ರಸದೃಶನಾದ ಸುಭದ್ರಾ

ಪುತ್ರನನ್ನು ದುರ್ಯೋಧನನು ರಣಾಂಗಣದಲ್ಲಿ ಕಂಡೊಡನೆಯೇ ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ಪ್ರಭದ್ರಕಾಃ ಶೀಘ್ರತರಾ ಯುವಾನೋ
ವಿಶಾರದಾಃ ಸಿಂಹಸಮಾನವೀರ್ಯಾಃ ।
ಯದಾ ಕ್ಷೇಪ್ತಾರೋ ಧಾರ್ತರಾಷ್ಟ್ರಾನ್ಸಸೈನ್ಯಾಂ–
ಸ್ತದಾಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೪॥

ಶೀಘ್ರಾತಿಶೀಘ್ರವಾಗಿ ಬತ್ತಳಿಕೆಗಳಿಂದ ಬಾಣಗಳನ್ನು ತೆಗೆದು ಧನುಸ್ಸಿನಲ್ಲಿ ಯೋಜಿಸಿ ಪ್ರಯೋಗಿಸುವ ಸಾಮರ್ಥ್ಯವುಳ್ಳ, ಯುವಕರಾದ, ಯುದ್ಧವಿಶಾರದರಾದ, ಸಿಂಹಕ್ಕೆ ಸಮಾನವಾದ ಶೌರ್ಯದಿಂದ ಕೂಡಿರುವ ಪ್ರಭದ್ರಕ ದೇಶದ ರಾಜಕುಮಾರರು ರಣಾಂಗಣವನ್ನು ಪ್ರವೇಶಿಸಿ ಸೈನ್ಯಸಮೇತರಾದ ಧೃತರಾಷ್ಟ್ರನ ಮಕ್ಕಳನ್ನು ತುಂಡರಿಸಿ ಕೆಳಕ್ಕೆ ಕೆಡಹುವ ಕಾಲದಲ್ಲಿ–ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ವೃದ್ಧೌ ವಿರಾಟದ್ರುಪದೌ ಮಹಾರಥೌ
ಪೃಥಕ್ಚಮೂಭ್ಯಾಮಭಿವರ್ತಮಾನೌ।
ಯದಾ ದ್ರಷ್ಟಾರೌ ಧಾರ್ತರಾಷ್ಟ್ರಾನ್ಸಸೈನ್ಯಾಂ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೫॥

ವೃದ್ಧರಾದ, ಮಹಾರಥರಾದ ವಿರಾಟ-ದ್ರುಪದರು ಪ್ರತ್ಯೇಕ-ಪ್ರತ್ಯೇಕವಾಗಿ ತಮ್ಮ ತಮ್ಮ ಸೈನ್ಯಗಳಿಂದ ಸುತ್ತುವರಿಯಲ್ಪಟ್ಟವರಾಗಿ ರಣಾಂಗಣವನ್ನು ಪ್ರವೇಶಿಸಿ, ತಮ್ಮೆದುರಿನಲ್ಲಿ ನಿಂತಿರುವ ಸೈನ್ಯಸಹಿತರಾದ ಧೃತರಾಷ್ಟ್ರಪುತ್ರರನ್ನು ಯಾವಾಗ ನೋಡುತ್ತಾರೆಯೋ-ಆಗ ಯುದ್ಧವನ್ನು ಆರಂಭಿಸಿದುದಕ್ಕಾಗಿ ದುರ್ಯೋಧನನು ಪರಿತಪಿಸುತ್ತಾನೆ.

ಯದಾ ಕೃತಾಸ್ತ್ರೋ ದ್ರುಪದಃ ಪ್ರಚಿನ್ವ–
ಞ್ಶಿರಾಂಸಿ ಯೂನಾಂ ಸಮರೇ ರಥಸ್ಥಃ ।
ಕ್ರುದ್ಧಃ ಶರೈಶ್ಛೇತ್ಸ್ಯತಿ ಚಾಪಮುಕ್ತೈ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೬॥

ಅಸ್ತ್ರವಿದ್ಯಾನಿಪುಣನಾದ ದ್ರುಪದರಾಜನು ಕ್ರುದ್ಧನಾಗಿ ರಥದಲ್ಲಿ

ಕುಳಿತು ಸಮರಭೂಮಿಯಲ್ಲಿ ತನ್ನ ಧನುಸ್ಸಿನಿಂದ ವಿಮುಕ್ತವಾದ ಶರಜಾಲ ಗಳಿಂದ ಶತ್ರುಸೈನ್ಯದಲ್ಲಿರುವ ಯುವಕರ ತಲೆಗಳನ್ನು ಕತ್ತರಿಸುತ್ತಿರುವಾಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

**ಯದಾ ವಿರಾಟಃ ಪರವೀರಘಾತೀ**
**ರಣಾನ್ತರೇ ಶತ್ರುಚಮೂಂ ಪ್ರವೇಷ್ಟಾ ।**
**ಮತ್ಸ್ಯೈಃ ಸಾರ್ಧಮನೃಶಂಸರೂಪೈ-**
**ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೭॥**

ಶತ್ರುಪಕ್ಷದ ವೀರರನ್ನು ಸಂಹಾರಮಾಡುವುದರಲ್ಲಿ ಚತುರನಾದ ವಿರಾಟನು–ಸೌಮ್ಯರಾದ ಮತ್ಸ್ಯಸೈನಿಕರಿಂದೊಡಗೂಡಿ ರಣಭೂಮಿಯಲ್ಲಿ ಶತ್ರುಸೈನ್ಯವನ್ನು ಭೇದಿಸಿಕೊಂಡು ಒಳನುಗ್ಗುತ್ತಿರುವಾಗ–ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

**ಜ್ಯೇಷ್ಠಂ ಮಾತ್ಸ್ಯಮನೃಶಂಸಾರ್ಯರೂಪಂ**
**ವಿರಾಟಪುತ್ರಂ ರಥಿನಂ ಪುರಸ್ತಾತ್ ।**
**ಯದಾ ದೃಷ್ಟ್ವಾ ದಂಶಿತಂ ಪಾಣ್ಡವಾರ್ಥೇ**
**ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೩೮॥**

ಸೌಮ್ಯನೂ, ದಯಾಪರನೂ, ಶ್ರೇಷ್ಠವಾದ ರೂಪಸಂಪನ್ನನೂ, ವಿರಾಟನ ಜ್ಯೇಷ್ಠಪುತ್ರನೂ, ಮಹಾರಥಿಯೂ ಆದ ಶ್ವೇತಕನು ಪಾಂಡವರ ಹಿತಾರ್ಥವಾಗಿ ಯುದ್ಧಮಾಡಲು ಕವಚಧಾರಣೆಮಾಡಿ ಯುದ್ಧಕ್ಕೆ ಬರುವು ದನ್ನು ದುರ್ಯೋಧನನು ಯಾವಾಗ ನೋಡುವನೋ–ಆಗ ತಾನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಾಪಪಡುತ್ತಾನೆ.

**ರಣೇ ಹತೇ ಕೌರವಾಣಾಂ ಪ್ರವೀರೇ**
**ಶಿಖಣ್ಡಿನಾ ಸತ್ತಮೇ ಶಾನ್ತನೂಜೇ ।**
**ನ ಜಾತು ನಃ ಶತ್ರವೋ ಧಾರಯೇಯು-**
**ರಸಂಶಯಂ ಸತ್ಯಮೇತದ್ಬ್ರವೀಮಿ ॥೩೯॥**

ಕುರುವಂಶದ ಪ್ರಮುಖವೀರನಾದ, ಸತ್ಪುರುಷನಾದ, ಶಾಂತನುವಿನ ಪುತ್ರನಾದ ಭೀಷ್ಮನು ಯಾವಾಗ ಶಿಖಂಡಿಯಿಂದ ಹತನಾಗಿ ಹೋಗುವನೋ ಆಗ ನಮ್ಮ ಶತ್ರುಗಳಾದ ಕೌರವರು ನಮ್ಮನ್ನೆದುರಿಸಿ ನಿಲ್ಲಲು ಖಂಡಿತ

ವಾಗಿಯೂ ಸಮರ್ಥರಾಗಲಾರರು. ಇದು ಸತ್ಯ. ಈ ವಿಷಯದಲ್ಲಿ ಸಂಶಯವೇ ಇಲ್ಲ.

ಯದಾ ಶಿಖಣ್ಡೀ ರಥಿನಃ ಪ್ರಚಿನ್ವ–
ನ್ಭೀಷ್ಮಂ ರಥೇನಾಭಿಯಾತಾ ವರೂಥೀ ।
ದಿವ್ಯೈರ್ಹಯೈರವಮೃದ್ನನ್ರಥೌಘಾಂ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೪೦॥

ಶಿಖಂಡಿಯು ಸುರಕ್ಷಿತವಾದ ತನ್ನ ರಥದಲ್ಲಿ ಕುಳಿತು ಭೀಷ್ಮನನ್ನು ಆಕ್ರಮಣಮಾಡುವ ಸಲುವಾಗಿ ಹೋಗುವಾಗ ಮಧ್ಯದಲ್ಲಿ ತನ್ನೆದುರಾಗಿ ಸಿಕ್ಕುವ ಅನೇಕರಥಿಗಳನ್ನು ಧ್ವಂಸಮಾಡುತ್ತಾ, ಅನೇಕರಥಗಳ ಸಮೂಹವನ್ನು ವಿಧ್ವಂಸನಗೊಳಿಸುತ್ತಾ, ತನ್ನ ರಥದ ಕುದುರೆಗಳ ಸಹಾಯದಿಂದಲೇ ಮುನ್ನುಗ್ಗಿ ಹೋಗಿ ಭೀಷ್ಮನನ್ನು ಯಾವಾಗ ಆಕ್ರಮಿಸುವನೋ–ಆಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ.

ಯದಾ ದೃಷ್ಟ್ವಾ ಸೃಂಜಯಾನಾಮನೀಕೇ
ಧೃಷ್ಟದ್ಯುಮ್ನಂ ಪ್ರಮುಖೇ ರೋಚಮಾನಮ್ ।
ಅಸ್ತ್ರಂ ಯಸ್ಮೈ ಗುಹ್ಯಮುವಾಚ ಧೀಮಾ–
ನ್ದ್ರೋಣಸ್ತದಾ ತಪ್ಸ್ಯತಿ ಧಾರ್ತರಾಷ್ಟ್ರಃ ॥೪೧॥

ಯಾವನಿಗೆ ಧೀಮಂತರಾದ ಆಚಾರ್ಯದ್ರೋಣರು ಅಸ್ತ್ರವಿದ್ಯೆಯ ರಹಸ್ಯಗಳೆಲ್ಲವನ್ನೂ ಉಪದೇಶಿಸಿರುವರೋ ಮತ್ತು ಯಾವನು ಸೃಂಜಯ ಸೇನಾಪ್ರಮುಖನಾಗಿ ಸೇನೆಯ ಅಗ್ರಭಾಗದಲ್ಲಿ ವಿರಾಜಮಾನನಾಗಿರುತ್ತಾನೆಯೋ–ಅಂತಹ ಧೃಷ್ಟದ್ಯುಮ್ನನನ್ನು ನೋಡಿದನಂತರ ದುರ್ಯೋಧನನು ನಿಶ್ಚಯವಾಗಿಯೂ ಸಂಕಟಪಡುತ್ತಾನೆ.

ಯದಾ ಸ ಸೇನಾಪತಿರಪ್ರಮೇಯಃ
ಪರಾಮೃದ್ನನ್ನಿಷುಭಿರ್ಧಾರ್ತರಾಷ್ಟ್ರಾನ್ ।
ದ್ರೋಣಂ ರಣೇ ಶತ್ರುಸಹೋಽಭಿಯಾತಾ
ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೪೨॥

ಶತ್ರುಗಳನ್ನು ಎದುರಿಸಿ ನಿಲ್ಲಲು ಸಮರ್ಥನಾದ, ಅಪರಿಮಿತವಾದ

ಶಕ್ತಿಯಿಂದ ಕೂಡಿರುವ, ಸೇನಾಪತಿಯಾದ ಧೃಷ್ಟದ್ಯುಮ್ನನು ಧೃತರಾಷ್ಟ್ರನ ಮಕ್ಕಳನ್ನು ಬಾಣಗಳಿಂದ ಘಾಸಿಪಡಿಸುತ್ತಾ ಮುನ್ನುಗ್ಗಿಹೋಗಿ ದ್ರೋಣರನ್ನು ಆಕ್ರಮಿಸುತ್ತಿರುವಾಗ ಯುದ್ಧವನ್ನು ಪ್ರಾರಂಭಿಸಿದುದಕ್ಕಾಗಿ ದುರ್ಯೋಧನನು ಪಶ್ಚಾತ್ತಾಪಪಡುತ್ತಾನೆ.

ಸೋಮಕವಂಶಪ್ರಮುಖನಾದ, ಲಜ್ಜಾಶೀಲನಾದ, ಬುದ್ಧಿವಂತನಾದ, ಬಲವಂತನಾದ, ಜಿತೇಂದ್ರಿಯನಾದ, ಲಕ್ಷ್ಮೀವಂತನಾದ, ವೃಷ್ಣಿಸಿಂಹನಾದ ಸಾತ್ಯಕಿಯು ಯಾರಿಗೆ ಅಗ್ರೇಸರನಾಗಿರುವನೋ–ಅಂತಹವರನ್ನು ಯಾವ ಶತ್ರುಗಳೂ ಯಾವಾಗಲೂ ಎದುರಿಸಿ ನಿಲ್ಲಲಾರರು.

ಈ ಲೋಕದಲ್ಲಿ ಜೀವಿಸಿದ್ದುಕೊಂಡು ಇನ್ನು ಮುಂದೆ ರಾಜ್ಯದ ಸುಖೋಪಭೋಗಗಳನ್ನು ಅನುಭವಿಸುವ ಆಸೆಯನ್ನು ತೊರೆದುಬಿಡಬೇಕೆಂದು ನೀನು ದುರ್ಯೋಧನನಿಗೆ ಹೇಳು. ಸಂಜಯ! ಇದಕ್ಕೆ ಕಾರಣವಿಷ್ಟೆ: ಯುದ್ಧದಲ್ಲಿ ಅದ್ವಿತೀಯನಾದ, ಶಿನಿಮಹಾರಾಜನ ಪೌತ್ರನಾದ, ಮಹಾಬಲನಾದ, ಭಯವೆಂಬುದನ್ನೇ ಅರಿಯದ, ಅಸ್ತ್ರಕೋವಿದನಾದ, ರಥಸ್ಥನಾದ ಸಾತ್ಯಕಿಯನ್ನು ನಾವು ಸಚಿವನನ್ನಾಗಿ ಪಡೆದುಕೊಂಡಿರುತ್ತೇವೆ. ಸಾತ್ಯಕಿಯು ನಮ್ಮ ಸಚಿವನಾಗಿರುವಾಗ ಅಥವಾ ಸಹಾಯಕನಾಗಿರುವಾಗ ದುರ್ಯೋಧನನು ಪ್ರಾಣದಿಂದುಳಿಯುವ ಸಾಧ್ಯತೆಯೇ ಇಲ್ಲ.

ವಿಶಾಲಹೃದಯನಾದ, ದೀರ್ಘಬಾಹುವಾದ, ಯುದ್ಧದಲ್ಲಿ ಶತ್ರುಗಳನ್ನು ಮಥನಮಾಡುವ, ಅದ್ವಿತೀಯಪರಾಕ್ರಮಿಯಾದ, ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದಿರುವ, ಶಿನಿರಾಜನ ಪೌತ್ರನಾದ, ನಾಲ್ಕು ಮೊಳಗಳಷ್ಟು ಉದ್ದವಾದ ಧನುಸ್ಸನ್ನು ಧರಿಸಿರುವ, ಮಹಾರಥನಾದ, ಭಯರಹಿತನಾದ, ಅಸ್ತ್ರಕೋವಿದನಾದ ಸಾತ್ಯಕಿಯು ಸಮರಾಂಗಣಕ್ಕೆ ಪ್ರವೇಶಿಸಿದಾಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಾಪಪಡುತ್ತಾನೆ.

ಯದಾ ಶಿನೀನಾಮಧಿಪೋ ಮಯೋಕ್ತಃ
ಶರೈಃ ಪರಾನ್ಮೇಘ ಇವ ಪ್ರವರ್ಷನ್ ।
ಪ್ರಚ್ಛಾದಯಿಷ್ಯತ್ಯರಿಹಾ ಯೋಧಮುಖ್ಯಾಂ–
ಸ್ತದಾ ಯುದ್ಧಂ ಧಾರ್ತರಾಷ್ಟ್ರೋಽನ್ವತಪ್ಸ್ಯತ್ ॥೪೬॥

ನಾನು ಹೇಳಿದಂತೆ ಶಿನಿಪ್ರಮುಖನಾದ, ಶತ್ರುಮರ್ದನನಾದ ಸಾತ್ಯಕಿಯು ಶತ್ರುಗಳ ಮೇಲೆ ಮೇಘಸದೃಶವಾಗಿ ಬಾಣಗಳ ಮಳೆಗರೆಯುತ್ತಾ ಯಾವಾಗ ಕುರುಕುಲಯೋಧರನ್ನು ಬಾಣವರ್ಷದಿಂದಲೇ ಮುಚ್ಚಿಬಿಡುವನೋ–ಆಗ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ದೃಢವಾದ ಧನುಸ್ಸನ್ನು ಧರಿಸಿರುವ, ದೀರ್ಘಬಾಹುವಾದ, ಮಹಾತ್ಮನಾದ ಸಾತ್ಯಕಿಯು ಯಾವಾಗ ಪಾಂಡವರ ಕಡೆ ನಿಂತು ಯುದ್ಧಮಾಡಲು ನಿಶ್ಚಯಿಸಿ ರಣೋತ್ಸಾಹದಿಂದ ಯುದ್ಧಭೂಮಿಯನ್ನು ಪ್ರವೇಶಿಸುವನೋ ಆಗ–ಸಿಂಹದ ವಾಸನೆಯು ಬಂದೊಡನೆಯೇ ಹಸುಗಳು ಭಯದಿಂದ ನಡುಗುವಂತೆ–ಕುರುಕುಲಯೋಧರು ಸಾತ್ಯಕಿಯನ್ನು ಕಂಡೊಡನೆಯೇ ಭಯದಿಂದ ನಡುಗಿ ಓಡಿಹೋಗುತ್ತಾರೆ. ಸಾತ್ಯಕಿಯು ಸಾಮಾನ್ಯನಲ್ಲ. ಅವನು ದೀರ್ಘಬಾಹುವು ; ದೃಢವಾದ ಧನುಸ್ಸನ್ನು ಹೊಂದಿರುವವನು ; ಮಹಾತ್ಮನು ; ಪರ್ವತವನ್ನೇ ತುಂಡರಿಸುವ ಸಾಮರ್ಥ್ಯವುಳ್ಳವನು ; ಸರ್ವಲೋಕಗಳೇ ಎದುರಾಗಿ ನಿಂತರೂ ಎದುರಿಸಿ ನಿಂತು ಸರ್ವಲೋಕದ ಸಕಲವೀರರನ್ನೂ ಸಂಹರಿಸಬಲ್ಲನು. ಅವನು ಅಸ್ತ್ರಜ್ಞನು ; ಅಸ್ತ್ರಪ್ರಹರಣದಲ್ಲಿ ನಿಪುಣನು ; ಅಸ್ತ್ರಾದಾನ ಮತ್ತು ಪ್ರಹರಣಗಳಲ್ಲಿ ಅಂತರವೇ ಕಾಣದಷ್ಟು ಕ್ಷಿಪ್ರವಾದ ಹಸ್ತಲಾಘವವುಳ್ಳವನು. ಅಂತಹ ಸಾತ್ಯಕಿಯು ರಣರಂಗದಲ್ಲಿ–ಆಕಾಶದಲ್ಲಿರುವ ಸೂರ್ಯನಂತೆಯೇ ಪ್ರಕಾಶಿಸುತ್ತಾನೆ.

ಯುದ್ಧನಿಪುಣನಾದ ವೀರನೊಬ್ಬನ ಬಳಿಯಲ್ಲಿ ಯಾವ ಯಾವ ಮಹಾಸ್ತ್ರಗಳಿದ್ದರೆ ಅವನು ಪ್ರಶಂಸೆಗೆ ಪಾತ್ರನಾಗುತ್ತಾನೆಯೋ–ಅಂತಹ ಮಹಾಸ್ತ್ರಗಳೆಲ್ಲವೂ ಸಾತ್ಯಕಿಯಲ್ಲಿವೆ. ಯದುಕುಲತಿಲಕನಾದ ಸಾತ್ಯಕಿಗೆ ಅನೇಕವಿಧವಾದ ಉತ್ತಮಾಸ್ತ್ರಗಳು ಲಬ್ಧವಾಗಿವೆ. ಉತ್ತಮವಾದ ಮತ್ತು ಅನವರತವಾದ ಅವನ ಸಾಧನೆಯಿಂದಾಗಿ ಅವನಿಗೆ ವಿಚಿತ್ರವಾದ ಮತ್ತು ಸೂಕ್ಷ್ಮವಾದ ಅನೇಕಾಸ್ತ್ರಗಳು ಲಬ್ಧವಾಗಿವೆ.

ಹಿರಣ್ಮಯವಾದ, ಬಿಳಿಯ ಬಣ್ಣದ ನಾಲ್ಕು ಕುದುರೆಗಳಿಂದ ಸೆಳೆಯಲ್ಪಟ್ಟ, ಸಾತ್ಯಕಿಯಿಂದ ನಿಯಂತ್ರಿತವಾದ ರಥವು ಯಾವಾಗ ರಣಾಂಗಣ

ವನ್ನು ಪ್ರವೇಶಿಸುವುದೋ–ಆಗ ಪಾಪಾತ್ಮನಾದ, ಮಂದಬುದ್ಧಿಯಾದ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ.

ಸುವರ್ಣದಿಂದಲೂ ಮತ್ತು ಶ್ರೇಷ್ಠಜಾತಿಯ ಮಣಿಗಳಿಂದಲೂ ಪ್ರಕಾಶ ಮಾನವಾದ, ಬಿಳಿಯ ಕುದುರೆಗಳಿಂದ ಯುಕ್ತವಾದ, ಕಪಿಧ್ವಜದಿಂದ ಕೂಡಿರುವ, ಶತ್ರುಗಳಿಗೆ ಬಹುಭಯಂಕರವಾಗಿ ಕಾಣುವ, ಕೇಶವನಿಂದ ನಿಯಂತ್ರಿತವಾದ ನನ್ನ ರಥವನ್ನು ಯುದ್ಧಭೂಮಿಯಲ್ಲಿ ನೋಡಿದೊಡನೆಯೇ ಜಿತೇಂದ್ರಿಯನಲ್ಲದ ಮಂದಬುದ್ಧಿಯವನಾದ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಾಪಪಡುತ್ತಾನೆ. ಬಾರಿ-ಬಾರಿಗೂ ಬತ್ತಳಿಕೆಗಳಿಂದ ಬಾಣಗಳನ್ನು ತೆಗೆಯುತ್ತಾ, ನನ್ನ ಗಾಂಡೀವದ ಶಿಂಜಿನಿಯನ್ನು ಸುದೀರ್ಘ ವಾಗಿ ಸೆಳೆದು, ಬಾಣಗಳನ್ನು ಯೋಜಿಸಿ, ಅವ್ಯಾಹತವಾಗಿ ಬಿಡುವುದರಿಂದ ಹೊರಹೊಮ್ಮುವ ಭಯಂಕರವಾದ ಮತ್ತು ವಜ್ರಾಘಾತಕ್ಕೆ ಸಮಾನವಾದ ಮಹಾಶಬ್ದವನ್ನು ಮಂದಬುದ್ಧಿಯೂ, ಮೂಢನೂ ಆದ ಧೃತರಾಷ್ಟ್ರಪುತ್ರನು ಯಾವಾಗ ಕೇಳುತ್ತಾನೆಯೋ, ಸರ್ವತ್ರ ವ್ಯಾಪ್ತವಾದ ಬಾಣಗಳಿಂದುಂಟಾದ ಗಾಢಾಂಧಕಾರದಲ್ಲಿ ದಿಕ್ಕುಕಾಣದೇ ಪಶುಗಳಂತೆ ಭ್ರಾಂತಿಯಿಂದ ಓಡಿಹೋಗುತ್ತಿರುವ ಸೈನಿಕರನ್ನು ನೋಡುತ್ತಾನೆಯೋ ಆಗ ಕೇವಲ ದುಷ್ಟರ ಸಹಾಯವನ್ನೇ ಪಡೆದಿರುವ ದುರ್ಮತಿಯಾದ ದುರ್ಯೋಧನನು ಪರಿತಪಿಸುತ್ತಾನೆ.

ಯಾವಾಗ ದುಷ್ಟದುರ್ಯೋಧನನು–ಕಾರ್ಮುಗಿಲಿನಿಂದ ಹೊರಬೀಳುವ ಭಯಂಕರವಾದ ಮಿಂಚಿನಿಂದ ಕೂಡಿರುವ ಸಿಡಿಲಿನಂತೆ ನಿನಾದಮಾಡುವ, ಘೋರರೂಪವನ್ನು ಧರಿಸಿರುವ, ಶತ್ರುಗಳೊಡನೆ ಮಾಡುವ ಯುದ್ಧದಲ್ಲಿ ಸಾವಿರ ಸೈನಿಕರನ್ನೂ ಒಂದೇ ಬಾರಿಗೆ ಸಂಹರಿಸುವ ಸಾಮರ್ಥ್ಯವುಳ್ಳ, ಶತ್ರುಗಳ ಚರ್ಮ ಮತ್ತು ಮರ್ಮಸ್ಥಳಗಳನ್ನು ಭೇದಿಸುವ ಬಹಳ ಚೂಪಾದ ಅಗ್ರಭಾಗಗಳುಳ್ಳ, ರೆಕ್ಕೆಗಳಿಂದ ಕೂಡಿರುವ, ಗಾಂಡೀವ ಧನುಸ್ಸಿನಿಂದ ನಿರ್ಮುಕ್ತವಾಗಿ ಶಿಂಜಿನಿಯಿಂದ ಹೊರಬೀಳುವ ಬಾಣಗಳ ಸಮೂಹವನ್ನೂ ಮತ್ತು ಆ ಬಾಣಗಳ ಪ್ರಹಾರದಿಂದ ಅಸುಗಳನ್ನು ತೊರೆಯುವ ಕವಚ ಯುಕ್ತವಾದ ಕುದುರೆಗಳನ್ನೂ ಮತ್ತು ಆನೆಗಳನ್ನೂ ನೋಡುವನೋ–ಆಗ ಅವನು ಯುದ್ಧವನ್ನು ಆರಂಭಿಸಿದುದಕ್ಕಾಗಿ ವಿಷಾದಿಸುತ್ತಾನೆ.

ಮಂದಬುದ್ಧಿಯಾದ ದುರ್ಯೋಧನನು ತನ್ನ ಪಕ್ಷದ ಯೋಧರು ಬಿಡುವ ಬಾಣಗಳನ್ನು ನನ್ನ ಬಾಣಗಳಿಂದ ಪ್ರತಿನಿವರ್ತಿಸುವುದನ್ನು ಯಾವಾಗ ನೋಡುತ್ತಾನೆಯೋ ಮತ್ತು ನನ್ನ ಬಾಣಗಳ ವಕ್ರಗತಿಯ (ಅಡ್ಡವಾದ) ಪ್ರಹಾರದಿಂದ ಅವನ ಪಕ್ಷದವರು ಬಿಡುವ ಬಾಣಗಳು ಛಿದ್ರ-ವಿಚ್ಛಿದ್ರವಾಗಿ ಕತ್ತರಿಸಲ್ಪಟ್ಟು ಕೆಳಗುದುರುವುದನ್ನು ನೋಡುತ್ತಾನೆಯೋ–ಆಗ ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಾಪಪಡುತ್ತಾನೆ. ಯಾವಾಗ ನನ್ನ ಭುಜಾಗ್ರಗಳಿಂದ ವಿಮುಕ್ತವಾದ ವಿಪಾಠಗಳೆಂಬ ಬಾಣಗಳು–ಪಕ್ಷಿಗಳು ಹಣ್ಣುಗಳನ್ನು ಕಚ್ಚಿ ಕಚ್ಚಿ ಮರಗಳ ಅಗ್ರಭಾಗಗಳಿಂದ ಕೆಳಗೆ ಬೀಳಿಸುವಂತೆ– ಯುವಯೋಧರ ತಲೆಗಳನ್ನು ಕತ್ತರಿಸಿಹಾಕುವುದನ್ನು ದುರ್ಯೋಧನನು ನೋಡುತ್ತಾನೆಯೋ–ಆಗ ಅವನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ನನ್ನ ಅವ್ಯಾಹತವಾದ ಶರಪ್ರಹಾರಗಳಿಂದ ಗತಪ್ರಾಣರಾಗಿ ರಥಗಳಿಂದಲೂ, ಮಹಾಗಜಗಳ ಮೇಲ್ಭಾಗದಿಂದಲೂ, ಅಶ್ವಗಳಿಂದಲೂ ಕೆಳಕ್ಕೆ ತೊಪ-ತೊಪನೆ ಬೀಳುತ್ತಿರುವ ಯೋಧರನ್ನು ಸುಯೋಧನನು ಯಾವಾಗ ನೋಡುತ್ತಾನೆಯೋ–ಆಗವನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ಶತ್ರುಗಳಾದ ನಮ್ಮನ್ನು ಎದುರಿಸಲು ಸಾಧ್ಯವಾಗದೇ ಬಹುದೂರದಲ್ಲಿಯೇ ಇದ್ದರೂ ವಿನಾಶಹೊಂದುವ ಧೃತರಾಷ್ಟ್ರನ ಮಕ್ಕಳನ್ನು ನೋಡಿ (ತನ್ನ ಅನುಜರನ್ನು ನೋಡಿ), ತನ್ನ ಸುತ್ತಲೂ ಇರುವ ಅತಿರಥ-ಮಹಾರಥರಲ್ಲಿ ಯಾರೊಬ್ಬರೂ ಯುದ್ಧಸಮಯದಲ್ಲಿ ತೋರಬೇಕಾದ ಪರಾಕ್ರಮವನ್ನು ತೋರದೇ ಇರುವುದನ್ನೂ ಕಂಡು ದುರ್ಯೋಧನನು ಹತಾಶನಾಗಿ ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ಸುತ್ತಲೂ ಇರುವ ಶತ್ರುಪಕ್ಷದ ಪದಾತಿಸೈನ್ಯಸಮೂಹವನ್ನೂ, ರಥಸೈನ್ಯಸಮೂಹವನ್ನೂ ಬಾಯ್ತೆರೆದ ಮೃತ್ಯುವಿನೋಪಾದಿಯಲ್ಲಿ ಪ್ರಜ್ವಲಿಸುವ ನನ್ನ ಬಾಣವರ್ಷದಿಂದ ಆತತೇಷುವಾದ (ಅವಿಚ್ಛಿನ್ನವಾಗಿ ಬಾಣಗಳನ್ನು ಸೆಳೆದುಬಿಡುತ್ತಿರುವ) ನಾನು ಯಾವಾಗ ಕತ್ತರಿಸಿಹಾಕುವೆನೋ–ಆಗ ಮಂದಬುದ್ಧಿಯಾದ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ಎಲ್ಲ ದಿಕ್ಕುಗಳಲ್ಲಿಯೂ ಅಪ್ರತಿಹತವಾದ ರಥವು ತಿರುಗುತ್ತಿರುವುದನ್ನೂ, ರಥದ ಅನವರತವಾದ ಪರ್ಯಟನದಿಂದ ತನ್ನ ಸೈನ್ಯವು

ಧೂಳಿನಿಂದ ಮುಚ್ಚಿಹೋಗಿರುವುದನ್ನೂ, ಗಾಂಡೀವಧನುಸ್ಸಿನಿಂದ ಮುಕ್ತವಾದ ಬಾಣಗಳಿಂದ ಸಕಲಸೈನಿಕರೂ ಸಂಹೃತರಾಗಿರುವುದನ್ನೂ, ಅಳಿದುಳಿದ ಸೈನಿಕರೆಲ್ಲರೂ ಭ್ರಾಂತರಾಗಿರುವುದನ್ನೂ ಮಂದಬುದ್ಧಿಯಾದ ದುರ್ಯೋಧನನು ಯಾವಾಗ ನೋಡುತ್ತಾನೆಯೋ–ಆಗವನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ನನ್ನ ಬಾಣಗಳ ಆಘಾತವನ್ನು ತಪ್ಪಿಸಿಕೊಳ್ಳಲು ಯಾವ ದಿಕ್ಕಿಗೆ ಓಡಿಹೋಗಬೇಕೆಂಬುದನ್ನೇ ತಿಳಿಯದೇ ಇಲ್ಲಿಂದಲ್ಲಿಗೆ ಪರಿಭ್ರಮಿಸುತ್ತಿರುವ ಯೋಧರನ್ನೂ, ಕೈ-ಕಾಲುಗಳನ್ನು ಕಳೆದುಕೊಂಡ ಭಿನ್ನಶರೀರರಾದ ಯೋಧರನ್ನೂ, ಸಂಜ್ಞಾಹೀನರಾಗಿ ರಣಾಂಗಣದಲ್ಲಿ ಹೇಳುವವರೂ-ಕೇಳುವವರೂ ಇಲ್ಲದೇ ಬಿದ್ದಿರುವ ಯೋಧರನ್ನೂ ದುರ್ಯೋಧನನು ಕಾಣಲಿದ್ದಾನೆ. ಇಷ್ಟು ಮಾತ್ರವಲ್ಲ ; ತಂಡ-ತಂಡವಾಗಿ ಸತ್ತುಬಿದ್ದಿರುವ ಕುದುರೆಗಳನ್ನೂ, ಸವಾರರನ್ನೂ, ರಾಜರನ್ನೂ, ಆನೆಗಳನ್ನೂ, ಬಾಯಾರಿಕೆಯಿಂದಲೂ ಭಯದಿಂದಲೂ ಕಂಗೆಟ್ಟುಹೋಗಿರುವ ಯೋಧರನ್ನೂ, 'ಅಯ್ಯೋ! ಅಪ್ಪ! ಅಮ್ಮ!'–ಮುಂತಾಗಿ ಹೇಳಿಕೊಂಡು ಆರ್ತನಾದಮಾಡುತ್ತಿರುವ ಯೋಧರನ್ನೂ, ಹತರಾಗುತ್ತಿರುವವರನ್ನೂ–ಹತರಾಗಿ ಬಿದ್ದಿರುವವರನ್ನೂ, ಅಲ್ಲಲ್ಲಿ ಕಾಣುತ್ತಿರುವ ಸತ್ತುಹೋದ ಯೋಧರ ಕೇಶಗಳನ್ನೂ, ಮೂಳೆಗಳನ್ನೂ ಮತ್ತು ಕಪಾಲಗಳನ್ನೂ ನೋಡುತ್ತಾನೆ. ಇವೆಲ್ಲವೂ ವಿಧಿಯ ಕೈವಾಡ. ಯಾವ ರೀತಿಯಲ್ಲಿ ವಿಧಿಯು ಮೊದಲೇ ನಿಶ್ಚಯಮಾಡಿಬಿಟ್ಟಿದೆಯೋ–ಅದೇ ರೀತಿಯಲ್ಲಿ ಹಾಗೆಯೇ ನಡೆಯುತ್ತದೆ. ಆ ವಿಧವಾದ ಭಯಾನಕದೃಶ್ಯಗಳನ್ನು ನೋಡಿದನಂತರ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ.

ನನ್ನ ರಥದಲ್ಲಿ ಗಾಂಡೀವಧನುಸ್ಸನ್ನೂ, ವಾಸುದೇವನನ್ನೂ, ಅವನ ದಿವ್ಯವಾದ ಪಾಂಚಜನ್ಯಶಂಖವನ್ನೂ, ರಥಕ್ಕೆ ಕಟ್ಟಿರುವ ನಾಲ್ಕು ದಿವ್ಯಾಶ್ವಗಳನ್ನೂ, ಅಕ್ಷಯವಾದ ಬತ್ತಳಿಕೆಗಳನ್ನೂ, ನನ್ನ ದೇವದತ್ತವೆಂಬ ಶಂಖವನ್ನೂ ಮತ್ತು ನನ್ನನ್ನೂ ಯುದ್ಧದಲ್ಲಿ ನೋಡಿದನಂತರ ದುರ್ಯೋಧನನು ಯುದ್ಧವನ್ನು ಆರಂಭಿಸಿದುದಕ್ಕಾಗಿ ಪರಿತಪಿಸುತ್ತಾನೆ. ಒಟ್ಟುಗೂಡಿರುವ ಶತ್ರುಸಮೂಹವನ್ನು ಧ್ವಂಸಮಾಡುತ್ತಾ ಯುಗಾಂತ್ಯದಲ್ಲಿ ಮತ್ತೊಂದು ಯುಗದ ಪರಿವರ್ತನೆಗೆ ಅವಕಾಶಮಾಡಿಕೊಡುತ್ತಾ ಎಲ್ಲವನ್ನೂ ಸುಡುವ

ಅಗ್ನಿಯಂತೆ ಕೌರವವೀರರನ್ನು ಸುಟ್ಟುಬಿಡುತ್ತೇನೆ. ಅನಂತರದಲ್ಲಿ ಪುತ್ರಸಹಿತನಾದ ದೊಡ್ಡಪ್ಪನಾದ ಧೃತರಾಷ್ಟ್ರನು ಸಂತಾಪಪಡುತ್ತಾನೆ. (ಅದಕ್ಕೆ ಮೊದಲು ಅವನಿಗೆ ಜ್ಞಾನೋದಯವಾಗುವುದಿಲ್ಲ.) ಕ್ರೋಧವಶನಾದ, ಅಲ್ಪಬುದ್ಧಿಯವನಾದ ದುರ್ಯೋಧನನು ಯಾವಾಗ ಭ್ರಾತೃಗಳಿಂದ ವಿಹೀನನಾಗುವನೋ, ಸೈನಿಕರಿಂದ ವಿಹೀನನಾಗುವನೋ, ಭೃತ್ಯರಿಂದ ವಿಹೀನನಾಗುವನೋ, ಐಶ್ವರ್ಯದಿಂದಲೂ ವಿಹೀನನಾಗುವನೋ (ಯುದ್ಧದಲ್ಲಿ ತಮ್ಮಂದಿರನ್ನೂ, ಸೈನಿಕರನ್ನೂ ಮತ್ತು ಸೇವಕರನ್ನೂ ಯಾವಾಗ ಕಳೆದುಕೊಳ್ಳುವನೋ)–ಆಗ ಅವನ ದರ್ಪವೆಲ್ಲವೂ ಉಡುಗಿಹೋಗುತ್ತದೆ. ತರ-ತರನೆ ನಡುಗುತ್ತಾನೆ. ಹಾಗಾದನಂತರವೇ ಮಂದಬುದ್ಧಿಯಾದ ಧೃತರಾಷ್ಟ್ರನ ಮಗನು ಪಶ್ಚಾತ್ತಾಪಪಡುತ್ತಾನೆ.

ಸಂಜಯ! ಒಂದು ದಿನ ಪ್ರಾತಃಕಾಲದಲ್ಲಿ ನಾನು ಸಂಧ್ಯಾವಂದನ-ಗಾಯತ್ರೀಜಪಗಳನ್ನು ಮಾಡಿದನಂತರ ಆಚಮನಮಾಡಿ ಕರ್ಮಸಮಾಪ್ತಿಗೊಳಿಸಿದ ಸಮಯಕ್ಕೆ ಸರಿಯಾಗಿ ಬ್ರಾಹ್ಮಣನೊಬ್ಬನು ನನ್ನ ಸಮೀಪಕ್ಕೆ ಬಂದು ಮನೋಜ್ಞವಾದ ಈ ಮಾತುಗಳನ್ನು ನನ್ನೊಡನೆ ಹೇಳಿದನು : "ಪಾರ್ಥ! ನೀನೊಂದು ದುಷ್ಕರವಾದ ಕಾರ್ಯವನ್ನು ಮಾಡಬೇಕಾಗಿದೆ. ಸವ್ಯಸಾಚಿಯೇ! ನೀನು ನಿನ್ನ ಶತ್ರುಗಳೊಡನೆ ಅತಿಭಯಂಕರವಾದ ಯುದ್ಧಮಾಡಬೇಕಾಗಿದೆ. ಆ ಸಮಯದಲ್ಲಿ ನಿನ್ನ ರಕ್ಷಣಾರ್ಥವಾಗಿ ನಾನು ಸೂಚಿಸಲಿರುವ ಈ ಎರಡರಲ್ಲಿ ಯಾವುದನ್ನಾದರೂ ನೀನು ಆರಿಸಿಕೊಳ್ಳಬಹುದು. ಇಂದ್ರನು ಉಚ್ಚೈಃಶ್ರವಸ್ಸೆಂಬ ದಿವ್ಯಾಶ್ವದ ಮೇಲೆ ಕುಳಿತು ವಜ್ರಾಯುಧವನ್ನು ಹಿಡಿದು ನಿನ್ನ ಮುಂದೆ ರಣಾಂಗಣದಲ್ಲಿ ಶತ್ರುಗಳನ್ನು ವಿನಾಶಮಾಡುತ್ತಾ ಹೋಗುವುದು ನಿನಗೆ ಸಮ್ಮತವೇ? ಅಥವಾ ಶೈಬ್ಯ-ಸುಗ್ರೀವಗಳೆಂಬ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತು ವಸುದೇವನ ಮಗನಾದ ಶ್ರೀಕೃಷ್ಣನು ನಿನ್ನ ಮುಂಭಾಗದಲ್ಲಿ ಕುಳಿತು ರಕ್ಷಣೆಮಾಡುವುದು ನಿನಗೆ ಸಮ್ಮತವೇ?"

ಬ್ರಾಹ್ಮಣನ ಮಾತುಗಳನ್ನು ಕೇಳಿ ನಾನು ಮುಂಬರುವ ಯುದ್ಧದಲ್ಲಿ ನನಗೆ ಸಹಾಯಕನಾಗಿರಲು ಶ್ರೀಕೃಷ್ಣನನ್ನೇ ಆರಿಸಿಕೊಂಡೆನು. ವಜ್ರಹಸ್ತ

ನಾದ ಮಹೇಂದ್ರನನ್ನು ನಾನು ಆರಿಸಿಕೊಳ್ಳಲಿಲ್ಲ. ಬ್ರಾಹ್ಮಣನ ಆಶೀರ್ವಾದದ ಫಲವಾಗಿ ದುಷ್ಟರ ವಧೆಗಾಗಿ ಶ್ರೀಕೃಷ್ಣನೇ ನನಗೆ ಸಹಾಯಕನಾಗಿ ಸಿಕ್ಕಿದ್ದಾನೆ. ದೇವತೆಗಳ ಇಚ್ಛೆಯಾದರೂ ಇದೇ ಆಗಿರುವುದೆಂದು ನಾನು ಭಾವಿಸಿದ್ದೇನೆ.



ಸಂಜಯ! ಶ್ರೀಕೃಷ್ಣನು ಯುದ್ಧಮಾಡಬೇಕಾಗಿಯೇ ಇಲ್ಲ. 'ಇಂತಹವನಿಗೆ ಜಯವಾಗಲಿ'–ಎಂದು ಅವನು ಕೇವಲ ಮನಸ್ಸಿನಿಂದ ಅಭಿನಂದಿಸಿದರೆ (ಹರಸಿದರೆ) ಸಾಕು. ಅವನ ಅನುಗ್ರಹವನ್ನು ಪಡೆದ ಮಾನವನು ತನ್ನ ಎಲ್ಲ ಶತ್ರುಗಳನ್ನೂ ಜಯಿಸುತ್ತಾನೆ. ತನಗೆ ಅಮಿತ್ರ ರಾದವರು ಇಂದ್ರಸಹಿತರಾದ ದೇವತೆಗಳೇ ಆಗಿದ್ದರೂ ಅವರನ್ನೂ

ಅವನು ಜಯಿಸುತ್ತಾನೆ. ಹೀಗಿರುವಾಗ ಮನುಷ್ಯಮಾತ್ರರ ವಿಷಯವಾಗಿ ಚಿಂತಿಸತಕ್ಕದ್ದೇನಿದೆ?

ಮಹಾತೇಜಸ್ವಿಯಾದ, ಅತ್ಯಂತಶೂರನಾದ, ವಸುದೇವನ ಮಗನಾದ ಶ್ರೀಕೃಷ್ಣನನ್ನು ಯುದ್ಧದಲ್ಲಿ ಯಾವನು ಜಯಿಸಲು ಇಚ್ಛಿಸುವನೋ–ಅವನು ಅನಂತವಾದ, ಅಪಾರವಾದ, ಜಲನಿಧಿಯಾದ ಸಮುದ್ರವನ್ನು ತನ್ನ ಎರಡೇ ಕೈಗಳಿಂದ ಈಜಿಕೊಂಡು ದಾಟಲು ಇಚ್ಛಿಸುವನು. (ಮಹೋದಧಿಯನ್ನು ಈಜಿಕೊಂಡೇ ದಾಟಲಿಚ್ಛಿಸುವವನ ಶ್ರಮವು ನಿರರ್ಥಕವಾಗುವಂತೆ ಮತ್ತು ಅವನು ದಡವನ್ನು ಕಾಣದೇ ಮಹೋದಧಿಯಲ್ಲಿಯೇ ಪ್ರಾಣತೊರೆಯುವಂತೆ–ಶ್ರೀಕೃಷ್ಣನೊಡನೆ ಯುದ್ಧಮಾಡಲಿಚ್ಛಿಸುವವನು ಪ್ರಾಣಗಳನ್ನು ತೊರೆಯುವನೇ ಹೊರತು ಅವನಿಗೆ ಜಯದ ಆಸೆಯು ಖಂಡಿತವಾಗಿಯೂ ಇಲ್ಲ.)

ನಮ್ಮ ಶ್ರೀಕೃಷ್ಣನು ಮಹೋನ್ನತವಾದ ಪರ್ವತರಾಜನಂತಿದ್ದಾನೆ. ಯಾವನು ಅತ್ಯಂತವಿಶಾಲವಾದ ಮತ್ತು ಬಂಡೆಗಳಿಂದಲೇ ಆವೃತವಾದ, ಬಹಳ ದೊಡ್ಡದಾದ ಶ್ವೇತಪರ್ವತವನ್ನು ತನ್ನ ಅಂಗೈಯಿಂದಲೇ ಪುಡಿ-ಪುಡಿಯಾಗಿ ಮಾಡಲು ಇಚ್ಛಿಸುತ್ತಾನೆಯೋ–ಅಂತಹವನ ಕೈಗಳು ಉಗುರುಗಳ ಸಮೇತವಾಗಿ ಛಿದ್ರ-ವಿಚ್ಛಿದ್ರವಾಗಿ ಹೋಗುವುದೇ ಹೊರತು ಪರ್ವತರಾಜನಿಗೆ ಅವನ ಹಸ್ತಪ್ರಹಾರದಿಂದ ಯಾವ ವಿಧವಾದ ತೊಂದರೆಯೂ ಆಗುವುದಿಲ್ಲ. ಅಂತೆಯೇ ಪರ್ವತಸದೃಶನಾದ ಶ್ರೀಕೃಷ್ಣನ ಮುಂದೆ ನಿಂತು ಯುದ್ಧಮಾಡುವವನು ತಾನೇ ನಾಶಹೊಂದುತ್ತಾನೆಯೇ ಹೊರತು ಅವನ ಒಂದು ಕೂದಲನ್ನೂ ಕೊಂಕಿಸಲಾರನು.

ಯುದ್ಧದಲ್ಲಿ ವಾಸುದೇವನನ್ನು ಪರಾಜಯಗೊಳಿಸಲಿಚ್ಛಿಸುವ ಶೂರನು ಯಾವನಾದರೂ ಇದ್ದರೆ–ಅಂತಹವನು ಧಗ-ಧಗನೆ ಪ್ರಜ್ವಲಿಸುತ್ತಿರುವ ಅಗ್ನಿಯನ್ನು ತನ್ನೆರಡು ಕೈಗಳಿಂದಲೇ ಉಪಶಮನಗೊಳಿಸಿಯಾನು. ಚಂದ್ರ-ಸೂರ್ಯರ ಗತಿಯನ್ನೂ ನಿರೋಧಿಸಿಯಾನು. ದೇವತೆಗಳಲ್ಲಿರುವ ಅಮೃತವನ್ನೂ ಬಲಾತ್ಕಾರದಿಂದ ಅಪಹರಿಸಿಯಾನು.

(ಎರಡು ಕೈಗಳಿಂದಲೇ ಉರಿಯುತ್ತಿರುವ ಅಗ್ನಿಯನ್ನು ಉಪಶಮನಗೊಳಿಸುವುದು ಹೇಗೆ ಸಾಧ್ಯವಿಲ್ಲವೋ, ಚಂದ್ರ-ಸೂರ್ಯರ ಗತಿಯನ್ನು

ನಿರೋಧಿಸುವುದು ಹೇಗೆ ಸಾಧ್ಯವಿಲ್ಲವೋ, ದೇವತೆಗಳಲ್ಲಿರುವ ಅಮೃತವನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬರುವುದು ಯಾವೊಬ್ಬನಿಗೂ ಹೇಗೆ ಸಾಧ್ಯವಾಗಲಾರದೋ–ಅಂತೆಯೇ ವಾಸುದೇವನೊಡನೆ ಯುದ್ಧಮಾಡಿ ಜಯಿಸಲು ಯಾರಿಂದಲೂ ಸಾಧ್ಯವಿಲ್ಲ.)

ಶ್ರೀಕೃಷ್ಣನು ಒಂದೇ ರಥದ ಅವಲಂಬನದಿಂದ ಯುದ್ಧದಲ್ಲಿ ಭೋಜ ವಂಶದ ರಾಜರನ್ನು ಪರಾಜಯಗೊಳಿಸಿ, ರೂಪ-ಸೌಂದರ್ಯದಿಂದ ಪರಿಪೂರ್ಣಳಾಗಿದ್ದ, ಸದ್ಗುಣಗಳಿಂದಲೂ ಮತ್ತು ಯಶಸ್ಸಿನಿಂದಲೂ ಪ್ರಜ್ವಲಿಸುತ್ತಿದ್ದ ರುಕ್ಮಿಣೀದೇವಿಯನ್ನು ವಿವಾಹವಾಗಿ ಅವಳನ್ನು ತನ್ನ ಭಾರ್ಯೆಯನ್ನಾಗಿ ಮಾಡಿಕೊಂಡನು. ಈ ಮಹಾತ್ಮನು ಅವಳಲ್ಲಿಯೇ ಪ್ರದ್ಯುಮ್ನನೆಂಬ ಸುಪುತ್ರನನ್ನೂ ಪಡೆದನು. ಶ್ರೀಕೃಷ್ಣನು ತೋರಿಸಿರುವ ಶೌರ್ಯ-ಪರಾಕ್ರಮಗಳು ಅಗಣಿತವಾಗಿವೆ. ಇವನೊಮ್ಮೆ ಗಾಂಧಾರದೇಶದ ಯೋಧರನ್ನು ಅತ್ಯಲ್ಪಕಾಲದಲ್ಲಿಯೇ ಚೆನ್ನಾಗಿ ಸದೆಬಡಿದು, ನಗ್ನಜಿತನೆಂಬ ರಾಜನ ಎಲ್ಲ ಮಕ್ಕಳನ್ನೂ ಪರಾಜಯಗೊಳಿಸಿ, ದೇವತೆಗಳಿಗೂ ಪ್ರಿಯನಾಗಿದ್ದ ನಗ್ನಜಿತನ ಸೆರೆಯಾಳಾಗಿದ್ದ–ಆ ಕಾರಣದಿಂದಲೇ ಬಹುವಾಗಿ ಶೋಕಿಸುತ್ತಿದ್ದ ಸುದರ್ಶನನೆಂಬ ರಾಜನನ್ನೂ ಬಂಧನದಿಂದ ವಿಮುಕ್ತಗೊಳಿಸಿದನು.

ಶ್ರೀಕೃಷ್ಣನು ಬಾಗಿಲನ್ನೇ ಕಿತ್ತು ಅದರಿಂದಲೇ ಪಾಂಡ್ಯರಾಜನನ್ನು ಪ್ರಹರಿಸಿ ಎದೆಯ ಮೇಲೆ ಗುದ್ದಿ ಕ್ಷಣಮಾತ್ರದಲ್ಲಿ ಅವನನ್ನು ಸಂಹರಿಸಿದನು. ಅಂತೆಯೇ ಮಹಾಸಮರವೊಂದರಲ್ಲಿ ಕಳಿಂಗರನ್ನು ಧ್ವಂಸಮಾಡಿದನು. ಕಾಶೀಪಟ್ಟಣವೂ ಅವನಿಂದಲೇ ಭಸ್ಮೀಭೂತವಾಯಿತು. ಈ ಕಾರಣದಿಂದಾಗಿ ವಾರಣಾಸಿಯು ಅನೇಕವರ್ಷಗಳವರೆಗೆ ನಾಥರಿಲ್ಲದ (ರಾಜರಿಲ್ಲದ) ಪಟ್ಟಣ ವಾಗಿಯೇ ಉಳಿಯಿತು.

ಏಕಲವ್ಯನೆಂಬ ನಿಷಾದರಾಜನು ಯಾರಿಂದಲೂ ತಾನು ಪರಾಜಿತ ನಾಗಲಾರೆನೆಂದೂ, ಅಜಯ್ಯನೆಂದೂ ಭಾವಿಸಿಬಿಟ್ಟಿದ್ದನು. ಜಂಭಾಸುರನು ಪರ್ವತವನ್ನಪ್ಪಳಿಸಲು ಹೋಗಿ ಪ್ರಾಣತೊರೆದು ಕೆಳಗುರುಳಿದಂತೆ–ಏಕಲವ್ಯನೂ ತಾನು ಅಜಯ್ಯನೆಂಬ ಮೌಢ್ಯದಿಂದ ಪರ್ವತೋಪಮನಾದ ಶ್ರೀಕೃಷ್ಣನ ಮೇಲೆ ಯುದ್ಧಕ್ಕೆ ಬಂದು ಅವನೊಡನೆ ಯುದ್ಧಮಾಡಿ ಕಟ್ಟಕಡೆಗೆ ಗತಪ್ರಾಣನಾಗಿ ಸುದೀರ್ಘವಾದ ನಿದ್ರೆಯನ್ನು ಪಡೆದನು.

ವೃಷ್ಣಿ ಮತ್ತು ಅಂಧಕನಾಯಕರು ಸೇರಿದ್ದ ಮಹಾಸಭೆಯ ಮಧ್ಯದಲ್ಲಿ ಉಪವಿಷ್ಟನಾಗಿದ್ದ, ಪರಮದುಷ್ಟನಾಗಿದ್ದ, ಉಗ್ರಸೇನನ ಮಗನಾದ ಕಂಸನನ್ನು ಬಲದೇವಸಹಿತನಾದ ಶ್ರೀಕೃಷ್ಣನು ಕ್ಷಣಮಾತ್ರದಲ್ಲಿ ಕೊಂದು ರಾಜ್ಯಾಡಳಿತವನ್ನು ಉಗ್ರಸೇನನಿಗೇ ವಹಿಸಿಕೊಟ್ಟನು.

ಶ್ರೀಕೃಷ್ಣನು ಸೌಭವೆಂಬ ವಿಮಾನದಲ್ಲಿ ಕುಳಿತಿದ್ದ, ಮಾಯೆಯಿಂದ ಅತ್ಯಂತಭಯಂಕರವಾದ ರೂಪವನ್ನು ಧರಿಸಿಬಂದಿದ್ದ, ಆಕಾಶದಲ್ಲಿಯೇ ಉಪಸ್ಥಿತನಾಗಿದ್ದ ಶಾಲ್ವರಾಜನೊಡನೆ ಯುದ್ಧಮಾಡುತ್ತಿದ್ದನು. ಆ ಸಮಯದಲ್ಲಿ ಶ್ರೀಕೃಷ್ಣನೊಮ್ಮೆ ಸೌಭವಿಮಾನದ ಬಾಗಿಲಿನ ಬಳಿ ಸಜ್ಜುಗೊಳಿಸಿದ್ದ 'ಶತಘ್ನೀ' ಎಂಬ ಮಹಾಯಂತ್ರವನ್ನು ತನ್ನೆರಡು ಕೈಗಳಿಂದಲೇ ಹಿಡಿದುಬಿಟ್ಟನು. ಇಂತಹ ಪರಾಕ್ರಮವುಳ್ಳ ಶ್ರೀಕೃಷ್ಣನನ್ನು ಎದುರಿಸಿ ಯಾರು ತಾನೇ ಅವನ ಪ್ರಹಾರವನ್ನು ಸಹಿಸಿಕೊಂಡಾರು? ಅವನನ್ನೆದುರಿಸಿ ನಿಲ್ಲಲು ಯಾರಿಂದಲೂ ಸಾಧ್ಯವೇ ಇಲ್ಲ.

ಪ್ರಾಗ್ಜ್ಯೋತಿಷವೆಂಬ ಹೆಸರಿನ ಬಹುದುರ್ಗಮವಾದ, ಘೋರವಾದ, ಶತ್ರುಗಳಿಂದ ದುರ್ಭೇದ್ಯವಾದ ರಾಕ್ಷಸರ ಪಟ್ಟಣವಿದ್ದಿತು. ಭೂದೇವಿಯ ಮಗನಾದ ಮಹಾಬಲಶಾಲಿಯಾದ ನರಕನೆಂಬುವನು ಆ ಪಟ್ಟಣದ ರಾಜನಾಗಿದ್ದನು. ಆ ನೀಚರಾಕ್ಷಸನು ದೇವಮಾತೆಯಾದ ಅದಿತಿಯ ಸುಂದರವಾದ ಮಣಿಮಯವಾದ ಎರಡು ಕರ್ಣಕುಂಡಲಗಳನ್ನು ಅಪಹರಿಸಿಕೊಂಡು ಬಂದಿದ್ದನು. ಮೃತ್ಯುವಿನ ಭೀತಿಯಿಲ್ಲದ ಶಕ್ರಪ್ರಮುಖರಾದ ದೇವತೆಗಳು ನರಕಾಸುರನೊಡನೆ ಯುದ್ಧಮಾಡಲು ಹೋಗಿ ಸ್ವಲ್ಪಕಾಲ ಯುದ್ಧಮಾಡಿ ಅವನನ್ನು ಪರಾಜಯಗೊಳಿಸದೇ ಯುದ್ಧದಿಂದ ವಿಮುಖರಾದರು. ಅನಂತರ ಅವರು ಭೂಮಿಯಲ್ಲಿದ್ದ ಶ್ರೀಕೃಷ್ಣನ ಪರಾಕ್ರಮವನ್ನೂ, ಅವನಲ್ಲಿದ್ದ ಅಪ್ರತಿಹತವಾದ ಮಹಾಸ್ತ್ರಗಳನ್ನೂ ಕಂಡು–ದಯಾಳುತ್ವ, ದುಷ್ಟಶಿಕ್ಷಣ, ಶಿಷ್ಟಪರಿಪಾಲನಾಧ್ಯೇಯ–ಇವೇ ಮುಂತಾದ ಸಹಜಗುಣಗಳನ್ನೂ ಅವನಲ್ಲಿ ಕಂಡುಕೊಂಡವರಾಗಿ, ಕರ್ಣಕುಂಡಲಗಳ ಅಪಹಾರಕನಾದ ನರಕಾಸುರನನ್ನು ಸಂಹರಿಸಲು ಶ್ರೀಕೃಷ್ಣನನ್ನೇ ನಿಯೋಜಿಸಿದರು. (ಪ್ರಾರ್ಥಿಸಿದರು.) ಸಕಲವಿಧವಾದ ಕಾರ್ಯಗಳನ್ನೂ ಸಿದ್ಧಿಮಾಡಿಕೊಳ್ಳುವುದರಲ್ಲಿ ಅತ್ಯಂತಸಮರ್ಥನಾದ ವಾಸುದೇವನು ಅತಿದುಷ್ಕರವೆನಿಸಿದ ನರಕಾಸುರವಧೆಯ ಕಾರ್ಯವನ್ನು ಮುಗಿಸಿ

ಕೊಡಲು ಒಪ್ಪಿಕೊಂಡನು. ನಿರ್ಮೋಚನವೆಂಬ ಪಟ್ಟಣದ ಸಮೀಪದಲ್ಲಿ ಆರು ಸಾವಿರ ರಾಕ್ಷಸರನ್ನು ಕೊಂದು, ತೀಕ್ಷ್ಣವಾದ ಅಲುಗುಗಳಿಂದ ಕೂಡಿದ್ದ ಲೋಹಮಯವಾದ ಪಾಶಗಳನ್ನು ಕತ್ತರಿಸಿ, ಮುರನೆಂಬ ರಾಕ್ಷಸನನ್ನೂ ಸಂಹರಿಸಿ, ಅವನ ಸುತ್ತಲೂ ಇದ್ದ ರಾಕ್ಷಸರ ಸಮೂಹವನ್ನೂ ಕ್ಷಣಮಾತ್ರದಲ್ಲಿ ನಾಶಮಾಡಿ ನಿರ್ಮೋಚನಪಟ್ಟಣವನ್ನು ಪ್ರವೇಶಿಸಿದನು.

ನಿರ್ಮೋಚನಪಟ್ಟಣದಲ್ಲಿಯೇ ಮಹಾಬಲಿಷ್ಠನಾದ ನರಕಾಸುರನಿಗೂ–ಅತಿಬಲಿಷ್ಠನಾದ ಶ್ರೀಕೃಷ್ಣನಿಗೂ ಯುದ್ಧವಾಯಿತು. ಅನೇಕದಿನಗಳವರೆಗೆ ಘೋರಯುದ್ಧವು ನಡೆದನಂತರ ಶ್ರೀಕೃಷ್ಣನಿಂದ ಹತನಾದ ನರಕಾಸುರನು–ಬಿರುಗಾಳಿಯಿಂದ ಬುಡಮೇಲಾಗಿ ಮಾಡಲ್ಪಟ್ಟ ಕಕ್ಕೆಗಿಡದಂತೆ–ಗತಪ್ರಾಣನಾಗಿ ಕೆಳಗುರುಳಿದನು. ಈ ರೀತಿಯಲ್ಲಿ ಅನುಪಮಪ್ರಭಾವಶಾಲಿಯಾದ ಶ್ರೀಕೃಷ್ಣನು ಭೂದೇವಿಯ ಪುತ್ರನಾದ ನರಕಾಸುರನನ್ನೂ ಮತ್ತು ಮುರನನ್ನೂ ಸಂಹರಿಸಿ, ನರಕಾಸುರನು ಅಪಹರಿಸಿದ್ದ ಅದಿತಿಯ ಕರ್ಣಕುಂಡಲಗಳನ್ನು ತೆಗೆದುಕೊಂಡು–ವಿಜಯಲಕ್ಷ್ಮಿಯನ್ನೂ, ಉಜ್ಜ್ವಲವಾದ ಯಶಸ್ಸನ್ನೂ ಪಡೆದವನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ನರಕಾಸುರನೊಡನೆ ಮಾಡಿದ ಯುದ್ಧದಲ್ಲಿ ಶ್ರೀಕೃಷ್ಣನು ತೋರಿದ ಭಯಂಕರಪರಾಕ್ರಮವನ್ನು ಕಂಡು ಸಂತುಷ್ಟರಾದ ದೇವತೆಗಳು ಶ್ರೀಕೃಷ್ಣನಿಗೆ ವರಪ್ರದಾನಮಾಡಿದರು.:

ಶ್ರಮಶ್ಚ ತೇ ಯುಧ್ಯಮಾನಸ್ಯ ನ ಸ್ಯಾ-
ದಾಕಾಶೇ ಚಾಪ್ಸು ಚ ತೇ ಕ್ರಮಃ ಸ್ಯಾತ್ ।
ಶಸ್ತ್ರಾಣಿ ಗಾತ್ರೇ ನ ಚ ತೇ ಕ್ರಮೇರ–
ನ್ನಿತ್ಯೇವ ಕೃಷ್ಣಶ್ಚ ತತಃ ಕೃತಾರ್ಥಃ ॥೮೬॥

'ಯುದ್ಧಮಾಡುವಾಗ ನಿನಗೆ ಯಾವ ವಿಧವಾದ ಶ್ರಮವೂ ಆಗದಿರಲಿ. ಆಕಾಶದಲ್ಲಿಯೂ ಮತ್ತು ನೀರಿನಲ್ಲಿಯೂ ನಿನ್ನ ಸಂಚಾರವು ಸಾಧ್ಯವಾಗುವಂತಾಗಲಿ. ಎದುರಾಳಿಯು ನಿನ್ನ ಮೇಲೆ ಎಷ್ಟೇ ರಭಸದಿಂದ ಶಸ್ತ್ರಪ್ರಯೋಗ ಮಾಡಿದರೂ ಆ ಶಸ್ತ್ರಗಳು ನಿನ್ನ ದೇಹದಲ್ಲಿ ನಾಟದಿರಲಿ.'

ಈ ವಿಧವಾದ ವರಗಳನ್ನು ಪಡೆದು ಶ್ರೀಕೃಷ್ಣನು ಕೃತಕೃತ್ಯನಾದನು.

ಅಪ್ರಮೇಯನಾದ, ಮಹಾಬಲಿಷ್ಠನಾದ ಇಂತಹ ಶ್ರೀಕೃಷ್ಣನಲ್ಲಿ ಸಮಸ್ತ ಸದ್ಗುಣಗಳೂ ಸದಾಕಾಲದಲ್ಲಿಯೂ ಮೂರ್ತಿಮತ್ತಾಗಿರುತ್ತವೆ.

ಅನಂತಪರಾಕ್ರಮಿಯಾದ ಅಜಯ್ಯನಾದ (ಜಯಿಸಲು ಅಸಾಧ್ಯನಾದ) ಶ್ರೀಕೃಷ್ಣನನ್ನು ಮಂದಮತಿಯಾದ ದುರ್ಯೋಧನನು ಜಯಿಸಲಿಚ್ಛಿಸಿದ್ದಾನೆ. ದುರಾತ್ಮನಾದ ದುರ್ಯೋಧನನು ಶ್ರೀಕೃಷ್ಣನ ಪರಾಕ್ರಮದ ವಿಷಯದಲ್ಲಿ ಸಂದೇಹಿಸಿದ್ದಾನೆ. ಶ್ರೀಕೃಷ್ಣನಾದರೋ ಈ ವೇಳೆಗಾಗಲೇ ತನ್ನ ಪರಾಕ್ರಮ ವೆಷ್ಟೆಂಬುದನ್ನು ಆ ದುರುಳಮತಿಗೆ ತೋರಿಸಿಬಿಡುತ್ತಿದ್ದನು. ಆದರೆ ಇವನು ನಮ್ಮನ್ನು ನೋಡಿ ಸುಮ್ಮನಿದ್ದಾನೆ. ದುರ್ಯೋಧನನಲ್ಲಿ ಒಂದು ತಪ್ಪು ಎಣಿಕೆಯೂ ಇದೆ. ನನಗೂ ಮತ್ತು ಶ್ರೀಕೃಷ್ಣನಿಗೂ ಯಾವುದಾದರೂ ಕಾರಣದಿಂದ ಕಲಹವುಂಟಾಗಿಬಿಡಬಹುದೆಂದು ಅವನ ಕಲ್ಪನೆಯಿದೆ. 'ಮಮ ಪ್ರಾಣಾ ಹಿ ಪಾಣ್ಡವಾಃ' ಎಂಬ ಶ್ರೀಕೃಷ್ಣನ ಮಮತ್ವವನ್ನೂ ಚಾತುರ್ಯದಿಂದ ಅಪಹರಿಸಿಬಿಡಬಹುದೆಂದು ಅವನು ಎಣಿಸಿದ್ದಾನೆ. (ಬಲಾತ್ಕಾರದಿಂದ ಪಾಂಡವರ ಸ್ವತ್ತನ್ನು ಅಪಹರಿಸಬಹುದೆಂದು ಎಣಿಸಿರುತ್ತಾನೆ.) ಆದರೆ ಕುರುಕ್ಷೇತ್ರದ ಯುದ್ಧಭೂಮಿಯನ್ನು ಪ್ರವೇಶಿಸಿದಾಗಲೇ ತನ್ನ ಎಣಿಕೆಯು ತೀರ ಅಸಂಬದ್ಧವಾದುದೆಂಬುದು ದುರ್ಯೋಧನನಿಗೆ ಅರಿವಾಗುತ್ತದೆ.

ನಾನು ಮೊದಲು ಶಾಂತನುವಿನ ಪುತ್ರನಾದ, ಪಿತಾಮಹನಾದ ಭೀಷ್ಮನಿಗೆ ನಮಸ್ಕರಿಸಿ, ಅನಂತರ ಆಚಾರ್ಯದ್ರೋಣರಿಗೂ, ದ್ರೋಣಪುತ್ರ ನಿಗೂ ಮತ್ತು ಅದ್ವಿತೀಯಪರಾಕ್ರಮಿಗಳಾದ ಕೃಪಾಚಾರ್ಯರಿಗೂ ನಮಸ್ಕರಿಸಿ ರಾಜ್ಯವನ್ನು ಗೆದ್ದುಕೊಳ್ಳುವ ಉತ್ಕಟೇಚ್ಛೆಯಿಂದ ಯುದ್ಧಮಾಡುತ್ತೇನೆ.

ಪಾಪಬುದ್ಧಿಯಿಂದ ಕೂಡಿರುವ ಯಾವ ಮಾನವನು ಪಾಂಡವರೊಡನೆ ಯುದ್ಧಕ್ಕೆ ನಿಲ್ಲುತ್ತಾನೆಯೋ–ಅಂತಹವನು ಧರ್ಮದ ದೃಷ್ಟಿಯಿಂದ ಮೃತ ಪ್ರಾಯನೇ ಆಗುತ್ತಾನೆಂಬುದು ನನ್ನ ಅಭಿಪ್ರಾಯವಾಗಿದೆ. ನಾವೆಲ್ಲರೂ ರಾಜಪುತ್ರರೇ ಆಗಿದ್ದೇವೆ. ರಾಜಯೋಗ್ಯವಾದ ಯುದ್ಧವನ್ನು ನಮ್ಮೊಡನೆ ಮಾಡಿ ನಮ್ಮನ್ನು ಸೋಲಿಸಿ ರಾಜ್ಯಾಪಹರಣ ಮಾಡುವುದಕ್ಕೆ ಬದಲಾಗಿ ಆ

ಕ್ರೂರಿಗಳು ಕಪಟದ್ಯೂತದಲ್ಲಿ ನಮ್ಮನ್ನು ಸೋಲಿಸಿ ರಾಜ್ಯವನ್ನು ಕಬಳಿಸಿ ಹನ್ನೆರಡು ವರ್ಷಗಳ ಕಾಲ ನಮ್ಮನ್ನು ಅರಣ್ಯಕ್ಕಟ್ಟಿದರು." (ಕೌರವರು ಮಾಡಿದುದೆಲ್ಲವೂ ಮೋಸ ಮತ್ತು ಅಧರ್ಮ. ನಾವಾದರೋ ಅವರು ಮಾಡಿರುವುದು ಮೋಸವೆಂದು ತಿಳಿದಿದ್ದರೂ ವಚನಭ್ರಷ್ಟರಾಗದೇ ಪ್ರತಿಜ್ಞಾತವಾದಂತೆ ಹನ್ನೆರಡು ವರ್ಷಗಳನ್ನು ಕಾಡಿನಲ್ಲಿಯೂ, ಒಂದು ವರ್ಷವನ್ನು ಅಜ್ಞಾತವಾಸದಲ್ಲಿಯೂ ಕಳೆದೆವು. ಈಗಲಾದರೂ ನಮ್ಮ ರಾಜ್ಯವನ್ನು ನಮಗೆ ಹಿಂದಿರುಗಿಸುವುದು ಧರ್ಮವಾಗಿದ್ದಿತು. ಆದರೆ ದುರಾಸೆಯವನಾದ ದುರ್ಯೋಧನನು ನಮ್ಮನ್ನು ನಿರ್ಮೂಲಗೊಳಿಸುವ ಆಶಯದಿಂದಲೇ ನಮ್ಮೊಡನೆ ಯುದ್ಧಮಾಡಲು ಸನ್ನದ್ಧನಾಗುತ್ತಿದ್ದಾನೆ. ನಾವು ಧರ್ಮವನ್ನು ಸಂರಕ್ಷಿಸುತ್ತಾ ಧರ್ಮದ ಹಿನ್ನೆಲೆಯಲ್ಲಿ ಕಾರ್ಯಮಾಡುತ್ತಿದ್ದೇವೆ. ಆದುದರಿಂದ ನಮ್ಮನ್ನೆದುರಿಸಿ ಯುದ್ಧಮಾಡಲು ಬರುವವರು ಧರ್ಮಘ್ನರಾಗುತ್ತಾರೆ. ಧರ್ಮವನ್ನು ರಕ್ಷಿಸುವವರನ್ನು ಧರ್ಮವೇ ರಕ್ಷಣೆಮಾಡುವಂತೆ-ಧರ್ಮಘ್ನರನ್ನು ಅದೇ ಧರ್ಮವೇ ವಿನಾಶಗೊಳಿಸುತ್ತದೆ. ಈ ಕಾರಣದಿಂದಾಗಿ ದುರ್ಯೋಧನಾದಿಗಳಿಂದು ಧರ್ಮದ ದೃಷ್ಟಿಯಿಂದ ನಿಧನಹೊಂದಿದ್ದಾರೆ. ಇದನ್ನೇ ವಿವರಿಸಿ ಅರ್ಜುನನು ಹೀಗೆ ಹೇಳುತ್ತಾನೆ.)

"ನಾವು ಅರಣ್ಯದಲ್ಲಿ ಬಹಳ ಕಾಲದವರೆಗೆ (ಹನ್ನೆರಡು ವರ್ಷಗಳ ಪರ್ಯಂತ) ವಾಸವಾಗಿದ್ದು ಅನೇಕವಿಧವಾದ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸಿದೆವು. ಅದರ ಜೊತೆಗೆ ಬಹುಕಷ್ಟಸಾಧ್ಯವಾದ ಅಜ್ಞಾತವಾಸದಲ್ಲಿಯೂ ಒಂದು ವರ್ಷವನ್ನು ಕಳೆದೆವು. ಅವರ ದಾಯಾದರೆನಿಸಿಕೊಂಡ ನಾವು ಇಷ್ಟೊಂದು ಕಷ್ಟದ ಜೀವನ ನಡೆಸುತ್ತಿರುವಾಗ–ಇಂದು ಮಾತ್ರ ಅಧಿಕಾರದಲ್ಲಿರುವ ಧೃತರಾಷ್ಟ್ರನ ಮಕ್ಕಳು ಯಾವ ಕಾರಣದಿಂದ ಆನಂದಿಸುತ್ತಿದ್ದಾರೆ?" (ಮೊದಲನೆಯದಾಗಿ : ಜ್ಞಾತಿ-ಬಾಂಧವರು ಕಷ್ಟಪಡುತ್ತಿರುವುದನ್ನು ನೋಡಿ ಆನಂದಿಸುವುದು ಖಂಡಿತವಾಗಿಯೂ ಧರ್ಮವಲ್ಲ. ಎರಡನೆಯದಾಗಿ: ಅವರ ಅಧಿಕಾರವು ಕೇವಲ ಅಲ್ಪಕಾಲಿಕವಾದುದು.; ಶಾಶ್ವತವಾದುದಲ್ಲ. ಈ ಎರಡು ಕಾರಣಗಳಿಂದಲೂ ಅವರು ಆನಂದದಿಂದಿರುವುದು ಸಾಧುವಾಗಿ ಕಾಣುವುದಿಲ್ಲ. ಹೀಗಿದ್ದರೂ ಕೇವಲ ಅಧರ್ಮಿಷ್ಠರಾದ ಅವರು ನಮ್ಮ ಕಷ್ಟವನ್ನು ನೋಡಿ ಆನಂದಿಸುತ್ತಿದ್ದಾರೆ. ಹೀಗೆ ಆನಂದಿಸುತ್ತಿರುವುದ

ರಿಂದಲೇ ಅವರು ಅಧರ್ಮಿಗಳೆಂಬುದು ಬಹುಸ್ಪಷ್ಟವಾಗಿದೆ. ಇಷ್ಟು ಕಷ್ಟಗಳನ್ನು ಅನುಭವಿಸಿದ ಪಾಂಡವರು ಬದುಕಿರುವಾಗ ಅವರ ಪದವಿಯನ್ನು ಆಕ್ರಮಿಸಿರುವ ಕೌರವರು ಹೇಗೆ ತಾನೇ ಸಂತೋಷವಾಗಿ ಬಾಳಬಲ್ಲರು?)

ತೇ ಚೇದಸ್ಮಾನ್ಯುಧ್ಯಮಾನಾಞ್ಜಯೇಯು–
ರ್ದೇವೈರ್ಮಹೇನ್ದ್ರಪ್ರಮುಖೈಃ ಸಹಾಯೈಃ ।
ಧರ್ಮಾದಧರ್ಮಶ್ಚರಿತೋ ಗರೀಯಾಂ–
ಸ್ತತೋ ಧ್ರುವಂ ನಾಸ್ತಿ ಕೃತಂ ಚ ಸಾಧು ॥೯೩॥

(ಧರ್ಮಕ್ಕೆ ವಿರೋಧಿಗಳಾಗಿರುವ ಅವರಿಗೆ ವಿನಾಶವೇ ಸಿದ್ಧವಾಗಿದೆಯೆಂಬುದು ನನ್ನ ಸಿದ್ಧಾಂತ.) ಒಂದು ವೇಳೆ ಹಾಗಾಗದೇ ಇಂದ್ರಪ್ರಮುಖರಾದ ದೇವತೆಗಳನ್ನಾದರೂ ಸಹಾಯಕ್ಕೆ ಪಡೆದುಕೊಂಡು ನಮ್ಮನ್ನವರು ಜಯಿಸಿಯೇಬಿಟ್ಟರೆ–ಧರ್ಮಕಾರ್ಯಕ್ಕಿಂತಲೂ ಅಧರ್ಮಕಾರ್ಯವೇ ಶ್ರೇಷ್ಠತರವೆಂಬುದು ಸ್ಪಷ್ಟವಾಗುತ್ತದೆ. 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಮಾತು ಸುಳ್ಳಾಗುತ್ತದೆ. (ಇಂದ್ರಪ್ರಮುಖರಾದ ದೇವತೆಗಳೇ ದುರ್ಯೋಧನನ ಸಹಾಯಕ್ಕೆ ಬಂದರೂ ಧರ್ಮವು ತಮ್ಮ ಕಡೆಗಿರುವುದರಿಂದ ತಾವೇ ಗೆಲ್ಲುವೆವೆಂಬುದು ಅರ್ಜುನನ ಸಿದ್ಧಾಂತವಾಗಿದೆ.)

ಪುಣ್ಯಕರ್ಮಗಳ ಮತ್ತು ಪಾಪಕರ್ಮಗಳ (ಧರ್ಮಾಧರ್ಮಗಳ) ಫಲವು ಮನುಷ್ಯನಿಗಿಲ್ಲವೆಂದು ಆ ಪಾಪಬುದ್ಧಿಯ ದುರ್ಯೋಧನನು ಭ್ರಮಿಸಿದ್ದರೆ–ನಮ್ಮನ್ನವನು ತನಗಿಂತಲೂ ಶ್ರೇಷ್ಠರೆಂದೂ ಶಿಷ್ಟರೆಂದೂ ಭಾವಿಸದಿದ್ದರೆ (ಈಗಲಾದರೂ ಧರ್ಮಕ್ಕೆ ಪುರಸ್ಕಾರವನ್ನು ಕೊಡದಿದ್ದರೆ)–ವಾಸುದೇವನ ಜೊತೆಯಲ್ಲಿ ಕುರುಕ್ಷೇತ್ರವನ್ನು ಪ್ರವೇಶಿಸಿ ಸಪರಿವಾರನಾದ ದುಷ್ಟ ದುರ್ಯೋಧನನನ್ನು ಸಂಹರಿಸಲು ನಿಶ್ಚಯಿಸಿದ್ದೇನೆ.

ಮಹಾರಾಜ! ಮನುಷ್ಯನು ಮಾಡಿದ ಪಾಪಕರ್ಮಗಳು ಪಾಪಫಲವನ್ನು ಕೊಡುವುದರಲ್ಲಿ ಬಂಜೆಯಂತಾಗದಿದ್ದರೆ–ಮನುಷ್ಯನು ಮಾಡಿದ ಪುಣ್ಯಕರ್ಮಗಳು ನಿಷ್ಫಲವಾಗದಾಗಿದ್ದರೆ–ದುರ್ಯೋಧನನು ಈಗ ಮಾಡುತ್ತಿರುವ, ಹಿಂದೆ ಮಾಡಿರುವ ಪಾಪಕರ್ಮಗಳೆಲ್ಲವನ್ನೂ ಚೆನ್ನಾಗಿ ಪರಿಶೀಲಿಸಿ ನಿಶ್ಚಯಮಾಡಿ ಹೇಳುತ್ತೇನೆ.; ಅವನಿಗೆ ಪರಾಜಯವು ಖಂಡಿತ ಮತ್ತು ಅನಿವಾರ್ಯ.

ಮೇಲಾಗಿ ಅವನಿಗೆ ಪರಾಜಯವಾಗುವುದು ರಾಷ್ಟ್ರದ ಮತ್ತು ಧರ್ಮದ ದೃಷ್ಟಿಯಿಂದಲೂ ಸಾಧುವೇ ಆಗುವುದು.

ನಿಮ್ಮ ಸಮಕ್ಷದಲ್ಲಿ ನಾನು ಹೇಳುವುದನ್ನು ಕೇಳಿರಿ! ಧೃತರಾಷ್ಟ್ರನ ಮಕ್ಕಳು ಯುದ್ಧಮಾಡಲು ಯುದ್ಧಭೂಮಿಗೆ ಬರುವುದಾದಲ್ಲಿ ಅವರಲ್ಲೊಬ್ಬರೂ ಉಳಿಯುವುದಿಲ್ಲ. ಯುದ್ಧಭೂಮಿಯಿಂದ ದೂರವಾಗಿದ್ದ ಪಕ್ಷದಲ್ಲಿ (ಸಂಧಿ ಮಾಡಿಕೊಂಡ ಪಕ್ಷದಲ್ಲಿ) ಅವರು ಪ್ರಾಣಗಳೊಂದಿಗೆ ಉಳಿದುಕೊಂಡಾರು. ಆದರೆ ಯುದ್ಧಕ್ಕೆ ಬರುವವರಲ್ಲಿ ಯಾರೂ ಉಳಿಯುವುದಿಲ್ಲ. ನಿಃಶೇಷವಾಗಿ ಎಲ್ಲರೂ ಹತರಾಗುತ್ತಾರೆ.

ಕರ್ಣಸಮೇತರಾದ ಧೃತರಾಷ್ಟ್ರನ ನೂರು ಮಕ್ಕಳನ್ನೂ ಕೊಂದು, ಕುರುಗಳು ಅನುಭವಿಸುತ್ತಿರುವ ಅಖಂಡಸಾಮ್ರಾಜ್ಯವನ್ನೂ ನಾವು ಗೆದ್ದುಕೊಳ್ಳುವುದಂತೂ ನಿಶ್ಚಯ. ನೀವು ಮಾಡಬೇಕಾಗಿರುವ ಕಾರ್ಯಗಳೇನಾದರೂ ಉಳಿದಿದ್ದ ಪಕ್ಷದಲ್ಲಿ ಅವೆಲ್ಲವನ್ನೂ ಬೇಗ ಮಾಡಿ ಮುಗಿಸಿಬಿಡಿರಿ. ನಿಮಗೆ ಇಷ್ಟವಾದ ಭಕ್ಷ್ಯ-ಭೋಜ್ಯಾದಿಗಳನ್ನು ತಿಂದು ಮುಗಿಸಿರಿ. ನಿಮ್ಮ ಪತ್ನಿಯರೊಡನೆ ಸುಖೋಪಭೋಗಗಳನ್ನು ಅನುಭವಿಸಿರಿ. ಯುದ್ಧವು ಪ್ರಾರಂಭವಾಗುವ ಪರ್ಯಂತವೂ ನಿಮ್ಮ ನಿಮ್ಮ ಶರೀರಗಳನ್ನೂ ಮನಬಂದಂತೆ ಸಿಂಗರಿಸಿಕೊಂಡು ಆನಂದಿಸಿರಿ. (ಯುದ್ಧಾನಂತರವೂ ನಿಮಗಿದೆಲ್ಲವೂ ಲಭ್ಯವಾಗುವುದೆಂಬ ಭ್ರಾಂತಿಯಿಂದಿರಬೇಡಿರಿ. ನಮ್ಮೊಡನೆ ಯುದ್ಧಮಾಡಲಿಚ್ಛಿಸಿರುವ ನಿಮ್ಮ ಆಯುಷ್ಯವು ಮುಗಿದುಹೋಗಿದೆ.)

ಈ ಮಾತುಗಳನ್ನು ನಾನು ಕೇವಲ ನಮ್ಮ ಶೌರ್ಯ-ಪರಾಕ್ರಮಗಳನ್ನೇ ಅವಲಂಬಿಸಿ ಹೇಳುತ್ತಿಲ್ಲ. ದೈವದ ಚಿಂತನೆಯೂ ಸಹ ಹೀಗೆಯೇ ಇದೆ.

ನಮ್ಮಲ್ಲಿ ವೃದ್ಧರಾದ ಅನೇಕಬ್ರಾಹ್ಮಣರಿದ್ದಾರೆ. ಅವರೆಲ್ಲರೂ ಅನೇಕ ಶಾಸ್ತ್ರಗಳನ್ನು ತಿಳಿದವರು. ಶೀಲವಂತರು. ಸತ್ಕುಲಪ್ರಸೂತರು. ವರ್ಷದಲ್ಲಾಗುವ ಶುಭಾಶುಭಫಲಗಳನ್ನು ಸ್ಪಷ್ಟವಾಗಿ ಹೇಳತಕ್ಕವರು. ಜ್ಯೌತಿಷ ಶಾಸ್ತ್ರದ ರಹಸ್ಯವನ್ನು ತಿಳಿದಿರತಕ್ಕವರು. ಯಾವ ಯಾವ ನಕ್ಷತ್ರಗಳು ಮತ್ತು ಗ್ರಹಗಳು ಎಲ್ಲೆಲ್ಲಿದ್ದರೆ ಎಂತೆಂತಹ ಫಲಗಳಾಗುವುದೆಂಬುದನ್ನು ನಿಷ್ಕೃಷ್ಟವಾಗಿ ಹೇಳತಕ್ಕವರು. ಅವರು ದೈವಿಕವಾಗಿ ಸಂಭವಿಸುವ

ಉನ್ನತಿ ಮತ್ತು ಅವನತಿಗಳ ರಹಸ್ಯವನ್ನು ಹೇಳುತ್ತಾರೆ. ಮುಂದೇನಾಗುವು ದೆಂಬುದನ್ನು ಬಹುಸ್ಪಷ್ಟವಾಗಿ ಹೇಳುತ್ತಾರೆ. ಮೃಗ-ಪಕ್ಷಿಗಳ ಶಕುನಗಳನ್ನು ತಿಳಿದಿರುತ್ತಾರೆ. ಶುಭಾಶುಭಫಲಗಳನ್ನು ಹೇಳುವಾಗ ಅವರು ಸರ್ವತೋಭದ್ರವೇ ಮೊದಲಾದ ಚಕ್ರಗಳನ್ನು ಅನುಸಂಧಾನಮಾಡಿ ಅದರಿಂದಲೂ ಭವಿಷ್ಯಫಲವನ್ನು ಹೇಳುತ್ತಾರೆ. ಪ್ರಶ್ನೆಯನ್ನು ಕೇಳುವ ಮುಹೂರ್ತವನ್ನು ಸ್ಫುಟಮಾಡಿ ಆ ಕಾಲದಲ್ಲಿರುವ ಗ್ರಹಗಳ ಬಲಾಬಲ ಗಳನ್ನು ತಿಳಿದು ಹೀಗೆಯೇ ಆಗುವುದೆಂದು ಬಹುಸ್ಪಷ್ಟವಾಗಿ ಹೇಳುತ್ತಾರೆ. ಆ ವಿದ್ವಾಂಸರು ಈ ಎಲ್ಲ ವಿಧಾನಗಳಿಂದ ಗುಣಿಸಿ ನಮಗೆ ಹೇಳುತ್ತಿರುವು ದೇನೆಂದರೆ : 'ಕುರು ಮತ್ತು ಸೃಂಜಯವಂಶಗಳು ಸಂಪೂರ್ಣವಾಗಿ ಕ್ಷಯಿಸಿ ಹೋಗುತ್ತವೆ ಮತ್ತು ಪಾಂಡವರಿಗೆ ಜಯವಾಗುತ್ತದೆ.' (ಆದುದರಿಂದ ನಿಮಗೆ ಉಳಿಗಾಲವಿಲ್ಲ.) ನಮ್ಮಣ್ಣನಾದ ಧರ್ಮಜನು ಅಜಾತಶತ್ರುವೆಂದು ಹೆಸರು ಪಡೆದಿರುತ್ತಾನೆ. ಇವನಿಗೆ ಶತ್ರುಗಳೆಂಬುವವರೇ ಇಲ್ಲ. ಇವನೂ ಸಹ ಶತ್ರುಗಳ ದಮನಕ್ರಿಯೆಯಲ್ಲಿ ಸಫಲನಾಗುವುದಾಗಿ ಭಾವಿಸಿದ್ದಾನೆ. (ಅಜಾತಶತ್ರುವಾಗಿರುವವನು–'ಇಂತಹವರು ನನ್ನ ಶತ್ರುಗಳು'–ಎಂದು ಭಾವಿಸಿರುವುದೇ ಶತ್ರುಗಳ ವಿನಾಶಕ್ಕೆ ಸೂಚಕವಾಗಿದೆ.) ಭಗವಾನ್ ಶ್ರೀಕೃಷ್ಣನು ಅಪರೋಕ್ಷಜ್ಞಾನಿಯು. ಅವನಿಗೂ ಸಹ ಮುಂದೇನಾಗುವು ದೆಂಬುದು ಸ್ಪಷ್ಟವಾಗಿ ತಿಳಿದಿದೆ. ವೃಷ್ಣಿಸಿಂಹನಾದ ಶ್ರೀಕೃಷ್ಣನೂ ನಾವು ಜಯಗಳಿಸುವುದರಲ್ಲಿ ಮತ್ತು ಧೃತರಾಷ್ಟ್ರನ ಮಕ್ಕಳು ಸಂಪೂರ್ಣವಾಗಿ ವಿನಾಶಹೊಂದುವುದರಲ್ಲಿ ಯಾವ ವಿಧವಾದ ಸಂಶಯವನ್ನೂ ಕಾಣುತ್ತಿಲ್ಲ.

ಶ್ರೀಕೃಷ್ಣನಂತೆಯೇ ನಾನೂ ಕೂಡ ಅಪ್ರಮತ್ತವಾದ ಏಕಾಗ್ರಬುದ್ಧಿ ಯಿಂದ ಮುಂದೇನಾಗುವುದೆಂಬುದನ್ನು ತಿಳಿದಿರುತ್ತೇನೆ. ನನ್ನ ಹಿಂದಿನ (ಹಿಂದಿನ ಜನ್ಮದಲ್ಲಿನ ) ದಿವ್ಯದೃಷ್ಟಿಯು ಈಗಲೂ ಮಸುಕಾಗಿರುವುದಿಲ್ಲ. ಈ ಕಾರಣದಿಂದಲೇ ನಾನು ಸ್ಪಷ್ಟವಾಗಿ ಹೇಳುತ್ತೇನೆ : 'ಯುದ್ಧದಲ್ಲಿ ತೊಡಗುವ ಧೃತರಾಷ್ಟ್ರನ ಮಕ್ಕಳಲ್ಲಿ ಯಾರೊಬ್ಬರೂ ಉಳಿಯುವುದಿಲ್ಲ.'

ವಿಜಯಸೂಚಕವಾದ ಕೆಲವು ನಿದರ್ಶನಗಳನ್ನೂ ಹೇಳುತ್ತೇನೆ: ನನ್ನ ಗಾಂಡೀವಧನುಸ್ಸು ನಾನು ಸ್ಪರ್ಶಿಸದೇ ಇದ್ದರೂ ಟೇಂಕರಿಸುತ್ತದೆ. ಧನುಸ್ಸಿನ

ಮೌರ್ವಿಯನ್ನು ನಾನು ಹಿಡಿದೆಳೆಯದಿದ್ದರೂ ಅದು ಪದೇ-ಪದೇ ತನಗೆ ತಾನಾಗಿಯೇ ಹಿಂದಕ್ಕೂ-ಮುಂದಕ್ಕೂ ಕಂಪಿಸುತ್ತದೆ. ನನ್ನ ಬತ್ತಳಿಕೆಯಲ್ಲಿರುವ ಬಾಣಗಳು ನನ್ನ ಸ್ಪರ್ಶವೇ ಇಲ್ಲದಿದ್ದರೂ ಶತ್ರುಗಳ ಕಡೆಗೆ ರಭಸದಿಂದ ಹೋಗುವ ಸಲುವಾಗಿ ಬತ್ತಳಿಕೆಯಿಂದ ಹೊರಕ್ಕೆ ಬರಲು ಬಾರಿ-ಬಾರಿಗೂ ನೆಗೆದಾಡುತ್ತಿವೆ. ಹಾವು ಜೀರ್ಣವಾಗಿಹೋದ ಪೊರೆಯನ್ನು ಕಳಚಿಬಿಡುವಂತೆ ಥಳ-ಥಳಿಸುವ ನನ್ನ ಕತ್ತಿಯು ತಾನೇ ತಾನಾಗಿ ಒರೆಯಿಂದ ಹೊರಬರುತ್ತದೆ. ರಥದ ಧ್ವಜದಿಂದಲೂ–'ಅರ್ಜುನ! ನಿನ್ನ ರಥವನ್ನು ಯುದ್ಧಕ್ಕಾಗಿ ಯಾವಾಗ ಸಜ್ಜುಗೊಳಿಸುವೆ?–ಎಂಬ ಉತ್ತೇಜಕರವಾದ ಮಾತುಗಳು ಕೇಳಿಬರುತ್ತಿವೆ. ಇಂತಹ ನಾನಾವಿಧವಾದ ಸೂಚನೆಗಳಿಂದಾಗಿ ನಾವು ವಿಜಯಿಗಳಾಗುವುದು ನಿಶ್ಚಯವೆಂದು ಭಾವಿಸಿದ್ದೇನೆ.

ರಾತ್ರಿಯಲ್ಲಿ ಗುಳ್ಳೇನರಿಗಳು ಗುಂಪು-ಗುಂಪಾಗಿ ಸೇರಿಕೊಂಡು ರೋದನಮಾಡುತ್ತಿರುತ್ತವೆ. ರಾಕ್ಷಸರು ಆಕಾಶದಿಂದ ತೊಪ-ತೊಪನೆ ಬೀಳುತ್ತಿರುತ್ತಾರೆ. ಜಿಂಕೆಗಳು, ನರಿಗಳು, ನವಿಲುಗಳು, ಕಾಗೆಗಳು, ರಣಹದ್ದುಗಳು, ಬಕಪಕ್ಷಿಗಳು, ಕಿರುಬಗಳು, ಗರುಡಪಕ್ಷಿಗಳು–ಇವುಗಳೆಲ್ಲವೂ ಬಿಳಿಯ ಕುದುರೆಗಳಿಂದ ಯುಕ್ತವಾದ ನನ್ನ ರಥವನ್ನು ಕಂಡು ಆ ನನ್ನ ರಥದ ಹಿಂದೆಯೇ ಬರುತ್ತಿರುತ್ತವೆ. ಹೆಚ್ಚು ಹೇಳುವುದೇನಿದೆ? ಯುದ್ಧಕ್ಕಿಳಿಯುವ ಸಕಲರನ್ನೂ, ಸಕಲಯೋಧರನ್ನೂ ನಾನೊಬ್ಬನೇ ಅವ್ಯಾಹತವಾಗಿ ಬಾಣಗಳ ಮಳೆಗರೆಯುವಿಕೆಯಿಂದ ಯಮಲೋಕಕ್ಕೆ ಕಳುಹಿಸಿಬಿಡುತ್ತೇನೆ.

ನಡುಬೇಸಿಗೆಯಲ್ಲಿ ಹುಟ್ಟಿಕೊಂಡ ಕಾಡುಗಿಚ್ಚು ಯಾವ ರೀತಿಯಲ್ಲಿ ಅರಣ್ಯದಲ್ಲಿರುವ ವೃಕ್ಷಗಳೆಲ್ಲವನ್ನೂ ಭಸ್ಮೀಭೂತಮಾಡಿಬಿಡುವುದೋ– ಅದೇ ರೀತಿಯಲ್ಲಿ ನಾನು ಶತ್ರುಗಳ ವಧೆಗೆ ಸನ್ನದ್ಧನಾಗಿ, ಅಸ್ತ್ರಸಂಚಾಲನದ ವಿಭಿನ್ನಮಾರ್ಗಗಳನ್ನು ಅವಲಂಬಿಸಿ–ಸ್ಥೂಣಾಕರ್ಣ, ಮಹಾಸ್ತ್ರವಾದ ಪಾಶುಪತ, ಬ್ರಾಹ್ಮ, ಇಂದ್ರನು ಅನುಗ್ರಹಿಸಿಕೊಟ್ಟಿರುವ ಅನೇಕವಿಧವಾದ ಮಹಾಸ್ತ್ರಗಳು–ಇವುಗಳನ್ನು ಯಥೋಚಿತವಾಗಿ ಪ್ರಯೋಗಿಸುತ್ತಾ, ಶೀಘ್ರಗಾಮಿಗಳಾದ ಬಾಣಗಳ ಮಳೆಗರೆಯುತ್ತಾ ಶತ್ರುಪಕ್ಷವನ್ನು ಧ್ವಂಸ ಮಾಡಿಬಿಡುತ್ತೇನೆ. ಶತ್ರುಪಕ್ಷದಲ್ಲಿರುವವರಲ್ಲಿ ಒಬ್ಬನನ್ನಾದರೂ ನಾನು

ಜೀವಸಹಿತವಾಗಿ ಬಿಡುವುದಿಲ್ಲ. ಹೀಗೆ ಮಾಡಿದನಂತರವೇ ನನಗೆ ಶಾಂತಿಯು ಲಭಿಸುತ್ತದೆ.

ಸಂಜಯ! ಈ ನನ್ನ ಸ್ಥಿರಸಂಕಲ್ಪವನ್ನು ಅವರಿಗೆ ಸ್ಪಷ್ಟವಾಗಿಯೇ ತಿಳಿಯಹೇಳು.

ದುರ್ಯೋಧನನ ಭ್ರಾಂತಿಯನ್ನಾದರೂ ನೋಡು, ಸಂಜಯ! ಯುದ್ಧದಲ್ಲಿ ಇಂದ್ರಪ್ರಮುಖರಾದ ಸಮಸ್ತದೇವತೆಗಳೇ ಎದುರಾಗಿ ಬಂದರೂ ಅವರನ್ನೂ ಯಾರು ಪರಾಜಯಗೊಳಿಸಬಲ್ಲರೋ–ಅಂತಹ ಪಾಂಡವರೊಡನೆ ಮಂದಬುದ್ಧಿಯಾದ ಈ ದುರ್ಯೋಧನನು ಯುದ್ಧಮಾಡಲಿಚ್ಛಿಸಿದ್ದಾನೆ. ನಮ್ಮೊಡನೆ ಯುದ್ಧಮಾಡುವುದು ಬಹುಸುಲಭವೆಂದು ಭಾವಿಸಿಬಿಟ್ಟಿದ್ದಾನೆ. ಅವನು ಮೋಹಪರವಶನಾಗಿರುವುದೇ ಇದಕ್ಕೆ ಕಾರಣವಾಗಿದೆ.

(ಇಷ್ಟು ಹೇಳಿದನಂತರ ಕಡೆಯಲ್ಲಿ ಅರ್ಜುನನು ಹೇಳಿಕಳುಹಿಸಿರುವ ಈ ಮಾತು ನಿಶ್ಚಯವಾಗಿಯೂ ಅವನ ಉದಾತ್ತಭಾವವನ್ನು ವ್ಯಕ್ತಪಡಿಸುತ್ತದೆ.)

ವೃದ್ಧೋ ಭೀಷ್ಮಃ ಶಾನ್ತನವಃ ಕೃಪಶ್ಚ
ದ್ರೋಣಃ ಸಪುತ್ರೋ ವಿದುರಶ್ಚ ಧೀಮಾನ್ ।
ಏತೇ ಸರ್ವೇ ಯದ್ವದನ್ತೇ ತದಸ್ತು
ಆಯುಷ್ಮನ್ತಃ ಕುರವಃ ಸನ್ತು ಸರ್ವೇ ॥೧೦೯॥

ವೃದ್ಧನಾದ, ಶಾಂತನುವಿನ ಮಗನಾದ ಭೀಷ್ಮ, ಕೃಪರು, ಆಚಾರ್ಯ ದ್ರೋಣರು, ದ್ರೋಣರ ಸುಪುತ್ರ ಅಶ್ವತ್ಥಾಮಾ, ಧೀಮಂತನಾದ ವಿದುರ–ಇವರೆಲ್ಲರೂ ಹೇಗೆ ಹೇಳುತ್ತಾರೆಯೋ ಹಾಗೆಯೇ ನಡೆದುಕೊಳ್ಳಲು ಬದ್ಧರಾಗಿದ್ದೇವೆ. ಅವರೆಲ್ಲರ ಸತ್ಪ್ರಭಾವದಿಂದಲಾದರೂ ಎಲ್ಲ ಕುರುರಾಜಕುಮಾರರೂ ದೀರ್ಘಾಯುಷ್ಮಂತರಾಗಿ ಬಾಳುವಂತಾಗಲಿ.”

ಳ೮ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನು ದುರ್ಯೋಧನನಿಗೆ ಪಾಂಡವರೊಡನೆ ಸಂಧಿಮಾಡಿಕೊಳ್ಳಲು ಸಲಹೆ ನೀಡಿದುದು : ಭೀಷ್ಮನಿಂದ ಕೃಷ್ಣಾರ್ಜುನರ ಪ್ರಶಂಸೆ : ಕರ್ಣನ ಅವಹೇಳನ : ಕರ್ಣನ ಆತ್ಮಪ್ರಶಂಸೆ : ಭೀಷ್ಮನಿಂದ ಪುನಃ ಕರ್ಣನ ಅವಹೇಳನ : ಭೀಷ್ಮನ ಅಭಿಪ್ರಾಯವನ್ನು ದ್ರೋಣರು ಅನುಮೋದಿಸಿದುದು

ಜನಮೇಜಯ! ಸುಂದರವಾದ ಆ ಸಭಾಮಂಟಪದಲ್ಲಿ ಎಲ್ಲ ರಾಜರೂ ಉಪವಿಷ್ಟರಾಗಿರಲಾಗಿ, ಶಾಂತನುವಿನ ಪುತ್ರನಾದ ಭೀಷ್ಮನು ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ದುರ್ಯೋಧನ! ಹಿಂದೆ ನಡೆದ ಪ್ರಸಂಗವೊಂದನ್ನು ಸ್ಮರಿಸಿ ಹೇಳುತ್ತಿದ್ದೇನೆ. ಅವ್ಯಗ್ರಚಿತ್ತನಾಗಿ ಕೇಳು : ಒಮ್ಮೆ ಬೃಹಸ್ಪತಿ ಮತ್ತು ಶುಕ್ರಾಚಾರ್ಯರಿಬ್ಬರೂ ಬ್ರಹ್ಮನ ಸೇವೆಮಾಡುತ್ತಿದ್ದರು. ಅಗ್ನಿ, ವಸುಗಳು, ಆದಿತ್ಯರು, ಸಾಧ್ಯರು, ಸಪ್ತರ್ಷಿಗಳು. ವಿಶ್ವಾವಸುವೆಂಬ ಗಂಧರ್ವರಾಜ, ಶ್ರೇಷ್ಠರಾದ ಅಪ್ಸರೆಯರು–ಇವರೆಲ್ಲರೂ ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ನಮಸ್ಕರಿಸಿ ವಿಶ್ವೇಶನಾದ ಬ್ರಹ್ಮನನ್ನು ಸುತ್ತುವರಿದು ಕುಳಿತರು. ಅದೇ ಸಮಯದಲ್ಲಿ ತಮ್ಮ ದಿವ್ಯವಾದ ಕಾಂತಿಯಿಂದ ಪ್ರೇಕ್ಷಕರ ಮನಸ್ಸನ್ನೂ ತೇಜಸ್ಸನ್ನೂ ಅಪಹರಿಸುವ ಸಾಮರ್ಥ್ಯವನ್ನು ಪಡೆದಿದ್ದ ಪುರಾತನ ದೇವತೆಗಳಾದ ನರ-ನಾರಾಯಣರೆಂಬ ಋಷಿಗಳು ಬ್ರಹ್ಮಾದಿಗಳಿದ್ದ ಸ್ಥಳದಿಂದಲೇ ಹಾದುಹೋದರು.

ಬ್ರಹ್ಮನ ಸಮೀಪದಲ್ಲಿಯೇ ಹೋದರೂ ಅವರೊಮ್ಮೆ ಬ್ರಹ್ಮನ ಕಡೆಗೆ ತಿರುಗಿಯೂ ನೋಡಲಿಲ್ಲ. ಅದನ್ನು ಕಂಡು ಅಚ್ಚರಿಗೊಂಡ ಬೃಹಸ್ಪತಿಯು ಬ್ರಹ್ಮನನ್ನು ಪ್ರಶ್ನಿಸಿದನು :

"ಪಿತಾಮಹ! ಈಗ ತಾನೇ ಇಲ್ಲಿಂದ ಹಾದುಹೋದ ಮಹಾತೇಜಸ್ವಿಗಳಾದ ಆ ಇಬ್ಬರು ಯಾರಾಗಿದ್ದಾರೆ? ಮತ್ತೊಂದು ಅಚ್ಚರಿಯೆಂದರೆ ಇಲ್ಲಿಯೇ ಉಪವಿಷ್ಟನಾಗಿರುವ ನಿನ್ನನ್ನವರು ಒಮ್ಮೆಯಾದರೂ ಅಭಿನಂದಿಸಲಿಲ್ಲ. ಇತ್ತಕಡೆಗೆ ತಿರುಗದೆಯೇ ಹೊರಟುಹೋದರು."

ಪಿತಾಮಹನು ಹೇಳುತ್ತಾನೆ :

“ದೇವಗುರೋ! ಆ ಇಬ್ಬರೂ ಮಹಾಶಕ್ತಿಮಂತರಾದ ತಪಸ್ವಿಗಳು. ಪೃಥ್ವಿಯನ್ನೂ ಮತ್ತು ಅಂತರಿಕ್ಷವನ್ನೂ ತಮ್ಮ ದಿವ್ಯತೇಜಸ್ಸಿನಿಂದ ಬೆಳಗುತ್ತಾ ನಮ್ಮ ಈ ಲೋಕವನ್ನು ಅತಿಕ್ರಮಿಸಿ ಮುಂದೆಹೋಗುತ್ತಿದ್ದಾರೆ. ಅವರು ನರ-



ನಾರಾಯಣರೆಂಬ ಅಭಿಧಾನಗಳನ್ನು ಪಡೆದಿರುತ್ತಾರೆ. ತಮ್ಮ ತೇಜಸ್ಸಿನಿಂದಲೂ ಮತ್ತು ಓಜಸ್ಸಿನಿಂದಲೂ ಸ್ವಯಂಪ್ರಕಾಶರಾಗಿರುತ್ತಾರೆ. ಅವರ ಧೈರ್ಯ ಮತ್ತು ಪರಾಕ್ರಮಗಳು ಅಪರಿಮಿತವಾಗಿವೆ. ಅವರು ತಮ್ಮ ತಪಃಪ್ರಭಾವದಿಂದ ಅತ್ಯಂತಪ್ರಭಾವಶಾಲಿಗಳಾಗಿದ್ದು ಲೋಕದಿಂದ ಲೋಕಕ್ಕೆ ಸ್ವೇಚ್ಛೆಯಿಂದ ಸಂಚರಿಸುತ್ತಿರುತ್ತಾರೆ. ಅವರು ತಮ್ಮ ಸತ್ಕರ್ಮಗಳಿಂದ

ಚತುರ್ದಶಭುವನಗಳನ್ನೂ ನಿಶ್ಚಯವಾಗಿಯೂ ಆನಂದಪಡಿಸುತ್ತಾರೆ. ಅವರಿಬ್ಬರೂ ಅಸಾ ಧಾರಣಬುದ್ಧಿವಂತರೂ, ಮಹಾಪ್ರಾಜ್ಞರೂ, ಶತ್ರುಗಳಿಗೆ ಪರಿತಾಪವನ್ನುಂಟು ಮಾಡುವವರೂ ಆಗಿದ್ದಾರೆ. ಯದ್ಯಪಿ ಅವರು ಒಬ್ಬರೇ ಆಗಿದ್ದರೂ ಅಸುರರ ವಿನಾಶಕ್ಕಾಗಿ ಎರಡು ಶರೀರಗಳನ್ನು ಧರಿಸಿರುತ್ತಾರೆ. ದೇವತೆಗಳೂ ಮತ್ತು ಗಂಧರ್ವರೂ ಅವರನ್ನು ಪೂಜಿಸಿ ಗೌರವಿಸುತ್ತಾರೆ.”

ಬ್ರಹ್ಮನು ಹೇಳಿದ ಮಾತುಗಳನ್ನು ಕೇಳಿದೊಡನೆಯೇ ಇಂದ್ರನು ಬೃಹಸ್ಪತಿಪುರಸ್ಸರರಾದ ದೇವಗಣಗಳಿಂದ ಕೂಡಿದವನಾಗಿ ನರ-ನಾರಾಯಣರು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಧಾವಿಸಿದನು.

ಅದೇ ಸಮಯದಲ್ಲಿ ದೇವತೆಗಳ ಮತ್ತು ಅಸುರರ ಮಧ್ಯೆ ಮಹಾ ಯುದ್ಧವು ನಡೆಯಲಿದ್ದು ದೇವತೆಗಳು ಬಹಳ ಭೀತರಾಗಿದ್ದರು. ಅದೇ ಕಾರಣದಿಂದ ದೇವಗಣಗಳಿಂದ ಕೂಡಿದ ಇಂದ್ರನು ಮಹಾತ್ಮರಾದ ನರ-ನಾರಾಯಣರಿಂದ ವರವನ್ನು ಯಾಚಿಸಿದನು. ಇಂದ್ರನು ವರವನ್ನು ಯಾಚಿಸಿ ದೊಡನೆಯೇ ದಯಾಮಯರಾದ ನರ-ನಾರಾಯಣರು ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ಇಂದ್ರನಿಗೆ ಹೇಳಿದರು. ಇಂದ್ರನು ವರವನ್ನು ಯಾಚಿಸುತ್ತಾ–‘ಸಾಹ್ಯಂ ನಃ ಕ್ರಿಯತಾಂ’–‘ನಮಗೆ ನೀವು ಸಹಾಯ ಮಾಡಿರಿ’–ಎಂದು ಕೇಳಿಕೊಂಡನು. ‘ನೀನು ಪ್ರಾರ್ಥಿಸಿದುದನ್ನು ನಾವು ಮಾಡಿಕೊಡುವೆವು’–ಎಂಬುದಾಗಿ ನರ-ನಾರಾಯಣರು ಹೇಳುತ್ತಲೇ ಇಂದ್ರನು ಅವರೊಡನೆ ಕೂಡಿಕೊಂಡು ದೈತ್ಯ-ದಾನವರೊಡನೆ ಯುದ್ಧಮಾಡಿ ನರ- ನಾರಾಯಣರ ಸಹಾಯದಿಂದಲೇ ಅವರನ್ನು ಪರಾಜಯಗೊಳಿಸಿದನು.

ಮತ್ತೊಂದು ಸಮಯದಲ್ಲಿ ಪರಂತಪನಾದ, ನರರೂಪನಾದ, ಅರ್ಜು ನನು ಇಂದ್ರನ ಶತ್ರುಗಳಾಗಿದ್ದ ಪೌಲೋಮರನ್ನೂ, ಕಾಲಖಂಜರನ್ನೂ ಶತ-ಸಹಸ್ರಸಂಖ್ಯೆಯಲ್ಲಿ ಸಂಹರಿಸಿದನು. ಮತ್ತೊಮ್ಮೆ ಇದೇ ಅರ್ಜುನನು ಗರ-ಗರನೆ ಸುತ್ತುತ್ತಿದ್ದ ರಥದಲ್ಲಿ ಕುಳಿತು, ಕೈಗೆ ಸಿಕ್ಕಿದುದೆಲ್ಲವನ್ನೂ ನುಂಗಿಹಾಕು ತ್ತಿದ್ದ ಜಂಭನೆಂಬ ರಾಕ್ಷಸನ ತಲೆಯನ್ನು ಭಲ್ಲವೆಂಬ ಆಯುಧದಿಂದ ಕ್ಷಣ ಮಾತ್ರದಲ್ಲಿ ಕತ್ತರಿಸಿದನು. ಮತ್ತೊಮ್ಮೆ ಅರ್ಜುನನು ಇಂದ್ರನ ಸಲುವಾಗಿ ಅರುವತ್ತು ಸಾವಿರ ನಿವಾತಕವಚರನ್ನು ಯುದ್ಧದಲ್ಲಿ ಜಯಿಸಿ ಸಮುದ್ರ

ತೀರದಲ್ಲಿದ್ದ ಹಿರಣ್ಯಪುರವನ್ನು ಧ್ವಂಸಮಾಡಿದನು. ನಮ್ಮೆಲ್ಲರಿಗೂ ತಿಳಿದಿರುವಂತೆಯೇ ಪರಪುರಂಜಯನಾದ ಅರ್ಜುನನು ಖಾಂಡವದಾಹಕಾಲದಲ್ಲಿ ಇಂದ್ರಪ್ರಮುಖರಾದ ದೇವತೆಗಳೆಲ್ಲರನ್ನೂ ಗೆದ್ದು ಅಗ್ನಿದೇವನನ್ನು ಪೂರ್ಣವಾಗಿ ತೃಪ್ತಿಗೊಳಿಸಿದನು. ಇದೇ ರೀತಿಯಲ್ಲಿ ನಾರಾಯಣಸ್ವರೂಪನಾದ ಶ್ರೀಕೃಷ್ಣನೂ ಖಾಂಡವದಾಹದ ಸಮಯದಲ್ಲಿ ಅಲ್ಲಿದ್ದ ಅನೇಕ ದುಷ್ಟಪ್ರಾಣಿಗಳನ್ನು ಸಂಹರಿಸಿದನು. ಅನೇಕವೀರರನ್ನೂ ಸಂಹರಿಸಿದನು. ಮಹಾವೀರ್ಯರಾದ ಆ ಇಬ್ಬರೂ ಒಟ್ಟಾಗಿ ಸೇರಿ ಇಲ್ಲಿಗೆ ಬರುವವರಿದ್ದಾರೆ. (ಇಬ್ಬರೂ ಸೇರಿಯೇ ಯುದ್ಧಮಾಡುತ್ತಾರೆ.) ಈ ವಿಷಯವನ್ನು ನೀನು ಸುದೀರ್ಘವಾಗಿ ಸಮಾಲೋಚಿಸುವುದು ಯುಕ್ತವಾಗಿದೆ. ಪರಸ್ಪರವಾಗಿ ಜೊತೆಗೂಡಿರುವ ಮಹಾರಥಿಗಳಾದ, ಮಹಾವೀರರಾದ, ವಾಸುದೇವಾರ್ಜುನರು ಪುರಾತನದೇವತೆಗಳಾದ ನರ-ನಾರಾಯಣಾಖ್ಯರಾದ ದೇವತೆಗಳೇ ಆಗಿದ್ದಾರೆಂಬುದು ಸರ್ವತ್ರ ಪ್ರಸಿದ್ಧವಾಗಿದೆ.

ಮನುಷ್ಯಲೋಕದಲ್ಲಿ ಅವತರಿಸಿರುವ ನರ-ನಾರಾಯಣರು ಇಂದ್ರ ಸಹಿತರಾದ ದೇವತೆಗಳಿಂದಲೂ ಮತ್ತು ಅಸುರರಿಂದಲೂ ಅಜಯ್ಯರಾಗಿರು ತ್ತಾರೆ. ಅವರನ್ನು ಜಯಿಸಲು ಯಾರಿಂದಲೂ ಸಾಧ್ಯವಾಗಲಾರದು. ಪೂರ್ವದೇವತೆಯಾದ ನಾರಾಯಣನೇ ಶ್ರೀಕೃಷ್ಣನಾಗಿ ಅವತರಿಸಿದ್ದಾನೆ. ನರನು ಫಾಲ್ಗುನನಾಗಿದ್ದಾನೆ. ತತ್ತ್ವಶಃ ನರ-ನಾರಾಯಣರಿಬ್ಬರೂ ಒಬ್ಬರೇ ಆಗಿರುತ್ತಾರೆ. ಆದರೆ ಲೋಕರಕ್ಷಣೆಗಾಗಿ ಎರಡು ಶರೀರಗಳನ್ನು ಧರಿಸಿ ಅವತರಿಸಿದ್ದಾರೆ. ಅವರಿಬ್ಬರೂ ತಮ್ಮ ಸತ್ಕರ್ಮಗಳ ಪ್ರಭಾವದಿಂದ ಅಕ್ಷಯವಾದ ಮತ್ತು ಶಾಶ್ವತವಾದ ಲೋಕಗಳನ್ನು ವ್ಯಾಪಿಸಿ ನಿಂತಿದ್ದಾರೆ. ಲೋಕಹಿತಾರ್ಥವಾಗಿ ಎಲ್ಲೆಲ್ಲಿ ಯಾವಾಗ ಯುದ್ಧವು ಸಂಭವಿಸುವುದೋ ಅಲ್ಲಲ್ಲಿ ಧರ್ಮದ ವಿಜಯಕ್ಕಾಗಿಯೂ, ದುಷ್ಟರ ಸಂಹಾರಕ್ಕಾಗಿಯೂ ಅವ ತರಿಸುತ್ತಾರೆ. ಈ ಕಾರಣದಿಂದಾಗಿ ನರ-ನಾರಾಯಣರಿಗೆ ಅರ್ಥಾತ್ ಕೃಷ್ಣಾರ್ಜುನರಿಗೆ ಯುದ್ಧಮಾಡುವುದೇ ಮುಖ್ಯಕರ್ತವ್ಯವಾಗಿರುತ್ತದೆಂದು ವೃಷ್ಣಿವಂಶದ ರಾಜಪುತ್ರರ ಸಮ್ಮುಖದಲ್ಲಿ ದೇವರ್ಷಿಗಳಾದ ನಾರದರೇ ಹೇಳಿದ್ದಾರೆ. ಸನಾತನರಾದ, ಮಹಾತ್ಮರಾದ ಕೃಷ್ಣಾರ್ಜುನರಿಬ್ಬರೂ ಒಂದೇ ರಥದಲ್ಲಿ ಕುಳಿತಿರುವಾಗ ಶಂಖ-ಚಕ್ರ-ಗದಾಹಸ್ತನಾದ ಶ್ರೀಕೇಶವ

ನನ್ನೂ, ನಾನಾವಿಧವಾದ ಅಸ್ತ್ರಗಳನ್ನು ಬತ್ತಳಿಕೆಯಿಂದ ಹೊರಸೆಳೆದು ನಾನಾಪ್ರಕಾರವಾಗಿ ಬಿಡುವ ಮತ್ತು ಭಯಂಕರವಾದ ಗಾಂಡೀವ ಧನುಸ್ಸನ್ನು ಧರಿಸಿರುವ ಅರ್ಜುನನನ್ನೂ ನೀನು ಯಾವಾಗ ಸಮರಾಂಗಣ ದಲ್ಲಿ ಕಾಣುವೆಯೋ ಆಗ ನಾನೀಗ ಹೇಳಿದ ಮಾತುಗಳನ್ನು ಜ್ಞಾಪಿಸಿ ಕೊಳ್ಳುವೆ.

ನೀನೇನಾದರೂ ನನ್ನ ಮಾತನ್ನು ಕೇಳದಿದ್ದರೆ, ನನ್ನ ಮಾತಿನಂತೆ ನಡೆಯದಿದ್ದರೆ–ಖಂಡಿತವಾಗಿಯೂ ಹೇಳುತ್ತೇನೆ; ಕೌರವರ ವಿನಾಶಕಾಲವು ಉಪಸ್ಥಿತವಾಗಿದೆ ಮತ್ತು ಕುರುಗಳೊಬ್ಬರೂ ಉಳಿಯುವುದಿಲ್ಲ. ನಿನ್ನ ಬುದ್ಧಿಯು ಅರ್ಥ ಮತ್ತು ಧರ್ಮಗಳಿಂದ ಭ್ರಷ್ಟವಾಗಿ ಹೋಗಿದೆ. ನೀನಿಂದು ಅರ್ಥಚಿಂತನೆಯನ್ನಾಗಲೀ ಧರ್ಮಚಿಂತನೆಯನ್ನಾಗಲೀ ಮಾಡುತ್ತಿಲ್ಲ. ನನ್ನ ಮಾತನ್ನು ನೀನೇನಾದರೂ ಗ್ರಹಿಸದಿದ್ದರೆ, ನನ್ನ ಮಾತಿನಂತೆ ನಡೆಯ ದಿದ್ದರೆ–'ನಮ್ಮ ಪಕ್ಷದಲ್ಲಿ ಬಹು ಮಂದಿ ಹತರಾಗಿಹೋದರು'–ಎಂಬ ವಾರ್ತೆಯನ್ನು ಕೇಳಲಿರುವೆ. ಇದಕ್ಕೆ ಕಾರಣವೇನೆಂದರೆ : ನಿನ್ನ ಅಭಿಪ್ರಾಯ ದಂತೆಯೇ ಈ ಎಲ್ಲ ಕುರುಭೂಪರೂ ನಡೆದುಕೊಳ್ಳುತ್ತಾರೆ. ನಾನೆಷ್ಟೇ ನಿನಗೆ ಒಳ್ಳೆಯ ಸಲಹೆಗಳನ್ನು ನೀಡಿದರೂ ನೀನವುಗಳನ್ನು ಕೇಳುವುದಿಲ್ಲವೆಂಬುದೂ ನನಗೆ ತಿಳಿದಿದೆ.

**ತ್ರಯಾಣಾಮೇವ ಚ ಮತಂ ತತ್ತ್ವಮೇಕೋಽನುಮನ್ಯಸೇ ।**
**ರಾಮೇಣ ಚೈವ ಶಪ್ತಸ್ಯ ಕರ್ಣಸ್ಯ ಭರತರ್ಷಭ ॥೨೭॥**
**ದುರ್ಜಾತೇಃ ಸೂತಪುತ್ರಸ್ಯ ಶಕುನೇಃ ಸೌಬಲಸ್ಯ ಚ ।**
**ತಥಾ ಕ್ಷುದ್ರಸ್ಯ ಪಾಪಸ್ಯ ಭ್ರಾತುರ್ದುಃಶಾಸನಸ್ಯ ಚ ॥೨೮॥**

ಮೂರು ಮಂದಿಯ ಸಲಹೆಗಳನ್ನು ಮಾತ್ರವೇ ನೀನು ಕೇಳಿ ಅದರಂತೆ ನಡೆದುಕೊಳ್ಳುವೆ. ಇದರಲ್ಲಿ ಮೊದಲಿಗನು: ಭಗವಾನ್ ಪರಶು ರಾಮನಿಂದ ಶಪ್ತನಾದ, ದುರ್ಜಾತಿಯಲ್ಲಿ ಹುಟ್ಟಿದ, ಸೂತಪುತ್ರನಾದ ಕರ್ಣ. ಎರಡನೆಯವನು: ಸುಬಲನ ಮಗನಾದ ಶಕುನಿ. ಮೂರನೆಯ ವನು: ಕ್ಷುದ್ರನೂ ಪಾಪಿಷ್ಠನೂ ಆಗಿರುವ ನಿನ್ನ ತಮ್ಮ ದುಃಶಾಸನ. ಈ ಮೂವರ ಸಲಹೆಗಳನ್ನೂ ಪಡೆದುಕೊಳ್ಳುವುದಲ್ಲದೇ, ಆ ಸಲಹೆಗಳ ವಿಷಯ ವಾಗಿ ಮತ್ತೊಬ್ಬರೊಡನೆ ಸಮಾಲೋಚಿಸುವುದೂ ಇಲ್ಲ. ಮಾಡಬೇಕಾದ

ಕಾರ್ಯದ ನಿರ್ಧಾರವನ್ನು ನೀನೊಬ್ಬನೇ ತೆಗೆದುಕೊಳ್ಳುವೆ. (ನಿನ್ನ ಸ್ವಭಾವವೇ ಹೀಗಿರುವುದರಿಂದ ನನ್ನ ಮಾತಿನಿಂದಲೂ ಹೆಚ್ಚು ಪ್ರಯೋಜನ ವಾಗುವುದೆಂದು ನಾನು ಭಾವಿಸುವುದಿಲ್ಲ.)"

ಈ ರೀತಿಯಲ್ಲಿ ಭೀಷ್ಮನು ಕರ್ಣನನ್ನು ದುರ್ಜಾತಿಯವನು ಸೂತಪುತ್ರ–ಮುಂತಾಗಿ ಹೀಯಾಳಿಸಿದ್ದರಿಂದ ನೊಂದ ಕರ್ಣನು ಭೀಷ್ಮನನ್ನು ಕುರಿತು ಹೇಳಿದನು :

"ಪಿತಾಮಹ! ವೃದ್ಧರಾದ ನೀವು ನನ್ನ ವಿಷಯದಲ್ಲಿ ಇಂತಹ ಅವಾಚ್ಯವಾದ ಮಾತುಗಳನ್ನಾಡಬಾರದು. ನಾನು ಕ್ಷಾತ್ರಧರ್ಮದಲ್ಲಿದ್ದೇನೆ ಮತ್ತು ನನ್ನ ಧರ್ಮದಿಂದ ನಾನು ಯಾವಾಗಲೂ ಚ್ಯುತನಾಗಿರುವುದಿಲ್ಲ. ನನ್ನನ್ನು ಅವಹೇಳನಮಾಡುವಂತಹ ಯಾವ ದುರ್ವ್ಯಾಪಾರವು ನನ್ನಲ್ಲಿದೆ? ಸ್ಪಷ್ಟವಾಗಿ ಹೇಳಿರಿ. ನನ್ನಲ್ಲಿ ಯಾವ ದೋಷವೂ ಇಲ್ಲ. ಧೃತರಾಷ್ಟ್ರನ ಮಕ್ಕಳಲ್ಲಿ ಯಾರೂ ನನ್ನಲ್ಲಿ ಯಾವ ದೋಷವನ್ನೂ ಎಣಿಸಿಲ್ಲ. ದುರ್ಯೋಧನನ ವಿಷಯದಲ್ಲಿ ನಾನು ಯಾವ ವಿಧವಾದ ಅಪರಾಧವನ್ನೂ ಮಾಡಿರುವುದಿಲ್ಲ. (ಅವನ ಹಿತಚಿಂತನೆಯಲ್ಲಿಯೇ ಸದಾ ನಿರತನಾಗಿರುತ್ತೇನೆ.) ಯುದ್ಧದಲ್ಲಿ ನನ್ನೆದುರಾಗಿ ನಿಂತು ಯುದ್ಧಮಾಡುವ ಎಲ್ಲ ಪಾಂಡವರನ್ನೂ ನಾನು ಸಂಹಾರಮಾಡುತ್ತೇನೆ.

**ಪ್ರಾಗ್ವಿರುದ್ಧೈಃ ಶಮಂ ಸದ್ಭಿಃ ಕಥಂ ವಾ ಕ್ರಿಯತೇ ಪುನಃ ॥೩೧॥**

ಹಿಂದೆ ವಿರೋಧಿಗಳಾಗಿದ್ದವರೊಡನೆ ಶಾಂತಿಸಂಧಾನವು ಸತ್ಪುರುಷರಿಗೆ ಹೇಗೆ ಸಾಧ್ಯವಾಗುತ್ತದೆ? (ಸತ್ಪುರುಷರೆಂದಿಗೂ ವಿರೋಧಿಗಳೊಡನೆ ಸಂಧಾನ ಮಾಡಿಕೊಳ್ಳಲು ಇಚ್ಛಿಸುವುದಿಲ್ಲ.)

ರಾಜನಾದ ಧೃತರಾಷ್ಟ್ರನಿಗೆ ಪ್ರಿಯಕರವಾದ ಎಲ್ಲ ಕಾರ್ಯಗಳನ್ನೂ ನಾನು ಮಾಡಲಿಚ್ಛಿಸುತ್ತೇನೆ. ಅಂತೆಯೇ ರಾಜ್ಯಕ್ಕಿಂದು ಒಡೆಯನಾಗಿರುವ ದುರ್ಯೋಧನನಿಗೆ ಪ್ರಿಯವಾದ ಕಾರ್ಯವನ್ನು ಮಾಡಿಕೊಡಲೂ ನಾನು ಉತ್ಸುಕನಾಗಿದ್ದೇನೆ. (ಈ ವಿಧವಾದ ನನ್ನ ಸ್ವಭಾವದಲ್ಲಿ ದೋಷವೇನಿದೆ?)"

ಜನಮೇಜಯ! ಕರ್ಣನ ಮಾತುಗಳನ್ನು ಕೇಳಿದನಂತರ ಪುನಃ ಭೀಷ್ಮನು ಧೃತರಾಷ್ಟ್ರನನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಮಹಾರಾಜ! 'ನಾನು ಪಾಂಡವರನ್ನು ಸಂಹರಿಸಿಬಿಡುತ್ತೇನೆ' ಎಂಬುದಾಗಿ ಈ ಕರ್ಣನು ಪದೇ ಪದೇ ಬಡಾಯಿಕೊಚ್ಚಿಕೊಳ್ಳುತ್ತಿರುವ ನಲ್ಲವೇ? ಇದು ಕೇವಲ ವ್ಯರ್ಥಾಲಾಪವೇ ಸರಿ. ನನ್ನ ಅಭಿಪ್ರಾಯದಂತೆ ಈ ಕರ್ಣನು ಮಹಾತ್ಮರಾದ ಪಾಂಡವರಿಗಿರುವ ಷೋಡಶಕಲೆಗಳಲ್ಲಿ ಒಂದು ಕಲೆಗೂ ಸಹ ಸಮಾನನಲ್ಲ. ದುರಾತ್ಮರಾದ ನಿನ್ನ ಮಕ್ಕಳು ಪಾಂಡವರಿಗೆ ಮಾಡಿದ ಅನ್ಯಾಯದಿಂದ ಮುಂದೆ ಯಾವ ವಿಪತ್ತು ಬರಲಿದೆಯೋ ಆ ವಿಪತ್ತಿಗೆ ಮುಖ್ಯಕಾರಣನು ದುರ್ಮತಿಯಾದ ಈ ಸೂತಪುತ್ರನೇ–ಎಂಬುದನ್ನು ಮನಗಾಣುವವನಾಗು. ಈ ಸೂತಪುತ್ರನನ್ನೇ ಸಂಪೂರ್ಣವಾಗಿ ಅವಲಂಬಿಸಿರುವ ಮಂದಬುದ್ಧಿಯವನಾದ ನಿನ್ನ ಮಗ ದುರ್ಯೋಧನನು ಈ ನೀಚನ ಸಲಹೆಯಂತೆ ಶತ್ರುಗಳ ವಿಧ್ವಂಸಕರಾದ, ದೇವತೆಗಳ ಮಕ್ಕಳಾದ, ಮಹಾವೀರರಾದ ಪಾಂಡವರನ್ನು ನಾನಾವಿಧವಾಗಿ ಅಪಮಾನಗೊಳಿಸಿದನು. ನಿನಗೆ ತಿಳಿದಿರುವಂತೆ ಪಾಂಡವರು ದುಷ್ಕರವಾದ ಅನೇಕಕಾರ್ಯಗಳನ್ನು ಮಾಡಿರುತ್ತಾರೆ. ಅವರೈವರಲ್ಲಿ ಒಬ್ಬೊಬ್ಬರೂ ಸಮಯಗಳಲ್ಲಿ ಅನ್ಯಾದೃಶವಾದ ಪರಾಕ್ರಮವನ್ನೇ ತೋರಿದ್ದಾರೆ. ಅಸಾಧ್ಯ ವೆನಿಸಿದ ಕಾರ್ಯಗಳನ್ನೂ ಸಾಧಿಸಿದ್ದಾರೆ. ಆದರೆ ಈ ಸೂತಪುತ್ರನು ದುಷ್ಕರವಾದ ಯಾವ ಕಾರ್ಯವನ್ನು ತಾನೇ ಮಾಡಿ ತೋರಿಸಿದ್ದಾನೆ?

**ದೃಷ್ಟ್ವಾ ವಿರಾಟನಗರೇ ಭ್ರಾತರಂ ನಿಹತಂ ಪ್ರಿಯಮ್ ।**
**ಧನಂಜಯೇನ ವಿಕ್ರಮ್ಯ ಕಿಮನೇನ ತದಾ ಕೃತಮ್ ॥೩೮॥**

ಗೋಗ್ರಹಣಕ್ಕಾಗಿ ವಿರಾಟರಾಜಧಾನಿಗೆ ಹೋಗಿದ್ದಾಗ–ಧನಂಜಯನು ತನ್ನ ಅತುಲವಾದ ಪರಾಕ್ರಮವನ್ನು ತೋರುತ್ತಾ ಈ ಸೂತಪುತ್ರನ ಬಹುಪ್ರಿಯನಾದ ತಮ್ಮನನ್ನು ಇವನ ಸಮ್ಮುಖದಲ್ಲಿಯೇ ಸಂಹರಿಸಿದನು. ಆ ಸಮಯದಲ್ಲಿವನು ಅರ್ಜುನನಿಗೆ ಮಾಡಿದ ಪ್ರತೀಕಾರವೇನು?

**ಸಹಿತಾನ್ಹಿ ಕುರೂನ್ಸರ್ವಾನಭಿಯಾತೋ ಧನಂಜಯಃ ।**
**ಪ್ರಮಥ್ಯ ಚಾಚ್ಛಿನದ್ವಾಸಃ ಕಿಮಯಂ ಪ್ರೋಷಿತಸ್ತದಾ ॥೩೯॥**

ಏಕಾಕಿಯಾದ ಧನಂಜಯನು ಅಖಂಡವಾದ ಕುರುಸೇನೆಯನ್ನೂ ಎದುರಿಸಿದನು. ಕುರುಸೇನೆಯನ್ನು ಸದೆಬಡಿದು ಸಮ್ಮೋಹನಾಸ್ತ್ರದಿಂದ

ಎಲ್ಲರನ್ನೂ ಮೂರ್ಛಿತರಾಗುವಂತೆ ಮಾಡಿ ನಮ್ಮ ಮೇಲಿದ್ದ ವಸ್ತ್ರಗಳನ್ನೂ ಕತ್ತರಿಸಿ ತೆಗೆಸಿಕೊಂಡು ಹೊರಟುಹೋದನು. ಆಗ ಈ ಕರ್ಣನು ಪರದೇಶಕ್ಕೆ ಹೋಗಿದ್ದನೇನು? ಅಲ್ಲಿಯೇ ಇದ್ದು ನಿಷ್ಕ್ರಿಯನಾಗಿರಲಿಲ್ಲವೇ?

**ಗನ್ಧರ್ವೈರ್ಘೋಷಯಾತ್ರಾಯಾಂ ಹ್ರಿಯತೇ ಯತ್ಸುತಸ್ತವ ।**
**ಕ್ವ ತದಾ ಸೂತಪುತ್ರೋಽಭೂದ್ಯ ಇದಾನೀಂ ವೃಷಾಯತೇ ॥೪೦॥**

ಪಾಂಡವರನ್ನು ಅವಹೇಳನಮಾಡುವ ಸಲುವಾಗಿಯೇ ಘೋಷ ಯಾತ್ರೆಯ ವ್ಯಾಜದಿಂದ ಅರಣ್ಯಕ್ಕೆ ಹೋದಾಗ–ಈ ನಿನ್ನ ಮಗನನ್ನು ಗಂಧರ್ವರು ಸೆರೆಹಿಡಿದುಕೊಂಡು ಹೋದರು. ಈಗ ಮಾತ್ರ ಮದಹತ್ತಿದ ಹೋರಿಯಂತೆ ವಿವೇಚನೆಯಿಲ್ಲದೆ ಜಂಬಕೊಚ್ಚಿಕೊಳ್ಳುತ್ತಿರುವ ಈ ಕರ್ಣನು ಆಗೆಲ್ಲಿ ಹೋಗಿದ್ದನು?

**ನನು ತತ್ರಾಪಿ ಭೀಮೇನ ಪಾರ್ಥೇನ ಚ ಮಹಾತ್ಮನಾ ।**
**ಯಮಾಭ್ಯಾಮೇವ ಸಂಗಮ್ಯ ಗನ್ಧರ್ವಾಸ್ತೇ ಪರಾಜಿತಾಃ ॥೪೧॥**

ಗಂಧರ್ವರು ನಿನ್ನ ಮಗನನ್ನು ಸೆರೆಹಿಡಿದಾಗಲೂ ಮಹಾತ್ಮರಾದ ಪಾಂಡವರೇ ಹೋಗಿ ಬಂಧವಿಮೋಚನೆಯನ್ನು ಮಾಡಬೇಕಾಯಿತು. ಭೀಮಸೇನ, ಮಹಾತ್ಮನಾದ ಪಾರ್ಥ ಮತ್ತು ನಕುಲ-ಸಹದೇವರು ಒಟ್ಟಾಗಿ ಹೋಗಿ ಗಂಧರ್ವರನ್ನೆದುರಿಸಿ ಯುದ್ಧಮಾಡಿ ಅವರನ್ನು ಪರಾಜಯಗೊಳಿಸಿದರು. ಮಹಾರಾಜ! ನಿನಗೆ ಮಂಗಳವಾಗಲಿ. ಧರ್ಮ ಮತ್ತು ಅರ್ಥ–ಇವೆರಡನ್ನೂ ಕಡೆಗಾಣಿಸಿರುವ, ಎಲ್ಲ ಕಾಲಗಳಲ್ಲಿಯೂ ಆತ್ಮಪ್ರಶಂಸೆಮಾಡಿಕೊಳ್ಳುವ ಈ ಕರ್ಣನ ಪೊಳ್ಳುಮಾತುಗಳು ಅನೇಕವಾಗಿವೆ. ಕೆಲವನ್ನು ಮಾತ್ರವೇ ಇಲ್ಲಿ ನಿರ್ದೇಶಿಸಿದ್ದೇನೆ. (ಇವನು ಯಾವಾಗಲೂ ಮಾತುಗಾರನೇ ಹೊರತು ಕಾರ್ಯಸಾಧಕನಲ್ಲ.)"

ಜನಮೇಜಯ! ಭೀಷ್ಮನು ಹೇಳಿದ ಮಾತುಗಳನ್ನು ಕೇಳಿ ವಿಶಾಲ ಹೃದಯರಾದ ಆಚಾರ್ಯದ್ರೋಣರು ರಾಜರ ಮಧ್ಯದಲ್ಲಿ ಕುಳಿತಿದ್ದ ಧೃತರಾಷ್ಟ್ರನನ್ನು ಯಥೋಚಿತವಾಗಿ ಅಭಿನಂದಿಸಿ ಈ ಮಾತುಗಳನ್ನು ಹೇಳಿದರು :

"ಧೃತರಾಷ್ಟ್ರ! ಭರತಕುಲಾವತಂಸನಾದ ಭೀಷ್ಮನು ಏನು ಹೇಳಿರು

ವನೋ ಅದರಂತೆಯೇ ನೀನು ಮಾಡುವುದು ಯೋಗ್ಯವಾಗಿದೆ. ಧರ್ಮವನ್ನು ಬಿಟ್ಟು ಕಾಮ ಮತ್ತು ಅರ್ಥಗಳಲ್ಲಿ ಮಾತ್ರವೇ ಆಸ್ತಕರಾಗಿರುವವರ (ತಮಗೆ ತೋರಿದಂತೆ ಅರ್ಥವನ್ನು ಪಡೆಯಲು ಇಚ್ಛಿಸುವವರ) ಮಾತಿನಂತೆ ನೀನು ಖಂಡಿತವಾಗಿಯೂ ನಡೆದುಕೊಳ್ಳಬೇಡ. ಯುದ್ಧಕ್ಕೆ ಮೊದಲು ಅಥವಾ ಯುದ್ಧಕ್ಕೆ ಬದಲಾಗಿ ಪಾಂಡವರೊಡನೆ ಸಂಧಿಮಾಡಿಕೊಳ್ಳುವುದು ಸಾಧು ವಾಗಿದೆ. ಅರ್ಜುನನಿಂದ ಯಾವ ಮಾತುಗಳು ಹೇಳಲ್ಪಟ್ಟಿವೆಯೋ ಮತ್ತು ಸಂಜಯನಿಂದ ಅರ್ಜುನನ ಯಾವ ಮಾತುಗಳು ನಿನಗೆ ನಿವೇದಿಸಲ್ಪಟ್ಟಿವೆಯೋ ಆ ಮಾತುಗಳೆಲ್ಲವನ್ನೂ ನಾನೂ ಕೇಳಿರುತ್ತೇನೆ. ಯುದ್ಧಕ್ಕೆ ಬದಲಾಗಿ ಸಂಧಿಯಾಗದಿದ್ದರೆ ಅರ್ಜುನನು ಹೇಳಿಕಳುಹಿಸಿರುವಂತೆಯೇ ಮಾಡುವನು. ಮೂರು ಲೋಕಗಳಲ್ಲಿಯೂ ಅರ್ಜುನನಿಗೆ ಸಮಾನರಾದ ಧನುರ್ಧಾರಿಗಳು ಮತ್ತಾರೂ ಇರುವುದಿಲ್ಲ."

ಜನಮೇಜಯ! ಅರ್ಥವತ್ತಾದ ಮತ್ತು ಸಾರಗರ್ಭಿತವಾದ ಭೀಷ್ಮ-ದ್ರೋಣರ ಹಿತೋಕ್ತಿಗಳನ್ನೂ ಧೃತರಾಷ್ಟ್ರನು ಅನಾದರಣೆಮಾಡಿ ಪಾಂಡವರ ವಿಷಯವಾಗಿ ಸಂಜಯನನ್ನು ಪುನಃ ಪ್ರಶ್ನಿಸತೊಡಗಿದನು.

ಭೀಷ್ಮ-ದ್ರೋಣರು ಧೃತರಾಷ್ಟ್ರನಿಗೆ ಹಿತೋಕ್ತಿಗಳನ್ನು ಹೇಳಿದರೂ ರಾಜನು ಯಾವಾಗ ಅವರ ಮಾತಿಗೆ ಉತ್ತರವಾಗಿ ಏನೊಂದನ್ನೂ ಹೇಳ ಲಿಲ್ಲವೋ, ಅವರೊಡನೆ ಮಾತನಾಡುವುದನ್ನೇ ನಿಲ್ಲಿಸಿಬಿಟ್ಟನೋ–ಆಗಲೇ ಅಲ್ಲಿ ನೆರೆದಿದ್ದ ಕೌರವರೆಲ್ಲರೂ ತಮ್ಮ ಜೀವನದ ವಿಷಯದಲ್ಲಿ ನಿರಾಶೆಯನ್ನು ಹೊಂದಿದರು."

೪೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಸಂಜಯನು ಯುಧಿಷ್ಠಿರನ ಪ್ರಧಾನಸಹಾಯಕರನ್ನು ವರ್ಣಿಸಿದುದು

ಮಹಾರಾಜ! ಧೃತರಾಷ್ಟ್ರನು ಸಂಜಯನನ್ನು ಪುನಃ ಪ್ರಶ್ನಿಸಿದನು :

"ಸಂಜಯ! ನಮಗೆ ಪ್ರಿಯವನ್ನುಂಟುಮಾಡುವ ಸಲುವಾಗಿ

ಅಪಾರವಾದ ಸೇನೆಯು ಹಾಸ್ತಿನಪುರಕ್ಕಾಗಮಿಸಿರುವುದನ್ನು ನಿನ್ನಿಂದ ಕೇಳಿದನಂತರ ಪಾಂಡುಪುತ್ರನಾದ ಧರ್ಮಪುತ್ರನು ಏನೆಂದು ಹೇಳಿದನು?

ನಮ್ಮೊಡನೆ ಯುದ್ಧಮಾಡಲಿಚ್ಛಿಸಿರುವ ಯುಧಿಷ್ಠಿರನು ಯಾವ ಯಾವ ರೀತಿಯಲ್ಲಿ ಯುದ್ಧದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾನೆ? ಅವನ ತಮ್ಮಂದಿರಲ್ಲಿ ಮತ್ತು ಮಕ್ಕಳಲ್ಲಿ ಯಾರು ಉತ್ಸಾಹಿಗಳಾಗಿ ಅವನ ಆಜ್ಞೆಯನ್ನೇ ನಿರೀಕ್ಷಿಸುತ್ತಾ ಅವನ ಮುಖವನ್ನು ಎವೆಯಿಕ್ಕದೇ ನೋಡುತ್ತಿದ್ದಾರೆ? ಯುಧಿಷ್ಠಿರನು ಧರ್ಮಜ್ಞನು ಮಾತ್ರವಲ್ಲದೇ–ಧರ್ಮಾಚರಣೆಯುಳ್ಳವನೂ ಆಗಿರುತ್ತಾನೆ. ಅಂತಹ ಧರ್ಮಜ್ಞನು ಮಂದಬುದ್ಧಿಯವರಾದ ನನ್ನ ಮಕ್ಕಳಿಂದ ವಂಚಿತನಾಗಿ ಕೋಪಗೊಂಡಿರುತ್ತಾನೆ. ನನ್ನ ಮಕ್ಕಳು ಮಾಡಿದ ವಂಚನೆಯಿಂದ ಕುಪಿತನಾಗಿ ನಮ್ಮೊಡನೆ ಯುದ್ಧಮಾಡಲೂ ಸಿದ್ಧನಾಗಿರುವ ಯುಧಿಷ್ಠಿರನಿಗೆ ಅವನ ಪಕ್ಷದಲ್ಲಿ ಯಾರು-ಯಾರು– 'ಯುದ್ಧದಿಂದ ವಿರಮಿಸು. ಯುದ್ಧದಿಂದ ಸರ್ವನಾಶವಾಗುತ್ತದೆ'–ಎಂಬ ಸಲಹೆಗಳನ್ನು ನೀಡುತ್ತಿದ್ದಾರೆ?"

ಧೃತರಾಷ್ಟ್ರನ ಪ್ರಶ್ನೆಗಳಿಗೆ ಸಂಜಯನು ಯಥಾವತ್ತಾಗಿ ಉತ್ತರಿಸಿದನು :

"ಮಹಾರಾಜ! ಅವನ ತಮ್ಮಂದಿರಲ್ಲಿ ಅಥವಾ ಮಕ್ಕಳಲ್ಲಿ ಕೆಲವರು ಮಾತ್ರವೇ ಅವನ ಆಜ್ಞೆಯನ್ನು ನಿರೀಕ್ಷಿಸುತ್ತಾರೆಂದು ಭಾವಿಸಿದರೆ ತಪ್ಪಾಗುತ್ತದೆ.

ಮಕ್ಕಳು ಮತ್ತು ತಮ್ಮಂದಿರು ಮಾತ್ರವೇ ಅಲ್ಲ.; ಪಾಂಡವರೊಡನಿರುವ ಸಕಲಪಾಂಚಾಲರೂ ಯುಧಿಷ್ಠಿರನ ಆಜ್ಞೆಗಾಗಿ ಅವನ ಮುಖವನ್ನು ದಿಟ್ಟಿಸಿ ನೋಡುತ್ತಲೇ ಇದ್ದಾರೆ. ನಿನಗೆ ಮಂಗಳವಾಗಲಿ, ಮಹಾರಾಜ! ಯುಧಿಷ್ಠಿರನು ತನ್ನ ಪಕ್ಷದಲ್ಲಿರುವವರೆಲ್ಲರಿಗೂ ಶಾಸಕನಾಗಿರುತ್ತಾನೆ. ಪ್ರತ್ಯೇಕ-ಪ್ರತ್ಯೇಕವಾಗಿ ಸಮವಸ್ತ್ರಗಳನ್ನು ಧರಿಸಿ, ಸಮಸ್ಥಿತಿಯಲ್ಲಿ ನಿಂತಿರುವ ಪಾಂಡವರ ಮತ್ತು ಪಾಂಚಾಲರ ರಥಗಳಲ್ಲಿರುವ ರಥಿಕರು ತಮ್ಮ ಸಮೀಪಕ್ಕೆ ಬರುತ್ತಿರುವ ಕುಂತೀಪುತ್ರನಾದ ಯುಧಿಷ್ಠಿರನನ್ನು ಅಭಿ

ನಂದಿಸುತ್ತಾರೆ. ಆಕಾಶವು ಉದಯಿಸುತ್ತಿರುವ ಸೂರ್ಯನನ್ನು ಅಭಿನಂದಿಸುವಂತೆ–ಪಾಂಚಾಲರು ಸೂರ್ಯನಂತೆ ತೇಜೋರಾಶಿಯಾದ ಧರ್ಮರಾಜನನ್ನು ಅಭಿನಂದಿಸುತ್ತಾರೆ. ತೇಜೋರಾಶಿಯಂತೆ ಕಾಣುವ, ಪ್ರಜ್ವಲಿಸುವ ತೇಜಸ್ಸಿನಿಂದ ಕೂಡಿದ ಯುಧಿಷ್ಠಿರನನ್ನು ಕಂಡೊಡನೆಯೇ ಪಾಂಚಾಲರು ಹಿರಿಹಿಗ್ಗುತ್ತಾರೆ. ದನಕಾಯುವವರು, ಕುರಿಕಾಯುವವರೇ ಆದಿಯಾಗಿ ಸಕಲರೂ ಯುಧಿಷ್ಠಿರನನ್ನು ಗೌರವಿಸುತ್ತಾರೆ. ಪಾಂಚಾಲರು, ಕೇಕಯರು, ಮತ್ಸ್ಯದೇಶದ ರಾಜರು–ಈ ಎಲ್ಲರೂ ಪಾಂಡುಪುತ್ರನನ್ನು ಸಮ್ಮಾನಿಸುತ್ತಾರೆ. ಬ್ರಾಹ್ಮಣಸ್ತ್ರೀಯರು, ರಾಜಪುತ್ರಿಯರು, ವೈಶ್ಯರ ಹೆಣ್ಣುಮಕ್ಕಳು–ಇವರೆಲ್ಲರೂ ಆಡುತ್ತಾಡುತ್ತಾ ನಗು-ನಗುತ್ತಾ ಯುದ್ಧಸನ್ನದ್ಧನಾಗಿರುವ ಯುಧಿಷ್ಠಿರನನ್ನು ಸಂದರ್ಶಿಸಲು ಬರುತ್ತಿರುತ್ತಾರೆ."

(ಯುದ್ಧಸನ್ನದ್ಧನಾಗಿರುವ ಯುಧಿಷ್ಠಿರನನ್ನು ನೋಡುವುದೆಂದರೆ ಅವರಿಗೊಂದು ಆನಂದ. ಯುದ್ಧಮಾಡಿ ಅಧರ್ಮಿಗಳನ್ನು ಸಂಹರಿಸಬೇಕೆಂಬುದೇ ಅವರೆಲ್ಲರ ಹೆಬ್ಬಯಕೆ. ಹೀಗಿರುವಾಗ ಯುಧಿಷ್ಠಿರನನ್ನು ಯುದ್ಧದಿಂದ ವಿಮುಖನನ್ನಾಗಿ ಮಾಡಲು ಯಾರಿದ್ದಾರೆಂದು ಹೇಳಲಿ?)"

ಸಂಜಯನ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಪುನಃ ಪ್ರಶ್ನಿಸಿದನು :

"ಧೃಷ್ಟದ್ಯುಮ್ನನ ಸೇನೆ ಮತ್ತು ಸೋಮಕರ ಸೇನೆಗಳೇ ಅಲ್ಲದೇ ಮತ್ತಾವ ಸೈನ್ಯಗಳು ನಮ್ಮೊಡನೆ ಯುದ್ಧಮಾಡಲು ಪಾಂಡವರ ಕಡೆ ಸೇರಿವೆಯೆಂಬುದನ್ನು ಹೇಳು, ಸಂಜಯ! (ಪಾಂಡವರು ಯಾರ ಬಲವನ್ನು ಆಶ್ರಯಿಸಿ ನಮ್ಮನ್ನು ಎದುರಿಸಲು ಸಿದ್ಧರಾಗಿದ್ದಾರೆಂಬುದನ್ನು ತಿಳಿಸು.)"

ಜನಮೇಜಯ! ಧೃತರಾಷ್ಟ್ರನಿಂದ ಹೀಗೆಂದು ಪ್ರಶ್ನಿಸಲ್ಪಟ್ಟ ಸಂಜಯನು, ಕುರುರಾಜಕುಮಾರರು ಉಪಸ್ಥಿತರಾಗಿದ್ದ ಆ ಮಹಾಸಭೆಯಲ್ಲಿ ಯಾವುದೋ ಒಂದು ಗಹನವಾದ ವಿಷಯವನ್ನು ಯೋಚಿಸುತ್ತಿರುವಂತೆ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದಾಗ–ವಿಶೇಷವಾದ ಯಾವ ಕಾರಣವೂ ಇಲ್ಲದೆಯೇ ಮೂರ್ಛಿತನಾಗಿ ಕೆಳಗೆ ಬಿದ್ದುಬಿಟ್ಟನು. ಸಂಜಯನು ಮೂರ್ಛಿತನಾಗಿ ಕೆಳಗೆ ಬಿದ್ದುದನ್ನು ನೋಡಿ ರಾಜಸಭೆಯಲ್ಲಿ ಕುಳಿತಿದ್ದ

ವಿದುರನು ಧೃತರಾಷ್ಟ್ರನನ್ನು ಕುರಿತು ಹೇಳಿದನು.: "ಮಹಾರಾಜ! ಸಂಜಯನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದಿದ್ದಾನೆ. ಹೀನಪ್ರಜ್ಞನೂ, ಚೈತನ್ಯರಹಿತನೂ ಆಗಿದ್ದಾನೆ. ಆದುದರಿಂದ ಇವನ ಬಾಯಿಂದ ಮಾತುಗಳೇ ಹೊರಡುತ್ತಿಲ್ಲ."

"ನಿಜ, ವಿದುರ! ಸಂಜಯನು ಮಹಾರಥರಾದ ಕುಂತೀಪುತ್ರರನ್ನು ನೋಡಿಬಂದಿದ್ದಾನೆ. ಪುರುಷವ್ಯಾಘ್ರರಾದ ಪಾಂಡವರು ಇವನ ಮನಸ್ಸನ್ನು ಉದ್ವೇಜಿಸಿಬಿಟ್ಟಿದ್ದಾರೆ. ಅಲ್ಲಿನ ಸನ್ನಿವೇಶವನ್ನು ನೆನೆದು ಈಗಿವನು ಮೂರ್ಛಿತನಾಗಿದ್ದಾನೆ."

ಜನಮೇಜಯ! ಸ್ವಲ್ಪಹೊತ್ತು ಕಳೆದನಂತರ ಸಂಜಯನಿಗೆ ಪ್ರಜ್ಞೆಯು ಬಂದಿತು. ಅಕ್ಕ-ಪಕ್ಕದವರು ಅವನನ್ನು ಆಶ್ವಸಿಸಿ ಕುಳ್ಳಿರಿಸಿದರು. ಪ್ರಜ್ಞೆಯು ಬಂದನಂತರದಲ್ಲಿ ಕೌರವರ ಸಭೆಯಲ್ಲಿದ್ದ ಧೃತರಾಷ್ಟ್ರನನ್ನು ಕುರಿತು ಸಂಜಯನು ಪುನಃ ಹೇಳತೊಡಗಿದನು :

"ರಾಜೇಂದ್ರ! ಮಹಾರಥರಾದ ಕುಂತೀಪುತ್ರರನ್ನು ಕಂಡು ಬಂದಿದ್ದೇನೆ. ಅಜ್ಞಾತವಾಸದಲ್ಲಿ ಮತ್ಸ್ಯರಾಜನಾದ ವಿರಾಟನ ಅರಮನೆಯಲ್ಲಿ ಅಜ್ಞಾತರಾಗಿದ್ದುಕೊಂಡು ಪಡಬಾರದ ಕಷ್ಟಗಳನ್ನು ಅನುಭವಿಸಿ ಹೊರಗೆ ಬಂದಿರುವ ವೀರರಾದ ಪಾಂಡುಪುತ್ರರನ್ನು ನೋಡಿ ಬಂದಿದ್ದೇನೆ. ಮಹಾರಾಜ! ಪಾಂಡವರು ಯಾರ-ಯಾರ ಸಹಾಯವನ್ನು ಪಡೆದುಕೊಂಡು ನಿನ್ನೊಡನೆ ಯುದ್ಧಕ್ಕೆ ಸನ್ನದ್ಧರಾಗಿರುವರೆಂಬುದನ್ನು ಸವಿಸ್ತರವಾಗಿ ಹೇಳುತ್ತೇನೆ.; ಕೇಳು.

ವೀರನಾದ ಧೃಷ್ಟದ್ಯುಮ್ನನ ಸಹಯೋಗವನ್ನು ಪಾಂಡವರು ಪಡೆದಿರುತ್ತಾರೆ. ಅವನು ಸೈನ್ಯಸಮೇತನಾಗಿ ಪಾಂಡವರ ಕಡೆ ನಿಂತು ನಿಮ್ಮೊಡನೆ ಯುದ್ಧಮಾಡಲು ಸಜ್ಜಾಗಿ ನಿಂತಿದ್ದಾನೆ. ಯಾವನು ಕೋಪದಿಂದಾಗಲೀ, ಭಯ-ಲೋಭಗಳಿಂದಾಗಲೀ, ಅರ್ಥದ ಕಾರಣದಿಂದಾಗಲೀ, ತರ್ಕಬದ್ಧವಾದ ಕಾರಣಗಳಿಂದಾಗಲೀ, ಯಾವ ಸಮಯದಲ್ಲಿಯೂ (ಎಂತಹ ದಾರುಣಮಯವಾದ ಸನ್ನಿವೇಶದಲ್ಲಿಯೂ) ಸತ್ಯನಿಷ್ಠೆಯನ್ನು ಬಿಡುವುದಿಲ್ಲವೋ, ಯಾವನು ಧರ್ಮದ ವಿಷಯದಲ್ಲಿ ಪ್ರಮಾಣಭೂತನಾಗಿರು

ವನೋ, ಧರ್ಮಾತ್ಮರಲ್ಲಿ ಶ್ರೇಷ್ಠನೆನಿಸಿರುವನೋ–ಅಂತಹ ಅಜಾತಶತ್ರುವಿನ ಪ್ರಭಾವದಿಂದ ಪಾಂಡವರು ಯುದ್ಧಮಾಡಲು ಸಿದ್ಧರಾಗುತ್ತಿದ್ದಾರೆ.

ಯಾವನ ಬಾಹುಬಲಕ್ಕೆ ಸಮಾನವಾದ ಬಾಹುಬಲವುಳ್ಳ ಬೇರೊಬ್ಬನು ಈ ಪ್ರಪಂಚದಲ್ಲಿಯೇ ಇಲ್ಲವೋ, ಯಾವನು ಧನುಸ್ಸನ್ನು ಧರಿಸಿ ಕಾಶಿ, ಅಂಗ, ಮಗಧ ಮತ್ತು ಕಲಿಂಗ–ಇವೇ ಮೊದಲಾದ ದೇಶಗಳ ವೀರರಾಜರನ್ನು ಯುದ್ಧದಲ್ಲಿ ಪರಾಜಯಗೊಳಿಸಿ ಅವರ ರಾಜ್ಯಗಳನ್ನು ತನ್ನ ವಶಪಡಿಸಿ ಕೊಂಡನೋ– ಅಂತಹ ಭೀಮಸೇನನ ಪ್ರಭಾವದಿಂದ ಪಾಂಡವರು ಯುದ್ಧಕ್ಕೆ ಸಿದ್ಧರಾಗುತ್ತಿದ್ದಾರೆ. ಯಾವನ ಪರಾಕ್ರಮದಿಂದ ಉಳಿದ ನಾಲ್ವರು ಪಾಂಡವರೂ ಅರಗಿನ ಮನೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಯಿತೋ, ಯಾವನ ಪರಾಕ್ರಮದಿಂದಾಗಿ ನರಮಾಂಸಭಕ್ಷಕನಾದ ಹಿಡಿಂಬನಿಂದ ತಪ್ಪಿಸಿಕೊಳ್ಳಲು ಪಾಂಡವರಿಗೆ ಸಾಧ್ಯವಾಯಿತೋ (ನರಮಾಂಸ ಭಕ್ಷಕನಾದ ಹಿಡಿಂಬನನ್ನು ಯಾವನು ಸಂಹರಿಸಿದನೋ) ಮತ್ತು ಯಾವನು ಅನೇಕಸಂಕಷ್ಟಸಮಯಗಳಲ್ಲಿ ತನ್ನ ಸಹೋದರರಿಗೆ ಆಶ್ರಯ ವನ್ನಿತ್ತನೋ–ಅಂತಹ ಕುಂತೀಪುತ್ರನಾದ ವೃಕೋದರನ ಪ್ರಭಾವದಿಂದ ಪಾಂಡವರು ಯುದ್ಧಸನ್ನದ್ಧರಾಗುತ್ತಿದ್ದಾರೆ. ದ್ರೌಪದಿಯನ್ನು ಸಿಂಧು ರಾಜನಾದ ಜಯದ್ರಥನು ಅಪಹರಿಸಿದ ಕಾಲದಲ್ಲಿ ಯಾವನು ತನ್ನ ಸಹೋದರರಿಗೂ ಮತ್ತು ದ್ರೌಪದಿಗೂ ದ್ವೀಪಪ್ರಾಯನಾದನೋ, (ದ್ರೌಪದಿಯನ್ನು ಬಿಡಿಸಿಕೊಂಡು ಬಂದನೋ), ನಾನು ಈ ಮೊದಲೇ ಹೇಳಿದಂತೆ ವಾರಣಾವತದ ಅರಗಿನ ಮನೆಯಲ್ಲಿ ತಾಯಿಯೊಡನೆ ಐವರು ಪಾಂಡವರೂ ಸುಟ್ಟುಹೋಗುವುದರಲ್ಲಿದ್ದಾಗ ಮಹಾವೀರ ನಾದ ಯಾವನು ತನ್ನ ಸಹೋದರರನ್ನೂ, ತಾಯಿಯನ್ನೂ ಸಂರಕ್ಷಿಸಿ ದನೋ–ಅಂತಹ ಭೀಮಸೇನನ ಬಲದಿಂದ ನಿರ್ಮೊತನೆ ಯುದ್ಧಮಾಡಲು ಪಾಂಡವರು ಅನುವಾಗುತ್ತಿದ್ದಾರೆ. ಕೃಷ್ಣೆಗೆ ಪ್ರಿಯವನ್ನುಂಟುಮಾಡಲು ಯಾವನು ಹಳ್ಳ-ತಿಟ್ಟುಗಳಿಂದಲೂ ಕಾಡು-ಮೇಡುಗಳಿಂದಲೂ ಕೂಡಿ ಬಹುದುರ್ಗಮವಾಗಿದ್ದ ಗಂಧಮಾದನಪರ್ವತವನ್ನು ಹತ್ತಿ, ಸೌಗಂಧಿಕ ಕಮಲವಿದ್ದ ಸರೋವರವನ್ನು ರಕ್ಷಿಸುತ್ತಿದ್ದ ಕ್ರೋಧವಶರೆಂಬ ರಾಕ್ಷಸ ರನ್ನು ಸಂಹಾರಮಾಡಿದನೋ, ಯಾವನ ಭುಜದಲ್ಲಿ ಹತ್ತು ಸಾವಿರ

ಆನೆಗಳ ಬಲವು ತುಂಬಿಕೊಂಡಿರುವುದೋ–ಅಂತಹ ಭೀಮಸೇನನ ಬೆಂಬಲದಿಂದ ಪಾಂಡವರು ನಿಮ್ಮೊಡನೆ ಯುದ್ಧಮಾಡುತ್ತಾರೆ.

ಶ್ರೀಕೃಷ್ಣನೊಬ್ಬನನ್ನೇ ಜೊತೆಯಲ್ಲಿ ಕರೆದುಕೊಂಡು ಅಗ್ನಿದೇವನನ್ನು ತೃಪ್ತಿಪಡಿಸಲು ಯಾವನು ಇಂದ್ರಪ್ರಮುಖರಾದ ದೇವತೆಗಳನ್ನೂ ಪರಾಜಯಗೊಳಿಸಿದನೋ–ಯಾವನು ಗಿರೀಶನಾದ, ಶೂಲಪಾಣಿಯಾದ, ದೇವದೇವನಾದ, ಉಮಾಪತಿಯಾದ ಸಾಕ್ಷಾತ್ ಮಹಾದೇವನನ್ನೇ ಯುದ್ಧದಿಂದ ಸಂತೃಪ್ತಿಗೊಳಿಸಿದನೋ ಮತ್ತು ಯಾವ ಧನುರ್ಧರನು ಎಲ್ಲ ಲೋಕಪಾಲಕರನ್ನೂ ತನ್ನ ಗುಣಾತಿಶಯಗಳಿಂದ ತನ್ನವರನ್ನಾಗಿ ಮಾಡಿಕೊಂಡನೋ–ಅಂತಹ ವಿಜಯನಾಮಕನಾದ ಅರ್ಜುನನನ್ನವಲಂಬಿಸಿ ಪಾಂಡವರು ನಿನ್ನೊಡನೆ ಯುದ್ಧಕ್ಕೆ ಸನ್ನದ್ಧರಾಗುತ್ತಿದ್ದಾರೆ.

ಯಾವನು ಸಾವಿರಾರು ಮಂದಿ ಮ್ಲೇಚ್ಛರಿಂದ ನಿಬಿಡವಾಗಿದ್ದ ಪಶ್ಚಿಮ ದಿಕ್ಕನ್ನು (ಪಶ್ಚಿಮದಿಕ್ಕಿನ ರಾಜ್ಯಗಳನ್ನು) ತನ್ನ ವಶಪಡಿಸಿಕೊಂಡನೋ, ಯಾವನು ಚಿತ್ರಯೋಧಿಯೋ, ಬಹಳ ಸುಂದರನೋ, ವೀರನೋ, ಮಹಾ ಧನುರ್ಧರನೋ–ಅಂತಹ ಮಾದ್ರೀಸುತನಾದ ನಕುಲನನ್ನು ಅವಲಂಬಿಸಿ ಪಾಂಡವರು ನಿನ್ನೊಡನೆ ಯುದ್ಧಮಾಡಲು ಸನ್ನದ್ಧರಾಗುತ್ತಿದ್ದಾರೆ.

ಯಾವನು ಕಾಶಿ, ಅಂಗ, ಮಗಧ ಮತ್ತು ಕಲಿಂಗರಾಜರನ್ನು ಪರಾಜಯಗೊಳಿಸಿ ಆ ದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನೋ–ಅಂತಹ ಸಹದೇವನ ಬಲದ ಅವಲಂಬನೆಯಿಂದ ಪಾಂಡವರು ನಿನ್ನೊಡನೆ ಯುದ್ಧ ಮಾಡಲು ಸನ್ನದ್ಧರಾಗುತ್ತಿದ್ದಾರೆ.

ಅಶ್ವತ್ಥಾಮಾ, ಧೃಷ್ಟಕೇತು, ರುಕ್ಮಿ, ಪ್ರದ್ಯುಮ್ನ–ಈ ನಾಲ್ವರು ಮಾತ್ರವೇ ಈ ಪೃಥ್ವಿಯಲ್ಲಿ ಸಹದೇವನ ಬಲಕ್ಕೆ ಸಮಾನವಾದ ಬಲವುಳ್ಳವರಾಗಿರುತ್ತಾರೆ. ಪಾಂಡವಕನಿಷ್ಠನಾದ, ಮಾದ್ರಿಯ ಆನಂದಕಂದನಾದ, ನರಶ್ರೇಷ್ಠನಾದ ಸಹದೇವನೊಡನೆ ವಿನಾಶಕಾರಕವಾದ ಯುದ್ಧ ಮಾಡಬೇಕಾಗಿದೆ.

ಪೂರ್ವಕಾಲದಲ್ಲಿ ಕಾಶಿರಾಜನ ಮಗಳಾದ, ಸಾಧ್ವಿಯಾದ ಅಂಬೆಯು ಭೀಷ್ಮನ ವಧೆಯನ್ನಿಚ್ಛಿಸಿ ಘೋರವಾದ ತಪಸ್ಸನ್ನು ಮಾಡಿದಳು. ಮರಣಾ

ನಂತರದಲ್ಲವಳು ದ್ರುಪದನ ಪುತ್ರಿಯಾಗಿ ಜನ್ಮತಾಳಿದಳು. ದೈವಯೋಗ ದಿಂದ ಅವಳು ಗಂಡಾಗಿ ಪರಿವರ್ತಿತಳಾದಳು. ಆ ಕಾರಣದಿಂದಾಗಿ ಪಾಂಚಾಲ ರಾಜಕುಮಾರನು ಸ್ತ್ರೀತ್ವ ಮತ್ತು ಪುರುಷತ್ವಗಳಲ್ಲಿರುವ ಗುಣ-ದೋಷಗಳನ್ನು ತಿಳಿದವನಾಗಿರುತ್ತಾನೆ. ಯುದ್ಧದುರ್ಮದನಾದ ಆ ಶಿಖಂಡಿಯು ಕಲಿಂಗ ದೇಶದ ರಾಜರನ್ನು ಪರಾಜಯಗೊಳಿಸಿದನು. ಕೃತಾಸ್ತ್ರನಾದ ಅವನ ಪರಾಕ್ರಮವನ್ನು ಅವಲಂಬಿಸಿ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ಸನ್ನದ್ಧ ರಾಗುತ್ತಿದ್ದಾರೆ. ಸ್ಥೂಣಾಕರ್ಣನೆಂಬ ಯಕ್ಷನಿಂದ ಯಾವಾತನು ಪುರುಷನಾಗಿ ಪರಿವರ್ತಿತನಾದನೋ–ಅಂತಹ ಮಹಾಧನುರ್ಧರನಾದ ಮತ್ತು ರೌದ್ರನಾದ ಶಿಖಂಡಿಯ ಸಹಾಯವನ್ನು–ಭೀಷ್ಮನನ್ನು ವಧಿಸುವ ಇಚ್ಛೆಯಿಂದ– ಪಾಂಡವರು ಪಡೆದುಕೊಂಡು ನಿಮ್ಮೊಡನೆ ಯುದ್ಧಕ್ಕೆ ಸನ್ನದ್ಧರಾಗುತ್ತಿದ್ದಾರೆ.

ಮಹಾಧನುಷ್ಮಂತರಾದ, ಕವಚವನ್ನು ತೊಟ್ಟು ಯುದ್ಧಕ್ಕೆ ಸಿದ್ಧರಾಗಿರುವ ಐವರು ಕೇಕಯರಾಜಕುಮಾರರ ಬಲವನ್ನವಲಂಬಿಸಿ ಪಾಂಡವರು ನಿಮ್ಮೊಡನೆ ಯುದ್ಧಕ್ಕೆ ಸನ್ನದ್ಧರಾಗುತ್ತಿದ್ದಾರೆ. ಯಾವನು ದೀರ್ಘವಾದ ತೋಳುಗಳುಳ್ಳವನಾಗಿರುವನೋ, ಬಹುಶೀಘ್ರವಾಗಿ ಅಸ್ತ್ರಪ್ರಯೋಗ ಮಾಡುವುದರಲ್ಲಿ ನಿಪುಣನೋ, ಬುದ್ಧಿವಂತನೋ, ಸತ್ಯ ವಿಕ್ರಮನೋ– ಅಂತಹ ವೃಷ್ಣಿವೀರನಾದ ಯುಯುಧಾನನೊಡನೆ ನೀವು ಯುದ್ಧಮಾಡ ಬೇಕಾಗಿದೆ.

ಯಾವನು ಮಹಾತ್ಮರಾದ ಪಾಂಡವರಿಗೆ ಅಜ್ಞಾತವಾಸದ ಅವಧಿಯಲ್ಲಿ ಆಶ್ರಯದಾತನಾಗಿದ್ದನೋ–ಅಂತಹ ವಿರಾಟರಾಜನೊಡನೆ ನೀವು ಯುದ್ಧಮಾಡಬೇಕಾಗಿದೆ.

ಕಾಶೀದೇಶಕ್ಕೆ ಅಧಿಪತಿಯೂ, ವಾರಣಾಸಿಯಲ್ಲಿರುವವನೂ, ಮಹಾ ರಥನೂ, ಕಾಶೀರಾಜನೆಂದು ಪ್ರಖ್ಯಾತನಾದವನೂ ಪಾಂಡವರ ಪರವಾಗಿ ಯುದ್ಧಮಾಡಲು ಬಂದಿದ್ದಾನೆ. ಅವನ ಬೆಂಬಲವನ್ನು ಪಡೆದುಕೊಂಡು ಪಾಂಡವರು ನಿಮ್ಮೊಡನೆ ಯುದ್ಧಮಾಡಲು ಸಿದ್ಧರಾಗುತ್ತಿದ್ದಾರೆ. ನೋಡು ವುದಕ್ಕೆ ಬಾಲಕರಂತೆ ಕಾಣುತ್ತಿದ್ದರೂ ಮಹಾತ್ಮರಾದ ದ್ರೌಪದಿಯ ಮಕ್ಕಳು ದುರ್ಜಯರಾಗಿರುತ್ತಾರೆ. ನಾಗರಹಾವನ್ನು ಸ್ಪರ್ಶಮಾಡಿದೊಡನೆಯೇ ಬುಸುಗುಟ್ಟುತ್ತಾ ಹೆಡೆಯನ್ನೆತ್ತಿಕೊಂಡು ಕಚ್ಚಲು ಬರುವಂತೆ–ಅವರನ್ನು

ಯುದ್ಧಭೂಮಿಯಲ್ಲಿ ಬಾಣಗಳಿಂದ ಸ್ಪರ್ಶಮಾಡಿದೊಡನೆಯೇ ರಭಸದಿಂದ ಶತ್ರುಗಳ ಮೇಲೆ ಬೀಳುತ್ತಾರೆ. ಅಂತಹ ಮಹಾಪರಾಕ್ರಮಿಗಳ ಬಲವನ್ನವ ಲಂಬಿಸಿ ಪಾಂಡವರು ಯುದ್ಧಸನ್ನದ್ಧರಾಗುತ್ತಿದ್ದಾರೆ.

ವೀರ್ಯದಲ್ಲಿ ಯಾವನು ಶ್ರೀಕೃಷ್ಣನಿಗೆ ಸಮಾನನಾಗಿರುವನೋ, ಜಿತೇಂದ್ರಿಯತ್ವದಲ್ಲಿ ಯುಧಿಷ್ಠಿರನಿಗೆ ಸಮಾನನಾಗಿರುವನೋ–ಅಂತಹ ವೀರನಾದ ಅಭಿಮನ್ಯುವಿನ ಬೆಂಬಲಪಡೆದೇ ಪಾಂಡವರು ಯುದ್ಧಸನ್ನದ್ಧ ರಾಗುತ್ತಿದ್ದಾರೆ.

ಯಾವನು ವೀರ್ಯ-ಪರಾಕ್ರಮಗಳಲ್ಲಿ ಅಪ್ರತಿಮನೆನಿಸಿರುವನೋ, ಯುದ್ಧದಲ್ಲಿ ಯಾವನ ಅಪ್ರತಿಹತವಾದ ಬಾಣವರ್ಷವನ್ನು ಶತ್ರುಗಳು ಸಹಿಸಿ ಕೊಳ್ಳಲಾರರೋ, ಯಾವನು ಕ್ರುದ್ಧನೋ ಮತ್ತು ಮಹಾರಥನೋ–ಅಂತಹ ಶಿಶುಪಾಲನ ಮಗನಾದ ಧೃಷ್ಟಕೇತುವಿನೊಡನೆ ನೀವು ಯುದ್ಧಮಾಡಬೇಕಾಗು ತ್ತದೆ. ಧೃಷ್ಟಕೇತುವಿನ ಸಹಾಯವನ್ನು ಪಡೆದು ಪಾಂಡವರು ಯುದ್ಧ ಸನ್ನದ್ಧರಾಗುತ್ತಿದ್ದಾರೆ. ಅಕ್ಷೌಹಿಣೀಸೈನ್ಯಸಮೇತನಾಗಿ ಅವನು ಪಾಂಡವರ ಕಡೆಗೆ ಸೇರಿಕೊಂಡಿರುತ್ತಾನೆ.

ಇಂದ್ರನು ದೇವತೆಗಳಿಗೆ ಆಶ್ರಯನಾಗಿರುವಂತೆ–ಯಾವ ಶ್ರೀಕೃಷ್ಣನು ಪಾಂಡವರಿಗೆ ಆಶ್ರಯನಾಗಿರುವನೋ ಅಂತಹ ಶ್ರೀಕೃಷ್ಣನನ್ನು ನೀವು ಎದುರಿಸಬೇಕಾಗಿದೆ. ಅವನ ಅವಲಂಬನೆಯಿಂದ ಪಾಂಡವರು ಯುದ್ಧಸನ್ನದ್ಧ ರಾಗುತ್ತಿದ್ದಾರೆ.

ಚೇದಿರಾಜನ ತಮ್ಮನಾದ ಶರಭರಾಜನು ತನ್ನ ಅನುಜನಾದ ಕರಕರ್ಷ ರಾಜಕುಮಾರನ ಜೊತೆಗೂಡಿಕೊಂಡು ಪಾಂಡವರೊಡನೆ ಸೇರಿಕೊಂಡಿರು ತ್ತಾನೆ. ಆ ಇಬ್ಬರ ಸಹಕಾರದಿಂದ ಪಾಂಡವರು ಯುದ್ಧದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾರೆ.

ಯುದ್ಧದಲ್ಲಿ ಅಪ್ರತಿರಥರಾದ, ವೀರರಾದ, ಜರಾಸಂಧನ ಮಕ್ಕಳಾದ ಸಹದೇವ ಮತ್ತು ಜಯತ್ಸೇನರಿಬ್ಬರೂ ಪಾಂಡವರಿಗೆ ಸಹಾಯ ನೀಡುವ ಸಲುವಾಗಿ ಆಗಮಿಸಿರುತ್ತಾರೆ.

ಮಹಾತೇಜಸ್ವಿಯಾದ ದ್ರುಪದನು ಅಪಾರಸೇನಾಸಮೇತನಾಗಿ

ಪಾಂಡವರಿಗೋಸ್ಕರ ಪ್ರಾಣವನ್ನೇ ಒತ್ತೆಯಾಗಿಟ್ಟು ನಿಮ್ಮೊಡನೆ ಯುದ್ಧ ಮಾಡಲು ಸನ್ನದ್ಧನಾಗಿದ್ದಾನೆ.

ಇವರೇ ಅಲ್ಲದೇ ಪೂರ್ವ ಮತ್ತು ಉತ್ತರದಿಕ್ಕುಗಳ ಇನ್ನೂ ನೂರಾರು ರಾಜರು ಸೈನ್ಯಸಮೇತರಾಗಿ ಯುಧಿಷ್ಠಿರನಿಗೆ ಸಹಾಯಮಾಡಲು ಆಗಮಿಸಿ ದ್ದಾರೆ. ಅವರೆಲ್ಲರ ಬೆಂಬಲವನ್ನೂ ಪಡೆದು ಯುಧಿಷ್ಠಿರನು ಯುದ್ಧಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದಾನೆ.”

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಭೀಮಸೇನನ ಪರಾಕ್ರಮವನ್ನು ನೆನೆದು ಧೃತರಾಷ್ಟ್ರನ ವಿಲಾಪ

ಪಾರಿಕ್ಷಿತ! ಸಂಜಯನ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಹೇಳುತ್ತಾನೆ :

“ಸಂಜಯ! ನೀನು ಹೇಳಿದ ಆ ಮಹಾತ್ಮರೆಲ್ಲರೂ ನಮ್ಮೊಡನೆ ಯುದ್ಧಮಾಡಲು ಬಹಳ ಉತ್ಸಾಹಶಾಲಿಗಳಾಗಿದ್ದಾರೆ. ಅವರೆಲ್ಲರೂ ಸೇರಿ ಬಲದಲ್ಲಿ ಒಂದು ತೂಕವಾದರೆ–ಭೀಮಸೇನನೇ ಒಂದು ತೂಕ. ಜಿಂಕೆಯು ಎಷ್ಟೇ ದೊಡ್ಡದಾಗಿದ್ದರೂ ವ್ಯಾಘ್ರಕ್ಕೆ ಭಯಪಡುವಂತೆ–ಪರಮಕ್ರುದ್ಧ ನಾದ, ಅಸಹಿಷ್ಣುವಾದ, ಭೀಮಸೇನನಿಂದ ನಾನು ಬಹುವಾಗಿ ಭಯಪಡುತ್ತೇನೆ.

ಪಶುವೊಂದು ಸಿಂಹವನ್ನು ನೆನೆದೊಡನೆಯೇ ಭಯಪಡುವಂತೆ–ವೃಕೋ ದರನ ಸ್ಮರಣೆಯಿಂದಲೇ ಭೀತನಾಗುವ ನಾನು ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಾ ದೀರ್ಘವಾದ ಮತ್ತು ಬಿಸಿ-ಬಿಸಿಯಾದ ನಿಟ್ಟುಸಿರುಬಿಡುತ್ತಿರು ತ್ತೇನೆ. ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದಲೂ ಮತ್ತು ಬಲದಿಂದಲೂ ಕೂಡಿರುವ ಭೀಮನನ್ನು ಎದುರಿಸಿ ನಿಲ್ಲುವ ಅಥವಾ ಅವನ ಪ್ರಹಾರವನ್ನು ತಡೆದುಕೊಳ್ಳಬಲ್ಲ ಒಬ್ಬ ಯೋಧನನ್ನೂ ನಾನು ನನ್ನ ಸೈನ್ಯದಲ್ಲಿ ಕಾಣದವ ನಾಗಿದ್ದೇನೆ. ಭೀಮಸೇನನು ಸಹನೆಯಿಲ್ಲದವನು. ವೈರವನ್ನು ನಿರಂತರ ವಾಗಿ ಸಾಧಿಸತಕ್ಕವನು. ಸಂತೋಷದ ಸಂದರ್ಭದಲ್ಲಿಯೂ ಅವನು ನಗತಕ್ಕವನಲ್ಲ. ಉದ್ಧತನಾದುದರಿಂದ ಅವನು ಯಾವಾಗಲೂ ವಕ್ರ

ವಾದ ದೃಷ್ಟಿಯುಳ್ಳವನಾಗಿರುತ್ತಾನೆ. ಯಾವಾಗಲೂ ಗರ್ಜನೆಮಾಡುವುದೇ ಅವನ ಸ್ವಭಾವವಾಗಿರುತ್ತದೆ. ಬಾಣಪ್ರಯೋಗದಲ್ಲಾಗಲೀ, ಗದಾಪ್ರಹಾರ ದಲ್ಲಿಯೇ ಆಗಲೀ–ಅವನು ಮಹಾವೇಗವುಳ್ಳವನು. ಯುದ್ಧದಲ್ಲಿ ವಿಶೇಷ



ವಾದ ಉತ್ಸಾಹವುಳ್ಳವನು. ಮಹಾಬಾಹುವು. ಮಹಾಬಲಿಷ್ಠನು. ಮೂರ್ಖ ರಾದ ನನ್ನ ಮಕ್ಕಳನ್ನು ಯುದ್ಧದಲ್ಲಿ ಕೊನೆಗಾಣಿಸಿಬಿಡುತ್ತಾನೆ. ಮಹಾ ನಿರ್ಬಂಧದಿಂದ (ಮೋಸದಿಂದ) ರಾಜ್ಯವನ್ನು ವಶಪಡಿಸಿಕೊಂಡಿರುವ ನನ್ನ ಮಕ್ಕಳ ಸಲುವಾಗಿಯೇ ಕುರುಶ್ರೇಷ್ಠನಾದ ವೃಕೋದರನು ದಂಡಪಾಣಿಯಾದ ಯಮನೋಪಾದಿಯಲ್ಲಿ ಯುದ್ಧದ ಸಮಯದಲ್ಲಿ ಗದೆಯನ್ನು ಧರಿಸುತ್ತಾನೆ.

(ನನ್ನ ಮಕ್ಕಳನ್ನು ಸಂಹರಿಸುವುದೇ ಅವನು ಗದೆಯನ್ನು ಹೊಂದಿರುವುದರ ಉದ್ದೇಶ.) ಅಷ್ಟಕೋನಗಳಿಂದ ಕೂಡಿರುವ, ಲೋಹದಿಂದ ಮಾಡಲ್ಪಟ್ಟ, ಸುವರ್ಣಾಭರಣಗಳಿಂದ ವಿಭೂಷಿತವಾದ, ಬ್ರಹ್ಮದಂಡದೋಪಾದಿಯಲ್ಲಿ ಎದ್ದು ನಿಂತಿರುವ ಘೋರಗದೆಯನ್ನು ನಾನು ನನ್ನ ಮನಸ್ಸಿನಿಂದಲೇ ನೋಡುತ್ತಿದ್ದೇನೆ. ಯಾವ ರೀತಿಯಲ್ಲಿ ಸಿಂಹವು ಮೃಗಗಳ ಸಮೂಹದಲ್ಲಿ ನಿಶ್ಶಂಕೆಯಿಂದ ಸಂಚರಿಸುವುದೋ–ಅದೇ ರೀತಿಯಲ್ಲಿ ಭೀಮಸೇನನು ನನ್ನ ಸೈನ್ಯದ ಮಧ್ಯದಲ್ಲಿ ನಿಶ್ಶಂಕೆಯಿಂದ ನಿರ್ಭಯತೆಯಿಂದ ಸಂಚರಿಸುತ್ತಾನೆ. ಕ್ರೂರ ವಿಕ್ರಮನಾದ ಆ ಭೀಮನು ಬಾಲ್ಯದಲ್ಲಿಯೂ ಬಹುಭಕ್ಷಕನಾಗಿಯೂ, ರಭಸ ಯುಕ್ತನಾಗಿಯೂ ಇದ್ದನು. ನನ್ನ ಎಲ್ಲ ಮಕ್ಕಳ ವಿಷಯದಲ್ಲಿಯೂ ಅವನು ಪ್ರತಿಕೂಲನಾಗಿಯೇ ಇದ್ದನು. ನನ್ನ ಮಕ್ಕಳನ್ನು ಕಂಡರೆ ಬಾಲ್ಯದಿಂದಲೇ ಅವನಿಗಾಗುತ್ತಿರಲಿಲ್ಲ. ಬಾಲ್ಯದಲ್ಲಿಯೂ ಅವನು ತೋರಿದ ಅನೇಕ ಸಾಹಸ ಕಾರ್ಯಗಳನ್ನು ನೆನೆಸಿಕೊಂಡರೆ ನನ್ನ ಹೃದಯವು ಕಂಪಿಸುತ್ತದೆ. ನನ್ನ ಮಕ್ಕಳಾದ ದುರ್ಯೋಧನಾದಿಗಳು ಬಾಲ್ಯದಲ್ಲಿಯೇ ಭೀಮನೊಡನೆ ಜಗಳ ವಾಡಲು ಹೋಗಿ ಆನೆಯಿಂದ ಮರ್ದಿಸಲ್ಪಡುವಂತೆ ಭೀಮಸೇನನಿಂದ ಮರ್ದಿಸಲ್ಪಡುತ್ತಿದ್ದರು. ಬಾಲ್ಯದಲ್ಲಿಯೇ ಭೀಮಸೇನನು ನನ್ನ ನೂರು ಮಕ್ಕಳನ್ನೂ ಸದೆಬಡಿಯುತ್ತಿದ್ದನು. ಅವನ ಪರಾಕ್ರಮದಿಂದ ವಿಮರ್ದಿತರಾದ ನನ್ನ ಮಕ್ಕಳು ಅನುದಿನವೂ ಕ್ಲೇಶಿತರಾಗುತ್ತಿದ್ದರು. ಯಾವ ದಿನವೂ ಇವರಿಗೆ ಅವನಿಂದ ಪೆಟ್ಟು ತಪ್ಪುತ್ತಿರಲಿಲ್ಲ. ಭೀಮಪರಾಕ್ರಮನಾದ ಭೀಮನೇ ಕೌರವ-ಪಾಂಡವರಲ್ಲಿ ಭೇದಭಾವವು ಬೆಳೆಯಲು ಮುಖ್ಯಕಾರಣನು. ಕೋಪದಿಂದ ಬುದ್ಧಿಗೆಟ್ಟ (ಉದ್ರಿಕ್ತನಾದ) ಭೀಮನು, ಮುಂಬರುವ ಸಮರ ದಲ್ಲಿ ನನ್ನ ಕಡೆಯ ಗಜ-ತುರಗ-ಪದಾತಿಸೈನ್ಯಗಳನ್ನು ಸಾವಿರಾರು ಸಂಖ್ಯೆಯಲ್ಲಿ ಧ್ವಂಸಮಾಡುತ್ತಾ ಮುನ್ನುಗ್ಗಿಹೋಗುತ್ತಿರುವ ಭಯಂಕರ ದೃಶ್ಯವನ್ನು ನಾನು ಇಂದೇ ಕಾಣುತ್ತಿದ್ದೇನೆ. ಭೀಮಸೇನನು ಅಸ್ತ್ರಪ್ರಯೋಗ ಕೌಶಲದಲ್ಲಿ ದ್ರೋಣಾರ್ಜುನರಿಗೆ ಸಮಾನನಾಗಿರುತ್ತಾನೆ. ವೇಗದಲ್ಲಿ ವಾಯುವಿಗೆ ಸಮಾನನಾಗಿದ್ದಾನೆ. ಕೋಪದಲ್ಲಿ ರುದ್ರನಿಗೆ ಸಮಾನನಾಗಿದ್ದಾನೆ. ಅಂತಹ ಮಹಾಪರಾಕ್ರಮಶಾಲಿಯನ್ನು ಯುದ್ಧದಲ್ಲಿ ಯಾರು ತಾನೇ ಸಂಹರಿಸಿ ಯಾರು? ಅಮರ್ಷಣನಾದ, ಮಹಾಶೂರನಾದ ಭೀಮಸೇನನ ವಿಷಯವಾಗಿ

ಹೇಳು, ಸಂಜಯ! ಶತ್ರುಸಂಹಾರಕನಾದ ಭೀಮಸೇನನು ದ್ಯೂತದ ಸಮಯದಲ್ಲಿಯೇ ನನ್ನ ಮಕ್ಕಳನ್ನು ಸಂಹರಿಸಬೇಕಾಗಿದ್ದಿತು. ಆದರೆ ಅವನು ಆಗ ಇವರನ್ನು ಸಂಹರಿಸಲಿಲ್ಲ. ಇದೊಂದು ಅತಿಲಾಭವೆಂದೇ ಭಾವಿಸುತ್ತೇನೆ. ಸಂಜಯ! ಭೀಮಬಲರಾದ ಯಕ್ಷರನ್ನೂ, ರಾಕ್ಷಸರನ್ನೂ ಅವನು ಹಿಂದೆ ಸಂಹರಿಸಿದ್ದಾನೆ. ಯಕ್ಷ-ರಾಕ್ಷಸರೇ ಅವನಿಂದ ಸಂಹೃತರಾದರೆಂದಮೇಲೆ ಮನುಷ್ಯರ ವಿಷಯದಲ್ಲಿ ಹೇಳುವುದೇನಿದೆ? ನನ್ನ ಸೈನ್ಯದಲ್ಲಿರುವ ಯೋಧರು ಯುದ್ಧಸಮಯದಲ್ಲಿ ಅವನ ರಭಸವಾದ ಅಸ್ತ್ರಗಳ ಮತ್ತು ಗದೆಯ ಪ್ರಹಾರಗಳನ್ನು ಹೇಗೆ ತಾನೇ ಸಹಿಸಿಕೊಂಡಾರು? ಇದನ್ನೇ ನಾನು ಬಾರಿ-ಬಾರಿಗೂ ಯೋಚಿಸುತ್ತಾ ನಿಟ್ಟುಸಿರುಬಿಡುತ್ತಿರುತ್ತೇನೆ. ಅವನು ಇನ್ನೂ ಬಾಲಕನಾಗಿದ್ದಾಗಲೇ ನನ್ನ ಅಧೀನದಲ್ಲಿರಲಿಲ್ಲ. ನಾನು ಹೇಳುತ್ತಿದ್ದ ಮಾತೊಂದನ್ನೂ ಕೇಳುತ್ತಿರಲಿಲ್ಲ. ಈಗಲಾದರೋ ನನ್ನ ದುಷ್ಪುತ್ರರಿಂದ ನಾನಾವಿಧವಾಗಿ ಕ್ಲೇಶಿತನಾಗಿರುವ ಆ ಪಾಂಡವನು ನನ್ನ ಆಜ್ಞೆಯನ್ನು ಏಕೆ ಪರಿಪಾಲಿಸುತ್ತಾನೆ? ಅವನು ಮಹಾಕ್ರೂರಿಯು ಮತ್ತು ಮಹಾಕೋಪಿಷ್ಠನು. ಎಂದಾದರೂ ಯಾರಿಗೂ ಬಗ್ಗತಕ್ಕವನಲ್ಲ. ಯಾವಾಗಲೂ ಅವನು ವಕ್ರದೃಷ್ಟಿಯವನು. ಸದಾಕಾಲವೂ ಅವನು ಕುಪಿತನಾಗಿಯೇ ಇರುವುದರಿಂದ ಅವನ ಹುಬ್ಬುಗಳು ಯಾವಾಗಲೂ ಗಂಟಿಕ್ಕಿಕೊಂಡು ಒಂದಕ್ಕೊಂದು ಸೇರಿಕೊಂಡುಬಿಟ್ಟಿರುತ್ತವೆ. ಅಂತಹ ವೃಕೋದರನನ್ನು ಶಾಂತಗೊಳಿಸುವುದಾದರೂ ಹೇಗೆ ಸಾಧ್ಯ? ಅವನು ಮಹಾಶೂರನು. ಅಪ್ರತಿಹತವಾದ ಬಲವುಳ್ಳವನು. ಗೌರಾಂಗನು. ತಾಳೆಯ ವೃಕ್ಷದಂತೆ ಎತ್ತರವಾಗಿರುವವನು. ಭೀಮಸೇನನು ಅರ್ಜುನನಿಗಿಂತಲೂ ಒಂದು ಗೇಣಿನಷ್ಟು (ಚೋಟಿನಷ್ಟು) ಎತ್ತರವಾಗಿದ್ದಾನೆ. ವೇಗದಲ್ಲಿ ಕುದುರೆಗಳನ್ನೂ ಮೀರಿಸಬಲ್ಲವನಾಗಿದ್ದಾನೆ. ಬಲದಲ್ಲಿ ಆನೆಗಳನ್ನೂ (ಗಜಸೈನ್ಯವನ್ನೂ) ಮೀರಿಸಬಲ್ಲನು. ಅವನು ಯಾವಾಗಲೂ ವ್ಯಕ್ತವಾಗಿ ಮಾತನಾಡತಕ್ಕವನಲ್ಲ. ಬಲಿಷ್ಠನಾದ ಪಾಂಡವಮಧ್ಯಮನ (ಭೀಮನ) ಕಣ್ಣುಗಳು ಜೇನುತುಪ್ಪದಂತೆ ಕೆಂಪುಬಣ್ಣದ್ದಾಗಿವೆ. ಅವನ ರೂಪ ಮತ್ತು ಪರಾಕ್ರಮಗಳ ಯಥಾರ್ಥವರ್ಣನೆಯನ್ನು ಅವನಿನ್ನೂ ಬಾಲಕನಾಗಿದ್ದಾಗಲೇ ನಾನು ವ್ಯಾಸರ ಮುಖಾರವಿಂದದಿಂದ ಕೇಳಿ ತಿಳಿದುಕೊಂಡಿದ್ದೆನು. ಮಹಾಭಯಂಕರನಾದ,

ಕ್ರೂರಪರಾಕ್ರಮಿಯಾದ ಭೀಮಸೇನನು ಕ್ರುದ್ಧನಾಗಿ ಯುದ್ಧದಲ್ಲಿ ಲೋಹದ ದಂಡದಿಂದಲೇ (ಗದೆಯಿಂದಲೇ) ರಥಗಳನ್ನೂ, ಆನೆಗಳನ್ನೂ, ಕಾಲಾಳುಗಳನ್ನೂ, ಅಶ್ವಸೈನ್ಯಗಳನ್ನೂ ಧ್ವಂಸಮಾಡುತ್ತಾನೆ. ಭೀಮನು ಸಹನಶೀಲನಲ್ಲ. ಸದಾ ಕುಪಿತನಾಗಿಯೇ ಇರತಕ್ಕವನು. ಶತ್ರುಗಳನ್ನು ಮರ್ದನ ಮಾಡುವವರಲ್ಲಿ ಶ್ರೇಷ್ಠನೆನಿಸಿದ್ದಾನೆ. ನನ್ನ ಮಕ್ಕಳಿಗೆ ಅವನು ಯಾವಾಗಲೂ ಪ್ರತೀಕಾರವನ್ನೇ ಮಾಡುತ್ತಿದ್ದುದರಿಂದ ನಾನು ಅವನಿಗೆ ಭೀಮಾರಿ ಹಾಕಿ ಹಲವುಬಾರಿ ಅವನನ್ನು ಅವಮಾನಿಸಿದ್ದೇನೆ.

ಅವನ ಗದೆಯು ಕರ್ಣರಹಿತವಾದುದು. (ಯಾವ ವಿಧವಾದ ಉಬ್ಬು-ತಗ್ಗುಗಳೂ ಆ ಗದೆಯಲ್ಲಿರುವುದಿಲ್ಲ.) ಲೋಹಮಯವಾಗಿರುವುದು. ಬಹಳ ದೊಡ್ಡದಾಗಿರುವುದು. ಸುಂದರವಾದ ಪಾರ್ಶ್ವಗಳಿಂದ ಕೂಡಿರುವುದು. ಚಿನ್ನದಿಂದ ಅಲಂಕೃತವಾಗಿರುವುದು. ಸಿಡಿಲಿನಂತೆ ಮಹಾನಿನಾದವನ್ನು ಉಂಟುಮಾಡತಕ್ಕ, ಏಕಕಾಲದಲ್ಲಿ ನೂರು ಯೋಧರನ್ನು ಸಂಹರಿಸತಕ್ಕ ಅವನ ಗದೆಯ ಪ್ರಹಾರವನ್ನು ನನ್ನ ಮಕ್ಕಳು ಹೇಗೆ ತಾನೇ ಸಹಿಸಿಕೊಳ್ಳ ಬಲ್ಲರು?

ಮಗು, ಸಂಜಯ! ಬಾಣದಂತೆಯೇ ವೇಗಗತಿಯುಳ್ಳ ಭೀಮಸೇನನು ಅವಗಾಹನಕ್ಕೂ ಅಸಾಧ್ಯವಾದ, ದುರ್ಗಮವಾದ, ಅಪಾರವಾದ ಸಮುದ್ರ ದಂತಿದ್ದಾನೆ. ದುರ್ಗಮವಾದ, ಭೀಮಸೇನನೆಂಬ ಸಮುದ್ರವನ್ನು ಮಂದ ಬುದ್ಧಿಯವರಾದ ನನ್ನ ಮಕ್ಕಳು ದಾಟಲಿಚ್ಛಿಸಿದ್ದಾರೆ. ತಾವೇ ಸರ್ವಜ್ಞ ರೆಂದು ತಿಳಿದುಕೊಂಡುಬಿಟ್ಟಿರುವ ಈ ಮೂರ್ಖರು ನಾನೆಷ್ಟೇ ಪ್ರಲಪಿಸಿದರೂ ಕೇಳುತ್ತಲೇ ಇಲ್ಲ.

**ವಿಷಮಂ ನ ಹಿ ಮನ್ಯನ್ತೇ ಪ್ರಪಾತಂ ಮಧುದರ್ಶಿನಃ ॥೨೬॥**

ಬಹಳ ಎತ್ತರದಲ್ಲಿರುವ ಜೇನುತುಪ್ಪದ ಗೂಡನ್ನು ನೋಡಿದವರು ಜೇನುತುಪ್ಪದ ಆಸೆಗಾಗಿ ಗೂಡನ್ನು ಬಿಡಿಸಲು ಹೋಗುವಾಗ ಅದರ ಕೆಳಗಿರುವ ಪ್ರಪಾತದ ವಿಷಯವಾಗಿ ಕ್ಷಣಕಾಲವಾದರೂ ಯೋಚಿಸುವುದಿಲ್ಲ. (ಅಂತೆಯೇ ನನ್ನ ಮಕ್ಕಳು ನಾನೆಷ್ಟೇ ಸಲಹೆನೀಡಿದರೂ ವಿಜಯಗಳಿಸುವ ಅಮಲಿನಲ್ಲಿ ಅಪಾಯವಿರುವುದನ್ನು ಮನಗಾಣುತ್ತಿಲ್ಲ.)

ವಿಧಿಯ ಚೋದನೆಯಂತೆ ಯುದ್ಧಮಾಡುವ ಸಲುವಾಗಿ ರಣರಂಗಕ್ಕೆ ಯಾರು ಹೋಗುತ್ತಾರೆಯೋ ಅವರಿಗೆ–ಸಿಂಹದಿಂದ ಮಹಾಮೃಗಗಳಿಗೆ ಸಾವು ಒದಗುವಂತೆ–ಮೃತ್ಯುರೂಪನಾದ ಭೀಮಸೇನನಿಂದ ಮರಣವು ಸಂಭವಿಸುವುದು ನಿಶ್ಚಯ.

ಸಂಜಯ! ಭೀಮನ ಗದೆಯು ನಾಲ್ಕು ಮೊಳಗಳಷ್ಟು ಉದ್ದವಾಗಿಯೂ– ಆರು ಅಥವಾ ಎಂಟು ಕೋಣಗಳುಳ್ಳದ್ದಾಗಿಯೂ ಇರುವುದು. ಅಮಿತವಾದ ಪ್ರಕಾಶದಿಂದಲೂ ಕೂಡಿರುವುದು. ಅದರ ಸ್ಪರ್ಶವೇ ದುಃಖದಾಯಕವಾಗಿರುವಾಗ ಭೀಮನು ಅದನ್ನು ಎತ್ತಿ ರಭಸದಿಂದ ನನ್ನ ಮಕ್ಕಳ ಮೇಲೆ ಪ್ರಯೋಗಿಸಿದಾಗ ಅವರದನ್ನು ಹೇಗೆ ಸಹಿಸಿಕೊಳ್ಳುವರು?

ಅವನು ಗದೆಯನ್ನು ಗರ-ಗರನೆ ತಿರುಗಿಸುತ್ತಾ ಮದಿಸಿದ ಆನೆಗಳ ಕುಂಭಸ್ಥಳಗಳನ್ನು ಭೇದಿಸುತ್ತಾನೆ. ಅವುಡುಗಚ್ಚುತ್ತಾನೆ. (ಕಟವಾಯಿಗಳನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾನೆ.) ಬಾರಿ-ಬಾರಿಗೂ ಕೋಪಾಗ್ನಿಯಿಂದ ಕಾದ ಕಣ್ಣೀರನ್ನು ಸುರಿಸುತ್ತಾನೆ. ತನ್ನ ಮುಂಭಾಗದಲ್ಲಿ ಭಯಂಕರವಾಗಿ ಗರ್ಜನೆಮಾಡುತ್ತಿರುವ ಆನೆಗಳ ಸಮೀಪಕ್ಕೆ ಹೋಗಿ ಅವುಗಳನ್ನು ಗದೆಯಿಂದ ಪ್ರಹರಿಸುತ್ತಾನೆ. ಮದಿಸಿದ ಆನೆಗಳು ಭೀಮನ ಪ್ರಹಾರದಿಂದ ಪ್ರಾಣತೊರೆದು ಕರ್ಕಶಧ್ವನಿಮಾಡುತ್ತಾ ಕೆಳಗೆ ಬೀಳುವಾಗ ತಾನೂ ಅದಕ್ಕೆ ಪ್ರತಿಯಾಗಿ ಸಿಂಹನಾದಮಾಡುತ್ತಾನೆ.

ವೀರಯೋಧರನ್ನಟ್ಟಿಸಿಕೊಂಡು ರಥಸೈನ್ಯದೊಳಕ್ಕೆ ನುಗ್ಗಿ ಹೋಗುತ್ತಾನೆ. ಈ ರೀತಿಯಲ್ಲಿ ಯಜ್ಞೇಶ್ವರನಿಗೆ ಸಮಾನವಾಗಿ ಪ್ರಜ್ವಲಿಸುವ ಭೀಮಸೇನನು ನನ್ನ ಮಕ್ಕಳನ್ನು ಪ್ರಾಣಸಹಿತವಾಗಿ ಬಿಡುವನೇ?

ಮಹಾಬಾಹುವಾದ ಭೀಮಸೇನನು ತನ್ನ ಸಂಚಾರಕ್ಕಾಗಿ ಆ ದೊಡ್ಡ ಸೈನ್ಯವಿರುವೆಡೆಯಲ್ಲಿ ಒಂದು ಮಾರ್ಗವನ್ನೇ ಕಲ್ಪಿಸಿಕೊಂಡುಬಿಡುತ್ತಾನೆ. ಘನೀಭೂತವಾಗಿರುವ ಅಥವಾ ದಟ್ಟವಾಗಿರುವ ನನ್ನ ಅಪಾರಸೈನ್ಯಸಮೂಹ ವನ್ನು ಕರಗಿಸಿಬಿಡುತ್ತಾನೆ. ರಣಾಂಗಣದಲ್ಲಿ ಗದಾಪಾಣಿಯಾದ ಭೀಮನು ಪ್ರಳಯಕಾಲದ ರುದ್ರನಂತೆ ನರ್ತನಮಾಡುತ್ತಾ ಪ್ರಳಯಕಾಲದ ದೃಶ್ಯ ವನ್ನೇ ತೋರಿಸಿಬಿಡುತ್ತಾನೆ. ಮದಿಸಿದ ಆನೆಯು ಫಲ-ಪುಷ್ಪಭರಿತವಾದ

ವೃಕ್ಷಗಳನ್ನು ಮುರಿದುಹಾಕುತ್ತಾ ಕಾಡಿನೊಳಗೆ ಪ್ರವೇಶಿಸುವಂತೆ–ಎದುರಾಗಿ ಸಿಕ್ಕುವ ಯೋಧರನ್ನು ಮರ್ದನಮಾಡುತ್ತಾ ವೃಕೋದರನು ನನ್ನ ಮಕ್ಕಳ ಸೇನೆಯೊಳಕ್ಕೆ ನುಗ್ಗುತ್ತಾನೆ.

ಎದುರಿಗೆ ಸಿಕ್ಕುವ ರಥಗಳನ್ನು ಯೋಧರಿಂದ ಹೀನವನ್ನಾಗಿಯೂ, ಸಾರಥಿಗಳಿಂದ ಹೀನವನ್ನಾಗಿಯೂ, ಕುದುರೆಗಳಿಂದ ಹೀನವನ್ನಾಗಿಯೂ ಮಾಡುತ್ತಾನೆ. (ಎದುರಿಗೆ ಸಿಕ್ಕಿದ ರಥಗಳಲ್ಲಿರುವವರೆಲ್ಲರನ್ನೂ ವಿನಾಶಗೊಳಿಸುತ್ತಾನೆ.) ಪುರುಷವ್ಯಾಘ್ರನಾದ ಭೀಮನು ರಥಿಕರನ್ನೂ, ಸಾರಥಿಗಳನ್ನೂ ಗಾಯಗಳಿಂದ ತುಂಬಿಬಿಡುತ್ತಾನೆ. (ಗದಾಪ್ರಹಾರದಿಂದ ಗಾಯಗೊಳಿಸುತ್ತಾನೆ.) ಗಂಗಾನದಿಯು ಮಹಾಪೂರದ ಕಾಲದಲ್ಲಿ ತನ್ನ ತೀರದಲ್ಲಿರುವ ನಾನಾವಿಧವಾದ ವೃಕ್ಷಗಳನ್ನು ಬುಡಮೇಲು ಮಾಡಿಬಿಡುವಂತೆ (ಧ್ವಂಸಗೊಳಿಸುವಂತೆ)–ಭೀಮಸೇನನು ಯುದ್ಧಸಮಯದಲ್ಲಿ ನನ್ನ ಮಕ್ಕಳ ಸೇನಾಸಮೂಹವನ್ನು ವಿಧ್ವಂಸನಗೊಳಿಸುತ್ತಾನೆ.

ಸಂಜಯ! ನಿಶ್ಚಯವಾಗಿ ಹೇಳುತ್ತೇನೆ. ಭೀಮಸೇನನ ಭಯದಿಂದ ಪೀಡಿತರಾದ ನನ್ನ ಮಕ್ಕಳೂ, ಸೇವಕರೂ ಮತ್ತು ರಾಜರೂ ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಬುದ್ಧಿವಂತನಾದ, ಮಹಾಬಲನಾದ, ಮಾಗಧೇಂದ್ರನಾದ ಜರಾಸಂಧನು ಅಖಂಡಭೂಮಂಡಲವನ್ನೇ ತನ್ನ ವಶಮಾಡಿಕೊಂಡು ಪ್ರಜೆಗಳಿಗೆ ನಾನಾಪ್ರಕಾರವಾಗಿ ಉಪದ್ರವಕೊಡುತ್ತಿದ್ದನು. ಅವನ ಉಪದ್ರವವು ದಿನ-ದಿನಕ್ಕೂ ಹೆಚ್ಚುತ್ತಿರಲಾಗಿ ಶ್ರೀಕೃಷ್ಣನ ಸಲಹೆಯಂತೆ ಭೀಮಸೇನನು ಶ್ರೀಕೃಷ್ಣಸಮೇತನಾಗಿ ಅವನ ಪಟ್ಟಣಕ್ಕೆ ಹೋಗಿ ಅರಮನೆಯನ್ನು ಪ್ರವೇಶಿಸಿ ಮಹಾವೀರ್ಯನಾದ ಜರಾಸಂಧರಾಜನನ್ನು ಸಂಹರಿಸಿದನು. ಮಹಾಬಲಿಷ್ಠನಾದ ಭೀಷ್ಮನ ಸಹಾಯದಿಂದಾಗಿ ಕುರುಗಳು ಜರಾಸಂಧನ ಅಧೀನರಾಗಲಿಲ್ಲ. ನಯ-ವಿನಯಾದಿಗಳಿಂದ ಅಂಧಕ-ವೃಷ್ಣಿಗಳೂ ಅವನ ಅಧೀನರಾಗದೇ ಉಳಿದುಕೊಂಡರು. ಅದೂ ದೈವಯೋಗವೇ ಸರಿ.

ಆದರೆ ಸುದೀರ್ಘವಾದ ಮತ್ತು ದೃಢವಾದ ಎರಡು ಭುಜಗಳಿಂದಲೇ ಸುಶೋಭಿತನಾಗಿದ್ದ ಭೀಮಸೇನನು ಜರಾಸಂಧನ ಪಟ್ಟಣಕ್ಕೆ ಹೋಗಿ ಅವನನ್ನು ದ್ವಂದ್ವಯುದ್ಧಕ್ಕೆ ಆಹ್ವಾನಿಸಿ ನಿರಾಯುಧನಾಗಿ ತನ್ನ ಎರಡು

ಬಾಹುಗಳ ಬಲದಿಂದಲೇ ಅಲ್ಪಕಾಲದಲ್ಲಿ ಅವನನ್ನು ಸಂಹರಿಸಿಬಿಟ್ಟನು. ಇದಕ್ಕಿಂತಲೂ ಹೆಚ್ಚಿನ ಪರಾಕ್ರಮವು ಯಾರಲ್ಲಿ ತಾನೇ ಇರುವುದು?

ಸಂಜಯ! ಬಹುದೀರ್ಘಕಾಲದಿಂದ ಸಂಚಯಿಸಿದ ವಿಷವನ್ನು ಸರ್ಪವು ಯಾವ ರೀತಿಯಲ್ಲಿ ತನ್ನನ್ನು ಘಾಸಿಪಡಿಸಿದವನ ಮೇಲೆ ಸಮಯ ಸಾಧಿಸಿ ಕಕ್ಕುವುದೋ–ಅದೇ ರೀತಿಯಲ್ಲಿ ಭೀಮಸೇನನೂ ಬಹುದೀರ್ಘಕಾಲದಿಂದ ಸಂಚಯಿಸಿರುವ ಮಹಾತೇಜಸ್ಸನ್ನೂ, ಮಹಾಶಕ್ತಿಯನ್ನೂ, ಮಹಾಪರಾಕ್ರಮವನ್ನೂ–ರಣರಂಗವನ್ನು ಪ್ರವೇಶಿಸಲಿರುವ ನನ್ನ ಮಕ್ಕಳ ಮೇಲೆ ಪ್ರಯೋಗಿಸುತ್ತಾನೆ. (ಹಾವು ಕಚ್ಚುವುದರಿಂದ ಪ್ರಾಣಿಯ ಅಥವಾ ಮನುಷ್ಯನ ಮೇಲುಂಟಾಗುವ ಪರಿಣಾಮವೇ ನನ್ನ ಮಕ್ಕಳ ವಿಷಯದಲ್ಲಿಯೂ ಆಗುತ್ತದೆ. ಅರ್ಥಾತ್ ಭೀಮನ ತೇಜಸ್ಸೆಂಬ ಅಗ್ನಿಗೆ ನನ್ನ ಮಕ್ಕಳು ಆಹುತಿಯಾಗುತ್ತಾರೆ.) ದೇವತೆಗಳಲ್ಲಿ ಶ್ರೇಷ್ಠನಾದ ದೇವೇಂದ್ರನು ಯಾವ ರೀತಿಯಲ್ಲಿ ವಜ್ರಪಾಣಿಯಾಗಿ ದಾನವರನ್ನು ಧ್ವಂಸಮಾಡುತ್ತಾನೆಯೋ–ಅದೇ ರೀತಿಯಲ್ಲಿ ಗದಾಪಾಣಿಯಾದ ಭೀಮಸೇನನು ನನ್ನ ಮಕ್ಕಳನ್ನು ಸಂಹಾರ ಮಾಡುತ್ತಾನೆ. ಸಂಜಯ! ಅವನ ಆಕ್ರಮಣದ ರಭಸವನ್ನು ಯಾರಿಂದಲೂ ತಡೆಯಲು ಸಾಧ್ಯವಾಗುವುದಿಲ್ಲ. ಅವನ ಗತಿಯನ್ನೂ ಯಾರೂ ತಡೆಯಲಾರರು. ಅವನ ವೇಗ ಮತ್ತು ಪರಾಕ್ರಮಗಳು ಬಹಳ ತೀವ್ರವಾಗಿವೆ. ಕೋಪದಿಂದ ರಕ್ತಾಕ್ಷನಾಗಿರುವ ಭೀಮಸೇನನು ರಭಸದಿಂದ ನನ್ನ ಮಕ್ಕಳ ಮೇಲೆ ಬೀಳುವ ಘೋರದೃಶ್ಯವನ್ನು ನಾನೀಗಲೇ ಕಾಣುತ್ತಿದ್ದೇನೆ. ನಿಶ್ಚಯವಾಗಿ ಹೇಳುವುದಾದರೆ ಅವನಿಗೆ ಆಯುಧಗಳೇ ಬೇಕಾಗಿಲ್ಲ. ಗದಾರಹಿತನಾಗಿ, ಧನುಸ್ಸನ್ನೂ ಧರಿಸದೇ, ರಥದ ಮೇಲೂ ಕುಳಿತುಕೊಳ್ಳದೇ, ಕವಚವನ್ನೂ ತೊಟ್ಟುಕೊಳ್ಳದೇ, ಪರಿಘಕ್ಕೆ ಸಮಾನವಾದ ತೋಳುಗಳಿಂದಲೇ ಯುದ್ಧಕ್ಕೆ ಸಿದ್ಧನಾದರೂ ಅವನನ್ನೆದುರಿಸಿ ನಿಲ್ಲುವವರು ನಮ್ಮ ಪಕ್ಷದಲ್ಲಿ ಯಾರು ತಾನೇ ಇದ್ದಾರೆ?

ಪಿತಾಮಹನಾದ ಭೀಷ್ಮ, ವಿಪ್ರಶ್ರೇಷ್ಠರಾದ ದ್ರೋಣಾಚಾರ್ಯರು, ಶರದ್ವಂತರ ಪುತ್ರರಾದ ಕೃಪರು–ಇವರುಗಳೂ ನಾನು ತಿಳಿದುಕೊಂಡಿರುವಂತೆ ಭೀಮನ ಪರಾಕ್ರಮವೆಷ್ಟೆಂಬುದನ್ನು ಬಲ್ಲವರಾಗಿದ್ದಾರೆ. ಆದರೂ

ಶಿಷ್ಟರಾದವರ ಕರ್ತವ್ಯವೇನೆಂಬುದನ್ನು ತಿಳಿದಿರುವ ಮತ್ತು ವೀರೋಚಿತವಾಗಿ ಯುದ್ಧಭೂಮಿಯಲ್ಲಿಯೇ ಪ್ರಾಣತೊರೆಯಲಿಚ್ಛಿಸಿರುವ ಈ ಪುರುಷರ್ಷಭರು ನನ್ನ ಮಕ್ಕಳ ಸೇನೆಗೆ ನಾಯಕರಾಗಿ ನಿಲ್ಲುತ್ತಾರೆ. (ಸೇನಾನಾಯಕರಾಗಿ ಯುದ್ಧದಲ್ಲಿ ಕಡೆಯವರೆಗೂ ಹೋರಾಡುತ್ತಾರೆ.)

ಸಂಜಯ! ಪುರುಷನಾದವನಿಗೆ ಅದೃಷ್ಟವೇ ಅಥವಾ ವಿಧಿಯೇ ಹೆಚ್ಚು ಬಲವತ್ತರವಾದುದು. (ಕೆಟ್ಟುದಾಗುವುದೆಂಬ ಸೂಚನೆಗಳು ಕಂಡುಬಂದರೂ ಒದಗಿಬರಲಿರುವ ಕೇಡನ್ನು ತಡೆಯಲು ಸಾಧ್ಯವಾಗುವುದಿಲ್ಲ.) ಪಾಂಡವರಿಗೆ ವಿಜಯವಾಗುವುದೆಂದೂ, ಅವರೇ ಯುದ್ಧದಲ್ಲಿ ಜಯಗಳಿಸುವರೆಂದೂ ನನಗೆ ಸ್ಪಷ್ಟವಾಗಿ ತಿಳಿದಿದೆ. ಆದರೂ ಸಹ ನನ್ನ ಮಕ್ಕಳನ್ನು ಯುದ್ಧದಿಂದ ವಿಮುಖರನ್ನಾಗಿ ಮಾಡಲು ನಾನು ಅಸಮರ್ಥನಾಗಿದ್ದೇನೆ. ಇದಕ್ಕೆ ಬಹು ಬಲಿಷ್ಠವಾದ ವಿಧಿ ಅಥವಾ ಅದೃಷ್ಟವೇ ಕಾರಣವಲ್ಲವೇ?

ಮಹಾಧನುರ್ಧಾರಿಗಳಾದ ಭೀಷ್ಮಾದಿಗಳು–ಪುರಾತನವಾದ ಇಂದ್ರನ ಸಂಬಂಧವಾದ ಸ್ವರ್ಗದ ಮಾರ್ಗವನ್ನು ಆಶ್ರಯಿಸಿದವರಾಗಿ (ವೀರಸ್ವರ್ಗದಲ್ಲಿಯೇ ನೆಟ್ಟದೃಷ್ಟಿಯುಳ್ಳವರಾಗಿ,) ಕ್ಷತ್ರಿಯರಾಜರ ಯಶಸ್ಸನ್ನೂ ಸಂರಕ್ಷಿಸುತ್ತಾ, ಮುಂಬರುವ ಯುದ್ಧದಲ್ಲಿ ಕಡೆಯವರೆಗೂ ಯುದ್ಧಮಾಡುತ್ತಿದ್ದು ಪ್ರಾಣಗಳನ್ನು ತೊರೆಯುತ್ತಾರೆ. ಇವರಿಗೆ ನನ್ನ ಮಕ್ಕಳು ಹೇಗೋ ಪಾಂಡವರೂ ಹಾಗೆಯೇ. ಭೀಷ್ಮನಿಗೆ ನನ್ನ ಮಕ್ಕಳಂತೆಯೇ ಪಾಂಡವರೂ ಪೌತ್ರರು. ದ್ರೋಣ-ಕೃಪರಿಗೆ ನನ್ನ ಮಕ್ಕಳಂತೆಯೇ ಪಾಂಡವರೂ ಅಚ್ಚುಮೆಚ್ಚಿನ ಶಿಷ್ಯರಾಗಿರುತ್ತಾರೆ. ಪಾಂಡವ-ಕೌರವರು ಭೀಷ್ಮ-ದ್ರೋಣ-ಕೃಪರ ದೃಷ್ಟಿಯಲ್ಲಿ ಸಮಾನರಾಗಿದ್ದರೂ, ಇವರು ನಮ್ಮ ಆಶ್ರಯವನ್ನು ಪಡೆದು, ದಾನವನ್ನೂ, ಯಜ್ಞ-ಯಾಗಾದಿಗಳನ್ನೂ ಮಾಡಿರುತ್ತಾರೆ. ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವ ಸಲುವಾಗಿ ಆರ್ಯರಾಗಿರುವ ಇವರು ದುರ್ಯೋಧನನ ಪಕ್ಷದಲ್ಲಿ ನಿಂತು ಯುದ್ಧಮಾಡುತ್ತಾರೆ.

**ಆದದಾನಸ್ಯ ಶಸ್ತ್ರಂ ಹಿ ಕ್ಷತ್ರಧರ್ಮಂ ಪರೀಪ್ಸತಃ ।**
**ನಿಧನಂ ಕ್ಷತ್ರಿಯಸ್ಯಾಜೌ ವರಮೇವಾಹುರುತ್ತಮಮ್ ॥೫೧॥**

ಯಾವನು ಅಸ್ತ್ರ-ಶಸ್ತ್ರಗಳನ್ನು ಧಾರಣೆಮಾಡಿರುವನೋ ಮತ್ತು ಯಾವನು ಕ್ಷತ್ರಧರ್ಮವನ್ನು ರಕ್ಷಿಸಬೇಕೆಂಬ ಇಚ್ಛೆಯಿಂದಿರುವನೋ–ಅಂತಹವನಿಗೆ ಮತ್ತು ಅಂತಹ ಕ್ಷತ್ರಿಯನಿಗೆ ಯುದ್ಧಭೂಮಿಯಲ್ಲಿ ಮರಣವು ಸಂಭವಿಸುವುದು ಶ್ರೇಷ್ಠವೆಂದು ಹೇಳುತ್ತಾರೆ. ಸಂಜಯ! ಯಾರು ಪಾಂಡವರೊಡನೆ ಯುದ್ಧಮಾಡಲು ಉತ್ಸುಕರಾಗಿದ್ದಾರೆಯೋ–ಅಂತಹವರ ವಿಷಯದಲ್ಲಿ ನಾನು ಬಹುವಾಗಿ ಪರಿತಾಪಪಡುತ್ತೇನೆ. (ಅವರು ಜೀವಂತರಾಗಿ ಪುನಃ ಹಿಂದಿರುಗಲಾರರೆಂಬುದೇ ನನ್ನ ದುಃಖಕ್ಕೆ ಕಾರಣವಾಗಿದೆ.) ಬಹಳ ಹಿಂದೆಯೇ ವಿದುರನು ಇಂತಹ ಒಂದು ದೊಡ್ಡ ವಿಪತ್ತು ಸನ್ನಿಹಿತವಾಗುವುದೆಂದು ಅನೇಕಬಾರಿ ಉದ್ಘೋಷಿಸಿದ್ದನು. ಆದರೆ ಅಂದು ನಾನು ಅವನ ಮಾತನ್ನು ನಿರ್ಲಕ್ಷಿಸಿದ್ದೆನು. ಆ ಭಯದಾಯಕವಾದ ವಿಪತ್ತು ಇಂದು ಬಂದಿದೆ. ನಾನು ಪಡೆದ ಜ್ಞಾನೋಪದೇಶವು ಇಂದು ನನಗೆ ಯಾವ ಪ್ರಯೋಜನಕ್ಕೂ ಬರುತ್ತಿಲ್ಲ.

**ನ ತು ಮನ್ಯೇ ವಿಘಾತಾಯ ಜ್ಞಾನಂ ದುಃಖಸ್ಯ ಸಂಜಯ ।**
**ಭವತ್ಯತಿಬಲಂ ಹ್ಯೇತಜ್ಜ್ಞಾನಸ್ಯಾಪ್ಯುಪಘಾತಕಮ್ ॥೫೩॥**

ನನ್ನ ಅನುಭವದಿಂದ ನಾನು ಹೇಳುತ್ತಿದ್ದೇನೆ, ಸಂಜಯ! ಜ್ಞಾನವು ದುಃಖವನ್ನು ದೂರೀಕರಿಸಲಾರದೆಂಬುದು ನನ್ನ ಭಾವನೆಯಾಗಿದೆ. ದುಃಖವೆಂಬುದು ಮಹಾಬಲಿಷ್ಠವಾದುದು. ದುಃಖವೇ ಜ್ಞಾನವನ್ನು ವಿನಾಶಗೊಳಿಸುವಷ್ಟು ಬಲಿಷ್ಠವಾದುದು.

**ಋಷಯೋ ಹ್ಯಪಿ ನಿರ್ಮುಕ್ತಾಃ ಪಶ್ಯನ್ತೋ ಲೋಕಸಂಗ್ರಹಾನ್ ।**
**ಸುಖೈರ್ಭವನ್ತಿ ಸುಖಿನಸ್ತಥಾ ದುಃಖೇನ ದುಃಖಿತಾಃ ॥೫೪॥**

ಸರ್ವಸಂಗಪರಿತ್ಯಾಗಮಾಡಿರುವ ಜ್ಞಾನಿಗಳಾದ ಋಷಿಗಳೂ ಕೂಡ ಲೋಕದಲ್ಲಿ ನಡೆಯುವ ಆಗು-ಹೋಗುಗಳನ್ನು ನೋಡುತ್ತಿದ್ದು ಅದರಿಂದ ಪ್ರಭಾವಿತರಾಗುತ್ತಾರೆ. ಲೋಕವೆಲ್ಲವೂ ಸುಖವಾಗಿದ್ದಾಗ ಅವರೂ ಸಂತೋಷಿಸುತ್ತಾರೆ. ಲೋಕವು ಕಷ್ಟಕ್ಕೀಡಾಗಿದ್ದಾಗ ಅದನ್ನು ನೋಡಿ ಅವರೂ ದುಃಖಿಸುತ್ತಾರೆ.

ಸಂಜಯ! ಸರ್ವಸಂಗಪರಿತ್ಯಾಗಮಾಡಿರುವ ಋಷಿಗಳೇ ಸುಖ-ದುಃಖಗಳಿಗೆ ವಿಷಯರಾಗುವರೆಂದಮೇಲೆ–ಪುತ್ರ, ರಾಜ್ಯ, ಪತ್ನೀ, ಪೌತ್ರ ಮತ್ತು ಬಂಧು-ಬಾಂಧವರು ಇತ್ಯಾದಿ ಸಾವಿರಾರು ವಿಧವಾದ ಬಂಧನಗಳನ್ನು ಕಟ್ಟಿಕೊಂಡು ಮೋಹವಶನಾಗಿರುವ ನನ್ನ ವಿಷಯದಲ್ಲಿ ಹೇಳತಕ್ಕದ್ದೇನಿದೆ?

ಸಂಜಯ! ಈ ಸಂಕಟಸಮಯದಲ್ಲಿ ಉಚಿತವಾದ ಕಾರ್ಯಮಾಡಲು ನಾನು ಹೇಗೆ ಸಮರ್ಥನಾಗುತ್ತೇನೆ? ಸರ್ವವಿನಾಶವನ್ನು ತಪ್ಪಿಸಲು ನನಗೆ ಖಂಡಿತವಾಗಿಯೂ ಸಾಧ್ಯವಿಲ್ಲ. ನಾನೆಷ್ಟೇ ಯೋಚಿಸಿದರೂ ಕುರುಗಳ ವಿನಾಶವನ್ನೇ ಕಾಣುತ್ತಿದ್ದೇನೆ. ಬೇರಾವ ಫಲಿತಾಂಶವೂ ನನ್ನ ಮನಸ್ಸಿಗೆ ಕಂಡುಬರುತ್ತಿಲ್ಲ. ದ್ಯೂತವೇ ಕುರುಗಳ ಇಂದಿನ ವಿಪತ್ತಿಗೆ ಕಾರಣವಾಯಿತು. ಮಂದಬುದ್ಧಿಯವನಾದ, ಐಶ್ವರ್ಯಕಾಮನಾದ, ಕಡುಲೋಭಿಯಾದ ದುರ್ಯೋಧನನಿಂದಲೇ ಈ ಪಾಪಕಾರ್ಯವು ಮಾಡಲ್ಪಟ್ಟಿತು. ಸಂಜಯ! ಈಗ ಯಾರನ್ನು ತೆಗಳಿಯೂ ಪ್ರಯೋಜನವಿಲ್ಲ. ಬಹು ತೀವ್ರಗತಿಯಿಂದ ಸಾಗಿಹೋಗುತ್ತಿರುವ ಕಾಲಧರ್ಮವೇ ಎಲ್ಲಕ್ಕೂ ಕಾರಣವೆಂದು ನಾನು ಭಾವಿಸುತ್ತೇನೆ. ಕುರುಪ್ರವೀರರ ವಿನಾಶವು ಓಡುತ್ತಿರುವ ಕಾಲನಿಯಮಕ್ಕೆ ಸೇರಿದ್ದಾಗಿದೆ. ಅಂತಹ ಕಾಲಚಕ್ರದಲ್ಲಿ ನಾನೊಂದು ನೇಮಿಯಿದ್ದಂತೆ. (ಅದರ ಜೊತೆಯಲ್ಲಿಯೇ ನಾನೂ ಹೋಗಬೇಕಾಗಿದೆ.) ಪಲಾಯನಮಾಡಿ ಈ ಕಾಲ ಧರ್ಮದಿಂದ ತಪ್ಪಿಸಿಕೊಳ್ಳಲು ಶಕ್ಯವಿಲ್ಲ. ಏನು ಮಾಡಲಿ? ಹೇಗೆ ಮಾಡಲಿ? ಎಲ್ಲಿಗೆ ಹೋಗಲಿ? ಕಾಲವಶರಾಗಿ ಹೋಗಿರುವ ಈ ಮಂದಬುದ್ಧಿಯವರಾದ ಕುರುಗಳು ವಿನಾಶಹೊಂದುವುದಂತೂ ನಿಶ್ಚಯ, ಸಂಜಯ! ನನ್ನ ನೂರು ಮಂದಿ ಮಕ್ಕಳೂ ಸತ್ತುಹೋದನಂತರ ನನಗೆ ನಿಜವಾದ ಪ್ರಜ್ಞೆಯೆಂಬುದೇ ಇರುವುದಿಲ್ಲ. ಆಗ ಏನನ್ನೂ ಮಾಡಲಾರದವನಾಗಿ ಅಂತಃಪುರದ ಸ್ತ್ರೀಯರ ಹಾಹಾಕಾರಶಬ್ದವನ್ನು ಅನವರತವಾಗಿ ಕೇಳುವೆನು. ಇಷ್ಟಾದರೂ ಮೃತ್ಯುವು ನನ್ನನ್ನು ಸಮೀಪಿಸುತ್ತದೆಯೇ?

ಸಂಜಯ! ಅತಿತೀಕ್ಷ್ಣವಾದ ಬೇಸಿಗೆಯಲ್ಲಿ ಹೊತ್ತಿಕೊಂಡು ಧಗ-ಧಗನೆ ಉರಿಯುತ್ತಿರುವ ಕಾಡುಗಿಚ್ಚು ಗಾಳಿಯ ಸಹಾಯದಿಂದ ಹುಲ್ಲಿನ ರಾಶಿಯನ್ನು (ಪೊದೆಯನ್ನು) ಕ್ಷಣಮಾತ್ರದಲ್ಲಿ ಭಸ್ಮಮಾಡುವಂತೆ–ಗದಾ

ಪಾಣಿಯಾದ ಭೀಮಸೇನನು ಅರ್ಜುನನೊಡಗೂಡಿ ನಮ್ಮವರೆಲ್ಲರನ್ನೂ ಸಂಹಾರಮಾಡಿಬಿಡುತ್ತಾನೆ.”

ಜ೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಅರ್ಜುನನಿಂದ ತನಗುಂಟಾಗಿರುವ ಭಯವನ್ನು ವ್ಯಕ್ತಪಡಿಸಿದುದು

ಧೃತರಾಷ್ಟ್ರನು ಮುಂದುವರಿದು ಹೇಳುತ್ತಾನೆ :

“ಸಂಜಯ! ಪಾಂಡವರಲ್ಲೊಬ್ಬನಾದ ಭೀಮಸೇನನಿಂದ ನನಗುಂಟಾಗಿರುವ ಭಯವನ್ನು ನಿನ್ನ ಮುಂದೆ ಹೇಳಿಕೊಂಡೆನು. ನನಗೆ ಭಯವುಂಟಾಗಿರುವುದು ಭೀಮನೊಬ್ಬನಿಂದಲೇ ಅಲ್ಲ. ಅರ್ಜುನನ ವಿಷಯದಲ್ಲಿಯೂ ನಾನು ಭಯಪಡುತ್ತಿದ್ದೇನೆ. ಯಾವನು ಸುಳ್ಳಾಡಿದನೆಂಬುದನ್ನೇ ನಾವಿದುವರೆಗೂ ಕೇಳಿಯೇ ಇಲ್ಲವೋ–ಅಂತಹ ಧನಂಜಯನು ಯಾರ ಪಕ್ಷವನ್ನು ಹಿಡಿದು ಯುದ್ಧಮಾಡಲು ನಿಲ್ಲುವನೋ–ಅವರಿಗೆ ಈ ಮೂರು ಲೋಕಗಳೂ ಅಧೀನವಾಗುತ್ತವೆ. ಮೂರು ಲೋಕಗಳನ್ನೂ ಧನಂಜಯನು ಏಕಾಕಿಯಾಗಿ ಗೆದ್ದುಕೊಡಬಲ್ಲನು. ನಾನೂ ಸಹ ಅನೇಕಪ್ರಕಾರವಾಗಿ ಚಿಂತಿಸುತ್ತಿದ್ದೇನೆ. ನನ್ನ ಪಕ್ಷದಲ್ಲಿರುವ ಅತಿರಥ-ಮಹಾರಥರ ಬಲಾಬಲಗಳನ್ನೂ ತೋಲನಮಾಡುತ್ತಿದ್ದೇನೆ. ಆದರೆ ಅಹರ್ನಿಶಿ ನಾನೆಷ್ಟೇ ಚಿಂತಿಸಿದರೂ ರಥದಲ್ಲಿ ಕುಳಿತು ಗಾಂಡೀವಿಯನ್ನು ಎದುರಿಸುವ ಸಾಮರ್ಥ್ಯವಿರುವವನನ್ನು ನಾನು ಕಾಣದವನಾಗಿದ್ದೇನೆ. ಹೃದಯವನ್ನು ಭೇದಿಸುವಂತಹ ಕರ್ಣಿಕ ಮತ್ತು ನಾಲೀಕಗಳೇ ಮೊದಲಾದ ಬಾಣಗಳ ವರ್ಷವನ್ನೇ ನಿರಂತರವಾಗಿ ಸುರಿಸುವ ಗಾಂಡೀವಧನ್ವನಾದ ಅರ್ಜುನನಿಗೆ ಸಮಾನನೆನಿಸಿ ಅವನೆದುರಾಗಿ ನಿಂತು ಯುದ್ಧಮಾಡುವವನು ನಮ್ಮ ಪಕ್ಷದಲ್ಲಿ ಯಾರೂ ಇರುವುದಿಲ್ಲ. ಸಂಜಯ! ಒಂದು ವೇಳೆ ಮಹಾವೀರರಾದ, ನರರ್ಷಭರಾದ, ಸಕಲಾಸ್ತ್ರ ವಿಶಾರದರಾದ, ಬಲಿಷ್ಠರಲ್ಲಿ ಶ್ರೇಷ್ಠರಾದ, ಯುದ್ಧದಲ್ಲಿ ಅಪರಾಜಿತರಾದ ದ್ರೋಣ-ಕರ್ಣರು ಅರ್ಜುನನನ್ನು ಎದುರಿಸಿ ನಿಂತು ಯುದ್ಧಮಾಡಿಯಾರು.

ಆದರೆ ಅರ್ಜುನನನ್ನು ಪರಾಜಯಗೊಳಿಸಿ ನನಗೆ ವಿಜಯಗಳಿಸಿಕೊಡುವರೆಂಬ ವಿಷಯದಲ್ಲಿ ನನಗೆ ಭರವಸೆಯಿಲ್ಲ. ಕಾರಣವಿಷ್ಟೆ, ಸಂಜಯ! ಕರ್ಣನು ಮಹಾದಯಾಳು ; ಮೇಲಾಗಿ ಪ್ರಮಾದೀ. ಆಚಾರ್ಯರಾದರೋ ವೃದ್ಧರು ; ಮಿಗಿಲಾಗಿ ಅರ್ಜುನನ ಗುರುಗಳು. ಆಚಾರ್ಯದ್ರೋಣರಿಗೆ ಅರ್ಜುನನೊಬ್ಬನೇ ಅಚ್ಚುಮೆಚ್ಚಿನ ಬಹುಪ್ರಿಯನಾದ ಶಿಷ್ಯ. ಈ ಕಾರಣಗಳಿಂದಾಗಿ ದ್ರೋಣ-ಕರ್ಣರು ಅರ್ಜುನನನ್ನು ಎದುರಿಸಿ ನಿಂತು ಯುದ್ಧಮಾಡಿದರೂ ವಿಜಯವು ಸಂಶಯಾಸ್ಪದವೇ ಸರಿ. ಪಾರ್ಥನು ಮಹಾಬಲಿಷ್ಠನು ; ಸಮರ್ಥನು ; ಧನುಸ್ಸನ್ನು ದೃಢವಾಗಿ ಹಿಡಿದು ನಿಲ್ಲುವವನು. ಅವನಿಗೆ ಆಲಸ್ಯವೆಂಬುದೇ ಇಲ್ಲ. ಆಲಸ್ಯವನ್ನು ಜಯಿಸಿರತಕ್ಕವನು. ಅವನೊಡನೆ ಬಹುಭಯಂಕರವಾದ ಯುದ್ಧವನ್ನೇ ಮಾಡಬೇಕಾಗುತ್ತದೆ. ಆದರೂ ಸರ್ವಪ್ರಕಾರದಿಂದಲೂ ಅರ್ಜುನನು ಅಪರಾಜಿತನಾಗಿಯೇ ಹೊರಬರುತ್ತಾನೆ. ಪಾಂಡವರಲ್ಲಿ ಎಲ್ಲರೂ ಅಸ್ತ್ರವಿಶಾರದರು. ಮಹಾಶೂರರು. ಮಹಾಯಶಸ್ಸನ್ನೂ ಗಳಿಸಿರುತ್ತಾರೆ. ಅವರು ಅಮರೈಶ್ವರ್ಯವನ್ನಾದರೂ ತೊರೆದಾರು ; ಆದರೆ ಜಯವನ್ನು ಮಾತ್ರ ಖಂಡಿತವಾಗಿಯೂ ತೊರೆಯಲಾರರು. ಸಂಜಯ! ನಿಜವಾಗಿ ಹೇಳುವುದಾದರೆ ದ್ರೋಣ-ಕರ್ಣರ ಸಹಾಯವಿರುವುದರಿಂದಲೇ ದುರ್ಯೋಧನನು ಯುದ್ಧಪ್ರಿಯನಾಗಿರುತ್ತಾನೆ. ಅರ್ಜುನನನ್ನು ಅವಲಂಬಿಸಿ ಪರಮಧಾರ್ಮಿಕನಾದ ಯುಧಿಷ್ಠಿರನೂ ಯುದ್ಧಮಾಡಲು ನಿಶ್ಚಯಿಸಿದ್ದಾನೆ. ನಮ್ಮ ಕಡೆಯ ದ್ರೋಣ-ಕರ್ಣರ ವಧೆಯಾದರೂ ಶಾಂತಿಯು ನೆಲೆಸುತ್ತದೆ. ಅರ್ಜುನನ ವಧೆಯಾದರೂ ಶಾಂತಿಯು ನೆಲೆಸುತ್ತದೆ. ಆದರೆ ಅರ್ಜುನನ ಹಂತಕನು ಖಂಡಿತವಾಗಿಯೂ ಇರುವುದಿಲ್ಲ. ಹಂತಕನಿರಲಿ; ಅವನನ್ನು ಪರಾಜಯಗೊಳಿಸುವವನೂ ಇರುವುದಿಲ್ಲ. ಮೇಲಾಗಿ ಅವನಿಗೆ ನನ್ನ ಮಂದಬುದ್ಧಿಯ ಮಕ್ಕಳ ವಿಷಯದಲ್ಲಿ ಉದ್ಭೂತವಾಗಿರುವ ಕೋಪವು (ನನ್ನ ಮಕ್ಕಳ ವಧೆಯ ಹೊರತಾಗಿ) ಹೇಗೆ ತಾನೇ ಉಪಶಮನಗೊಳ್ಳುವುದು?

**ಅನ್ಯೇಽಪ್ಯಸ್ತ್ರಾಣಿ ಜಾನನ್ತಿ ಜೇಯನ್ತೇ ಚ ಜಯನ್ತಿ ಚ ।**
**ಏಕಾನ್ತವಿಜಯಸ್ತ್ವೇವ ಶ್ರೂಯತೇ ಫಾಲ್ಗುನಸ್ಯ ಹ ॥೯॥**

ಸಂಜಯ! ಶಸ್ತ್ರಾಸ್ತ್ರವಿಶಾರದರು ಅನೇಕರಿದ್ದಾರೆ. ಉತ್ತಮಯೋಧ

ರಿದ್ದಾರೆ. ಆದರೆ ಎಲ್ಲರೂ ಒಮ್ಮೆ ಸೋಲುತ್ತಾರೆ.; ಮತ್ತೊಮ್ಮೆ ಗೆಲ್ಲುತ್ತಾರೆ. ಇದನ್ನು ನಾವು ಪದೇ ಪದೇ ಕೇಳುತ್ತಿರುತ್ತೇವೆ. ಆದರೆ ಅರ್ಜುನನು ಎಲ್ಲೇ ಯುದ್ಧಮಾಡಿದರೂ, ಯಾರೊಡನೆಯೇ ಯುದ್ಧಮಾಡಿದರೂ ಗೆದ್ದುಬಂದನೆಂಬ ಏಕಪ್ರಕಾರವಾದ ವಾರ್ತೆಯೇ ಕೇಳಿಬರುತ್ತಿದೆಯೇ ಹೊರತು–'ಅರ್ಜುನನು ಈ ಒಂದು ಕಡೆಯಲ್ಲಿ ಸೋತುಹೋದನು'– ಎಂಬ ವಾರ್ತೆಯನ್ನೇ ನಾವಿದುವರೆಗೂ ಕೇಳಿರುವುದಿಲ್ಲ. ಖಾಂಡವದಾಹಸಮಯದಲ್ಲಿ ಅರ್ಜುನನು ಮೂವತ್ತು ಮೂರು ದೇವತೆಗಳನ್ನೂ ಯುದ್ಧಕ್ಕೆ ಆಹ್ವಾನಿಸಿ, ಖಾಂಡವವನವನ್ನು ಸಂರಕ್ಷಿಸಲು ಇಂದ್ರಪ್ರಮುಖರಾಗಿ ಬಂದ ದೇವತೆಗಳನ್ನು ಪರಾಜಯಗೊಳಿಸಿ ಅಗ್ನಿದೇವನನ್ನು ತೃಪ್ತಿಗೊಳಿಸಿದನು. ಅವನಿಗೆ ಯಾವಾಗಲಾದರೂ ಪರಾಜಯ ವಾಗಿದೆಯೇ–ಎಂಬುದನ್ನು ನಾವು ತಿಳಿಯದವರಾಗಿದ್ದೇವೆ. ಅವನು ಎಲ್ಲ ಕಡೆಗಳಲ್ಲಿಯೂ ವಿಜಯಗಳಿಸುವುದರಲ್ಲಿ ನನಗಾವ ಆಶ್ಚರ್ಯವೂ ಕಾಣುತ್ತಿಲ್ಲ. ಯಾವನ ಸಾರಥಿಯು ಸ್ವಭಾವ, ಶೀಲ ಮತ್ತು ಸದ್ವೃತ್ತಗಳಲ್ಲಿ ಅವನಿಗೆ ಅನುರೂಪನಾಗಿರುವ ಹೃಷೀಕೇಶನೇ ಆಗಿರುವನೋ– ಅಂತಹವನಿಗೆ ಯುದ್ಧದಲ್ಲಿ ಪರಾಜಯವೆಂಬುದೆಲ್ಲಿಯದು? ಮಾತಲಿಯ ಸಾರಥ್ಯವನ್ನು ಪಡೆದು ಇಂದ್ರನು ಸರ್ವತ್ರ ವಿಜಯಗಳಿಸುವಂತೆ–ಶ್ರೀಕೃಷ್ಣನ ಸಾರಥ್ಯದಿಂದ ಅರ್ಜುನನೂ ಸರ್ವತ್ರ ವಿಜಯಗಳಿಸುತ್ತಾನೆ.

ಒಂದೇ ರಥದಲ್ಲಿ ಯುದ್ಧಸನ್ನದ್ಧರಾಗಿ ಕುಳಿತ ಶ್ರೀಕೃಷ್ಣಾರ್ಜುನರು ಮತ್ತು ಹೆದೆಯೇರಿಸಲ್ಪಟ್ಟ ಗಾಂಡೀವಧನುಸ್ಸು–ಈ ಮೂರೂ ಪ್ರತ್ಯೇಕ-ಪ್ರತ್ಯೇಕವಾಗಿಯೇ ಮಹಾತೇಜಸ್ಸುಗಳೆಂದು ಪರಿಗಣಿತವಾಗಿವೆ. ಆ ಮೂರು ತೇಜಸ್ಸುಗಳೂ ಈಗ ಒಂದೇ ಕಡೆಯಲ್ಲಿ ಸೇರಿಕೊಂಡುಬಿಟ್ಟಿವೆಯೆಂದು ನಾವು ಕೇಳಿದ್ದೇವೆ.

ಸಂಜಯ! ಅಂತಹ ಅಮೋಘವಾದ ತೇಜಃಪುಂಜಯುಕ್ತವಾದ ಧನುಸ್ಸೂ ನಮ್ಮಲ್ಲಿಲ್ಲ. ಅಂತಹ ತೇಜಃಪುಂಜಯುಕ್ತನಾದ ರಥಿಕನೂ ನಮ್ಮ ಕಡೆಯಲ್ಲಿಲ್ಲ. ಶ್ರೀಕೃಷ್ಣನಂತಹ ತೇಜಃಪುಂಜಯುಕ್ತನಾದ ಸಾರಥಿಯೂ ನಮ್ಮ ಪಕ್ಷದಲ್ಲಿರುವುದಿಲ್ಲ. ದುರ್ಯೋಧನನ ವಶಾನುವರ್ತಿ ಗಳಾದ ಮಂದಬುದ್ಧಿಯವರಾದ ಈ ನನ್ನ ಮಕ್ಕಳು ಈ ವಿಷಯವನ್ನು

ತಿಳಿದವರಾಗಿಲ್ಲ. ಜಾಜ್ವಲ್ಯಮಾನವಾದ ವಜ್ರಾಯುಧವು ತಲೆಯ ಮೇಲೆ ಬಿದ್ದರೂ ಒಮ್ಮೆ ಬದುಕಿಕೊಳ್ಳುವ ಸಂಭವವುಂಟು. ಆದರೆ ಕಿರೀಟಿಯಿಂದ ಬಿಡಲ್ಪಟ್ಟ ಬಾಣಗಳು ಮಾತ್ರ ಶತ್ರುಪಕ್ಷವನ್ನು ನಿಃಶೇಷವಾಗಿ ಧ್ವಂಸಗೊಳಿಸುತ್ತವೆ. ಯಾರಾದರೂ ಉಳಿದುಕೊಂಡಾರೆಂದು ಆಶಿಸಲು ಸಾಧ್ಯವೇ ಇಲ್ಲ.



ಯುದ್ಧದಲ್ಲಿ ಧನಂಜಯನು ನಮ್ಮ ಸೈನಿಕರ ಮೇಲೆ ಬಾಣಗಳ ಮಳೆಗರೆಯುತ್ತಿರುವಂತೆಯೂ–ಅವರ ಪ್ರಾಣಗಳನ್ನು ಸತತವಾಗಿ ಅಪಹರಿಸುತ್ತಿರುವಂತೆಯೂ ಮತ್ತು ನಮ್ಮ ಸೈನಿಕರ ಶರೀರಗಳಿಂದ ಶಿರಸ್ಸುಗಳನ್ನು ಕತ್ತರಿಸಿ ಹಾಕುತ್ತಿರುವಂತೆಯೂ ನನಗೆ ಭಾಸವಾಗುತ್ತಿದೆ, ಸಂಜಯ! ಗಾಂಡೀವ ಧನುಸ್ಸಿನಿಂದ ಉದ್ಭೂತವಾಗುವ ಬಾಣರೂಪವಾದ ತೇಜಸ್ಸು–ಹೊತ್ತಿಕೊಂಡು

ಉರಿಯುವ ಕಾಡುಗಿಚ್ಚಿನಂತೆ–ಸರ್ವತ್ರ ವ್ಯಾಪಿಸಿ ನನ್ನ ಮಕ್ಕಳ ಅಪಾರ ಸೈನ್ಯವನ್ನೇ ದಹಿಸಿಬಿಡಬಹುದಲ್ಲವೇ? ಶ್ರೀಕೃಷ್ಣನ ಸಾರಥ್ಯದಿಂದಲೇ ಉಂಟಾಗುವ ರಥದ ವಿಶೇಷಧ್ವನಿಯನ್ನೂ ಮತ್ತು ಸವ್ಯಸಾಚಿಯ ಧನುಷ್ಟೇಂಕಾರವನ್ನೂ ಕೇಳಿ ನಮ್ಮ ಕೌರವಸೈನಿಕರೆಲ್ಲರೂ ಭಯಗ್ರಸ್ತರಾಗುತ್ತಾರೆಂದು ನನಗೆ ಭಾಸವಾಗುತ್ತಿದೆ.

ಒಂದು ದೊಡ್ಡ ಕಾಡುಗಿಚ್ಚು ಹುಟ್ಟಿಕೊಂಡು ಪ್ರಚಂಡವಾಯುವಿನಿಂದ ಪ್ರವರ್ಧಿಸಿ, ಮಹಾಜ್ವಾಲೆಗಳ ಮೂಲಕವಾಗಿ ಸರ್ವತ್ರ ವ್ಯಾಪಿಸುತ್ತಾ, ಅನೇಕಾನೇಕ ಪೊದೆಗಳನ್ನು ಭಸ್ಮಮಾಡಿಬಿಡುವಂತೆ–ನನ್ನ ಮಕ್ಕಳನ್ನೂ ನನ್ನ ಕಡೆಯ ಸೈನಿಕರನ್ನೂ ಅರ್ಜುನನು ಭಸ್ಮಮಾಡಿಬಿಡುತ್ತಾನೆ. ಯಾವ ಸಮಯದಲ್ಲಿ ಶಸ್ತ್ರಪಾಣಿಯಾದ ಅರ್ಜುನನು ಸಮರಭೂಮಿಯಲ್ಲಿ ರೋಷಾಭಿಭೂತನಾಗಿ ನಿಶಿತವಾದ ಬಾಣಸಮೂಹಗಳನ್ನು ಶತ್ರುಸೈನ್ಯದ ಮೇಲೆ ಸುರಿಸುತ್ತಾನೆಯೋ–ಆ ಸಮಯದಲ್ಲವನು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ, ಸಕಲಪ್ರಾಣಿಗಳ ಪ್ರಾಣಗಳನ್ನೂ ಅಪಹರಿಸುವ ಅಂತಕನಂತೆಯೇ ಕಾಣುತ್ತಾನೆ. ಒಟ್ಟಿನಲ್ಲಿ ಹೇಳುವುದಾದರೆ, ಸಂಜಯ! ಯಾವ ರೀತಿ ಆಗಬೇಕೋ ಹಾಗೆಯೇ ನಡೆಯುತ್ತದೆ. ಅದರಿಂದ ಪಾರಾಗುವುದು ಅಸಂಭವವೇ ಸರಿ. ಯುದ್ಧವಾಗುತ್ತಿರುವ ಸಮಯದಲ್ಲಿ ನಾನು ಅರಮನೆಯಲ್ಲಿ ಕುಳಿತು ಕುರುರಾಜಪುತ್ರರ ಮತ್ತು ಸೈನಿಕರ ದಾರುಣವಾದ ಅವಸ್ಥೆಗಳನ್ನೂ ಕೇಳುವೆನು. ಆ ಸಮಯದಲ್ಲಿ ರಣಾಂಗಣದ ಎಲ್ಲ ಕಡೆಗಳಿಂದಲೂ ನನ್ನ ಬಳಿಗೆ ಬರುವ ವಾರ್ತೆಯೆಂದರೆ–'**ಕ್ಷಯಃ ಕಿಲಾಯಂ ಭರತಾನುಪೈತಿ**'–'ಭರತವಂಶದ ರಾಜಕುಮಾರರನ್ನು ಕ್ಷಯವು ಆವರಿಸಿದೆ. ಕ್ಷಣ-ಕ್ಷಣಕ್ಕೂ ಭರತಕುಲ ರಾಜಕುಮಾರರು ನಾಶ ಹೊಂದುತ್ತಿದ್ದಾರೆ'–ಎಂಬುದೇ ಆಗಿರುವುದು. ಅಲ್ಲವೇ? ಸಂಜಯ!"

೫೨ನೆಯ ಅಧ್ಯಾಯವು ಮುಗಿಯಿತು.

## ಧೃತರಾಷ್ಟ್ರನು ಕೌರವಸಭೆಯಲ್ಲಿ ಯುದ್ಧದ ಭೀಕರ ಪರಿಣಾಮವನ್ನು ವಿವರಿಸಿ ಶಾಂತಿಯ ಪ್ರಸ್ತಾಪಮಾಡಿದುದು

ಮಹಾರಾಜ! ಧೃತರಾಷ್ಟ್ರನು ಪುನಃ ಸಂಜಯನನ್ನು ಕುರಿತು ಹೇಳತೊಡಗಿದನು.:

"ಸಂಜಯ! ಯಾವ ರೀತಿಯಲ್ಲಿ ಪಾಂಡವರೆಲ್ಲರೂ ಮಹಾಪರಾಕ್ರಮಿಗಳಾಗಿಯೂ ಮತ್ತು ವಿಜಯಾಭಿಲಾಷಿಗಳಾಗಿಯೂ ಇರುವರೋ–ಅದೇ ರೀತಿಯಲ್ಲಿ ಅವರ ಸಹಾಯಕ್ಕಾಗಿ ಬಂದಿರುವವರೆಲ್ಲರೂ ಜಯವನ್ನು ಗಳಿಸಬೇಕೆಂದೇ ಬದ್ಧಕಟಿಗಳಾಗಿ ತಮ್ಮ ಪ್ರಾಣಗಳನ್ನಾದರೂ ಅರ್ಪಣೆಮಾಡಲು ಸಿದ್ಧರಾಗಿರುತ್ತಾರೆ. ಮಹಾಪರಾಕ್ರಮಶಾಲಿಗಳಾದ ಪಾಂಚಾಲರೂ, ಕೇಕಯರೂ, ಮತ್ಸ್ಯರೂ, ಮಾಗಧರೂ ಮತ್ತು ವತ್ಸದೇಶೀಯ ರಾಜರೂ–ಅವರ ಕಡೆಗೆ ಬಂದು ಸೇರಿಕೊಂಡಿರುವರೆಂಬ ವಿಷಯವನ್ನು ನೀನೇ ಹೇಳಿದೆಯಲ್ಲವೇ? ಅವರಲ್ಲದೇ ಇನ್ನೂ ಅನೇಕ ಮಹಾಪರಾಕ್ರಮಿಗಳಾದ ರಾಜರೂ ಅವರ ಕಡೆಗೆ ಬಂದಿರುತ್ತಾರೆ.

ಯಾವನು ತನ್ನ ಇಚ್ಛಾಮಾತ್ರದಿಂದಲೇ ಇಂದ್ರಸಹಿತವಾದ ಈ ಮೂರು ಲೋಕಗಳನ್ನೂ ತನ್ನ ವಶಮಾಡಿಕೊಳ್ಳಲು ಸಮರ್ಥನೋ–ಅಂತಹ ಬಲಿಷ್ಠನಾದ, ಪ್ರಪಂಚದ ಉತ್ಪತ್ತಿಗೆ ಕಾರಣನಾದ ಶ್ರೀಕೃಷ್ಣನು ಪಾಂಡವರಿಗೆ ವಿಜಯವನ್ನು ಸಾಧಿಸಿಕೊಡಲು ಸೊಂಟಕಟ್ಟಿ ನಿಂತಿದ್ದಾನೆ.

ಸಾತ್ಯಕಿಯು ಸಮಸ್ತವಾದ ಧನುರ್ವಿದ್ಯೆಯನ್ನು ಅತ್ಯಲ್ಪಕಾಲದಲ್ಲಿಯೇ ಅರ್ಜುನನಿಂದ ಪಡೆದುಕೊಂಡನು. ಅಂತಹ ಸಾತ್ಯಕಿಯಿಂದು–ರೈತನು ಭೂಮಿಯಲ್ಲಿ ಸಾಲು-ಸಾಲಾಗಿ ಬೀಜವನ್ನು ಬಿತ್ತುವಂತೆ–ಸಮರಾಂಗಣದಲ್ಲಿ ಪಾಂಡವರ ಕಡೆಯಲ್ಲಿ ನಿಂತು ಬಾಣಗಳೆಂಬ ಬೀಜಗಳನ್ನು ಬಿತ್ತಲು ಸಿದ್ಧನಾಗಿ ನಿಂತಿದ್ದಾನೆ.

ಕ್ರೂರಕರ್ಮಿಯಾದ, ಮಹಾರಥನಾದ, ಪಾಂಚಾಲದೇಶೀಯನಾದ, ಸಕಲಮಹಾಸ್ತ್ರಗಳನ್ನೂ ತಿಳಿದಿರುವ ಧೃಷ್ಟದ್ಯುಮ್ನನು ನಮ್ಮ ಸೇನೆಯ ಮಧ್ಯದಲ್ಲಿ ನುಗ್ಗಿ ಯುದ್ಧಮಾಡುತ್ತಾನೆ. ಯುಧಿಷ್ಠಿರನು ಕುಪಿತ

ನಾದನೆಂದರೇ ನಾನು ಭಯಪಡುತ್ತೇನೆ. ಅರ್ಜುನನ ಪರಾಕ್ರಮವನ್ನು ಸ್ಮರಿಸಿದೊಡನೆಯೇ ನನಗೆ ಬಹಳ ಭಯವಾಗುತ್ತದೆ. ಯಮಳರಿಂದಲೂ ಮತ್ತು ಭೀಮಸೇನನಿಂದಲೂ ನನಗೆ ಬಹಳ ಭಯವಿದೆ. ಮನುಷ್ಯೇಂದ್ರರಾದ ಪಾಂಡವರು ಯಾವಾಗ ಅಮಾನುಷವಾದ ಬಾಣಗಳ ಜಾಲವನ್ನು (ಬಲೆಯನ್ನು) ಯುದ್ಧಭೂಮಿಯ ಸುತ್ತಲೂ ಪ್ರಸರಿಸಿಬಿಡುವರೋ–ಆ ಸಮಯದಲ್ಲಿ ಆ ಮಹಾಜಾಲವನ್ನು ದಾಟಲು ನನ್ನ ಸೈನಿಕರಿಗೆ ಖಂಡಿತ ವಾಗಿಯೂ ಸಾಧ್ಯವಾಗುವುದಿಲ್ಲ. ಈ ಕಾರಣದಿಂದಲೇ ನಾನು ಶೋಕ ಪಡುತ್ತೇನೆ.

ಸಂಜಯ! ಪಾಂಡುನಂದನನಾದ ಯುಧಿಷ್ಠಿರನು ದರ್ಶನೀಯನು. ಅವನನ್ನು ಪುನಃ ಪುನಃ ನೋಡುತ್ತಿರಬೇಕೆನ್ನಿಸುತ್ತದೆ. ಅವನು ಮನನ ಶೀಲನು; ಶ್ರೀಮಂತನು; ಬ್ರಹ್ಮರ್ಷಿಗಳಿಗೆ ಸಮಾನವಾದ ತೇಜಸ್ಸುಳ್ಳವನು; ಮೇಧಾವಿಯು; ಸುನಿಶ್ಚಿತವಾದ ಬುದ್ಧಿಯಿಂದ ಕೂಡಿರುವವನು; ಧರ್ಮಾತ್ಮನು; ಸನ್ಮಿತ್ರರಿಂದಲೂ, ವಿಧೇಯರಾದ ಮತ್ತು ಪ್ರಾಜ್ಞರಾದ ಅಮಾತ್ಯರಿಂದಲೂ ಸುಸಂಪನ್ನನಾಗಿರತಕ್ಕವನು; ಒಳ್ಳೆಯ ಯುದ್ಧಕುಶಲರನ್ನು ಪಡೆದಿರತಕ್ಕವನು; ಮಹಾರಥರಾದ ಮತ್ತು ವೀರರಾದ ಸಹೋದರ ರಿಂದಲೂ ಮತ್ತು ಮಾವಂದಿರುಗಳಿಂದಲೂ ಕೂಡಿರತಕ್ಕವನು; ಧೈರ್ಯದಲ್ಲಿ ಪುರುಷವ್ಯಾಘ್ರನು; ಮಂತ್ರಾಲೋಚನೆಗಳನ್ನೂ ಬಹಳ ನಿಗೂಢವಾಗಿಡ ತಕ್ಕವನು; ಪರಮದಯಾಳುವು; ಬಹಳ ಉದಾರನು; ಲಜ್ಜಾಶೀಲನು; ಸತ್ಯವೇ ಪರಾಕ್ರಮವಾಗಿ ಉಳ್ಳವನು; ಬಹುಶ್ರುತನು.; ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು; ವೃದ್ಧರನ್ನು ಅನವರತವಾಗಿ ಸೇವಿಸ ತಕ್ಕವನು ; ಜಿತೇಂದ್ರಿಯನು–ಇಂತಹ ಸಕಲಗುಣಪರಿಪೂರ್ಣನಾದ, ಪ್ರಜ್ವಲಿ ಸುವ ಅಗ್ನಿಗೆ ಸಮಾನನಾಗಿರುವ ಯುಧಿಷ್ಠಿರನಿಗೆದುರಾಗಿ ಯಾವ ಮಂದಾ ತ್ಮನು ತಾನೇ ಯುದ್ಧಮಾಡಲು ಹೋಗುತ್ತಾನೆ? ಬುದ್ಧಿಗೆಟ್ಟವನು ಅಥವಾ ಮರಣಹೊಂದಲು ಇಚ್ಛಿಸುವವನು ಮಾತ್ರವೇ–ಪತಂಗದ ಹುಳುಗಳು ಅಗ್ನಿ ಯಲ್ಲಿ ತಾವೇ ತಾವಾಗಿ ಬಿದ್ದು ಸಾಯುವಂತೆ–ದುರ್ನಿವಾರ್ಯವಾದ ಪಾಂಡ ವಾಗ್ನಿಯಲ್ಲಿ ಬಿದ್ದುಸಾಯುತ್ತಾನೆ. ಯುಧಿಷ್ಠಿರನು, ಅಗ್ನಿಯನ್ನು ಆತ್ಮಸಮಾ ರೋಪಣೆಮಾಡಿಕೊಂಡ ಯಜಮಾನನಿಗೆ ಸಮಾನನಾಗಿರುತ್ತಾನೆ (ಕರ್ತವ್ಯ

ನಿಷ್ಠನಾಗಿರುತ್ತಾನೆ.) ನಾನು ಮೋಸದ ವ್ಯವಹಾರದಿಂದ ಅವನಿಗೆ ಬಹಳ ಅಪಚಾರವನ್ನು ಮಾಡಿರುತ್ತೇನೆ. ಈ ಕಾರಣದಿಂದಾಗಿ ಅವನು ಯುದ್ಧದಲ್ಲಿ ಮಂದರಾದ ನನ್ನ ಮಕ್ಕಳನ್ನು ಅಂತ್ಯಗೊಳಿಸುತ್ತಾನೆ."

ಸಂಜಯನೊಡನೆ ಹೀಗೆಂದು ಹೇಳಿದನಂತರ ಧೃತರಾಷ್ಟ್ರನು ತನ್ನ ಮಕ್ಕಳ ಕಡೆಗೆ ತಿರುಗಿ ಅವರನ್ನು ಕುರಿತು ಹೇಳುತ್ತಾನೆ :

"ಕುರುಕುಮಾರರೇ! ಪಾಂಡವರೊಡನೆ ಯುದ್ಧಮಾಡುವುದು ಉಚಿತ ವಲ್ಲವೆಂದು ನಾನು ಭಾವಿಸುತ್ತೇನೆ. ಯುದ್ಧವೇನಾದರೂ ನಡೆದರೆ–ಆ ಯುದ್ಧದಲ್ಲಿ ನಮ್ಮ ವಂಶವೇ ಸಂಪೂರ್ಣವಾಗಿ ವಿನಾಶವಾಗಿಹೋಗುತ್ತದೆ. ಇದು ನಿಶ್ಚಯ. ನಿಷ್ಕಲಂಕವಾದ ಬುದ್ಧಿಯಿಂದ ನಾನಿದನ್ನು ಹೇಳುತ್ತಿದ್ದೇನೆ. ಶಾಂತಿಸಂಧಾನದಿಂದ ಮಾತ್ರವೇ ನನ್ನ ಮನಸ್ಸು ಸಮಾಧಾನಗೊಳ್ಳುವುದು. ಒಂದು ವೇಳೆ ನಿಮಗೆ ಯುದ್ಧಮಾಡದಿರುವುದರಲ್ಲಿ ಇಚ್ಛೆಯುಂಟಾಗುವುದಾದರೆ ನಾನು ಶಾಂತಿಗಾಗಿ ಪುನಃ ಪುನಃ ಪ್ರಯತ್ನಿಸುತ್ತೇನೆ. ಯುದ್ಧದ ವಿಷಯವನ್ನು ಮನಸ್ಸಿಗೆ ತಂದುಕೊಂಡು ಕ್ಲೇಶವನ್ನು ಅನುಭವಿಸುತ್ತಿರುವ ನಮ್ಮ ವಿಷಯದಲ್ಲಿ ಧರ್ಮಜನು ತಿರಸ್ಕಾರಭಾವನೆಯನ್ನೆಂದಿಗೂ ತೋರಲಾರನು. ಅಧರ್ಮಮೂಲವಾದ ಕಲಹವನ್ನು ನಾವೇ ಮುಂದುವರಿಸಿಕೊಂಡು ಹೋಗುತ್ತಿರುವ ಕಾರಣ ನಮ್ಮ ವಿಷಯದಲ್ಲವನು ಜುಗುಪ್ಸಿತನಾಗಿರುತ್ತಾನೆ. (ಈ ಸಮಯದಲ್ಲಿ ನಾವೇ ಶಾಂತಿಗಾಗಿ ಪ್ರಯತ್ನಿಸಿದಲ್ಲಿ ಅವನದನ್ನು ಖಂಡಿತವಾಗಿಯೂ ಸ್ವಾಗತಿಸುತ್ತಾನೆ.)"

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ದುರ್ಯೋಧನನನ್ನು ತಡೆದು ನಿಲ್ಲಿಸುವಂತೆ ಸಂಜಯನು ಧೃತರಾಷ್ಟ್ರನಿಗೆ ಸಲಹೆ ನೀಡಿದುದು

ಜನಮೇಜಯ! ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ನೀನು ಈಗೇನು ಹೇಳುತ್ತಿರುವೆಯೋ ಅಂತೆಯೇ

ಎಲ್ಲವೂ ನಡೆಯುವುದು. ಪ್ರಸ್ತುತಸ್ಥಿತಿಯನ್ನು ಕುರಿತು ಸಮಾಲೋಚಿಸಿದರೆ ಯುದ್ಧದಲ್ಲಿ ಗಾಂಡೀವಧನುಸ್ಸಿನಿಂದ ಸಕಲಕ್ಷತ್ರಿಯರ ವಿನಾಶವೂ ಆಗಿಬಿಡುವುದೆಂಬುದು ಬಹುಸ್ಪಷ್ಟವಾಗಿ ಕಾಣುತ್ತಿದೆ. ಆದರೆ, ಮಹಾರಾಜ! ಈ ಒಂದು ವಿಷಯವು ಮಾತ್ರ ನನಗೆ ತಿಳಿಯದಾಗಿದೆ. ಅದೇನೆಂದರೆ : ನೀನು ಸರ್ವಜ್ಞನಾಗಿರುವೆ.; ತತ್ತ್ವಜ್ಞನಾಗಿರುವೆ. ಸವ್ಯಸಾಚಿಯಲ್ಲಿ ಎಂತಹ ಅತುಲಪರಾಕ್ರಮವಿದೆಯೆಂಬುದೂ ನಿನಗೆ ಸ್ಪಷ್ಟವಾಗಿ ತಿಳಿದಿದೆ. ಹೀಗಿದ್ದರೂ ನೀನು ನಿನ್ನ ಮಕ್ಕಳು ಹೇಳಿದಂತೇಕೆ ಕೇಳುತ್ತಿರುವೆ? ಅವರ ಅಧೀನಕ್ಕೇಕೆ ಒಳಪಟ್ಟಿರುವೆ? ಆದರೆ ನಿನ್ನ ಸ್ವಭಾವವನ್ನು ಕುರಿತು ಯೋಚಿಸಿದ್ದೇ ಆದರೆ, ನೀನು ಪಾಂಡವರಿಗೆ ಮೊದಲಿನಿಂದಲೂ ದ್ರೋಹವನ್ನೇ ಎಸಗುತ್ತಾ ಬಂದಿರುವೆ. ಪಾಂಡವರು ನಿನ್ನಿಂದ ಮೊದಲಿನಿಂದಲೂ ವಂಚಿತರಾಗುತ್ತಲೇ ಇದ್ದಾರೆ. ಆದುದರಿಂದ ಈಗ ನೀನು ಹೇಳುತ್ತಿರುವ ಮಾತುಗಳೂ ಸಮಯಕ್ಕೆ ತಕ್ಕಂತೆ ಹೇಳುವ ಮಾತುಗಳಾಗಿವೆಯೇ ಹೊರತು ಸ್ಥಿರವಾಗಿ ನಿಲ್ಲತಕ್ಕ ಮಾತುಗಳಲ್ಲವೆಂದು ಭಾವಿಸುತ್ತೇನೆ.

**ಪಿತಾ ಶ್ರೇಷ್ಠಃ ಸುಹೃದಶ್ಚ ಸಮ್ಯಕ್ಪ್ರಣಿಹಿತಾತ್ಮವಾನ್ ।**
**ಆಸ್ಥೇಯಂ ಹಿ ಹಿತಂ ತೇನ ನ ದ್ರೋಗ್ಧಾ ಗುರುರುಚ್ಯತೇ ॥೪॥**

ತಂದೆಯಾದವನು ಯಾವಾಗಲೂ ಉಚ್ಚತರದ ಸನ್ಮಿತ್ರನಂತಿರಬೇಕು. ನಿಶ್ಚಿತಬುದ್ಧಿಯುಳ್ಳವನಾಗಿರಬೇಕು. ತನ್ನನ್ನು ಆಶ್ರಯಿಸಿರುವವರಿಗೆ ಸರ್ವ ಪ್ರಕಾರದಿಂದಲೂ ಹಿತವನ್ನುಂಟುಮಾಡುವ ಅಭಿಲಾಷೆಯುಳ್ಳವನಾಗಿರ ಬೇಕು. ಈ ಗುಣಗಳಾವುವೂ ಇಲ್ಲದೇ ತನ್ನ ಮಕ್ಕಳ ವಿಷಯದಲ್ಲಿ ದ್ರೋಹವನ್ನೆಸಗುವವನು ತಂದೆಯೆಂದೂ ಎನಿಸಿಕೊಳ್ಳುವುದಿಲ್ಲ.; ಗುರುವೆಂದೂ ಎನಿಸಿಕೊಳ್ಳುವುದಿಲ್ಲ.

ಪಾಂಡವ-ಕೌರವರಿಬ್ಬರೂ ಸೇರಿ ದ್ಯೂತವಾಡುತ್ತಿದ್ದ ಕಾಲದಲ್ಲಿ–ನಿನ್ನ ಮಕ್ಕಳು ಬಾರಿ-ಬಾರಿಗೂ–'ಇದಂ ಜಿತಂ–ಈ ವಸ್ತುವು ನಮ್ಮಿಂದ ಜಯಿಸ ಲ್ಪಟ್ಟಿತು–ಇದಂ ಲಬ್ಧಂ–ಈ ವಸ್ತುವನ್ನು ನಾವು ಪಡೆದು ಕೊಂಡೆವು'–ಎಂದು ಹೇಳುತ್ತಿದ್ದುದನ್ನೂ ಪಾಂಡವರು ಪ್ರತಿಯೊಂದು ಆಟ ದಲ್ಲಿಯೂ ಸೋಲುತ್ತಿದ್ದುದನ್ನೂ ಕೇಳಿ, ನೀನು ಮುಗ್ಧಬಾಲಕನಂತೆ ಮುಗು

ಳ್ನಗೆಯನ್ನು ಬೀರುತ್ತಿದ್ದೆ. ಆ ಸಮಯದಲ್ಲಿ ನಿನ್ನ ಮಕ್ಕಳು ಪಾಂಡವರ ವಿಷಯದಲ್ಲಿ ಕರ್ಣಕಠೋರವಾದ ಮಾತುಗಳನ್ನಾಡುತ್ತಿದ್ದರೂ ನೀನದನ್ನು ಉಪೇಕ್ಷಿಸಿದೆ. ದ್ಯೂತದ ಮೂಲಕವಾಗಿಯೇ ಆದರೂ ನಿನ್ನ ಮಕ್ಕಳು ಅಖಂಡ ಸಾಮ್ರಾಜ್ಯವನ್ನು ಗೆದ್ದುಕೊಂಡರೆಂಬುದೇ ಅಂದು ನಿನ್ನ ಮಹಾನಂದಕ್ಕೆ ಕಾರಣವಾಗಿದ್ದಿತು. ಆದರಿಂದ ಮುಂದೆ ಮಹಾವಿನಾಶವು ಸಂಭವಿಸುವು ದೆಂಬುದನ್ನು ಅಂದು ನೀನು ಮನಗಾಣಲಿಲ್ಲ. ಮಹಾರಾಜ! ಈ ಕುರು ಜಾಂಗಲದೇಶವು ನಿನ್ನ ಪಿತ್ರಾರ್ಜಿತವಾದ ಆಸ್ತಿ. (ನೀನು ಸ್ವತಃ ಸಂಪಾದನೆ ಮಾಡಿದುದಲ್ಲ.) ಪಾಂಡವರಿಗೆ ನೀನು ರಾಜ್ಯವಿಭಾಗವನ್ನು ಮಾಡಿಕೊಟ್ಟ ನಂತರದಲ್ಲವರು ತಮ್ಮ ಭುಜಬಲ-ಪರಾಕ್ರಮಗಳಿಂದ ಅಖಂಡವಿಶ್ವವನ್ನೂ ಗೆದ್ದುಕೊಂಡರು. (ರಾಜ್ಯದ ವಿಸ್ತರಣೆಗೂ ನೀನು ಪ್ರಯತ್ನಿಸಿದವನಲ್ಲ.) ಆದರೆ ಈ ಅಖಂಡಸಾಮ್ರಾಜ್ಯವನ್ನೂ ನೀನೀಗ ವಂಚನೆಯ ದ್ಯೂತದ ಮೂಲಕವಾಗಿ ಪಡೆದುಕೊಂಡಿರುವೆ. ಬಾಹುಬಲ-ಪರಾಕ್ರಮಗಳಿಂದ ನಿರ್ಜಿತವಾದ ಈ ಭೂಮಿಯು ನಿನಗೆ ಪಾಂಡುಪುತ್ರರಿಂದ ತಾತ್ಕಾಲಿಕವಾಗಿ ಅರ್ಪಿತವಾಗಿದ್ದಿತು. ದ್ಯೂತದಲ್ಲಿ ಸೋತುಹೋದ ಅವರು ಪ್ರತಿಜ್ಞಾತವಾದ ವರ್ಷಗಳು ಮುಗಿಯುವ ಪರ್ಯಂತವಾಗಿ ಈ ಭೂಮಿಯ ಅಧಿಕಾರವು ನಿನ್ನಲ್ಲಿರಲೆಂದು ಬಿಟ್ಟುಹೋಗಿದ್ದರು. ಆದರೆ ನೀನದನ್ನು ಜಯಿಸಿಕೊಂಡೇ ಬಿಟ್ಟಿರುವೆನೆಂಬ ಮತ್ತು ಈ ಅಖಂಡಸಾಮ್ರಾಜ್ಯವೂ ನಿನ್ನದೇ ಆಗಿಬಿಟ್ಟಿರುವುದೆಂಬ ಮನೋಭಾವವನ್ನು ತಳೆದಿರುವೆ. ನೀವು ಮಾಡಿರುವ ಅನೇಕವಿಧವಾದ ದ್ರೋಹಗಳಿಗೆ ಪ್ರತಿಯಾಗಿ ಅವರು ಮಾಡಿರುವ ಉಪಕಾರವನ್ನಾದರೂ ಸ್ಮರಿಸು. ಮಹಾರಾಜ! ಕಾಡಿನಲ್ಲಿದ್ದ ಅವರನ್ನು ಅವಮಾನಗೊಳಿಸಲೆಂದೇ ನಿನ್ನ ಮಕ್ಕಳು ಪರಿವಾರಸಮೇತರಾಗಿ ಘೋಷಯಾತ್ರೆಗೆಂದು ಹೊರಟಿದ್ದರು. ಆದರೆ ಅವರ ಚಿಂತನೆಯು ಒಂದಾಗಿದ್ದರೆ ವಿಧಿಯ ಚಿಂತನೆಯೇ ಬೇರೆಯದಾಗಿತ್ತು. ಗಂಧರ್ವರಾಜನು ನಿನ್ನ ಮಕ್ಕಳನ್ನು ಸೆರೆಹಿಡಿದು ಕರೆದೊಯ್ದನು. ಆಗವರು ನಾವೆಯೇ ಇಲ್ಲದ ನೀರಿನಲ್ಲಿ ಮುಳುಗಿಹೋಗಿದ್ದರು. ಅಂತಹ ಸಮಯದಲ್ಲಿ ಅರ್ಜುನನು ಗಂಧರ್ವರಾಜನೊಡನೆ ಯುದ್ಧಮಾಡಿ ನಿನ್ನ ಮಕ್ಕಳನ್ನು ಬಂಧನದಿಂದ ಬಿಡಿಸಿ ಕರೆತಂದನು.

ಪಾಂಡವರು ದ್ಯೂತದಲ್ಲಿ ಪರಾಜಿತರಾದಾಗ ಮತ್ತು ಅವರು ಅರಣ್ಯಕ್ಕೆ

ಹೊರಟಾಗ ನೀನು ಪಶ್ಚಾತ್ತಾಪಪಡುವುದಿರಲಿ, ನಿನ್ನ ದುಷ್ಪುತ್ರರೊಡನೆ ಸೇರಿಕೊಂಡು ನಗೆಯಾಡುತ್ತಿದ್ದೆ. ಅವರು ದ್ಯೂತದಲ್ಲಿ ಸೋತುದಕ್ಕೂ ಮತ್ತು ತತ್ಪರಿಣಾಮವಾಗಿ ಅರಣ್ಯಕ್ಕೆ ಹೋದುದಕ್ಕೂ ನಿನ್ನ ಸಂಪೂರ್ಣಸಮಾಧಾನ ವನ್ನು ಮುಗುಳ್ನಗೆಯಿಂದಲೇ ವ್ಯಕ್ತಪಡಿಸುತ್ತಿದ್ದೆ. ಅದರ ಫಲವನ್ನು ಇಂದು ಅನುಭವಿಸಬೇಕಾಗಿದೆ. ಅರ್ಜುನನ ಗಾಂಡೀವಧನುಸ್ಸಿನಿಂದ ಧಾರಾಕಾರ ವಾಗಿ ಪ್ರವಹಿಸುವ ಸುತೀಕ್ಷ್ಣವಾದ ಬಾಣಗಳು ಸಮುದ್ರಗಳನ್ನೇ ಶೋಷಿಸಿಬಿಡ ಬಲ್ಲುವು. ಹೀಗಿರುವಾಗ ಕೇವಲ ಮಾಂಸ-ಶೋಣಿತಯುಕ್ತವಾದ ಶರೀರಗಳಿಂದ ಕೂಡಿರುವ ಮಾನವರ ವಿಷಯದಲ್ಲಿ ಹೇಳುವುದೇನಿದೆ?

ಮಹಾರಾಜ! ಬಾಣಪ್ರಯೋಗಮಾಡುವವರಲ್ಲಿ ಅರ್ಜುನನು ಪರಮ ಶ್ರೇಷ್ಠನಾಗಿದ್ದಾನೆ. ಧನುಸ್ಸುಗಳಲ್ಲಿ ಗಾಂಡೀವಧನುಸ್ಸು ಶ್ರೇಷ್ಠತಮವೆಂದು ವಿಖ್ಯಾತವಾಗಿದೆ. ಎಲ್ಲ ಪ್ರಾಣಿಗಳಲ್ಲೂ ಶ್ರೀಕೃಷ್ಣನು ಶ್ರೇಷ್ಠನಾಗಿರುತ್ತಾನೆ. ಆಯುಧಗಳಲ್ಲಿ ಶ್ರೀಕೇಶವನು ಧರಿಸುವ ಸುದರ್ಶನಚಕ್ರವು ಶ್ರೇಷ್ಠವಾದುದೆಂದು ವಿಖ್ಯಾತವಾಗಿದೆ. ಧ್ವಜಗಳಲ್ಲಿ ಕಪಿಯ ಚಿಹ್ನೆಯುಳ್ಳ ಧ್ವಜವು ಶ್ರೇಷ್ಠವಾದುದೆಂದೂ, ಪ್ರಕಾಶಮಾನವಾದುದೆಂದೂ ಹೇಳುತ್ತಾರೆ.

ಅಂತಹ ಸರ್ವಶ್ರೇಷ್ಠವಾದ ಗಾಂಡೀವವನ್ನು ಹಿಡಿದು, ಸರ್ವಪ್ರಾಣಿ ಗಳಲ್ಲೂ ಶ್ರೇಷ್ಠನಾದ ಸುದರ್ಶನಾಯುಧನಾದ ಶ್ರೀಕೃಷ್ಣನೊಡನೆ ಬಿಳಿಯ ಕುದುರೆಗಳನ್ನು ಕಟ್ಟಿರುವ ಕಪಿಧ್ವಜಯುಕ್ತವಾದ ರಥದಲ್ಲಿ ಕುಳಿತಿರುವ ಅರ್ಜುನನು–ಅವನನ್ನೆದುರಿಸಿ ನಿಲ್ಲುವ ನಮ್ಮೆಲ್ಲರನ್ನೂ ಕಾಲಚಕ್ರದೋಪಾದಿ ಯಲ್ಲಿ ಸಂಹಾರಮಾಡುತ್ತಾನೆ. ಯಾವನ ಪಕ್ಷದಲ್ಲಿ ನಿಂತು ಭೀಮಾರ್ಜುನರು ಯುದ್ಧಮಾಡುತ್ತಾರೆಯೋ–ಅವನೇ ಈ ಸಾಮ್ರಾಜ್ಯಕ್ಕೆ ರಾಜನಾಗುತ್ತಾನೆ ಮತ್ತು ಈ ನಿಖಿಲಭೂತಲವೂ ಅವನ ವಶವೇ ಆಗುತ್ತದೆ. ನಿನ್ನ ಸೈನ್ಯದ ಹೆಚ್ಚು ಭಾಗವು ಭೀಮಸೇನನೊಬ್ಬನಿಂದಲೇ ಹತಪ್ರಾಯವಾಗಿ ಹೋಗುತ್ತದೆ. (ವಿನಾಶಹೊಂದುತ್ತದೆ.) ನಿನ್ನ ಸಂಪೂರ್ಣಸೇನೆಯೂ ಪೂರ್ಣವಾಗಿ ನಾಶ ಹೊಂದುವ ಸ್ಥಿತಿಯನ್ನು ದುರ್ಯೋಧನಾದಿಗಳು ಭ್ರಾಂತರಾಗಿ ನೋಡುತ್ತಾರೆ. ಕಟ್ಟಕಡೆಗೆ ಸಮಸ್ತಕೌರವರೂ ವಿನಾಶಹೊಂದುತ್ತಾರೆ. ನಿನ್ನ ಮಕ್ಕಳೂ ಮತ್ತು ನಿನ್ನ ಮಕ್ಕಳನ್ನೇ ಅನುಸರಿಸಿ ಪಾಂಡವರೊಡನೆ ಯುದ್ಧಮಾಡಲು ರಣರಂಗಕ್ಕೆ ಹೋಗುವ ಉಳಿದ ರಾಜರೆಲ್ಲರೂ ಭೀಮಾರ್ಜುನರಿಗೆ ಭಯಪಟ್ಟು

ವಿಜಯವನ್ನು ಗಳಿಸಲಾರರು. ಮತ್ಸ್ಯದೇಶದ ಕ್ಷತ್ರಿಯರು ಈಗ ನಿನ್ನನ್ನು ಗೌರವಿಸುತ್ತಿಲ್ಲ. ಪಾಂಚಾಲರಿಂದೊಡಗೂಡಿದ ಕೇಕಯರು, ಶಾಲ್ವರು, ಶೂರ ಸೇನರು–ಈ ಎಲ್ಲರೂ ಈಗ ನಿನ್ನನ್ನು ತಿರಸ್ಕರಿಸಿಬಿಟ್ಟಿದ್ದಾರೆ. ಧೀಮಂತ ನಾದ ಅರ್ಜುನನ ಪರಾಕ್ರಮವೆಷ್ಟೆಂಬುದನ್ನು ಅರಿತಿರುವ ಅವರೆಲ್ಲರೂ ಯುಧಿಷ್ಠಿರನ ಪಕ್ಷಕ್ಕೆ ಸೇರಿಕೊಂಡಿರುತ್ತಾರೆ. ಅವರೆಲ್ಲರಿಗೂ ಯುಧಿಷ್ಠಿರನ ವಿಷಯದಲ್ಲಿ ಅಪಾರವಾದ ಭಕ್ತಿಯಿದೆ. ಈ ಕಾರಣದಿಂದಲೇ ಅವರು ನಿನ್ನ ಮಗನನ್ನು ಬಹುವಾಗಿ ವಿರೋಧಿಸುತ್ತಾರೆ. ಧರ್ಮಯುಕ್ತರಾದ ಪಾಂಡವ ರನ್ನು ವಧಿಸುವ ಅಥವಾ ಅವರಿಗೆ ಕ್ಲೇಶಕೊಡುವ ಪ್ರಯತ್ನವನ್ನು ಖಂಡಿತ ವಾಗಿಯೂ ಮಾಡಬಾರದಾಗಿತ್ತು. ಆದರೂ ಸಹ ನಿನ್ನ ಮಗನು ಅನೇಕಾ ನೇಕ ಕುತ್ಸಿತಮಾರ್ಗಗಳಿಂದ ಅವರನ್ನು ನಾನಾವಿಧವಾದ ಕ್ಲೇಶಗಳಿಗೆ ಗುರಿ ಮಾಡಿದನು. ಈಗಲೂ ಕೂಡ ಇವನು ಅವರ ವಿಷಯದಲ್ಲಿ ದ್ವೇಷಭಾವವನ್ನೇ ತಳೆದಿದ್ದಾನೆ. ಈಗ ನಿನಗಿರುವ ಒಂದೇ ಮಾರ್ಗವೆಂದರೆ ನಿನ್ನ ಮಕ್ಕಳನ್ನು ನಿರ್ಬಂಧಿಸುವುದು. ಯಾವುದೇ ವಿಧವಾದ ಉಪಾಯದಿಂದಲಾದರೂ ಪಾಪಪೂರುಷನಾದ ದುರ್ಯೋಧನನನ್ನು ಅವನ ಒಡನಾಡಿಗಳ ಸಮೇತವಾಗಿ ಪ್ರತಿಬಂಧಿಸಬೇಕು. ನೀನು ಯಾವಾಗಲೂ ಇದಕ್ಕಾಗಿ ಶೋಕಿಸುವ ಕಾರಣವಿಲ್ಲ. ದ್ಯೂತವು ನಡೆಯುತ್ತಿದ್ದ ಕಾಲದಲ್ಲಿಯೇ ನಾನೂ ಮತ್ತು ವಿದುರನೂ ನಿನಗೆ ಇದನ್ನೇ ಹೇಳಿದ್ದೆವು. ಆದರೆ ಅಂದು ನೀನು ನಮ್ಮ ಮಾತಿಗೆ ಕಿವಿಗೊಡಲಿಲ್ಲ. ಈಗಲೂ ನಿನಗುಳಿದಿರುವ ಮಾರ್ಗವೆಂದರೆ ಅದೊಂದೇ. ಪಾಂಡವರ ಪರಾಕ್ರಮವನ್ನು ಕುರಿತು ನೀನಿದುವರೆಗೂ ವಿಲಪಿಸಿದ್ದು ವ್ಯರ್ಥವಾಗದಿರಬೇಕಾದರೆ–ನೀನೀಗ ಈಶನಂತೆ ಅಥವಾ ಸಾರ್ವಭೌಮನಂತೆ ವರ್ತಿಸಬೇಕು. ನಿನ್ನ ಮಗನನ್ನು ಪ್ರತಿಬಂಧಿಸುವ ಕಾರ್ಯವನ್ನು ಕೂಡಲೇ ಕೈಗೊಳ್ಳಬೇಕು. ಅದು ಹೊರತಾಗಿ ಈಶತ್ವವನ್ನು ನೀನು ಉಳಿಸಿಕೊಳ್ಳದೇ ಅಸಾಮರ್ಥ್ಯವನ್ನೇ ಇಟ್ಟುಕೊಂಡಿರುವೆಯಾದರೆ– ನೀನೀಗ ಪಾಂಡವರ ಪರಾಕ್ರಮದ ವಿಷಯದಲ್ಲಿ ಮಾಡಿದ ವಿಲಾಪಗಳೆಲ್ಲವೂ ವ್ಯರ್ಥವೇ ಸರಿ."

ಏಳನೆಯ ಅಧ್ಯಾಯವು ಮುಗಿಯಿತು.

೫೫ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

# ದುರ್ಯೋಧನನು ಧೃತರಾಷ್ಟ್ರನಿಗೆ ಧೈರ್ಯಹೇಳುತ್ತಾ ತನ್ನ ಉತ್ಕರ್ಷವನ್ನೂ ಮತ್ತು ಪಾಂಡವರ ಅಪಕರ್ಷವನ್ನೂ ವಿವರಿಸಿ ಹೇಳಿದುದು

ಸಂಜಯನು ಮಾತನ್ನು ಮುಗಿಸಿದನಂತರ ದುರ್ಯೋಧನನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ನೀನು ಭಯಪಡಬೇಡ. ಭಯಪಡುವ ಕಾರಣವಿಲ್ಲ. ನಮಗಾಗಿ ನೀನು ಶೋಕಿಸುವ ಕಾರಣವೂ ಇಲ್ಲ. ವಿಭುವೇ! ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ನಾವು ಬಲಿಷ್ಠರೂ, ಸಮರ್ಥರೂ ಆಗಿರುತ್ತೇವೆ. ಹಿಂದೆ ನಾವು ಪಾಂಡವರನ್ನು ಅರಣ್ಯಕ್ಕಟ್ಟಿಬಿಟ್ಟೆವೆಂಬ ವಾರ್ತೆಯನ್ನು ಕೇಳಿ, ಪರರಾಷ್ಟ್ರಗಳನ್ನು ವಿಧ್ವಂಸಗೊಳಿಸುವ ಸಾಮರ್ಥ್ಯವುಳ್ಳ ದೊಡ್ಡದಾದ ಸೈನ್ಯ ಸಮೂಹದಿಂದೊಡಗೂಡಿ ಶ್ರೀಕೃಷ್ಣನು ಪಾಂಡವರ ಬಳಿಗೆ ತೆರಳಿದನು. ಕೇಕಯರು, ಧೃಷ್ಟಕೇತು, ದ್ರುಪದಪುತ್ರನಾದ ಧೃಷ್ಟದ್ಯುಮ್ನ–ಇವರೇ ಮೊದಲಾದ ಪಾಂಡವರ ಅನುಯಾಯಿಗಳು ಇನ್ನೂ ಅನೇಕ ರಾಜಸಮೂಹದೊಡನೆ ಪಾಂಡವರ ಬಳಿಗೆ ತೆರಳಿದರು. ಇಂದ್ರಪ್ರಸ್ಥಕ್ಕೆ ಅನತಿದೂರದಲ್ಲಿಯೇ ಅವರೆಲ್ಲರೂ ಬಂದು ಸೇರಿದ್ದರು. ಅಲ್ಲಿಗೆ ಬಂದುದು ಮಾತ್ರವಲ್ಲದೇ–ನಿನ್ನನ್ನೂ ಮತ್ತು ಕುರುಗಳನ್ನೂ ಬಹುವಾಗಿ ನಿಂದಿಸಿದರು. ಶ್ರೀಕೃಷ್ಣಪ್ರಮುಖರಾದ ಆ ರಾಜರು ಮೃಗಚರ್ಮಧರನಾಗಿದ್ದ ಯುಧಿಷ್ಠಿರನನ್ನು ಗೌರವಿಸಿದರು. ಬಂಧು-ಬಾಂಧವಸಹಿತನಾದ ನಿನ್ನನ್ನು ಮೂಲೋತ್ಪಾಟನೆ ಮಾಡಲು ಇಚ್ಛಿಸಿದ್ದ ಅವರು ನಿನಗೆ ಸೇರಿಹೋಗಿದ್ದ ರಾಜ್ಯವನ್ನು ಆಕ್ರಮಿಸಿ ಯುಧಿಷ್ಠಿರನಿಗೊಪ್ಪಿಸುವ ಕರ್ತವ್ಯವನ್ನೂ ಪ್ರತಿಪಾದಿಸಿದರು. ಈ ವಿಷಯವನ್ನು ನಾನು ಗೂಢಚಾರರ ಮೂಲಕವಾಗಿ ಕೇಳುತ್ತಲೇ ಜ್ಞಾತಿಗಳ ವಿನಾಶವಾಗುವುದೆಂಬ ಭಯದಿಂದ ಪೀಡಿತನಾಗಿ ಭೀಷ್ಮ-ದ್ರೋಣ-ಕೃಪರನ್ನು ಕರೆಸಿ ಹೇಳಿದೆನು :

**ನ ತೇ ಸ್ಥಾಸ್ಯನ್ತಿ ಸಮಯೇ ಪಾಣ್ಡವಾ ಇತಿ ಮೇ ಮತಿಃ ।**
**ಸಮುಚ್ಛೇದಂ ಹಿ ನಃ ಕೃತ್ಸ್ನಂ ವಾಸುದೇವಶ್ಚಿಕೀರ್ಷತಿ ॥೮॥**

"ತಾತ! ಪಾಂಡವರು ತಾವು ಮಾಡಿರುವ ಪ್ರತಿಜ್ಞಾನುಸಾರವಾಗಿ ನಡೆದುಕೊಳ್ಳುವುದಿಲ್ಲವೆಂದು ನಾನು ಭಾವಿಸುತ್ತೇನೆ. ವಾಸುದೇವನು ಇತರ ರಾಜರೊಡನೆ ನಮ್ಮನ್ನು ಮೂಲೋತ್ಪಾಟನಮಾಡಲು ಇಚ್ಛಿಸಿದ್ದಾನೆ.

**ಋತೇ ಚ ವಿದುರಾತ್ಸರ್ವೇ ಯೂಯಂ ವಧ್ಯಾ ಮತಾ ಮಮ ।**
**ಧೃತರಾಷ್ಟ್ರಸ್ತು ಧರ್ಮಜ್ಞೋ ನ ವಧ್ಯಃ ಕುರುಸತ್ತಮಃ ॥೯॥**

ವಿದುರನೊಬ್ಬನನ್ನು ಬಿಟ್ಟು ನೀವೆಲ್ಲರೂ ಅವರಿಂದ ವಧ್ಯರಾಗುತ್ತೀ ರೆಂಬುದು ನನ್ನ ಅಭಿಮತವಾಗಿದೆ. ಧರ್ಮಜ್ಞನಾದ, ಕುರುಸತ್ತಮನಾದ ಧೃತರಾಷ್ಟ್ರನೂ ವಧ್ಯನಾಗದಿರಬಹುದು.

ತಾತ! ನಮ್ಮನ್ನು ಮೂಲೋತ್ಪಾಟನಮಾಡಿ ಜನಾರ್ದನನು ಕೌರವರ ಏಕಚಕ್ರಾಧಿಪತ್ಯವನ್ನು ಯುಧಿಷ್ಠಿರನಿಗೆ ಕೊಟ್ಟುಬಿಡುತ್ತಾನೆ. ಅಂತಹ ಸಂದರ್ಭದಲ್ಲಿ ನಮ್ಮ ಕರ್ತವ್ಯವೇನು? ಪಿತಾಮಹ! ಅವರಿಗೆ ಶರಣಾಗತ ರಾಗುವುದೇ? ಓಡಿಹೋಗುವುದೇ? ಅಥವಾ ಪ್ರಾಣದ ಹಂಗನ್ನಾದರೂ ತೊರೆದು ಯುದ್ಧಮಾಡೋಣವೇ? ಈ ಸಮಯದಲ್ಲಿ ನಮ್ಮ ಕರ್ತವ್ಯವೇನೆಂದು ಭಾವಿಸುವೆ? ಒಂದು ವೇಳೆ ನಾವು ಅವರೊಡನೆ ಯುದ್ಧಮಾಡಿದ್ದೇ ಆದರೆ ನಮ್ಮ ಪರಾಜಯವಂತೂ ನಿಶ್ಚಿತವಾಗಿಯೇ ಇರುವುದು. ಏಕೆಂದರೆ : ಪ್ರಸಕ್ತಸಂದರ್ಭದಲ್ಲಿ ಯಾವ ರಾಜ್ಯಗಳವರೂ ನಮ್ಮ ವಿಷಯದಲ್ಲಿ ಅನುರಕ್ತರಾಗಿಲ್ಲ. ನಮ್ಮ ಮಿತ್ರರೂ ನಮ್ಮ ಮೇಲೆ ಕೋಪಗೊಂಡಿದ್ದಾರೆ. ಎಲ್ಲ ರಾಜರಿಂದಲೂ ನಾವು ಧಿಕ್ಕೃತರಾಗಿದ್ದೇವೆ. ಸ್ವಜನರೂ ನಮ್ಮನ್ನೀಗ ತಿರಸ್ಕರಿಸುತ್ತಿದ್ದಾರೆ. ಈ ಸಮಯದಲ್ಲಿ ನಾವು ಶರಣಾಗತರಾಗುವುದೇ ಒಳ್ಳೆಯದೆಂದು ಭಾವಿಸಿದ್ದೇನೆ. ಶರಣಾಗತರಾಗುವುದರಲ್ಲಿ ಯಾವ ದೋಷವೂ ಇರುವುದಿಲ್ಲ. ನಾವು ಶರಣಾಗತರಾಗಿಬಿಟ್ಟರೆ ಬಹುಕಾಲದವರೆಗೂ ಶಾಂತಿಯಿಂದಲೂ ಇರಬಹುದು. ಆದರೆ ನಾನು ಪ್ರಜ್ಞಾನೇತ್ರನಾದ, ಜನಾಧಿಪನಾದ ನಮ್ಮ ತಂದೆಯ ವಿಷಯವಾಗಿ ಶೋಕಿಸುತ್ತಿದ್ದೇನೆ. ನನ್ನ ಸಲುವಾಗಿ ನನ್ನ ತಂದೆಯು ಅನೇಕ ವಿಧವಾದ ದುಃಖಗಳನ್ನೂ ಕ್ಲೇಶಗಳನ್ನೂ ಅನುಭವಿಸಿದ್ದಾನೆ"– ಎಂಬುದಾಗಿ ನಾನವರೊಡನೆ ಹೇಳಿದೆನು.

ತಂದೆಯೇ! ನಿಶ್ಚಯವಾಗಿ ಹೇಳುವುದಾದರೆ ನೀನೂ ನಿನ್ನ ಇತರ ಮಕ್ಕಳೂ (ದುಃಶಾಸನಾದಿಗಳೂ) ನನಗೆ ಪ್ರಿಯವನ್ನುಂಟುಮಾಡಲು ಶತ್ರುಗಳಾದ ಪಾಂಡವರ ಅಭಿವೃದ್ಧಿಯನ್ನು ತಡೆಯಲು ಯತ್ನಿಸಿದಿರಿ. ನನ್ನೊಬ್ಬನಿಗೆ ಪ್ರೀತಿಯನ್ನುಂಟುಮಾಡುವ ಸಲುವಾಗಿ ಹಿಂದೆ ನೀನು ಅನೇಕಕಾರ್ಯಗಳನ್ನು ಮಾಡಿರುವೆ. ಮಹಾರಾಜ! ಇದೆಲ್ಲವೂ ನಿನಗೆ ತಿಳಿದೇ ಇರುವುದು.



ಇದನ್ನೇ ನಾನು ಭೀಷ್ಮ-ದ್ರೋಣರೊಡನೆಯೂ ಹೇಳಿದೆನು. ‘ನಮ್ಮ ತಂದೆಯು ಇದುವರೆಗೂ ಮಾಡಿದ ಕಾರ್ಯವು ಕೇವಲ ನನ್ನ ಪ್ರೀತಿಗಾಗಿ.

ನನ್ನನ್ನು ರಾಜನನ್ನಾಗಿ ಮಾಡಲು ಹೀಗೆ ಮಾಡಿದನು. ಇದನ್ನೇ ಮಹಾರಥರಾದ ಆ ಪಾಂಡವರು ಮನಸ್ಸಿನಲ್ಲಿಟ್ಟು ಕೊಂಡು ಅಮಾತ್ಯಸಮೇತನಾದ ಧೃತರಾಷ್ಟ್ರನನ್ನು ಮೂಲೋತ್ಪಾಟನೆಮಾಡಿ ತಮ್ಮ ವೈರವನ್ನು ಸಾಧಿಸಿಕೊಳ್ಳುತ್ತಾರೆ.'

ಹೀಗೆಂಬುದಾಗಿ ನಾನು ಅವರೊಡನೆ ಹೇಳಿದೊಡನೆಯೇ ದ್ರೋಣರು, ಭೀಷ್ಮ, ದ್ರೋಣಪುತ್ರ ಮತ್ತು ಕೃಪರು ನಾನು ಮಹತ್ತರವಾದ ಚಿಂತೆಗೊಳಗಾಗಿರುವೆನೆಂಬುದನ್ನೂ, ವ್ಯಥಿತನಾಗಿರುವೆನೆಂಬುದನ್ನೂ ಮನಗಂಡು ನನ್ನನ್ನು ಆಶ್ವಸಿಸುತ್ತಾ ಹೀಗೆಂದು ಹೇಳಿದರು :

"ಸುಯೋಧನ! ಶತ್ರುಪಕ್ಷದವರು ನಮ್ಮ ವಿಷಯದಲ್ಲಿ ದ್ರೋಹವನ್ನೆಸಗಿದ್ದೇ ಆದರೆ ಅದರಿಂದ ನೀನು ಖಂಡಿತವಾಗಿಯೂ ಭಯಪಡಬೇಕಾಗಿಲ್ಲ. ಯುದ್ಧಕ್ಕೆ ಸನ್ನದ್ಧರಾಗಿ ನಿಲ್ಲುವ ನಮ್ಮನ್ನು ಶತ್ರುಗಳು ಪರಾಜಯಗೊಳಿಸಲು ಖಂಡಿತವಾಗಿಯೂ ಅಸಮರ್ಥರು. ನಾವು ಒಬ್ಬೊಬ್ಬರೇ ಎಲ್ಲ ರಾಜರನ್ನೂ ಎದುರಿಸಿ ನಿಂತು ಅವರೆಲ್ಲರನ್ನೂ ಪರಾಜಯಗೊಳಿಸಲು ಸಮರ್ಥರಾಗಿದ್ದೇವೆ. ಅವರು ಈಗ ಯುದ್ಧಕ್ಕೆ ಬರಲಿ- ತೀಕ್ಷ್ಣವಾದ ಬಾಣಗಳಿಂದ ಅವರ ದರ್ಪವನ್ನು ಉಡುಗಿಸಿಬಿಡುತ್ತೇವೆ. ಭೀಷ್ಮನ ತಂದೆ ಶಾಂತನುವು ಮೃತನಾಗಿದ್ದನು. ಆ ಸಮಯದಲ್ಲಿ ಶತ್ರುಗಳು ಆಕ್ರಮಣಮಾಡಿದರು. ಕ್ರುದ್ಧನಾದ ಭೀಷ್ಮನು ರಥದಲ್ಲಿ ಕುಳಿತು ಏಕಾಕಿಯಾಗಿಯೇ ಭೂಮಿಯ ಮೇಲಿನ ಎಲ್ಲ ರಾಜರನ್ನೂ ಪರಾಜಯಗೊಳಿಸಿದನು. ಆ ಸಮಯದಲ್ಲಿ ಭೀಷ್ಮನು ಅನೇಕರಾಜರನ್ನು ಸಂಹರಿಸಿದನು. ಅಳಿದುಳಿದವರು ಭಯದಿಂದ ದೇವವ್ರತನಿಗೆ ಶರಣಾ ಗತರಾದರು. ಅಂತಹ ಅಪ್ರತಿಮಸಾಹಸಿಯಾದ ಭೀಷ್ಮನು ನಮ್ಮೊಂದೊಡ ಗೂಡಿ ಎಂತಹ ಅಜೇಯರಾದ ಶತ್ರುಗಳನ್ನೂ ಪರಾಜಯಗೊಳಿಸಲು ಸಮರ್ಥನಾಗಿರುತ್ತಾನೆ. ಆದುದರಿಂದ ಭರತರ್ಷಭನೇ! ನಿನ್ನ ಭಯವನ್ನು ದೂರಮಾಡು. ಭೀಷ್ಮನಿರುವಾಗ ನೀನು ಭಯಪಡುವ ಕಾರಣವಿಲ್ಲ."

ತಾತ! ಹೀಗೆಂಬುದು ಅಮಿತತೇಜಸ್ವಿಗಳಾದ ಆ ನಾಲ್ವರು ಮಹಾರಥರ ಅಂದಿನ ನಿಶ್ಚಯವಾಗಿದ್ದಿತು. ಅಂದು ನಮ್ಮ ಶತ್ರುಗಳು ನಿಶ್ಚಯವಾಗಿಯೂ ಮಹಾವೀರರಾಗಿದ್ದರು. ಈ ಅಖಂಡಭೂಭಾಗವೂ ಅವರ ವಶದಲ್ಲಿದ್ದಿತು. ಅಷ್ಟು ಸಾಮರ್ಥ್ಯ- ಸಹಕಾರ-ಸೌಲಭ್ಯಗಳಿದ್ದಾಗಲೇ

ಭೀಷ್ಮಾದಿಗಳು ಅವರ ದರ್ಪವನ್ನು ಮುರಿಯುವ ಆಶ್ವಾಸನೆನೀಡಿದ್ದರು. ಇಂದವರು ಹೇಗಿದ್ದಾರೆಂಬುದನ್ನು ಯೋಚಿಸು, ಮಹಾರಾಜ! ನನ್ನ ಅಭಿಪ್ರಾಯ ದಲ್ಲಿ ಶತ್ರುಗಳು ನನ್ನನ್ನು ಜಯಿಸಲು ಖಂಡಿತವಾಗಿಯೂ ಸಮರ್ಥರಲ್ಲ.

**ಛಿನ್ನಪಕ್ಷಾಃ ಪರೇ ಹ್ಯದ್ಯ ವೀರ್ಯಹೀನಾಶ್ಚ ಪಾಣ್ಡವಾಃ ॥೨೪॥**

ಪಾಂಡವರೀಗ ರೆಕ್ಕೆಗಳನ್ನು ಕತ್ತರಿಸಿರುವ ಪಕ್ಷಿಗಳಂತಿದ್ದಾರೆ. ಅವರ ಪಕ್ಷೀಯರೆಂದು ಹೇಳಿಕೊಳ್ಳುವವರು ಈಗ ಯಾರೂ ಇಲ್ಲವಾಗಿದೆ. ಹನ್ನೆರಡು ವರ್ಷಗಳ ಕಾಲ ಕಾಡು-ಮೇಡುಗಳಲ್ಲಲೆದು ಸೊರಗಿ-ಸೊಪ್ಪಾಗಿ ಹೀನ ವೀರ್ಯರಾಗಿದ್ದಾರೆ.

**ಅಸ್ಮತ್ಸಂಸ್ಥಾ ಚ ಪೃಥಿವೀ ವರ್ತತೇ ಭರತರ್ಷಭ ।**
**ಏಕಾರ್ಥಾಃ ಸುಖದುಃಖೇಷು ಸಮಾನೀತಾಶ್ಚ ಪಾರ್ಥಿವಾಃ ॥೨೫॥**

ಈ ಸಮಯದಲ್ಲಿ ಅಖಂಡಭೂಮಂಡಲವೇ ನಮ್ಮ ಅಧಿಕಾರಕ್ಕೊಳ ಪಟ್ಟಿದೆ. ನಮ್ಮೊಡನೆ ಸುಖ-ದುಃಖಗಳಲ್ಲಿ ಸಹಭಾಗಿಗಳಾದ ಹಲವರು ರಾಜರು ಇಲ್ಲಿಗೆ ಆಹ್ವಾನಿತರಾಗಿ ಬಂದಿರುತ್ತಾರೆ. ಇವರು ನಮ್ಮ ಸುಖ ವನ್ನೇ ತಮ್ಮ ಸುಖವೆಂದೂ ಮತ್ತು ನಮ್ಮ ದುಃಖವನ್ನೇ ತಮ್ಮ ದುಃಖವೆಂದೂ ಪರಿಗಣಿಸುತ್ತಾರೆ. ನಮ್ಮೆಲ್ಲರ ಮುಖ್ಯಧ್ಯೇಯಗಳೂ ಒಂದೇ ಆಗಿರುತ್ತವೆ.

**ಅಪ್ಯಗ್ನಿಂ ಪ್ರವಿಶೇಯುಸ್ತೇ ಸಮುದ್ರಂ ವಾ ಪರಂತಪ ।**
**ಮದರ್ಥಂ ಪಾರ್ಥಿವಾಃ ಸರ್ವೇ ತದ್ವಿದ್ಧಿ ಕುರುಸತ್ತಮ ॥೨೬॥**

ಕುರುಸತ್ತಮನೇ! ನನ್ನ ಸಲುವಾಗಿ ಈ ಎಲ್ಲ ರಾಜರೂ ಅಗ್ನಿಯ ನ್ನಾದರೂ ಪ್ರವೇಶಿಸುತ್ತಾರೆ. ಸಮುದ್ರವನ್ನಾದರೂ ಪ್ರವೇಶಿಸುತ್ತಾರೆ. ಈ ವಿಷಯವನ್ನು ನೀನು ಚೆನ್ನಾಗಿ ತಿಳಿಯುವವನಾಗು. ನನಗಾಗಿ ಪ್ರಾಣ ವೊಪ್ಪಿಸಲು ಈ ರಾಜರು ಸಂತೋಷದಿಂದ ಆಗಮಿಸಿರುತ್ತಾರೆ. ಇಂತಹ ಮಹಾಪರಾಕ್ರಮಿಗಳಾದ ರಾಜರು ಸೈನ್ಯಸಮೇತರಾಗಿ ಅಪಾರಸಂಖ್ಯೆಯಲ್ಲಿ ಆಗಮಿಸಿದ್ದರೂ ಕೂಡ ಶತ್ರುಗಳ ವಿಷಯವಾಗಿ ನಿನ್ನ ಸಮೀಪವರ್ತಿಗಳು ಮಾಡುತ್ತಿರುವ ಮಿಥ್ಯಾಪ್ರಶಂಸೆಯನ್ನು ಕೇಳಿ ಬಹುಭೀತನಾಗಿರುವ, ಹುಚ್ಚು-ಹುಚ್ಚಾಗಿ ವರ್ತಿಸುತ್ತಿರುವ, ದುಃಖಪಡುತ್ತಿರುವ, ಬಹುವಿಧವಾಗಿ ಪ್ರಲಾಪ

ಮಾಡುತ್ತಿರುವ ನಿನ್ನನ್ನು ನೋಡಿ ಈ ರಾಜರೆಲ್ಲರೂ ಗಹ-ಗಹಿಸಿ ನಗುತ್ತಿದ್ದಾರೆ. ಇಲ್ಲಿಗೆ ಆಗಮಿಸಿರುವ ರಾಜರಲ್ಲಿ ಒಬ್ಬೊಬ್ಬರೂ ಮತ್ತೊಬ್ಬರ ಸಹಾಯವಿಲ್ಲದೆ ಪಾಂಡವರನ್ನು ಎದುರಿಸಿ ನಿಂತು ಯುದ್ಧಮಾಡಲು ತಾವು ಸಮರ್ಥರೆಂದು ಭಾವಿಸಿರುತ್ತಾರೆ. ಆದುದರಿಂದ ಪಾಂಡವರ ಪರಾಕ್ರಮದ ಮಿಥ್ಯಾಪ್ರಶಂಸೆಯಿಂದ ಉಂಟಾಗಿರುವ ನಿನ್ನ ಭಯವು ದೂರವಾಗಲಿ, ತಾತ! ಸಮಗ್ರವಾದ ನನ್ನ ಈ ಸೇನೆಯನ್ನು ಸ್ವರ್ಗಾಧಿಪತಿಯಾದ ವಾಸವನೂ ಜಯಿಸಲಾರನು. ಸ್ವಯಂಭುವಾದ ಬ್ರಹ್ಮನಿಗೂ ಅಜಯ್ಯವಾದ ಈ ನನ್ನ ಅಪಾರಸೇನೆಯನ್ನು ನಾಶಮಾಡುವ ಸಾಧ್ಯತೆಯಿಲ್ಲ. ಶತ್ರುವಿಗೆ ನನ್ನ ಸೈನ್ಯದ ವಿಷಯದಲ್ಲಿ ಎಷ್ಟು ಭಯವಾಗಿದೆಯೆಂಬುದನ್ನು ಸೋದಾಹರಣ ಪೂರ್ವಕವಾಗಿ ಸಮರ್ಥಿಸುತ್ತೇನೆ. ಕೇಳು, ಮಹಾರಾಜ!

**ಯುಧಿಷ್ಠಿರಃ ಪುರಂ ಹಿತ್ವಾ ಪಞ್ಚ ಗ್ರಾಮಾನ್ಸ ಯಾಚತಿ ।**
**ಭೀತೋ ಹಿ ಮಾಮಕಾತ್ಸೈನ್ಯಾತ್ಪ್ರಭಾವಾಚ್ಚೈವ ಮೇ ವಿಭೋ ॥**

ಯುಧಿಷ್ಠಿರನು ಅರ್ಧರಾಜ್ಯವನ್ನು ಕೇಳುವುದಂತಿರಲಿ. ನನ್ನ ಅಪಾರವಾದ ಅಜಯ್ಯವಾದ ಸೈನ್ಯದಿಂದಲೂ ಮತ್ತು ನನ್ನ ಪ್ರಭಾವದಿಂದಲೂ ಭೀತನಾಗಿರುವ ಅವನು ಪತ್ತನವನ್ನು ಕೇಳುವುದಕ್ಕೂ ಧೈರ್ಯವಿಲ್ಲದೇ ಜೀವಿಕೆಯನ್ನು ನಡೆಸಿಕೊಂಡಿರಲು ಐದು ಗ್ರಾಮಗಳನ್ನು ಮಾತ್ರ ಯಾಚಿಸುತ್ತಿದ್ದಾನೆ. ಇದರಿಂದಲೇ ನೀನು ಅವನಿಗುಂಟಾಗಿರುವ ಭಯವನ್ನು ಊಹಿಸಬಹುದಾಗಿದೆ.

ಕುಂತೀಪುತ್ರನಾದ ವೃಕೋದರನನ್ನು ಮಹಾಸಮರ್ಥ, ಬಲಿಷ್ಠ–ಮುಂತಾಗಿ ನೀನು ಭ್ರಮಿಸಿರಬಹುದು. ಅದು ಶುದ್ಧಸುಳ್ಳು. ಪ್ರಶಂಸಾರ್ಹವಾದ ಪರಾಕ್ರಮವೇನೂ ಅವನಲ್ಲಿರುವುದಿಲ್ಲ. ಅವನ ಪರಾಕ್ರಮವನ್ನು ನೀನು ಪ್ರಶಂಸೆಮಾಡುತ್ತಿರುವುದೇಕೆಂದರೆ–ನನ್ನ ಪರಾಕ್ರಮವನ್ನು ಅಥವಾ ಪ್ರಭಾವವನ್ನು ನೀನು ತಿಳಿದವನಾಗಿಲ್ಲ. ಅವನ ಪರಾಕ್ರಮವನ್ನು ಪ್ರಶಂಸೆ ಮಾಡಲು ಇದೇ ಮುಖ್ಯಕಾರಣವಾಗಿದೆ.

**ಮತ್ಸಮೋ ಹಿ ಗದಾಯುದ್ಧೇ ಪೃಥಿವ್ಯಾಂ ನಾಸ್ತಿ ಕಶ್ಚನ ।**
**ನಾಸೀತ್ಕಶ್ಚಿದತಿಕ್ರಾನ್ತೋ ಭವಿತಾ ನ ಚ ಕಶ್ಚನ ॥೩೨॥**

ಗದಾಯುದ್ಧದಲ್ಲಿ ನನಗೆ ಸಮಾನನಾದವನು ಈ ಪೃಥ್ವಿಯಲ್ಲೇ

ಬೇರೊಬ್ಬನಿಲ್ಲ. ಇದು ಈಗಿನ ವಿಷಯವಾಯಿತು. ಹಿಂದೆಯೂ ಕೂಡ ನನಗೆ ಸಾಟಿಯಾದವನು ಯಾವೊಬ್ಬನೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ.

**ಯುಕ್ತೋ ದುಃಖೋಷಿತಶ್ಚಾಹಂ ವಿದ್ಯಾಪಾರಗತಸ್ತಥಾ ।**
**ತಸ್ಮಾನ್ನ ಭೀಮಾನ್ನಾನ್ಯೇಭ್ಯೋ ಭಯಂ ಮೇ ವಿದ್ಯತೇ ಕ್ವಚಿತ್ ॥**

ಗದಾಯುದ್ಧವನ್ನು ನಾನು ಚೆನ್ನಾಗಿ ಅಭ್ಯಾಸಮಾಡಿದ್ದೇನೆ. ಗುರುಗಳ ಸಮೀಪದಲ್ಲಿದ್ದು ಹಗಲು-ರಾತ್ರಿಗಳೆನ್ನದೇ ಅವರ ಶುಶ್ರೂಷೆಮಾಡುತ್ತಾ ಅನೇಕವಿಧವಾದ ಕಾಯಕ್ಲೇಶಗಳನ್ನೂ ಅನುಭವಿಸಿ ನಾನು ಆ ವಿದ್ಯೆಯಲ್ಲಿ ವೈಚಕ್ಷಣ್ಯವನ್ನು ಪಡೆದಿರುತ್ತೇನೆ. ಈ ಕಾರಣದಿಂದಲೇ ನಾನು ಭೀಮನಿಗೂ ಭಯಪಡುವುದಿಲ್ಲ. ಮಹಾಪರಾಕ್ರಮಿಗಳೆಂದು ಹೇಳಿಕೊಳ್ಳುವ ಬೇರೆ ಯವರಿಗೂ ಭಯಪಡುವುದಿಲ್ಲ. (ನನಗೆ ಯಾರೊಬ್ಬರಿಂದಲೂ ಭಯವಿಲ್ಲ.)

**ದುರ್ಯೋಧನಸಮೋ ನಾಸ್ತಿ ಗದಾಯಾಮಿತಿ ನಿಶ್ಚಯಃ ।**
**ಸಂಕರ್ಷಣಸ್ಯ ಭದ್ರಂ ತೇ ಯತ್ತದೈನಮುಪಾವಸಮ್ ॥೩೪॥**

ಗದಾಯುದ್ಧದಲ್ಲಿ ನನಗೆ ಸಮಾನರು ಯಾರೂ ಇಲ್ಲವೆಂದು ನಾನು ಮಾತ್ರವೇ ಹೇಳಿಕೊಳ್ಳುತ್ತಿಲ್ಲ. ಶ್ರೀಕೃಷ್ಣನ ಅಣ್ಣನಾದ ಸಂಕರ್ಷಣನ ನಿಶ್ಚಯವೂ ಸಹ ಇದೇ ಆಗಿರುವುದು. ನಾನು ಬಲರಾಮನಲ್ಲಿ ಗದಾಯುದ್ಧವನ್ನು ಅಭ್ಯಾಸಮಾಡುತ್ತಿದ್ದಾಗ ಹಲವಾರುಬಾರಿ ಅವನೇ–ಗದಾಯುದ್ಧದಲ್ಲಿ ದುರ್ಯೋಧನನಿಗೆ ಸಮಾನರಾದವರು ಯಾರೂ ಇಲ್ಲ'–ಎಂದು ಹೇಳಿದ್ದಾನೆ.

ತಾತ! ನಾನು ಯುದ್ಧದಲ್ಲಿ ಸಂಕರ್ಷಣನಿಗೆ ಸಮಾನನಾಗಿರುತ್ತೇನೆ. ಪ್ರಪಂಚದಲ್ಲಿರುವ ಯಾವ ಒಬ್ಬ ವೀರನಿಗೇ ಆಗಲಿ ನನ್ನಲ್ಲಿರುವಷ್ಟು ಬಲವಿಲ್ಲ. ನನ್ನಲ್ಲಿ ಅಷ್ಟು ಅಧಿಕವಾದ ಬಲವಿದೆ. ಈ ಕಾರಣದಿಂದಾಗಿ ಯುದ್ಧದಲ್ಲಿ ನಾನು ಮಾಡಲಿರುವ ಗದಾಪ್ರಹಾರವನ್ನು ಭೀಮನು ಖಂಡಿತವಾಗಿಯೂ ಸಹಿಸಿಕೊಳ್ಳಲಾರನು.

**ಏಕಂ ಪ್ರಹಾರಂ ಯಂ ದದ್ಯಾಂ ಭೀಮಾಯ ರುಷಿತೋ ನೃಪ ।**
**ಸ ಏವೈನಂ ನಯೇದ್ಘೋರಃ ಕ್ಷಿಪ್ರಂ ವೈವಸ್ವತಕ್ಷಯಮ್ ॥೩೬॥**

ಮಹಾರಾಜ! ಕುಪಿತನಾದ ನಾನು ಭೀಮನಿಗೆ ಒಂದೇ ಒಂದು ಗದಾ

ಪ್ರಹಾರವನ್ನು ನೀಡಿದರೂ ಸಾಕು. ಮಹಾಘೋರವಾದ ಆ ಒಂದು ಗದಾ ಪ್ರಹಾರವೇ ಮಹಾವೀರನೆಂದು ನೀನು ಭ್ರಮಿಸಿರುವ ಆ ಭೀಮಸೇನನನ್ನು ಯಮಲೋಕಕ್ಕೆ ಬಹುಕ್ಷಿಪ್ರವಾಗಿ ಕಳುಹಿಸಿಬಿಡುವುದು.

ಗದಾಪಾಣಿಯಾದ ಭೀಮಸೇನನನ್ನು ರಣಾಂಗಣದಲ್ಲಿ ನೋಡಲು ನನಗೆ ಬಹಳ ಆಸೆಯಾಗಿದೆ. ನಾನದನ್ನು ಬಹಳ ಕಾಲದಿಂದಲೂ ಆಶಿಸುತ್ತಿದ್ದೇನೆ. ಮತ್ತು ಅದಕ್ಕಾಗಿಯೇ ಪ್ರಾರ್ಥಿಸುತ್ತಲೂ ಇದ್ದೇನೆ. ಗದಾಪಾಣಿಯಾದ ಭೀಮನನ್ನು ರಣಾಂಗಣದಲ್ಲಿ ಎದುರಿಸಬೇಕೆಂಬುದು ನನ್ನ ಅನುದಿನದ ಮನೋರಥವಾಗಿದೆ. ಯುದ್ಧದಲ್ಲಿ ಗದಾಪಾಣಿಯಾದ ನನ್ನಿಂದ ಪ್ರಹೃತನಾಗುವ ಪೃಥಾದೇವಿಯ ಮಗನಾದ ವೃಕೋದರನು–ಸೀಳಿಹೋದ ಶರೀರವುಳ್ಳವನಾಗಿ–ನೆಲದ ಮೇಲೆ ಸತ್ತುಬೀಳುತ್ತಾನೆ. ನಾನೇನಾದರೂ ಒಮ್ಮೆ ಅಚಲವಾದ ಹಿಮವತ್ಪರ್ವತವನ್ನು ನನ್ನ ಗದೆಯಿಂದ ಪ್ರಹರಿಸಿದ್ದೇ ಆದರೆ ಆ ಪರ್ವತವೂ ಲಕ್ಷೋಪಲಕ್ಷ ಭಾಗಗಳಾಗಿ ಸೀಳಿಹೋಗುತ್ತದೆ. ಗದಾಯುದ್ಧ ದಲ್ಲಿ ದುರ್ಯೋಧನನಿಗೆ ಸಮಾನರಾದವರು ಬೇರೊಬ್ಬರಿಲ್ಲವೆಂಬ ವಿಷಯವು ಸಂಕರ್ಷಣನೊಬ್ಬನ ನಿಶ್ಚಯವೇ ಆಗಿರುವುದಿಲ್ಲ. ಸ್ವತಃ ಭೀಮಸೇನನಿಗೂ ಈ ವಿಷಯವು ತಿಳಿದಿದೆ. ಕೃಷ್ಣಾರ್ಜುನರೂ ಈ ವಿಷಯವನ್ನು ಮನಗಂಡಿದ್ದಾರೆ. ಮಹಾರಾಜ! ಈಗಲಾದರೂ ಭೀಮಸೇನನ ಸಂಬಂಧವಾದ ಭಯವನ್ನು ದೂರಮಾಡು. ಮುಂಬರುವ ಮಹಾಯುದ್ಧದಲ್ಲಿ ನಾನವನನ್ನು ಖಂಡಿತವಾಗಿಯೂ ಸೋಲಿಸುತ್ತೇನೆ. ಆದುದರಿಂದ ನೀನು ಖಂಡಿತವಾಗಿಯೂ ಮನಸ್ಸಿಗೆ ಖೇದವನ್ನು ತಂದುಕೊಳ್ಳಬೇಡ. ಅವನೊಬ್ಬನನ್ನು ನಾನು ಸಂಹರಿಸಿದನಂತರ ಉಳಿದವರ ವಿಷಯದಲ್ಲಿ ನೀನು ಯೋಚಿಸಬೇಕಾಗಿಯೇ ಇಲ್ಲ. ನನ್ನಿಂದ ಭೀಮನು ಹತನಾದೊಡನೆಯೇ ಅರ್ಜುನನಿಗೆ ಸಮಾನರಾದ ಮತ್ತು ಅರ್ಜುನನನ್ನು ಮೀರಿಸಿದ ಅನೇಕವೀರರು ಅವನನ್ನು ಸುತ್ತುವರಿದು ಅವನ ಮೇಲೆ ಅನುಸ್ಯೂತವಾಗಿ ಬಾಣಪ್ರಯೋಗಮಾಡುತ್ತಾರೆ.

ಭೀಷ್ಮ, ದ್ರೋಣರು, ಕೃಪರು, ಅಶ್ವತ್ಥಾಮಾ, ಕರ್ಣ, ಭೂರಿಶ್ರವ, ಪ್ರಾಗ್ಜ್ಯೋತಿಷಾಧಿಪತಿಯಾದ ಭಗದತ್ತ, ಶಲ್ಯ, ಸಿಂಧುರಾಜನಾದ ಜಯ ದ್ರಥ–ಇವರಲ್ಲಿ ಒಬ್ಬೊಬ್ಬರೇ ಐವರು ಪಾಂಡವರನ್ನೂ ಸಂಹಾರಮಾಡಲು

ಸಮರ್ಥರಾಗಿರುತ್ತಾರೆ. ಹೀಗಿರುವಾಗ ಎಲ್ಲರೂ ಸೇರಿ ಅರ್ಜುನನೊಬ್ಬನನ್ನು ಕ್ಷಣಮಾತ್ರದಲ್ಲಿ ಸಂಹರಿಸುತ್ತಾರೆಂಬ ವಿಷಯದಲ್ಲಿ ಸಂಶಯವೇಕೆ?

**ಸಮೇತಾಸ್ತು ಕ್ಷಣೇನೈತಾನ್ನೇಷ್ಯನ್ತಿ ಯಮಸಾದನಮ್ ॥೪೪॥**

ನಮ್ಮ ಮಹಾರಥರೆಲ್ಲರೂ ಸೇರಿ ಕ್ಷಣಮಾತ್ರದಲ್ಲಿಯೇ ಪಾಂಡವರನ್ನು ಯಮಾಲಯಕ್ಕೆ ಕಳುಹಿಸಿಬಿಡುತ್ತಾರೆ.

ನಮ್ಮ ಕಡೆಯ ರಾಜರಿಗೆ ಸೇರಿದ ಸಮಗ್ರವಾದ ಚತುರಂಗಸೈನ್ಯಕ್ಕೆ ಕುಂತಿಯ ಮಗನಾದ ಧನಂಜಯನೊಬ್ಬನನ್ನು ಪರಾಜಯಗೊಳಿಸಲು ಸಾಧ್ಯವಾಗಲಾರದೇ? ನಮ್ಮ ಅಪಾರಸೇನೆಯೂ ನಮ್ಮಲ್ಲಿರುವ ಅತಿರಥ-ಮಹಾರಥರೂ ಸೇರಿ ಅವನೊಬ್ಬನನ್ನು ಪರಾಜಯಗೊಳಿಸದಿರಲು ವಿಶೇಷವಾದ ಕಾರಣಗಳೇನೂ ಕಾಣುವುದಿಲ್ಲ. ಭೀಷ್ಮ, ದ್ರೋಣರು, ಅಶ್ವತ್ಥಾಮಾ ಮತ್ತು ಕೃಪಾಚಾರ್ಯರು ಪ್ರಯೋಗಿಸುವ ಬಹುತೀಕ್ಷ್ಣವಾದ ನೂರಾರು ಬಾಣಗಳಿಗೆ ಲಕ್ಷ್ಯನಾಗುವ ಅರ್ಜುನನು ಪ್ರತೀಕಾರಮಾಡಲು ಅಶಕ್ತನಾಗಿ ಯಮಲೋಕಕ್ಕೆ ಹೋಗುತ್ತಾನೆ. ನಮ್ಮ ಪಿತಾಮಹನೇನು ಸಾಮಾನ್ಯನೇ? ತಾತ! ನಮ್ಮ ಮುತ್ತಾತನಾದ ಶಾಂತನುವಿಗಿಂತಲೂ ಇವನು ಪರಾಕ್ರಮದಲ್ಲಿ ಅಧಿಕನಾದವನು. ಮೇಲಾಗಿ, ತಂದೆಯೇ! ಭೀಷ್ಮನನ್ನು ಸಂಹರಿಸುವವರು ಈ ಪೃಥ್ವಿಯಲ್ಲಿ ಯಾರೊಬ್ಬರೂ ಇರುವುದಿಲ್ಲ. ಭೀಷ್ಮನ ವಿಷಯದಲ್ಲಿ ಪ್ರಸನ್ನನಾದ ಶಾಂತನುವು-'ನಾಕಾಮಸ್ತ್ವಂ ಮರಿಷ್ಯಸಿ' 'ನೀನಿಚ್ಛೆಪಡದಿದ್ದರೆ ನೀನು ಸಾಯುವುದಿಲ್ಲ. ಅರ್ಥಾತ್ ನೀನು ಇಚ್ಛಾಮರಣಿಯಾಗುವೆ'–ಎಂಬ ವರವನ್ನಿತ್ತಿದ್ದಾನೆ. ಇಂತಹ ಮಹಾಶೂರನೂ, ಸಂಹಾರಕರೇ ಇಲ್ಲದವನೂ ನಮ್ಮ ಪಕ್ಷದಲ್ಲಿದ್ದಾನೆ. ಮಹಾರಾಜ! ನಮ್ಮ ಪಕ್ಷದಲ್ಲಿರುವ ಮತ್ತೊಬ್ಬರು ಮಹಾವೀರರೆಂದರೆ ದ್ರೋಣಾಚಾರ್ಯರು. ಇವರು ಅಯೋನಿಜರು. ಬ್ರಹ್ಮರ್ಷಿಗಳಾದ ಭರದ್ವಾಜರ ವೀರ್ಯದಿಂದ ಕಲಶದಲ್ಲಿ ಜನ್ಮತಾಳಿದವರು. ಆದುದರಿಂದ ಇವರನ್ನು ಸಾಮಾನ್ಯರೆಂದು ಭಾವಿಸಬೇಡ. ಪರಮಾಸ್ತ್ರವಿದನಾದ ಅಶ್ವತ್ಥಾಮನು ದ್ರೋಣರಿಂದ ಹುಟ್ಟಿದವನು. ಆಚಾರ್ಯಮುಖ್ಯರಾದ ಕೃಪರೂ ಮಹರ್ಷಿಯಾದ ಗೌತಮನಿಂದ ಹುಟ್ಟಿದವರು.

ಶರಸ್ತಂಬದಲ್ಲಿ ಹುಟ್ಟಿರುವ ಅಯೋನಿಜರಾದ ಕೃಪರು ಅವಧ್ಯರೆಂದೇ

ನಾನು ಭಾವಿಸಿದ್ದೇನೆ. ಆಚಾರ್ಯಪುತ್ರನಾದ ಅಶ್ವತ್ಥಾಮನ ತಂದೆ, ತಾಯಿ ಮತ್ತು ಮಾತುಲ–ಈ ಮೂವರೂ ಅಯೋನಿಜರು. ಅಶ್ವತ್ಥಾಮನೆಂತಹ ಪ್ರಭಾವಶಾಲಿಯೆಂಬುದನ್ನು ನೀನು ಇವನ ಹುಟ್ಟಿನಿಂದಲೇ ಮನಗಾಣಬಹುದಾಗಿದೆ. ಇವನೂ ನನ್ನ ಪಕ್ಷದಲ್ಲಿಯೇ ಇದ್ದಾನೆ. ಇವರೆಲ್ಲರೂ ದೇವಕಲ್ಪರಾಗಿಯೂ, ಮಹಾರಥರಾಗಿಯೂ ಇದ್ದಾರೆ. ಇವರು ಯುದ್ಧದಲ್ಲಿ ಇಂದ್ರನಿಗೂ ವ್ಯಥೆಯನ್ನುಂಟುಮಾಡಬಲ್ಲವರಾಗಿರುತ್ತಾರೆ. ಇವರನ್ನೆದುರಿಸಿ ನಿಲ್ಲಲು ಅರ್ಜುನನಿಗೆ ಸರ್ವಥಾ ಸಾಧ್ಯವಿಲ್ಲ. ಸಾಮೂಹಿಕವಾಗಿ ಇವರನ್ನೆದುರಿಸುವುದಿರಲಿ.; ಯುದ್ಧದಲ್ಲಿ ಕ್ರುದ್ಧರಾಗಿ ನಿಲ್ಲುವ ಇವರನ್ನು ಪ್ರತ್ಯೇಕ-ಪ್ರತ್ಯೇಕವಾಗಿಯೂ ಅರ್ಜುನನು ವೀಕ್ಷಿಸಲಾರನು. ಪ್ರತ್ಯೇಕ-ಪ್ರತ್ಯೇಕ ವಾಗಿಯೂ ಇವರನ್ನೆದುರಿಸಿ ಯುದ್ಧಮಾಡಲಾರನು. ಆದುದರಿಂದ ಇವರೆಲ್ಲರೂ ಒಟ್ಟಾಗಿ ಸೇರಿ ಯುದ್ಧಮಾಡಿ ನಿಶ್ಚಯವಾಗಿಯೂ ಅರ್ಜುನನನ್ನು ಸಂಹರಿಸುತ್ತಾರೆ. ಈ ವಿಷಯವಾಗಿ ನೀನು ಸಂಶಯಿಸುವ ಕಾರಣವಿಲ್ಲ. ಮಹಾರಾಜ!

ನಮ್ಮ ಕರ್ಣನೂ–ಭೀಷ್ಮ, ದ್ರೋಣ, ಕೃಪರಿಗೆ ಸಮಾನನೆಂದೇ ನಾನು ಭಾವಿಸುತ್ತೇನೆ. ಮಹಾಶೂರನಾದ ಕರ್ಣನು ವಿದ್ಯಾಭ್ಯಾಸವನ್ನು ಮುಗಿಸಿ ಕೊಂಡು ಹೊರಡುವಾಗ ಇವನ ಗುರುವಾದ ಸುಪ್ರಸಿದ್ಧನಾದ ಭಗವಾನ್ ಪರಶುರಾಮನು 'ಮತ್ಸಮೋಽಸಿ' 'ನೀನು ಧನುರ್ವಿದ್ಯೆಯಲ್ಲಿ ನನಗೆ ಸಮಾನನಾಗಿರುವೆ'–ಎಂದೇ ಕರ್ಣನಿಗೆ ಹೇಳಿರುವನು. ಅದೂ ಅಲ್ಲದೇ ಇವನು ಮಹಾಪುರುಷನೆಂಬುದಕ್ಕೂ ನಿದರ್ಶನಗಳಿವೆ. ಇವನು ಹುಟ್ಟುವಾಗಲೇ ಸುರುಚಿರವಾದ ಕರ್ಣಕುಂಡಲಗಳನ್ನು ಧರಿಸಿಕೊಂಡೇ ಹುಟ್ಟಿದ್ದನು. ಆದರೆ ಆ ಕರ್ಣಕುಂಡಲಗಳನ್ನು ಶಚೀದೇವಿಯ ಸಲುವಾಗಿ ಮಹೇಂದ್ರನೇ ಬಂದು ಪರಂತಪನಾದ ಕರ್ಣನನ್ನು ಯಾಚಿಸಿದನು. ಅಮೋಘವಾದ ಬಹುಭಯಂಕರ ವಾದ ಶಕ್ತ್ಯಾಯುಧವನ್ನು ಕರ್ಣನು ಇಂದ್ರನಿಂದ ಪಡೆದುಕೊಂಡು ತನ್ನಲ್ಲಿದ್ದ ಕರ್ಣಕುಂಡಲಗಳನ್ನು ಇಂದ್ರನಿಗೆ ಕೊಟ್ಟುಬಿಟ್ಟನು. ಅಂತಹ ಮಹಾಶಕ್ತಿಯಿಂದ ಸುರಕ್ಷಿತನಾಗಿರುವ ಕರ್ಣನನ್ನೆದುರಿಸಿ ಯುದ್ಧಮಾಡಿ ಧನಂಜಯನು ಹೇಗೆ ತಾನೇ ಜೀವದಿಂದುಳಿಯುವನು? ಯುದ್ಧದಲ್ಲಿ ವಿಜಯವು ಕೈಯಲ್ಲಿರುವ ಹಣ್ಣಿನಂತೆಯೇ ನನಗೇ ಶತಶಃ

ಸಿದ್ಧವಾಗಿದೆ. ಮಹಾರಾಜ! ಒಂದೇ ಒಂದು ಹಗಲಿನಲ್ಲಿ ಪಿತಾಮಹನಾದ ಭೀಷ್ಮನು ಹತ್ತು ಸಾವಿರ ಯೋಧರನ್ನು ಸಂಹರಿಸುತ್ತಾನೆ. ಅಂತಹ ಸಾಮರ್ಥ್ಯವು ಪಿತಾಮಹನಲ್ಲಿದೆ. ಇದೊಂದರಿಂದಲೇ ನೀನು ಈ ಪೃಥ್ವಿಯಲ್ಲಿ ನಾನು ಅಪರಾಜಿತನೆಂಬುದನ್ನು ಮನಗಾಣಬಹುದಾಗಿದೆ. ಈ ಭೂಮಿಯಲ್ಲಿ ನಮ್ಮೆದುರಾಗಿ ನಿಲ್ಲುವ ಶತ್ರುಗಳಿಗೆ ಪರಾಜಯವೆಂಬುದು ಇದರಿಂದಲೇ ಬಹುಸ್ಪಷ್ಟವಾಗಿದೆ. ದ್ರೋಣರು, ಅಶ್ವತ್ಥಾಮಾ ಮತ್ತು ಕೃಪರೂ ಭೀಷ್ಮನಿಗೆ ಸಮಾನವಾದ ಬಲವುಳ್ಳವರೇ ಆಗಿದ್ದಾರೆ. ಸಂಶಪ್ತಕರೆಂಬ ಕ್ಷತ್ರಿಯರೂ ಕೂಡ ನಮ್ಮ ಪಕ್ಷದಲ್ಲಿಯೇ ಇದ್ದಾರೆ. ಅವರ ನಿರ್ಧಾರವು ಈ ರೀತಿಯಾಗಿದೆ :

**ಅರ್ಜುನಂ ವಯಮಸ್ಮಾನ್ವಾ ನಿಹನ್ಯಾತ್ಕಪಿಕೇತನಃ ॥೫೯॥**

'ಅರ್ಜುನನನ್ನಾದರೂ ನಾವು ಸಂಹರಿಸಬೇಕು ಅಥವಾ ನಮ್ಮನ್ನಾದರೂ ಅರ್ಜುನನು ಸಂಹರಿಸಬೇಕು. ಮುಂದೆ ಈ ಭೂಮಿಯಲ್ಲಿ ನಾವಾದರೂ ಉಳಿಯಬೇಕು ; ಅರ್ಜುನನಾದರೂ ಉಳಿಯಬೇಕು. ಇಬ್ಬರೂ ಬದುಕಿರಲು ಸಾಧ್ಯವಿಲ್ಲ. ಯುದ್ಧಮಾಡಲು ಅರ್ಜುನನು ಸರಿಯಾದ ಯೋಧನಾಗಿರುತ್ತಾನೆ.' ಈ ರೀತಿ ಭಾವಿಸಿರುವ ಸಂಶಪ್ತಕರು ಸವ್ಯಸಾಚಿಯ ವಧೆಯಲ್ಲಿ ಬದ್ಧಪ್ರತಿಜ್ಞರಾಗಿರುತ್ತಾರೆ. ಸದ್ಯದ ಪರಿಸ್ಥಿತಿಯು ಹೀಗಿರುವಾಗ ಪಾಂಡವರಿಗೆ ಭಯಪಟ್ಟು ಕಾರಣವೇ ಇಲ್ಲದೇ ವ್ಯಥೆಪಡುವುದೇ? ಭೀಮಸೇನನೊಬ್ಬನನ್ನು ನಾನು ಸಂಹರಿಸಿಬಿಟ್ಟೆನೆಂದರೆ ಮುಂದೆ ಪಾಂಡವರ ಪಕ್ಷದಲ್ಲಿ ಯುದ್ಧಮಾಡುವವರಾರಿದ್ದಾರೆ? ಮತ್ತಾರೂ ಯುದ್ಧಮಾಡುವವರೇ ಇಲ್ಲವೆಂದು ನಾನಂತೂ ನಿಶ್ಚಯಿಸಿಬಿಟ್ಟಿದ್ದೇನೆ. ನೀನೇನಾದರೂ ಬೇರೆ ಯವರಿದ್ದಾರೆಂಬುದನ್ನು ತಿಳಿದುಕೊಂಡಿದ್ದ ಪಕ್ಷದಲ್ಲಿ ಹೇಳು, ಮಹಾರಾಜ!

ಶತ್ರುಪಕ್ಷದಲ್ಲಿ ಸಾರಭೂತರಾದವರು ಏಳು ಮಂದಿ ಇದ್ದಾರೆ. ಅವರು ಆ ಏಳು ಮಂದಿಯನ್ನು ಅವಲಂಬಿಸಿಯೇ ಯುದ್ಧಮಾಡಬೇಕಾಗಿದೆ. ಪಂಚ ಪಾಂಡವರು, ಸಾತ್ಯಕಿ ಮತ್ತು ಧೃಷ್ಟದ್ಯುಮ್ನ–ಇವರೇ ಆ ಏಳು ಮಂದಿ ಯೋಧರು. ಆ ಏಳು ಮಂದಿಯನ್ನು ಬಿಟ್ಟು ಎಂಟನೆಯವನಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ನಮ್ಮ ಪಕ್ಷದಲ್ಲಾದರೂ ವಿಶಿಷ್ಟರಾದ ಯೋಧರು ಅನೇಕರಿದ್ದಾರೆ. ಭೀಷ್ಮ, ದ್ರೋಣ, ಕೃಪ, ದ್ರೋಣರ ಮಗ ಅಶ್ವತ್ಥಾಮಾ, ವೈಕರ್ತನ (ಕರ್ಣ), ಸೋಮದತ್ತ, ಬಾಹ್ಲಿಕ, ಪ್ರಾಗ್ಜ್ಯೋತಿಷಾಧಿಪತಿಯಾದ

ಭಗದತ್ತ, ಶಲ್ಯ, ಅವಂತಿಯ ರಾಜಕುಮಾರರಾದ ವಿಂದ ಮತ್ತು ಅನುವಿಂದರು, ಜಯದ್ರಥ, ದುಃಶಾಸನ, ದುರ್ಮುಖ, ದುಃಸಹ, ಶ್ರುತಾಯು, ಚಿತ್ರಸೇನ, ಪುರುಮಿತ್ರ, ವಿವಿಂಶತಿ, ಶಲ, ಭೂರಿಶ್ರವ, ನಿನ್ನ ಮಗ ವಿಕರ್ಣ–ಇವರು ನಮ್ಮ ಪಕ್ಷದಲ್ಲಿದ್ದಾರೆ. ಅವರ ಪಕ್ಷದಲ್ಲಿ ಏಳು ಮಂದಿ ಪ್ರಮುಖಯೋಧರಿದ್ದರೆ ನಮ್ಮ ಪಕ್ಷದಲ್ಲಿ ನೂರಾರು ಮಂದಿ ಮಹಾಯೋಧರಿದ್ದಾರೆ. ಇದಕ್ಕೂ ಮಿಗಿಲಾಗಿ ನನ್ನ ಕಡೆ ಹನ್ನೊಂದು ಅಕ್ಷೌಹಿಣೀಸೈನಿಕರಿದ್ದಾರೆ. ಇದಕ್ಕೆ ಪ್ರತಿಯಾಗಿ ಶತ್ರುಪಕ್ಷದಲ್ಲಿ ಕೇವಲ ಏಳು ಅಕ್ಷೌಹಿಣೀಸೈನಿಕರಿದ್ದಾರೆ. ಹೀಗಿರುವಾಗ ನಾನು ಪರಾಜಿತನಾಗಲು ಕಾರಣವೇನು?

**ಬಲಂ ತ್ರಿಗುಣತೋ ಹೀನಂ ಯೋಧ್ಯಂ ಪ್ರಾಹ ಬೃಹಸ್ಪತಿಃ ॥೬೬॥**

ಶತ್ರುಪಕ್ಷದ ಸೈನ್ಯವು ನಮ್ಮ ಸೈನ್ಯದ ಸಂಖ್ಯೆಯ ಮೂರನೆಯ ಒಂದು ಭಾಗದಷ್ಟಾದರೂ ಕಡಿಮೆಯಿದ್ದರೆ ಯುದ್ಧಮಾಡಬಹುದೆಂದು ಬೃಹಸ್ಪತಿಯೇ ಹೇಳಿದ್ದಾನೆ. ನನ್ನಲ್ಲಿರುವ ಸೇನೆಯು ಶತ್ರುಪಕ್ಷದಲ್ಲಿರುವ ಸೇನೆಗಿಂತಲೂ ನಾಲ್ಕು ಅಕ್ಷೌಹಿಣಿಗಳಷ್ಟು ಅಧಿಕವಾಗಿದ್ದು ಬೃಹಸ್ಪತಿಯ ನೀತಿಶಾಸ್ತ್ರಕ್ಕೆ ಅನುಗುಣವಾಗಿದೆ. ಶತ್ರುಪಕ್ಷದಲ್ಲಿ ಅನೇಕ ನ್ಯೂನತೆಗಳಿವೆ. ಅಲ್ಲದೇ ಗುಣದಲ್ಲಿಯೂ ಮತ್ತು ಸಂಖ್ಯೆಯಲ್ಲಿಯೂ ನನ್ನ ಸೈನ್ಯವು ಪರ್ಯಾಪ್ತವಾಗಿರುವುದೆಂದೇ ನಾನು ಭಾವಿಸುತ್ತೇನೆ. ಈ ಎಲ್ಲ ದೃಷ್ಟಿಗಳಿಂದಲೂ ನನ್ನ ಬಲವು ಅತ್ಯಧಿಕವಾಗಿದೆ. ಪಾಂಡವರ ಬಲದಲ್ಲಿ ನ್ಯೂನತೆಯಿದೆ. ಈ ಎಲ್ಲ ವಿಷಯಗಳನ್ನೂ ನೀನು ಸಾವಧಾನವಾಗಿ ಸಮಾಲೋಚಿಸಿ ವ್ಯಾಕುಲರಹಿತನಾಗು. ಅಧೀರನಾಗಬೇಡ, ತಂದೆಯೇ!"

ಜನಮೇಜಯ! ಈ ರೀತಿಯಲ್ಲಿ ಪರಪುರಂಜಯನಾದ ದುರ್ಯೋಧನನು ಅನೇಕವಿಧವಾದ ತರ್ಕಬದ್ಧವಾದ ಮಾತುಗಳಿಂದ ಧೃತರಾಷ್ಟ್ರನನ್ನು ಆಶ್ವಸಿಸಿ, ತನ್ನ ಮುಂದಿನ ಕರ್ತವ್ಯವನ್ನು ಮಾಡಲು ಸಕಾಲವಾಗಿದೆಯೆಂದು ಭಾವಿಸಿ, ಪಾಂಡವರ ವಿಷಯದಲ್ಲಿ ಇನ್ನೂ ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳುವ ಆಶಯದಿಂದ ಸಂಜಯನೊಡನೆ ಮಾತನಾಡಿದನು."

ಞಞನೆಯ ಅಧ್ಯಾಯವು ಮುಗಿಯಿತು.

೫೬ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

# ಸಂಜಯನು ಅರ್ಜುನನ ಧ್ವಜ, ಅಶ್ವಗಳು ಮತ್ತು ಯುಧಿಷ್ಠಿರಾದಿಗಳ ಧ್ವಜಗಳು ಮತ್ತು ಅಶ್ವಗಳ ವರ್ಣನೆಯನ್ನು ಮಾಡಿದುದು

ಪಾರಿಕ್ಷಿತ! ದುರ್ಯೋಧನನು ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ಯುದ್ಧಪ್ರೇಪ್ಸುವಾದ (ಯುದ್ಧಾಭಿಲಾಷಿಯಾದ) ಯುಧಿಷ್ಠಿರನು ಏಳು ಅಕ್ಷೌಹಿಣೀಸೈನ್ಯವನ್ನು ಮಾತ್ರವೇ ಪಡೆದು ಅಲ್ಪ ಸಂಖ್ಯಾತರಾದ ರಾಜರೊಡನೆ ಕೂಡಿಕೊಂಡು ಏನು ಮಾಡಬೇಕೆಂದಿರುತ್ತಾನೆ?”

ಸಂಜಯನು ಹೇಳುತ್ತಾನೆ :

“ದುರ್ಯೋಧನ! ಕೇವಲ ಏಳು ಅಕ್ಷೌಹಿಣೀಸೈನ್ಯವನ್ನು ಪಡೆದು ಕೊಂಡಿರುವುದರಿಂದಲೇ ಯುದ್ಧಪ್ರೇಪ್ಸುವಾದ ಯುಧಿಷ್ಠಿರನು ಆನಂದಭರಿತ ನಾಗಿದ್ದಾನೆ. ಶತ್ರುಸೈನ್ಯದ ದೃಷ್ಟಿಯಿಂದ ಅಲ್ಪಸೇನಾಬಲವು ತಮಗೆ ಸಿಕ್ಕಿದುದಕ್ಕಾಗಿ ಭೀಮಾರ್ಜುನರಾಗಲೀ, ನಕುಲ-ಸಹದೇವರಾಗಲೀ ಭೀತರಾ ಗಿರುವುದಿಲ್ಲ. ಕುಂತೀಪುತ್ರನಾದ ಅರ್ಜುನನು ಅಸ್ತ್ರಪ್ರಯೋಗಸಂಬಂಧವಾದ ಮಂತ್ರಗಳ ಪರೀಕ್ಷಾರ್ಥವಾಗಿ, ನಾಲ್ಕು ದಿಕ್ಕುಗಳನ್ನೂ ಪ್ರಕಾಶಗೊಳಿಸುತ್ತಾ ದಿವ್ಯವಾದ ರಥವನ್ನು ಸಜ್ಜುಗೊಳಿಸಿದನು. ಆ ಸಮಯದಲ್ಲಿ ಸ್ವರ್ಣಮಯವಾದ ಕವಚವನ್ನು ಧರಿಸಿದ ಅರ್ಜುನನು ಮಿಂಚಿನಿಂದ ಕೂಡಿದ ಮೋಡದಂತೆಯೇ ಪ್ರಕಾಶಿಸಿದನು. ಎಲ್ಲ ದಿಕ್ಕುಗಳಿಗೂ ತಿರುಗಿ ಅಸ್ತ್ರಮಂತ್ರಗಳನ್ನು ಧ್ಯಾನಮಾಡಿದನಂತರ ಉಲ್ಲಾಸದಿಂದ ಕೂಡಿದ ಅರ್ಜುನನು ನನ್ನನ್ನು ಕುರಿತು ಹೇಳಿದನು :

‘ಸಂಜಯ! ವಿಜಯಕ್ಕೆ ಮೊದಲೇ ವಿಜಯಸೂಚಕಗಳಾದ ಚಿಹ್ನೆಗಳು ಕಾಣುತ್ತಿವೆ. ಇವುಗಳನ್ನು ನೀನೂ ನೋಡಬಹುದಾಗಿದೆ. ಪೂರ್ವಭಾವಿಯಾದ ಈ ದೃಶ್ಯಗಳಿಂದಲೇ ನಾವು ವಿಜಯಗಳಿಸುವೆವೆಂದು ನಿಶ್ಚಯಿಸ ಬಹುದಾಗಿದೆ.’

ಮಹಾರಾಜ! ಅರ್ಜುನನು ಹೇಳಿದಂತೆಯೇ ಆಗುವುದೆಂದು ನಾನೂ ಭಾವಿಸಿದ್ದೇನೆ.”

ಸಂಜಯನ ಮಾತುಗಳನ್ನು ಕೇಳಿ ಪುನಃ ದುರ್ಯೋಧನನು ಹೇಳಿದನು :

"ಸಂಜಯ! ಪಗಡೆಯಾಟದಲ್ಲಿಯೇ ಸೋತುಹೋಗಿರುವ ಪಾಂಡವರನ್ನು ನೀನು ಬಹುವಾಗಿ ಹೊಗಳುತ್ತಿರುವೆ ಮತ್ತು ಅಭಿನಂದಿಸುತ್ತಿರುವೆ. (ಇದು ನಿನ್ನ ಜನ್ಮಸಿದ್ಧಸ್ವಭಾವವಾಗಿದೆ. ಅದು ಹೇಗಾದರೂ ಇರಲಿ.) ಅರ್ಜುನನ ರಥದಲ್ಲಿ ಕುದುರೆಗಳು ಹೇಗಿವೆ ಮತ್ತು ಧ್ವಜಗಳು ಹೇಗಿವೆಯೆಂಬುದನ್ನಾದರೂ ಹೇಳು."

"ಪ್ರಜಾನಾಥ! ವಿಶ್ವಕರ್ಮಾ, ತ್ವಷ್ಟ್ರ ಮತ್ತು ಪ್ರಜಾಪತಿಗಳು ಇಂದ್ರನೊಡಗೂಡಿ ಅರ್ಜುನನ ಧ್ವಜದಲ್ಲಿ ಅನೇಕವಿಧವಾದ ರೂಪಗಳನ್ನು ರಚಿಸಿರುತ್ತಾರೆ. ದೇವಮಾಯೆಯಿಂದ ಇಂದ್ರಾದಿಗಳು ಆ ಧ್ವಜದಲ್ಲಿ ಬಹುಮೂಲ್ಯವಾಗಿಯೂ, ದಿವ್ಯವಾಗಿಯೂ, ಮಹತ್ತಾಗಿಯೂ ಮತ್ತು ಸೂಕ್ಷ್ಮವಾಗಿಯೂ ಇರುವ ಅನೇಕರೂಪಗಳನ್ನು ರಚಿಸಿದ್ದಾರೆ. ಭೀಮಸೇನನ ಸಂತುಷ್ಟಿಗಾಗಿ ವಾಯುಪುತ್ರನಾದ ಹನುಮಂತನು ಅರ್ಜುನನ ಧ್ವಜದಲ್ಲಿ ಸ್ವಸ್ವರೂಪವನ್ನು ಸ್ಥಾಪಿಸಿದ್ದಾನೆ.

ಮಹಾರಾಜ! ಅರ್ಜುನನ ರಥದ ಮೇಲಿರುವ ಧ್ವಜವು ಎಲ್ಲ ದಿಕ್ಕುಗಳಲ್ಲಿಯೂ ಒಂದು ಯೋಜನದವರೆಗೆ ಪ್ರಸರಿಸುತ್ತದೆ. ವಿಶ್ವಕರ್ಮನು ಆ ಧ್ವಜವನ್ನು ಯಾವ ರೀತಿಯಲ್ಲಿ ಸೃಷ್ಟಿಸಿದ್ದಾನೆಂದರೆ.: ಅನೇಕಾನೇಕ ವೃಕ್ಷಗಳು ಆ ಧ್ವಜಕ್ಕೆದುರಾಗಿ ಬಂದರೂ ಅವುಗಳಿಂದ ಧ್ವಜವು ನಿರೋಧಿತವಾಗುವುದಿಲ್ಲ. ಯೋಜನವಿಸ್ತಾರವಾದ ಆ ಧ್ವಜವು ಮರಗಳ ಕೊಂಬೆಗಳಿಗೆ ಸಿಕ್ಕಿಕೊಳ್ಳುವುದಿಲ್ಲ. ಅಂತಹ ರೀತಿಯಲ್ಲದನ್ನು ವಿಶ್ವಕರ್ಮನು ನಿರ್ಮಿಸಿದ್ದಾನೆ. ಆಕಾಶದಲ್ಲಿ ಕಾಮನಬಿಲ್ಲು ಯಾವ ರೀತಿಯಲ್ಲಿ ಪ್ರಕಾಶಿಸುವುದೋ–ಅಂತೆಯೇ ಅರ್ಜುನನ ರಥದ ಮೇಲೆ ಆ ಧ್ವಜವು ಪ್ರಕಾಶಿಸುತ್ತದೆ. ಕಾಮನಬಿಲ್ಲೂ ಒಂದು ಬಣ್ಣದ್ದಾಗಿರುವುದಿಲ್ಲ. ಅದು ಹೇಗಿರುವುದೆಂದೂ ಅದು ಯಾವುದೆಂದೂ ನಾನು ಸ್ಪಷ್ಟವಾಗಿ ತಿಳಿದಿಲ್ಲ. ಅಂತೆಯೇ ಅರ್ಜುನನ ಧ್ವಜವೂ ಹೇಗಿರುವುದೆಂಬುದನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ವಿಶ್ವಕರ್ಮನಿಂದ ನಿರ್ಮಿತವಾಗಿರುವ ಆ ಧ್ವಜದ ರೂಪವೂ ಬಹ್ವಾಕಾರವುಳ್ಳದ್ದಾಗಿದೆ; ಬಹುವರ್ಣಗಳಿಂದ ಕೂಡಿದ್ದಾ

ಗಿದೆ. ಅರ್ಜುನನ ಧ್ವಜದ ಬಣ್ಣವು ಇಂತಹುದೇ ಎಂದು ನಿರ್ದಿಷ್ಟವಾಗಿ ಹೇಳುವ ಸಾಧ್ಯತೆಯಿಲ್ಲ. ಯಾವ ರೀತಿಯಲ್ಲಿ ಧಗ-ಧಗನೆ ಉರಿಯುವ ಯಜ್ಞೇಶ್ವರನ ಧೂಮವು ನಾನಾವರ್ಣದ ಜ್ವಾಲೆಗಳೊಡನೆ ಎಲ್ಲ ದಿಕ್ಕುಗಳನ್ನೂ ವ್ಯಾಪಿಸುತ್ತಾ ಆಕಾಶದ ಕಡೆಗೆ ಹೋಗುವುದೋ–ಅದೇ ರೀತಿಯಲ್ಲಿ ಸಂಚರಿಸುವಂತೆ ವಿಶ್ವಕರ್ಮನು ಆ ಧ್ವಜವನ್ನು ನಿರ್ಮಿಸಿದ್ದಾನೆ. ಯಾವ



ರೀತಿಯಲ್ಲಿ ಯಜ್ಞೇಶ್ವರನ ಧಗ-ಧಗಿಸುವ ಧೂಮಸಹಿತವಾದ ಜ್ವಾಲೆಯು ಭಾರರಹಿತವಾಗಿರುವುದೋ ಅದೇ ರೀತಿಯಲ್ಲಿ ಆ ಧ್ವಜವು ಯೋಜನ ವಿಸ್ತೀರ್ಣವುಳ್ಳದ್ದಾದರೂ ಭಾರವಾಗಿರುವುದಿಲ್ಲ ಮತ್ತು ಯಜ್ಞೇಶ್ವರನ ಜ್ವಾಲೆಯಂತೆಯೇ ಅದು ಯಾವ ವಿಧವಾದ ಅಡೆ-ತಡೆಗಳೂ ಇಲ್ಲದೇ ರಥದೊಡನೆ

ಹೋಗುತ್ತಿರುತ್ತದೆ. ಇದು ಅರ್ಜುನನ ರಥದಲ್ಲಿರುವ ಧ್ವಜದ ವರ್ಣನೆಯಾಯಿತು. ಈಗ ನಾನು ಅರ್ಜುನನ ರಥಕ್ಕೆ ಕಟ್ಟಿರುವ ಕುದುರೆಗಳ ವಿಷಯವಾಗಿ ಹೇಳುತ್ತೇನೆ, ಮಹಾರಾಜ! ಅರ್ಜುನನ ರಥಕ್ಕೆ ಬಿಳುಪಾದ, ವಾಯುವೇಗಕ್ಕೆ ಸಮಾನವಾದ ವೇಗವುಳ್ಳ, ಉತ್ತಮಜಾತಿಯ, ದಿವ್ಯವಾದ ಕುದುರೆಗಳು ಕಟ್ಟಲ್ಪಟ್ಟಿವೆ. ಅವು ಚಿತ್ರರಥನಿಂದ ಕೊಡಲ್ಪಟ್ಟಿವೆ. ಭೂಮಿಯಲ್ಲಿಯೇ ಆಗಲೀ, ಅಂತರಿಕ್ಷದಲ್ಲಿಯೇ ಆಗಲೀ, ಸ್ವರ್ಗದಲ್ಲಿಯೇ ಆಗಲೀ–ಆ ಕುದುರೆಗಳ ಓಟವು ಕ್ಷೀಣಿಸುವುದೂ ಇಲ್ಲ; ನಿರೋಧಿತವಾಗುವುದೂ ಇಲ್ಲ. ಯಾವ ವಿಧವಾದ ತಡೆಯೂ ಇಲ್ಲದೇ ಆ ಕುದುರೆಗಳು ಭೂಮ್ಯಂತರಿಕ್ಷ-ಸ್ವರ್ಗಗಳಲ್ಲಿ ಸಂಚರಿಸಬಲ್ಲುವು. ಆ ರಥಕ್ಕೆ ನೂರು ಕುದುರೆಗಳು ಕಟ್ಟಲ್ಪಟ್ಟಿವೆ. ಆ ನೂರು ಕುದುರೆಗಳಲ್ಲಿ ಒಂದು ಕುದುರೆಯೂ ಯಾವ ಕಾಲದಲ್ಲಿಯೂ ಕಡಿಮೆಯಾಗುವುದಿಲ್ಲ. ಯಾವುದಾದರೂ ಕುದುರೆಯು ಎದುರಾಳಿಯ ಶಸ್ತ್ರಾಘಾತಕ್ಕೆ ಸಿಕ್ಕಿ ಸತ್ತಿತೆಂದರೆ ಆ ಕುದುರೆಯ ಸ್ಥಳದಲ್ಲಿ ಮತ್ತೊಂದು ಹೊಸ ಕುದುರೆಯು ಹುಟ್ಟಿಕೊಳ್ಳುತ್ತದೆ. ಹಿಂದೆ ಆ ರಥಕ್ಕೆ ಪ್ರಾಪ್ತವಾಗಿರುವ ವರದ ಕಾರಣದಿಂದಾಗಿ ಶತಾಶ್ವಸಂಖ್ಯೆಗೆ ನ್ಯೂನತೆಯುಂಟಾಗುವುದಿಲ್ಲ. ರಾಜನಾದ ಯುಧಿಷ್ಠಿರನ ರಥಕ್ಕೂ ಮಹಾಶಕ್ತಿಯುಕ್ತವಾದ, ಬಹಳ ಎತ್ತರವಾದ, ದಂತದ ಬಣ್ಣವುಳ್ಳ ಕುದುರೆಗಳು ಕಟ್ಟಲ್ಪಟ್ಟಿವೆ. ಅವು ಬಹಳ ಶೋಭಾಯಮಾನವಾಗಿವೆ. ಭೀಮಸೇನನ ರಥದ ಕುದುರೆಗಳು ಕರಡಿಯ ಬಣ್ಣದಂತೆ ಕಪ್ಪಾಗಿವೆ. ಅವು ವಾಯುವೇಗಕ್ಕೆ ಸಮಾನವಾದ ವೇಗದಿಂದ ಕೂಡಿವೆ. ಗೋರೋಚನವರ್ಣದ, ತಿತ್ತಿರಿಪಕ್ಷಿಯಂತೆ ಚಿತ್ರವಾದ ಪೃಷ್ಠಭಾಗಗಳಿಂದ ಕೂಡಿರುವ ಕುದುರೆಗಳು ಸಹದೇವನ ರಥದ ಕುದುರೆಗಳಾಗಿವೆ. ಆ ಕುದುರೆಗಳನ್ನು ತಮ್ಮನ ವಿಷಯದಲ್ಲಿ ಸುಪ್ರೀತನಾದ ಅರ್ಜುನನೇ ಸಹದೇವನಿಗೆ ಕೊಟ್ಟಿರುವನು. ಆ ಕುದುರೆಗಳು ಸಹದೇವನ ಅಣ್ಣನಾದ, ವೀರನಾದ ಅರ್ಜುನನ ಕುದುರೆಗಳಿಗಿಂತಲೂ ಶ್ರೇಷ್ಠವಾಗಿವೆ. ಆ ಕುದುರೆಗಳು ಸರ್ವದಾ ಉಲ್ಲಾಸದಿಂದಿರುತ್ತಾ ರಥಸ್ಥನಾದ ಸಹದೇವನನ್ನು ಒಯ್ಯುತ್ತಿರುತ್ತವೆ.

ಅಜಮೀಢಕುಲನಂದನ! ಮಾದ್ರಿಯ ಮಗನಾದ ರಥಸ್ಥನಾದ ನಕುಲನನ್ನು ಮಹೇಂದ್ರನಿಂದಲೇ ಅನುಗೃಹೀತವಾದ ಕುದುರೆಗಳು ಒಯ್ಯುತ್ತವೆ.

ಅವು ಗಾಳಿಯ ವೇಗಕ್ಕೆ ಸಮಾನವಾದ ವೇಗವುಳ್ಳವುಗಳು. ಬಹುಬಲಿಷ್ಠವಾಗಿವೆ. ವೃತ್ರಾಸುರನ ಶತ್ರುವಾದ ಇಂದ್ರನನ್ನು ಒಯ್ಯುವಂತೆಯೇ ಇಂದ್ರದತ್ತವಾದ ಆ ಕುದುರೆಗಳು ರಥಸ್ಥನಾದ ನಕುಲನನ್ನು ಒಯ್ಯುತ್ತವೆ. ವಯಸ್ಸಿನಲ್ಲಿಯೂ ಮತ್ತು ಬಲದಲ್ಲಿಯೂ ನಾನು ಈ ಹಿಂದೆ ಹೇಳಿದ ಕುದುರೆಗಳಿಗೆ ಸಮಾನವಾದ, ಬಹುವೇಗಶಾಲಿಗಳಾದ, ಚಿತ್ರ-ವಿಚಿತ್ರವಾದ ಬಣ್ಣದಿಂದ ಕೂಡಿರುವ ಒಳ್ಳೆಯ ಜಾತಿಯ ಕುದುರೆಗಳು ರಥಸ್ಥರಾದ ಅಭಿಮನ್ಯು ಪ್ರಮುಖರಾದ ಪಾಂಡವರ ಮಕ್ಕಳನ್ನು ಒಯ್ಯುತ್ತವೆ. ಅವೆಲ್ಲವೂ ದೇವತೆಗಳಿಂದಲೇ ಕೊಡಲ್ಪಟ್ಟಿವೆ.”

೫೬ನೆಯ ಅಧ್ಯಾಯವು ಮುಗಿಯಿತು.

೫೭ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಸಂಜಯನು ಪಾಂಡವರ ಯುದ್ಧಸಿದ್ಧತೆಯನ್ನು ವರ್ಣಿಸಿದುದು: ಧೃತರಾಷ್ಟ್ರನ ವಿಲಾಪ: ದುರ್ಯೋಧನನು ತಾನು ಪಾಂಡವರಿಗಿಂತಲೂ ಪ್ರಬಲನೆಂಬುದನ್ನು ಪುನಃ ಪ್ರತಿಪಾದಿಸಿದುದು: ಧೃತರಾಷ್ಟ್ರನಿಗೆ ದುರ್ಯೋಧನನ ಮಾತಿನ ವಿಷಯದಲ್ಲಿ ಅವಿಶ್ವಾಸ ಮತ್ತು ಸಂಜಯನಿಂದ ಧೃಷ್ಟದ್ಯುಮ್ನನ ಪರಾಕ್ರಮದ ಕಥನ

ಮಹಾರಾಜ! ಧೃತರಾಷ್ಟ್ರನು ಹಿಂದೆ ಕೇಳಿದ್ದನ್ನೇ ಪುನಃ ಕೇಳುತ್ತಾನೆ :

“ಸಂಜಯ! ಯುಧಿಷ್ಠಿರನ ಪ್ರೀತ್ಯರ್ಥವಾಗಿ ಅಲ್ಲಿಗೆ ಆಗಮಿಸಿರುವ ಮತ್ತು ಪಾಂಡವರ ಸಲುವಾಗಿ ನನ್ನ ಮಗನೊಡನೆ ಯುದ್ಧಮಾಡಲು ಸಿದ್ಧವಾಗಿರುವ ಯಾವ ಯಾವ ರಾಜರನ್ನು ನೀನಲ್ಲಿ ಕಂಡೆ? ಎಲ್ಲ ವಿಷಯಗಳನ್ನೂ ಸವಿಸ್ತರವಾಗಿಯೇ ಹೇಳು.”

ಸಂಜಯನು ಹೇಳುತ್ತಾನೆ.:

“ಮಹಾರಾಜ! ವೃಷ್ಣಿ ಮತ್ತು ಅಂಧಕವಂಶಗಳೆರಡಕ್ಕೂ ಪ್ರಧಾನ ಪುರುಷನಾದ ಶ್ರೀಕೃಷ್ಣನು ಅಲ್ಲಿಗೆ ಬಂದಿರುವುದನ್ನು ನೋಡಿದೆನು. ಅಂತೆಯೇ ಚೇಕಿತಾನ-ಯುಯುಧಾನ (ಸಾತ್ಯಕಿ)ರನ್ನೂ ನಾನಲ್ಲಿ ಕಂಡೆನು. ತಾವೇ ಮಹಾಪೌರುಷವಿರುವವರೆಂದು ಭಾವಿಸಿಕೊಂಡಿರುವ ಸುವಿಖ್ಯಾತರಾದ ಆ

ಇಬ್ಬರು ಮಹಾರಥರು (ಸಾತ್ಯಕಿ ಮತ್ತು ಚೇಕಿತಾನರು) ಒಬ್ಬೊಬ್ಬರೂ ಒಂದೊಂದು ಅಕ್ಷೌಹಿಣೀಸೈನ್ಯಸಮೇತರಾಗಿ, ಪಾಂಡವರ ಸಹಾಯಕ್ಕಾಗಿ ಆಗಮಿಸಿರುವುದನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು. ಪಾಂಚಾಲರಾಜನಾದ ದ್ರುಪದನು–ಧೃಷ್ಟದ್ಯುಮ್ನ, ಸತ್ಯಜಿತ-ಇವರೇ ಮೊದಲಾದ ಹತ್ತು ಮಕ್ಕಳೊಡನೆಯೂ, ಶಿಖಂಡಿಯಿಂದ ಸಂರಕ್ಷಿತವಾದ, ಕವಚವೇ ಮೊದಲಾದುವುಗಳಿಂದ ಸಂಪೂರ್ಣವಾಗಿ ಆಚ್ಛಾದಿತವಾಗಿದ್ದ ಒಂದು ಅಕ್ಷೌಹಿಣೀಸೈನ್ಯದೊಡನೆಯೂ ಕೂಡಿದವನಾಗಿ ಯುಧಿಷ್ಠಿರನ ಗೌರವವನ್ನು ಹೆಚ್ಚಿಸುವ ಸಲುವಾಗಿ ಉಪಪ್ಲಾವ್ಯಕ್ಕೆ ಆಗಮಿಸಿದುದನ್ನು ನಾನು ಕಂಡೆನು. ವಿರಾಟನು ತನ್ನ ಇಬ್ಬರು ವೀರಪುತ್ರರಾದ ಉತ್ತರ ಮತ್ತು ಶಂಖರೊಡನೆಯೂ, ಸೂರ್ಯದತ್ತ, ಮದಿರಾಕ್ಷ–ಇವರೇ ಮೊದಲಾದ ಅನುಜರೊಡನೆಯೂ ಮತ್ತು ತಮ್ಮಂದಿರ ಮಕ್ಕಳೊಡನೆಯೂ ಕೂಡಿದವನಾಗಿ ಸುಸಜ್ಜಿತವಾದ ಒಂದು ಅಕ್ಷೌಹಿಣೀಸೈನ್ಯವನ್ನು ತೆಗೆದುಕೊಂಡು ಯುಧಿಷ್ಠಿರನ ಸಹಾಯಕ್ಕಾಗಿ ಆಗಮಿಸಿದುದನ್ನು ನಾನು ನೋಡಿದೆನು. ಜರಾಸಂಧನ ಮಗನಾದ, ಮಗಧದೇಶದ ಅರಸನಾದ ಸಹದೇವನೂ ಮತ್ತು ಚೇದಿಯ ರಾಜನಾದ ಧೃಷ್ಟಕೇತುವೂ ಪ್ರತ್ಯೇಕ-ಪ್ರತ್ಯೇಕವಾಗಿ ಒಂದೊಂದು ಅಕ್ಷೌಹಿಣೀಸೈನ್ಯದೊಡನೆ ಆಗಮಿಸಿದುದನ್ನು ನಾನು ನೋಡಿದೆನು. ರಕ್ತಧ್ವಜವನ್ನು ರಥದಲ್ಲಿ ಹೊಂದಿರುವ ಸಹೋದರರಾದ ಐವರು ಕೇಕಯರಾಜಕುಮಾರರು ಒಂದು ಅಕ್ಷೌಹಿಣೀಸೈನ್ಯವನ್ನು ತೆಗೆದುಕೊಂಡು ಪಾಂಡವರ ಸಹಾಯಾರ್ಥವಾಗಿ ಆಗಮಿಸಿದ್ದಾರೆ. ಮಹಾರಾಜ! ಈ ಎಲ್ಲರೂ ತಮ್ಮ-ತಮ್ಮ ಸೇನೆಗಳೊಡನೆ ಕೂಡಿಕೊಂಡು ಪಾಂಡವರ ಹಿತಾರ್ಥವಾಗಿ ದುರ್ಯೋಧನನೊಡನೆ ಯುದ್ಧಮಾಡಲು ಉಪಪ್ಲಾವ್ಯಕ್ಕೆ ಆಗಮಿಸಿದುದನ್ನು ನಾನು ಪ್ರತ್ಯಕ್ಷವಾಗಿ ನೋಡಿದೆನು.*

ಯಾವನು ದೇವ, ಮಾನವ, ಗಂಧರ್ವ ಮತ್ತು ಅಸುರರ ಸೇನಾವ್ಯೂಹರಚನೆಗಳನ್ನೂ ಸಂಪೂರ್ಣವಾಗಿ ತಿಳಿದಿರುವನೋ–ಅಂತಹ ಮಹಾರಥನಾದ ಧೃಷ್ಟದ್ಯುಮ್ನನು ಪಾಂಡವರ ಏಳು ಅಕ್ಷೌಹಿಣೀಸೈನ್ಯಗಳಿಗೂ

---

* ಪಾಂಡವರ ಕಡೆಯ ಏಳು ಅಕ್ಷೌಹಿಣೀಸೈನ್ಯದ ವಿವರಣೆಯು ಈ ರೀತಿಯಲ್ಲಿದೆ ಚೇಕಿತಾನ ೧, ಸಾತ್ಯಕಿ ೧, ದ್ರುಪದ ೧, ವಿರಾಟ ೧, ಸಹದೇವ ೧, ಧೃಷ್ಟಕೇತು ೧, ಕೇಕಯಸಹೋದರರು ೧= ಒಟ್ಟು ಏಳು ಅಕ್ಷೌಹಿಣಿಗಳು.

ದಂಡನಾಯಕನಾಗಿರುತ್ತಾನೆ. ಶಾಂತನುವಿನ ಮಗನಾದ ಭೀಷ್ಮನನ್ನು ವಧೆಮಾಡುವ ಕಾರ್ಯವನ್ನು ಶಿಖಂಡಿಗೊಪ್ಪಿಸಲಾಗಿದೆ. ವಿರಾಟರಾಜನು ಮತ್ಸ್ಯಯೋಧರೊಡನೆ ಶಿಖಂಡಿಯನ್ನನುಸರಿಸಿ ನಿಲ್ಲುತ್ತಾನೆ. ಮದ್ರಾಧಿಪನಾದ ಶಲ್ಯನನ್ನು ಎದುರಿಸಿ ಯುದ್ಧಮಾಡುವುದು ಪಾಂಡವಜ್ಯೇಷ್ಠನಾದ ಯುಧಿಷ್ಠಿರನಿಗೆ ಸೇರಿದ್ದಾಗಿದೆ. ಆದರೆ ಅಲ್ಲಿಯೇ ಕೆಲವರು ಆ ಇಬ್ಬರ ಜೋಡಿಯು ಅಸಮಾನವೆಂಬ ಅಭಿಪ್ರಾಯವನ್ನೂ ವ್ಯಕ್ತಪಡಿಸಿದ್ದಾರೆ. ಯುಧಿಷ್ಠಿರ-ಶಲ್ಯರು ಸಮಾನಬಲರಲ್ಲವೆಂಬುದು ಅವರ ಅಭಿಪ್ರಾಯವಾಗಿದೆ. ಹಾಗಿದ್ದರೂ ಯುಧಿಷ್ಠಿರನು ಶಲ್ಯನನ್ನೇ ಎದುರಿಸಿ ನಿಲ್ಲಬೇಕೆಂದು ನಿಶ್ಚಿತವಾಗಿದೆ. ಮಕ್ಕಳಿಂದಲೂ ಮತ್ತು ನೂರು ಮಂದಿ ತಮ್ಮಂದಿರಿಂದಲೂ ಕೂಡಿದ ದುರ್ಯೋಧನನನ್ನು ಭೀಮಸೇನನು ಎದುರಿಸಿ ನಿಲ್ಲಬೇಕೆಂದು ನಿಶ್ಚಯಿಸಲಾಗಿದೆ.

ಭೀಮಸೇನನು ಭ್ರಾತೃ-ಪುತ್ರಸಮೇತನಾದ ದುರ್ಯೋಧನನನ್ನೇ ಅಲ್ಲದೇ ಪೂರ್ವದೇಶದ ರಾಜರನ್ನೂ ಮತ್ತು ದಕ್ಷಿಣದೇಶದ ರಾಜರನ್ನೂ ಎದುರಿಸಬೇಕಾಗಿದೆ. ಅರ್ಜುನನು ವೈಕರ್ತನಕರ್ಣನೊಡನೆಯೂ–ಅಶ್ವತ್ಥಾಮಾ, ವಿಕರ್ಣ ಮತ್ತು ಸಿಂಧುರಾಜನಾದ ಜಯದ್ರಥ–ಇವರೊಡನೆಯೂ ಯುದ್ಧಮಾಡುತ್ತಾನೆ. ಅವನ ಭಾಗಕ್ಕೆ ಇವರೆಲ್ಲರನ್ನೂ ಹಂಚಿಕೊಡಲಾಗಿದೆ. ಇವರನ್ನೇ ಅಲ್ಲದೇ–'ತಾವು ಜಯಿಸಲಶಕ್ಯರು ; ತಾವೇ ಮಹಾಶೂರರು'–ಎಂದು ಭಾವಿಸಿ ದುರ್ಯೋಧನನ ಸಹಾಯಕ್ಕಾಗಮಿಸಿರುವ ಪೃಥ್ವಿಯ ಇತರ ರಾಜರನ್ನೂ ಎದುರಿಸಿ ಯುದ್ಧಮಾಡಲು ಅರ್ಜುನನೇ ನಿಶ್ಚಯಿಸಿಬಿಟ್ಟಿದ್ದಾನೆ. ಮಹಾಧನುಸ್ಸುಗಳನ್ನು ಧರಿಸಿರುವ ಸಹೋದರರಾದ ಐವರು ಕೇಕಯರಾಜಕುಮಾರರು ಪಾಂಡವ-ಕೌರವರ ಯುದ್ಧದ ನೆಪದಿಂದ ತಮ್ಮ ನಿಜಶತ್ರುಗಳಾದ ಇತರ ಕೇಕಯರಾಜರ ಮೇಲೆ ಯುದ್ಧಮಾಡಿ ಸೇಡುತೀರಿಸಿಕೊಳ್ಳುವುದಾಗಿ ನಿಶ್ಚಯಿಸಿದ್ದಾರೆ. ಕೇಕಯರಾಜರನ್ನೇ ಅಲ್ಲದೇ–ಮಾಲವ, ಶಾಲ್ವ, ತ್ರಿಗರ್ತರಲ್ಲಿ ಮುಖ್ಯರಾದ ಸಂಶಪ್ತಕರೆಂಬ ಇಬ್ಬರು ರಾಜರನ್ನೂ ತಾವು ಎದುರಿಸಿ ಯುದ್ಧಮಾಡುವುದಾಗಿ ಯುಧಿಷ್ಠಿರನಿಗೆ ಆಶ್ವಾಸನೆಯನ್ನಿತ್ತಿದ್ದಾರೆ.

ದುರ್ಯೋಧನನ ಮಕ್ಕಳನ್ನೂ, ದುಃಶಾಸನನ ಮಕ್ಕಳನ್ನೂ, ಬೃಹದ್ಬಲನನ್ನೂ ಎದುರಿಸಿ ಅಭಿಮನ್ಯುವು ಯುದ್ಧಮಾಡುವನು. ಮಹಾಧನುಷ್ಮಂತರಾದ, ಸುವರ್ಣಮಯವಾದ ಧ್ವಜಗಳನ್ನು ಹೊಂದಿರುವ ದ್ರೌಪದಿಯ ಐವರು ಮಕ್ಕಳು ಧೃಷ್ಟದ್ಯುಮ್ನಪ್ರಮುಖರಾಗಿ ದ್ರೋಣರೊಡನೆ ಯುದ್ಧಮಾಡುತ್ತಾರೆ. ದ್ವೈರಥಯುದ್ಧದಲ್ಲಿ (ದ್ವಂದ್ವಯುದ್ಧದಲ್ಲಿ) ಚೇಕಿತಾನನು ಸೋಮದತ್ತನೊಡನೆ ಯುದ್ಧಮಾಡಲಿಚ್ಛಿಸಿದ್ದಾನೆ. ಭೋಜವಂಶೀಯನಾದ ಕೃತವರ್ಮನೊಡನೆ ಸಾತ್ಯಕಿಯು ಯುದ್ಧಮಾಡುತ್ತಾನೆ. ಯುದ್ಧದಲ್ಲಿ ಇಂದ್ರನಿಗೆ ಸಮಾನವಾದ ಪರಾಕ್ರಮವನ್ನು ತೋರುವ, ಮಹಾಶೂರನಾದ, ಮಾದ್ರಿಯ ಮಗನಾದ ಸಹದೇವನು ನಿನ್ನ ಭಾವಮೈದುನನಾದ ಸುಬಲಪುತ್ರನನ್ನು (ಶಕುನಿಯನ್ನು) ತನ್ನ ಭಾಗಕ್ಕೆ ಆರಿಸಿಕೊಂಡಿದ್ದಾನೆ. (ಸಹದೇವನು ಶಕುನಿಯೊಡನೆ ಯುದ್ಧಮಾಡಲು ನಿಶ್ಚಯಿಸಿದ್ದಾನೆ.) ಜೂಜುಕೋರನಾದ, ಶಕುನಿಯ ಮಗನಾದ ಉಲೂಕನೊಡನೆಯೂ, ಸಾರಸ್ವತಪ್ರದೇಶದ ಸೈನಿಕರೊಡನೆಯೂ ಮಾದ್ರಿಯ ಮಗನಾದ ನಕುಲನು ಯುದ್ಧಮಾಡಲು ನಿಶ್ಚಯಿಸಿದ್ದಾನೆ. ದುರ್ಯೋಧನನ ಆಹ್ವಾನಕ್ಕೆ ಮನ್ನಣೆಯನ್ನಿತ್ತು ಯಾವ ರಾಜರು ಯುದ್ಧದಲ್ಲಿ ಪದಾರ್ಪಣಮಾಡಲು ಬಂದಿದ್ದಾರೆಯೋ– ಅವರೆಲ್ಲರನ್ನೂ ಎದುರಿಸಲು ಪಾಂಡವರು ಯಾರು ಯಾರೊಡನೆ ಯುದ್ಧಮಾಡಬೇಕೆಂಬುದನ್ನು ವಿಭಾಗಿಸಿಕೊಂಡಿದ್ದಾರೆ.

ಮಹಾರಾಜ! ಈ ವಿಧವಾಗಿ ಪಾಂಡವಸೈನ್ಯಗಳು ವಿಭಾಗಿಸಲ್ಪಟ್ಟಿವೆ. ಈ ಸಮಯದಲ್ಲಿ ಪುತ್ರಸಹಿತನಾದ ನಿನಗೆ ಯಾವ ಕಾರ್ಯಮಾಡುವುದು ಸರಿಯೆನಿಸುವುದೋ–ಆ ಕಾರ್ಯವನ್ನು ವಿಳಂಬವಿಲ್ಲದೇ ಮಾಡಿ ಮುಗಿಸು."

ಸಂಜಯನ ಮಾತುಗಳನ್ನು ಕೇಳಿದನಂತರ ಧೃತರಾಷ್ಟ್ರನು ಪುನಃ ತನ್ನ ಮಕ್ಕಳಲ್ಲಿರುವ ದೌರ್ಬಲ್ಯವನ್ನು ಹೇಳುತ್ತಾನೆ :

"ಸಂಜಯ! ರಣಾಂಗಣದಲ್ಲಿ ಭೀಮನಿಗೆದುರಾಗಿ ನಿಂತು ಯುದ್ಧಮಾಡಬೇಕಾಗಿರುವ, ಕಪಟದ್ಯೂತದಲ್ಲಿಯೇ ಆಸಕ್ತರಾಗಿರುವ ಮೂಢರಾದ ನನ್ನ ಮಕ್ಕಳು ಖಂಡಿತವಾಗಿಯೂ ಅವನಿಗೆ ಸಮಾನರಾಗುವುದಿಲ್ಲ.

ಮಹಾಬಲಿಷ್ಠನಾದ ಭೀಮಸೇನನೊಡನೆ ಯುದ್ಧಮಾಡಲಿರುವ ನನ್ನ

ಮಕ್ಕಳಿಗೆ ಖಂಡಿತವಾಗಿಯೂ ಉಳಿಗಾಲವಿಲ್ಲ. ಇವರೆಲ್ಲರೂ ಸತ್ತಂತೆಯೇ ಸರಿ. ಯುದ್ಧಕ್ಕೆ ಸನ್ನದ್ಧರಾಗಿರುವ ಈ ರಾಜರೆಲ್ಲರೂ ಯಮರಾಜನಿಂದ ಸಂಪ್ರೋಕ್ಷಿತರಾಗಿದ್ದಾರೆ. (ಯಜ್ಞಗಳಲ್ಲಿ ಪಶುಗಳ ಹನನಕ್ಕೆ ಮೊದಲು ಅವುಗಳನ್ನು ಸಂಪ್ರೋಕ್ಷಿಸುವಂತೆ–ಯಮಧರ್ಮನಿವರನ್ನು ಸಂಪ್ರೋಕ್ಷಿಸಿ ದ್ದಾನೆ.) ಪತಂಗದ ಹುಳುಗಳು ತಾವಾಗಿಯೇ ಬೆಂಕಿಯಲ್ಲಿ ಬಿದ್ದು ಸಾಯು ವಂತೆ–ಈ ರಾಜರು ಅರ್ಜುನನ ಗಾಂಡೀವಾಗ್ನಿಯಲ್ಲಿ ಸಿಕ್ಕಿ ಅಸುನೀಗು ತ್ತಾರೆ. ನಮ್ಮೊಡನೆ ದ್ವೇಷವನ್ನು ಕಟ್ಟಿಕೊಂಡಿರುವ ಮಹಾತ್ಮರಾದ ಪಾಂಡವರಿಂದ ನಮ್ಮ ಸೈನ್ಯವು ರಣಾಂಗಣದಿಂದ ಓಡಿಸಲ್ಪಟ್ಟಿತೆಂದೇ ನಾನು ಭಾವಿಸುತ್ತೇನೆ. ಅವರ ಪ್ರಹಾರಕ್ಕೆ ಹೆದರಿ ನಮ್ಮ ಸೈನಿಕರು ರಣಾಂಗಣ ವನ್ನು ಬಿಟ್ಟು ಪಲಾಯನಮಾಡುತ್ತಾರೆ. ಯುದ್ಧದಲ್ಲಿ ಪಾಂಡವರಿಂದ ವಿಧ್ವಸ್ತವಾಗುವ ಸೈನ್ಯವನ್ನು ಯಾರು ತಾನೇ ಅನುಸರಿಸಿ ಹೋಗುತ್ತಾರೆ? ಪಾಂಡವರು ನಮ್ಮ ಸೈನ್ಯವನ್ನು ಸರ್ವತ್ರ ನಾಶಮಾಡುತ್ತಿರುವಾಗ ಪ್ರಾಣ ವುಳಿಸಿಕೊಳ್ಳಲು ಪಲಾಯನಮಾಡುವುದನ್ನು ಬಿಟ್ಟು ಯಾವನೊಬ್ಬನೂ ಅವ ರನ್ನೆದುರಿಸಿ ಯುದ್ಧಮಾಡಲು ರಣಾಂಗಣದಲ್ಲಿ ನಿಲ್ಲುವುದಿಲ್ಲ. ಪಾಂಡವರ ಪಕ್ಷದಲ್ಲಿರುವ ಎಲ್ಲರೂ ಅತಿರಥರು.; ಶೂರರು ; ಅನೇಕಯುದ್ಧಗಳಲ್ಲಿ ಜಯಗಳಿಸಿ ಕೀರ್ತಿಯನ್ನು ಸಂಪಾದಿಸಿರತಕ್ಕವರು ; ಮಹಾಪ್ರತಾಪಶಾಲಿ ಗಳು ; ಯುದ್ಧದಲ್ಲಿ ಯಾವಾಗಲೂ ವಿಜಯಗಳಿಸತಕ್ಕವರು. ಮೇಲಾಗಿ ಸೂರ್ಯಾಗ್ನಿಗಳಿಗೆ ಸದೃಶವಾದ ತೇಜಸ್ಸಿನಿಂದ ವಿರಾಜಿಸತಕ್ಕವರು. ಸಂಜಯ! ಯಾರಿಗೆ ಯುಧಿಷ್ಠಿರನು ನಾಯಕನಾಗಿರುವನೋ–ರಕ್ಷಕನು ಶ್ರೀಕೃಷ್ಣನಾಗಿರುವನೋ–ಮಹಾವೀರರಾದ ಸವ್ಯಸಾಚಿ-ವೃಕೋದರರು ಯಾವ ಪಕ್ಷದ ಪರವಾಗಿ ಯುದ್ಧಮಾಡುವರೋ-ಯಾರಿಗೋಸ್ಕರವಾಗಿ ನಕುಲ, ಸಹದೇವ, ಪೃಷತವಂಶಜನಾದ ಧೃಷ್ಟದ್ಯುಮ್ನ, ಸಾತ್ಯಕಿ, ದ್ರುಪದ, ಧೃಷ್ಟಕೇತು, ಸುಕೇತು, ಪಾಂಚಾಲದೇಶೀಯನಾದ ಉತ್ತಮೌಜಸ, ದುರ್ಜಯ ನಾದ ಯುಧಾಮನ್ಯು, ಶಿಖಂಡೀ, ಕ್ಷತ್ರದೇವ, ವಿರಾಟನ ವೀರಪುತ್ರನಾದ ಉತ್ತರಕುಮಾರ, ಕಾಶೀ-ಚೇದಿ ಮತ್ತು ಮತ್ಸ್ಯದೇಶಗಳ ರಾಜರು, ಸೃಂಜಯ ವಂಶಜರಾದ ಕ್ಷತ್ರಿಯರು, ವಿರಾಟನ ಮಗನಾದ ಬಭ್ರು, ಪಾಂಚಾಲದೇಶದ ಪ್ರಭದ್ರಕರು–ಇವರೇ ಮೊದಲಾದ ಮಹಾವೀರರು ಪ್ರಾಣದ ಹಂಗನ್ನೇ

ತೊರೆದು ಯುದ್ಧಸನ್ನದ್ಧರಾಗಿರುವರೋ–ಯಾರ ಇಚ್ಛೆಗೆ ವಿರುದ್ಧವಾಗಿ ದೇವ ರಾಜನೂ ಈ ಪೃಥ್ವಿಯನ್ನು ಆಕ್ರಮಿಸಲಾರನೋ–ಯಾರು ವೀರರಾಗಿಯೂ ರಣಧೀರರಾಗಿಯೂ ಇರುವರೋ–ಯಾರು ಇಚ್ಛಿಸಿದ್ದೇ ಆದರೆ ಪರ್ವತ ಗಳನ್ನೇ ಭೇದಿಸಬಲ್ಲರೋ–ಅಂತಹ ಸರ್ವಗುಣಸಂಪನ್ನರಾದ ಅತಿಮಾನುಷ ಪರಾಕ್ರಮವುಳ್ಳ ಪಾಂಡವರೊಡನೆ ನನ್ನ ದುಷ್ಪುತ್ರನಾದ ದುರ್ಯೋಧನನು, ನಾನು ಯುದ್ಧವು ಬೇಡವೆಂದು ಕೂಗಿಕೊಳ್ಳುತ್ತಿದ್ದರೂ ಕಿವಿಗೆ ಹಾಕಿಕೊಳ್ಳದೇ ಯುದ್ಧಮಾಡಲಿಚ್ಛಿಸಿದ್ದಾನೆ."

ರಾಜನ ಮಾತುಗಳನ್ನು ಕೇಳಿದ ದುರ್ಯೋಧನನು ಹಿಂದಿನಂತೆಯೇ ತನ್ನ ತರ್ಕಶುದ್ಧವಾದ ಅಭಿಪ್ರಾಯವನ್ನು ರಾಜನ ಮುಂದಿಟ್ಟನು.

"ಅಪ್ಪ! ಸಾವಧಾನವಾಗಿ ಯೋಚಿಸು. ಅಧೀರನಾಗಬೇಡ. ನಾವೂ ಮತ್ತು ಪಾಂಡವರೂ ಒಂದೇ ಜಾತಿಯವರಾಗಿದ್ದೇವೆ. ಒಂದೇ ಕುಲಕ್ಕೆ ಸೇರಿದವ ರಾಗಿದ್ದೇವೆ. ನಾವೀರ್ವರೂ ಭೂಮಿಯ ಮೇಲೆಯೇ ಇರುವವರಾಗಿ ದ್ದೇವೆ. (ನಾವು ಮಾತ್ರ ಭೂಮಿಯ ಮೇಲೆ ಸಂಚರಿಸುತ್ತಿದ್ದು ಪಾಂಡವರು ಗಗನಸಂಚಾರಿಗಳಾದರೂ ಆಗಿದ್ದರೆ ಅವರು ನಮಗಿಂತಲೂ ಮಿಗಿಲಾದವ ರೆನ್ನಬಹುದಾಗಿದ್ದಿತು. ನಾವು ಭೂಮಿಯ ಮೇಲೆ ಸಂಚರಿಸುತ್ತಿರು ವಂತೆಯೇ ಅವರೂ ಈ ಭೂಮಿಯ ಮೇಲೆಯೇ ಸಂಚರಿಸುತ್ತಿದ್ದಾರೆ.) ಹೀಗಿರುವಾಗ ನೀನು ಪಾಂಡವರಿಗೇ ಜಯವು ಲಭಿಸುವುದೆಂದು ಯಾವ ಕಾರಣದಿಂದ ಹೇಳುವೆಯಪ್ಪ? ನಮ್ಮ ಪಿತಾಮಹನಾದ ಭೀಷ್ಮ, ಆಚಾರ್ಯದ್ರೋಣರು, ಕೃಪರು, ದುರ್ಜಯನಾದ ಕರ್ಣ, ಜಯದ್ರಥ, ಸೋಮದತ್ತ, ಅಶ್ವತ್ಥಾಮಾ– ಇವರೆಲ್ಲರೂ ಮಹಾತೇಜಸ್ವಿಗಳಾಗಿಯೂ, ಮಹಾಧನುಷ್ಮಂತರಾಗಿಯೂ ಇರುವರು. ದೇವತೆಗಳಿಂದ ಪರಿವೃತನಾದ ಇಂದ್ರನೂ ಕೂಡ ಈ ಮಹಾಪರಾಕ್ರಮಿಗಳನ್ನು ಯುದ್ಧದಲ್ಲಿ ಜಯಿಸ ಲಾರನು. ಹೀಗಿರುವಾಗ ಪಾಂಡವರು ಇವರನ್ನು ಜಯಿಸಬಲ್ಲರೇನು? ರಾಜರು ಅವರ ಪಕ್ಷದಲ್ಲಿ ಮಾತ್ರವೇ ಇರುವರೆಂದು ಭಾವಿಸಬೇಡ. ನನ್ನ ಪಕ್ಷದಲ್ಲಿಯೂ ಅನೇಕರಾಜರಿದ್ದಾರೆ. ಆರ್ಯರಾದ, ಶಸ್ತ್ರಧಾರಿಗಳಾದ, ಮಹಾಶೂರರಾದ, ಸಮರ್ಥರಾದ ನನ್ನ ಪಕ್ಷಕ್ಕೆ ಬಂದಿರುವ ಎಲ್ಲ ರಾಜರೂ

ನನ್ನ ಸಲುವಾಗಿ ಪಾಂಡವರಿಗೆ ಉಪಟಳಕೊಡಲು ಸಿದ್ಧರಾಗಿದ್ದಾರೆ ಮತ್ತು ಅವರಿಗೆ ಪೀಡೆಯನ್ನುಂಟುಮಾಡಲು ಸಮರ್ಥರೂ ಆಗಿರುತ್ತಾರೆ. ನನ್ನ ಕಡೆಯಲ್ಲಿರುವ ಈ ಮಹಾಯೋಧರನ್ನು ಆ ಪಾಂಡವರು ಕಣ್ಣೆತ್ತಿನೋಡಲೂ ಸಮರ್ಥರಲ್ಲ. ಇವರ ವಿಷಯವೂ ಹಾಗಿರಲಿ; ಸಪುತ್ರರಾದ ಪಾಂಡವರೆಲ್ಲರನ್ನೂ ನಾನೊಬ್ಬನೇ ಎದುರಿಸಿ ನಿಂತು ಯುದ್ಧಮಾಡಲೂ ಶಕ್ತನಾಗಿದ್ದೇನೆ.

ಭರತನಂದನನೇ! ಈ ರಾಜರೆಲ್ಲರೂ ನನಗೆ ಪ್ರಿಯವಾದುದನ್ನು ಏಕಮುಖವಾಗಿ ಸಾಧಿಸುತ್ತಾರೆ. ತಪ್ಪಿಸಿಕೊಂಡು ಹೋಗಬಾರದೆಂಬ ಕಾರಣದಿಂದ ಜಿಂಕೆಯ ಮರಿಗಳನ್ನು ನೂಲಿನ ಬಲೆಯಿಂದ ಸುಲಭವಾಗಿ ಹಿಡಿದು ಹಾಕುವಂತೆ–ನನ್ನ ಕಡೆಯ ಈ ರಾಜರು ಪಾಂಡವರನ್ನು ಆವರಿಸಿ ಮುತ್ತಿಬಿಡುತ್ತಾರೆ. ನನ್ನ ಪಕ್ಷದಲ್ಲಿರುವ ದೊಡ್ಡದಾದ ರಥಸೇನೆಯಿಂದಲೂ ಮತ್ತು ಆ ಸೈನಿಕರು ಬಿಡುವ ಅವ್ಯಾಹತವಾದ ಬಾಣಗಳಿಂದಲೂ ಪೀಡಿತರಾಗುವ ಪಾಂಚಾಲರು–ಪಾಂಡವರನ್ನೂ ಜೊತೆಯಲ್ಲಿಯೇ ಸೆಳೆದುಕೊಂಡು ಪಲಾಯನಮಾಡುತ್ತಾರೆ.

ದುರ್ಯೋಧನನ ಆ ಮಾತಿಗೆ ಧೃತರಾಷ್ಟ್ರನು ನೇರವಾಗಿ ಉತ್ತರ ಕೊಡಲಿಲ್ಲ. ತನ್ನ ಅಭಿಪ್ರಾಯವನ್ನು ಸಂಜಯನೊಡನೆ ಹೇಳಿದನು :

“ಸಂಜಯ! ಮತ್ತು ಬಂದಿರುವವನಂತೆ (ಉನ್ಮತ್ತನಂತೆ) ಈ ನನ್ನ ಮಗನು ಪ್ರಲಪಿಸುತ್ತಿದ್ದಾನೆ. ಧರ್ಮಾತ್ಮನಾದ ಯುಧಿಷ್ಠಿರನನ್ನು ಯುದ್ಧದಲ್ಲಿ ಗೆಲ್ಲಲು ಇವನಿಗೆ ಖಂಡಿತವಾಗಿಯೂ ಸಾಧ್ಯವಿಲ್ಲ. ಯಶೋವಂತರಾದ, ಪುತ್ರವಂತರಾದ, ಮಹಾಬಲಿಷ್ಠರಾದ, ಧರ್ಮಜ್ಞರಾದ, ಮಹಾತ್ಮರಾದ ಪಾಂಡವರ ವಿಷಯವನ್ನು ಭೀಷ್ಮನು ಚೆನ್ನಾಗಿ ತಿಳಿದುಕೊಂಡಿರುತ್ತಾನೆ. ಈ ಕಾರಣದಿಂದಲೇ ಅವನು ಆ ಮಹಾತ್ಮರೊಡನೆ ಯುದ್ಧಮಾಡುವ ವಿಷಯದಲ್ಲಿ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದ್ದಾನೆ.

ಸಂಜಯ! ಪಾಂಡವರ ಸಂಬಂಧವಾಗಿ ಇನ್ನೂ ಅನೇಕ ವಿಷಯಗಳನ್ನು ನಿನ್ನಿಂದ ತಿಳಿಯಬೇಕೆಂದಿರುತ್ತೇನೆ. ಅವರು ಅಲ್ಲಿ ಏನು ಮಾಡುತ್ತಿರುವರೆಂಬುದನ್ನು ಪುನಃ ಹೇಳು. ವೇಗವಂತರಾದ, ಮಹಾಧನುರ್ಧರರಾದ ಪಾಂಡವರನ್ನು ಯುದ್ಧಕ್ಕಾಗಿ ಪದೇ ಪದೇ ಪ್ರೋತ್ಸಾಹಿಸುತ್ತಿರು

ವವರು ಯಾರು? ಹವಿಸ್ಸಿನಿಂದ ಯಜ್ಞೇಶ್ವರನನ್ನು ಪ್ರಜ್ವಲಗೊಳಿಸು ವಂತೆ–ಯುದ್ಧಪ್ರೇರಕವಾದ ಮಾತುಗಳಿಂದ ಅವರನ್ನು ಯಾರು ಉತ್ತೇಜಿಸುತ್ತಿದ್ದಾರೆ?"

ಸಂಜಯನು ಹೇಳುತ್ತಾನೆ :

"ಅದನ್ನೂ ಹೇಳುವೆನು, ಮಹಾರಾಜ! ಧೃಷ್ಟದ್ಯುಮ್ನನು ಅವರನ್ನು ಬಾರಿ-ಬಾರಿಗೂ ಯುದ್ಧಮಾಡಲು ಪ್ರೋತ್ಸಾಹಿಸುತ್ತಿದ್ದಾನೆ. ಜಯದ ಆಶಾದೀವಿಗೆಯನ್ನು ಅವರ ಹೃದಯದಲ್ಲಿ ಹೊತ್ತಿಸುತ್ತಿದ್ದಾನೆ. 'ಭರತ ಕುಲಾವತಂಸರೇ! ನೀವೀಗಲೇ ಹೋಗಿ ಯುದ್ಧಮಾಡಿರಿ. ಯುದ್ಧಮಾಡಿದರೆ ಏನಾಗುವುದೋ ಎಂದು ಭಯಪಡಬೇಡಿರಿ. ಹಲವಾರು ರಾಜರು ಧೃತರಾಷ್ಟ್ರನ ಮಗನಾದ ದುರ್ಯೋಧನನಿಂದ ಏಕತ್ರ ಕಲೆಹಾಕಲ್ಪಟ್ಟಿರುತ್ತಾರೆ. ಅವರೆಲ್ಲರೂ ಭಯಂಕರವಾದ ಶಸ್ತ್ರಗಳನ್ನು ಧರಿಸಿ ನಮ್ಮೊಡನೆ ಯುದ್ಧಮಾಡಲು ರಣರಂಗಕ್ಕೆ ಬರುತ್ತಾರೆ. ಹಾಗೆ ಬರುವ, ಬಂಧು-ಬಾಂಧವರಿಂದೊಡಗೂಡಿರುವ, ಕ್ರುದ್ಧರಾದ ಅವರೆಲ್ಲರನ್ನೂ ನಾನೊಬ್ಬನೇ ಯುದ್ಧದಲ್ಲಿ ನನ್ನ ಅಧೀನರನ್ನಾಗಿ ಮಾಡಿಕೊಳ್ಳುತ್ತೇನೆ. ಸಮುದ್ರದಲ್ಲಿರುವ ತಿಮಿಯು ಅನೇಕ ಶತಸಹಸ್ರಮತ್ಸ್ಯಗಳನ್ನು ನುಂಗಿಹಾಕುವಂತೆ–ಅವರೆಲ್ಲರನ್ನೂ ನುಂಗಿಹಾಕಿ ಬಿಡುತ್ತೇನೆ. ಭೀಷ್ಮ, ದ್ರೋಣರು, ಕೃಪರು, ಕರ್ಣ, ಅಶ್ವತ್ಥಾಮಾ, ಶಲ್ಯ, ದುರ್ಯೋಧನ–ಇವರೆಲ್ಲರನ್ನೂ ತೀರವು ಸಮುದ್ರವನ್ನು ತಡೆಯುವಂತೆ ತಡೆಯುತ್ತೇನೆ'–ಹೀಗೆ ಹೇಳಿದ ಧೃಷ್ಟದ್ಯುಮ್ನನನ್ನು ಕುರಿತು ಧರ್ಮಾತ್ಮನಾದ ಯುಧಿಷ್ಠಿರನು ಹೇಳಿದ್ದೇನೆಂದರೆ :

"ರಾಜಕುಮಾರ! ಪಾಂಡವರಿಂದೊಡಗೂಡಿದ ಸಕಲಪಾಂಚಾಲರೂ ನಿನ್ನ ಧೈರ್ಯ ಮತ್ತು ವೀರ್ಯಗಳನ್ನೇ ಆಶ್ರಯಿಸಿ ಯುದ್ಧಸನ್ನದ್ಧರಾಗಿರುತ್ತಾರೆ. ಈ ಕಾರಣದಿಂದ ನೀನು ಈ ಮಹಾಯುದ್ಧದಿಂದ ನಮ್ಮನ್ನು ಪಾರು ಮಾಡು. ಯುದ್ಧದಲ್ಲಿ ನಮಗೆ ಯಾವ ವಿಧವಾದ ಅಪಾಯವೂ ಬಾರದಂತೆ ನೋಡಿಕೋ. ಕ್ಷಾತ್ರಧರ್ಮದಲ್ಲಿ ನಿನಗಿರುವ ನಿಷ್ಠೆಯನ್ನು ನಾನು ತಿಳಿದವನಾಗಿದ್ದೇನೆ. ನಮ್ಮೊಡನೆ ಯುದ್ಧಮಾಡುವ ಅಪೇಕ್ಷೆಯಿಂದ ಮುನ್ನುಗ್ಗಿ ಬರುವ ಕೌರವರ ವಿಧ್ವಂಸನಕ್ಕೆ ಸಮರ್ಥನಾದ ನೀನೊಬ್ಬನೇ ಸಾಕೆಂದು ನಾನು ಭಾವಿಸಿದ್ದೇನೆ. (ಅಖಂಡಕೌರವಸೇನೆಯನ್ನೂ ಎದುರಿಸಿ ನಿಲ್ಲುವ

ಸಾಮರ್ಥ್ಯವು ನಿನ್ನಲ್ಲಿದೆ.) ನೀನು ಯಾವುದೇ ಕಾರ್ಯಮಾಡಿದರೂ ಅದರಿಂದ ನಮಗೆ ಶ್ರೇಯಸ್ಸು ಲಭಿಸುತ್ತದೆ.

ಯುದ್ಧದಲ್ಲಿ ಚೆನ್ನಾಗಿ ಪೆಟ್ಟುತಿಂದು ಯುದ್ಧಭೂಮಿಯಿಂದ ಪಲಾಯನಮಾಡುವವರ ಮತ್ತು ಮುಂದೆ ಯುದ್ಧಮಾಡಲಾಗದೇ ರಕ್ಷಕರನ್ನು ಅಪೇಕ್ಷಿಸುತ್ತಿರುವವರ ಮುಂದೆ ನಿಂತು ತನ್ನ ಪೌರುಷವನ್ನು ತೋರುತ್ತಾ ಮತ್ತು ಶರಣಾಗತರಿಗೆ ಅಭಯಪ್ರದಾನಮಾಡುತ್ತಾ ಯಾವ ಶೂರನು ರಣಾಂಗಣದ ಮುಂಭಾಗದಲ್ಲಿ ನಿಲ್ಲುವನೋ–ಅಂತಹ ಮಹಾಶೂರನನ್ನು ಸಹಸ್ರಸಂಖ್ಯಾಕವಾದ ಸುವರ್ಣಮೌಲ್ಯದಿಂದಾದರೂ ಪಡೆದುಕೊಳ್ಳಬೇಕೆಂಬುದು ಯುದ್ಧನೀತಿಜ್ಞರ ಅಭಿಪ್ರಾಯವಾಗಿದೆ. ಅಂತಹ ಸಾಹಸಿಯ ಎಲ್ಲ ಗುಣಗಳೂ ನಿನ್ನಲ್ಲಿವೆ. ನೀನು ಮಹಾಶೂರನು ; ವೀರನು ; ಮಹಾಪರಾಕ್ರಮಿಯು ; ಯುದ್ಧದಲ್ಲಿ ಭಯದಿಂದ ಪೀಡಿತರಾದವರಿಗೆ ಆಶ್ರಯದಾತನು. ಈ ವಿಷಯದಲ್ಲಿ ನನಗೆ ಸ್ವಲ್ಪವಾದರೂ ಸಂಶಯವಿಲ್ಲ, ಧೃಷ್ಟದ್ಯುಮ್ನ!"

ಹೀಗೆಂದು ಯುಧಿಷ್ಠಿರನು ಧೃಷ್ಟದ್ಯುಮ್ನನಿಗೆ ಹೇಳಿದನಂತರ ಧೃಷ್ಟದ್ಯುಮ್ನನು ನನ್ನನ್ನು ಕುರಿತು ಭಯರಹಿತವಾದ ಈ ಮಾತನ್ನು ಹೇಳಿದನು :

"ಸೂತ! ದುರ್ಯೋಧನನಿಗಾಗಿ ಯುದ್ಧಮಾಡಲು ಹಸ್ತಿನಾಪಟ್ಟಣಕ್ಕೆ ಯಾವ ಯಾವ ರಾಜರು ಆಗಮಿಸಿದ್ದಾರೆಯೋ–ಅವರೆಲ್ಲರಿಗೂ ನೀನು ಈ ಮಾತನ್ನು ಹೇಳು. ಬಾಹ್ಲಿಕರಿಗೂ, ಪ್ರತೀಪವಂಶೀಯರಾದ ಕೌರವರಿಗೂ, ಶರದ್ವಂತನ ಪುತ್ರರಾದ ಕೃಪಾಚಾರ್ಯರಿಗೂ, ಸೂತಪುತ್ರನಾದ ಕರ್ಣನಿಗೂ, ದ್ರೋಣಾಚಾರ್ಯಾಶ್ವತ್ಥಾಮರಿಗೂ, ಜಯದ್ರಥನಿಗೂ, ದುಃಶಾಸನನಿಗೂ, ವಿಕರ್ಣನಿಗೂ, ರಾಜನಾದ ದುರ್ಯೋಧನನಿಗೂ, ಪಿತಾಮಹನಾದ ಭೀಷ್ಮನಿಗೂ ನಾನು ಹೇಳಲಿರುವ ಈ ಮಾತನ್ನು ಹೇಳು. ಇಲ್ಲಿಂದ ಸಾವಕಾಶ ಮಾಡದೇ ಹಸ್ತಿನೆಗೆ ಹೋಗಿ ಈ ಮಾತನ್ನು ಅವರೊಡನೆ ಹೇಳಬೇಕು.:

ಯುಧಿಷ್ಠಿರಃ ಸಾಧುನೈವಾಭ್ಯುಪೇಯೋ
ಮಾ ವೋ ವಧೀದರ್ಜುನೋ ದೇವಗುಪ್ತಃ ।
ರಾಜ್ಯಂ ದದ್ಧ್ವಂ ಧರ್ಮರಾಜಸ್ಯ ತೂರ್ಣಂ
ಯಾಚಧ್ವಂ ವೈ ಪಾಣ್ಡವಂ ಲೋಕವೀರಮ್ ॥೬೦॥

“ಕೌರವರೇ! ಯುಧಿಷ್ಠಿರನು ಸದ್ವ್ಯವಹಾರದಿಂದ ಮಾತ್ರವೇ ಸಿಲುಕುವವನಾಗಿದ್ದಾನೆ. ಸದ್ವ್ಯವಹಾರದಿಂದಲೂ, ಸಾಧುಭಾವದಿಂದಲೂ ಅವನನ್ನು ಒಲಿಸಿಕೊಳ್ಳಬಹುದು. ಯುದ್ಧಮಾಡಿ ನೀವು ಜಯಿಸಲಾರಿರಿ. ಆದುದರಿಂದ ನೀವು ಯುದ್ಧಮಾಡಬೇಕೆನ್ನುವ ಹಂಬಲವನ್ನು ತ್ಯಜಿಸುವುದೊಳ್ಳೆಯದು. ದೇವತೆಗಳಿಂದಲೇ ರಕ್ಷಣೆಯನ್ನು ಪಡೆದಿರುವ ಅರ್ಜುನನು ನಿಮ್ಮನ್ನು ವಧೆಮಾಡದಿರಲಿ. ಯುದ್ಧವಾಯಿತೆಂದರೆ ಅರ್ಜುನನಿಂದ ನಿಮ್ಮ ವಧೆಯಾಗುವುದಂತೂ ನಿಶ್ಚಯ. ಧರ್ಮರಾಜನಿಗೆ ಅವನ ರಾಜ್ಯವನ್ನು ಶೀಘ್ರಾತಿಶೀಘ್ರವಾಗಿ ಹಿಂದಿರುಗಿಸಿರಿ. ಲೋಕೈಕವೀರನಾದ ಅರ್ಜುನನಿಂದ ಕ್ಷಮೆಯನ್ನು ಯಾಚಿಸಿರಿ. (ಹೀಗೆ ಮಾಡುವುದರಿಂದ ಮಾತ್ರವೇ ನಿಮ್ಮ ಪ್ರಾಣವುಳಿದೀತು.)

**ನೈತಾದೃಶೋ ಹಿ ಯೋಧೋಽಸ್ತಿ ಪೃಥಿವ್ಯಾಮಿಹ ಕಶ್ಚನ ।**
**ಯಥಾವಿಧಃ ಸವ್ಯಸಾಚೀ ಪಾಣ್ಡವಃ ಸತ್ಯವಿಕ್ರಮಃ ॥೬೧॥**

ಸವ್ಯಸಾಚಿಯಾದ, ಪಾಂಡುಪುತ್ರನಾದ ಅರ್ಜುನನು ಸತ್ಯವಿಕ್ರಮನಾಗಿರುತ್ತಾನೆ. ಈ ವಿಶ್ವದಲ್ಲಿಯೇ ಅವನಂತಿರುವ ಮತ್ತೊಬ್ಬ ಯೋಧನಿರುವುದಿಲ್ಲ.

**ದೇವೈರ್ಹಿ ಸಮ್ಭೃತೋ ದಿವ್ಯೋ ರಥೋ ಗಾಣ್ಡೀವಧನ್ವನಃ ।**
**ನ ಸ ಜೇಯೋ ಮನುಷ್ಯೇಣ ಮಾ ಸ್ಮ ಕೃಢ್ವಂ ಮನೋ ಯುಧಿ॥**

ಗಾಂಡೀವಧನ್ವನಾದ ಅರ್ಜುನನ ದಿವ್ಯರಥವು ದೇವತೆಗಳಿಂದಲೇ ರಕ್ಷಿಸಲ್ಪಡುತ್ತಿದೆ. ಮಾನವರಲ್ಲಿ ಯಾವನೊಬ್ಬನೂ ಅದನ್ನು ಜಯಿಸಲಾರನು. ಆದುದರಿಂದ ನೀವು ಯುದ್ಧಮಾಡಲು ಮನಸ್ಸು ಮಾಡಬೇಡಿರಿ.”

ಶ೭೭ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು-ಪಾಂಡವರೊಡನೆ ಸಂಧಿಮಾಡಿಕೊಳ್ಳಲು ದುರ್ಯೋಧನನಿಗೆ ಸಲಹೆ ನೀಡಿದುದು ; ದುರಹಂಕಾರಿಯಾದ ದುರ್ಯೋಧನನು ಪಾಂಡವರೊಡನೆ ಯುದ್ಧವನ್ನೇ ಮಾಡಲು ನಿಶ್ಚಯಿಸಿದುದು : ಧೃತರಾಷ್ಟ್ರನು ಇತರಯೋಧರಿಗೆ ಯುದ್ಧದಿಂದುಂಟಾಗುವ ಭಯವನ್ನು ವಿವರಿಸಿ ಹೇಳಿದುದು

ಪಾರಿಕ್ಷಿತ! ಧೃಷ್ಟದ್ಯುಮ್ನನ ಸಂದೇಶವನ್ನು ಕೇಳಿದನಂತರ ಧೃತರಾಷ್ಟ್ರನು ಸಂಜಯನನ್ನು ಸಂಬೋಧಿಸಿ ಹೇಳುತ್ತಾನೆ :

"ಸಂಜಯ! ಯುಧಿಷ್ಠಿರನು ಕ್ಷಾತ್ರತೇಜಸ್ಸಿನಿಂದ ಕೂಡಿದವನಾಗಿದ್ದಾನೆ. ಕೌಮಾರಾವಸ್ಥೆಯಿಂದಲೂ ಅವನು ಬ್ರಹ್ಮಚರ್ಯವ್ರತನಿಷ್ಠನಾಗಿರುತ್ತಾನೆ. ನಾನು ಯುದ್ಧವು ಬೇಡವೆಂದು ವಿಲಪಿಸುತ್ತಿದ್ದರೂ ಮಂದಬುದ್ಧಿಯವರಾದ ಈ ನನ್ನ ಮಕ್ಕಳು ಧರ್ಮಾತ್ಮನಾದ ಆ ಧರ್ಮರಾಜನೊಡನೆ ಯುದ್ಧವನ್ನೇ ಅಪೇಕ್ಷಿಸುತ್ತಿದ್ದಾರೆ."

ಅನಂತರ ಧೃತರಾಷ್ಟ್ರನು ತನ್ನ ಮಗನ ಕಡೆಗೆ ತಿರುಗಿ ಹೇಳುತ್ತಾನೆ :

"ಭರತಕುಲಭೂಷಣ! ಶತ್ರುನಿಷೂದನ! ದುರ್ಯೋಧನ! ನೀನು ಯುದ್ಧದಿಂದ ವಿರಮಿಸು. ಯುದ್ಧದ ಸಿದ್ಧತೆಯನ್ನು ಸಾಕುಮಾಡು. ಎಂತಹುದೇ ಸ್ಥಿತಿಯಲ್ಲಾದರೂ ಶ್ರೇಷ್ಠಪುರುಷರು ಯುದ್ಧಮಾಡುವುದನ್ನು ಪ್ರಶಂಸಿಸುವುದಿಲ್ಲ. ಅರಿಂದಮನೇ! ನಿನ್ನ ಮತ್ತು ನಿನ್ನನ್ನೇ ಅವಲಂಬಿಸಿರುವ ಅಮಾತ್ಯರ ಜೀವಿಕೆಗೆ ಅರ್ಧರಾಜ್ಯವೇ ಸಾಕಾಗಿದೆ. ಪಾಂಡುಪುತ್ರರಿಗೆ ಯಥೋಚಿತವಾದ ರಾಜ್ಯವನ್ನು (ಅವರಿಗೆ ಸಲ್ಲಬೇಕಾದ ರಾಜ್ಯವನ್ನು) ಕೊಟ್ಟುಬಿಡು. ಹೀಗೆ ಮಾಡುವುದೇ ಧರ್ಮಸಮ್ಮತವೆಂದು ಎಲ್ಲ ಕುರುಗಳೂ ಭಾವಿಸಿದ್ದಾರೆ. ಆದುದರಿಂದ ನೀನು ಧರ್ಮಾತ್ಮರಾದ ಪಾಂಡುಪುತ್ರರೊಡನೆ ಸಂಧಿಮಾಡಿಕೋ. ವತ್ಸ! ನಿನ್ನ ಈ ಅಪಾರಸೈನ್ಯವನ್ನೂ ನೀನೊಮ್ಮೆ ವೀಕ್ಷಿಸು. ಈ ಅಪಾರಸೈನ್ಯವೇ ನಿನ್ನ ವಿನಾಶಕ್ಕೆ ಕಾರಣವಾಗುತ್ತದೆ. ನಿನ್ನ ಕಡೆಯ ಮುಖ್ಯವೀರರೇ ಯುದ್ಧದಲ್ಲಿ ಇಚ್ಛೆಯಿಲ್ಲದವ

ರಾಗಿದ್ದಾರೆ. ಈ ಯುದ್ಧವು ನಿನ್ನ ವಿನಾಶಕ್ಕೇ ಕಾರಣವಾಗುತ್ತದೆ. ಆದರೆ ಕೇವಲ ಮೋಹವಶನಾಗಿರುವುದರಿಂದ ಈ ವಿಷಯವನ್ನು ನೀನು ತಿಳಿಯುತ್ತಿಲ್ಲ. (ಈ ದೊಡ್ಡ ಸೈನ್ಯವನ್ನು ಕಟ್ಟಿಕೊಂಡು ಗೆದ್ದೇ ಗೆಲ್ಲುವೆನೆಂದು ನೀನು ಭ್ರಾಂತನಾಗಿರುವೆ.) ನಾನಂತೂ ಖಂಡಿತವಾಗಿಯೂ ಈ ಯುದ್ಧವನ್ನು ಇಚ್ಛಿಸುವುದಿಲ್ಲ. ಬಾಹ್ಲಿಕನೂ ಪಾಂಡವ-ಕೌರವರಲ್ಲಿ ಯುದ್ಧವಾಗುವುದನ್ನು ಇಚ್ಛಿಸಲಾರನು. ಭೀಷ್ಮನಾಗಲೀ, ದ್ರೋಣರಾಗಲೀ, ಸೋಮದತ್ತನಾಗಲೀ, ಶಲ್ಯನಾಗಲೀ, ಕೃಪರಾಗಲೀ–ಖಂಡಿತವಾಗಿಯೂ ಈ ಯುದ್ಧವನ್ನು ಇಚ್ಛಿಸುವುದಿಲ್ಲ. ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವ–ಇವರಾರೂ ಕೌರವ-ಪಾಂಡವರ ನಡುವಣ ಈ ಯುದ್ಧವನ್ನು ಅಪೇಕ್ಷಿಸುವವರಾಗಿಲ್ಲ. ಶತ್ರುಗಳಿಂದ ಪೀಡಿತರಾದ ಈ ಕೌರವಸೈನಿಕರು ಯಾರ ಆಶ್ರಯವನ್ನು ಪಡೆದು ಪುನಃ ಯುದ್ಧೋತ್ಸಾಹಿಗಳಾಗುವರೋ–ಅಂತಹವರೇ ಈ ಯುದ್ಧವನ್ನು ಪ್ರಶಂಸೆಮಾಡುವುದಿಲ್ಲ. (ಪಾಂಡವರ ಪ್ರಹಾರವನ್ನು ತಪ್ಪಿಸಿಕೊಳ್ಳಲು ಕೌರವಸೇನೆಯು ನಾಯಕರಾದ ಭೀಷ್ಮ-ದ್ರೋಣರ ನೆರವನ್ನು ಪಡೆಯಬೇಕಾಗಿರುತ್ತದೆ. ಸೇನಾನಾಯಕರು ಸೈನಿಕರಿಗೆ ಆಶ್ವಾಸನೆಯನ್ನಿತ್ತು ಅವರನ್ನೂ ಸಂರಕ್ಷಣೆಮಾಡುತ್ತಾ ಪೆಟ್ಟುತಿಂದವರಿಗೆ ಪುನಃ ಉತ್ಸಾಹವನ್ನು ತುಂಬಿ ಯುದ್ಧ ಮಾಡಲು ಪ್ರಚೋದಿಸುತ್ತಾರೆ. ಅಂತಹ ಭೀಷ್ಮ-ದ್ರೋಣಾದಿ ಯೋಧಪ್ರಮುಖರಿಗೇ ಇಂದಿನ ಈ ಯುದ್ಧವು ಬೇಡವಾಗಿದೆ. ಸೇನಾನಾಯಕರಿಗೇ ಯುದ್ಧದಲ್ಲಿ ಉತ್ಸಾಹವಿಲ್ಲದಿದ್ದಾಗ ಅವರು ಸೈನಿಕರನ್ನು ಹೇಗೆ ತಾನೇ ಹುರಿದುಂಬಿಸಿಯಾರು? ಈ ಕಾರಣದಿಂದ ಸಂಧಿಯೇ ಈ ಸಮಯದಲ್ಲಿ ಯುಕ್ತವೆಂದು ಧೃತರಾಷ್ಟ್ರನು ಮಗನಿಗೆ ಹೇಳುತ್ತಾನೆ.)

ದುರ್ಯೋಧನ! ನಾನು ಹೇಳುವ ಮಾತುಗಳು ನಿನಗೆ ಪಥ್ಯವಾಗಲಿ. ನಿನ್ನ ವಿಷಯದಲ್ಲಿ ನನ್ನ ಅಭಿಪ್ರಾಯವು ಈ ರೀತಿಯಾಗಿದೆ.

ನೀನು ನಿನ್ನ ಸ್ವಂತ ಇಚ್ಛೆಯಿಂದ ಯಾವುದನ್ನೂ ಮಾಡುತ್ತಿಲ್ಲ. ಕರ್ಣ, ಪಾಪಾತ್ಮನಾದ ದುಃಶಾಸನ ಮತ್ತು ಸುಬಲಪುತ್ರನಾದ ಶಕುನಿ–ಈ ಮೂವರು ನಿನ್ನಿಂದ ಈ ಕಾರ್ಯವನ್ನು ಮಾಡಿಸುತ್ತಿದ್ದಾರೆ. ನಿನ್ನನ್ನು ಅಪಮಾರ್ಗದಲ್ಲಿ ಒಯ್ಯುತ್ತಿದ್ದಾರೆ.”

ದುರ್ಯೋಧನನು ಉತ್ತರಿಸುತ್ತಾನೆ:

“ ತಂದೆಯೇ! ನಿನ್ನ ಭ್ರಾಂತಿಯನ್ನು ದೂರಮಾಡು. ನಾನು ದ್ರೋಣ ರನ್ನವಲಂಬಿಸಿ ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿಲ್ಲ. ಅಶ್ವತ್ಥಾಮ ನನ್ನಾಗಲೀ, ಸಂಜಯನನ್ನಾಗಲೀ, ಭೀಷ್ಮರನ್ನಾಗಲೀ, ಕಾಂಬೋಜನನ್ನಾ ಗಲೀ, ಕೃಪ-ಬಾಹ್ಲಿಕರನ್ನಾಗಲೀ, ಸತ್ಯವ್ರತ-ಪುರುಮಿತ್ರರನ್ನಾಗಲೀ, ಭೂರಿ ಶ್ರವಸನನ್ನಾಗಲೀ, ನಿನ್ನವರಾದ ಇತರ ರಾಜರನ್ನೇ ಆಗಲೀ ಅವಲಂಬಿಸಿ ಕೊಂಡು ನಾನು ಪಾಂಡವರನ್ನು ಯುದ್ಧಕ್ಕೆ ಆಹ್ವಾನಿಸುತ್ತಿಲ್ಲ. ನಾನು ಮತ್ತು ಕರ್ಣ–ಇಬ್ಬರೇ ಈ ರಣಮಹಾಯಜ್ಞಕ್ಕೆ ಯುಧಿಷ್ಠಿರನನ್ನೇ ಪಶುವನ್ನಾಗಿ ಮಾಡಿಕೊಂಡು ದೀಕ್ಷಿತರಾಗಲು ನಿಶ್ಚಯಿಸಿದ್ದೇವೆ.

ಈ ಮಹಾಯಜ್ಞದ ಉಪಕರಣಗಳಾವುವೆಂದು ಕೇಳುವೆಯೇನು?

**ರಥೋ ವೇದೀ ಸ್ರುವಃ ಖಡ್ಗೋ ಗದಾ ಸ್ರುಕ್ಕವಚೋಽಜಿನಮ್ ।**
**ಚಾತುರ್ಹೋತ್ರಂ ಚ ಧುರ್ಯಾ ಮೇ ಶರಾ ದರ್ಭಾ ಹವಿರ್ಯಶಃ ॥**

**ಆತ್ಮಯಜ್ಞೇನ ನೃಪತೇ ಇಷ್ಟ್ವಾ ವೈವಸ್ವತಂ ರಣೇ ।**
**ವಿಜಿತ್ಯ ಚ ಸಮೇಷ್ಯಾವೋ ಹತಾಮಿತ್ರೌ ಶ್ರಿಯಾ ವೃತೌ ॥೧೪॥**

ಈ ಮಹಾಯಜ್ಞಕ್ಕೆ ರಥವೇ ಯಜ್ಞವೇದಿಯು ; ಖಡ್ಗವೇ ಸ್ರುವ ; ಗದೆಯೇ ಸ್ರುಕ್ಕು ; ಕವಚವೇ ಕೃಷ್ಣಾಜಿನ ; ನನ್ನ ರಥವನ್ನೆಳೆಯುವ ನಾಲ್ಕು ಕುದುರೆಗಳೇ ನಾಲ್ಕುಮಂದಿ ಹೋತೃಗಳು ; ಬಾಣಗಳೇ ದರ್ಭೆ ; ಯಶಸ್ಸೇ ಹವಿಸ್ಸು ; ಯಜ್ಞದೀಕ್ಷಿತರಾದ ನಾವಿಬ್ಬರೂ ಸಮರಾಂಗಣದಲ್ಲಿ ನಮ್ಮ ಈ ಯುದ್ಧಯಜ್ಞದಿಂದ ಯಮರಾಜನನ್ನಾರಾಧಿಸಿ, ಶತ್ರುಗಳನ್ನು ಸದೆಬಡಿದು, ಕೀರ್ತಿಯನ್ನು ಗಳಿಸಿ ವಿಜಯಲಕ್ಷ್ಮಿಯಿಂದ ಕೂಡಿದವರಾಗಿ ರಾಜಧಾನಿಗೆ ಹಿಂದಿರುಗುತ್ತೇವೆ. ನಮಗೆ ಯಾರೊಬ್ಬರ ಸಹಾಯಸಂಪತ್ತಿಯೂ ಬೇಕಾಗಿಲ್ಲ. ಕರ್ಣ, ನನ್ನ ತಮ್ಮ ದುಃಶಾಸನ ಮತ್ತು ನಾನು–ಈ ಮೂವರೇ ರಣಾಂಗಣದಲ್ಲಿ ಪಾಂಡವರ ರುಂಡಗಳನ್ನು ಚೆಂಡಾಡಿಬಿಡುತ್ತೇವೆ. ಮಹಾರಾಜಾ! ನನ್ನ ನಿರ್ಧಾರವನ್ನು ಇನ್ನೂ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ಈ ಭೂಮಿಯಲ್ಲಿ ಪಾಂಡವ-ಕೌರವರಿಬ್ಬರೂ ಬದುಕಿ-ಬಾಳುವ ಸಾಧ್ಯತೆಯಿಲ್ಲ.

**ಅಹಂ ಹಿ ಪಾಣ್ಡವಾನ್ಹತ್ವಾ ಪ್ರಶಾಸ್ತಾ ಪೃಥಿವೀಮಿಮಾಮ್ ।**
**ಮಾಂ ವಾ ಹತ್ವಾ ಪಾಣ್ಡುಪುತ್ರಾ ಭೋಕ್ತಾರಃ ಪೃಥಿವೀಮಿಮಾಮ್ ॥**

ನಾನಾದರೂ ಪಾಂಡುಪುತ್ರರನ್ನು ಸಂಹರಿಸಿ ಅಬಾಧಿತವಾದ ಈ ಭೂಮಿಯನ್ನಾಳುತ್ತೇನೆ. ಪಾಂಡುಪುತ್ರರಾದರೂ ನನ್ನನ್ನು ಕೊಂದು ಈ ಭೂಮಂಡಲದ ಭೋಕ್ತೃಗಳಾಗುತ್ತಾರೆ. (ಭೂಮಂಡಲದ ಶಾಸಕ ರಾಗುತ್ತಾರೆ.)

**ತ್ಯಕ್ತಂ ಮೇ ಜೀವಿತಂ ರಾಜ್ಯಂ ಧನಂ ಸರ್ವಂ ಚ ಪಾರ್ಥಿವ ।**
**ನ ಜಾತು ಪಾಣ್ಡವೈಃ ಸಾರ್ಧಂ ವಸೇಯಮಹಮಚ್ಯುತ ॥೧೭॥**

ಅಚ್ಯುತನೇ! ಮಹಾರಾಜ! ನಾನು ರಾಜ್ಯವನ್ನಾದರೂ ತ್ಯಾಗಮಾಡಿ ಯೇನು ; ಧನವನ್ನಾದರೂ ತ್ಯಾಗಮಾಡಿಯೇನು ; ನನ್ನ ಸರ್ವಸ್ವವನ್ನೂ ತ್ಯಾಗಮಾಡಿಯೇನು ; ಕಟ್ಟಕಡೆಗೆ ನನ್ನ ಜೀವಿತವನ್ನೇ ತೊರೆದೇನು. ಆದರೆ ಪಾಂಡವರೊಡನೆ ಸಹಜೀವನವನ್ನು ಮಾತ್ರ ಖಂಡಿತವಾಗಿಯೂ ನಡೆಸಲಾರೆನು.

**ಯಾವದ್ಧಿ ಸೂಚ್ಯಾಸ್ತೀಕ್ಷ್ಣಾಯಾ ವಿಧ್ಯೇದಗ್ರೇಣ ಮಾರಿಷ ।**
**ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಣ್ಡವಾನ್ಪ್ರತಿ ॥೧೮॥**

ಪೂಜ್ಯನೇ! ಅರ್ಧರಾಜ್ಯವನ್ನು ಪಾಂಡವರಿಗೆ ಕೊಟ್ಟುಬಿಡುವಂತೆ ಹೇಳಿದೆಯಲ್ಲವೇ? ಸೂಜಿಯ ತೀಕ್ಷ್ಣವಾದ ಮೊನೆಯು ಎಷ್ಟು ಭೂಮಿಯನ್ನು ಚುಚ್ಚುವುದೋ–ಅಷ್ಟುಮಾತ್ರ ಭೂಮಿಯನ್ನೂ ನಾನು ಪಾಂಡವರಿಗೆ ಖಂಡಿತ ವಾಗಿಯೂ ಕೊಡುವುದಿಲ್ಲ. ತಿಳಿಯಿತೇ?"

ದುರ್ಯೋಧನನ ಮಾತುಗಳನ್ನು ಕೇಳಿದನಂತರ ಧೃತರಾಷ್ಟ್ರನು ನಿಟ್ಟುಸಿರುಬಿಡುತ್ತಾ ಅಲ್ಲಿ ನೆರೆದಿದ್ದ ಅತಿರಥ-ಮಹಾರಥರನ್ನು ಕುರಿತು ಹೇಳು ತ್ತಾನೆ :

"ಕುರುಕುಲನಂದನರೇ! ನಾನು ದುರ್ಯೋಧನನನ್ನು ಸಂಪೂರ್ಣ ವಾಗಿ ತ್ಯಾಗಮಾಡಿಬಿಟ್ಟೆನು. ಅವನನ್ನುಳಿಸಿಕೊಳ್ಳುವ ಆಸೆಯು ಇನ್ನು ನನಗಿಲ್ಲ. ಯಮಲೋಕಕ್ಕೆ ಪ್ರಯಾಣಮಾಡಲು ಸಿದ್ಧನಾಗುತ್ತಿರುವ ಮಂದ ಬುದ್ಧಿಯವನಾದ ಇವನನ್ನನುಸರಿಸಿ ನಿಂತಿರುವ ನಿಮ್ಮೆಲ್ಲರ ವಿಷಯವಾಗಿ

ನಾನು ಶೋಕಿಸುತ್ತೇನೆ. ವ್ಯಾಘ್ರಗಳು ಗುಂಪು-ಗುಂಪಾಗಿರುವ ರುರುಗಳನ್ನು (ಒಂದು ಜಾತಿಯ ಜಿಂಕೆಗಳನ್ನು) ಸಂಹರಿಸುವಂತೆ–ಶತ್ರುಗಳನ್ನು ಪ್ರಹರಿಸುವವರಲ್ಲಿ ಶ್ರೇಷ್ಠರಾದ ಪಾಂಡವರೆಲ್ಲರೂ ಒಗ್ಗಟ್ಟಾಗಿ ಬಂದು ನಮ್ಮ ಪಕ್ಷದಲ್ಲಿರುವ ಪ್ರಧಾನರಾದ ಮತ್ತು ಶ್ರೇಷ್ಠರಾದ ಯೋಧರೆಲ್ಲರನ್ನೂ ಸಂಹರಿಸುತ್ತಾರೆ. ಸಾತ್ಯಕಿಯ ಕೈಯಲ್ಲಿ ಸಿಕ್ಕಿದ ನಮ್ಮ ಸೇನೆಯ ಸ್ಥಿತಿಯು–ವೀರನೊಬ್ಬನು ಜಡೆಯನ್ನು ಹಿಡಿದು ಎಳೆದಾಡುತ್ತಿರುವ ತಿರಸ್ಕೃತಳಾದ ಹೆಣ್ಣಿನ ಅವಸ್ಥೆಯಂತಾಗುತ್ತದೆ. ಶಿನಿಯ ಮಗನಾದ ಸಾತ್ಯಕಿಯು ಈಗಲೇ ಪರ್ಯಾಪ್ತವಾಗಿರುವ ಯುಧಿಷ್ಠಿರನ ಬಲವೆಂಬ ಧನಕ್ಕೆ ತನ್ನ ಬಲವೆಂಬ ಧನವನ್ನೂ ಸೇರಿಸಿ, ಅವನ ಬಲವೆಂಬ ಧನವನ್ನು ವೃದ್ಧಿಗೊಳಿಸಿ ಸಮರಾಂಗಣದಲ್ಲಿ ನಿಂತು–ರೈತನು ಭೂಮಿಯಲ್ಲಿ ಬೀಜಾವಾಪಮಾಡುವಂತೆ–ಶರಗಳೆಂಬ ಅಸಂಖ್ಯಾತಬೀಜಗಳನ್ನು ರಣಾಂಗಣದಲ್ಲಿ ಬಿತ್ತುತ್ತಾನೆ. ಪಾಂಡವರ ಪಕ್ಷದಲ್ಲಿರುವ ಸಮಸ್ತಯೋಧರಿಗೂ ಅಗ್ರಭಾಗದಲ್ಲಿ ಭೀಮಸೇನನು ಗದಾಪಾಣಿಯಾಗಿ ನಿಲ್ಲುತ್ತಾನೆ. ಭಯರಹಿತವಾದ ಪ್ರಾಕಾರ (ಕೋಟೆಯ) ರೂಪವಾಗಿರುವ ಭೀಮನನ್ನು ಸಕಲರಾಜರೂ ಆಶ್ರಯಿಸುತ್ತಾರೆ. (ಅವನ ಹಿಂಬದಿಯಲ್ಲಿ ನಿಂತು ಉಳಿದ ರಾಜರು ಯುದ್ಧಮಾಡುತ್ತಾರೆ.)

ದುರ್ಯೋಧನ! ಪರ್ವತೋಪಮವಾದ ಆನೆಗಳೂ ಭೀಮನಿಂದ ಪ್ರಹೃತವಾಗಿ ದಂತಗಳನ್ನು ಮುರಿದುಕೊಂಡು ಸೀಳಿದ ಕುಂಭಸ್ಥಲವುಳ್ಳವುಗಳಾಗಿ, ಶರೀರದ ಎಲ್ಲ ಭಾಗಗಳಿಂದಲೂ ರಕ್ತವನ್ನು ಸುರಿಸುತ್ತಾ–ಸೀಳಿ ಹೋದ ಪರ್ವತಗಳೋಪಾದಿಯಲ್ಲಿ–ನೆಲದ ಮೇಲೆ ಬಿದ್ದು ಒದ್ದಾಡುತ್ತಿರುವುದನ್ನು ನೀನು ಯಾವಾಗ ನೋಡುವೆಯೋ ಮತ್ತು ಭೀಮನ ಸ್ಪರ್ಶಮಾತ್ರದಿಂದಲೇ ನಿನಗೆ ಯಾವಾಗ ಭಯವುಂಟಾಗುವುದೋ–ಆ ಸಮಯದಲ್ಲಿ ಮಾತ್ರವೇ ನಾನೀಗ ಹೇಳಿರುವ ಮಾತುಗಳನ್ನು ಸ್ಮರಿಸಿಕೊಳ್ಳುವೆ. ಭೀಮಸೇನನ ಕ್ರೋಧಾಗ್ನಿಯಿಂದ ಭಸ್ಮೀಭೂತವಾಗುವ ರಥ-ಹಯ-ದ್ವಿಪ-ಪದಾತಿ ಸೈನ್ಯಗಳನ್ನು ಯಾವಾಗ ನೀನು ನೋಡುವೆಯೋ ಮತ್ತು ಅಗ್ನಿಯು ಒಂದೆಡೆಯಿಂದ ಮತ್ತೊಂದೆಡೆಗೆ ನಿಮಿಷ-ನಿಮಿಷಕ್ಕೂ ಹಬ್ಬುತ್ತಾ ಹೋಗುವಂತೆ–ಭೀಮಸೇನನು ನಿನ್ನ ಸೈನ್ಯವನ್ನು ಧ್ವಂಸಗೊಳಿಸುತ್ತಾ ಮುಂದೆ ಮುಂದೆ ಹೋಗುತ್ತಿರುವುದನ್ನು ಯಾವಾಗ ನೀನು ಕಾಣುವೆಯೋ–ಆಗ ನೀನು

ನನ್ನೀ ಮಾತುಗಳನ್ನು ಸ್ಮರಿಸಿಕೊಳ್ಳುವೆ. ಕುರುಕುಲಾವತಂಸರೇ! ನಿಮಗೆ ಬಹುಭಯಾನಕವಾದ ಕಾಲವು ಸಮೀಪಿಸುತ್ತಿದೆ. ನೀವು ಪಾಂಡವರೊಡನೆ ಶಾಂತಿಯನ್ನು (ಸಂಧಿಯನ್ನು) ಮಾಡಿಕೊಳ್ಳದಿದ್ದರೆ–ಭೀಮನ ಗದಾ ಪ್ರಹಾರದಿಂದ ಹತರಾಗಿ ಹೋಗುವ ನೀವು ಚಿರಶಾಂತಿಯನ್ನು ಪಡೆಯುವಿರಿ. ಮರಗಳನ್ನೆಲ್ಲಾ ಕಡಿದು ಶೂನ್ಯವಾಗಿ ಮಾಡಲ್ಪಟ್ಟಿರುವ ಕಾಡಿನಂತೆ–ಭೀಮ ಸೇನನಿಂದ ಹೊಡೆದು ಬೀಳಿಸಲ್ಪಟ್ಟ ಕುರುಸೈನ್ಯವನ್ನು ನೋಡಿದಾಗ ನನ್ನೀ ಮಾತುಗಳನ್ನು ಸ್ಮರಿಸುವೆ, ದುರ್ಯೋಧನ!"

ಜನಮೇಜಯ! ಧೃತರಾಷ್ಟ್ರರಾಜನು ಆ ಮಹಾಸಭೆಯಲ್ಲಿ ಸೇರಿದ್ದ ರಾಜರಿಗೂ ಮತ್ತು ದುರ್ಯೋಧನನಿಗೂ ಈ ರೀತಿ ಹೇಳಿದನಂತರ ಪುನಃ ಸಂಜಯನನ್ನು ಪ್ರಶ್ನಿಸತೊಡಗಿದನು."

ಖ೮ನೆಯ ಅಧ್ಯಾಯವು ಮುಗಿಯಿತು.

ಖ೯ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಅಂತಃಪುರದಲ್ಲಿದ್ದ ಕೃಷ್ಣಾರ್ಜುನರ ಸಂದೇಶವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿದುದು

ಮಹಾರಾಜ! ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಮಹಾತ್ಮರಾದ ಧನಂಜಯ-ವಾಸುದೇವರು ಈ ವಿಷಯವಾಗಿ ಏನು ಹೇಳಿದರೆಂಬುದನ್ನು ಹೇಳು, ಸಂಜಯ! ನಿನ್ನ ಮುಖದಿಂದ ನಾನವರ ಸಂದೇಶವನ್ನು ಕೇಳಬೇಕೆಂದಿರುತ್ತೇನೆ.

ಸಂಜಯನು ಹೇಳುತ್ತಾನೆ :

"ಮಹಾರಾಜ! ನಾನು ಶ್ರೀಕೃಷ್ಣ-ಧನಂಜಯರನ್ನು ಎಲ್ಲಿ ಮತ್ತು ಹೇಗೆ ನೋಡಿದೆನೋ ಮತ್ತು ಅವರು ನನಗೆ ಏನು ಹೇಳಿದರೋ ಆ ಎಲ್ಲ ವಿಷಯಗಳನ್ನೂ ನಿನಗೆ ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು. ರಾಜನೇ! ನಿನ್ನ ಸಂದೇಶವನ್ನು ತಿಳಿಸುವ ಸಲುವಾಗಿ ನಾನು ಶುದ್ಧಾತ್ಮನಾಗಿ ಶ್ರೀಕೃಷ್ಣನ ಪಾದಾಂಗುಲಿಗಳಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿ, ಬದ್ಧಾಂಜಲಿ

ಯಾಗಿ ಶ್ರೀಕೃಷ್ಣ-ಧನಂಜಯರಿದ್ದ ಅಂತಃಪುರವನ್ನು ಪ್ರವೇಶಿಸಿದೆನು. ಯಾವ ಅಂತಃಪುರದಲ್ಲಿ ಮಾನಿನಿಯಾದ ಸತ್ಯಭಾಮೆಯೂ, ದ್ರೌಪದಿಯೂ, ಶ್ರೀಕೃಷ್ಣ-ಧನಂಜಯರೂ ಇದ್ದರೋ–ಆ ಅಂತಃಪುರಕ್ಕೆ ಅಭಿಮನ್ಯುವಾಗಲೀ, ನಕುಲ-ಸಹದೇವರಾಗಲೀ ಪ್ರವೇಶಿಸುತ್ತಿರಲಿಲ್ಲ. ನಾನು ಅಂತಃಪುರವನ್ನು ಪ್ರವೇಶಿಸಿದ ಸಮಯದಲ್ಲಿ ಕೃಷ್ಣಾರ್ಜುನರಿಬ್ಬರೂ ಮಧು ಮತ್ತು ಆಸವಗಳನ್ನು ಸೇವಿಸಿ ಮೈಮರೆತಿದ್ದರು. ದಿವ್ಯಚಂದನದಿಂದ ಲೇಪಿತರಾಗಿದ್ದರು. ದಿವ್ಯವಾದ ಮಾಲೆಗಳನ್ನು ಧರಿಸಿದ್ದರು. ಬಹುಮೂಲ್ಯಗಳಾದ ಪೀತಾಂಬರಗಳನ್ನು ಧರಿಸಿದ್ದರು. ದಿವ್ಯವಾದ ಕನಕಾಂಗದ-ಕೇಯೂರಾದಿ ಆಭರಣಗಳಿಂದ ಅಲಂಕೃತರಾಗಿದ್ದರು. ಅರಿಂದಮರಾದ ಕೃಷ್ಣಾರ್ಜುನರು ಕುಳಿತಿದ್ದ ವರಾಸನವು ಸುವರ್ಣಮಯವಾಗಿದ್ದಿತು. ಅದರಲ್ಲಿ ಅನೇಕವಿಧವಾದ ರತ್ನಗಳನ್ನು ಮೆಟ್ಟಿದ್ದುದರಿಂದ ಅದು ಚಿತ್ರ-ವಿಚಿತ್ರವಾಗಿ ಕಾಣುತ್ತಿದ್ದಿತು. ರತ್ನಖಚಿತವಾದ ಮತ್ತು ಸ್ವರ್ಣಮಯವಾದ ಆ ವರಾಸನವು ನಾನಾವಿಧವಾದ ರತ್ನಗಂಬಳಿಗಳಿಂದಲೂ ಆಚ್ಛಾದಿತವಾಗಿದ್ದಿತು. ನಾನು ಅಂತಃಪುರಕ್ಕೆ ಪ್ರವೇಶಿಸಿದ ಸಮಯದಲ್ಲಿ ಶ್ರೀಕೃಷ್ಣನ ಎರಡು ಪಾದಗಳೂ ಅರ್ಜುನನ ತೊಡೆಯ ಮೇಲಿದ್ದುದನ್ನು ಕಂಡೆನು. ಅಂತೆಯೇ ಮಹಾತ್ಮನಾದ ಅರ್ಜುನನ ಒಂದು ಕಾಲು ಕೃಷ್ಣೆಯ ತೊಡೆಯ ಮೇಲೂ–ಮತ್ತೊಂದು ಕಾಲು ಸತ್ಯಭಾಮೆಯ ತೊಡೆಯ ಮೇಲೂ ಇದ್ದಿತು. ಕೈಜೋಡಿಸಿ ಒಳಗೆ ಪ್ರವೇಶಿಸಿದ ನನ್ನನ್ನು ನೋಡುತ್ತಲೇ ಅರ್ಜುನನು ನಾನು ಕುಳಿತುಕೊಳ್ಳಲು ಸ್ವರ್ಣಮಯವಾದ ಪಾದಪೀಠವನ್ನು (ಕಾಲುಗಳನ್ನಿಟ್ಟುಕೊಳ್ಳುವ ಪೀಠ) ತೋರಿಸಿದನು. ಅದನ್ನು ನಾನು ಕೈಯಿಂದ ಸ್ಪರ್ಶಿಸಿ ಅನಂತರ ನೆಲದ ಮೇಲೆ ಕುಳಿತನಂತರ ಪಾದಪೀಠವನ್ನು ಬಿಟ್ಟೆದ್ದ ಅರ್ಜುನನ ಪಾದಗಳ ತಳಭಾಗವನ್ನು ದಿಟ್ಟಿಸಿ ನೋಡಿದೆನು. ಆ ದಿವ್ಯಪಾದಗಳೆರಡೂ ಊರ್ಧ್ವಮುಖವಾದ ರೇಖೆಗಳನ್ನು ಹೊಂದಿದ್ದು ಸರ್ವಶುಭ ಲಕ್ಷಣಗಳಿಂದಲೂ ಕೂಡಿದ್ದುವು. ಶ್ರೀಕೃಷ್ಣಾರ್ಜುನರು ಶ್ಯಾಮಲ ವರ್ಣದವರಾಗಿದ್ದರು. ಮಹಾಪುರುಷರಾಗಿದ್ದರು. ತರುಣರಾಗಿದ್ದರು. ಶಾಲವೃಕ್ಷದಂತೆ ಉನ್ನತವಾದ ಶರೀರವುಳ್ಳವರಾಗಿದ್ದರು. ಆ ಮಹಾಪುರುಷರಿಬ್ಬರೂ ಒಂದೇ ಆಸನದಲ್ಲಿ ಕುಳಿತಿರುವುದನ್ನು ನೋಡಿ ನನಗೆ ಮಹತ್ತರವಾದ ಭಯವುಂಟಾಯಿತು. ಆ ಸಮಯದಲ್ಲಿ ನಾನು ಹೀಗೆಂದು ಯೋಚಿಸಿ

ದೆನು : 'ಇಂದ್ರ ಮತ್ತು ವಿಷ್ಣು ಇವರಿಗೆ ಸಮಾನರಾದ ಈ ಕೃಷ್ಣಾರ್ಜುನರ ಪರಾಕ್ರಮವೆಷ್ಟೆಂಬುದನ್ನು ಮಂದಬುದ್ಧಿಯವನಾದ ಆ ದುರ್ಯೋಧನನು ತಿಳಿದವನಾಗಿಲ್ಲ. ಮಹಾಧನುಷ್ಮಂತರಾದ ದ್ರೋಣ-ಭೀಷ್ಮರು ತಮಗೆ ಆಶ್ರಯದಾತರಾಗಿರುವರೆಂಬುದೂ ಮತ್ತು ಕರ್ಣನ ಅಹಂಕಾರಪೂರ್ಣವಾದ ಹೊಗಳಿಕೆಯ ಮಾತುಗಳೂ ಇದಕ್ಕೆ ಮುಖ್ಯಕಾರಣಗಳಾಗಿವೆ.'

ಆ ಇಬ್ಬರು ಮಹಾತ್ಮರೂ (ಕೃಷ್ಣಾರ್ಜುನರು) ಯಾವನ ಆಜ್ಞೆಯನ್ನು ಪರಿಪಾಲಿಸಲು ಸದಾ ಬದ್ಧಕಂಕಣರಾಗಿರುವರೋ–ಅಂತಹ ಧರ್ಮರಾಜನ ಮಾನಸಿಕಸಂಕಲ್ಪವು ಸಿದ್ಧಿಸುವುದರಲ್ಲಿ ನನಗಾವ ಸಂಶಯವೂ ಉಳಿಯಲಿಲ್ಲ. ಧರ್ಮರಾಜನ ಸಂಕಲ್ಪದಂತೆಯೇ ಎಲ್ಲವೂ ನಡೆಯುವುದೆಂದು ನಾನು ಆ ಸಮಯದಲ್ಲಿ ನಿಶ್ಚಯಿಸಿದೆನು. ಅನಂತರದಲ್ಲಿ ಅವರು ನನ್ನನ್ನು ಅನ್ನ-ಪಾನಾದಿಗಳಿಂದ ಸತ್ಕರಿಸಿದರು. ಯಥೋಚಿತವಾದ ಸತ್ಕಾರವನ್ನು ಪಡೆದನಂತರ ನಾನು ಅವರ ಸಮೀಪದಲ್ಲಿ ಕುಳಿತು ಅಂಜಲಿಯನ್ನು ತಲೆಯಮೇಲಿಟ್ಟುಕೊಂಡು ಕೃಷ್ಣಾರ್ಜುನರಿಬ್ಬರನ್ನೂ ಸಂದೇಶನೀಡುವಂತೆ ಪ್ರಾರ್ಥಿಸಿದೆನು. ಧನುಸ್ಸಿನ ಶಿಂಜಿನಿಯ ಸೆಳೆತದಿಂದ ಉಂಟಾಗಿದ್ದ ಗುರುತಿನಿಂದ ಕೂಡಿದ್ದ ಕೈಗಳಿಂದ ಶುಭಲಕ್ಷಣಯುಕ್ತವಾದ ಶ್ರೀಕೃಷ್ಣನ ದಿವ್ಯಪಾದಗಳನ್ನು ಒತ್ತುತ್ತಿದ್ದ ಅರ್ಜುನನು ನನಗೆ ಸಂದೇಶವನ್ನೀಯಲು ಕೇಶವನಿಗೆ ಪ್ರೇರಣೆಮಾಡಿದನು.

ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮದಿಂದ ಕೂಡಿರುವ, ಸರ್ವಾಭರಣಭೂಷಿತನಾಗಿದ್ದ ಶ್ರೀಕೃಷ್ಣನು ಇಂದ್ರಧ್ವಜದಂತೆ ಮೇಲೆದ್ದು ಕುಳಿತು ನನ್ನೊಡನೆ ಹೀಗೆಂದು ಹೇಳಿದನು. ವಾಗ್ಮಿಗಳಲ್ಲಿ ಶ್ರೇಷ್ಠನಾದ ಶ್ರೀಕೃಷ್ಣನು ಮೊದ-ಮೊದಲು ಮೃದುವಾದ, ಮನಸ್ಸಿಗೆ ಆಹ್ಲಾದಕರವಾದ ಮಾತುಗಳನ್ನೇ ಹೇಳಿದನು. ಅನಂತರದಲ್ಲಿ ನಿನ್ನ ಮಕ್ಕಳಿಗೆ ಬಹಳ ತ್ರಾಸದಾಯಕವಾದ ಮತ್ತು ಅತ್ಯಂತದಾರುಣವಾದ ಮಾತುಗಳನ್ನು ಹೇಳಿದನು. ಮಾತನಾಡುವುದರಲ್ಲಿ ಬಹುಕುಶಲನಾದ ಶ್ರೀಕೃಷ್ಣನ ಮಾತುಗಳನ್ನು ನಾನು ಕೇಳಿದೆನು. ಅವನಾಡಿದ ಒಂದೊಂದಕ್ಷರವೂ ಬೋಧಪ್ರದವಾಗಿದ್ದಿತು. ಆ ಮಾತು ಅಭೀಷ್ಟಾರ್ಥದ ಪ್ರತಿಪಾದಕವಾಗಿದ್ದಿತು ಮತ್ತು ಹೃದಯಹಾರಿ

ಯಾಗಿಯೂ (ಮೋಹಕವಾಗಿಯೂ) ಇದ್ದಿತು. ಶ್ರೀಕೃಷ್ಣನು ಹೇಳಿದ ಮಾತುಗಳನ್ನು ಯಥಾವತ್ತಾಗಿಯೇ ಹೇಳುತ್ತೇನೆ. ಕೇಳು, ಮಹಾರಾಜ!

"ಸಂಜಯ! ಕುರುಮುಖ್ಯನಾದ ಭೀಷ್ಮನೂ ಮತ್ತು ಆಚಾರ್ಯ ದ್ರೋಣರೂ ಉಪಸ್ಥಿತರಾಗಿರುವಾಗ ಅವರಿಗೂ ಈ ವಿಷಯವು ತಿಳಿಯುವ ರೀತಿಯಲ್ಲಿ ನೀನೀ ಮಾತನ್ನು ಬುದ್ಧಿವಂತನಾದ ಧೃತರಾಷ್ಟ್ರನಿಗೆ ಹೇಳಬೇಕು. ನಮ್ಮಿಬ್ಬರ (ಕೃಷ್ಣಾರ್ಜುನರ) ಮಾತಿನಂತೆ ನೀನು ಮೊದಲು ನಮ್ಮ ಪರವಾಗಿ ನಮಗಿಂತಲೂ ಹಿರಿಯರಾದವರಿಗೆ ನಮಸ್ಕಾರಮಾಡಬೇಕು. ಹಾಗೂ ನಮಗಿಂತಲೂ ಕಿರಿಯರಾದವರ ಕುಶಲಪ್ರಶ್ನೆಯನ್ನು ಮಾಡಬೇಕು. ಅನಂತರದಲ್ಲಿ ನೀನು ನಮ್ಮೀ ಉತ್ತರವನ್ನು ಅಥವಾ ಸಂದೇಶವನ್ನು ಅವರಿಗೆ ಹೇಳಬೇಕು.

"ಕೌರವರೇ! ನಾನಾಪ್ರಕಾರವಾದ ಯಜ್ಞಗಳನ್ನು ಅನುಷ್ಠಾನ ಮಾಡಲು ಈ ಕೂಡಲೇ ಆರಂಭಿಸಿರಿ. ಯಜ್ಞಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ನೀಡಿರಿ. ನಿಮ್ಮ ಪುತ್ರರೊಡನೆಯೂ, ಪತ್ನಿಯರೊಡನೆಯೂ ಕೂಡಿಕೊಂಡು ಅನುಭವಿಸಬೇಕಾಗಿರುವ ಸುಖೋಪ ಭೋಗಗಳೆಲ್ಲವನ್ನೂ ಈಗಲೇ ಅನುಭವಿಸಿರಿ. ಏಕೆಂದರೆ : ನಿಮಗೆ ಮಹಾ ಭಯದ, ಮಹಾವಿಪತ್ತಿನ ಕಾಲವು ಅತಿಶೀಘ್ರದಲ್ಲಿಯೇ ಸನ್ನಿಹಿತವಾಗಲಿದೆ. ನಿಮ್ಮಲ್ಲಿರುವ ಧನ-ಕನಕಾದಿವಸ್ತುಗಳನ್ನು ಈ ಕೂಡಲೇ ಸತ್ಪಾತ್ರರಲ್ಲಿ ದಾನ ಮಾಡಿಬಿಡಿರಿ. ನಿಮ್ಮ ಇಚ್ಛೆಯಂತೆ ಪುತ್ರರನ್ನು ಪಡೆಯಿರಿ. ಪ್ರಿಯರಾದ ವರಿಗೆ ಒಳ್ಳೆಯದನ್ನು ಮಾಡಿರಿ. ಯುಧಿಷ್ಠಿರನು ಜಯಗಳಿಸಬೇಕೆಂದು ಅವಸರಪಡುತ್ತಿದ್ದಾನೆ.

**ಋಣಮೇತತ್ಪ್ರವೃದ್ಧಂ ಮೇ ಹೃದಯಾನ್ನಾಪಸರ್ಪತಿ ।**
**ಯದ್ಗೋವಿನ್ದೇತಿ ಚುಕ್ರೋಶ ಕೃಷ್ಣಾ ಮಾಂ ದೂರವಾಸಿನಮ್ ॥**

ಕೌರವರ ತುಂಬಿದ ಸಭೆಯಲ್ಲಿ ದ್ರೌಪದಿಯ ವಸ್ತ್ರಾಪಹರಣವಾಗುತ್ತಿ ದ್ದಾಗ ಬಹುದೂರದಲ್ಲಿದ್ದ ನನ್ನನ್ನು ನೆನೆದು ದ್ರೌಪದಿಯು–'ಗೋವಿಂದ! ರಕ್ಷ ಮಾಂ' – 'ಗೋವಿಂದ! ನನ್ನ ಮಾನಸಂರಕ್ಷಣೆಯನ್ನು ಮಾಡು'–

ಎಂದರಚಿಕೊಂಡಳು. ಅವಳಂದು ನನ್ನನ್ನು ಕೂಗಿಕೊಂಡು ಪ್ರಲಪಿಸಿದ ಋಣವನ್ನು ತೀರಿಸಬೇಕಾಗಿದೆ. ಬಹುಕಾಲ ಕಳೆದುಹೋದುದರ ಕಾರಣದಿಂದಾಗಿ ಆ ಋಣವು ಬಹುವಾಗಿ ವರ್ಧಿಸಿಬಿಟ್ಟಿದೆ. ಆ ಋಣಭಾರವು ನನ್ನ ಹೃದಯದಿಂದ ಬಿಟ್ಟುಹೋಗುವಂತಹುದಲ್ಲ. (ಅಪರಾಧಿಗಳಾದ ನಿಮ್ಮನ್ನು ಸಂಹರಿಸಿಯೇ ನಾನು ಆ ಭಕ್ತಾರ್ತಿವಿಮೋಚನಋಣದಿಂದ ಮುಕ್ತನಾಗಬೇಕಾಗಿದೆ.) ಅಜೇಯವಾದ, ತೇಜೋಮಯವಾದ ಗಾಂಡೀವಧನುಸ್ಸು ಯಾವನದಾಗಿರುವುದೋ ಮತ್ತು ಯಾವನ ಮಿತ್ರನೂ ಮತ್ತು ಸಹಾಯಕನೂ ಸ್ವತಃ ನಾನೇ ಆಗಿರುವೆನೋ–ಅಂತಹ ಸವ್ಯಸಾಚಿಯೊಡನೆ ನೀವು ದ್ವೇಷವನ್ನು ಕಟ್ಟಿಕೊಂಡಿರುವಿರಿ. ನನಗೆ ಎರಡನೆಯವನಾದ, ನನ್ನ ಮಿತ್ರನಾದ ಪಾರ್ಥನನ್ನು ಯುದ್ಧಮಾಡಲು ಬರಬೇಕೆಂದು ಪ್ರಾರ್ಥಿಸುವವನು ಕಾಲವಶನಾಗದಿರುವ ಸಾಧ್ಯತೆಯೇ ಇಲ್ಲ. ಯದ್ಯಪಿ ಯುದ್ಧವನ್ನು ಯಾಚಿಸುವವನು ಸಾಕ್ಷಾತ್ ಇಂದ್ರನೇ ಆಗಿದ್ದಿರಬಹುದು. ಇಂದ್ರನೇ ಆದರೂ ಕಾಲವಶನಾಗಿದ್ದರೆ ಅಥವಾ ಕಾಲನಿಂದ ಆಹೂತನಾಗಿದ್ದರೆ ಮಾತ್ರವೇ ನನ್ನ ಮಿತ್ರನಾದ ಮತ್ತು ನನ್ನ ಸಹಾಯವನ್ನು ಪಡೆದಿರುವ ಅರ್ಜುನನನ್ನು ಯುದ್ಧಕ್ಕೆ ಆಹ್ವಾನಿಸುವನೇ ಹೊರತು ಬದುಕಿರಬೇಕೆಂದಿರುವವನು ಖಂಡಿತವಾಗಿಯೂ ಇವನನ್ನು ಯುದ್ಧಕ್ಕೆ ಆಹ್ವಾನಿಸುವುದಿಲ್ಲ. ಯಾವನಾದರೂ ಈ ಭೂಮಿಯಲ್ಲಿ ಅರ್ಜುನನನ್ನು ಜಯಿಸುವವನಿದ್ದರೆ ಅಂತಹವನು ತನ್ನೆರಡು ತೋಳುಗಳಿಂದಲೇ ಈ ಭೂಮಿಯನ್ನೇ ಎತ್ತಿಹಿಡಿಯಬಲ್ಲನು. ಕ್ರುದ್ಧನಾಗಿ ಕ್ಷಣಮಾತ್ರದಲ್ಲಿ ಈ ಪ್ರಪಂಚದಲ್ಲಿರುವ ಸರ್ವಪ್ರಾಣಿಗಳನ್ನೂ ದಹಿಸಿಬಿಡಬಲ್ಲನು. ಸ್ವರ್ಗಾರೂಢರಾಗಿರುವ ದೇವತೆಗಳನ್ನೂ ಕ್ಷಣಮಾತ್ರದಲ್ಲಿ ಸ್ವರ್ಗದಿಂದ ಕೆಳಕ್ಕೆ ಕೆಡುಹಬಲ್ಲನು. ಆದರೆ ಅಂತಹ ಪರಾಕ್ರಮಿಯನ್ನು ನಾನಿದುವರೆಗೂ ಕಂಡಿಲ್ಲ. ದೇವಾಸುರ-ಮನುಷ್ಯರಲ್ಲಾಗಲೀ, ಯಕ್ಷ-ಗಂಧರ್ವೋರಗರಲ್ಲಾಗಲೀ– ಅರ್ಜುನನಿಗೆದುರಾಗಿ ನಿಂತು ಯುದ್ಧಮಾಡುವ ಸಾಮರ್ಥ್ಯವಿರುವವನನ್ನು ನಾನಿದುವರೆಗೂ ಕೇಳಿಯೂ ಇಲ್ಲ. ಇದಕ್ಕೆ ನಿದರ್ಶನವನ್ನು ನಾನು ಕೊಡಬೇಕಾದ ಅವಶ್ಯಕತೆಯೇ ಇರುವುದಿಲ್ಲ. ಇದು ಕೌರವರ ಸ್ವಾನುಭವದ ವಿಷಯವೇ ಆಗಿದೆ. ಅದನ್ನವರ ಸ್ಮರಣೆಗೆ ತರಲು ನಾನು ಇಚ್ಛಿಸುತ್ತೇನೆ. ವಿರಾಟನಗರದಲ್ಲಿ ಅರ್ಜುನನು ಏಕಾಕಿಯಾಗಿಯೇ ಅಪಾರವಾದ ಕೌರವಸೇನೆಯನ್ನೆದುರಿಸಿ

ಯುದ್ಧಮಾಡಿ ಕುರುವೀರರನ್ನು ಪರಾಜಯಗೊಳಿಸಿ ವಿಜಯಿಯಾಗಿ ಹಿಂದಿರುಗಿದನು. ಆ ವಿಷಯವು ಮಹದದ್ಭುತವಾದುದೆಂದು ಸರ್ವತ್ರ ವಿದಿತವಾಗಿದೆ. ಅರ್ಜುನನ ಪರಾಕ್ರಮವೆಷ್ಟೆಂದು ಹೇಳಲು ಇದೊಂದು ನಿದರ್ಶನವು ಸಾಕಲ್ಲವೇ? ಒಬ್ಬನೇ ಒಬ್ಬ ಪಾಂಡುಪುತ್ರನಿಂದ (ಅರ್ಜುನನಿಂದ) ವಿರಾಟನಗರದಲ್ಲಿ ಯಾವಾಗ ಕೌರವರ ಅಖಂಡಸೈನ್ಯವೂ ಭಗ್ನವಾಯಿತೋ, ದಿಕ್ಕು-ದಿಕ್ಕಿಗೂ ಪಲಾಯನಮಾಡಿತೋ–ಆಗಲೇ ಅರ್ಜುನನು ವಿಶ್ವದಲ್ಲಿಯೇ ಅಜೇಯನಾದ ಏಕೈಕ ವೀರನೆಂಬುದಕ್ಕೆ ನಿದರ್ಶನವು ಸಿಕ್ಕಿದಂತಾಗಿದೆ. ಅರ್ಜುನನ ಪರಾಕ್ರಮಕ್ಕೆ ಇದು ಪರ್ಯಾಪ್ತವಾದ ಪ್ರಮಾಣವಾಗಿದೆ.

**ಬಲಂ ವೀರ್ಯಂ ಚ ತೇಜಶ್ಚ ಶೀಘ್ರತಾ ಲಘುಹಸ್ತತಾ ।**
**ಅವಿಷಾದಶ್ಚ ಧೈರ್ಯಂ ಚ ಪಾರ್ಥಾನ್ನಾನ್ಯತ್ರ ವಿದ್ಯತೇ ॥೨೮॥**

ಬಲ, ವೀರ್ಯ, ತೇಜಸ್ಸು, ಶೀಘ್ರತ್ವ, ಕೈಚಳಕ, ವಿಷಾದ ಪಡದಿರುವಿಕೆ, ಧೈರ್ಯ–ಈ ಎಲ್ಲ ಸದ್ಗುಣಗಳೂ ಪಾರ್ಥನಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ಈ ಸದ್ಗುಣಗಳು ಪಾರ್ಥನಲ್ಲದೇ ಬೇರೆ ಯಾರಲ್ಲಿಯೂ ಇರಲು ಸಾಧ್ಯವಿಲ್ಲ."

ಆಕಾಶದಲ್ಲಿ ವರ್ಷಾಕಾಲದಲ್ಲಿ ಗುಡುಗಿನ ಮೂಲಕವಾಗಿ ಗರ್ಜಿಸುವ ಇಂದ್ರನಂತೆ–ಹೃಷೀಕೇಶನು ಮೇಘಗಂಭೀರಧ್ವನಿಯಿಂದ ಪಾರ್ಥನನ್ನು ಹರ್ಷಗೊಳಿಸುತ್ತಾ ಇಷ್ಟು ಮಾತುಗಳನ್ನು ಹೇಳಿದನು. ಮಹಾರಾಜ! ಕೇಶವನ ಮಾತುಗಳನ್ನು ಕೇಳಿ ಶ್ವೇತವಾಹನನಾದ ಕಿರೀಟಿಯೂ ರೋಮಾಂಚಕಾರಕವಾದ ಆ ಮಹಾವಾಕ್ಯಗಳನ್ನು ಅನುಮೋದಿಸಿದನು."

ಕ್ಷ೯ನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಕೌರವ-ಪಾಂಡವರ ಶಕ್ತಿಯನ್ನು ತುಲನಾತ್ಮಕವಾಗಿ ವಿಮರ್ಶಿಸಿದುದು

ಜನಮೇಜಯ! ಸಂಜಯನು ಹೇಳಿದ ಮಾತುಗಳನ್ನು ಕೇಳಿ ಪ್ರಜ್ಞಾ ಚಕ್ಷುವಾದ, ಜನೇಶ್ವರನಾದ ಧೃತರಾಷ್ಟ್ರನು ಶ್ರೀಕೃಷ್ಣನ ಮಾತಿನಲ್ಲಿ ಗುಣ-ದೋಷಗಳನ್ನು ಎಣಿಕೆಮಾಡಲುಪಕ್ರಮಿಸಿದನು. ಪುತ್ರಜಯಾಪೇಕ್ಷಿ

ಯಾದ, ಬುದ್ಧಿವಂತನಾದ, ವಿಚಕ್ಷಣನಾದ, ಮನುಜಾಧಿಪನಾದ ಧೃತರಾಷ್ಟ್ರನು ತನ್ನ ಬುದ್ಧಿಗೆ ಎಟುಕುವಷ್ಟು ದೂರ ಪಾಂಡವ-ಕೌರವರಲ್ಲಿರುವ ಬಲಾಬಲಗಳನ್ನೂ–ಶಕ್ತಿಯನ್ನೂ ವಿವೇಕವೆಂಬ ತಕ್ಕಡಿಯಲ್ಲಿಟ್ಟು ತುಲನೆ ಮಾಡಲುಪಕ್ರಮಿಸಿದನು. ಪಾಂಡವರನ್ನು ದೇವಮಾನವರ ಶಕ್ತಿಯಿಂದಲೂ-ತೇಜಸ್ಸಿನಿಂದಲೂ ತುಲನೆಮಾಡಿದನು. ಕೌರವರನ್ನು ಪಾಂಡವರ ದೃಷ್ಟಿಯಿಂದ ಅತ್ಯಲ್ಪಶಕ್ತಿಯುಳ್ಳವರೆಂದು ತುಲನೆಮಾಡಿದನು. ಪಾಂಡವರು ಸ್ವಶಕ್ತಿಯ ಜೊತೆಗೆ ದೈವಸಹಾಯವನ್ನೂ ಪಡೆದಿರುವರೆಂಬುದನ್ನೂ–ಕೌರವರಿಗೆ ದೈವಸಹಾಯವಿಲ್ಲದೇ ಕೇವಲ ಪೌರುಷಮಾತ್ರವಿದ್ದು ಅದಾದರೂ ಪಾಂಡವರ ಪೌರುಷಕ್ಕಿಂತಲೂ ಕಡಿಮೆಯಾಗಿದೆಯೆಂಬುದನ್ನೂ ಬುದ್ಧಿ ಪೂರ್ವಕವಾಗಿ ನಿಶ್ಚಯಿಸಿ ದುರ್ಯೋಧನನನ್ನು ಕುರಿತು ಹೇಳಿದನು.:

"ದುರ್ಯೋಧನ! ನನ್ನ ಒಂದು ಚಿಂತೆಯು ಯಾವಾಗಲೂ ನನ್ನಿಂದ ದೂರವಾಗುವುದಿಲ್ಲ. ನನ್ನ ಪಕ್ಷವು ಪಾಂಡವರ ಪಕ್ಷಕ್ಕಿಂತಲೂ ದುರ್ಬಲ ವಾಗಿದೆಯೆಂಬುದೇ ಈ ಚಿಂತೆ. ಇದನ್ನು ನಾನು ಅನುಮಾನದಿಂದ ಹೇಳುತ್ತಿಲ್ಲ. ಪ್ರತ್ಯಕ್ಷಪ್ರಮಾಣದಿಂದಲೇ ಹೇಳುತ್ತಿದ್ದೇನೆ. ಇದು ಸತ್ಯವೂ ಆಗಿದೆಯೆಂದು ನಾನು ಭಾವಿಸುತ್ತೇನೆ.

**ಆತ್ಮಜೇಷು ಪರಂ ಸ್ನೇಹಂ ಸರ್ವಭೂತಾನಿ ಕುರ್ವತೇ ।**
**ಪ್ರಿಯಾಣಿ ಚೈಷಾಂ ಕುರ್ವನ್ತಿ ಯಥಾಶಕ್ತಿ ಹಿತಾನಿ ಚ ॥೬॥**

ಪ್ರಪಂಚದಲ್ಲಿರುವ ಮಾನವರೂ, ಸಕಲಪ್ರಾಣಿಗಳೂ ತಮ್ಮ-ತಮ್ಮ ಮಕ್ಕಳ ವಿಷಯದಲ್ಲಿ ಅತ್ಯಂತಪ್ರೀತಿಯುಳ್ಳವರೇ ಆಗಿರುತ್ತಾರೆ. ಯಥಾಶಕ್ತಿ ಅವರಿಗೆ ಪ್ರಿಯವನ್ನೂ, ಹಿತವನ್ನೂ ಮಾಡುತ್ತಾರೆ.

**ಏವಮೇವೋಪಕರ್ತ್ರೄಣಾಂ ಪ್ರಾಯಶೋ ಲಕ್ಷಯಾಮಹೇ ।**
**ಇಚ್ಛನ್ತಿ ಬಹುಲಂ ಸನ್ತಃ ಪ್ರತಿಕರ್ತುಂ ಮಹತ್ಪ್ರಿಯಮ್ ॥೭॥**

ಇದೇ ರೀತಿಯಲ್ಲಿ ಸತ್ಪುರುಷರಾದವರು–ತಮಗೆ ಸ್ವಲ್ಪ ಉಪಕಾರ ಮಾಡಿದವರಿಗೂ ಪ್ರತ್ಯುಪಕಾರವನ್ನು ಮಾಡಬೇಕೆಂದೂ, ಪ್ರಿಯವನ್ನು ಮಾಡಬೇಕೆಂದೂ ಬಹಳವಾಗಿ ಇಚ್ಛಿಸುತ್ತಿರುತ್ತಾರೆ. ಇದು ಸ್ವಾಭಾವಿಕ. ಮಗು! ಇದರಂತೆಯೇ ದೇವಮುಖನಾದ ಅಗ್ನಿದೇವನೂ ಕೂಡ ಮುಂದೆ ನಡೆಯಲಿರುವ ಕೌರವ-ಪಾಂಡವರ ಭಯಂಕರಸಂಗ್ರಾಮದಲ್ಲಿ–ಅರ್ಜುನನು

ಖಾಂಡವದಾಹಕಾಲದಲ್ಲಿ ತನಗೆ ಮಾಡಿದ ಉಪಕಾರವನ್ನು ಸ್ಮರಿಸಿ– ಅರ್ಜುನನಿಗೆ ಪ್ರತ್ಯುಪಕಾರಮಾಡಲು ಬರುತ್ತಾನೆ. ರಕ್ಷಣೆಯನ್ನಪೇಕ್ಷಿಸಿ ಆಹ್ವಾನಿತರಾದರೆ ಧರ್ಮಾದಿದೇವತೆಗಳೂ ಪುತ್ರವಾತ್ಸಲ್ಯದಿಂದ ಪಾಂಡವರ ನೆರವಿಗೆ ಬಂದೇ ಬರುತ್ತಾರೆ. ಭೀಷ್ಮ-ದ್ರೋಣ-ಕೃಪಾದಿಗಳ ಭಯದಿಂದ ಪಾಂಡವರನ್ನು ಸಂರಕ್ಷಿಸಲು ದೇವತೆಗಳು ಭೀಷ್ಮನೇ ಮೊದಲಾದವರ ಮೇಲೆ ವಜ್ರಾಯುಧಕ್ಕೆ ಸಮಾನವಾದ ಕೋಪವನ್ನು ತಾಳುತ್ತಾರೆಂದು ನಾನು ಭಾವಿಸುತ್ತೇನೆ. (ವಿಜಯಪಡೆಯಲು ಪೌರುಷದ ಜೊತೆಗೆ ದೈವಬಲವೂ ಸೇರಬೇಕು. ಕಡೆಗೆ ದೈವಬಲವಿಲ್ಲದಿದ್ದರೂ ಚಿಂತೆಯಿಲ್ಲ. ದೈವದ ಕೋಪಕ್ಕಾದರೂ ಕಾರಣರಾಗಕೂಡದು. ಆದರೆ ಇಂದು ಕೌರವರು ದೈವದ ಕೋಪಕ್ಕೂ ಕಾರಣರಾಗಿದ್ದಾರೆ. ಆ ಕೋಪವಾದರೋ ವಜ್ರಾಯುಧಕ್ಕೆ ಸಮಾನವಾದುದು.)

[ಪಾಂಡವರು ದೇವತೆಗಳಿಗೆ ಉಪಕಾರಮಾಡಿರುವುದರಿಂದಲೂ ಮತ್ತು ದೇವತೆಗಳ ಅಂಶಸಂಭೂತರಾಗಿರುವುದರಿಂದಲೂ ದೇವತೆಗಳು ಪಾಂಡವರ ಪಕ್ಷವನ್ನು ಸೇರುತ್ತಾರೆ.]ನರವ್ಯಾಘ್ರರಾದ, ದೇವತೆಗಳಿಂದೊಡಗೂಡಿದ (ದೈವ ಸಹಾಯವನ್ನು ಪಡೆದ), ವೀರ್ಯವಂತರಾದ, ಅಸ್ತ್ರಪಾರಂಗತರಾದ ಪಾಂಡವರನ್ನು ವೀಕ್ಷಿಸಲು ಮನುಷ್ಯಮಾತ್ರದವನಿಂದ ಖಂಡಿತವಾಗಿಯೂ ಶಕ್ಯವಿಲ್ಲ.

ದುರ್ಯೋಧನ! ಅರ್ಜುನನ ಗಾಂಡೀವಧನುಸ್ಸು ದಿವ್ಯವಾದುದು.; ದುರಾಸದವಾದುದು.; ಉತ್ತಮೋತ್ತಮವಾದುದು.; ಅವನಲ್ಲಿರುವ ಬತ್ತಳಿಕೆ ಗಳು ವರುಣನಿಂದ ಕೊಡಲ್ಪಟ್ಟಿವೆ. ದಿವ್ಯವಾದ ಆ ಬತ್ತಳಿಕೆಗಳಲ್ಲಿ ಸರ್ವದಾ ಬಾಣಗಳು ತುಂಬಿಯೇ ಇರುತ್ತವೆ. ತೆಗೆದಷ್ಟೂ ಅಕ್ಷಯವಾಗುತ್ತಲೇ ಇರು ತ್ತವೆ. ಅದ್ಭುತವಾದ ಬತ್ತಳಿಕೆಗಳವು. ಅರ್ಜುನನು ಕಪಿಧ್ವಜನು. ಅವನ ಧ್ವಜದಲ್ಲಿ ಸಾಕ್ಷಾತ್ ಆಂಜನೇಯನೇ ಉಪಸ್ಥಿತನಾಗಿದ್ದಾನೆ. ಆ ದಿವ್ಯಧ್ವಜದ ರಚನೆಯಾದರೋ ಪರಮಾದ್ಭುತವಾದುದು. ಯೋಜನ ವಿಸ್ತೀರ್ಣವುಳ್ಳ ದ್ದಾಗಿದ್ದರೂ–ತಡೆಯೇ ಇಲ್ಲದೇ ಹೊಗೆಯು ಆಕಾಶಕ್ಕೆ ಹೋಗುವ ರೀತಿಯಲ್ಲಿ–ನಿರಾತಂಕವಾಗಿ ಚಲಿಸುತ್ತಿರುತ್ತದೆ. ರಥದ ವಿಷಯವಾಗಿ ಹೇಳುವುದಾದರೆ ಸಮುದ್ರಾಂತವಾಗಿರುವ ಈ ಪೃಥ್ವಿಯಲ್ಲಿ ಅರ್ಜುನನ ರಥಕ್ಕೆ ಸಮಾನವಾದ ರಥವು ಬೇರೊಂದಿಲ್ಲ. ಆ ರಥವು ಹೊರಟಿತೆಂದರೆ

ಮಹಾಮೇಘದ ಶಬ್ದಕ್ಕೆ ಸಮಾನವಾದ ನಿರ್ಘೋಷವು ಆ ಪ್ರದೇಶದಲ್ಲಿರುವ ಜನರಿಗೆ ಕೇಳಿಸುತ್ತದೆ. ಯುದ್ಧದ ಸಮಯದಲ್ಲಿ ಸಿಡಿಲಿಗೆ ಸಮಾನವಾಗಿ ಶಬ್ದಮಾಡುತ್ತಾ ಶತ್ರುಗಳ ಹೃದಯದಲ್ಲಿ ಭಯವನ್ನುಂಟು ಮಾಡುತ್ತದೆ. ಅಂತಹ ರಥದಲ್ಲಿ ಕುಳಿತು ಯುದ್ಧಮಾಡುವ ಅರ್ಜುನನ ವಿಷಯವಾಗಿ ಎಷ್ಟು ಹೇಳಿದರೂ ಅಲ್ಪವೆಂದೇ ಭಾವಿಸುತ್ತೇನೆ. ಪ್ರಪಂಚವೇ ಅವನನ್ನು ಅತಿಮಾನುಷಪರಾಕ್ರಮನೆಂದು ಸಾರುತ್ತಿದೆ. ಯುದ್ಧದಲ್ಲಿ ದೇವತೆಗಳನ್ನೂ ಜಯಿಸುವ ಸಾಮರ್ಥ್ಯವಿರುವವನೆಂದು ಎಲ್ಲ ರಾಜರ ಅಭಿಮತವೂ ಆಗಿದೆ. ಆ ಮಹಾನುಭಾವನು ಐದು ನೂರು ಬಾಣಗಳನ್ನು ಏಕಕಾಲದಲ್ಲಿ ಬತ್ತಳಿಕೆ ಯಿಂದ ತೆಗೆದು ಧನುಸ್ಸಿಗೆ ಯೋಜಿಸಿ ಶಿಂಜಿನಿಯನ್ನು ಸೆಳೆದು ಪ್ರಹರಿಸಿ ಬಹು ದೂರದಲ್ಲಿರುವ ಶತ್ರುವನ್ನಾದರೂ ಸಂಹರಿಸುತ್ತಾನೆ. ಆದರೆ ಅವನು ಯಾವಾಗ ಬಾಣ ತೆಗೆಯುತ್ತಾನೆ, ಯಾವಾಗ ಧನುಸ್ಸಿನಲ್ಲಿ ಯೋಜಿಸುತ್ತಾನೆ ಮತ್ತು ಯಾವಾಗ ಶಿಂಜಿನಿಯನ್ನು ಸೆಳೆದು ಬಾಣಬಿಡುತ್ತಾನೆ– ಎಂಬುದಾವುದೂ ದೃಷ್ಟಿಗೆ ಗೋಚರವಾಗುವುದಿಲ್ಲ. ಎಲ್ಲವೂ ಕ್ಷಣಮಾತ್ರದಲ್ಲಿ ನಡೆದುಹೋಗುತ್ತದೆ. 'ಸೊಯ್' ಎಂಬ ಶಬ್ದವು ಮಾತ್ರ ಅನವರತವಾಗಿ ಕೇಳುತ್ತಿರುತ್ತದೆ. ಭೀಷ್ಮ, ದ್ರೋಣರು, ಕೃಪರು, ಅಶ್ವತ್ಥಾಮಾ, ಮದ್ರರಾಜನಾದ ಶಲ್ಯ ಮತ್ತು ಯಾವುದೊಂದು ಪಕ್ಷಕ್ಕೂ ಸೇರದ ಮಧ್ಯವರ್ತಿಗಳಾದ ಇತರ ರಾಜರು–ಇವರೆಲ್ಲರೂ ಅರ್ಜುನನ ಪರಾಕ್ರಮದ ವಿಷಯದಲ್ಲಿ ಈ ವಿಧವಾದ ಅಭಿಪ್ರಾಯವುಳ್ಳವರಾಗಿದ್ದಾರೆ.:

**ಯುದ್ಧಾಯಾವಸ್ಥಿತಂ ಪಾರ್ಥಂ ಪಾರ್ಥಿವೈರತಿಮಾನುಷೈಃ ।**
**ಅಶಕ್ಯಂ ನರಶಾರ್ದೂಲಂ ಪರಾಜೇತುಮರಿಂದಮಮ್ ॥೧೮॥**

'ನರಶಾರ್ದೂಲನಾದ, ಯುದ್ಧಸನ್ನದ್ಧನಾದ ಪಾರ್ಥನನ್ನು ಪರಾ ಜಯಗೊಳಿಸಲು ಅತಿಮಾನುಷಪರಾಕ್ರಮವುಳ್ಳ ರಾಜರಿಂದಲೂ ಶಕ್ಯವಾಗು ವುದಿಲ್ಲ.'

ಅರ್ಜುನನು ಒಂದು ಬಾಣವನ್ನು ಧನುಸ್ಸಿನಲ್ಲಿ ಯೋಜಿಸಿ ಎಷ್ಟು ವೇಗ ದಿಂದ ಬಿಡಬಲ್ಲನೋ–ಅಷ್ಟೇ ವೇಗದಿಂದ ಐದು ನೂರು ಬಾಣಗಳನ್ನೂ ಏಕ ಕಾಲದಲ್ಲಿ ಬಿಡಬಲ್ಲನು. ಬಾಹುಬಲದಲ್ಲಿ ಅರ್ಜುನನು ಕಾರ್ತವೀರ್ಯಾರ್ಜುನ ನಿಗೆ ಸಮಾನನು. ಅಂತಹ ಮಹಾಧನುಷ್ಮಂತನಾದ, ಮಹೇಂದ್ರೋಪೇಂದ್ರ

ರಿಗೆ (ಇಂದ್ರ ಮತ್ತು ವಿಷ್ಣುಗಳಿಗೆ) ಸದೃಶನಾದ ಅರ್ಜುನನನ್ನು ಮುಂಬರುವ ಮಹಾಯುದ್ಧದಲ್ಲಿ ಸರ್ವತ್ರ ಸಂಹಾರಕಾರ್ಯವನ್ನು ಮಾಡುತ್ತಿರುವವ ನಂತೆಯೇ ನಾನು ಕಾಣುತ್ತಿದ್ದೇನೆ.

ಭಾರತ! ಹಗಲು-ರಾತ್ರಿಗಳೆನ್ನದೇ ಇದೇ ವಿಷಯವನ್ನೇ ಸರ್ವಕಾಲ ದಲ್ಲಿಯೂ ಚಿಂತಿಸುತ್ತಿದ್ದು ಅನೇಕದಿನಗಳಿಂದ ನಿದ್ರೆಯಿಂದಲೂ ವಿಹೀನನಾಗಿ ದ್ದೇನೆ. ಕುರುವಂಶೀಯರಲ್ಲಿ ಶಾಂತಿಯನ್ನು ಹೇಗೆ ಸ್ಥಾಪಿಸಬೇಕೆಂಬ ಅನ ವರತವಾದ ಈ ಯೋಚನೆಯಲ್ಲಿ ನನಗೆ ಸುಖವೂ ಇಲ್ಲವಾಗಿದೆ; ನಿದ್ರೆಯೂ ಇಲ್ಲವಾಗಿದೆ.

ದುರ್ಯೋಧನ! ಕೌರವರಿಗೆ ಅಭಿವೃದ್ಧಿಯ ಕಾಲವು ಮುಗಿದು ಹೋಯಿತು. ಕ್ಷಯದ ಕಾಲವು ಪ್ರಾರಂಭವಾಗಿದೆ. ಕೌರವ-ಪಾಂಡವರಲ್ಲಿ ಯುದ್ಧವನ್ನು ತಪ್ಪಿಸಲು ಸಂಧಿಯ ಹೊರತಾಗಿ ಬೇರೊಂದು ಮಾರ್ಗವೇ ಇಲ್ಲ ವಾಗಿದೆ. ಪಾಂಡವರೊಡನೆ ದ್ವೇಷವನ್ನು ಮುಂದುವರಿಸಿಕೊಂಡು ಹೋಗು ವುದು ಅಥವಾ ಯುದ್ಧಮಾಡುವುದು ನನಗೆ ಇಷ್ಟವಿಲ್ಲ. ಅವರೊಡನೆ ಸಂಧಿ ಮಾಡಿಕೊಂಡು ಸ್ನೇಹದಿಂದಿರುವುದೇ ನನಗೆ ಸೂಕ್ತವಾಗಿ ಕಾಣುತ್ತದೆ. ನನ್ನ ಈ ನಿರ್ಧಾರಕ್ಕೆ ಮುಖ್ಯಕಾರಣ–ಪಾಂಡವರು ಕೌರವರಿಗಿಂತಲೂ ಹೆಚ್ಚು ಪರಾಕ್ರಮವುಳ್ಳವರೆಂಬುದೇ ಆಗಿದೆ.

**ಕುರುಭ್ಯೋ ಹಿ ಸದಾ ಮನ್ಯೇ ಪಾಣ್ಡವಾಞ್ಛಕ್ತಿಮತ್ತರಾನ್ ॥**

ಕೌರವರಿಗಿಂತಲೂ ಪಾಂಡವರೇ ಹೆಚ್ಚು ಶಕ್ತಿಯುಳ್ಳವರು–ಎಂದು ನಾನು ಭಾವಿಸುತ್ತೇನೆ."

ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ದುರ್ಯೋಧನನ ಆತ್ಮಪ್ರಶಂಸೆ

ಜನಮೇಜಯ! ತಂದೆಯಾದ ಧೃತರಾಷ್ಟ್ರನು ಹೇಳಿದ ಮಾತುಗಳನ್ನು ಕೇಳಿ ಅತ್ಯಂತಾಸಹಿಷ್ಣುವಾದ ದುರ್ಯೋಧನನು ಮಹತ್ತರವಾದ ಕೋಪವನ್ನು ಹೃದಯದಲ್ಲಿ ತುಂಬಿಕೊಂಡು ಪುನಃ ಈ ಮಾತುಗಳನ್ನು ಹೇಳಿದನು :

"ರಾಜಸತ್ತಮ! 'ಕುಂತಿಯ ಮಕ್ಕಳು ಜಯಿಸಲಶಕ್ಯರು. ಅವರಿಗೆ ದೇವತೆಗಳ ಸಹಾಯವಿದೆ'–ಎಂಬುದಾಗಿ ನೀನು ಭಾವಿಸಿರುವೆ. ಈ ಕಾರಣ ದಿಂದಲೇ ನೀನು ಭೀತನಾಗಿಯೂ ಇರುವೆ. ಈ ಭಯವು ನಿನ್ನನ್ನು ಬಿಟ್ಟು ಹೊರಟುಹೋಗಲಿ. ಈ ವಿಧವಾದ ಭಯಕ್ಕೆ ಯಾವ ಕಾರಣವೂ ಇಲ್ಲ. ತಂದೆಯೇ!

**ಅಕಾಮದ್ವೇಷಸಂಯೋಗಲೋಭದ್ರೋಹಾಚ್ಚ ಭಾರತ ।**
**ಉಪೇಕ್ಷಯಾ ಚ ಭಾವಾನಾಂ ದೇವಾ ದೇವತ್ವಮಾಪ್ನುವನ್ ॥೩॥**

**ಇತಿ ದ್ವೈಪಾಯನೋ ವ್ಯಾಸೋ ನಾರದಶ್ಚ ಮಹಾತಪಾಃ ।**
**ಜಾಮದಗ್ನ್ಯಶ್ಚ ರಾಮೋ ನಃ ಕಥಾಮಕಥಯತ್ಪುರಾ ॥೪॥**

ಕಾಮ (ರಾಗ), ದ್ವೇಷ, ಸಂಯೋಗ (ಮೋಹ), ಲೋಭ ಮತ್ತು ದ್ರೋಹ (ಕ್ರೋಧ)–ಈ ದೋಷಗಳಿಂದ ವರ್ಜಿತರಾಗಿರುವುದರಿಂದಲೂ–ದೂಷಿತವಾದ ಭಾವನೆಗಳಲ್ಲಿ ಅಥವಾ ಪ್ರಾಪಂಚಿಕವಾದ ವ್ಯವಹಾರಗಳಲ್ಲಿ ಉಪೇಕ್ಷೆಯಿರುವ ಕಾರಣದಿಂದಲೂ - ದೇವತೆಗಳು ದೇವತ್ವವನ್ನು ಪಡೆದಿರುತ್ತಾರೆ. ಈ ವಿಷಯವನ್ನೂ ಮತ್ತು ಇದಕ್ಕೆ ಸಂಬಂಧಿಸಿದ ಕಥೆಗಳನ್ನೂ ನಾನು ಕೃಷ್ಣದ್ವೈಪಾಯನರಿಂದಲೂ, ಮಹಾತಪಸ್ವಿಗಳಾದ ನಾರದರಿಂದಲೂ, ಜಮದಗ್ನಿಯ ಮಗನಾದ ಭಗವಂತನಾದ ಪರಶುರಾಮನಿಂದಲೂ ಕೇಳಿರುತ್ತೇನೆ.

**ನೈವ ಮಾನುಷವದ್ದೇವಾಃ ಪ್ರವರ್ತನ್ತೇ ಕದಾಚನ ।**
**ಕಾಮಾತ್ಕ್ರೋಧಾತ್ತಥಾ ಲೋಭಾದ್ದ್ವೇಷಾಚ್ಚ ಭರತರ್ಷಭ ॥೫॥**

ಭರತಶ್ರೇಷ್ಠನೇ! ಕಾಮ-ಕ್ರೋಧಾದಿಗಳಿಲ್ಲದಿರುವುದರಿಂದಲೇ ದೇವತೆಗಳಿಗೆ ದೇವತ್ವವು ಬಂದಿದೆಯೆಂದಮೇಲೆ–ಅಂತಹ ದೇವತೆಗಳು ಕೇವಲ ಮಾನವರಂತೆ ಕಾಮಾಭಿಭೂತರಾಗಿ, ಕ್ರೋಧಾಭಿಭೂತರಾಗಿ, ಲೋಭ-ದ್ವೇಷಾದಿಗಳಿಂದ ಕೂಡಿದವರಾಗಿರಲು ಹೇಗೆ ತಾನೇ ಸಾಧ್ಯವಾಗುವುದು? ಆದುದರಿಂದ ದೇವತೆಗಳೆಂದಿಗೂ ಮಾನವರಂತೆ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳಿಗೆ ಅಧೀನರಾಗಿ ವರ್ತಿಸುವುದಿಲ್ಲ. ಒಂದು ವೇಳೆ ನೀನು ಭಾವಿಸಿರುವಂತೆ ಪಾಂಡವರ ಜನ್ಮಕ್ಕೆ ಕಾರಣರಾದ ಮತ್ತು ಪಾಂಡವರಿಂದ ಸಹಾಯಪಡೆದ ಅಗ್ನಿ, ವಾಯು, ಯಮಧರ್ಮ, ಇಂದ್ರ, ಅಶ್ವಿನೀದೇವತೆ

ಗಳು–ಕಾಮಸಂಯೋಗದಿಂದ ಅಥವಾ ಪುತ್ರವಾತ್ಸಲ್ಯದಿಂದ ಮತ್ತು ಪ್ರತ್ಯುಪಕಾರಬುದ್ಧಿಯಿಂದ ವರ್ತಿಸಿದ್ದರೆ ಪಾಂಡವರಿಗೆ ಯಾವ ವಿಧವಾದ ದುಃಖವೂ ಇರಬಾರದಾಗಿತ್ತು. ಅವರು ವನವಾಸದ ಕಷ್ಟಗಳನ್ನನುಭವಿಸಲು ಅವಕಾಶವೇ ಇರುತ್ತಿರಲಿಲ್ಲ. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಅವರು ಅರಣ್ಯವಾಸವನ್ನು ಅನುಭವಿಸಿಯೇ ತೀರಬೇಕಾಯಿತು. ಪಡಬಾರದ ಕಷ್ಟ ಗಳನ್ನು ಅನುಭವಿಸಿದರು. (ಈ ಕಾರಣದಿಂದಾಗಿ ದೇವತೆಗಳು ಯಾವ ಕಾರಣದಿಂದಲೂ ಪ್ರಾಪಂಚಿಕವ್ಯವಹಾರದಲ್ಲಿ ಕೈಹಾಕತಕ್ಕವರಲ್ಲ. ಉಪೇಕ್ಷೆ ಯಿಂದಿರುತ್ತಾರೆ. ಒಂದು ವೇಳೆ ಪ್ರಾಪಂಚಿಕವ್ಯವಹಾರಗಳಲ್ಲಿ ಪ್ರವೇಶಿಸಿ ಅವರೂ ಪಕ್ಷ-ಪ್ರತಿಪಕ್ಷಗಳಲ್ಲಿ ಸೇರಿ ಕ್ರೋಧಾಭಿಭೂತರಾಗುವುದಾದರೆ ಅವರಿಗೆ ದೇವತ್ವವೇ ಇಲ್ಲವಾಗುತ್ತದೆ.)

ತಂದೆಯೇ! ಈ ಕಾರಣದಿಂದ ನೀನು ಭಾವಿಸಿರುವಂತೆ ಯಾವ ದೇವತೆಯೂ ಪಾಂಡವರ ಪಕ್ಷಕ್ಕೆ ಬಂದು ಸೇರಿಕೊಳ್ಳುವುದಿಲ್ಲ. ಇದಕ್ಕಾಗಿ ನೀನು ಚಿಂತಿಸುವ ಕಾರಣವೂ ಇಲ್ಲ.

ದೇವತೆಗಳು ಯಾವಾಗಲೂ ಶಮ-ದಮಾದಿಗಳಲ್ಲಿಯೇ ಅಪೇಕ್ಷೆಯುಳ್ಳವ ರಾಗಿರತಕ್ಕವರು. ಆಸುರೀಭಾವಗಳಾದ ಕಾಮ-ಕ್ರೋಧಾದಿಗಳಲ್ಲಿ ಅವರಿಗೆ ಆಸಕ್ತಿಯಿರುವುದಿಲ್ಲ. ಒಂದು ವೇಳೆ ಅವರ ಮನಸ್ಸಿನಲ್ಲಿ ಅನುರಾಗವು ಹುಟ್ಟಿ ಅದರ ಕಾರಣದಿಂದ ಲೋಭ-ದ್ವೇಷಗಳೇನಾದರೂ ಕಂಡಿದ್ದೇ ಆದರೆ–ಅವರಲ್ಲಿ ದೇವತ್ವದ ಅಭಾವವೇ ಉಂಟಾಗುತ್ತದೆ. ಕಾಮ-ಕ್ರೋಧಾದಿಗಳಿಂದ ಅಭಿ ಭೂತರಾದವರು ದೇವತೆಗಳಾಗಿ ಉಳಿಯುವುದಿಲ್ಲ. ದೇವತ್ವವನ್ನು ಕಳೆದು ಕೊಂಡನಂತರ ನಮ್ಮನ್ನು ವಿಧ್ವಂಸನಗೊಳಿಸುವಂತಹ ಪರಾಕ್ರಮವೂ ಅವರಲ್ಲಿ ಉಳಿಯುವುದಿಲ್ಲ. ಆದುದರಿಂದ ಒಂದು ವೇಳೆ ದೇವತೆಗಳು ಪಾಂಡವರ ಪಕ್ಷವನ್ನು ವಹಿಸಿ ನಮ್ಮ ಮೇಲೆ ಯುದ್ಧಕ್ಕೆ ಬಂದರೂ ನಾವು ಭಯಪಡ ಬೇಕಾಗಿಲ್ಲ. ದೈವವನ್ನು ನಿಯಂತ್ರಿಸಲು ನನಗೆ ಸಾಧ್ಯವಿಲ್ಲವೆಂದೂ ಭಾವಿಸ ಬೇಡ. ತಾತ! ಒಂದು ವೇಳೆ ಪಾಂಡವರಿಗೆ ಪ್ರತ್ಯುಪಕಾರಮಾಡಬೇಕೆಂಬ ಭಾವನೆಯಿಂದ ಅಗ್ನಿಯು ಎಲ್ಲೆಡೆಗಳಲ್ಲೂ ಪ್ರಸರಿಸಿ ಸಕಲಲೋಕಗಳನ್ನೂ ಭಸ್ಮಮಾಡಲು ಇಚ್ಛಿಸಿದನಾದರೆ ನನ್ನಿಂದ ಅಭಿಮಂತ್ರಿತನಾದ (ಪೂಜಿತ ನಾದ) ಅಗ್ನಿದೇವನು ಒಡನೆಯೇ ಪ್ರಶಾಂತನಾಗುತ್ತಾನೆ. ನಾನು ಅಗ್ನಿ

ಸ್ತಂಭನವಿದ್ಯೆಯನ್ನು ಬಲ್ಲೆನು. ನೀನು ಸಂಶಯಪಡಬೇಕಾಗಿಲ್ಲ. ಒಂದು ಸಮಯ ದೇವತೆಗಳು ಪರಮೋತ್ಕೃಷ್ಟವಾದ ತೇಜಸ್ಸನ್ನು ಹೊಂದಿರುವುದಾದರೆ ನಾನೂ ಅವರಿಗೆ ಸಮಾನವಾದ ಅಥವಾ ಅವರಿಗಿಂತಲೂ ಹೆಚ್ಚಿನ ತೇಜಸ್ಸನ್ನು ಪಡೆದಿರುತ್ತೇನೆ. ಸೀಳಿಹೋಗುತ್ತಿರುವ ಭೂಮಿಯನ್ನೂ, ಕಳಚಿಬೀಳುತ್ತಿರುವ ಪರ್ವತಶಿಖರವನ್ನೂ ನನ್ನ ಮಂತ್ರಶಕ್ತಿಯಿಂದ ಸರ್ವರ ಸಮಕ್ಷದಲ್ಲಿಯೇ ಯಥಾಪೂರ್ವಸ್ಥಿತಿಗೆ ತರಬಲ್ಲೆನು. (ಸೀಳಿಹೋಗುತ್ತಿರುವ ಭೂಮಿಯನ್ನು ಸೀಳದಂತೆಯೂ–ಕಳಚಿಬೀಳುತ್ತಿರುವ ಪರ್ವತದ ಶಿಖರವನ್ನು ಪುನಃ ಪರ್ವತದೊಡನೆ ಸೇರಿಕೊಳ್ಳುವಂತೆಯೂ ಮಾಡಬಲ್ಲೆನು.) ಪ್ರಾಣಿಗಳ ಮೇಲಿನ ಕರುಣೆಯಿಂದಾಗಿ ನಾನು ಮಾಡುತ್ತಿರುವ ಕೆಲವು ಅತಿಮಾನುಷಕೃತ್ಯಗಳು ಸರ್ವವಿದಿತವಾಗಿವೆ. ಈ ವಿಶ್ವದಲ್ಲಿರುವ ಚರಾಚರಪ್ರಾಣಿಗಳ ಮತ್ತು ಸ್ಥಾವರ- ಜಂಗಮಗಳ ವಿನಾಶಕ್ಕಾಗಿ ಆಗಿಂದಾಗ್ಗೆ ಸಂಭವಿಸುವ, ಬಹುಭಯಂಕರವಾದ, ಮಹಾಶಬ್ದದಿಂದ ಕೂಡಿದ ಕಲ್ಲುಮಳೆಯನ್ನೂ, ಚಂಡಮಾರುತವನ್ನೂ, ಪ್ರಾಣಿಗಳ ಮೇಲಿನ ಅನುಕಂಪದಿಂದ ಪ್ರಜೆಗಳ ಸಮಕ್ಷದಲ್ಲಿಯೇ ಉಪಶಮನಗೊಳಿಸಿದ್ದೇನೆ. ನಾನು ಜಲಸ್ತಂಭನಮಾಡುವ ಶಕ್ತಿಯನ್ನೂ ಪಡೆದಿರುತ್ತೇನೆ. ಜಲಸ್ತಂಭನಮಾಡಿ ನನ್ನ ರಥ-ಗಜಾಶ್ವ-ಪದಾತಿಸೈನ್ಯಗಳು ನೀರಿನ ಮೇಲೆ ಹೋಗುವಂತೆ ಮಾಡಬಲ್ಲೆನು. ತಂದೆಯೇ! ದೇವಾಸುರಭಾವಗಳೆರಡನ್ನೂ ಪ್ರಕಟಿಸುವ ಸಾಮರ್ಥ್ಯವಿರುವವನು ಈ ವಿಶ್ವದಲ್ಲಿ ನಾನೊಬ್ಬನೇ ಆಗಿರುತ್ತೇನೆ. ಯಾವುದಾದರೂ ಕಾರ್ಯನಿಮಿತ್ತವಾಗಿ ಅಕ್ಷೌಹಿಣೀಸೈನ್ಯದೊಡನೆ ನಾನು ಯಾವುದಾದರೂ ದೇಶಕ್ಕೆ ಹೋಗುತ್ತಿರುವಾಗ ನಾನು ಎಲ್ಲಿಗೆ ಹೋಗಲಿಚ್ಛಿಸಿದರೂ ನನ್ನ ಕುದುರೆಗಳು ಅಪ್ರತಿಹತವಾಗಿ ಹೋಗುತ್ತಿದ್ದು ನಾನಿಚ್ಛಿಪಟ್ಟೆಡೆಗೆ ಕೊಂಡೊಯ್ಯುತ್ತವೆ. ನನ್ನ ರಾಜ್ಯದಲ್ಲಿ ಭಯೋತ್ಪಾದಕವಾದ ಸರ್ಪವೇ ಮೊದಲಾದ ದುಷ್ಟಜಂತುಗಳಾವುವೂ ಇರುವುದಿಲ್ಲ. ಒಂದು ವೇಳೆ ಅವುಗಳಿದ್ದರೂ ನನ್ನ ಮಂತ್ರಕ್ಕೆ ಅಧೀನವಾಗಿರುವುದರಿಂದ ಆ ಭಯಂಕರವಾದ ದುಷ್ಟಜಂತುಗಳು ಯಾವ ಪ್ರಾಣಿಯನ್ನೂ ಹಿಂಸಿಸುವುದಿಲ್ಲ. (ಹಿಂಸಿಸಲು ಸಮರ್ಥವಾಗುವುದಿಲ್ಲ.) ನನ್ನ ದೇಶದಲ್ಲಿ ವಾಸಿಸುತ್ತಿರುವ ಪ್ರಜೆಗಳಿಗೆ ಪರ್ಜನ್ಯನು ಯಥೇಚ್ಛವಾಗಿ ಮಳೆಗರೆಯುತ್ತಾನೆ. (ನನ್ನ ದೇಶದಲ್ಲಿ ಕ್ಷಾಮದ ಭಯವಿಲ್ಲ.) ನನ್ನ ದೇಶದ ಎಲ್ಲ ಪ್ರಜೆಗಳೂ ಧರ್ಮಿಷ್ಠರಾಗಿರು

ತ್ತಾರೆ. ಅತಿವೃಷ್ಟಿ-ಅನಾವೃಷ್ಟಿಗಳೇ ಮೊದಲಾದ ಉಪದ್ರವಗಳು ನನ್ನ ದೇಶದಲ್ಲಿರುವುದಿಲ್ಲ. ಅಶ್ವಿನೀದೇವತೆಗಳು, ವಾಯು, ಅಗ್ನಿ, ಮರುತ್ತುಗಳಿಂದೊಡಗೂಡಿದ ಇಂದ್ರ, ಯಮಧರ್ಮ–ಈ ಎಲ್ಲ ದೇವತೆಗಳೂ ನನ್ನ ದ್ವೇಷಿಗಳನ್ನು ಸಂರಕ್ಷಿಸಲು ಉತ್ಸಾಹವುಳ್ಳವರಾಗಿರುವುದಿಲ್ಲ. ನನ್ನ ದ್ವೇಷಿಗಳನ್ನು ಆ ದೇವತೆಗಳು ನಿಜವಾಗಿಯೂ ಸಂರಕ್ಷಿಸಲು ಸಮರ್ಥರೇ ಆಗಿದ್ದರೆ–ಹದಿಮೂರು ವರ್ಷಗಳ ಪರ್ಯಂತವಾಗಿ ಕುಂತಿಯ ಮಕ್ಕಳು ದುಃಖವನ್ನು ಅನುಭವಿಸಬೇಕಾಗಿಯೇ ಇರಲಿಲ್ಲ. ನಾನು ಸತ್ಯವಾಗಿ ಹೇಳುತ್ತೇನೆ, ತಾತ! ನನ್ನ ಶತ್ರುಗಳನ್ನು ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ–ರಕ್ಷಿಸಲು ಖಂಡಿತವಾಗಿಯೂ ಶಕ್ತರಲ್ಲ. ನಾನೇನಾದರೂ ಮಿತ್ರರಿಗೆ ಶುಭವನ್ನು ಕೋರಿದರೆ ಅವರಿಗೆ ಶುಭವೇ ಉಂಟಾಗುತ್ತದೆ. ಶತ್ರುಗಳಿಗೆ ಅಶುಭವನ್ನು ಕೋರಿದರೆ ಅವರಿಗೆ ಕೇಡೇ ಉಂಟಾಗುತ್ತದೆ.

ಮಿತ್ರರ ವಿಷಯದಲ್ಲಿಯೇ ಆಗಲೀ, ಶತ್ರುಗಳ ವಿಷಯದಲ್ಲಿಯೇ ಆಗಲೀ– ಈ ನನ್ನ ಕೋರಿಕೆಯು ಇಂದಿನವರೆಗೂ ವಿಫಲವಾಗಿಲ್ಲ. ಪರಂತಪನೇ! ನಾನು ಮುಂದೆ ಹೀಗಾಗುವುದೆಂದು ಹೇಳಿದನಂತರ ಅದು ಹಾಗೆಯೇ ನಡೆಯುತ್ತದೆ. ನಾನು ಹೇಳಿರುವ ಭವಿಷ್ಯವಾಣಿಯಲ್ಲಿ ಇದುವರೆಗೂ ಯಾವುದೂ ಹುಸಿಯಾಗಿರುವುದಿಲ್ಲ. ಈ ಕಾರಣದಿಂದಲೇ ಪ್ರಜೆಗಳು ನನ್ನನ್ನು ಸತ್ಯವಾದಿಯೆಂದು ಭಾವಿಸಿದ್ದಾರೆ. ನನ್ನ ಈ ಮಹಿಮೆಯನ್ನು ನನ್ನ ಪ್ರಜೆಗಳು ಪ್ರತ್ಯಕ್ಷವಾಗಿ ಪ್ರಮಾಣಿಸಿದ್ದಾರೆ. ನಾನೊಬ್ಬ ಮಹಾತ್ಮನೆಂಬುದು ದಿಕ್ಕು- ದಿಕ್ಕುಗಳಲ್ಲಿಯೂ ಹರಡಿಹೋಗಿದೆ. ಆದರೆ ನಾನೀ ವಿಷಯವನ್ನು ಮುಂದೆ ನಡೆಯಲಿರುವ ಯುದ್ಧದ ವಿಷಯವಾಗಿ ನಿನಗೆ ಆಶ್ವಾಸನೆಕೊಡಲು ಹೇಳುತ್ತಿರುವೆನೇ ಹೊರತು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬೇಕೆಂಬ ಕಾರಣದಿಂದ ಹೇಳುತ್ತಿಲ್ಲ. ನಾನು ಈ ಹಿಂದೆ ಯಾವಾಗಲೂ ಆತ್ಮಪ್ರಶಂಸೆಯನ್ನು ಮಾಡಿಕೊಂಡಿಲ್ಲ.

**ಅಸದಾಚರಿತಂ ಹ್ಯೇತದ್ಯದಾತ್ಮಾನಂ ಪ್ರಶಂಸತಿ ॥೨೪॥**

ಮನುಷ್ಯನು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾನೆಂಬುದು ಯಾವುದುಂಟೋ–ಅದು ಅಸತ್ಪುರುಷರ ವರ್ತನೆಯೆಂದು ಪರಿಗಣಿತವಾಗುತ್ತದೆ.

(ಸತ್ಪುರುಷರು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವುದಿಲ್ಲವೆಂಬುದೂ, ಅಸತ್ಪುರುಷರು ಮಾತ್ರವೇ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಾರೆಂಬುದೂ ಲೋಕಪ್ರಸಿದ್ಧವಾಗಿದೆ.) ಪಾಂಡವರು, ಮತ್ಸ್ಯರು, ಸಾತ್ಯಕಿ, ವಾಸುದೇವ–ಇವರೆಲ್ಲರೂ ನನ್ನಿಂದ ಪರಾಜಿತರಾಗಿ ಹೋದರೆಂಬ ಸುವಾರ್ತೆಯನ್ನು ನೀನು ಕೇಳಲಿರುವೆ. ಮಹಾರಾಜ! ನೂರಾರು ನದಿಗಳು ಯಾವ ರೀತಿಯಲ್ಲಿ ಸಮುದ್ರಕ್ಕೆ ಸೇರಿ ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುವುವೋ–ಅದೇ ರೀತಿಯಲ್ಲಿ ಪರಿವಾರಸಮೇತರಾದ ಪಾಂಡವರು ನನ್ನೊಡನೆ ಯುದ್ಧಕ್ಕೆ ಬಂದು ವಿನಾಶವನ್ನೇ ಹೊಂದುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ.

ತಂದೆಯೇ! ನಾನು ಅವರಿಗಿಂತಲೂ ವಿಶೇಷವಾದ ಬುದ್ಧಿಯುಳ್ಳವನಾಗಿರುತ್ತೇನೆ. ಅವರಿಗಿಂತಲೂ ವಿಶೇಷವಾದ ತೇಜಸ್ಸನ್ನು ಹೊಂದಿರುತ್ತೇನೆ. ನನ್ನಲ್ಲಿರುವ ಪರಾಕ್ರಮವು ಅವರ ಪರಾಕ್ರಮಕ್ಕಿಂತಲೂ ಅತಿಶಯವಾದುದು. ವಿದ್ಯೆಯಲ್ಲಿಯೂ ನಾನು ಅವರಿಗಿಂತಲೂ ಹೆಚ್ಚಿನ ವಿದ್ಯಾವಂತನಾಗಿರುತ್ತೇನೆ. ಅವರಲ್ಲಿರುವುದಕ್ಕಿಂತಲೂ ಹೆಚ್ಚಿನ ಐಶ್ವರ್ಯವೂ ನನ್ನಲ್ಲಿದೆ. (ಅಲಭ್ಯವಸ್ತುಗಳು ನನ್ನಲ್ಲಿವೆ.) ಈ ಕಾರಣದಿಂದಾಗಿ ನಾನು ಪಾಂಡವರಿಗಿಂತಲೂ ಎಲ್ಲ ವಿಷಯಗಳಲ್ಲಿಯೂ ವಿಶಿಷ್ಟನಾಗಿರುತ್ತೇನೆ. ಪಿತಾಮಹನಾದ ಭೀಷ್ಮ, ದ್ರೋಣರು, ಕೃಪರು, ಶಲ್ಯ, ಶಲ – ಇವರಲ್ಲಿ ಯಾವ ಯಾವ ಮಹಾಸ್ತ್ರಗಳಿವೆಯೋ–ಆ ಎಲ್ಲ ಅಸ್ತ್ರಗಳೂ ನನ್ನೊಬ್ಬನಲ್ಲಿಯೇ ಉಪಸ್ಥಿತವಾಗಿವೆ.”

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ಅರಿಂದಮನೇ! ಈ ರೀತಿಯಲ್ಲಿ ದುರ್ಯೋಧನನು ಧೃತರಾಷ್ಟ್ರನಿಗೆ ಹೇಳಲಾಗಿ ರಾಜನು, ದುರ್ಯೋಧನನಿಗೆ ಯುದ್ಧದಲ್ಲಿಯೇ ಹೆಚ್ಚಿನ ಆಸಕ್ತಿಯಿರುವುದನ್ನು ಮನಗಂಡು ಸಮಯೋಚಿತವಾಗಿ ಸಂಜಯನನ್ನು ಪುನಃ ಪ್ರಶ್ನಿಸಿದನು.

೬೧ನೆಯ ಅಧ್ಯಾಯವು ಮುಗಿಯಿತು.

೬೨ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಕರ್ಣನ ಆತ್ಮಪ್ರಶಂಸೆ : ಭೀಷ್ಮನ ಪ್ರತಿಭಟನೆ : ಕರ್ಣನ ಸಭಾತ್ಯಾಗ : ಭೀಷ್ಮನು ಪುನಃ ಕರ್ಣನನ್ನು ತೆಗಳಿದುದು

ಜನಮೇಜಯ! ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನು ಪಾಂಡವ ಮಧ್ಯಮನಾದ ಅರ್ಜುನನ ವಿಷಯವಾಗಿಯೇ ಪುನಃ ಪುನಃ ಪ್ರಶ್ನಿಸುತ್ತಿರುವುದನ್ನು ಕಂಡು ಬೇಸರಗೊಂಡ ಕರ್ಣನು, ಅವರಿಬ್ಬರಿಗೂ ನಡೆಯುತ್ತಿರುವ ಸಂಭಾಷಣೆಯನ್ನು ನಿರ್ಲಕ್ಷಿಸಿ, ಧೃತರಾಷ್ಟ್ರನ ಮಗನಾದ ದುರ್ಯೋಧನನನ್ನು ಯುದ್ಧಪ್ರಚೋದಕವಾದ ತನ್ನ ಮಾತುಗಳಿಂದ ಸಂತೋಷಗೊಳಿಸುತ್ತಾ ಕೌರವಮಹಾಸಭೆಯಲ್ಲಿ ಹೀಗೆಂದು ಹೇಳಿದನು:

"ರಾಜಪುತ್ರ! ನಾನು ಹಿಂದೆ ಪರಶುರಾಮರಲ್ಲಿ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದೆನು. ಆಗ ನಾನು ಬ್ರಾಹ್ಮಣನೆಂದೇ ಸುಳ್ಳುಹೇಳಿಕೊಂಡು ಅವರಿಂದ ಧನುರ್ವಿದ್ಯೆಯನ್ನು ಕಲಿಯುತ್ತಿದ್ದೆನು. ನನ್ನ ಗುರುಗಳಿಂದ ನಾನು ಬ್ರಹ್ಮಾಸ್ತ್ರವನ್ನೂ ಪಡೆದುಕೊಂಡೆನು. ಆದರೆ ನಾನು ಬ್ರಾಹ್ಮಣನಲ್ಲವೆಂಬುದು ನನ್ನ ಗುರುಗಳಿಗೆ ತಿಳಿದುಹೋಯಿತು. ಆಗವರು ನನ್ನನ್ನು ಕುರಿತು – 'ನಾನ್ತಕಾಲೇ ಪ್ರತಿಭಾಸ್ಯತಿ (ಬ್ರಹ್ಮಾಸ್ತ್ರಂ) – ಅಂತ್ಯಕಾಲವು ಸಮೀಪಿಸಿದಾಗ ನಿನಗೆ ಈ ಬ್ರಹ್ಮಾಸ್ತ್ರದ ಸ್ಮರಣೆಯುಂಟಾಗುವುದಿಲ್ಲ' ಎಂದರು. ಇಷ್ಟುಮಾತ್ರವೇ ಆಗವರು ನನಗೆ ಹೇಳಿದರು. ನಾನು ಯದ್ಯಪಿ ಅವರ ವಿಷಯದಲ್ಲಿ ಮಹಾಪರಾಧವನ್ನೇ ಮಾಡಿದ್ದೆನಾದರೂ ಅವರಿಗೆ ನನ್ನ ಮೇಲೆ ವಿಶೇಷವಾದ ಅಭಿಮಾನವಿದ್ದಿತಾದ್ದರಿಂದ ಅವರು ನನ್ನನ್ನು ಶಪಿಸಲಿಲ್ಲ.

ಅವರೇನಾದರೂ ಮನಸ್ಸುಮಾಡಿದ್ದರೆ ನನ್ನನ್ನಲ್ಲಿಯೇ ಭಸ್ಮಮಾಡಿಬಿಡಬಹುದಾಗಿದ್ದಿತು. ಬಹುತೀಕ್ಷ್ಣವಾದ ತೇಜಸ್ಸಿನಿಂದ ಕೂಡಿರುವ ಅವರು ಸಮುದ್ರಸಹಿತವಾದ ಈ ಅಖಂಡವಿಶ್ವವನ್ನೇ ಕ್ಷಣಮಾತ್ರದಲ್ಲಿ ಭಸ್ಮೀಭೂತವನ್ನಾಗಿ ಮಾಡುವ ಸಾಮರ್ಥ್ಯವನ್ನು ಪಡೆದಿರುತ್ತಾರೆ. ನನ್ನಲ್ಲಿದ್ದ ಅತುಲವಾದ ಪೌರುಷವನ್ನೂ ಮತ್ತು ನಾನು ಮಾಡುತ್ತಿದ್ದ ಅನವರತವಾದ ಶುಶ್ರೂಷೆಯನ್ನೂ ಕಂಡು ಅವರು ನನ್ನ ವಿಷಯದಲ್ಲಿ ಪ್ರಸನ್ನರಾದರು. ಬ್ರಹ್ಮಾಸ್ತ್ರದ ಮೂಲಕವಾಗಿ ನನ್ನ ಆಯುಷ್ಯದ ಅಂತ್ಯವನ್ನು ನಿರ್ಧಾರಮಾಡಿ

ಕೊಳ್ಳುವಂತೆ ಅವರು ನನಗೆ ಅನುಗ್ರಹಿಸಿದ್ದಾರೆ. ಅವರು ಹೇಳಿರುವುದು ನನ್ನ ಆಯುಷ್ಯವೆಷ್ಟೆಂಬುದಕ್ಕೆ ಪೂರ್ವಸೂಚನೆಯಾಗಿದೆ. ಆದರೆ ಈ ಸಮಯದಲ್ಲಿ ಬ್ರಹ್ಮಾಸ್ತ್ರವು ನನ್ನಲ್ಲಿಯೇ ಉಳಿದುಕೊಂಡಿದೆ. ಅದರ ವಿಸ್ಮೃತಿಯುಂಟಾಗಿರುವುದಿಲ್ಲ. ಈಗ ನಾನು ಸಕಲಪಾಂಡವರನ್ನೂ ಜಯಿಸಲು ಸಮರ್ಥನಾಗಿರುತ್ತೇನೆ. ಆದುದರಿಂದ ಪಾಂಡವರನ್ನು ಜಯಿಸುವ ಪೂರ್ಣಭಾರವನ್ನೂ ನನಗೆ ವಹಿಸಿಕೊಡು. ಮಹಾತ್ಮರಾದ ಪರಶುರಾಮರ ಕೃಪಾಪ್ರಸಾದದಿಂದಾಗಿ ನಾನು ಪಾಂಚಾಲ-ಕರೂಷ-ಮತ್ಸ್ಯರನ್ನೂ, ಪುತ್ರ-ಪೌತ್ರರಿಂದ ಕೂಡಿದ ಪಾಂಡವರನ್ನೂ ಕ್ಷಣಮಾತ್ರದಲ್ಲಿ ಸಂಹರಿಸಿ ಶಸ್ತ್ರಮೂಲಕವಾಗಿ ಜಯಿಸಲ್ಪಡುವ, ವೀರಯೋಧರಿಗೆ ಲಭ್ಯವಾಗುವ ಪುಣ್ಯಲೋಕಗಳಿಗೆ ಹೋಗುತ್ತೇನೆ. ಪಿತಾಮಹನಾದ ಭೀಷ್ಮನು ನಿನ್ನ ರಕ್ಷಕನಾಗಿ ನಿನ್ನ ಸಮೀಪದಲ್ಲಿಯೇ ಇರಲಿ. ಇಲ್ಲಿಗೆ ಆಗಮಿಸಿರುವ ರಾಜಪ್ರಮುಖರೂ ಮತ್ತು ದ್ರೋಣರೂ ನಿನ್ನ ಸಮೀಪದಲ್ಲಿಯೇ ಇರಲಿ. ನಾನಾದರೋ ಪ್ರಧಾನಸೇನೆಯೊಡನೆ ಏಕಾಕಿಯಾಗಿ ಪಾಂಡವರ ಬಳಿಗೆ ಹೋಗಿ, ಏಕಾಕಿಯಾಗಿಯೇ ಅವರನ್ನೆದುರಿಸಿ ಯುದ್ಧಮಾಡಿ ಅವರೆಲ್ಲರನ್ನೂ ಕ್ಷಣಮಾತ್ರದಲ್ಲಿ ಸಂಹಾರಮಾಡುತ್ತೇನೆ. ನನಗೆ ಈ ಕೂಡಲೇ ಪೂರ್ಣಭಾರವನ್ನು ವಹಿಸಿಕೊಡು, ದುರ್ಯೋಧನ!"

ಜನಮೇಜಯ! ಈ ರೀತಿಯಲ್ಲಿ ಜಂಬಕೊಚ್ಚುತ್ತಿದ್ದ ಕರ್ಣನನ್ನು ಕುರಿತು ಭೀಷ್ಮನು ಹೇಳಿದನು :

"ಕಾಲನಿಂದ ಗ್ರಸಿತವಾಗಿರುವ (ವ್ಯತ್ಯಸ್ತವಾದ) ಬುದ್ಧಿಯುಳ್ಳವನೇ! (ಕಾಲಾಧೀನನಾಗಿರುವವನೇ!) ಏನೆಂದು ಬೊಗಳುತ್ತಿರುವೆ? ನೀನು ಪ್ರಧಾನಭೂತನಾಗಿ ಪಾಂಡವರೊಡನೆ ಯುದ್ಧಮಾಡಲು ಹೋಗಲಿಚ್ಛಿಸಿರುವೆಯಾ? ಯುದ್ಧದಲ್ಲಿ ಪ್ರಧಾನನಾದವನು ಹತನಾದರೆ ಧೃತರಾಷ್ಟ್ರನ ಮಕ್ಕಳೆಲ್ಲರೂ ಸತ್ತಂತೆಯೇ (ಸೋತುಹೋದಂತೆಯೇ) ಎಂಬ ಯುದ್ಧನಿಯಮವೂ ನಿನಗೆ ತಿಳಿಯದೇ? ಕರ್ಣ! ಶ್ರೀಕೃಷ್ಣಸಹಾಯನಾದ ಅರ್ಜುನನು ಖಾಂಡವದಾಹದ ಸಮಯದಲ್ಲಿ ಎಂತಹ ಅದ್ಭುತಪರಾಕ್ರಮವನ್ನು ತೋರಿದನೆಂಬ ವಿಷಯವನ್ನು ತಿಳಿದ ಮೇಲಾದರೂ, ಬಾಂಧವಸಹಿತನಾದ ನೀನು ನಿನ್ನ ಮನಸ್ಸನ್ನು ತಡೆಹಿಡಿಯುವುದು ಯುಕ್ತವಾಗಿದ್ದಿತು.

ಕರ್ಣ! ಇಂದ್ರನು ಕೊಟ್ಟಿರುವ ಶಕ್ತಿಯ ವಿಷಯವಾಗಿ ನಿನಗೆ ದುರಭಿಮಾನವಿರಬಹುದಲ್ಲವೇ? ಭಗವಂತನಾದ, ಮಹಾತ್ಮನಾದ, ತ್ರಿದಶಾಧಿಪನಾದ ಮಹೇಂದ್ರನು ನಿನಗೆ ಯಾವ ಅಮೋಘವಾದ ಶಕ್ತ್ಯಾಯುಧವನ್ನು ದಯಪಾಲಿಸಿರುವನೋ-ಆ ಶಕ್ತಿಯೂ ಕೇಶವನಿಂದ ಪ್ರಯುಕ್ತವಾದ ಚಕ್ರಾಯುಧದಿಂದ ಭಸ್ಮೀಭೂತವಾಗಿ ಮಾಡಲ್ಪಟ್ಟು ಆ ಶಕ್ತ್ಯಾಯುಧದ ಸಣ್ಣ-ಸಣ್ಣ ಕಣಗಳು ರಣರಂಗದ ಸುತ್ತಲೂ ಬೀಳುವುದನ್ನು ನೀನೇ ಕಾಣಲಿರುವೆ. (ಆದುದರಿಂದ ಶಕ್ತ್ಯಾಯುಧವೊಂದು ನಿನ್ನಲ್ಲಿರುವುದೆಂಬ ಕಾರಣದಿಂದ ಮನಬಂದಂತೆ ಮಾತನಾಡಬೇಡ.) ನಿನ್ನ ದುರಹಂಕಾರಕ್ಕೆ ಕಾರಣವಾದ ಮತ್ತೊಂದು ಅಸ್ತ್ರವೆಂದರೆ ಸರ್ಪಾಸ್ತ್ರ.; ಆ ಮಹಾಸ್ತ್ರವು ನಿನ್ನಲ್ಲಿ ರಾರಾಜಿಸುತ್ತಿರುವುದೇನೋ ನಿಜ. ಅದನ್ನು ನೀನು ಪ್ರಯತ್ನಪೂರ್ವಕವಾಗಿ ಪುಷ್ಪಮಾಲಿಕೆಯೇ ಮೊದಲಾದ ಶ್ರೇಷ್ಠಪೂಜಾದ್ರವ್ಯಗಳಿಂದ ನಿತ್ಯವೂ ಪೂಜಿಸುತ್ತಿರುವೆ. ಆ ಮಹಾಸ್ತ್ರವನ್ನೂ ನೀನು ಅಪ್ರತಿಹತವೆಂದು ಭ್ರಮಿಸಬೇಡ, ಕರ್ಣ!

ಆ ಮಹಾಸ್ತ್ರವೂ ಪಾಂಡುಪುತ್ರನಾದ ಅರ್ಜುನನು ಪ್ರಯೋಗಿಸುವ ಶರಸಮೂಹದ ಆಘಾತಕ್ಕೆ ಸಿಕ್ಕಿ ನುಚ್ಚುನೂರಾಗಿ ನಿನ್ನೊಡನೆಯೇ ವಿನಾಶ ಹೊಂದುತ್ತದೆ. ಕರ್ಣ! ಯಾವನು ನಿನ್ನಂತಹವನನ್ನೂ ಮತ್ತು ನಿನಗಿಂತಲೂ ಹೆಚ್ಚಿನ ಬಲಶಾಲಿಗಳಾದ ಶತ್ರುಗಳನ್ನೂ ಘೋರವಾದ ಮಹಾಸಮರದಲ್ಲಿ ಸಂಹರಿಸುವ ಸಾಮರ್ಥ್ಯದಿಂದ ಕೂಡಿರುವನೋ-ಬಾಣಾಸುರ ಮತ್ತು ನರಕಾಸುರರ ಹಂತಕನೋ-ಅಂತಹ ವಾಸುದೇವನು ಕಿರೀಟಿಯ ರಕ್ಷಕನಾಗಿರುತ್ತಾನೆ. (ಅಂತಹವನನ್ನು ಗೆಲ್ಲುವೆನೆಂದು ಹೇಳುವುದು ಬರಿಯ ಪೊಳ್ಳುಮಾತಲ್ಲವೇ?)"

ಕರ್ಣನು ಭೀಷ್ಮನ ಮಾತನ್ನು ಕೇಳಿ ಬಹಳ ಸಿಟ್ಟಾಗಿ ಹೇಳಿದನು :

"ಭೀಷ್ಮನು ವೃಷ್ಣಿಪತಿಯಾದ ಶ್ರೀಕೃಷ್ಣನ ವಿಷಯವಾಗಿ ಹೇಳಿದ ಮಾತು ನಿಸ್ಸಂಶಯವಾದುದು. ಮಹಾತ್ಮನಾದ ಶ್ರೀಕೃಷ್ಣನು-ಇವನು ಹೇಳಿದುದಕ್ಕಿಂತಲೂ ಹೆಚ್ಚಿನ ಸಾಮರ್ಥ್ಯವುಳ್ಳವನೇ ಆಗಿರಬಹುದು. ಆದರೆ ನನ್ನ ವಿಷಯದಲ್ಲಿ ಪಿತಾಮಹನಾಡಿದ ಕಠಿನೋಕ್ತಿಗಳು ನಿಶ್ಚಯವಾಗಿಯೂ

ಅಸಹನೀಯವಾದುವುಗಳು. ಇವನು ನನ್ನ ವಿಷಯದಲ್ಲಾಡಿದ ಕಠಿನೋಕ್ತಿಗಳ ಪರಿಣಾಮವೇನೆಂಬುದನ್ನು ಈ ಭೀಷ್ಮನು ಕೇಳಲಿ :



ನ್ಯಸ್ಯಾಮಿ ಶಸ್ತ್ರಾಣಿ ನ ಜಾತು ಸಂಖ್ಯೇ
ಪಿತಾಮಹೋ ದ್ರಕ್ಷ್ಯತಿ ಮಾಂ ಸಭಾಯಾಮ್ ।
ತ್ವಯಿ ಪ್ರಶಾನ್ತೇ ತು ಮಮ ಪ್ರಭಾವಂ
ದ್ರಕ್ಷ್ಯನ್ತಿ ಸರ್ವೇ ಭುವಿ ಭೂಮಿಪಾಲಾಃ ॥೧೭॥

ನಾನು ಈಗಿಂದೀಗಲೇ ಶಸ್ತ್ರಸಂನ್ಯಾಸವನ್ನು ಮಾಡುತ್ತೇನೆ. ಇನ್ನು ಮುಂದೆ ಪಿತಾಮಹನು ನನ್ನನ್ನು ರಣರಂಗದಲ್ಲಾಗಲೀ, ಈ ಸಭೆಯಲ್ಲಾಗಲೀ ನೋಡಲಾರನು. ಭೀಷ್ಮ! ನೀನು ಯುದ್ಧಭೂಮಿಯಲ್ಲಿ ಅವಸಾನಹೊಂದಿದ ನಂತರವೇ ಭೂಮಿಯ ಎಲ್ಲ ರಾಜರೂ ನನ್ನ ಪ್ರಭಾವ ಮತ್ತು ಪರಾಕ್ರಮ ಗಳನ್ನು ಪ್ರತ್ಯಕ್ಷವಾಗಿ ಕಾಣುತ್ತಾರೆ.”

ಜನಮೇಜಯ! ಮಹಾಧನುಷ್ಮಂತನಾದ ಕರ್ಣನು ಹೀಗೆ ಪ್ರತಿಜ್ಞೆ ಮಾಡಿ ಸಭೆಯನ್ನು ಬಿಟ್ಟು ತನ್ನ ಅರಮನೆಗೆ ಹೊರಟುಹೋದನು. ಅವನು ಹೊರಟುಹೋದುದನ್ನು ಕಂಡು ಭೀಷ್ಮನು ಗಹಗಹಿಸಿ ನಗುತ್ತಾ ದುರ್ಯೋಧನನನ್ನೇ ಸಂಬೋಧಿಸಿ ಈ ಮಾತುಗಳನ್ನು ಹೇಳಿದನು : “ಸೂತನು ಎಷ್ಟು ಸತ್ಯಪ್ರತಿಜ್ಞನೆಂಬುದು ಇಷ್ಟರಿಂದಲೇ ಕಂಡಿತಲ್ಲವೇ? ದುರ್ಯೋಧನ! ಸ್ವಲ್ಪ ಹೊತ್ತಿಗೆ ಮೊದಲು ಪಾಂಡವರನ್ನು ಏಕಾಕಿಯಾಗಿ ಜಯಿಸಿಬರುವೆನೆಂದು ಹೇಳಿದವನು ಮರುಕ್ಷಣದಲ್ಲಿಯೇ ಶಸ್ತ್ರವನ್ನು ಕೆಳಗಿಟ್ಟು ಹೊರಟೇ ಹೋದನು. ಇಂತಹ ಮಂದಬುದ್ಧಿಯವನು ಯುದ್ಧದ ಪೂರ್ಣಭಾರವನ್ನೂ ಹೊರಲು ಹೇಗೆ ಸಮರ್ಥನಾಗುತ್ತಾನೆ? ಪಾಂಡವರು ರಚಿಸುವ ಸೇನಾವ್ಯೂಹಕ್ಕೆ ಪ್ರತಿಯಾದ ಸೇನಾವ್ಯೂಹವನ್ನು ರಚಿಸಿ, ಯುದ್ಧದಲ್ಲವರನ್ನು ಎದುರಿಸಿ, ಶತ್ರುಪಕ್ಷದವರ ತಲೆಗಳನ್ನು ಚೆಂಡಾಡಿರಿ. (ಚೆಂಡಾಡಲು ಸಿದ್ಧರಾಗಿ ನಿಲ್ಲಿರಿ.) ಭೀಮಸೇನನಿಂದ ಲೋಕಕ್ಷಯವು (ಸೈನ್ಯದ ಕ್ಷಯವು) ಹೇಗಾಗುವುದೆಂಬುದನ್ನು ರಣರಂಗದಲ್ಲಿ ಕಣ್ತೆರೆದು ನೋಡಿರಿ. ಕರ್ಣನ ಆತ್ಮಪ್ರಶಂಸೆಗೂ ಒಂದು ಮಿತಿಯಿರಬೇಕು. ಸುಯೋಧನ! ನಿನ್ನಿಂದ ಆಹ್ವಾನಿತರಾಗಿ ಬಂದಿರುವ ಅವಂತಿ-ಕಲಿಂಗದೇಶಗಳ ರಾಜರು ಇಲ್ಲಿ ಉಪಸ್ಥಿತರಾಗಿದ್ದಾರೆ. ಜಯದ್ರಥ, ಚೇದಿರಾಜ, ಬಾಹ್ಲಿಕ–ಇವರೂ ಇಲ್ಲಿ ಯುದ್ಧಕ್ಕೆಂದೇ ಉಪಸ್ಥಿತರಾಗಿರುತ್ತಾರೆ. ಹೀಗಿರುವಾಗ ಕರ್ಣನು ಎಲ್ಲ ಕಾಲ ದಲ್ಲಿಯೂ–‘ಅಹಂ ಹನಿಷ್ಯಾಮಿ’ ‘ನಾನೊಬ್ಬನೇ ಶತ್ರುಗಳ ಕಡೆಯ ಕೋಟಿ-ಕೋಟಿ ಯೋಧರನ್ನೂ ಕೊಂದುಬಿಡುತ್ತೇನೆ’–ಎಂದು ಗಳಹುತ್ತಲೇ ಇರುತ್ತಾನೆ.

ಪರಶುರಾಮನು ಇವನ ವಿಷಯದಲ್ಲಿ ಕರುಣೆದೋರಲಿಲ್ಲ. ಇವನ ವಿಷಯ ದಲ್ಲಿ ಅನುಗ್ರಹಬುದ್ಧಿಯುಳ್ಳವನಾಗಿಯೂ ಇರಲಿಲ್ಲ. ಸುಳ್ಳು ಹೇಳಿದ್ದರಿಂದ

ಮುಂದೆ ಇವನಿಗಾಗುವ ಪರಿಣಾಮವನ್ನು ತಿಳಿದುಕೊಂಡವನಾಗಿ ಸುಮ್ಮನಿದ್ದು ಬಿಟ್ಟನು. ಅವನಿಗೆ ಶಾಪಕೊಡುವ ಅವಶ್ಯಕತೆಯೇ ಇರಲಿಲ್ಲ.

ಯಾವಾಗ ಈ ಅಧಮಾಧಮನಾದ ಸೂತಪುತ್ರನು ಅನಿಂದನೀಯನಾದ, ಪರಮಶುದ್ಧನಾದ, ಭಗವಂತನಾದ ಪರಶುರಾಮನಿಗೆ ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿ ಅವನಲ್ಲಿದ್ದ ಬ್ರಹ್ಮಾಸ್ತ್ರವನ್ನು ಕಲಿತುಕೊಂಡನೋ–ಆಗಲೇ ಇವನಲ್ಲಿದ್ದ ಸತ್ತ್ವವು ಪೂರ್ಣವಾಗಿ ಉಡುಗಿ ಹೋಯಿತು. ಇವನಲ್ಲಿದ್ದ ಧರ್ಮ, ತಪಸ್ಸು–ಎಲ್ಲವೂ ನಷ್ಟವಾಗಿಹೋದುವು. (ಮದಾಂಧನಾದ ಕರ್ಣನು ಈ ಧರ್ಮಸೂಕ್ಷ್ಮವನ್ನು ಅರಿತವನಾಗಿಲ್ಲ.")

ಜನಮೇಜಯ! ಕರ್ಣನು ಶಸ್ತ್ರಗಳನ್ನು ಕೆಳಗಿಟ್ಟು ಹೊರಟುಹೋದ ನಂತರ ಭೀಷ್ಮನು ದುರ್ಯೋಧನನೊಡನೆ ಹೀಗೆಂದು ಹೇಳಲಾಗಿ ಧೃತರಾಷ್ಟ್ರನ ಮಗನಾದ, ಅಲ್ಪಬುದ್ಧಿಯವನಾದ ದುರ್ಯೋಧನನು ಭೀಷ್ಮನಿಗೆ ಹೇಳಿದನು."

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ದುರ್ಯೋಧನನು ಪುನಃ ತನ್ನ ಪಕ್ಷದ ಪ್ರಾಬಲ್ಯವನ್ನು ವರ್ಣಿಸಿದುದು : ವಿದುರನು ದಮದ ಮಹಿಮೆಯನ್ನು ಹೇಳಿದುದು

ಪಾರಿಕ್ಷಿತ! ದುರ್ಯೋಧನನು ಹೇಳುತ್ತಾನೆ :

**ಸದೃಶಾನಾಂ ಮನುಷ್ಯೇಷು ಸರ್ವೇಷಾಂ ತುಲ್ಯಜನ್ಮನಾಮ್ ।**
**ಕಥಮೇಕಾನ್ತತಸ್ತೇಷಾಂ ಪಾರ್ಥಾನಾಂ ಮನ್ಯಸೇ ಜಯಮ್ ॥೧॥**

"ಪಿತಾಮಹ! ನಮ್ಮಲ್ಲಿಯೂ ಮತ್ತು ಪಾಂಡವರಲ್ಲಿಯೂ ಅನೇಕ ವಿಷಯಗಳಲ್ಲಿ ಸಾದೃಶ್ಯವಿದೆ. ಅವರಂತೆ ನಾವೂ ವಿದ್ಯಾಭ್ಯಾಸಮಾಡಿದ್ದೇವೆ. ಗುರುಶುಶ್ರೂಷೆಮಾಡಿದ್ದೇವೆ. ಪ್ರಜಾಪಾಲನೆಯನ್ನು ಮಾಡಿದ್ದೇವೆ. ಯಜ್ಞ-ಯಾಗಾದಿಗಳನ್ನೂ ಮಾಡಿದ್ದೇವೆ. ದಾನ-ದಕ್ಷಿಣೆಗಳನ್ನೂ ಕೊಟ್ಟಿದ್ದೇವೆ. ವೀರ್ಯ, ಪರಾಕ್ರಮ, ವಯಸ್ಸು, ಪ್ರತಿಭಾಯುಕ್ತವಾದ ಶಾಸ್ತ್ರಾಭ್ಯಾಸ, ಅಸ್ತ್ರಾಭ್ಯಾಸ, ಹಸ್ತಲಾಘವ, ಶಸ್ತ್ರವಿದ್ಯಾಕೌಶಲ ಇವುಗಳಲ್ಲಿ ನಾವೂ ಸಮಾನರಾಗಿರುತ್ತೇವೆ. ಹೀಗೆ ಹಲವಾರು ಸಾಮ್ಯಗಳು ನಮ್ಮಿರ್ವರಲ್ಲಿಯೂ

ಇವೆ. ಮೇಲಾಗಿ ನಾವಿಬ್ಬರೂ ಒಂದೇ ಬುಡಕಟ್ಟಿಗೆ ಸೇರಿದವರಾಗಿದ್ದೇವೆ. ಹೀಗಿರುವಾಗ ವಿಜಯವು ಯಾರಿಗೆ ಬೇಕಾದರೂ ಲಭ್ಯವಾಗಬಹುದಾಗಿದೆ. ಆದರೆ ನೀನು ಮಾತ್ರ ಪಾರ್ಥರಿಗೆ ವಿಜಯವು ಲಭ್ಯವಾಗುವುದೆಂದು ಯಾವ ಕಾರಣದಿಂದ ಹೇಳುತ್ತಿರುವೆ? ನಿನ್ನ ಅಭಿಪ್ರಾಯದಂತೆ ಅವರು ದೇವಾಂಶ ಸಂಭೂತರೇ ಆದರೂ ಅವರ ಜನ್ಮವು ಮನುಷ್ಯಯೋನಿಯಲ್ಲಿಯೇ ಆಗಿರುವುದಲ್ಲವೇ? ಹೀಗಿರುವಾಗ ಪಾರ್ಥರಿಗೆ ಮಾತ್ರವೇ ವಿಜಯವು ಲಭ್ಯವಾಗುವುದೆಂಬುದು ಹೇಗೆ ಸಮರ್ಥನೀಯವಾಗುತ್ತದೆ? ಮೇಲಾಗಿ, ತಾತ! ನಾನು ನಿನ್ನ ಪರಾಕ್ರಮವನ್ನಾಗಲೀ, ದ್ರೋಣ-ಕೃಪರ ಪರಾಕ್ರಮವನ್ನಾಗಲೀ, ಬಾಹ್ಲಿಕನ ಮತ್ತು ಇತರ ರಾಜರ ಪರಾಕ್ರಮವನ್ನೇ ಆಗಲೀ–ಅವಲಂಬಿಸಿ ಈ ಯುದ್ಧವನ್ನು ಆರಂಭಿಸುತ್ತಿಲ್ಲ.

**ಅಹಂ ವೈಕರ್ತನಃ ಕರ್ಣೋ ಭ್ರಾತಾ ದುಃಶಾಸನಶ್ಚ ಮೇ ।**
**ಪಾಣ್ಡವಾನ್ಸಮರೇ ಪಞ್ಚ ಹನಿಷ್ಯಾಮಃ ಶಿತೈಃ ಶರೈಃ ॥೫॥**

ನಾನು, ಮಹಾಶೂರನಾದ ವೈಕರ್ತನಕರ್ಣ ಮತ್ತು ನನ್ನ ತಮ್ಮ ದುಃಶಾಸನ–ಈ ಮೂವರೇ ಸಾಕು. ಯುದ್ಧದಲ್ಲಿ ಆ ಐವರು ಪಾಂಡವರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿಬಿಡುತ್ತೇವೆ.

ಮಹಾರಾಜ! ಅನಂತರದಲ್ಲಿ ನಾನು ಭೂರಿದಕ್ಷಿಣಾಕವಾದ ಅನೇಕವಾದ ಮಹಾಯಜ್ಞಗಳನ್ನು ಮಾಡಿ, ಗೋದಾನ-ಅಶ್ವದಾನ-ಧನದಾನಾದಿಗಳಿಂದ ಬ್ರಾಹ್ಮಣರನ್ನು ಸಂತೃಪ್ತಿಗೊಳಿಸುತ್ತೇನೆ. ಅರಣ್ಯದಲ್ಲಿ ದೊಡ್ಡದಾದ ಬಲೆಯೊಂದನ್ನು ಒಡ್ಡಿ ಬೇಡರು ಯಾವ ರೀತಿಯಲ್ಲಿ ಜಿಂಕೆಯ ಮರಿಗಳನ್ನು ಸಿಕ್ಕಿಸಿಕೊಳ್ಳುವರೋ–ಸಮುದ್ರದ ಸುಳಿಗಳು ಹಡಗು ಒಡೆದುಹೋಗಿ ನೀರಿನಲ್ಲಿ ಬಿದ್ದವರನ್ನು ಯಾವ ರೀತಿಯಲ್ಲಿ ತಮ್ಮೊಳಗೆ ಸೆಳೆದುಕೊಳ್ಳುವುವೋ–ಅದೇ ರೀತಿಯಲ್ಲಿ ನನ್ನ ಅಸಂಖ್ಯಾತವಾದ ಸೇನಾಸಮೂಹವು ಪಾಂಡವರನ್ನು ಆವರಿಸಿಬಿಡುತ್ತದೆ. ಅದರಿಂದವರು ದಿಗ್ಭ್ರಾಂತರಾಗುತ್ತಾರೆ. ರಥ-ನಾಗಸಮಾಕುಲವಾದ ನಮ್ಮ ಅಪಾರಸೈನ್ಯವನ್ನು ನೋಡಿದೊಡನೆಯೇ ಪಾಂಡವರು ತಮ್ಮ ದರ್ಪವನ್ನು ಬದಿಗೊತ್ತುತ್ತಾರೆ. ಅಂತೆಯೇ ಶ್ರೀಕೇಶವನ ದರ್ಪವೂ ಉಡುಗಿ ಹೋಗುತ್ತದೆ.”

ದುರ್ಯೋಧನನ ದರ್ಪದ ಮಾತುಗಳನ್ನು ಕೇಳಿ ವಿದುರನು ಹೇಳಿದನು :

ಇಹ ನಿಃಶ್ರೇಯಸಂ ಪ್ರಾಹುರ್ವೃದ್ಧಾ ನಿಶ್ಚಿತದರ್ಶಿನಃ ।
ಬ್ರಾಹ್ಮಣಸ್ಯ ವಿಶೇಷೇಣ ದಮೋ ಧರ್ಮಃ ಸನಾತನಃ ॥೯॥



"ಮಹಾರಾಜ! 'ಇದಮಿತ್ಥಂ' 'ಇದು ಹೀಗೆಯೇ ಸರಿ'–ಎಂಬ ನಿಶ್ಚಯಜ್ಞಾನವುಳ್ಳ ವೃದ್ಧರು – ಪ್ರಪಂಚದಲ್ಲಿ ಶ್ರೇಯಸ್ಸಿಗೆ ದಮವೇ ಪರಮಶ್ರೇಷ್ಠವಾದ ಸಾಧನವೆಂದು ಹೇಳುತ್ತಾರೆ. ಎಲ್ಲರಿಗಿಂತಲೂ ಮುಖ್ಯವಾಗಿ ಬ್ರಾಹ್ಮಣನಾದವನಿಗೆ* ದಮವು ಶ್ರೇಷ್ಠವಾದ ಸನಾತನ ಧರ್ಮವಾಗಿರುತ್ತದೆ.

---

*ದಮ–ಬಹಿರಿಂದ್ರಿಯವ್ಯಾಪಾರಗಳನ್ನು ಅಂಕೆಯಲ್ಲಿಡುವುದು.
ನಿಗ್ರಹೋ ಬಾಹ್ಯವೃತ್ತೀನಾಂ ದಮ ಇತ್ಯಭಿಧೀಯತೇ।

**ತಸ್ಯ ದಾನಂ ಕ್ಷಮಾ ಸಿದ್ಧಿರ್ಯಥಾವದುಪಪದ್ಯತೇ ।**
**ದಮೋ ದಾನಂ ತಪೋ ಜ್ಞಾನಮಧೀತಂ ಚಾನುವರ್ತತೇ ॥೧೦॥**

ಯಾವನು ಬಹಿರಿಂದ್ರಿಯವ್ಯಾಪಾರಗಳನ್ನು ಅಂಕೆಯಲ್ಲಿಟ್ಟುಕೊಂಡಿರುವನೋ ಅರ್ಥಾತ್ ಜಿತೇಂದ್ರಿಯನಾಗಿರುವನೋ–ಅಂತಹವನಿಗೆ ದಾನಶೀಲತೆ, ಕ್ಷಮೆ ಮತ್ತು ಕಾರ್ಯಸಿದ್ಧಿ–ಇವುಗಳು ಸ್ವಾಭಾವಿಕವಾಗಿಯೇ ಪ್ರಾಪ್ತವಾಗುತ್ತವೆ. ಹೇಗೆಂದರೆ : ದಮವೇ (ಜಿತೇಂದ್ರಿಯತೆಯೇ) ಮನುಷ್ಯನಲ್ಲಿ ದಾನಶೀಲತೆಯನ್ನೂ, ತಪಸ್ಸಿನಲ್ಲಿ ನಿಷ್ಠೆಯನ್ನೂ, ಜ್ಞಾನವನ್ನೂ ಮತ್ತು ವಿದ್ಯೆಯನ್ನೂ ಸಂಪಾದಿಸಿಕೊಡುತ್ತದೆ. ಅರ್ಥಾತ್ ದಾನ, ತಪಸ್ಸು, ಜ್ಞಾನ ಮತ್ತು ವಿದ್ಯೆಗಳು ದಮವನ್ನು ಅನುಸರಿಸಿಯೇ ಇರುತ್ತವೆ. (ಜಿತೇಂದ್ರಿಯತೆಯಿಲ್ಲದೆಡೆಯಲ್ಲಿ ದಾನ, ತಪಸ್ಸು, ಜ್ಞಾನಗಳು ಇರುವ ಸಾಧ್ಯತೆಯಿಲ್ಲ.)

**ದಮಸ್ತೇಜೋ ವರ್ಧಯತಿ ಪವಿತ್ರಂ ದಮ ಉತ್ತಮಮ್ ।**
**ವಿಪಾಪ್ಮಾ ವೃದ್ಧತೇಜಾಸ್ತು ಪುರುಷೋ ವಿಂದತೇ ಮಹತ್ ॥೧೧॥**

ದಮವು (ಜಿತೇಂದ್ರಿಯತೆಯು) ತೇಜಸ್ಸನ್ನು ಅಧಿಕಗೊಳಿಸುತ್ತದೆ. ದಮವು ಪವಿತ್ರವಾದುದು ಮತ್ತು ಉತ್ತಮೋತ್ತಮವಾದುದು. ಜಿತೇಂದ್ರಿಯನಾಗಿ ಆತ್ಮತೇಜಸ್ಸನ್ನು ವೃದ್ಧಿಪಡಿಸಿಕೊಂಡಿರತಕ್ಕ ಪುರುಷನು 'ಮಹತ್' ಎಂಬ ಅಭಿಧಾನದ ಪರಬ್ರಹ್ಮನಾದ ಪರಮಾತ್ಮನನ್ನೇ ತಿಳಿದುಕೊಳ್ಳುತ್ತಾನೆ.

**ಕ್ರವ್ಯಾದ್ಭ್ಯ ಇವ ಭೂತಾನಾಮದಾಂತೇಭ್ಯಃ ಸದಾ ಭಯಮ್ ।**
**ಯೇಷಾಂ ಚ ಪ್ರತಿಷೇಧಾರ್ಥಂ ಕ್ಷತ್ರಂ ಸೃಷ್ಟಂ ಸ್ವಯಮ್ಭುವಾ ॥೧೨॥**

ಯಾರು ಜಿತೇಂದ್ರಿಯರಾಗಿರುವುದಿಲ್ಲವೋ (ಬಹಿರಿಂದ್ರಿಯಗಳನ್ನು ನಿಗ್ರಹಿಸಿರುವುದಿಲ್ಲವೋ)–ಅವರು ಕ್ರೂರಪ್ರಾಣಿಗಳಿಗೆ ಸಮಾನರು. ಮಾಂಸಾಶಿಗಳಾದ ಸಿಂಹ-ವ್ಯಾಘ್ರಾದಿಗಳಿಗೆ ಸಕಲಪ್ರಾಣಿಗಳೂ ಭಯಪಡುವಂತೆ–ಇಂದ್ರಿಯನಿಗ್ರಹವಿಲ್ಲದವರ ವಿಷಯದಲ್ಲಿಯೂ ಪ್ರಪಂಚದ ಪ್ರಜೆಗಳು ಭಯಪಡುತ್ತಾರೆ. ಇಂತಹ ಅದಾಂತರನ್ನು (ಅಜಿತೇಂದ್ರಿಯರನ್ನು) ಹದ್ದುಬಸ್ತಿನಲ್ಲಿಡುವ ಸಲುವಾಗಿಯೇ ಸ್ವಯಂಭುವಾದ ಬ್ರಹ್ಮನು ಕ್ಷತ್ರಿಯಕುಲವನ್ನು ಸೃಷ್ಟಿಸಿರುವನು.

ಆಶ್ರಮೇಷು ಚತುರ್ಷ್ವಾಹುರ್ದಮಮೇವೋತ್ತಮಂ ವ್ರತಮ್ ।
ತಸ್ಯ ಲಿಙ್ಗಂ ಪ್ರವಕ್ಷ್ಯಾಮಿ ಯೇಷಾಂ ಸಮುದಯೋ ದಮಃ ॥೧೩॥

ಬ್ರಹ್ಮಚರ್ಯವೇ ಮೊದಲಾದ ನಾಲ್ಕು ಆಶ್ರಮಿಗಳಿಗೂ ದಮವೇ ಪರಮೋತ್ಕೃಷ್ಟವಾದ ವ್ರತವೆಂದು ಹೇಳುತ್ತಾರೆ. 'ದಮವು ಯಾವನಲ್ಲಿರುತ್ತದೆ? ದಮದಿಂದ ಪರಿಪೂರ್ಣನಾದವನ ಲಕ್ಷಣವು ಹೇಗಿರುತ್ತದೆ?" ಎಂಬುದೆಲ್ಲವನ್ನೂ ಹೇಳುತ್ತೇನೆ ಕೇಳು, ಮಹಾರಾಜ!

ಕ್ಷಮಾ ಧೃತಿರಹಿಂಸಾ ಚ ಸಮತಾ ಸತ್ಯಮಾರ್ಜವಮ್ ।
ಇನ್ದ್ರಿಯಾಭಿಜಯೋ ಧೈರ್ಯಂ ಮಾರ್ದವಂ ಹ್ರೀರಚಾಪಲಮ್ ॥

ಅಕಾರ್ಪಣ್ಯಮಸಂರಮ್ಭಃ ಸಂತೋಷಃ ಶ್ರದ್ದಧಾನತಾ ।
ಏತಾನಿ ಯಸ್ಯ ರಾಜೇನ್ದ್ರ ಸ ದಾನ್ತಃ ಪುರುಷಃ ಸ್ಮೃತಃ ॥೧೫॥

ಕ್ಷಮೆ, ಉತ್ಸಾಹ, ಅಹಿಂಸೆ, ಶೀತೋಷ್ಣ-ಸುಖ-ದುಃಖಗಳಲ್ಲಿ ಸಮಾನತೆ, ಸತ್ಯ, ಸರಳತೆ, ಇಂದ್ರಿಯಸಂಯಮನ, ಧೈರ್ಯ, ಮೃದುತ್ವ, ಲಜ್ಜೆ, ಚಪಲತೆಯಿಲ್ಲದಿರುವುದು, ಉದಾರತೆ, ಕ್ರೋಧವಿಲ್ಲದಿರುವುದು, ಸಂತೋಷ ಮತ್ತು ಶ್ರದ್ಧೆ–ಈ ಗುಣಗಳು ಯಾವನಲ್ಲಿವೆಯೋ ಅಂತಹವನು ದಾಂತನೆಂದು ಪರಿಗಣಿತನಾಗುತ್ತಾನೆ.

ಕಾಮೋ ಲೋಭಶ್ಚ ದರ್ಪಶ್ಚ ಮನ್ಯುರ್ನಿದ್ರಾ ವಿಕತ್ಥನಮ್ ।
ಮಾನ ಈರ್ಷ್ಯಾ ಚ ಶೋಕಶ್ಚ ನೈತದ್ದಾನ್ತೋ ನಿಷೇವತೇ ।
ಅಜಿಹ್ಮಮಶಠಂ ಶುದ್ಧಮೇತದ್ದಾನ್ತಸ್ಯ ಲಕ್ಷಣಮ್ ॥೧೬॥

ಕಾಮ, ಲೋಭ, ದರ್ಪ, ಕೋಪ, ಅತಿನಿದ್ರೆ, ಆತ್ಮಪ್ರಶಂಸೆ, ದುರಭಿಮಾನ, ಅಸೂಯೆ, ಶೋಕ–ಈ ದುರ್ಗುಣಗಳು ತನ್ನ ಸಮೀಪದಲ್ಲಿ ಸುಳಿದಾಡಲು ಕೂಡ ದಾಂತಪುರುಷನು ಅವಕಾಶವನ್ನೀಯುವುದಿಲ್ಲ. ಕುಟಿಲತೆಯಿಲ್ಲದಿರುವುದು, ಶಠತ್ವವಿಲ್ಲದಿರುವುದು ಮತ್ತು ಪರಿಶುದ್ಧಹೃದಯನಾಗಿರುವುದು–ಇವು ದಮಯುಕ್ತನಾದ ಪುರುಷನ ಲಕ್ಷಣಗಳಾಗಿವೆ.

ಅಲೋಲುಪಸ್ತಥಾಲ್ಪೇಪ್ಸುಃ ಕಾಮಾನಾಮವಿಚಿನ್ತಿತಾ ।
ಸಮುದ್ರಕಲ್ಪಃ ಪುರುಷಃ ಸ ದಾನ್ತಃ ಪರಿಕೀರ್ತಿತಃ ॥೧೭॥

ದುರಾಸೆಯಿಲ್ಲದವನು, ಸ್ವಲ್ಪದರಲ್ಲಿಯೇ ತೃಪ್ತಿಪಟ್ಟುಕೊಳ್ಳುವವನು (ಹೆಚ್ಚು ಬಯಸದವನು), ಭೋಗ್ಯವಸ್ತುಗಳನ್ನು ಮನಸ್ಸಿನಿಂದಾದರೂ

ಚಿಂತಿಸದವನು, ಸಮುದ್ರಕ್ಕೆ ಸಮಾನವಾದ ಗಾಂಭೀರ್ಯವುಳ್ಳವನು– ದಾಂತಪುರುಷನೆಂದು (ಜಿತೇಂದ್ರಿಯನೆಂದು) ಕರೆಯಲ್ಪಡುತ್ತಾನೆ.

**ಸುವೃತ್ತಃ ಶೀಲಸಮ್ಪನ್ನಃ ಪ್ರಸನ್ನಾತ್ಮಾತ್ಮವಿದ್ಬುಧಃ ।**
**ಪ್ರಾಪ್ಯೇಹ ಲೋಕೇ ಸಮ್ಮಾನಂ ಸುಗತಿಂ ಪ್ರೇತ್ಯ ಗಚ್ಛತಿ ॥೧೮॥**

ಸದಾಚಾರಸಂಪನ್ನನೂ, ಶೀಲಸಂಪನ್ನನೂ, ಪ್ರಸನ್ನಚಿತ್ತನೂ, ಆತ್ಮ ಜ್ಞಾನಿಯೂ ಆದ ವಿದ್ವಾಂಸನು ಈ ಲೋಕದಲ್ಲಿಯೂ ಸಮ್ಮಾನಿತನಾಗಿ ಮರಣಾನಂತರದಲ್ಲಿಯೂ ಸದ್ಗತಿಯನ್ನು ಪಡೆಯುತ್ತಾನೆ.

**ಅಭಯಂ ಯಸ್ಯ ಭೂತೇಭ್ಯಃ ಸರ್ವೇಷಾಮಭಯಂ ಯತಃ ।**
**ಸ ವೈ ಪರಿಣತಪ್ರಜ್ಞಃ ಪ್ರಖ್ಯಾತೋ ಮನುಜೋತ್ತಮಃ ॥೧೯॥**

ಯಾವನಿಗೆ ಯಾವ ಪ್ರಾಣಿಯಿಂದಲೂ ಯಾವ ವಿಧವಾದ ಭಯವೂ ಇಲ್ಲವೋ ಮತ್ತು ಯಾವನಿಂದ ಇತರ ಪ್ರಾಣಿಗಳ ಭಯವೂ ದೂರವಾಗು ತ್ತದೆಯೋ (ಬೇರೆಯ ಪ್ರಾಣಿಗಳಿಗೂ ಭಯವಿಲ್ಲವೋ)–ಅಂತಹ ಪರಿಪಕ್ವವಾದ ಬುದ್ಧಿಯುಳ್ಳ ಮನುಷ್ಯನು ಈ ಪ್ರಪಂಚದಲ್ಲಿ ಮನುಷ್ಯಶ್ರೇಷ್ಠನೆಂದು ಪ್ರಖ್ಯಾತನಾಗುತ್ತಾನೆ.

**ಸರ್ವಭೂತಹಿತೋ ಮೈತ್ರಸ್ತಸ್ಮಾನ್ನೋದ್ವಿಜತೇ ಜನಃ ।**
**ಸಮುದ್ರ ಇವ ಗಮ್ಭೀರಃ ಪ್ರಜ್ಞಾತೃಪ್ತಃ ಪ್ರಶಾಮ್ಯತಿ ॥೨೦॥**

ಸರ್ವಪ್ರಾಣಿಗಳ ಹಿತದಲ್ಲಿಯೇ ಆಸಕ್ತನಾಗಿರುವುದರಿಂದಲೂ, ಸಕಲ ಪ್ರಾಣಿಗಳನ್ನೂ ಮೈತ್ರೀಭಾವದಿಂದ ನೋಡುವುದರಿಂದಲೂ ಜನರು ದಾಂತ ಮನುಷ್ಯನ ವಿಷಯದಲ್ಲಿ ಉದ್ವಿಗ್ನರಾಗುವುದಿಲ್ಲ. ಯಾವನು ಸಮುದ್ರದಂತೆ ಗಂಭೀರಸ್ವಭಾವವುಳ್ಳವನಾಗಿರುವನೋ, ಕೇವಲ ಜ್ಞಾನಾರ್ಜನೆಯಿಂದಲೇ ತೃಪ್ತಿಯು ಯಾವನಿಗಿರುವುದೋ–ಅಂತಹವನು ಪ್ರಕೃಷ್ಟವಾದ ಶಾಂತಿಯನ್ನು ಹೊಂದುತ್ತಾನೆ. ಅಂತಹವನ ಮನಸ್ಸು ಯಾವಾಗಲೂ ಪ್ರಶಾಂತ ವಾಗಿರುತ್ತದೆ.

**ಕರ್ಮಣಾಚರಿತಂ ಪೂರ್ವಂ ಸದ್ಭಿರಾಚರಿತಂ ಚ ಯತ್ ।**
**ತದೇವಾಸ್ಥಾಯ ಮೋದನ್ತೇ ದಾನ್ತಾಃ ಶಮಪರಾಯಣಾಃ ॥೨೧॥**

ಹಿಂದಿನಿಂದಲೂ ಆಚರಿಸಿಕೊಂಡು ಬಂದಿರುವ ಕರ್ತವ್ಯಕರ್ಮ ಗಳೆಂಬುವು ಯಾವುವುಂಟೋ ಮತ್ತು ಸತ್ಪುರುಷರು ಆಚರಿಸುತ್ತಿರುವ

ಕರ್ಮಗಳೆಂಬುವು ಯಾವುವುಂಟೋ (ಯಾವುದು ಶಿಷ್ಟಾಚಾರವೆನಿಸಿ ಕೊಂಡಿದೆಯೋ) – ಆ ಕರ್ಮಗಳನ್ನೇ ಮಾಡುತ್ತಾ ಶಾಂತಿಪ್ರಿಯರಾದ ದಾಂತರು (ಜಿತೇಂದ್ರಿಯರು) ಆನಂದಿಸುತ್ತಾರೆ. (ದಾಂತರು ಯಾವಾ ಗಲೂ ಶಿಷ್ಟಾಚಾರಕ್ಕೂ–ಸಂಪ್ರದಾಯಕ್ಕೂ ಮನ್ನಣೆಕೊಟ್ಟು ಅದರಂತೆಯೇ ನಡೆಯುತ್ತಿರುತ್ತಾರೆ.)

ಆದರೆ ದಾಂತರಲ್ಲಿ ಎರಡು ವಿಧ. ಕರ್ಮಾನುಷ್ಠಾನಗಳನ್ನು ಮಾಡುತ್ತಾ, ಶಿಷ್ಟಾಚಾರಗಳನ್ನೂ ಪರಿಪಾಲಿಸಿಕೊಂಡು ಬರುವವರದೊಂದು ಮಾರ್ಗ.

**ನೈಷ್ಕರ್ಮ್ಯಂ ವಾ ಸಮಾಸ್ಥಾಯ ಜ್ಞಾನತೃಪ್ತೋ ಜಿತೇನ್ದ್ರಿಯಃ ।**
**ಕಾಲಾಕಾಂಕ್ಷೀ ಚರಲ್ಲೋಕೇ ಬ್ರಹ್ಮಭೂಯಾಯ ಕಲ್ಪತೇ ॥೨೨॥**

ಜ್ಞಾನತೃಪ್ತನಾದ (ಆತ್ಮಜ್ಞಾನದಿಂದ ಸಂತುಷ್ಟನಾದ) ಜಿತೇಂದ್ರಿಯನಾದ ಪುರುಷನು ಕರ್ಮರಹಿತಮಾರ್ಗದ ಆಶ್ರಯವನ್ನು ಪಡೆದು, ಕಾಲವನ್ನು ಪ್ರತೀಕ್ಷೆಮಾಡುತ್ತಾ ಪ್ರಾಪಂಚಿಕವ್ಯವಹಾರಗಳಲ್ಲಿ ಅನಾಸಕ್ತಿಯನ್ನು ಹೊಂದಿ ದವನಾಗಿ ಪ್ರಪಂಚಪರ್ಯಟನೆಯನ್ನು ಮಾಡುತ್ತಿರುತ್ತಾನೆ. ಅಂತಹವನು ಬ್ರಹ್ಮಭಾವದ ಸಿದ್ಧಿಯನ್ನು ಪಡೆಯಲು ಸಮರ್ಥನಾಗುತ್ತಾನೆ. ಇದು ಎರಡನೆಯ ಮಾರ್ಗ.

**ಶಕುನೀನಾಮಿವಾಕಾಶೇ ಪದಂ ನೈವೋಪಲಭ್ಯತೇ ।**
**ಏವಂ ಪ್ರಜ್ಞಾನತೃಪ್ತಸ್ಯ ಮುನೇರ್ವರ್ತ್ಮ ನ ದೃಶ್ಯತೇ ॥೨೩॥**

ಯಾವ ರೀತಿಯಲ್ಲಿ ಅಂತರಿಕ್ಷದಲ್ಲಿ ಹಾರಾಡುತ್ತಿರುವ ಪಕ್ಷಿಗಳ ಪಾದ ಚಿಹ್ನೆಗಳು ಕಾಣುವುದಿಲ್ಲವೋ–ಅದೇ ರೀತಿಯಲ್ಲಿ ಪ್ರಜ್ಞಾನತೃಪ್ತನಾದ ಆತ್ಮ ದರ್ಶನದ ಆನಂದಾನುಭವಿಯಾದ ಮುನಿಯ ಮಾರ್ಗವು ಗೋಚರವಾಗುವು ದಿಲ್ಲ. (ಅವನು ಹೇಗಿರುತ್ತಾನೆ? ಎಲ್ಲಿರುತ್ತಾನೆ? ಏನು ಮಾಡುತ್ತಾನೆ?– ಎಂಬುದಾವುದನ್ನೂ ಹೇಳುವ ಸಾಧ್ಯತೆಯಿಲ್ಲ.)

**ಉತ್ಸೃಜ್ಯೈವ ಗೃಹಾನ್ಯಸ್ತು ಮೋಕ್ಷಮೇವಾಭಿಮನ್ಯತೇ ।**
**ಲೋಕಾಸ್ತೇಜೋಮಯಾಸ್ತಸ್ಯ ಕಲ್ಪನ್ತೇ ಶಾಶ್ವತಾ ದಿವಿ ॥೨೪॥**

ಯಾವನು ಗೃಹಸ್ಥಾಶ್ರಮವನ್ನು ಪರಿತ್ಯಜಿಸಿ ಅಥವಾ ಗೃಹಸ್ಥನಿಗೆ ಯೋಗ್ಯವಾದ ಮನೆಯನ್ನು ಪರಿತ್ಯಜಿಸಿ ಮೋಕ್ಷವನ್ನು ಪಡೆಯಲೆಂದೇ ಸದಾ

ಪ್ರಯತ್ನಿಸುತ್ತಿರುತ್ತಾನೆಯೋ–ಅಂತಹವನಿಗೆ ಸ್ವರ್ಗದಲ್ಲಿ ಶಾಶ್ವತವಾದ ತೇಜೋಮಯವಾದ ಸ್ಥಾನಗಳು ಪ್ರಾಪ್ತವಾಗುತ್ತವೆ."

೬೩ನೆಯ ಅಧ್ಯಾಯವು ಮುಗಿಯಿತು.

೬೪ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಕೌಟುಂಬಿಕಕಲಹದಿಂದ ಉಂಟಾಗುವ ಹಾನಿಯನ್ನು ವಿದುರನು ವಿವರಿಸಿ ಹೇಳಿದುದು : ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ಧೃತರಾಷ್ಟ್ರನಿಗೆ ಸಲಹೆ ನೀಡಿದುದು

ಪಾರಿಕ್ಷಿತ! ವಿದುರನು ಮುಂದುವರಿದು ಹೇಳುತ್ತಾನೆ :

"ಮಹಾರಾಜ! ಪೂರ್ವಜರಿಂದ ಕೇಳಿದ ಒಂದು ಕಥೆಯನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಒಬ್ಬ ಬೇಡನು ಪಕ್ಷಿಗಳನ್ನು ಹಿಡಿಯುವ ಸಲುವಾಗಿ ಕಾಡಿನಲ್ಲಿ ನೆಲದ ಮೇಲೆ ಬಲೆ ಬೀಸಿದನು. ಆ ಬಲೆಯಲ್ಲಿ ಸಹಚಾರಿಗಳಾದ ಎರಡು ಪಕ್ಷಿಗಳು ಸಿಕ್ಕಿಬಿದ್ದುವು. ಆದರೆ ಅವುಗಳು ಸಾಧಾರಣಪಕ್ಷಿಗಳಂತೆ ವಿಲಿ-ವಿಲಿಗುಟ್ಟುತ್ತಾ ಆ ಬಲೆಯಲ್ಲಿ ಉಳಿದುಕೊಳ್ಳಲಿಲ್ಲ. ಬಲೆಯನ್ನೇ ಎತ್ತಿಕೊಂಡು ಆ ಎರಡು ಪಕ್ಷಿಗಳೂ ಆಕಾಶಕ್ಕೆ ಹಾರಿದುದನ್ನು ಕಂಡು ಖಿನ್ನನಾದ ಬೇಡನು ಅವು ಎತ್ತಕಡೆ ಹಾರಿದರೆ ಅತ್ತಕಡೆಗೇ ಅವುಗಳನ್ನೇ ಅನುಸರಿಸಿ ಧಾವಿಸಿದನು. ಆ ಎರಡು ಪಕ್ಷಿಗಳೂ ಹಾರುತ್ತಾ ಹಾರುತ್ತಾ ಆಶ್ರಮವೊಂದನ್ನು ಹಾದುಹೋದುವು. ಆಗತಾನೇ ಸಂಧ್ಯಾದಿಕ್ರಿಯೆಗಳನ್ನು ಮುಗಿಸಿದ್ದ ಮುನಿಯು–ಪಕ್ಷಿಗಳು ಬಲೆಯೊಡನೆ ಹಾರಿಹೋಗುತ್ತಿರುವುದನ್ನೂ, ಅವನ್ನನುಸರಿಸಿ ಅವುಗಳನ್ನು ಹಿಡಿಯುವ ಸಲುವಾಗಿ ಬೇಡನು ಹಿಂಬಾಲಿಸುತ್ತಿರುವುದನ್ನೂ ನೋಡಿದನು.

ಅಂತರಿಕ್ಷದಲ್ಲಿ ಬಲೆಯೊಡನೆ ಹಾರಿಹೋಗುತ್ತಿದ್ದ ಪಕ್ಷಿಗಳನ್ನನುಸರಿಸಿ ಶೀಘ್ರಾತಿಶೀಘ್ರವಾಗಿ ಓಡಿಯೋಡಿ ಹೋಗುತ್ತಿದ್ದ ಮಹೀಚರನಾದ ಬೇಡನನ್ನು ಮುನಿಯು ಪ್ರಶ್ನಿಸಿದನು :

**ವಿಚಿತ್ರಮಿದಮಾಶ್ಚರ್ಯಂ ಮೃಗಹನ್ಪ್ರತಿಭಾತಿ ಮೇ ।**
**ಪ್ಲವಮಾನೌ ಹಿ ಖಚರೌ ಪದಾತಿರನುಧಾವಸಿ ॥೬॥**

"ಪ್ರಾಣಿಹಂತಕನಾದ ವ್ಯಾಧನೇ! ನಿನ್ನ ಈ ವರ್ತನೆಯು ನನಗೆ ಬಹಳ ವಿಚಿತ್ರವಾಗಿಯೂ ಮತ್ತು ಆಶ್ಚರ್ಯಕರವಾಗಿಯೂ ಕಾಣುತ್ತಿದೆ. ಆಕಾಶದಲ್ಲಿ ಸಂಚಾರಮಾಡಲು ಸಮರ್ಥವಾದ ಆ ಪಕ್ಷಿಗಳು ಯಾವ ವಿಧವಾದ ಅಡ್ಡಿ-ಆತಂಕಗಳೂ ಇಲ್ಲದೇ ಹಾರಿಹಾರಿ ಮುಂದೆ ಹೋಗುತ್ತಿವೆ. ಪದಾತಿಯಾದ ನೀನು ಅವನ್ನು ಅನುಸರಿಸಿ ಹೋಗುತ್ತಿರುವೆ. (ಹಾರಿಹೋಗುತ್ತಿರುವ ಪಕ್ಷಿ



ಗಳನ್ನು ನಡೆದುಹೋಗುತ್ತಿರುವ ನೀನು ಹಿಡಿಯಲು ಸಾಧ್ಯವೇ?– ಎಂಬುದನ್ನಾ ದರೂ ಯೋಚಿಸಬೇಡವೇ?)"

ವ್ಯಾಧನು ಹೇಳುತ್ತಾನೆ :

**ಪಾಶಮೇಕಮುಭಾವೇತೌ ಸಹಿತೌ ಹರತೋ ಮಮ ।**
**ಯತ್ರ ವೈ ವಿವದಿಷ್ಯೇತೇ ತತ್ರ ಮೇ ವಶಮೇಷ್ಯತಃ ॥೮॥**

"ಮುನಿಸತ್ತಮರೇ! ನೀವು ಹೇಳುವುದೇನೋ ನಿಜ. ಆದರೆ ನನ್ನ ಪ್ರಯತ್ನವೂ ಪೂರ್ಣವಾಗಿ ವ್ಯರ್ಥವಾಗಿ ಹೋಗುವುದೆಂಬ ನಿರಾಶೆಯು ನನಗಿಲ್ಲ. ನನ್ನಲ್ಲಿರುವುದು ಇದೊಂದೇ ಬಲೆ. ಎರಡು ಪಕ್ಷಿಗಳೂ ಒಟ್ಟಾಗಿ ಸೇರಿಕೊಂಡು ಬಲೆಯನ್ನೇನೋ ಎತ್ತಿಕೊಂಡು ಹೋಗುತ್ತಿವೆ. ಆದರೆ ಮುಂದೆ ಹೋಗುತ್ತಿದ್ದಂತೆ ಆ ಎರಡು ಪಕ್ಷಿಗಳಲ್ಲಿಯೇ ವಿವಾದವೂ ಉಂಟಾಗಬಹುದು. ಹಾಗೆ ವಿವಾದವುಂಟಾಯಿತೆಂದರೆ ಅವು ನನ್ನ ವಶವಾಗುವುದಂತೂ ನಿಶ್ಚಯ. (ಇದನ್ನು ನಿರೀಕ್ಷಿಸಿಯೇ ನಾನು ಅವುಗಳ ಬೆನ್ನಟ್ಟುತ್ತಿದ್ದೇನೆ.)"

ಮಹಾರಾಜ! ಬೇಡನು ಊಹಿಸಿದ್ದಂತೆಯೇ ನಡೆಯಿತು. ಮೃತ್ಯು ವಶವಾಗಿದ್ದ ಆ ಎರಡು ಪಕ್ಷಿಗಳೂ ಅಂತರಿಕ್ಷದಲ್ಲಿಯೇ ವಿವಾದವನ್ನಾರಂಭಿಸಿ ಬಿಟ್ಟುವು. ಬುದ್ಧಿಹೀನವಾದ ಪಕ್ಷಿಗಳು ಕಚ್ಚಾಡುತ್ತಾ ಭೂಮಿಯ ಮೇಲೆ ಬಿದ್ದುವು. ಬಿದ್ದನಂತರವೂ ಅವುಗಳು ಪರಸ್ಪರವಾಗಿ ಕಚ್ಚಾಟವನ್ನು ನಿಲ್ಲಿಸಲೇ ಇಲ್ಲ. ಮೃತ್ಯುಪಾಶದಿಂದ ನಿಬದ್ಧವಾಗಿದ್ದ ಎರಡು ಪಕ್ಷಿಗಳೂ ಬಹುಕೋಪ ದಿಂದ ಕಚ್ಚಾಡುತ್ತಿದ್ದಾಗ ಬೇಡನು ಅವುಗಳಿಗೆ ತಿಳಿಯದಂತೆ ಮೆಲ್ಲ-ಮೆಲ್ಲನೆ ಬಲೆಯ ಸಮೀಪಕ್ಕೆ ಹೋಗಿ ಎರಡು ಪಕ್ಷಿಗಳನ್ನೂ ಹಿಡಿದುಬಿಟ್ಟನು.

**ಏವಂ ಯೇ ಜ್ಞಾತಯೋಽರ್ಥೇಷು ಮಿಥೋ ಗಚ್ಛನ್ತಿ ವಿಗ್ರಹಮ್ ।**
**ತೇಽಮಿತ್ರವಶಮಾಯಾನ್ತಿ ಶಕುನಾವಿವ ವಿಗ್ರಹಾತ್ ॥೧೦॥**

ಈ ಸಾದೃಶ್ಯವು ಮನುಷ್ಯರಿಗೂ ಅನ್ವಯಿಸುತ್ತದೆ. ಯಾವ ಅಣ್ಣ-ತಮ್ಮಂದಿರು ಐಶ್ವರ್ಯದ ಕಾರಣದಿಂದಾಗಿ ಅಂತರಂಗದಲ್ಲಿ ಪರಸ್ಪರ ದ್ವೇಷ ಭಾವದಿಂದಿರುವರೋ, ಜಗಳವಾಡುತ್ತಾರೆಯೋ–ಅವರೂ ನಾನು ಈ ಹಿಂದೆ ಹೇಳಿದ ಮೂಢಪಕ್ಷಿಗಳಂತೆಯೇ ಶತ್ರುಗಳ ವಶರಾಗುತ್ತಾರೆ.

**ಸಮ್ಭೋಜನಂ ಸಂಕಥನಂ ಸಮ್ಪ್ರಶ್ನೋಽಥ ಸಮಾಗಮಃ ।**
**ಏತಾನಿ ಜ್ಞಾತಿಕಾರ್ಯಾಣಿ ನ ವಿರೋಧಃ ಕದಾಚನ ॥೧೧॥**

ಜೊತೆಯಲ್ಲಿ ಕುಳಿತು ಊಟಮಾಡುವುದು ; ಪರಸ್ಪರವಾಗಿ ಸೌಹಾರ್ದ ದಿಂದ ಮಾತನಾಡುವುದು ; ಪರಸ್ಪರವಾಗಿ ಸುಖ-ದುಃಖಗಳನ್ನು ವಿಚಾರಿಸಿ ತಿಳಿದುಕೊಳ್ಳುವುದು ಮತ್ತು ಪದೇ-ಪದೇ ಒಂದೆಡೆಯಲ್ಲಿ ಸೇರುವುದು–ಇವು

ಗಳು ಅಣ್ಣ-ತಮ್ಮಂದಿರ (ಜ್ಞಾತಿಗಳ) ಮುಖ್ಯಕರ್ತವ್ಯವಾಗಿರುತ್ತದೆ. ತಮ್ಮ-ತಮ್ಮಲ್ಲಿಯೇ ವಿರೋಧವನ್ನು ಮಾತ್ರ ಎಂದಿಗೂ ಮಾಡಿಕೊಳ್ಳ ಬಾರದು.

**ಯೇ ಸ್ಮ ಕಾಲೇ ಸುಮನಸಃ ಸರ್ವೇ ವೃದ್ಧಾನುಪಾಸತೇ ।**
**ಸಿಂಹಗುಪ್ತಮಿವಾರಣ್ಯಮಪ್ರಧೃಷ್ಯಾ ಭವನ್ತಿ ತೇ ॥೧೨॥**

ಶುದ್ಧಮನಸ್ಕರಾದ ಯಾವ ಪುರುಷರು (ಜ್ಞಾತಿಗಳು) ಸದಾ ವೃದ್ಧರ ಸೇವೆಮಾಡುತ್ತಾ ಸಮಯಗಳಲ್ಲಿ ಅವರ ಸಲಹೆಗಳನ್ನು ಪಡೆಯುತ್ತಾ ಇರುತ್ತಾರೆಯೋ–ಅಂತಹವರು ಸಿಂಹದಿಂದ ರಕ್ಷಿತವಾದ ಅರಣ್ಯದಂತೆ–ಶತ್ರುಗಳಿಂದ ಎದುರಿಸಲಾಗದವರಾಗುತ್ತಾರೆ. (ಶತ್ರುಗಳು ಅವರ ಸಮೀಪಕ್ಕೆ ಹೋಗಲೂ ಹಿಂದೆಗೆಯುತ್ತಾರೆ.)

**ಯೇಽರ್ಥಂ ಸಂತತಮಾಸಾದ್ಯ ದೀನಾ ಇವ ಸಮಾಸತೇ ।**
**ಶ್ರಿಯಂ ತೇ ಸಮ್ಪ್ರಯಚ್ಛನ್ತಿ ದ್ವಿಷದ್ಭ್ಯೋ ಭರತರ್ಷಭ ॥೧೩॥**

(ಅಣ್ಣ-ತಮ್ಮಂದಿರಲ್ಲಿಯೇ ಕೆಲವರು ಹೀಗೂ ಮಾಡುವುದುಂಟು. ರಹಸ್ಯದಲ್ಲಿ ಅಪಾರವಾದ ಧನಸಂಗ್ರಹಣೆ ಮಾಡುತ್ತಿದ್ದರೂ ಅರ್ಥದ ಪಿಪಾಸೆಯಿಂದಾಗಿ ತಾವು ಬಹಳ ದರಿದ್ರರೆಂದೇ ಹೇಳಿಕೊಂಡು ತಿರುಗುತ್ತಿರುತ್ತಾರೆ. ತಮ್ಮ ಐಶ್ವರ್ಯವನ್ನು ಹೊರತೆಗೆದುಬಿಟ್ಟರೆ ಉಳಿದವರಿಗೆ ಪಾಲುಕೊಡಬೇಕಾಗುವುದೆನ್ನುವ ಭಯವೂ ಇದಕ್ಕೆ ಕಾರಣವಾಗಿರುತ್ತದೆ. ಅಂತಹವರ ವಿಷಯದಲ್ಲಿ ವಿದುರನು ಹೀಗೆ ಹೇಳುತ್ತಾನೆ.) ಯಾರು ಐಶ್ವರ್ಯವನ್ನು ಸರ್ವದಾ ಪಡೆದುಕೊಳ್ಳುತ್ತಿದ್ದರೂ ದೀನರಾದವರಂತೆ ಅರ್ಥಕ್ಕೇ ಯಾವಾಗಲೂ ಹಾತೊರೆಯುತ್ತಿರುತ್ತಾರೆಯೋ–ಅವರು ತಮ್ಮ ಶತ್ರುಗಳಿಗೆ ಆ ಐಶ್ವರ್ಯವನ್ನೆಲ್ಲಾ ಕೊಟ್ಟುಬಿಡಬೇಕಾಗುತ್ತದೆ. ಐಶ್ವರ್ಯವು ಶತ್ರುವಶವಾಗುತ್ತದೆ.

**ಧೂಮಾಯನ್ತೇ ವ್ಯಪೇತಾನಿ ಜ್ವಲನ್ತಿ ಸಹಿತಾನಿ ಚ ।**
**ಧೃತರಾಷ್ಟ್ರೋಲ್ಮುಕಾನೀವ ಜ್ಞಾತಯೋ ಭರತರ್ಷಭ ॥೧೪॥**

ಮಹಾರಾಜ! ಕಟ್ಟಿಗೆಯದು ಒಂದು ಸ್ವಭಾವವಿದೆ. ಒಲೆಯಲ್ಲಿ ಹಾಕಿದ ಕಟ್ಟಿಗೆಗಳು ಬೇರೆ-ಬೇರೆಯಾಗಿದ್ದರೆ ಅವು ಹೊತ್ತಿ ಉರಿಯುವುದೇ ಇಲ್ಲ. ಹೊಗೆಯಾಡುತ್ತಿರುತ್ತವೆ. ಒಟ್ಟಾಗಿಟ್ಟರೆ ಒಡನೆಯೇ ಆ ಕಟ್ಟಿಗೆ

ಗಳು ಭುಗ್ ಎಂದು ಹೊತ್ತಿಕೊಂಡು ಜಾಜ್ವಲ್ಯಮಾನವಾಗಿ ಉರಿಯಲು ಪ್ರಾರಂಭಿಸುತ್ತವೆ. ಅಣ್ಣ-ತಮ್ಮಂದಿರು ಪ್ರತ್ಯೇಕವಾಗಿಬಿಟ್ಟರೆ ಒಲೆಯಲ್ಲಿರುವ ಬೇರೆ-ಬೇರೆಯಾದ ಕಾಷ್ಠಗಳಂತೆ ಮಸುಕಾಗುತ್ತಾರೆ. ಕಳೆಗುಂದುತ್ತಾರೆ. ಅಣ್ಣ-ತಮ್ಮಂದಿರು ಪರಸ್ಪರಸೌಹಾರ್ದದಿಂದ ಒಟ್ಟಾಗಿದ್ದರೆ ಒಲೆಯಲ್ಲಿರುವ ಕಾಷ್ಠಸಮೂಹದಂತೆ ತೇಜೋವಂತರಾಗುತ್ತಾರೆ.

ಅಲಭ್ಯವಸ್ತುವಿಗೆ ಆಶೆಪಡಬಾರದು–ಎಂಬುದಕ್ಕೆ ನಾನು ಗಂಧಮಾದನ ಪರ್ವತದಲ್ಲಿ ನೋಡಿದ ಮತ್ತೊಂದು ನಿದರ್ಶನವನ್ನು ಹೇಳುತ್ತೇನೆ. ಅದನ್ನೂ ಕೇಳಿ ನಿನಗೆ ಯಾವುದು ಶ್ರೇಯಸ್ಕರವೆನಿಸುವುದೋ ಅದನ್ನು ಮಾಡು, ಧೃತರಾಷ್ಟ್ರ!

ನಾವು ಹಿಂದೊಮ್ಮೆ ಕಿರಾತರಿಂದಲೂ, ದೇವಕಲ್ಪರಾದ ಬ್ರಾಹ್ಮಣರಿಂದಲೂ ಕೂಡಿಕೊಂಡು ಉತ್ತರದಿಕ್ಕಿನಲ್ಲಿರುವ ಶ್ರೇಷ್ಠವಾದ ಗಂಧಮಾದನ ಪರ್ವತಕ್ಕೆ ಹೋಗಿದ್ದೆವು. ನಮ್ಮೊಡನಿದ್ದ ಬ್ರಾಹ್ಮಣರಿಗೆ ಮಂತ್ರ-ತಂತ್ರಾದಿ ವಿದ್ಯೆಗಳಲ್ಲಿಯೂ, ಓಷಧಿಗಳ ವಿಷಯದಲ್ಲಿಯೂ ಹೆಚ್ಚಿನ ಆಸಕ್ತಿಯಿದ್ದಿತು ಮತ್ತು ಅವರು ಅದೇ ವಿಷಯವಾದ ಮಾತುಕತೆಗಳಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವರಾಗಿದ್ದರು. ಅನೇಕಾನೇಕ ಲತೆಗಳ ಪೊದರುಗಳಿಂದ ಗಂಧಮಾದನ ಪರ್ವತವು ಪರಿವೃತವಾಗಿದ್ದಿತು. ಅಲ್ಲಿ ದೇದೀಪ್ಯಮಾನವಾದ ಅನೇಕ ಓಷಧಿಲತೆಗಳಿದ್ದುವು. ಆ ಪರ್ವತವು ಸಿದ್ಧ-ಗಂಧರ್ವರಿಂದಲೂ ಸೇವಿಸಲ್ಪಡುತ್ತಿದ್ದಿತು.

ಯಾರಿಂದಲೂ ಪ್ರವೇಶಿಸಲು ಸಾಧ್ಯವಾಗದ ಪರ್ವತದ ದರಿಯೊಂದರಲ್ಲಿ ನಾವು ಮಧುಕೋಶವೊಂದನ್ನು ನೋಡಿದೆವು. ಅದು ಪೀತವರ್ಣದ್ದಾಗಿದ್ದಿತು. ಕುಂಭಸದೃಶವಾಗಿದ್ದಿತು. ಆದರೆ ಅದು ಜೇನುಹುಳುಗಳಿಂದ ಸಿದ್ಧಪಡಿಸಿದ ಸಾಮಾನ್ಯವಾದ ಮಧುವಾಗಿರಲಿಲ್ಲ. ಆ ಮಧುಕೋಶವು ಪರ್ವತ ಪ್ರಪಾತದಲ್ಲಿದ್ದು ಹೋಗಲು ಬಹುದುಸ್ತರವಾದ ಸ್ಥಳದಲ್ಲಿ ಇಡಲ್ಪಟ್ಟಿದ್ದಿತು. ವಿಷಸರ್ಪಗಳು ಆ ಮಧುಕೋಶವನ್ನು ಸರ್ವದಾ ರಕ್ಷಿಸುತ್ತಿದ್ದುವು. ಕುಬೇರನಿಗೆ ಆ ಮಧುವು ಅತ್ಯಂತಪ್ರಿಯವಾಗಿದ್ದಿತು. ಆ ಮಧುವು ಅತ್ಯಂತ ಮಹತ್ತ್ವಪೂರ್ಣವಾಗಿಯೂ ಇದ್ದಿತು. ಅದನ್ನು ಕುಡಿದರೆ ಮರಣ

ಧರ್ಮವುಳ್ಳ ಮನುಷ್ಯನು ಅಮರನಾಗಿ (ದೇವತೆಯಾಗಿ) ಬಿಡುತ್ತಿದ್ದನು. ಕಣ್ಣಿಲ್ಲದವನು ಕುಡಿದೊಡನೆಯೇ ಅವನಿಗೆ ಕಣ್ಣುಗಳು ಬಂದುಬಿಡುತ್ತಿದ್ದುವು. ಮುದುಕನೇನಾದರೂ ಅದನ್ನು ಕುಡಿದುಬಿಟ್ಟರೆ ಒಡನೆಯೇ ಅವನು ಯುವಕನಾಗಿಬಿಡುತ್ತಿದ್ದನು. ಇದೇ ವಿಷಯವನ್ನು ನಮ್ಮೊಡನೆ ಬಂದಿದ್ದ ಯಂತ್ರ-ಮಂತ್ರಸಾಧಕರಾದ ಬ್ರಾಹ್ಮಣರೂ ಹೇಳಿದರು. ಮಧುವಿನ ಪರಮಾದ್ಭುತವಾದ ಸಾಮರ್ಥ್ಯವನ್ನು ಕೇಳಿ ಮತ್ತು ಅದನ್ನು ಪ್ರತ್ಯಕ್ಷವಾಗಿ ನೋಡಿ, ನಮ್ಮೊಡನೆ ಬಂದಿದ್ದ ಕಿರಾತರು ಮಧುಕೋಶವನ್ನು ಪಡೆದುಕೊಳ್ಳಬೇಕೆಂಬ ಆಸೆಯಿಂದ ಯಾರಿಂದಲೂ ಹೋಗಲು ಸಾಧ್ಯವಾಗದ ಪ್ರಾಣಾಪಹಾರಕವಾದ ಪರ್ವತಪ್ರಪಾತವನ್ನೂ ಸಹ ನಿರ್ಲಕ್ಷಿಸಿ ಮುಂದೆಹೋದರು. ಇನ್ನೇನು ಮಧುಕೋಶವು ಸಿಕ್ಕಿಬಿಡುವುದೆಂದಿದ್ದಾಗ ಕಾಲುಜಾರಿ ದುರ್ಗಮವಾದ ಪರ್ವತಕಂದರದಲ್ಲಿ ಬಿದ್ದು ಪ್ರಾಣತೊರೆದರು.

**ತಥೈವ ತವ ಪುತ್ರೋಽಯಂ ಪೃಥಿವೀಮೇಕ ಇಚ್ಛತಿ ।**
**ಮಧು ಪಶ್ಯತಿ ಸಮ್ಮೋಹಾತ್ಪ್ರಪಾತಂ ನಾನುಪಶ್ಯತಿ ॥೨೨॥**

ಅದೇ ರೀತಿಯಲ್ಲಿ ನಿನ್ನ ಮಗನೂ ಕೂಡ ಅಖಂಡಭೂಮಂಡಲಕ್ಕೂ ತಾನೊಬ್ಬನೇ ಅಧಿಪತಿಯಾಗಬೇಕೆಂದು ಆಶಿಸುತ್ತಿದ್ದಾನೆ. ಮೋಹಪರವಶನಾಗಿರುವ ಇವನು ಕೇವಲ ಮಧುಕೋಶವನ್ನು ಕಾಣುತ್ತಿದ್ದಾನೆಯೇ ಹೊರತು ಕೆಳಗಿರುವ ಪ್ರಪಾತವನ್ನು ಕಾಣುತ್ತಿಲ್ಲ. ಯುದ್ಧದಲ್ಲಿ ಸವ್ಯಸಾಚಿಯೊಡನೆ ಯುದ್ಧಮಾಡುವ ಉತ್ಕಟೇಚ್ಛೆಯು ನಿನ್ನ ಮಗನಾದ ದುರ್ಯೋಧನನಿಗಿರುವುದು. ಆದರೆ ಮಹಾಧನುಷ್ಮಂತನಾದ ಅರ್ಜುನನೊಡನೆ ಯುದ್ಧಮಾಡಲು ಇರಬೇಕಾದ ತೇಜಸ್ಸನ್ನಾಗಲೀ–ಪರಾಕ್ರಮವನ್ನಾಗಲೀ ನಾನಿವನಲ್ಲಿ ಕಾಣುತ್ತಿಲ್ಲ. ರಥದಲ್ಲಿ ಒಬ್ಬನೇ ಕುಳಿತು ಈ ಅಖಂಡಪೃಥ್ವಿಯನ್ನೂ ಜಯಿಸಿ ಬಂದಿರುವ ಮಹಾಶೂರನವನು. ಗೋಹರಣಕ್ಕಾಗಿ ಭೀಷ್ಮ-ದ್ರೋಣ-ಕರ್ಣರೇ ಮೊದಲಾದ ಮಹಾಶೂರರೆಲ್ಲರೂ ವಿರಾಟನಗರಕ್ಕೆ ಹೋಗಿದ್ದರು. ಅಲ್ಲಿ ಅರ್ಜುನನೊಬ್ಬನನ್ನೇ ಎದುರಿಸಲಾರದೇ ಎಲ್ಲರೂ ಬಹಳ ಸಂತ್ರಸ್ತರಾಗಿ ಹೋದರು. ಸೈನಿಕರು ಭಗ್ನರಾಗಿ ಹೋದರು. ಅನೇಕರು ಪ್ರಾಣವುಳಿಸಿಕೊಳ್ಳಲು ಯುದ್ಧಭೂಮಿಯಿಂದ ಓಡಿಹೋಗತೊಡಗಿದರು. ಅಲ್ಲೇನು ನಡೆಯಿತೆಂಬುದು ನಿನಗೆ ಪೂರ್ಣವಾಗಿ ತಿಳಿದಿದೆ. ಅರ್ಜುನನು ಮಹಾ

ಪರಾಕ್ರಮಿಯೆಂಬುದನ್ನು ನೀನು ಇದರಿಂದಲೇ ತಿಳಿದುಕೊಳ್ಳಬಹುದಾಗಿದೆ. ಅರ್ಜುನನ ಪರಾಕ್ರಮದ ವಿಷಯದಲ್ಲಿ ಇದಕ್ಕಿಂತಲೂ ಹೆಚ್ಚಿನ ನಿದರ್ಶನವು ಬೇಕಾಗಿಲ್ಲ. ಆದರೆ ಆ ಮಹಾವೀರನು ಈಗಲೂ ನಿನ್ನ ಮೈತ್ರೀಪೂರ್ಣವಾದ ಕಟಾಕ್ಷವನ್ನೇ ಪ್ರತೀಕ್ಷಿಸುತ್ತಿದ್ದಾನೆ. ಈ ಕಾರಣದಿಂದಲೇ ಅವನು ಇದುವರೆಗೂ ನಿನ್ನ ಮಕ್ಕಳು ಮಾಡಿದ ಅಪರಾಧಗಳೆಲ್ಲವನ್ನೂ ಕ್ಷಮಿಸುತ್ತಲೇ ಬಂದಿದ್ದಾನೆ. ದ್ರುಪದ, ಮತ್ಸ್ಯರಾಜನಾದ ವಿರಾಟ ಮತ್ತು ಸಂಕ್ರುದ್ಧನಾದ ಧನಂಜಯ ಇವರು–ಗಾಳಿಯ ಸಹಾಯವನ್ನು ಪಡೆದ ಮೂರು ಅಗ್ನಿಗಳಂತೆ–ಸಮರಾಂಗಣದಲ್ಲಿ ಜಾಜ್ವಲ್ಯಮಾನರಾಗಿ ಪ್ರಕಾಶಿಸುತ್ತಾ ಒಬ್ಬ ಯೋಧನನ್ನೂ ಉಳಿಸುವುದಿಲ್ಲ. (ಕಾಡುಗಿಚ್ಚು ಗಾಳಿಯ ಸಹಾಯದಿಂದ ಸಂಪೂರ್ಣವಾಗಿ ಅರಣ್ಯವನ್ನೇ ನಾಶಮಾಡಿಬಿಡುವಂತೆ–ಈ ಮೂವರೂ ನಿನ್ನ ಸೇನೆಯನ್ನು ನಿರ್ನಾಮಮಾಡುತ್ತಾರೆ.)

**ಅಙ್ಕೇ ಕುರುಷ್ವ ರಾಜಾನಂ ಧೃತರಾಷ್ಟ್ರ ಯುಧಿಷ್ಠಿರಮ್ ।**
**ಯುಧ್ಯತೋರ್ಹಿ ದ್ವಯೋರ್ಯುದ್ಧೇ ನೈಕಾನ್ತೇನ ಭವೇಜ್ಜಯಃ ॥**

ಧೃತರಾಷ್ಟ್ರ! ಯುಧಿಷ್ಠಿರನನ್ನು ನಿನ್ನ ತೊಡೆಯ ಮೇಲೆ ಕುಳ್ಳಿರಿಸಿಕೋ. (ಮಕ್ಕಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಲಾಲಿಸುವಂತೆ ಅಭಿಮಾನದಿಂದ ಕಾಣು.) ಉಭಯಪಕ್ಷದವರೂ ಯುದ್ಧಮಾಡುವಾಗ ಎರಡು ಪಕ್ಷಗಳಿಗೂ ಜಯವೆಂಬುದು ಸಾಧ್ಯವಾಗದಲ್ಲವೇ? (ವಿಜಯದಲ್ಲಿ ಸಂಶಯವಿರುವಾಗ ಸಂಧಿಯೇ ಶ್ರೇಯಸ್ಕರವಾದುದು.)"

೬೪ನೆಯ ಅಧ್ಯಾಯವು ಮುಗಿಯಿತು.

೬೫ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ದುರ್ಯೋಧನನಿಗೆ ಧೃತರಾಷ್ಟ್ರನ ಬುದ್ಧಿವಾದ

ಮಹಾರಾಜ! ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು ಹೇಳುತ್ತಾನೆ :

"ನಾನು ಹೇಳುವುದನ್ನು ಗಮನವಿಟ್ಟು ಕೇಳು, ಮಗು! ದಾರಿಯನ್ನೇ ತಿಳಿಯದ ಪ್ರಯಾಣಿಕನಂತೆ (ದಾರಿಯನ್ನೇ ತಿಳಿಯದೇ ಯಾವುದೋ ತಪ್ಪುದಾರಿಯನ್ನು ಹಿಡಿದು ಹೋಗುತ್ತಿರುವ ದಾರಿಹೋಕನಂತೆ) ಕುತ್ಸಿತ

ಮಾರ್ಗವನ್ನು ಹಿಡಿದು ಹೋಗುತ್ತಿರುವ ನೀನು ಅದನ್ನೇ ಸುಮಾರ್ಗವೆಂಬುದಾಗಿ ಭಾವಿಸಿಬಿಟ್ಟಿರುವೆ. (ದಾರಿತಪ್ಪಿದ ದಾರಿಹೋಕನು ತಾನು ಹೋಗುತ್ತಿರುವುದು ಸರಿಯಾದ ದಾರಿಯಲ್ಲವೆಂಬುದನ್ನು ಮನಗಾಣದಿದ್ದರೆ ಮುಂದೆ ಮುಂದೆ ಹೋಗುತ್ತಾ ಕಷ್ಟದಲ್ಲಿ ಸಿಕ್ಕಿಬೀಳುವಂತೆ–ನೀನೂ ಈಗ ಹೋಗುತ್ತಿರುವ ಮಾರ್ಗವು ಸರಿಯಲ್ಲವೆಂಬುದನ್ನು ಅರಿತುಕೊಳ್ಳದಿದ್ದರೆ ಆಪತ್ತಿಗೊಳಗಾಗುವೆ.)

ನೀನು ಕುತ್ಸಿತಮಾರ್ಗದಲ್ಲಿ ಹೋಗುತ್ತಿರುವೆಯೆಂಬುದಕ್ಕೆ–ಲೋಕವನ್ನೇ ಧರಿಸಿರುವ ಪಂಚಮಹಾಭೂತಗಳಿಗೆ ಅನುರೂಪರಾಗಿರುವ ಪಂಚಪಾಂಡವರ ತೇಜಸ್ಸನ್ನು ಅಪಹರಿಸಬೇಕೆಂಬ ನಿನ್ನ ದುರಾಶಯವೇ ನಿದರ್ಶನವಾಗಿದೆ. (ಅವರ ತೇಜಸ್ಸನ್ನು ಅಪಹರಿಸಲು ಯತ್ನಿಸಿರುವುದರಿಂದಲೇ ನೀನು ಹಾದಿಬಿಟ್ಟು ಕೆಟ್ಟದಾರಿಯಲ್ಲಿ ಹೋಗುತ್ತಿರುವೆಯೆಂದು ಹೇಳಬಹುದಾಗಿದೆ.) ಪರಮಧಾರ್ಮಿಕನಾದ ಧರ್ಮರಾಜನನ್ನು ಜಯಿಸಲಿಚ್ಛಿಸುತ್ತಿರುವೆ. ಆದರೆ ನೀನು ಸಾಯುವೆಯೇ ಹೊರತು ಧರ್ಮರಾಜನನ್ನು ಜಯಿಸುವುದಿಲ್ಲ.

ದುರ್ಯೋಧನ! ಚಂಡಮಾರುತವು ಮಹಾವೃಕ್ಷಗಳನ್ನು ಬುಡಮೇಲಾಗಿ ಮಾಡುವ ಕಾರಣದಿಂದ ಅವುಗಳನ್ನು ಭಯಪಡಿಸುವುದೆಂಬುದು (ಅವುಗಳಿಗೆ ಭಯವನ್ನುಂಟುಮಾಡುವುದು ಎಂಬುದು) ಸ್ವಾಭಾವಿಕೋಕ್ತಿಯಾಗಿದೆ. ಆದರೆ ನಿನ್ನ ಚರ್ಯೆಯನ್ನು ನೋಡಿದರೆ ವೃಕ್ಷವೇ ಚಂಡಮಾರುತವನ್ನು ಭಯಪಡಿಸುವ ರೀತಿಯಾಗಿದೆ. ಯಾವನ ಬಲಕ್ಕೆ ಸಮಾನವಾದ ಬಲವು ಈ ವಿಶ್ವದಲ್ಲಿಯೇ ಮತ್ತಾರಲ್ಲಿಯೂ ಇಲ್ಲವೋ–ಅಂತಹ ಕುಂತೀಪುತ್ರನಾದ, ರಣಾಂಗಣದಲ್ಲಿ ಯಮಪ್ರಾಯನಾಗಿ ಕಾಣುವ ಭೀಮಸೇನನನ್ನು ನೀನು ಭಯಪಡಿಸುತ್ತಿರುವೆ. ಇದನ್ನು ನೋಡಿದರೆ ವೃಕ್ಷವೇ ಚಂಡಮಾರುತವನ್ನು ಭಯಪಡಿಸುತ್ತಿರುವ ಸಾದೃಶ್ಯವು ಕಾಣುತ್ತದೆ. ಪರ್ವತಗಳಲ್ಲಿ ಮೇರುಪರ್ವತವು ಶ್ರೇಷ್ಠವಾದುದೆಂದು ಪರಿಗಣಿತವಾಗಿರುವಂತೆ–ಶಸ್ತ್ರಧಾರಿಗಳಲ್ಲಿ ಶ್ರೇಷ್ಠತಮನಾದವನೆಂದು ಪ್ರಸಿದ್ಧನಾಗಿರುವ ಗಾಂಡೀವಧನುರ್ಧರನಾದ ಅರ್ಜುನನೊಡನೆ ಬುದ್ಧಿವಂತನಾದ ಯಾವ ಯೋಧನು ತಾನೇ ಯುದ್ಧ ಮಾಡಲಿಚ್ಛಿಸುತ್ತಾನೆ? ದೇವರಾಜನಾದ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸುವಂತೆ–ಶತ್ರುಗಳ ಮಧ್ಯದಲ್ಲಿ ನಿಶಿತವಾದ ಶಸ್ತ್ರಾಸ್ತ್ರಗಳನ್ನು

ಪ್ರಯೋಗಿಸುತ್ತಾ ಪಾಂಚಾಲದೇಶೀಯನಾದ ಧೃಷ್ಟದ್ಯುಮ್ನನೀಗ ಯಾವ ಮಹಾವೀರನನ್ನು ತಾನೇ ಸಂಹರಿಸದಿದ್ದಾನು? ದುರ್ಧರ್ಷನಾದ ಸಾತ್ಯಕಿಯು ಅಂಧಕ-ವೃಷ್ಣಿಗಳಲ್ಲಿಯೇ ಬಹುಮಾನ್ಯನಾದ ಯೋಧನಾಗಿರುತ್ತಾನೆ. ಪಾಂಡವರ ಹಿತದಲ್ಲಿಯೇ ಸರ್ವದಾ ನಿರತನಾಗಿರುವ ಸಾತ್ಯಕಿಯು ನಿನ್ನ ಸೇನೆಯನ್ನು ಧ್ವಂಸಮಾಡಿಬಿಡುತ್ತಾನೆ. ಅದೂ ಅಲ್ಲದೇ, ದುರ್ಯೋಧನ! ಯಾವನಿಗೆ ಸಮಾನರು ತ್ರಿಭುವನಗಳಲ್ಲಿಯೇ ಇಲ್ಲವೋ, ಯಾವನು ಅಪ್ರಮೇಯನೋ–ಅಂತಹ ಪುಂಡರೀಕಾಕ್ಷನಾದ ಶ್ರೀಕೃಷ್ಣನೊಡನೆ ಬುದ್ಧಿವಂತನಾದ ಯಾವ ಯೋಧನು ತಾನೇ ಯುದ್ಧಮಾಡುವನು? ಶ್ರೀಕೃಷ್ಣನು ಅರ್ಜುನನ ಮೇಲಿಟ್ಟಿರುವ ಪ್ರೇಮವು ಅನುಪಮವಾದುದು.; ಅಪ್ರಮೇಯವಾದುದು.

**ಏಕತೋ ಹ್ಯಸ್ಯ ದಾರಾಶ್ಚ ಜ್ಞಾತಯಶ್ಚ ಸಬಾನ್ಧವಾಃ ।**
**ಆತ್ಮಾ ಚ ಪೃಥಿವೀ ಚೇಯಮೇಕತಶ್ಚ ಧನಂಜಯಃ ॥೯॥**

ಶ್ರೀಕೃಷ್ಣನು ಅರ್ಜುನನ ಮೇಲಿಟ್ಟಿರುವ ಪ್ರೀತಿಯನ್ನು ತುಲನೆಮಾಡಬಹುದಾದರೆ–ಶ್ರೀಕೃಷ್ಣನ ಭಾರ್ಯೆಯರು, ಬಂಧುಸಮೇತರಾದ ಜ್ಞಾತಿಗಳು, ಸ್ವಯಂ ಶ್ರೀಕೃಷ್ಣ ಮತ್ತು ಪೃಥಿವೀ–ಇವರು ಒಂದು ಕಡೆ ಇದ್ದರೆ ಇವರಿಗೆ ಸರಿಸಮನಾಗಿ ಮತ್ತೊಂದು ಕಡೆ ಧನಂಜಯನಿದ್ದಾನೆ. (ಅರ್ಜುನನಿಗಾಗಿ ಶ್ರೀಕೃಷ್ಣನು ಸರ್ವಸ್ವವನ್ನೂ ತ್ಯಾಗಮಾಡಿಯಾನು.)

**ವಾಸುದೇವೋಽಪಿ ದುರ್ಧರ್ಷೋ ಯತಾತ್ಮಾ ಯತ್ರ ಪಾಣ್ಡವಃ ।**
**ಅವಿಷಹ್ಯಂ ಪೃಥಿವ್ಯಾಪಿ ತದ್ಬಲಂ ಯತ್ರ ಕೇಶವಃ ॥೧೦॥**

ಜಿತೇಂದ್ರಿಯನಾದ ಪಾಂಡವನು (ಅರ್ಜುನನು) ಎಲ್ಲಿರುವನೋ ಅಲ್ಲಿ ದುರ್ಧರ್ಷನಾದ ವಾಸುದೇವನೂ ಇರುತ್ತಾನೆ. ಯಾವ ಸೇನೆಯ ಮಧ್ಯದಲ್ಲಿ ಶ್ರೀಕೃಷ್ಣನು ವಿರಾಜಮಾನನಾಗಿರುತ್ತಾನೆಯೋ–ಆ ಸೇನೆಯೂ ಈ ಭೂಮಂಡಲದಲ್ಲಿಯೇ ಜಯಿಸಲಾಗದ ಸೇನೆಯಾಗುತ್ತದೆ.

ಮಗು! ನೀನು, ನಿನಗೆ ಹಿತವನ್ನೇ ಹೇಳುವ ಸತ್ಪುರುಷರಾದ, ಸುಹೃದರ ಮಾತನ್ನೇ ಅವಲಂಬಿಸು. ವೃದ್ಧನಾದ, ಪಿತಾಮಹನಾದ,

ಶಾಂತನುವಿನ ಮಗನಾದ ಭೀಷ್ಮನ ಮಾತನ್ನು ಕೇಳು. ನಾನೂ ಕೂಡ ಕುರುರಾಜಕುಮಾರರಿಗೆ ಹಿತಕರವಾದ ಮಾತುಗಳನ್ನೇ ಹೇಳುವವನಾಗಿದ್ದೇನೆ. ನನ್ನ ಮಾತುಗಳನ್ನೂ ಕೇಳು. ದ್ರೋಣರು, ಕೃಪರು, ವಿಕರ್ಣ, ಮಹಾ ರಾಜನಾದ ಬಾಹ್ಲಿಕ–ಇವರೆಲ್ಲರೂ ನಿನ್ನ ಹಿತೈಷಿಗಳೇ ಆಗಿರುತ್ತಾರೆ. ಇವ ರನ್ನೂ, ನನ್ನನ್ನು ಗೌರವಿಸುವಂತೆಯೇ ಗೌರವಿಸು. ಇವರನ್ನೂ ನನ್ನಂತೆಯೇ ನಿನ್ನ ಹಿತೈಷಿಗಳೆಂದೇ ಭಾವಿಸು. ನಾನು ಹೇಳಿರುವ ಈ ಎಲ್ಲರೂ ಧರ್ಮಜ್ಞರಾಗಿರುತ್ತಾರೆ. ಇವರಿಗೆ ಯಾರೊಬ್ಬರ ಮೇಲೂ ಪಕ್ಷಪಾತವಿಲ್ಲ. ಎರಡು ಪಕ್ಷದವರನ್ನೂ ಸ್ನೇಹದಿಂದ ಕಾಣುತ್ತಾರೆ.

ಎರಡು ಪಕ್ಷಗಳ ಬಲಾಬಲಗಳನ್ನೂ ಸಂಪೂರ್ಣವಾಗಿ ವಿವೇಚಿಸದೇ ನಾನು ಈ ಮಾತನ್ನಾಡುತ್ತಿಲ್ಲ. ಮಗು! ಅಜೇಯರಾದ ನಿನ್ನ ತಮ್ಮಂದಿ ರನ್ನು ಮುಂದುಮಾಡಿಕೊಂಡು ಅಪಾರವಾದ ಸೇನೆಯು ವಿರಾಟನಗರಕ್ಕೆ ಗೋಗ್ರಹಣಕ್ಕಾಗಿ ಧಾವಿಸಿತು. ಆದರೆ ನಿನ್ನ ಸಮಕ್ಷದಲ್ಲಿಯೇ ನಿನ್ನ ಅಪಾರ ವಾದ ಸೇನೆಯು ಗೋವುಗಳನ್ನು ಬಿಟ್ಟು ಭಯದಿಂದ ಪಲಾಯನಮಾಡಬೇಕಾ ಯಿತು. ಅದೇ ವಿರಾಟನಗರಿಯಲ್ಲಿಯೇ ಅನೇಕ ಮಹಾಯೋಧರನ್ನೆದುರಿಸಿ ಒಬ್ಬನೇ ಒಬ್ಬ ವೀರನು ನಿಂತು ಯುದ್ಧಮಾಡಿದನು ಮತ್ತು ಎಲ್ಲ ಮಹಾ ಯೋಧರನ್ನು ಪರಾಜಯಗೊಳಿಸಿದನು–ಎಂಬ ವಾರ್ತೆಯೂ ಕೇಳಿಬಂದಿತು. ದುರ್ಯೋಧನ! ಅರ್ಜುನನ ಪ್ರಾಬಲ್ಯಕ್ಕೂ ಮತ್ತು ಅವನ ಅಜೇಯತ್ವಕ್ಕೂ ಅದೊಂದೇ ನಿದರ್ಶನವು ಸಾಕಾಗಿದೆ. ಅರ್ಜುನನೊಬ್ಬನೇ ನಿನ್ನ ಕಡೆಯ ಯೋಧಪ್ರಮುಖರನ್ನೂ ಮಹಾಸೇನೆಯನ್ನೂ ಎದುರಿಸಿ ನಿಂತು ಅದ್ಭುತವಾದ ರೀತಿಯಲ್ಲಿ ಯುದ್ಧಮಾಡಿ ನಿನ್ನನ್ನು ಪರಾಜಯಗೊಳಿಸಿದನು. ಅವರೈವರೂ ಒಟ್ಟಾಗಿ ಸೇರಿಕೊಂಡು ನಿನ್ನ ಮೇಲೆ ಯುದ್ಧಮಾಡುವುದಾದರೆ ಅದರ ಪರಿಣಾಮವೇನಾಗಬಹುದು? ಆದುದರಿಂದ ಅವರೊಡನೆ ಯುದ್ಧಮಾಡ ಬೇಕೆನ್ನುವ ಚಾಪಲ್ಯವನ್ನು ಬಿಟ್ಟುಬಿಡು. ಪಾಂಡವರನ್ನೂ ನಿನ್ನ ಸಹೋದರ ರೆಂದೇ ಭಾವಿಸು. ಅವರದೇ ಆಗಿರುವ ಅರ್ಧರಾಜ್ಯವನ್ನು ಪುನಃ ಅವರಿಗೆ ಕೊಡುವ ಸದ್ವೃತ್ತಿಯಿಂದ ನಿನ್ನ ಭ್ರಾತೃಭಾವವನ್ನು ಪ್ರಕಟಪಡಿಸು. (ಇದರಿಂದ ಮಾತ್ರವೇ ನಿನಗೆ ಶ್ರೇಯಸ್ಸುಂಟಾಗುವುದು.)”

೬೫ನೆಯ ಅಧ್ಯಾಯವು ಮುಗಿಯಿತು.

೬೬ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ)

## ಸಂಜಯನು ಧೃತರಾಷ್ಟ್ರನಿಗೆ ಅರ್ಜುನನ ಸಂದೇಶವನ್ನು ತಿಳಿಸಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಮಹಾರಾಜ! ಧೃತರಾಷ್ಟ್ರನು ಮಗನಿಗೆ ಈ ರೀತಿಯಲ್ಲಿ ಬುದ್ಧಿವಾದವನ್ನು ಹೇಳಿದನಂತರ ಸಂಜಯನನ್ನು ಪುನಃ ಪ್ರಶ್ನಿಸಿದನು :

"ಸಂಜಯ! ವಾಸುದೇವನು ಸಂದೇಶವಿತ್ತನಂತರ ಏನಾಯಿತು? ಆ ಸಮಯದಲ್ಲಿ ಅರ್ಜುನನು ಯಾವ ಮಾತನಾಡಿದನೆಂಬುದನ್ನು ಕೇಳಲು ನನಗೆ ಬಹಳ ಕೌತೂಹಲವಾಗಿದೆ. ಅರ್ಜುನನ ಸಂದೇಶವೇನೆಂಬುದನ್ನು ಹೇಳು, ಸಂಜಯ!"

"ಮಹಾರಾಜ! ವಾಸುದೇವನು ಹೇಳಿದ ಮಾತನ್ನು ಕೇಳಿದನಂತರ ದುರ್ಧರ್ಷನಾದ, ಕುಂತಿಯ ಮಗನಾದ ಧನಂಜಯನು ಶ್ರೀಕೃಷ್ಣನೂ ಕೇಳುತ್ತಿರುವಂತೆಯೇ ಸಮಯೋಚಿತವಾದ ಈ ಮಾತುಗಳನ್ನು ಹೇಳಿದನು :

'ಸಂಜಯ! ಪಿತಾಮಹನಾದ ಭೀಷ್ಮ, ಧೃತರಾಷ್ಟ್ರ, ದ್ರೋಣರು, ಕೃಪರು, ಕರ್ಣ, ಮಹಾರಾಜನಾದ ಬಾಹ್ಲಿಕ, ಅಶ್ವತ್ಥಾಮಾ, ಸೋಮದತ್ತ, ಸುಬಲಪುತ್ರನಾದ ಶಕುನಿ, ದುಃಶಾಸನ, ಶಲ, ಪುರುಮಿತ್ರ, ವಿವಿಂಶತಿ, ವಿಕರ್ಣ, ಚಿತ್ರಸೇನ, ರಾಜಾ ಜಯತ್ಸೇನ, ಅವಂತೀದೇಶದ ರಾಜಕುಮಾರರಾದ ವಿಂದಾನುವಿಂದರು, ಕೌರವಪ್ರಮುಖನಾದ ದುರ್ಮುಖ, ಸಿಂಧುರಾಜನಾದ ಜಯದ್ರಥ, ದುಃಸಹ, ಭೂರಿಶ್ರವಸ, ರಾಜಾ ಭಗದತ್ತ, ಭೂಪಾಲನಾದ ಜಲಸಂಧ–ಇವರನ್ನೇ ಅಲ್ಲದೇ ಕೌರವರಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ ಪ್ರಜ್ವಲಿಸುತ್ತಿರುವ ಪಾಂಡವಾಗ್ನಿಯಲ್ಲಿ ಭಸ್ಮವಾಗಲು ದುರ್ಯೋಧನನಿಂದ ಆಹ್ವಾನಿತರಾಗಿ ಬಂದಿರುವ (ದುರ್ಯೋಧನನು ಹೋಮ ಮಾಡಲು ಕರೆತಂದಿರುವ) ರಾಜರೆಲ್ಲರನ್ನೂ ನೀನು ಸಂಧಿಸಿ, ನನ್ನ ನಮಸ್ಕಾರಗಳನ್ನೂ ಮತ್ತು ಕುಶಲವನ್ನೂ ಯಥಾಯೋಗ್ಯವಾಗಿ ನನ್ನ ಪರವಾಗಿ ಅವರಿಗೆ ಸಲ್ಲಿಸಬೇಕು. ಅನಂತರದಲ್ಲಿ ಆ ರಾಜರ ಮಧ್ಯದಲ್ಲಿ ಉಪವಿಷ್ಟನಾಗಿರುವ, ಪಾಪಿಷ್ಠರಲ್ಲಿ ಅಗ್ರಗಣ್ಯನಾದ, ಮಹಾಕೋಪಿಷ್ಠನಾದ, ದುರ್ಮತಿ

ಯಾದ, ಪಾಪಾತ್ಮನಾದ, ಅತ್ಯಂತಲೋಭಿಯಾದ, ಮಿತ್ರರಿಂದಲೂ ಅಮಾತ್ಯರಿಂದಲೂ ಸಹಿತನಾದ ರಾಜಕುಮಾರನಾದ ದುರ್ಯೋಧನನಿಗೆ ನಾನೀಗ ಹೇಳಲಿರುವ ಮಾತುಗಳನ್ನು ಸ್ಪಷ್ಟವಾಗಿ ಯಥಾವತ್ತಾಗಿ ಹೇಳಬೇಕು.' ಈ ರೀತಿಯಾಗಿ ನನಗೆ ಅನುಶಾಸನಮಾಡಿ ಕೆಂಪಾದ ಅಂಚುಗಳುಳ್ಳ ವಿಶಾಲವಾದ ಕಣ್ಣುಗಳಿಂದ ಕೂಡಿದ್ದ ಪಾರ್ಥನು ವಾಸುದೇವನನ್ನು ನೋಡಿ ಧರ್ಮಾರ್ಥಯುಕ್ತವಾದ ಈ ಮಾತುಗಳನ್ನು ಹೇಳಿದನು :

"ಸಂಜಯ! ಮಧುವಂಶಪ್ರಮುಖನಾದ, ವೀರನಾದ, ಮಹಾತ್ಮನಾದ ಶ್ರೀಕೃಷ್ಣನು ಏಕಾಗ್ರಚಿತ್ತನಾಗಿ ನಿನ್ನೊಡನೆ ಯಾವ ಮಾತುಗಳನ್ನಾಡಿದನೋ–ಆ ಎಲ್ಲ ಮಾತುಗಳನ್ನೂ ನೀನು ಕೇಳಿರುವೆ ಮತ್ತು ಅದೇ ಮಾತುಗಳನ್ನು ಯಥಾವತ್ತಾಗಿ ಕೌರವಸಭೆಯಲ್ಲಿ ಹೇಳಲಿರುವೆ. ಅದೇ ರೀತಿಯಲ್ಲಿ–ಎಲ್ಲ ಕಡೆಗಳಿಂದಲೂ ದುರ್ಯೋಧನನ ಸಹಾಯಾರ್ಥವಾಗಿ ಆಗಮಿಸಿರುವ ಸಕಲಕ್ಷಿತಿಪಾಲರ ಸಮ್ಮುಖದಲ್ಲಿ ನಾನು ಹೇಳಲಿರುವ ಈ ಮಾತುಗಳನ್ನೂ ಶ್ರೀಕೃಷ್ಣನ ಸಂದೇಶವನ್ನು ಆ ಮಹಾಸಭೆಯಲ್ಲಿ ಸಾರಿ ಹೇಳುವಂತೆಯೇ ಸಾರಿ ಹೇಳಬೇಕು :

ಶರಾಗ್ನಿಧೂಮೇ ರಥನೇಮಿನಾದಿತೇ
ಧನುಃಸ್ರುವೇಣಾಸ್ತ್ರಬಲಪ್ರಸಾರಿಣಾ ।
ಯಥಾ ನ ಹೋಮಃ ಕ್ರಿಯತೇ ಮಹಾಮೃಧೇ
ಸಮೇತ್ಯ ಸರ್ವೇ ಪ್ರಯತಧ್ವಮಾದೃತಾಃ ॥೧೩॥

"ಎಲೈ ರಾಜರೇ! ಮಹಾಯುದ್ಧವೆಂಬ ಮಹಾಯಜ್ಞದಲ್ಲಿ ಬಾಣಗಳ ಪರಸ್ಪರಸಂಘರ್ಷಣೆಯಿಂದ ಅಗ್ನಿಯೂ ಮತ್ತು ಧೂಮವೂ ಉತ್ಪನ್ನವಾಗುತ್ತವೆ. ಅತ್ತಿಂದಿತ್ತ ರಭಸದಿಂದ ಓಡಾಡುವ ರಥನೇಮಿಗಳ ಶಬ್ದವೇ ಯುದ್ಧವೆಂಬ ಈ ಮಹಾಯಜ್ಞಕ್ಕೆ ಮಂತ್ರಘೋಷಪ್ರಾಯವಾಗಿರುತ್ತದೆ. ಶಾಸ್ತ್ರಾಧಾರದಂತೆ ಸ್ರುವದಿಂದ ಹೋಮಮಾಡಲ್ಪಡುವ ಯಜ್ಞದೋಪಾದಿಯಲ್ಲಿ ಈ ಯುದ್ಧಮಹಾಯಜ್ಞವು ಅಸ್ತ್ರಗಳನ್ನು ಸುರಿಸುವ ಧನುಸ್ಸೆಂಬ ಸ್ರುವದಿಂದ ಕೂಡಿದುದಾಗಿರುತ್ತದೆ. ಆ ಯುದ್ಧಮಹಾಯಜ್ಞದಲ್ಲಿ ಕೋಟ್ಯನುಕೋಟಿ ಯೋಧರ ಹೋಮವಾಗಿಬಿಡುತ್ತದೆ. ಅಂತಹ ಘೋರ

ರೂಪವಾದ ಮಾರಣಹೋಮವು ನಡೆಯದ ರೀತಿಯಲ್ಲಿ ನೀವೆಲ್ಲರೂ ಸೇರಿ ವಿಶ್ವಾಸಪೂರ್ವಕವಾಗಿ ಪ್ರಯತ್ನಿಸಿರಿ.

ನ ಚೇತ್ಪ್ರಯುಚ್ಛಧ್ವಮಮಿತ್ರಘಾತಿನೋ
ಯುಧಿಷ್ಠಿರಸ್ಯ ಸಮಭೀಪ್ಸಿತಂ ಸ್ವಕಮ್ ।
ನಯಾಮಿ ವಃ ಸಾಶ್ವಪದಾತಿಕುಞ್ಜರಾ–
ನ್ದಿಶಂ ಪಿತೄಣಾಮಶಿವಾಂ ಶಿತೈಃ ಶರೈಃ ॥೧೪॥

ಶತ್ರುವಿನಾಶಕನಾದ ಯುಧಿಷ್ಠಿರನು ಆಶಿಸಿರುವ ತನ್ನದೇ ಆದ ಅರ್ಧ ರಾಜ್ಯವನ್ನು ಅವನಿಗೆ ನೀವು ಹಿಂದಿರುಗಿಸದಿದ್ದರೆ, ಅಶ್ವ-ಪದಾತಿ-ಗಜಸೈನ್ಯ ಸಮೇತರಾದ ನಿಮ್ಮನ್ನು ಅಮಂಗಳಕರವಾದ ಪಿತೃಗಳ ದಿಕ್ಕಿಗೆ ನನ್ನ ನಿಶಿತ ವಾದ ಬಾಣಗಳ ಮೂಲಕವಾಗಿ ಕಳುಹಿಸಿಕೊಡುತ್ತೇನೆ. (ಯಮಲೋಕಕ್ಕೆ ಕಳುಹಿಸುತ್ತೇನೆ.")

ದೇವತೆಗಳಿಗೆ ಸದೃಶವಾದ ಕಾಂತಿಯುಳ್ಳವನೇ! ಅರ್ಜುನನಿಂದ ಈ ಸಂದೇಶವನ್ನು ಪಡೆದವನಾಗಿ ಅವನ ಅನುಮತಿಯನ್ನು ಪಡೆದು, ಅನಂತರ ಚತುರ್ಭುಜನಾದ ಶ್ರೀಕೃಷ್ಣನಿಗೂ ನಮಸ್ಕರಿಸಿ, ಮಹತ್ತ್ವಪೂರ್ಣವಾದ ಕೃಷ್ಣಾರ್ಜುನರ ಸಂದೇಶವನ್ನು ನಿನಗೆ ಸಾಧ್ಯವಾದಷ್ಟು ಬೇಗ ಮುಟ್ಟಿಸುವ ಸಲುವಾಗಿ ಆತುರದಿಂದ ಇಲ್ಲಿಗೆ ಆಗಮಿಸಿದೆನು.

೬೬ನೆಯ ಅಧ್ಯಾಯವು ಮುಗಿಯಿತು.

೬೭ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ಸಮೀಪಕ್ಕೆ ಗಾಂಧಾರಿಯ ಮತ್ತು ವ್ಯಾಸರ ಆಗಮನ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಮಹಾರಾಜ! ಯಾವಾಗ ಧೃತರಾಷ್ಟ್ರನ ಮಗನಾದ ದುರ್ಯೋಧನನು ಕೃಷ್ಣಾರ್ಜುನರ ಮಾತನ್ನು ಪುರಸ್ಕರಿಸುವ ಇಚ್ಛೆಯನ್ನು ತೋರಲಿಲ್ಲವೋ ಮತ್ತು ಧೃತರಾಷ್ಟ್ರನೇ ಆದಿಯಾಗಿ ಆ ಸಭೆಯಲ್ಲಿದ್ದವರೆಲ್ಲರೂ ಮೌನಧರಿಸಿ ಕುಳಿತರೋ–ಆಗ ಅಲ್ಲಿ ಉಪವಿಷ್ಟರಾಗಿದ್ದ ರಾಜರೆಲ್ಲರೂ ತಮ್ಮ-ತಮ್ಮ ಆಸನ ಗಳಿಂದೆದ್ದು ಸಭಾಭವನವನ್ನು ಬಿಟ್ಟು ಹೊರಟುಹೋದರು. ದುರ್ಯೋಧ

ನನ ಪಕ್ಷೀಯರಾಗಿದ್ದ ರಾಜರೆಲ್ಲರೂ ಮೇಲೆದ್ದು ಸಭಾಭವನವನ್ನು ಬಿಟ್ಟು ಹೊರಟುಹೋಗಲಾಗಿ, ಸಭಾಭವನವು ನಿರ್ಜನವಾಯಿತು. ಪುತ್ರರ ವಿಜಯಾಭಿಲಾಷಿಯಾದ ಮತ್ತು ಪುತ್ರವಶವರ್ತಿಯಾದ ಧೃತರಾಷ್ಟ್ರನು ತನ್ನ ಸಹಾಯಕ್ಕೆ ಬಂದಿರುವ ರಾಜರ ಮತ್ತು ಪಾಂಡವರ ಬಲಾಬಲಗಳ ವಿಷಯವನ್ನು ತಿಳಿಯುವ ಸಲುವಾಗಿ ಸಂಜಯನೊಡನೆ ಏಕಾಂತದಲ್ಲಿ ಮಾತನಾಡಲುಪಕ್ರಮಿಸಿದನು :

"ಗಾವಲ್ಗಣಿಯೇ! ಸಂಜಯ! ನೀನು ಎಲ್ಲವನ್ನೂ ತಿಳಿದವನಾಗಿರುವೆ. ನಮ್ಮ ಸೈನ್ಯದ ಪ್ರಾಬಲ್ಯವನ್ನೂ ಹೇಳು. ಅಂತೆಯೇ ನಮ್ಮ ಸೈನ್ಯದಲ್ಲಿರುವ ದೌರ್ಬಲ್ಯವನ್ನೂ ಹೇಳು. ನೀನು ನಮ್ಮ ಸೇನೆಯ ವಿಷಯವನ್ನು ತಿಳಿದಿರುವುದು ಮಾತ್ರವಲ್ಲದೇ–ಪಾಂಡವರಲ್ಲಿರುವ ಯುದ್ಧನೈಪುಣ್ಯವನ್ನೂ ಚೆನ್ನಾಗಿ ತಿಳಿದಿರುವೆ. ದುರ್ಯೋಧನನು ಭಾವಿಸಿರುವಂತೆ ಪಾಂಡವರಲ್ಲಿ ನಿಜವಾಗಿಯೂ ದೌರ್ಬಲ್ಯವಿದೆಯೇ? ಈ ಕೌರವಬಲದಲ್ಲಿ ನಿಜವಾಗಿಯೂ ಶ್ರೇಷ್ಠತೆಯಿದೆಯೇ? ಎಂಬುದೆಲ್ಲವನ್ನೂ ವಿಶದವಾಗಿ ಹೇಳು. ನೀನು ಈ ಎರಡು ಪಕ್ಷಗಳ ಸಾರವನ್ನೂ ಸಂಪೂರ್ಣವಾಗಿ ತಿಳಿದವನಾಗಿರುವೆ. ಸರ್ವಜ್ಞನಾಗಿರುವೆ. ಧರ್ಮಾರ್ಥಗಳೆರಡರಲ್ಲಿಯೂ ನಿಪುಣನಾಗಿರುವೆ. 'ಇದಮಿತ್ಥಂ' ಎಂಬ ನಿಶ್ಚಯಜ್ಞಾನವೂ ನಿನಗಿದೆ. ಯುದ್ಧಮಾಡಲಿರುವ ಎರಡು ಪಕ್ಷದವರಲ್ಲಿ ಯಾವ ಪಕ್ಷದವರು ಈ ಲೋಕದಲ್ಲುಳಿಯಲಾರರು–ಎಂಬ ವಿಷಯವನ್ನೂ ಮತ್ತು ಇದಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ನನ್ನಿಂದ ಪ್ರಶ್ನಿಸಲ್ಪಡುವ ನೀನು ವಿಶದವಾಗಿ ಹೇಳು."

"ಮಹಾರಾಜ! ಯಾರೊಬ್ಬರೂ ಸಮೀಪದಲ್ಲಿಲ್ಲದ ಈ ಸಮಯದಲ್ಲಿ ನಾನು ಆ ವಿಷಯಗಳನ್ನು ನಿನ್ನೊಡನೆ ಹೇಳಲಾರೆನು. ಒಂದು ವೇಳೆ ಹಾಗೇನಾದರೂ ನಾನು ಹೇಳಿದೆನಾದರೆ ನನ್ನ ವಿಷಯದಲ್ಲಿ ನೀನು ದೋಷವನ್ನೆಣಿಸಬಹುದು ; ಅಥವಾ ಪಾಂಡವರ ಮೇಲಿನ ಅಸೂಯೆಯು ಇನ್ನೂ ಉತ್ಕಟವಾಗಿ ನಿನ್ನ ಮನಸ್ಸನ್ನು ಆವರಿಸಬಹುದು. ಆದುದರಿಂದ ಮಹಾವ್ರತನಿಷ್ಠರಾದ ತಂದೆಯವರಾದ ವ್ಯಾಸರನ್ನು ಬರಹೇಳು. ನಿನ್ನ ಧರ್ಮಪತ್ನಿಯಾದ, ಪಟ್ಟಮಹಿಷಿಯಾದ ಗಾಂಧಾರಿಯನ್ನೂ ಕರೆಯಿಸು. (ಅವರ ಸಮ್ಮುಖದಲ್ಲಿ ನಾನೆಲ್ಲವನ್ನೂ ನಿನಗೆ ಹೇಳುತ್ತೇನೆ.) ನರೇಂದ್ರ! ವ್ಯಾಸ-ಗಾಂಧಾರಿಯರು

ಧರ್ಮಜ್ಞರು ; ನಿಪುಣರು ; ನಿಶ್ಚಯಜ್ಞರು ; ನಿನಗುಂಟಾಗಬಹುದಾದ ಮೋಹದೃಷ್ಟಿಯನ್ನು ಹೋಗಲಾಡಿಸಲು ಸಮರ್ಥರಾಗಿರತಕ್ಕವರು. ಆ ಇಬ್ಬರ ಸಮ್ಮುಖದಲ್ಲಿ ನಾನು ಶ್ರೀಕೃಷ್ಣಾರ್ಜುನರ ಅಭಿಮತವೇನೆಂಬುದನ್ನು ಸಂಪೂರ್ಣವಾಗಿ ವಿಶದಪಡಿಸುತ್ತೇನೆ.”



ಜನಮೇಜಯ! ಸಂಜಯನು ಹೀಗೆಂದು ಹೇಳಿದನಂತರ ಧೃತರಾಷ್ಟ್ರನ ಆಜ್ಞಾನುಸಾರವಾಗಿ ವಿದುರನಿಂದ ವ್ಯಾಸ-ಗಾಂಧಾರಿಯರು ಆಹ್ವಾನಿತರಾಗಿ ಬಹುಶೀಘ್ರವಾಗಿ ಸಭಾಭವನವನ್ನು ಪ್ರವೇಶಿಸಿದರು. ಸಭಾಭವನವನ್ನು ಪ್ರವೇಶಿಸಿದನಂತರದಲ್ಲಿ ತಮ್ಮ ಮಗನ ಮತ್ತು ಸಂಜಯನ ಅಭಿಪ್ರಾಯ ವೇನೆಂಬುದನ್ನು ಅಂತರ್ದೃಷ್ಟಿಯಿಂದ ತಿಳಿದುಕೊಂಡ ಮಹಾಪ್ರಾಜ್ಞರಾದ ಕೃಷ್ಣದ್ವೈಪಾಯನರು ಸಂಜಯನನ್ನು ಕುರಿತು ಹೇಳಿದರು :

"ಸಂಜಯ! ಧೃತರಾಷ್ಟ್ರನು ನಿನ್ನಿಂದ ಯಾವ ವಿಷಯವನ್ನು ಕೇಳಿ ತಿಳಿದುಕೊಳ್ಳಲಿಚ್ಛಿಸಿ ನಿನ್ನನ್ನು ಪ್ರಶ್ನೆಮಾಡುತ್ತಿರುವನೋ–ಅವನಿಗದನ್ನು ಹೇಳಿಬಿಡು. ಭಗವಾನ್ ಶ್ರೀಕೃಷ್ಣನ ಮತ್ತು ಅರ್ಜುನನ ವಿಷಯದಲ್ಲಿ ಧೃತರಾಷ್ಟ್ರನು ಏನೇನು ಪ್ರಶ್ನೆಮಾಡುತ್ತಾನೆಯೋ–ಆ ಎಲ್ಲ ಪ್ರಶ್ನೆಗಳಿಗೂ ನಿನಗೆ ತಿಳಿದಿರುವಷ್ಟು ಯಥಾವತ್ತಾಗಿ ಉತ್ತರಿಸು."

೬೭ನೆಯ ಅಧ್ಯಾಯವು ಮುಗಿಯಿತು.

೬೮ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಸಂಜಯನು ಧೃತರಾಷ್ಟ್ರನಿಗೆ ಶ್ರೀಕೃಷ್ಣನ ಮಹಿಮೆಯನ್ನು ವರ್ಣಿಸಿ ಹೇಳಿದುದು

ಸಂಜಯನು ಹೇಳುತ್ತಾನೆ :

"ಮಹಾರಾಜ! ಅರ್ಜುನ-ವಾಸುದೇವರಿಬ್ಬರೂ ಸರ್ವಸಮ್ಮಾನ್ಯರಾದ ಶ್ರೇಷ್ಠಧನುಷ್ಮಂತರು. ಅವರಿಬ್ಬರೂ ಯಾವಾಗಲೂ ಒಂದೆಡೆಯಲ್ಲಿಯೇ ಇರತಕ್ಕವರು. ಏಕದೇಹನ್ಯಾಯದಿಂದ ವರ್ತಿಸತಕ್ಕವರು. ಅವರು ಈ ಜನ್ಮದಲ್ಲಿ ಸ್ವೇಚ್ಛೆಯಿಂದಲೇ ಬೇರೆ-ಬೇರೆಯಾಗಿ ಹುಟ್ಟಿದ್ದಾರೆ. ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಫಲದಿಂದವರು ಜನ್ಮತಾಳಿರುವುದಿಲ್ಲ. ಮಹಾನುಭಾವರಾದ ಶ್ರೀಕೃಷ್ಣಾರ್ಜುನರು ಸಾಕ್ಷಾದ್ಬ್ರಹ್ಮಸ್ವರೂಪರೇ ಆಗಿರುತ್ತಾರೆ. ಉದಾರಹೃದಯನಾದ ಭಗವಾನ್ ವಾಸುದೇವನ ಸುದರ್ಶನ ಚಕ್ರವು ಆತನ ಸಮೀಪದಲ್ಲಿ ಯಾವಾಗಲೂ ಇರುತ್ತದೆ. ಆದರೆ ಶ್ರೀಕೃಷ್ಣನ ಮಾಯೆಯಿಂದಾಗಿ ಅದು ಇತರರಿಗೆ ಅಗೋಚರವಾಗಿರುತ್ತದೆ. ಅದರ ಉದ್ದ ಮತ್ತು ಅಗಲ ಸುಮಾರು ಒಂದು *ವ್ಯಾಮಾಂತರದಷ್ಟಿರುತ್ತದೆ. ಆದರೆ ಸಮಯದಲ್ಲದು ಶ್ರೀಕೃಷ್ಣನ ಇಚ್ಛೆಯಂತೆ ಚಿಕ್ಕದಾಗಿ ಅಥವಾ ದೊಡ್ಡದಾಗಿ ಶ್ರೀಕೃಷ್ಣನಿಂದ ಶತ್ರುಗಳ ಮೇಲೆ ಪ್ರಯೋಗಿಸಲ್ಪಡುತ್ತದೆ. ಯದ್ಯಪಿ

---

*ವ್ಯಾಮಾನ್ತರಂ = ಪ್ರಸಾರಿತಯೋಃ ಹಸ್ತಯೋಃ ಯಾವಾನ್ವಿಸ್ತಾರಃ (ಪಞ್ಚಹಸ್ತಮಿತಃ) ತಾವದನ್ತರಂ ಮಧ್ಯಪ್ರಮಾಣಂ ಯಸ್ಯ ತತ್ ವ್ಯಾಮಾನ್ತರಂ–ಪ್ರಸಾರಿತವಾದ ಬಾಹುಗಳ ವಿಸ್ತಾರವೆಷ್ಟಿದೆಯೋ (ಅದರ ಮಧ್ಯಪ್ರಮಾಣವೆಷ್ಟಿರುವುದೋ, ಸುಮಾರು ಮಾರುದ್ದ.) ಅದಕ್ಕೆ ವ್ಯಾಮಾಂತರವೆಂದು ಹೆಸರು.

ಆ ಚಕ್ರವು ಶ್ರೀಕೃಷ್ಣನ ಸಮೀಪದಲ್ಲಿಯೇ ಇದ್ದರೂ ಕೌರವರ ವಿಷಯದಲ್ಲಿ ಅದು ಅದೃಶ್ಯವಾಗಿಯೇ ಇರುವುದು.

ಕೌರವರಿಗೆ ಆ ಚಕ್ರವು ಶ್ರೀಕೃಷ್ಣನಲ್ಲಿರುವುದೆಂಬ ನಿಜಾಂಶವು ತಿಳಿಯದು. ತೇಜಸ್ಸಿನ ರಾಶಿಯಂತೆಯೇ ಪ್ರಕಾಶಿಸುವ ಆ ಸುದರ್ಶನಮಹಾ ಚಕ್ರವು–ತಮ್ಮ ಬಲದಲ್ಲಿರುವ ಪ್ರಾಬಲ್ಯ ಮತ್ತು ದೌರ್ಬಲ್ಯಗಳನ್ನು ತಿಳಿಯಲು ಪಾಂಡವರಿಗೆ ಹೆಚ್ಚು ಸಾಧಕವಾಗಿದೆ. ಮಹಾಭಯಂಕರರೆಂದು ಪ್ರಸಿದ್ಧರಾಗಿದ್ದ ನರಕ, ಶಂಬರ, ಕಂಸ ಮತ್ತು ಚೇದೀರಾಜನಾಗಿದ್ದ ಶಿಶುಪಾಲ–ಇವರನ್ನು ಮಹಾಬಲಿಷ್ಠನಾದ ಮಾಧವನು ಸ್ವಲ್ಪವೂ ಶ್ರಮವಿಲ್ಲದೇ ಆಟವಾಡುತ್ತಿರುವಂತೆ ಸಂಹರಿಸಿದನು. ಪುರುಷೋತ್ತಮನಾದ, ವಿಶಿಷ್ಟಾತ್ಮನಾದ (ಸಕಲವೂ ತಾನೇ ಆಗಿರುವ) ಶ್ರೀಕೃಷ್ಣನು ಸಂಕಲ್ಪಮಾತ್ರ ದಿಂದಲೇ ಪೃಥಿವೀ, ಅಂತರಿಕ್ಷ ಮತ್ತು ಸ್ವರ್ಗಲೋಕಗಳನ್ನೂ ತನ್ನ ಸ್ವಾಧೀನ ಮಾಡಿಕೊಳ್ಳಬಲ್ಲನು. ಮಹಾರಾಜ! ಪಾಂಡವರಲ್ಲಿರುವ ದೌರ್ಬಲ್ಯ ಮತ್ತು ಪ್ರಾಬಲ್ಯಗಳನ್ನು ಕುರಿತು ನೀನು ಪುನಃ ಪುನಃ ಪ್ರಶ್ನಿಸುತ್ತಲೇ ಇರುವೆ. ಅವೆಲ್ಲವನ್ನೂ ನಾನೀಗ ಕ್ರೋಢೀಕರಿಸಿ ಹೇಳಿಬಿಡುತ್ತೇನೆ, ಕೇಳು :

**ಏಕತೋ ವಾ ಜಗತ್ಕೃತ್ಸ್ನಮೇಕತೋ ವಾ ಜನಾರ್ದನಃ ।**
**ಸಾರತೋ ಜಗತಃ ಕೃತ್ಸ್ನಾದತಿರಿಕ್ತೋ ಜನಾರ್ದನಃ ॥೭॥**

ಒಂದು ಕಡೆಯಲ್ಲಿ ಅಖಂಡಜಗತ್ತನ್ನೂ ಮತ್ತೊಂದು ಕಡೆಯಲ್ಲಿ ಜನಾರ್ದನನನ್ನೂ ಇಟ್ಟು ತೂಗಿದ್ದೇ ಆದರೆ–ಸಾರಭೂತವಾದ ಬಲದ ದೃಷ್ಟಿಯಿಂದ ಈ ಜಗತ್ತಿಗಿಂತಲೂ ಜನಾರ್ದನನೇ ಅತಿರಿಕ್ತನಾಗುತ್ತಾನೆ. (ಅಧಿಕನಾಗುತ್ತಾನೆ.)

**ಭಸ್ಮ ಕುರ್ಯಾಜ್ಜಗದಿದಂ ಮನಸೈವ ಜನಾರ್ದನಃ ।**
**ನ ತು ಕೃತ್ಸ್ನಂ ಜಗಚ್ಛಕ್ತಂ ಭಸ್ಮ ಕರ್ತುಂ ಜನಾರ್ದನಮ್ ॥೮॥**

ಜನಾರ್ದನನು ಸಂಕಲ್ಪಮಾತ್ರದಿಂದಲೇ ಈ ಜಗತ್ತನ್ನು ಭಸ್ಮ ಮಾಡಬಲ್ಲನು. ಆದರೆ ಈ ಅಖಂಡವಿಶ್ವವೇ ಏಕಮುಖವಾಗಿ ಪ್ರಯತ್ನಿಸಿದರೂ ಶ್ರೀಕೃಷ್ಣನನ್ನು ಭಸ್ಮಮಾಡಲಾರದು.

**ಯತಃ ಸತ್ಯಂ ಯತೋ ಧರ್ಮೋ ಯತೋ ಹ್ರೀರಾರ್ಜವಂ ಯತಃ ।**
**ತತೋ ಭವತಿ ಗೋವಿನ್ದೋ ಯತಃ ಕೃಷ್ಣಸ್ತತೋ ಜಯಃ ॥೯॥**

ಎಲ್ಲಿ ಸತ್ಯ, ಧರ್ಮ, ಲಜ್ಜೆ ಮತ್ತು ಸರಳತೆ–ಇವುಗಳಿರುವುವೋ ಅಲ್ಲಿಯೇ ಗೋವಿಂದನು ಸಾಕ್ಷಾತ್ತಾಗಿ ಇರುತ್ತಾನೆ. ಎಲ್ಲಿ ಗೋವಿಂದನಿರುವನೋ ಅಲ್ಲಿಯೇ ಜಯವೆಂಬುದೂ ಇರುತ್ತದೆ. (ಜಯವೆಂಬುದು ಶ್ರೀಕೃಷ್ಣನನ್ನು ಬಿಟ್ಟು ಪ್ರತ್ಯೇಕವಾಗಿ ಉಳಿದಿರುವುದಿಲ್ಲ.)

**ಪೃಥಿವೀಂ ಚಾನ್ತರಿಕ್ಷಂ ಚ ದಿವಂ ಚ ಪುರುಷೋತ್ತಮಃ ।**
**ವಿಚೇಷ್ಟಯತಿ ಭೂತಾತ್ಮಾ ಕ್ರೀಡನ್ನಿವ ಜನಾರ್ದನಃ ॥೧೦॥**

ಸಮಸ್ತಪ್ರಾಣಿಗಳ ಹೃದಯಗಹ್ವರಗಳಲ್ಲಿಯೂ ಇರುವ ಪುರುಷೋತ್ತಮನು ಆಟವಾಡುವಂತೆಯೇ ಪೃಥಿವೀ, ಅಂತರಿಕ್ಷ ಮತ್ತು ಸ್ವರ್ಗಲೋಕಗಳನ್ನು ಸಂಚಾಲನಗೊಳಿಸುತ್ತಿರುತ್ತಾನೆ. (ಈ ತ್ರಿಭುವನಗಳಲ್ಲಿ ನಡೆಯುತ್ತಿರುವ ವಿದ್ಯಮಾನಗಳೆಲ್ಲವೂ ಅವನ ಕ್ರೀಡಾರೂಪವಾಗಿವೆ.)

**ಸ ಕೃತ್ವಾ ಪಾಣ್ಡವಾನ್ಸತ್ರಂ ಲೋಕಂ ಸಮ್ಮೋಹಯನ್ನಿವ ।**
**ಅಧರ್ಮನಿರತಾನ್ಮೂಢಾನ್ದಗ್ಧುಮಿಚ್ಛತಿ ತೇ ಸುತಾನ್ ॥೧೧॥**

ಈ ಸಮಯದಲ್ಲವನು ವಿಶ್ವವನ್ನು ಸಮ್ಮೋಹನಗೊಳಿಸುತ್ತಾ (ತಾನೇ ಎಲ್ಲಕ್ಕೂ ಕರ್ತೃವಾದರೂ ತನ್ನ ಕರ್ತೃತ್ವವನ್ನು ತೋರಗೊಡದೆ) ಪಾಂಡವರನ್ನೇ ಒಂದು ಮಹಾಸತ್ರಪ್ರಾಯವನ್ನಾಗಿ ಮಾಡಿಕೊಂಡು (ಪಾಂಡವರನ್ನು ನೆಪಮಾಡಿಕೊಂಡು) ಅಧರ್ಮನಿರತರಾಗಿರುವ ನಿನ್ನ ಮಕ್ಕಳನ್ನು ಭಸ್ಮಮಾಡಲಿಚ್ಛಿಸಿದ್ದಾನೆ.

**ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂ ಚ ಕೇಶವಃ ।**
**ಆತ್ಮಯೋಗೇನ ಭಗವಾನ್ಪರಿವರ್ತಯತೇಽನಿಶಮ್ ॥೧೨॥**

ಭಗವಾನ್ ಕೇಶವನು ಆತ್ಮಯೋಗಶಕ್ತಿಯಿಂದ* ಕಾಲಚಕ್ರವನ್ನೂ, ಜಗಚ್ಚಕ್ರವನ್ನೂ ಮತ್ತು ಯುಗಚಕ್ರವನ್ನೂ ಸರ್ವದಾ ತಿರುಗಿಸುತ್ತಿರುತ್ತಾನೆ.

**ಕಾಲಸ್ಯ ಚ ಹಿ ಮೃತ್ಯೋಶ್ಚ ಜಙ್ಗಮಸ್ಥಾವರಸ್ಯ ಚ ।**
**ಈಶತೇ ಭಗವಾನೇಕಃ ಸತ್ಯಮೇತದ್ಬ್ರವೀಮಿ ತೇ ॥೧೩॥**

---

*ಕಾಲಚಕ್ರಂ : ಪಕ್ಷ-ಮಾಸಗಳನ್ನೊಳಗೊಂಡ ಸಂವತ್ಸರಾತ್ಮಕವಾದುದು.
ಜಗಚ್ಚಕ್ರಂ : ಜಗತ್ತಿನ ಜನ್ಮ-ಸ್ಥಿತಿ-ಲಯರೂಪವಾದುದು.
ಯುಗಚಕ್ರಂ : ಯುಗಗಳ ಪರಿವರ್ತನೆಗೆ ಕಾರಣಭೂತವಾದುದು.

ಮಹಾರಾಜ! ನಾನು ಈ ಸತ್ಯೋಕ್ತಿಯನ್ನು ನಿನ್ನೊಡನೆ ಹೇಳುತ್ತಿದ್ದೇನೆ. (ಪುನಃ ಪುನಃ ಭ್ರಾಂತನಾಗಬೇಡ). *ಕಾಲಕ್ಕೆ, ಮೃತ್ಯುವಿಗೆ ಮತ್ತು ಚರಾಚರಾತ್ಮಕವಾದ ಈ ವಿಶ್ವಕ್ಕೆ ಭಗವಾನ್ ಶ್ರೀಕೃಷ್ಣನೊಬ್ಬನೇ ನಿಯಾಮಕನಾಗಿರುತ್ತಾನೆ.

**ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತೋ ಹರಿಃ ।**
**ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವ ವರ್ಧನಃ ॥೧೪॥**

ಮಹಾಯೋಗೇಶ್ವರನಾದ ಹರಿಯು ಸಕಲಭುವನಗಳಿಗೂ ಒಡೆಯನಾಗಿದ್ದರೂ–ರೈತನೊಬ್ಬನು ಧಾನ್ಯಾದಿಗಳನ್ನು ವೃದ್ಧಿಸಿಕೊಳ್ಳಲು ಭೂಮಿಯನ್ನು ಬಾರಿ-ಬಾರಿಗೂ ಉತ್ತು-ಬಿತ್ತಿ ಬೇಸಾಯಮಾಡುವಂತೆ–ಹೊಸ ಹೊಸ ಕೆಲಸಗಳ ಆರಂಭವನ್ನು ಮಾಡುತ್ತಲೇ ಇರುತ್ತಾನೆ. (ತಾನು ಮಹಾಯೋಗಿಯೆಂಬುದನ್ನಾಗಲೀ–ಜಗತ್ತಿಗೇ ಈಶನೆಂಬುದನ್ನಾಗಲೀ ತೋರಿಸಿಕೊಳ್ಳದೇ ಮಾನವಸಹಜವಾದ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ.)

**ತೇನ ವಞ್ಚಯತೇ ಲೋಕಾನ್ಮಾಯಾಯೋಗೇನ ಕೇಶವಃ ।**
**ಯೇ ತಮೇವ ಪ್ರಪದ್ಯನ್ತೇ ನ ತೇ ಮುಹ್ಯನ್ತಿ ಮಾನವಾಃ ॥೧೫॥**

ಈ ವಿಧವಾದ ಮಹಾಯೋಗದಿಂದಲೇ ಶ್ರೀಕೇಶವನು ಜಗತ್ತನ್ನು ವಂಚಿಸುತ್ತಾನೆ. (ತಾನು ಭಗವಂತನೆಂಬುದನ್ನು ಲೋಕಕ್ಕೆ ತಿಳಿಯಗೊಡುವುದಿಲ್ಲ.) ಆದರೆ ಯಾರು ಅವನನ್ನೇ ಅನನ್ಯಭಕ್ತಿಯಿಂದ ಶರಣುಹೋಗುತ್ತಾರೆಯೋ–ಅಂತಹವರು ಮಾತ್ರ ಭಗವಂತನ ಮಾಯಾಯೋಗಕ್ಕೆ ಸಿಲುಕಿ ಭ್ರಾಂತರಾಗುವುದಿಲ್ಲ."

ಆ೮ನೆಯ ಅಧ್ಯಾಯವು ಮುಗಿಯಿತು.

---

*ಕಾಲಃ–ಆಯುಃಪರಿಚ್ಛೇದಕರ್ತ್ರೀ ದೇವತಾ–ಆಯುಷ್ಯವನ್ನು ನಿರ್ಣಯಿಸುವ ದೇವತೆ (ಪರಿಚ್ಛೇದವೆಂದರೆ ನಿರ್ಣಯವೆಂದರ್ಥ) ಆಯುಷ್ಯವನ್ನು ಮೊಟಕುಗೊಳಿಸುವ ದೇವತೆ ; ಮೃತ್ಯುಃ = ದೇಹಪ್ರಾಣಯೋಃ ವಿಯೋಗಕರ್ತ್ರೀ ದೇವತಾ–ದೇಹಕ್ಕೂ ಮತ್ತು ಪ್ರಾಣಕ್ಕೂ ವಿಯೋಗವನ್ನುಂಟುಮಾಡುವ ಅಥವಾ ದೇಹದಿಂದ ಪ್ರಾಣವನ್ನು ಬೇರ್ಪಡಿಸುವ ದೇವತೆ.

# ಸಂಜಯನು ಧೃತರಾಷ್ಟ್ರನಿಗೆ ಶ್ರೀಕೃಷ್ಣಪ್ರಾಪ್ತಿಯ ವಿಷಯವಾಗಿಯೂ-ತತ್ತ್ವಜ್ಞಾನದ ಸಾಧನೆಯ ವಿಷಯವಾಗಿಯೂ ಹೇಳಿದುದು

ಪಾರಿಕ್ಷಿತ! ಸತ್ಯಮೇತದ್ಬ್ರವೀಮಿ ತೇ– ಎಂದು ಸತ್ಯಪ್ರತಿಜ್ಞೆ ಮಾಡಿ ಸಂಜಯನು ಶ್ರೀಕೃಷ್ಣನ ಮಾಹಾತ್ಮ್ಯವನ್ನು ಹೇಳಿದನಂತರ ಧೃತರಾಷ್ಟ್ರನಿಗೊಂದು ಜಿಜ್ಞಾಸೆಯುಂಟಾಯಿತು. ಅದನ್ನೇ ಅವನು ಸಂಜಯನ ಮುಂದಿಟ್ಟನು :

**ಕಥಂ ತ್ವಂ ಮಾಧವಂ ವೇತ್ಥ ಸರ್ವಲೋಕಮಹೇಶ್ವರಮ್ ।**
**ಕಥಮೇನಂ ನ ವೇದಾಹಂ ತನ್ಮಮಾಚಕ್ಷ್ವ ಸಂಜಯ ॥೧॥**

"ಸಂಜಯ! ಸರ್ವಲೋಕಮಹೇಶ್ವರನಾದ ಮಾಧವನ ನಿಜಸ್ವರೂಪವನ್ನು ನೀನು ಹೇಗೆ ತಿಳಿದುಕೊಂಡಿರುವೆ? ಅವನ ನಿಜಸ್ವರೂಪವನ್ನು ತಿಳಿದುಕೊಳ್ಳಲು ನನಗೆ ಸಾಧ್ಯವಾಗದಿರುವುದಕ್ಕೆ ಕಾರಣವೇನು? ಇದನ್ನು ಸ್ಪಷ್ಟವಾಗಿ ಹೇಳು."

ಸಂಜಯನು ಹೇಳುತ್ತಾನೆ :

**ಶೃಣು ರಾಜನ್ನ ತೇ ವಿದ್ಯಾ ಮಮ ವಿದ್ಯಾ ನ ಹೀಯತೇ ।**
**ವಿದ್ಯಾಹೀನಸ್ತಮೋಧ್ವಸ್ತೋ ನಾಭಿಜಾನಾತಿ ಕೇಶವಮ್ ॥೨॥**

"ಮಹಾರಾಜ! ಈ ವಿಷಯವನ್ನೂ ಸ್ಪಷ್ಟವಾಗಿ ಹೇಳುತ್ತೇನೆ. ನೀನು ಕೇಶವನ ನಿಜಸ್ವರೂಪವನ್ನು ತಿಳಿಯದಿರಲು ಅವಿದ್ಯೆಯೇ ಕಾರಣ. ನಿನಗೆ ತತ್ತ್ವಜ್ಞಾನವಿಲ್ಲ. ನನಗಿರುವ ಜ್ಞಾನದೃಷ್ಟಿಯು ಯಾವ ಕಾರಣದಿಂದಲೂ ಲುಪ್ತವಾಗುವುದಿಲ್ಲ. ನಾನು ಕೇಶವನ ನಿಜಸ್ವರೂಪವನ್ನು ತಿಳಿದುಕೊಳ್ಳಲು ಈ ಜ್ಞಾನದೃಷ್ಟಿಯೇ ಮುಖ್ಯಕಾರಣವಾಗಿದೆ. ತತ್ತ್ವಜ್ಞಾನಶೂನ್ಯನಾದವನು ಮತ್ತು ಅಜ್ಞಾನಾಂಧಕಾರದಲ್ಲಿ ಮುಳುಗಿರುವವನು ಕೇಶವನ ನಿಜಸ್ವರೂಪವನ್ನು ತಿಳಿಯಲಾರನು.

**ವಿದ್ಯಯಾ ತಾತ ಜಾನಾಮಿ ತ್ರಿಯುಗಂ ಮಧುಸೂದನಮ್ ।**
**ಕರ್ತಾರಮಕೃತಂ ದೇವಂ ಭೂತಾನಾಂ ಪ್ರಭವಾಪ್ಯಯಮ್ ॥೩॥**

ತಮೋವಿರೋಧಿಯಾದ ತತ್ತ್ವವಿದ್ಯೆಯಿಂದ ಸ್ಥೂಲ-ಸೂಕ್ಷ್ಮ-ಕಾರಣ

ಶರೀರಗಳನ್ನೂ ಒಟ್ಟಾಗಿ ಸೇರಿಸುವ, ವಿಶ್ವಕ್ಕೆ ನಿಮಿತ್ತಕಾರಣನಾದ, ನಿಷ್ಕ್ರಿಯನಾದ, ಸಕಲಪ್ರಾಣಿಗಳ ಉತ್ಪತ್ತಿಗೂ ಮತ್ತು ಲಯಕ್ಕೂ ಕಾರಣ ಭೂತನಾದ ಮಧುಸೂದನನನ್ನು ನಾನು ಕೇವಲಜ್ಞಾನದೃಷ್ಟಿಯಿಂದ ಕಂಡು ಕೊಂಡಿರುತ್ತೇನೆ."

ಧೃತರಾಷ್ಟ್ರನು ಪುನಃ ಪ್ರಶ್ನಿಸುತ್ತಾನೆ :

"ಸಂಜಯ! ನೀನು ಹೇಳಿದಂತೆ ತ್ರಿಯುಗಾತ್ಮನಾದ (ಸ್ಥೂಲ-ಸೂಕ್ಷ್ಮ-ಕಾರಣಶರೀರಗಳನ್ನು ಒಟ್ಟುಗೂಡಿಸುವ) ಜನಾರ್ದನನನ್ನು ನೀನು ಹೇಗೆ ಕಂಡುಕೊಂಡಿರುವೆ? ಜನಾರ್ದನನ ಮೇಲಿನ ಯಾವ ವಿಶೇಷಭಕ್ತಿಯು ಅವನನ್ನು ಕಂಡುಕೊಳ್ಳಲು ಸಾಧನಭೂತವಾಯಿತು? ಯಾವ ಪರಾಭಕ್ತಿ ಯಿಂದ ಶ್ರೀಕೇಶವನ ನಿಜಸ್ವರೂಪವನ್ನು ತಿಳಿದುಕೊಳ್ಳಲು ನಿನಗೆ ಸಾಧ್ಯ ವಾಯಿತು?"

ಸಂಜಯನು ಉತ್ತರಿಸುತ್ತಾನೆ :

**ಮಾಯಾಂ ನ ಸೇವೇ ಭದ್ರಂ ತೇ ನ ವೃಥಾ ಧರ್ಮಮಾಚರೇ ।**
**ಶುದ್ಧಭಾವಂ ಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನಮ್ ॥೫॥**

"ಮಹಾರಾಜ! ನಿನಗೆ ಮಂಗಳವಾಗಲಿ! ಪುತ್ರ-ಮಿತ್ರ-ಕಳತ್ರರೂಪ ವಾದ ಮಾಯೆಯನ್ನು ನಾನು ಯಾವಾಗಲೂ ಸೇವಿಸುವುದಿಲ್ಲ. ಭಗವದರ್ಪಣವಿಲ್ಲದ, ಕೇವಲ ಆಡಂಬರದ ಧರ್ಮವನ್ನು ಮಾಡಲು ಹೋಗುವುದಿಲ್ಲ. ಕಾಮ-ಕ್ರೋಧಾದಿಗಳ ವರ್ಜನೆಯಿಂದ ಮನಸ್ಸನ್ನು ಶುದ್ಧಿಮಾಡಿಕೊಂಡು ಭಕ್ತಿಯಿಂದಲೂ ಮತ್ತು ಶಾಸ್ತ್ರದ ಮೂಲಕವಾಗಿಯೂ ನಾನು ಜನಾರ್ದನನ ನಿಜಸ್ವರೂಪವನ್ನು ತಿಳಿದುಕೊಂಡಿರುತ್ತೇನೆ."

ಸಂಜಯನ ಮಾತುಗಳನ್ನು ಕೇಳಿ ಧೃತರಾಷ್ಟ್ರನು ಅಲ್ಲಿಯೇ ಇದ್ದ ದುರ್ಯೋಧನನಿಗೆ ಹೇಳಿದನು :

"ಮಗು, ದುರ್ಯೋಧನ! ಸಂಜಯನು ನಮಗೆ ಅತ್ಯಂತ ಆಪ್ತನಾಗಿರು ತ್ತಾನೆ. ಇವನ ಮಾತುಗಳಲ್ಲಿ ವಿಶ್ವಾಸವನ್ನಿಡುವುದು ಯೋಗ್ಯವಾಗಿದೆ. ಇವನು ಹೇಳಿದಂತೆಯೇ ಶ್ರೀಕೃಷ್ಣನು ಪ್ರಪಂಚದ ಸೃಷ್ಟಿಗೆ ಮೂಲಕಾರಣನಾಗಿರುತ್ತಾನೆ. ಆದುದರಿಂದ ಇಂದ್ರಿಯಗಳ ಪ್ರೇರಕನಾದ ಭಗವಾನ್ ಶ್ರೀಕೃಷ್ಣನನ್ನು ಭಕ್ತಿಯಿಂದ ಆಶ್ರಯಿಸು. ಕೇಶವನಿಗೆ ಶರಣಾಗತನಾಗು."

ದುರ್ಯೋಧನನು ಹೇಳುತ್ತಾನೆ.:

ಭಗವಾನ್ದೇವಕೀಪುತ್ರೋ ಲೋಕಾಂಶ್ಚೇನ್ನಿಹನಿಷ್ಯತಿ ।
ಪ್ರವದನ್ನರ್ಜುನೇ ಸಖ್ಯಂ ನಾಹಂ ಗಚ್ಛೇಽದ್ಯ ಕೇಶವಮ್ ॥೭॥

"ಭಗವಂತನಾದ ದೇವಕೀಪುತ್ರನು ಅರ್ಜುನನೊಡನೆ ಸಖ್ಯಮಾಡಿ ಕೊಂಡು ತ್ರಿಭುವನಗಳನ್ನೂ ವಿನಾಶಗೊಳಿಸಿದರೂ ನಾನು ಮಾತ್ರ ಕೇಶವನಿಗೆ (ಸ್ವಪ್ರಾಣರಕ್ಷಣೆಗಾಗಿ) ಶರಣಾಗತನಾಗುವುದಿಲ್ಲ."

ದುರ್ಯೋಧನನ ಆ ಮಾತನ್ನು ಕೇಳಿ ಧೃತರಾಷ್ಟ್ರನು ಗಾಂಧಾರಿಗೆ ಹೇಳಿದನು :

ಅವಾಗ್ಗಾನ್ಧಾರಿ ಪುತ್ರಸ್ತೇ ಗಚ್ಛತ್ಯೇಷ ಸುದುರ್ಮತಿಃ ।
ಈರ್ಷುರ್ದುರಾತ್ಮಾ ಮಾನೀ ಚ ಶ್ರೇಯಸಾಂ ವಚನಾತಿಗಃ ॥೮॥

"ಗಾಂಧಾರಿ! ದುರ್ಬುದ್ಧಿಯ, ದುರಾತ್ಮನಾದ, ಈರ್ಷ್ಯಾಯುಕ್ತನಾದ, ದುರಭಿಮಾನಿಯಾದ ಈ ನಿನ್ನ ಮಗನು ಶ್ರೇಷ್ಠಪುರುಷರ ಉಪದೇಶವನ್ನು ತಿರಸ್ಕರಿಸಿ ನರಕದ ಮಾರ್ಗವನ್ನು ಹಿಡಿದು ಹೋಗುತ್ತಿದ್ದಾನೆ."

ಧೃತರಾಷ್ಟ್ರನ ಮಾತುಗಳನ್ನು ಕೇಳಿ ಬಹುದುಃಖಿತೆಯಾದ ಗಾಂಧಾರಿಯು ಮಗನನ್ನು ಕುರಿತು ಹೇಳಿದಳು :

ಐಶ್ವರ್ಯಕಾಮ ದುಷ್ಟಾತ್ಮನ್ವೃದ್ಧಾನಾಂ ಶಾಸನಾತಿಗ ।
ಐಶ್ವರ್ಯಜೀವಿತೇ ಹಿತ್ವಾ ಪಿತರಂ ಮಾಂ ಚ ಬಾಲಿಶ ॥೯॥

ವರ್ಧಯನ್ದುರ್ಹೃದಾಂ ಪ್ರೀತಿಂ ಮಾಂ ಚ ಶೋಕೇನ ವರ್ಧಯನ್ ।
ನಿಹತೋ ಭೀಮಸೇನೇನ ಸ್ಮರ್ತಾಸಿ ವಚನಂ ಪಿತುಃ ॥೧೦॥

"ದುಷ್ಟಾತ್ಮನೇ! ಐಶ್ವರ್ಯಕಾಮನೇ! (ಆಶೆಬಡುಕನೇ!) ಜ್ಞಾನ ವೃದ್ಧರಾದವರ ಆಜ್ಞೆಯನ್ನು ಮೀರುವವನೇ! ಮೂರ್ಖನೇ! ಈಗ ನಿನ್ನಲ್ಲಿರುವ ಅಪಾರವಾದ ಐಶ್ವರ್ಯವನ್ನೂ–ಪ್ರಾಣಿಸಾಮಾನ್ಯಕ್ಕೂ ಬಹುಪ್ರಿಯವಾದ ಜೀವಿತವನ್ನೂ–ನನ್ನನ್ನೂ ಮತ್ತು ನಿನ್ನ ತಂದೆಯನ್ನೂ ಪರಿತ್ಯಜಿಸಿ, ಶತ್ರುಗಳಿಗೆ ಸಂತೋಷವನ್ನುಂಟುಮಾಡುತ್ತಾ, ನನ್ನ ದುಃಖವನ್ನು ಸಂವರ್ಧಿಸುತ್ತಾ ಭೀಮಸೇನನಿಂದ ಹತನಾಗುವ ಸಮಯದಲ್ಲಿ ನಿನ್ನ ತಂದೆಯು ಈಗ ಹೇಳಿರುವ ಮಾತುಗಳನ್ನು ಸ್ಮರಿಸುವೆ."

ಗಾಂಧಾರಿಯು ಹೀಗೆ ಮಗನನ್ನು ನಿಂದಿಸಿದನಂತರ ವ್ಯಾಸರು ಧೃತರಾಷ್ಟ್ರನನ್ನು ಕುರಿತು ಹೇಳಿದರು :

“ಮಗು, ಧೃತರಾಷ್ಟ್ರ! ನನ್ನ ಮಾತನ್ನು ಕೇಳು. ನೀನು ನಿಶ್ಚಯವಾಗಿಯೂ ಶ್ರೀಕೃಷ್ಣನಿಗೆ ಬಹುಪ್ರಿಯನಾಗಿರುವೆ. ಮಹಾಜ್ಞಾನಿಯಾದ ಸಂಜಯನು ನಿನಗೆ ರಾಯಭಾರಿಯಾಗಿ ಸಿಕ್ಕಿರುವುದೇ ಇದಕ್ಕೆ ಕಾರಣವಾಗಿದೆ. ಶ್ರೀಕೃಷ್ಣನಿಗೆ ಪರಮಪ್ರಿಯನಾದ ಸಂಜಯನು ನಿಶ್ಚಯವಾಗಿಯೂ ನಿನ್ನನ್ನು ಶ್ರೇಯಸ್ಸಿನೊಡನೆ ಯೋಜಿಸುತ್ತಾನೆ. (ನಿನಗೆ ಶ್ರೇಯಸ್ಸನ್ನುಂಟು ಮಾಡುತ್ತಾನೆ.)

ಸಂಜಯನು ಪುರಾಣಪುರುಷನಾದ ಹೃಷೀಕೇಶನ ನಿಜಸ್ವರೂಪವನ್ನು ತಿಳಿದವನಾಗಿದ್ದಾನೆ ಮತ್ತು ಪರತತ್ತ್ವವನ್ನೂ ತಿಳಿದಿರುತ್ತಾನೆ. ನೀನೇನಾದರೂ ಏಕಾಗ್ರಚಿತ್ತನಾಗಿ ಇವನ ಮಾತನ್ನು ಕೇಳಿದೆಯಾದರೆ ಸಂಜಯನು ನಿಶ್ಚಯವಾಗಿಯೂ ಈ ಮಹಾಭಯದಿಂದ ನಿನ್ನನ್ನು ಪಾರುಮಾಡುತ್ತಾನೆ.

**ವೈಚಿತ್ರವೀರ್ಯ ಪುರುಷಾಃ ಕ್ರೋಧಹರ್ಷಸಮಾವೃತಾಃ ।**
**ಸಿತಾ ಬಹುವಿಧೈಃ ಪಾಶೈರ್ಯೇ ನ ತುಷ್ಟಾಃ ಸ್ವಕೈರ್ಧನೈಃ ॥೧೩॥**

**ಯಮಸ್ಯ ವಶಮಾಯಾನ್ತಿ ಕಾಮಮೂಢಾಃ ಪುನಃ ಪುನಃ ।**
**ಅನ್ಧನೇತ್ರಾ ಯಥೈವಾನ್ಧಾ ನೀಯಮಾನಾ ಸ್ವಕರ್ಮಭಿಃ ॥೧೪॥**

ವಿಚಿತ್ರವೀರ್ಯಕುಮಾರ! ಮಾನವರು ಸಾಮಾನ್ಯವಾಗಿ ಕ್ರೋಧ ಮತ್ತು ಹರ್ಷಗಳಿಂದ ಕೂಡಿದವರಾಗಿರುತ್ತಾರೆ. ಕೆಲವು ಸಮಯಗಳಲ್ಲಿ ಕೋಪಗೊಳ್ಳುತ್ತಾರೆ. ಪಶು-ಪತ್ನೀ-ಸುತಾಲಯಾದಿ ಅನೇಕಾನೇಕ ಮೋಹ ಪಾಶಗಳಿಂದ ಬಂಧಿತರಾಗಿರುತ್ತಾರೆ. ಸ್ವಕರ್ಮಾಯತ್ತವಾದ ಐಶ್ವರ್ಯದಿಂದ ತೃಪ್ತಿಹೊಂದುವುದಿಲ್ಲ. ಇತರರಲ್ಲಿರುವ ಐಶ್ವರ್ಯವನ್ನು ಕಂಡು ಅಸೂಯೆ ಪಡುತ್ತಿರುತ್ತಾರೆ. ಕಾಮಾಭಿಭೂತರಾಗಿರುವ ಇಂತಹವರು–ಕುರುಡನನ್ನನು ಸರಿಸಿ ಮತ್ತೊಬ್ಬ ಕುರುಡನು ಪ್ರಯಾಣಮಾಡಲು ಹೋಗಿ ಅಗಾಧವಾದ ದರಿಯಲ್ಲಿ ಬೀಳುವಂತೆ–ಸ್ವಕರ್ಮಫಲದಿಂದ ಒಯ್ಯಲ್ಪಟ್ಟು ಪುನಃ ಪುನಃ ಯಮರಾಜನ ವಶರಾಗುತ್ತಾರೆ. (ಇಂತಹವರಿಗೆ ಭವಬಂಧನದಿಂದ ಮೋಕ್ಷವು ಸಿಗುವುದಿಲ್ಲ. ಹುಟ್ಟು-ಸಾವುಗಳ ಸುಳಿಯಲ್ಲಿ ಸಿಕ್ಕಿ ನರಳುತ್ತಿರುತ್ತಾರೆ.

ಕುರುಡನೊಬ್ಬನು ಮತ್ತೊಬ್ಬ ಕುರುಡನನ್ನು ಅನಿರ್ದಿಷ್ಟ ಸ್ಥಳಕ್ಕೆ ಒಯ್ಯುವಂತೆ–ಇವರ ದುಷ್ಕರ್ಮಫಲವು ಇವರನ್ನು ಎಲ್ಲೆಲ್ಲಿಗೋ ಒಯ್ಯುತ್ತಿರುತ್ತದೆ.)

ಏಷ ಏಕಾಯನಃ ಪನ್ಥಾ ಯೇನ ಯಾನ್ತಿ ಮನೀಷಿಣಃ ।
ತಂ ದೃಷ್ಟ್ವಾ ಮೃತ್ಯುಮತ್ಯೇತಿ ಮಹಾಂಸ್ತತ್ರ ನ ಸಜ್ಜತಿ ॥೧೫॥

ಜಿತೇಂದ್ರಿಯರಾದವರು ಯಾವ ಜ್ಞಾನಮಾರ್ಗದಿಂದ ಪರಬ್ರಹ್ಮವಸ್ತುವನ್ನು ಕಂಡುಕೊಳ್ಳುತ್ತಾರೆಯೋ–ಆ ಏಕಾಯನಮಾರ್ಗವು ಇದೇ ಆಗಿರುವುದು. ಪರಮಾತ್ಮನ ಪ್ರಾಪ್ತಿಗೆ ಇರುವುದು ಇದೊಂದೇ ಮಾರ್ಗ. ಮನೀಷಿಗಳಾದವರು ಈ ಜ್ಞಾನಮಾರ್ಗವನ್ನು ತಿಳಿದು ಸಂಸಾರವನ್ನು ಅಥವಾ ಜನನ-ಮರಣಾವಸ್ಥೆಗಳನ್ನು ದಾಟುತ್ತಾರೆ. ಮಹಾತ್ಮರು ಯಾವಾಗಲೂ ಮೃತ್ಯುರೂಪವಾದ ಈ ಸಂಸಾರದಲ್ಲಿ ಆಸಕ್ತರಾಗಿರುವುದಿಲ್ಲ."

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

ಅಙ್ಗ ಸಂಜಯ ಮೇ ಶಂಸ ಪನ್ಥಾನಮಕುತೋಭಯಮ್ ।
ಯೇನ ಗತ್ವಾ ಹೃಷೀಕೇಶಂ ಪ್ರಾಪ್ನುಯಾಂ ಸಿದ್ಧಿಮುತ್ತಮಾಮ್ ॥

"ವತ್ಸ ಸಂಜಯ! ಭವಭಯದಿಂದ ಮುಕ್ತನಾಗುವ ಮಾರ್ಗವನ್ನು ಹೇಳು. ಭಯರಹಿತವಾದ ಯಾವ ಮಾರ್ಗದಿಂದ ಹೃಷೀಕೇಶನನ್ನು ಕಂಡುಕೊಳ್ಳುವೆನೋ ಮತ್ತು ಉತ್ತಮೋತ್ತಮವಾದ ಮೋಕ್ಷಸಿದ್ಧಿಯನ್ನು ಪಡೆಯಬಲ್ಲೆನೋ–ಅಂತಹ ಮಾರ್ಗವನ್ನು ಹೇಳು."

ಸಂಜಯನು ಹೇಳುತ್ತಾನೆ :

ನಾಕೃತಾತ್ಮಾ ಕೃತಾತ್ಮಾನಂ ಜಾತು ವಿದ್ಯಾಜ್ಜನಾರ್ದನಮ್ ।
ಆತ್ಮನಸ್ತು ಕ್ರಿಯೋಪಾಯೋ ನಾನ್ಯತ್ರೇನ್ದ್ರಿಯನಿಗ್ರಹಾತ್ ॥೧೭॥

"ಮಹಾರಾಜ! ಯಾವನು ತನ್ನ ಮನಸ್ಸನ್ನು ಜಯಿಸಿರುವುದಿಲ್ಲವೋ, ಮನಸ್ಸನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುವುದಿಲ್ಲವೋ–ಅಂತಹವನು ನಿತ್ಯಸಿದ್ಧನಾದ ಭಗವಂತನಾದ ಶ್ರೀಕೃಷ್ಣಪರಮಾತ್ಮನನ್ನು ಯಾವಾಗಲೂ ಕಂಡುಕೊಳ್ಳಲಾರನು. ಇಂದ್ರಿಯಗಳನ್ನು ವಶಮಾಡಿಕೊಳ್ಳದೇ ಉಳಿದ ಯಾವ ವಿಧವಾದ ಕರ್ಮಗಳಿಂದಲೇ ಆಗಲೀ, ಯಾವ ಉಪಾಯಗಳಿಂದಲೇ ಆಗಲೀ–ಪರಮಾತ್ಮನನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ.

**ಇನ್ದ್ರಿಯಾಣಾಮುದೀರ್ಣಾನಾಂ ಕಾಮತ್ಯಾಗೋಽಪ್ರಮಾದತಃ ।**
**ಅಪ್ರಮಾದೋಽವಿಹಿಂಸಾ ಚ ಜ್ಞಾನಯೋನಿರಸಂಶಯಮ್ ॥೧೯॥**

ಜಾಗರೂಕವಾದ ಇಂದ್ರಿಯಗಳ ಮೂಲಕವಾಗಿ ಸುಖದೆಡೆಗೆ ರಭಸದಿಂದ ಓಡುವ ಇಂದ್ರಿಯಗಳ ಕಾಮನೆಗಳನ್ನು ಜಾಗರೂಕತೆಯಿಂದ ಪರಿತ್ಯಾಗ ಮಾಡುವುದು, ಪ್ರಮಾದಗಳಿಂದ ದೂರವಾಗಿರುವುದು ಮತ್ತು ಯಾವುದೊಂದು ಪ್ರಾಣಿಯನ್ನೂ ಹಿಂಸೆಮಾಡದಿರುವುದು-ಇವು ತತ್ತ್ವಜ್ಞಾನಕ್ಕೆ ಮೂಲಕಾರಣಗಳಾಗಿರುತ್ತವೆ. ಇದರಲ್ಲಾವ ಸಂಶಯವೂ ಇರುವುದಿಲ್ಲ.

ಮಹಾರಾಜ! ನೀನು ಆಲಸ್ಯವನ್ನು ದೂರಮಾಡಿ ಇಂದ್ರಿಯಗಳನ್ನು ಜಯಿಸಲು ಪ್ರಯತ್ನಿಸು. ತತ್ತ್ವಚಿಂತನೆಯೊಂದನ್ನು ಬಿಟ್ಟು ಬೇರೆಯ ವಿಷಯಕ್ಕೆ ನಿನ್ನ ಬುದ್ಧಿಯು ಪ್ರವರ್ತಿಸದಿರಲಿ. ಎಲ್ಲಿಗೆಂದರಲ್ಲಿಗೆ ರಭಸದಿಂದ ಹರಿದಾಡುವ ನಿನ್ನ ಮನಸ್ಸನ್ನು ನಿಯಂತ್ರಿಸು.

**ಏತಜ್ಜ್ಞಾನಂ ವಿದುರ್ವಿಪ್ರಾ ಧ್ರುವಮಿನ್ದ್ರಿಯಧಾರಣಮ್ ।**
**ಏತಜ್ಜ್ಞಾನಂ ಚ ಪನ್ಥಾಶ್ಚ ಯೇನ ಯಾನಿ ಮನೀಷಿಣಃ ॥೨೦॥**

ದೃಢತೆಯಿಂದ ಇಂದ್ರಿಯಗಳ ಸಂಯಮವನ್ನು ಮಾಡಬೇಕು. ಇದನ್ನೇ ವಿದ್ವಾಂಸರಾದ ಬ್ರಾಹ್ಮಣರು ಜ್ಞಾನವೆಂದು ಹೇಳುತ್ತಾರೆ. ಈ ಜ್ಞಾನವೇ ಹೃಷೀಕೇಶನ ಪ್ರಾಪ್ತಿಗೆ ಭಯರಹಿತವಾದ ಮಾರ್ಗವಾಗಿದೆ. ಈ ಜ್ಞಾನ ಮಾರ್ಗದಿಂದಲೇ ಮನೀಷಿಗಳಾದವರು ಪರಮಪದಕ್ಕೆ ಹೋಗುತ್ತಾರೆ.

**ಅಪ್ರಾಪ್ಯಃ ಕೇಶವೋ ರಾಜನ್ನಿನ್ದ್ರಿಯೈರಜಿತೈರ್ನೃಭಿಃ ।**
**ಆಗಮಾಧಿಗಮಾದ್ಯೋಗಾದ್ವಶೀ ತತ್ತ್ವೇ ಪ್ರಸೀದತಿ ॥೨೧॥**

ಇಂದ್ರಿಯಗಳನ್ನು ಜಯಿಸದಿರುವ ಮಾನವರಿಂದ ಶ್ರೀಕೇಶವನು ಹೊಂದಲ್ಪಡತಕ್ಕವನಲ್ಲ. ಜಿತೇಂದ್ರಿಯರಲ್ಲದವರು ಶ್ರೀಕೇಶವನ ನಿಜಸ್ವರೂಪವನ್ನು ಕಂಡುಕೊಳ್ಳಲಾರರು. ಶಾಸ್ತ್ರಜ್ಞಾನದಿಂದಲೂ, ಚಿತ್ತವೃತ್ತಿಯ ನಿರೋಧದಿಂದಲೂ ಈಶ್ವರನು-ತನ್ನ ನಿಜಸ್ವರೂಪವನ್ನು ತೋರಿಸಿಕೊಡುವುದರ ಮೂಲಕ-ಪ್ರಸನ್ನನಾಗುತ್ತಾನೆ."

ಳ೯ನೆಯ ಅಧ್ಯಾಯವು ಮುಗಿಯಿತು.

## ಭಗವಾನ್ ಶ್ರೀಕೃಷ್ಣನ ವಿವಿಧನಾಮಗಳ ವ್ಯುತ್ಪತ್ತಿ

ಸಂಜಯನು ಶ್ರೀಕೃಷ್ಣನ ನಿಜಸ್ವರೂಪವನ್ನು ಕಂಡುಕೊಳ್ಳುವ ಜ್ಞಾನ ಮಾರ್ಗದ ವಿಷಯವಾಗಿ ಹೇಳಿದನಂತರ ಧೃತರಾಷ್ಟ್ರನು ಪುನಃ ಸಂಜಯನನ್ನು ಪ್ರಶ್ನಿಸುತ್ತಾನೆ :

**ಭೂಯೋ ಮೇ ಪುಣ್ಡರೀಕಾಕ್ಷಂ ಸಂಜಯಾಚಕ್ಷ್ವ ಪೃಚ್ಛತಃ ।**
**ನಾಮಕರ್ಮಾರ್ಥವಿತ್ತಾತ ಪ್ರಾಪ್ನುಯಾಂ ಪುರುಷೋತ್ತಮಮ್ ॥೧॥**

"ಸಂಜಯ! ನೀನು ಭಗವಾನ್ ಶ್ರೀಕೃಷ್ಣನ ನಾನಾವಿಧವಾದ ನಾಮಧೇಯಗಳು, ಆ ಹೆಸರುಗಳು ಬರಲು ಕಾರಣ ಅಥವಾ ಆ ಹೆಸರು ಗಳು ಬರಲು ಅವನು ಮಾಡಿರುವ ಕಾರ್ಯಗಳು–ಈ ಎಲ್ಲವನ್ನೂ ಬಲ್ಲವ ನಾಗಿರುವೆ. ಆದುದರಿಂದ ಪುನಃ ನಿನ್ನನ್ನು ಪ್ರಶ್ನಿಸುತ್ತೇನೆ. ನೀನು ಅವನ ಅನ್ವರ್ಥನಾಮಗಳ ವಿಷಯವಾಗಿಯೂ ಹೇಳಬೇಕು ಮತ್ತು ಪುಂಡರೀಕಾಕ್ಷ ನನ್ನು–ಪುರುಷೋತ್ತಮನನ್ನು ನಾನು ಹೊಂದುವ ವಿಷಯವಾಗಿಯೂ ಹೇಳಬೇಕು."

ಸಂಜಯನು ಹೇಳುತ್ತಾನೆ :

"ಮಹಾರಾಜ! ಶ್ರೀಕೃಷ್ಣನು ಅಪ್ರಮೇಯನು. ಅವನಿಗಿರುವ ನಾಮಧೇಯಗಳನ್ನಾಗಲೀ ಅವನು ಮಾಡಿರುವ ಕಾರ್ಯಗಳನ್ನಾಗಲೀ ಅಳೆಯುವ ಸಾಧ್ಯತೆಯಿಲ್ಲ. ನಾನು ವಾಸುದೇವನ ಹಲವಾರು ನಾಮಧೇಯ ಗಳನ್ನು ಕೇಳಿದ್ದೇನೆ. ಅವುಗಳ ನಿರ್ವಚನವನ್ನೂ ತಿಳಿದುಕೊಂಡಿರುತ್ತೇನೆ. ನಾನು ಎಷ್ಟರಮಟ್ಟಿಗೆ ತಿಳಿದುಕೊಂಡಿರುವೆನೋ ಅಷ್ಟನ್ನು ಮಾತ್ರ ನಿನಗೆ ಹೇಳುತ್ತೇನೆ.

**ವಸನಾತ್ಸರ್ವಭೂತಾನಾಂ ವಸುತ್ವಾದ್ದೇವಯೋನಿತಃ ।**
**ವಾಸುದೇವಸ್ತತೋ ವೇದ್ಯೋ ಬೃಹತ್ತ್ವಾದ್ವಿಷ್ಣುರುಚ್ಯತೇ ॥೩॥**

ಭಗವಾನ್ ಶ್ರೀಕೃಷ್ಣನು ಸಕಲಪ್ರಾಣಿಗಳಿಗೂ ನಿವಾಸಸ್ಥಾನ ನಾಗಿದ್ದಾನೆ ಮತ್ತು ಸಕಲಪ್ರಾಣಿಗಳ ಹೃದಯಗಳಲ್ಲಿಯೂ ಅವನು ವಾಸಮಾಡು ತ್ತಿದ್ದಾನೆ. ಅಂತೆಯೇ ಅವನು ದೇವತೆಗಳಿಗೂ ಉತ್ಪತ್ತಿಸ್ಥಾನನಾಗಿದ್ದಾನೆ

ಮತ್ತು ಸಕಲದೇವತೆಗಳೂ ಅವನಲ್ಲಿಯೇ ವಾಸಮಾಡುತ್ತಾರೆ. ಈ ಕಾರಣದಿಂದಾಗಿ ಅವನಿಗೆ ವಾಸುದೇವನೆಂಬ ಹೆಸರು ಪ್ರಾಪ್ತವಾಗಿದೆ. ಬೃಹತ್ (ಸರ್ವತ್ರವ್ಯಾಪಕ) ಆಗಿರುವುದರಿಂದ ಅವನನ್ನು ವಿಷ್ಣುವೆಂದೂ ಕರೆಯುತ್ತಾರೆ.

**ಮೌನಾದ್ಧ್ಯಾನಾಚ್ಚ ಯೋಗಾಚ್ಚ ವಿದ್ಧಿ ಭಾರತ ಮಾಧವಮ್ ।**
**ಸರ್ವತತ್ತ್ವಮಯತ್ವಾಚ್ಚ ಮಧುಹಾ ಮಧುಸೂದನಃ ॥೪॥**

ಮೌನ, ಧ್ಯಾನ ಮತ್ತು ಯೋಗಗಳಿಂದ ಮಾತ್ರವೇ ಮಾಧವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಆದುದರಿಂದ ಅವನಿಗೆ ಮಾಧವನೆಂಬ ಹೆಸರು ಬಂದಿದೆ. ಪೃಥಿವಿಯೇ ಮೊದಲಾದ ಸರ್ವತತ್ತ್ವಗಳಿಗೂ ಅಧಿಷ್ಠಾನಭೂತನಾಗಿರುವುದರಿಂದಲೂ, ಮಧುವೆಂಬ ರಾಕ್ಷಸನನ್ನು ಸಂಹರಿಸಿದುದರಿಂದಲೂ ಅವನಿಗೆ ಮಧುಸೂದನ ಎಂಬ ಹೆಸರು ಬಂದಿತು.

**ಕೃಷಿರ್ಭೂವಾಚಕಃ ಶಬ್ದೋ ಣಶ್ಚ ನಿರ್ವೃತಿವಾಚಕಃ ।**
**ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಸಾತ್ವತಃ ॥೫॥**

'ಕರ್ಷತಿ-ಆತ್ಮನಿ ಸರ್ವಂ ಸಂಹರತಿ ಇತಿ ಕೃಷಿಃ' ತನ್ನಲ್ಲಿಯೇ ಸರ್ವವನ್ನೂ ಅಡಗಿಸಿಕೊಳ್ಳುವ ಸಾಮರ್ಥ್ಯವಿರುವುದು ಕೃಷಿ. ಇದು ಭೂವಾಚಕಶಬ್ದವಾಗಿದೆ. ಭವತೀತಿ ಭೂಃ-ಸತ್ತಾರ್ಥಕವಾದುದು. 'ಣ' ಶಬ್ದವು ಆನಂದಾರ್ಥವಾಚಕವಾಗಿದೆ. ಈ ಎರಡು ಭಾವಗಳೂ ಅಡಗಿರುವುದರಿಂದಲೇ ಯದುಕುಲದಲ್ಲಿ ಹುಟ್ಟಿರುವ ನಿತ್ಯಾನಂದಸ್ವರೂಪನಾದ ಶ್ರೀವಿಷ್ಣುವು ಶ್ರೀಕೃಷ್ಣನಾದನು. (ಭೂಮಿಗೆ ಆನಂದವನ್ನುಂಟುಮಾಡತಕ್ಕವನಾದನು.)

**ಪುಣ್ಡರೀಕಂ ಪರಂ ಧಾಮ ನಿತ್ಯಮಕ್ಷಯಮವ್ಯಯಮ್ ।**
**ತದ್ಭಾವಾತ್ಪುಣ್ಡರೀಕಾಕ್ಷೋ ದಸ್ಯುತ್ರಾಸಾಜ್ಜನಾರ್ದನಃ ॥೬॥**

ಪುಂಡರೀಕವೆಂದರೆ ಬಿಳಿಯ ಕಮಲ.; ಬಿಳಿಯ ಕಮಲಕ್ಕೆ ಸದೃಶವಾದುದು ಹೃದಯಕಮಲ. ಆ ಹೃದಯಕಮಲವೇ ಶ್ರೇಷ್ಠವಾದ ನಿವಾಸಸ್ಥಾನವಾಗಿ ಉಳ್ಳವನು. ಅವನು ನಿತ್ಯನೂ, ಅಕ್ಷಯನೂ ಮತ್ತು ಅವ್ಯಯನೂ ಆಗಿರುತ್ತಾನೆ. ಈ ಭಾವವಿರುವುದರಿಂದಲೇ ಭಗವಾನ್ ಶ್ರೀಕೃಷ್ಣನು

ಪುಂಡರೀಕಾಕ್ಷನಾಗಿರುತ್ತಾನೆ. (ಬಿಳಿಯ ಕಮಲದಂತೆ ಅಗಲವಾದ ಕಣ್ಣುಗಳುಳ್ಳವನು ಪುಂಡರೀಕಾಕ್ಷ.) ದಸ್ಯುಗಳಿಗೆ (ಶತ್ರುಗಳಿಗೆ ಅಥವಾ ಕಳ್ಳ-ಕಾಕರಿಗೆ, ದುಷ್ಟರಿಗೆ) ತ್ರಾಸಕೊಡುವವನಾದುದರಿಂದ ಜನಾರ್ದನ. (ಜನಂ–ದಸ್ಯುಜನಂ–ಅರ್ದಯತಿ–ಪೀಡಯತಿ ಇತಿ ಜನಾರ್ದನಃ)

**ಯತಃ ಸತ್ತ್ವಾನ್ನ ಚ್ಯವತೇ ಯಚ್ಚ ಸತ್ತ್ವಾನ್ನ ಹೀಯತೇ ।**
**ಸತ್ತ್ವತಃ ಸಾತ್ವತಸ್ತಸ್ಮಾದಾರ್ಷಭಾದ್ವೃಷಭೇಕ್ಷಣಃ ॥೭॥**

ಶ್ರೀಕೃಷ್ಣನು ಸತ್ತ್ವಗುಣದಿಂದ ಚ್ಯುತನಾಗುವುದಿಲ್ಲ. ಸತ್ತ್ವಗುಣವೂ ಅವನಿಂದ ಪ್ರತ್ಯೇಕವಾಗಿ ಉಳಿಯುವುದಿಲ್ಲ. (ಬಲದಿಂದ ಹೀನನಾಗುವುದಿಲ್ಲ.) ಈ ವಿಧವಾಗಿ ಶ್ರೀಕೃಷ್ಣನಿಗೆ ಸತ್ತ್ವಗುಣದ ಅವಿನಾಭಾವಸಂಬಂಧವಿರುವುದರಿಂದ ಅವನಿಗೆ 'ಸಾತ್ವತ' ಎಂಬ ಹೆಸರು ಬಂದಿದೆ. ಆರ್ಷಂ =ವೇದಃ, ತೇನ ಭಾತೀತ್ಯಾರ್ಷಭಃ ವೇದದ ಮೂಲಕವಾಗಿ ಭಾಸಮಾನನಾಗತಕ್ಕವನು. ಆರ್ಷಭಃ = ಉಪನಿಷತ್ಪುರುಷಃ, ಉಪನಿಷದ್ವೇದ್ಯತ್ವಾತ್ - ಯೋಗಾತ್ ವೃಷಭೇಕ್ಷಣಃ ಉಪನಿಷತ್ತಿನ ಮೂಲಕ ವೇದ್ಯನಾಗುವವನಾದುದರಿಂದ ಅವನಿಗೆ ವೃಷಭೇಕ್ಷಣ ಎಂಬ ಹೆಸರು ಬಂದಿದೆ. ಅಥವಾ ವೃಷಂ ಭಾಸಯತೀತಿ ವೃಷಭಃ = ವೇದಃ - ಧರ್ಮವನ್ನು ತೋರಿಸಿಕೊಡತಕ್ಕದ್ದು ವೃಷಭ ಅಥವಾ ವೇದವು ; ಸಃ ವೇದಃ ಈಕ್ಷಣಂ ಚಕ್ಷುರಿವ ಜ್ಞಾಪಕಂ ಯಸ್ಯ ಸಃ ವೃಷಭೇಕ್ಷಣಃ - ವೇದವೇ ಈಕ್ಷಣವಾಗಿ ಅಥವಾ ಕಣ್ಣಾಗಿ ಉಳ್ಳವನು ವೃಷಭೇಕ್ಷಣ. (ಹೀಗೂ ಅರ್ಥಮಾಡಬಹುದಾಗಿದೆ.)

**ನ ಜಾಯತೇ ಜನಿತ್ರಾಯಮಜಸ್ತಸ್ಮಾದನೀಕಜಿತ್ ।**
**ದೇವಾನಾಂ ಸ್ವಪ್ರಕಾಶತ್ವಾದ್ದಮಾದ್ದಾಮೋದರೋ ವಿಭುಃ ॥೮॥**

ಶತ್ರುಸೈನ್ಯವನ್ನು ಜಯಿಸುವವನಾದ ಶ್ರೀಕೃಷ್ಣನು ಯಾವ ಜನ್ಮದಾತನಿಂದಲೂ ಹುಟ್ಟಿದವನಲ್ಲ. ಆದುದರಿಂದ ಅವನನ್ನು 'ಅಜ' ಎಂದು ಕರೆಯುತ್ತಾರೆ. ಇಂದ್ರಿಯಗಳ (ದೇವತೆಗಳ) ಮಧ್ಯದಲ್ಲಿ ಸ್ವಯಂಪ್ರಕಾಶನಾಗಿ ಬೆಳಗುತ್ತಾ ಇರುವುದರಿಂದ ಅವನು 'ಉದರ'. ಉತ್– ಉತ್ಕರ್ಷೇಣ, ಋಚ್ಛತಿ ಪ್ರಕಾಶತ ಇತಿ ಉದರಃ – ಉತ್ಕರ್ಷದಿಂದ ಪ್ರಕಾಶಿಸುವುದರಿಂದವನು 'ಉದರ' ; ದಮೋಽಸ್ಯಾಸ್ತೀತಿ ದಾಮಃ–

ದಮವು (ಜಿತೇಂದ್ರಿಯತೆ) ಯಾವನಲ್ಲಿದೆಯೋ ಅವನು ದಾಮ-ದಾಮ-ಶ್ಚಾಸಾವುದರಶ್ಚ-ದಾಮೋದರಃ ಅರ್ಥಾತ್ ಶ್ರೀಕೃಷ್ಣನಲ್ಲಿ ದಮವೂ-ಸ್ವಯಂಪ್ರಕಾಶತ್ವವೂ ಇರುವುದರಿಂದ ಅವನು ದಾಮೋದರನಾಮಕನಾಗಿರುತ್ತಾನೆ.

**ಹರ್ಷಾತ್ಸುಖಾತ್ಸುಖೈಶ್ವರ್ಯಾದ್ಧೃಷೀಕೇಶತ್ವಮಶ್ನುತೇ ।**
**ಬಾಹುಭ್ಯಾಂ ರೋದಸೀ ಬಿಭ್ರನ್ಮಹಾಬಾಹುರಿತಿ ಸ್ಮೃತಃ ॥೯॥**

ಹರ್ಷದಿಂದಲೂ ಮತ್ತು ಸುಖದಿಂದಲೂ ಯುಕ್ತನಾಗಿರುವುದರಿಂದ 'ಹೃಷೀಕ' ; ಸುಖೈಶ್ವರ್ಯದಿಂದ ಕೂಡಿದವನಾದುದರಿಂದ 'ಈಶ'-ಈ ರೀತಿಯಾಗಿ ಭಗವಾನ್ ಶ್ರೀಕೃಷ್ಣನು ಹೃಷೀಕೇಶನಾಮಕನಾಗಿರುತ್ತಾನೆ. ತನ್ನೆರಡು ಬಾಹುಗಳಿಂದಲೂ ಭಗವಂತನು ಈ ಪೃಥ್ವಿಯನ್ನೂ ಮತ್ತು ಆಕಾಶವನ್ನೂ ಧಾರಣೆಮಾಡಿರುವುದರಿಂದ ಮಹಾಬಾಹುನಾಮಕನಾಗಿದ್ದಾನೆ.

**ಅಧೋ ನ ಕ್ಷೀಯತೇ ಜಾತು ಯಸ್ಮಾತ್ತಸ್ಮಾದಧೋಕ್ಷಜಃ ।**
**ನರಾಣಾಮಯನಾಚ್ಚಾಪಿ ತತೋ ನಾರಾಯಣಃ ಸ್ಮೃತಃ ॥೧೦॥**

ಸಂಸಾರಧರ್ಮಕ್ಕೊಳಪಡದೇ ಯಾವಾಗಲೂ ಊರ್ಧ್ವಮುಖನಾಗಿಯೇ ಇರುವುದರಿಂದ ಅವನು 'ಅಧೋಕ್ಷಜ'-(ಅಧೋಕ್ಷಜಃ ಎಂಬುದಕ್ಕೆ ಅಧೋ ನ ಕ್ಷೀಯತೇ ಜಾತು ಎಂಬುದೇ ವಿಗ್ರಹವಾಕ್ಯ ; ಉತ್ತರಪದಾವಯವಲೋಪದಿಂದ ಅಧೋಕ್ಷಜಃ ಎಂದಾಗಿರುತ್ತದೆ.) ನರರಿಗೆ (ಜೀವಾತ್ಮರಿಗೆ) ಆಶ್ರಯಭೂತನಾಗಿರುವುದರಿಂದ ಅವನನ್ನು 'ನಾರಾಯಣ' ಎಂದೂ ಕರೆಯುತ್ತಾರೆ.

**ಪೂರಣಾತ್ಸದನಾಚ್ಚಾಪಿ ತತೋಽಸೌ ಪುರುಷೋತ್ತಮಃ ।**
**ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವಾಪ್ಯಯಾತ್ ।**
**ಸರ್ವಸ್ಯ ಚ ಸದಾ ಜ್ಞಾನಾತ್ಸರ್ವಮೇತಂ ಪ್ರಚಕ್ಷತೇ ॥೧೧॥**

ಸರ್ವತ್ರ ಪರಿಪೂರ್ಣನಾಗಿರುವುದರಿಂದಲೂ, ಸರ್ವರಿಗೂ ನಿವಾಸಸ್ಥಾನನಾಗಿರುವುದರಿಂದಲೂ ಅವನು 'ಪುರುಷ'. ಪುರುಷನೂ ಉತ್ತಮನೂ ಎನಿಸಿರುವುದರಿಂದ ಶ್ರೀಕೃಷ್ಣನು ಪುರುಷೋತ್ತಮನಾಮಕನಾಗಿರುತ್ತಾನೆ. (ಪೂರಯತೀತಿ ಪುರುಃ; ಸೀದನ್ತ್ಯಸ್ಮಿನ್ನಿತಿ ಸಃ-

**ತಸ್ಮಾತ್ಪುರುಷಃ ಪುರುಷಶ್ಚಾಸೌ ಉತ್ತಮಶ್ಚ ಪುರುಷೋತ್ತಮಃ)** ಸತ್-ಅಸತ್ತುಗಳ ಉತ್ಪತ್ತಿ ಮತ್ತು ಲಯಸ್ಥಾನನಾಗಿರುವುದರಿಂದಲೂ–ಈ ಎಲ್ಲವನ್ನೂ ಎಲ್ಲ ಕಾಲಗಳಲ್ಲಿಯೂ ತಿಳಿದುಕೊಂಡಿರುವ ಕಾರಣದಿಂದಲೂ (ಸರ್ವಜ್ಞನಾದುದರಿಂದಲೂ) ಶ್ರೀಕೃಷ್ಣನನ್ನು ಸರ್ವನೆಂದೂ ಹೇಳುತ್ತಾರೆ.

**ಸತ್ಯೇ ಪ್ರತಿಷ್ಠಿತಃ ಕೃಷ್ಣಃ ಸತ್ಯಮತ್ರ ಪ್ರತಿಷ್ಠಿತಮ್ ।**
**ಸತ್ಯಾತ್ಸತ್ಯಂ ತು ಗೋವಿನ್ದಸ್ತಸ್ಮಾತ್ಸತ್ಯೋಽಪಿ ನಾಮತಃ ॥೧೨॥**

ಶ್ರೀಕೃಷ್ಣನು ಸತ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಸತ್ಯವು ಶ್ರೀಕೃಷ್ಣನಲ್ಲಿ ಪ್ರತಿಷ್ಠಿತವಾಗಿದೆ. ಭಗವಾನ್ ಗೋವಿಂದನು ಸತ್ಯಕ್ಕೂ ಶ್ರೇಷ್ಠನಾದ ಸತ್ಯನಾಗಿರುತ್ತಾನೆ. ಪರಮಸತ್ಯನಾಗಿರುತ್ತಾನೆ. ಆದುದರಿಂದ ಅವನು ಸತ್ಯನಾಮಕನೂ ಆಗಿರುತ್ತಾನೆ.

**ವಿಷ್ಣುರ್ವಿಕ್ರಮಣಾದ್ದೇವೋ ಜಯನಾಜ್ಜಿಷ್ಣುರುಚ್ಯತೇ ।**
**ಶಾಶ್ವತತ್ವಾದನನ್ತಶ್ಚ ಗೋವಿನ್ದೋ ವೇದನಾದ್ಗವಾಮ್ ॥೧೩॥**

ವಿಕ್ರಮಣಪ್ರದರ್ಶನದಿಂದ ವಿಷ್ಣುವಾಗಿದ್ದಾನೆ. (ವಾಮನಾವತಾರದಲ್ಲಿ ತ್ರಿವಿಕ್ರಮನಾಗಿ ಮೂರು ಲೋಕಗಳನ್ನೂ ಆಕ್ರಮಿಸಿದನು.) ಎಲ್ಲರನ್ನೂ ಜಯಿಸುವ ಸಾಮರ್ಥ್ಯವಿರುವವನಾದುದರಿಂದ ಜಿಷ್ಣುನಾಮಕನಾಗಿದ್ದಾನೆ. ಶಾಶ್ವತನಾದುದರಿಂದ ಅನಂತನಾಮಕನಾಗಿರುತ್ತಾನೆ. ಇಂದ್ರಿಯಗಳನ್ನು ತಿಳಿದಿರುವವನಾದುದರಿಂದ ಮತ್ತು ಇಂದ್ರಿಯಗಳನ್ನು ಪ್ರಕಾಶಗೊಳಿಸುವವನಾದುದರಿಂದ– (**ಗಾಂ** ವಿನ್ದತಿ ಎಂಬ ವ್ಯುತ್ಪತ್ತಿಗೆ ಅನುಸಾರವಾಗಿ) ಅವನನ್ನು ಗೋವಿಂದನೆಂದೂ ಕರೆಯುತ್ತಾರೆ.

**ಅತತ್ತ್ವಂ ಕುರುತೇ ತತ್ತ್ವಂ ತೇನ ಮೋಹಯತೇ ಪ್ರಜಾಃ ॥೧೪॥**

ಅನಿತ್ಯವಾದ ಜಗತ್ತು ನಿತ್ಯವೆಂಬ ಭ್ರಾಂತಿಯನ್ನು ಪ್ರಜೆಗಳಿಗೆ ಶ್ರೀಕೃಷ್ಣನು ಉಂಟುಮಾಡುತ್ತಾನೆ. ಈ ಭ್ರಾಂತಿಯಿಂದಲೇ ಪ್ರಜೆಗಳು ವಿಮೋಹಿತರಾಗುತ್ತಾರೆ.

**ಏವಂವಿಧೋ ಧರ್ಮನಿತ್ಯೋ ಭಗವಾನ್ಮಧುಸೂದನಃ ।**
**ಆಗನ್ತಾ ಹಿ ಮಹಾಬಾಹುರಾನೃಶಂಸ್ಯಾರ್ಥಮಚ್ಯುತಃ ॥೧೫॥**

ನಿರಂತರವಾಗಿ ಧರ್ಮದಲ್ಲಿಯೇ ನಿಷ್ಠನಾಗಿರುವ ಭಗವಂತನಾದ ಮಧುಸೂದನನ ಸ್ವರೂಪಗಳು ಇಷ್ಟು ವಿಧಗಳಾಗಿವೆ. ತನ್ನ ಮರ್ಯಾದೆಯಿಂದ ಯಾವಾಗಲೂ ಚ್ಯುತನಾಗದ ಮಹಾಬಾಹುವಾದ ಶ್ರೀಕೃಷ್ಣನು ಕೌರವರ ವಿಷಯದಲ್ಲಿ ಕೃಪೆಯನ್ನು ತೋರುವ ಕಾರಣದಿಂದ ಇಲ್ಲಿಗೆ (ಹಸ್ತಿನಾಪಟ್ಟಣಕ್ಕೆ) ಆಗಮಿಸುವವನಿದ್ದಾನೆ.”

೭೦ನೆಯ ಅಧ್ಯಾಯವು ಮುಗಿಯಿತು.

೭೧ನೆಯ ಅಧ್ಯಾಯ ಯಾನಸಂಧಿಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನು ಭಗವದ್ಗುಣಗಳನ್ನು ಗಾನಮಾಡಿದುದು

ಪಾರಿಕ್ಷಿತ! ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳುತ್ತಾನೆ :

**ಚಕ್ಷುಷ್ಮತಾಂ ವೈ ಸ್ಪೃಹಯಾಮಿ ಸಂಜಯ**
**ದ್ರಕ್ಷ್ಯನ್ತಿ ಯೇ ವಾಸುದೇವಂ ಸಮೀಪೇ ।**
**ವಿಭ್ರಾಜಮಾನಂ ವಪುಷಾ ಪರೇಣ**
**ಪ್ರಕಾಶಯನ್ತಂ ಪ್ರದಿಶೋ ದಿಶಶ್ಚ ॥೧॥**

“ಸಂಜಯ! ಶ್ರೇಷ್ಠವಾದ ಮತ್ತು ಉತ್ತಮೋತ್ತಮವಾದ ಶರೀರದಿಂದ ಯಾವನು ಪ್ರಕಾಶಮಾನನಾಗಿರುವನೋ, ತನ್ನ ದಿವ್ಯವಾದ ಶರೀರ ಕಾಂತಿಯಿಂದ ದಿಕ್ಕುಗಳನ್ನೂ ಮತ್ತು ಉಪದಿಕ್ಕುಗಳನ್ನೂ ಯಾವನು ಪ್ರಕಾಶಗೊಳಿಸುತ್ತಾನೆಯೋ–ಅಂತಹ ವಸುದೇವನಂದನನಾದ ಶ್ರೀಕೃಷ್ಣನನ್ನು ಯಾರು ಅತ್ಯಂತಸಮೀಪದಲ್ಲಿಯೇ ನೋಡಿ ಆನಂದಿಸುತ್ತಾರೆಯೋ ಅಂತಹ ಚಕ್ಷುಷ್ಮಂತರ ಸೌಭಾಗ್ಯವನ್ನು ನಾನೂ ಆಶಿಸುತ್ತೇನೆ.

**ಈರಯನ್ತಂ ಭಾರತೀಂ ಭಾರತಾನಾ–**
**ಮಭ್ಯರ್ಚನೀಯಾಂ ಶಙ್ಕರೀಂ ಸೃಂಜಯಾನಾಮ್ ।**
**ಬುಭೂಷದ್ಭಿರ್ಗ್ರಹಣೀಯಾಮನಿನ್ದ್ಯಾಂ**
**ಪರಾಸೂನಾಮಗ್ರಹಣೀಯರೂಪಾಮ್ ॥೨॥**

ಕೃಷ್ಣನ ಪ್ರವಚನವು ಶುಭದಾಯಕವಾದುದು. ಅವನ ವಾರ್ತೆಯು ಭಾರತರಿಗೂ (ಭರತವಂಶೀಯರಿಗೂ) ಮತ್ತು ಸೃಂಜಯರಿಗೂ ಪರಮ

ಪಾವನವೂ, ಮಂಗಳಕರವೂ ಆಗಿರುತ್ತದೆ. ಐಶ್ವರ್ಯೇಚ್ಛುಗಳಿಗೆ ಭಗವಂತನ ವಾಣಿಯು ಗ್ರಾಹ್ಯವೂ, ಅನಿಂದ್ಯವೂ ಆಗಿರುತ್ತದೆ. ಆದರೆ ಮೃತ್ಯುವಿನ ಸಮೀಪದಲ್ಲಿರುವವರಿಗೆ ಅವನ ದಿವ್ಯವಾಣಿಯು ಅಗ್ರಾಹ್ಯವಾಗಿರುತ್ತದೆ. ಅಂತಹ ದಿವ್ಯವಾಣಿಯ ಪ್ರವಕ್ತೃವಾದ ಶ್ರೀಕೃಷ್ಣನನ್ನು ಹತ್ತಿರದಲ್ಲಿ ನೋಡಿ ಆನಂದಿಸುವ ಚಕ್ಷುಷ್ಮಂತರ ಸೌಭಾಗ್ಯವನ್ನು ನಾನೂ ಆಶಿಸುತ್ತೇನೆ.

ಸಮುದ್ಯನ್ತಂ ಸಾತ್ವತಮೇಕವೀರಂ
ಪ್ರಣೇತಾರಮೃಷಭಂ ಯಾದವಾನಾಮ್ ।
ನಿಹನ್ತಾರಂ ಕ್ಷೋಭಣಂ ಶಾತ್ರವಾಣಾಂ
ಮುಞ್ಚನ್ತಂ ದ್ವಿಷತಾಂ ವೈ ಯಶಾಂಸಿ ॥೩॥

ಶರೀರರೂಪದಿಂದ ಪ್ರಕಟನಾಗಿರುವ, ಸಾತ್ವತಕುಲಕ್ಕೆ ಏಕವೀರನಾಗಿರುವ, ಯದುವಂಶೀಯರಿಗೆ ಶ್ರೇಷ್ಠನಾಯಕನಾಗಿರುವ, ಶತ್ರುಗಳಿಗೆ ಭಯವನ್ನುಂಟುಮಾಡುವ, ಶತ್ರುಗಳನ್ನು ಸಂಹರಿಸುವ ಮತ್ತು ಶತ್ರುಗಳ ಕೀರ್ತಿಯನ್ನು ವಿನಾಶಗೊಳಿಸುವ ಶ್ರೀಕೃಷ್ಣನನ್ನು ಬಹಳ ಹತ್ತಿರದಲ್ಲಿಯೇ ನಿಂತು ಯಾರ ದಿವ್ಯಚಕ್ಷುಗಳು ಸಂದರ್ಶಿಸುತ್ತವೆಯೋ–ಅಂತಹವರ ಸೌಭಾಗ್ಯವನ್ನು ನಾನೂ ಅಪೇಕ್ಷಿಸುತ್ತೇನೆ.

ದ್ರಷ್ಟಾರೋ ಹಿ ಕುರವಸ್ತಂ ಸಮೇತಾ
ಮಹಾತ್ಮಾನಂ ಶತ್ರುಹಣಂ ವರೇಣ್ಯಮ್ ।
ಬ್ರುವನ್ತಂ ವಾಚಮನೃಶಂಸರೂಪಾಂ
ವೃಷ್ಣಿಶ್ರೇಷ್ಠಂ ಮೋಹಯನ್ತಂ ಮದೀಯಾನ್ ॥೪॥

ಮಹಾತ್ಮನಾದ, ಶತ್ರುಸಂಹಾರಕನಾದ, ಶ್ರೇಷ್ಠನಾದ, ಕೃಪಾಪೂರ್ಣವಾದ ಕೋಮಲವಾದ ಮಾತುಗಳನ್ನಾಡುವ, (ಅಂತಹ ಮಾತುಗಳಿಂದ) ನಮ್ಮ ಕಡೆಯುವರನ್ನೂ ಮೋಹಗೊಳಿಸುವ, ವೃಷ್ಣಿಶ್ರೇಷ್ಠನಾದ ಶ್ರೀಕೃಷ್ಣನನ್ನು ಎಲ್ಲ ಕುರುರಾಜಕುಮಾರರೂ ಒಟ್ಟಾಗಿ ಸೇರಿ ನೋಡುತ್ತಾರೆ.

ಋಷಿಂ ಸನಾತನತಮಂ ವಿಪಶ್ಚಿತಂ
ವಾಚಃ ಸಮುದ್ರಂ ಕಲಶಂ ಯತೀನಾಮ್ ।
ಅರಿಷ್ಟನೇಮಿಂ ಗರುಡಂ ಸುಪರ್ಣಂ
ಹರಿಂ ಪ್ರಜಾನಾಂ ಭುವನಸ್ಯ ಧಾಮ ॥೫॥

ಸಹಸ್ರಶೀರ್ಷಂ ಪುರುಷಂ ಪುರಾಣ–
ಮನಾದಿಮಧ್ಯಾನ್ತಮನನ್ತಕೀರ್ತಿಮ್ ।
ಶುಕ್ರಸ್ಯ ಧಾತಾರಮಜಂ ಚ ನಿತ್ಯಂ
ಪರಂ ಪರೇಷಾಂ ಶರಣಂ ಪ್ರಪದ್ಯೇ ॥೬॥

ಸನಾತನಮಹರ್ಷಿಯಾದ, ಆತ್ಮಜ್ಞನಾದ, ಅಭಯಮುದ್ರೆಯಿಂದ ಕೂಡಿರುವ ಅಥವಾ ಯೋಗಮುದ್ರೆಯಿಂದ ಕೂಡಿರುವ, ವಾಣಿಗೆ ಸಮುದ್ರ ಪ್ರಾಯನಾದ, ಯತಿಗಳಿಗೆ ಕಲಶಪ್ರಾಯನಾದ (ಯತಿಶ್ರೇಷ್ಠನಾದ), ವಿಘ್ನ ವಿನಾಶಕಗಳಾದ ಪಾದಕಮಲಗಳನ್ನು ಹೊಂದಿರುವ, ಸುವರ್ಣಮಯವಾದ ಪಕ್ಷಗಳಿಂದ ಕೂಡಿರುವ ಗರುಡರೂಪನಾದ (ಗರುಡನೇ ವಾಹನವಾಗಿ ಉಳ್ಳ), ಪ್ರಜೆಗಳ ಕಷ್ಟಗಳನ್ನು ನಿವಾರಿಸುವ (ಹರಿಂ–ಹರ್ತಾರಂ), ಜಗತ್ತಿಗೆ ಆಶ್ರಯಸ್ಥಾನನಾದ, ಸಹಸ್ರಶೀರ್ಷನಾದ, ಪುರಾಣಪುರುಷನಾದ, ಆದಿ ಮಧ್ಯಾಂತರಹಿತನಾದ, ಅನಂತವಾದ ಕೀರ್ತಿಯಿಂದ ಸುಶೋಭಿತನಾದ, ಬ್ರಹ್ಮಾಂಡಬೀಜರೂಪವಾದ ಮಹಾವೀರ್ಯವನ್ನು ಧಾರಣೆಮಾಡಿರುವ, ಹುಟ್ಟು-ಸಾವುಗಳಿಲ್ಲದ, ಶಾಶ್ವತನಾದ, ಪರಾತ್ಪರನಾದ, ಅತ್ಯಂತಶ್ರೇಷ್ಠನಾದ ನಾರಾಯಣನನ್ನು (ಶ್ರೀಕೃಷ್ಣನನ್ನು) ಶರಣುಹೊಂದುತ್ತೇನೆ.

ತ್ರೈಲೋಕ್ಯನಿರ್ಮಾಣಕರಂ ಜನಿತ್ರಂ
ದೇವಾಸುರಾಣಾಮಥ ನಾಗರಕ್ಷಸಾಮ್ ।
ನರಾಧಿಪಾನಾಂ ವಿದುಷಾಂ ಪ್ರಧಾನ–
ಮಿನ್ದ್ರಾನುಜಂ ತಂ ಶರಣಂ ಪ್ರಪದ್ಯೇ ॥೭॥

ಮೂರು ಲೋಕಗಳನ್ನೂ ನಿರ್ಮಾಣಮಾಡಿರುವ, ದೇವಾಸುರ-ನಾಗ-ರಾಕ್ಷಸರಿಗೂ ಜನಕನಾದ, ಜ್ಞಾನಿಗಳಾದ ರಾಜರ್ಷಿಗಳಿಗೆ ಪ್ರಧಾನಭೂತನಾದ, ಇಂದ್ರನ ತಮ್ಮನಾದ (ವಾಮನರೂಪನಾದ ಉಪೇಂದ್ರನಾದ) ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ."

೭೧ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನು ಶ್ರೀಕೃಷ್ಣನಿಗೆ ಯುದ್ಧದ ವಿಷಯವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದುದು : ಕೌರವಸಭೆಗೆ ಶ್ರೀಕೃಷ್ಣನನ್ನು ಶಾಂತಿದೂತನನ್ನಾಗಿ ಕಳುಹಿಸಲು ಸಿದ್ಧತೆ

ಜನಮೇಜಯ! ಮಹಾನುಭಾವನಾದ ಸಂಜಯನು ಕೃಷ್ಣಾರ್ಜುನರ ಸಂದೇಶವನ್ನು ಪಡೆದುಕೊಂಡು ಹಸ್ತಿನಾಪಟ್ಟಣಕ್ಕೆ ಹೊರಟುಹೋದನಂತರ ಇತ್ತಲಾಗಿ ಧರ್ಮಾತ್ಮನಾದ ಯುಧಿಷ್ಠಿರನು–ದಾಶಾರ್ಹಕುಲನಂದನನಾದ, ಯದುವಂಶೀಯರಲ್ಲಿಯೇ ಶ್ರೇಷ್ಠನಾದ ಶ್ರೀಕೃಷ್ಣನನ್ನು ಕುರಿತು ಹೇಳಿದನು :

**ಅಯಂ ಸ ಕಾಲಃ ಸಮ್ಪ್ರಾಪ್ತೋ ಮಿತ್ರಾಣಾಂ ಮಿತ್ರವತ್ಸಲ ।**
**ನ ಚ ತ್ವದನ್ಯಂ ಪಶ್ಯಾಮಿ ಯೋ ನ ಆಪತ್ಸು ತಾರಯೇತ್ ॥೨॥**

"ಮಿತ್ರವತ್ಸಲನೇ! ಶ್ರೀಕೃಷ್ಣ! ಮಿತ್ರರಿಗೆ ಸಹಾಯಮಾಡಬೇಕಾದ ಕಾಲವು ಇದೀಗ ಸನ್ನಿಹಿತವಾಗಿದೆ. ನಿನ್ನೊಬ್ಬನನ್ನು ಬಿಟ್ಟು ಆಪತ್ಕಾಲದಲ್ಲಿ ನಮ್ಮನ್ನು ಈ ವಿಪತ್ತಿನಿಂದ ಪಾರುಮಾಡುವ ಬೇರೆ ಯಾರನ್ನೂ ನಾನು ಕಾಣೆನು. (ನೀನೊಬ್ಬನೇ ನಮ್ಮ ಆಪದ್ಬಾಂಧವನು.)

ನಾವು ಮಾಧವನಾದ ನಿನ್ನನ್ನಾಶ್ರಯಿಸಿರುವುದರಿಂದಲೇ ನಿರ್ಭಯರಾಗಿ, ನಿರರ್ಥಕವಾದ ದರ್ಪದಿಂದ ಕೂಡಿರುವ ಸಹಾಮಾತ್ಯನಾದ ಧಾರ್ತರಾಷ್ಟ್ರನನ್ನು–ನಮಗೆ ಸೇರಬೇಕಾಗಿರುವ ಅರ್ಧರಾಜ್ಯವನ್ನು ಕೊಟ್ಟುಬಿಡುವಂತೆ–ನಾವಾಗಿಯೇ ಕೇಳುತ್ತಿದ್ದೇವೆ.

ಅರಿಂದಮನೇ! ವೃಷ್ಣಿವಂಶದವರನ್ನು ನೀನು ಹೇಗೆ ಎಲ್ಲ ಆಪತ್ತುಗಳಿಂದಲೂ ಪಾರುಮಾಡುವೆಯೋ–ಅದೇ ರೀತಿಯಲ್ಲಿ ಪಾಂಡವರನ್ನೂ ರಕ್ಷಿಸಬೇಕಾಗಿದೆ. ಪುರುಷೋತ್ತಮ! ಮುಂದೆ ಸಂಭವಿಸಬಹುದಾದ ಮಹಾಭಯದಿಂದ ನಮ್ಮನ್ನು ಪಾರುಮಾಡು."

ಯುಧಿಷ್ಠಿರನ ಮಾತನ್ನು ಕೇಳಿ ಶ್ರೀಕೃಷ್ಣನು ಹೇಳಿದನು :

**ಅಯಮಸ್ಮಿ ಮಹಾಬಾಹೋ ಬ್ರೂಹಿ ಯತ್ತೇ ವಿವಕ್ಷಿತಮ್ ।**
**ಕರಿಷ್ಯಾಮಿ ಹಿ ತತ್ಸರ್ವಂ ಯತ್ತ್ವಂ ವಕ್ಷ್ಯಸಿ ಭಾರತ ॥೫॥**

"ಮಹಾಬಾಹೋ! ಆಪತ್ಕಾಲದಲ್ಲಿ ನಿಮಗೆ ಸಹಾಯವನ್ನೆಸಗುವ ಸಲುವಾಗಿಯೇ ನಾನಿಲ್ಲಿ ಉಪಸ್ಥಿತನಾಗಿದ್ದೇನೆ. ಧರ್ಮಜ! ನೀನೇನು



ಹೇಳಬೇಕೆಂದಿರುವೆಯೋ ಅದನ್ನು ಹೇಳು. ನೀನು ಯಾವ ಕಾರ್ಯಗಳನ್ನು ಮಾಡಲು ಹೇಳುವೆಯೋ–ಆ ಎಲ್ಲ ಕಾರ್ಯಗಳನ್ನೂ ನಾನು ಮಾಡಿಕೊಡುತ್ತೇನೆ."

"ಶ್ರೀಕೃಷ್ಣ! ಪುತ್ರಸಹಿತನಾದ ಧೃತರಾಷ್ಟ್ರನು ಏನು ಮಾಡಲಿಚ್ಛಿಸಿರುವನೆಂಬ ವಿಷಯವು ನಿನಗೀಗಾಗಲೇ ತಿಳಿದಿದೆ. ಈ ವಿಷಯವನ್ನು

ಸಂಜಯನು ನನ್ನಲ್ಲಿ ಬಹುಸ್ಪಷ್ಟವಾಗಿಯೇ ಹೇಳಿರುತ್ತಾನೆ. ಸಂಜಯನಿಲ್ಲಿಗೆ ಬಂದು ಯಾವ ಭಾವನೆಯನ್ನು ವ್ಯಕ್ತಪಡಿಸಿದನೋ–ಅದು ಸಂಪೂರ್ಣ ವಾಗಿ ಧೃತರಾಷ್ಟ್ರನ ಅಭಿಪ್ರಾಯವೇ ಆಗಿರುತ್ತದೆ. ಸಂಜಯನಿಲ್ಲಿಗೆ ಧೃತರಾಷ್ಟ್ರನಿಂದ ಅಭಿನ್ನನಾಗಿ ಬಂದಿದ್ದನು–ಅರ್ಥಾತ್ ಸಂಜಯನಿಲ್ಲಿಗೆ ಬಂದಿದ್ದರೂ ಅವನ ಹೃದಯವು ಅಥವಾ ಅವನಾಡಿರುವ ಮಾತುಗಳು ಧೃತರಾಷ್ಟ್ರನದೇ ಆಗಿದ್ದುವು. ಸಂಜಯನ ಮೂಲಕವಾಗಿ ಧೃತರಾಷ್ಟ್ರನು ತನ್ನ ಅಭಿಮತ ವೇನೆಂಬುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿರುತ್ತಾನೆ. ಸಂಜಯನಿಲ್ಲಿಗೆ ಧೃತರಾಷ್ಟ್ರನ ದೂತನಾಗಿ ಬಂದಿದ್ದರಿಂದ ರಾಜನೇನು ಹೇಳಿದ್ದನೋ ಅದನ್ನೇ ಅವನು ನಮ್ಮೊಡನೆ ಹೇಳಿದ್ದಾನೆ. 'ವಧ್ಯಃ ಸ್ಯಾದನ್ಯಥಾ ಬ್ರುವನ್'-ದೂತ ನಾಗಿ ಬಂದವನು ತನ್ನ ಸ್ವಾಮಿಯ ಅಭಿಪ್ರಾಯವನ್ನು ಮಂಡಿಸದೇ ತನ್ನ ಅಭಿಪ್ರಾಯವನ್ನು ಎದುರಾಳಿಯ ಮುಂದಿಟ್ಟುಬಿಟ್ಟರೆ ವಧ್ಯನಾಗುತ್ತಾನೆ. (ವಧಾರ್ಹನಾಗುತ್ತಾನೆ.) ತನಗೆ ಯೋಗ್ಯವಾದ ರೀತಿಯಲ್ಲಿ ವ್ಯವಹರಿಸದೇ ಕೇವಲ ಲುಬ್ಧನಾಗಿ ಪಾಪಭೂಯಿಷ್ಠವಾದ ಮನಸ್ಸಿನಿಂದ ಕೂಡಿರುವ ಧೃತ ರಾಷ್ಟ್ರನು ನಮಗೆ ಕೊಡಬೇಕಾಗಿರುವ ಅರ್ಧರಾಜ್ಯವನ್ನೂ ಕೊಡದೆಯೇ ನಮ್ಮೊಡನೆ ಸಂಧಾನವನ್ನು ಅಪೇಕ್ಷಿಸಿದ್ದಾನೆ. ಧೃತರಾಷ್ಟ್ರನು ತನ್ನ ಮಾತಿನಂತೆ ನಡೆದುಕೊಳ್ಳುವನೆಂಬ ಅಭಿಪ್ರಾಯದಿಂದಲೇ ನಾವು ಅವನ ಆಜ್ಞಾನು ಸಾರವಾಗಿ ಹನ್ನೆರಡು ವರ್ಷಗಳನ್ನು ಅರಣ್ಯದಲ್ಲಿಯೂ ಒಂದು ವರ್ಷವನ್ನು ಅಜ್ಞಾತವಾಸದಲ್ಲಿಯೂ ಕಳೆದೆವು. ನಾವು ಮಾಡಿಕೊಂಡಿದ್ದ ಕಟ್ಟುಪಾಡನ್ನು ಒಮ್ಮೆಯಾದರೂ ಮುರಿಯುವ ಪ್ರಯತ್ನವನ್ನು ಮಾಡಲಿಲ್ಲ. ನಾವು ಮಾಡಿದ್ದ ಪ್ರತಿಜ್ಞೆಯನ್ನು ಪೂರ್ಣಮಾಡಿರುವೆವೆಂಬ ವಿಷಯವನ್ನು ನಮ್ಮೊಡನೆಯೇ ಇದ್ದ ಈ ಬ್ರಾಹ್ಮಣರೆಲ್ಲರೂ ತಿಳಿದುಕೊಂಡಿರುತ್ತಾರೆ. ಲೋಭಿಯಾದ ಧೃತರಾಷ್ಟ್ರನು ಈ ಸಮಯದಲ್ಲಿ ಸ್ವಧರ್ಮವೇನೆಂಬುದನ್ನು ನೋಡುತ್ತಿಲ್ಲ. ಅಥವಾ ಕ್ಷತ್ರಿಯಧರ್ಮದಂತೆ ನಡೆಯುವ ಇಚ್ಛೆಯೂ ಅವನಿಗಿಂದು ಇರುವು ದಿಲ್ಲ. ಮಗನ ಮೇಲಿನ ವ್ಯಾಮೋಹದಿಂದಲೂ ಮತ್ತು ಮಗನ ವಶವರ್ತಿ ಯಾಗಿರುವುದರಿಂದಲೂ ಧೃತರಾಷ್ಟ್ರನಿಂದು ಮೂರ್ಖನಾದ ದುರ್ಯೋಧನನ ಆಜ್ಞಾಧಾರಕನಾಗಿರುತ್ತಾನೆ. ದುರ್ಯೋಧನನ ಅಭಿಪ್ರಾಯಕ್ಕೆ ಅನುಸಾರ

ವಾಗಿಯೇ ನಡೆಯುವ ಪರಮಲೋಭಿಯಾಗಿರುವ ಧೃತರಾಷ್ಟ್ರನು ಸ್ವಾರ್ಥ ದಲ್ಲಿಯೇ ಹೆಚ್ಚಿನ ಆಸಕ್ತಿಯನ್ನು ಹೊಂದಿದವನಾಗಿ ನಮ್ಮ ವಿಷಯದಲ್ಲಿ ಅಸತ್ಯದ ವ್ಯವಹಾರವನ್ನು ಮಾಡುತ್ತಿದ್ದಾನೆ. (ಅಪ್ರಾಮಾಣಿಕವಾಗಿ ವರ್ತಿಸುತ್ತಿದ್ದಾನೆ.) ಜನಾರ್ದನ! ನಾನು ನನ್ನ ತಾಯಿಯ ಪೋಷಣೆಮಾಡಲೂ ಅಸಮರ್ಥನಾಗಿದ್ದೇನೆ ಮತ್ತು ನನ್ನ ಮಿತ್ರರನ್ನು ಸಾಕಿ-ಸಲಹಲೂ ಅಸಮರ್ಥ ನಾಗಿರುತ್ತೇನೆ. ರಾಜನಾದವನು ತನ್ನ ತಾಯಿಯನ್ನೂ ಮತ್ತು ಮಿತ್ರರನ್ನೂ ಪೋಷಿಸಲಾಗದ ಸ್ಥಿತಿಗಿಳಿದಿರುವನೆಂದರೆ ಇದಕ್ಕಿಂತಲೂ ದುಃಖತರವಾದುದು ಬೇರಾವುದಿದೆ? ಜನಾರ್ದನ! ನಾನಿಂದು ಅಂತಹ ದುಃಸ್ಥಿತಿಯಲ್ಲಿದ್ದೇನೆ.

ಮಧುಸೂದನ! ಕಾಶೀದೇಶೀಯರು, ಚೇದೀದೇಶೀಯರು, ಪಾಂಚಾಲದೇಶೀಯರು ಮತ್ತು ಮತ್ಸ್ಯದೇಶೀಯರು–ಇವರೆಲ್ಲರೂ ನನ್ನ ಸಹಾಯಕರಾಗಿರುತ್ತಾರೆ. ಎಲ್ಲಕ್ಕಿಂತಲೂ ಮಿಗಿಲಾಗಿ ನೀನೇ ನಮಗೆ ರಕ್ಷಕನೂ ನಾಥನೂ ಆಗಿರುವೆ. (ಇಷ್ಟೊಂದು ಸಹಾಯಸಂಪತ್ತಿಯನ್ನು ಹೊಂದಿರುವ ನಾವು ಯಾರಿಗೂ ಭಯಪಡಬೇಕಾದ ಕಾರಣವಿಲ್ಲ.) ಆದರೂ ನಾನು ನಮಗೆ ಸಲ್ಲಬೇಕಾಗಿದ್ದ ಅರ್ಧರಾಜ್ಯವನ್ನು ಬಿಟ್ಟು ಕೇವಲ ಐದು ಗ್ರಾಮಗಳನ್ನು ಮಾತ್ರವೇ ಅಪೇಕ್ಷಿಸಿದೆನು.

**ಅವಿಸ್ಥಲಂ ವೃಕಸ್ಥಲಂ ಮಾಕನ್ದೀ ವಾರಣಾವತಮ್ ।**
**ಅವಸಾನಂ ಚ ಗೋವಿನ್ದ ಕಞ್ಚಿದೇವಾತ್ರ ಪಞ್ಚಮಮ್ ॥೧೫॥**

**ಪಞ್ಚ ನಸ್ತಾತ ದೀಯನ್ತಾಂ ಗ್ರಾಮಾ ವಾ ನಗರಾಣಿ ವಾ ।**
**ವಸೇಮ ಸಹಿತಾ ಯೇಷು ಮಾ ಚ ನೋ ಭರತಾ ನಶನ್ ॥೧೬॥**

ಗೋವಿಂದ! ನಾನು ಅವಿಸ್ಥಲ, ವೃಕಸ್ಥಲ, ಮಾಕನ್ದೀ, ವಾರಣಾವತ, ಐದನೆಯದಾಗಿ ನೀನಿಚ್ಛಿಸಿದ ಯಾವುದಾದರೂ ಗ್ರಾಮವನ್ನು ಕೊಡುವಂತೆ ಧೃತರಾಷ್ಟ್ರನನ್ನು ಕೇಳಿದೆನು. 'ನಾವೈವರೂ ವಾಸಮಾಡಿಕೊಂಡಿರಲು ಐದು ಗ್ರಾಮಗಳನ್ನೋ ಅಥವಾ ಐದು ಪಟ್ಟಣಗಳನ್ನೋ ಕೊಡು, ತಾತ! ನಮ್ಮ ಕಾರಣದಿಂದಾಗಿ ಭರತವಂಶವು ನಾಶವಾಗದಿರಲಿ'–ಎಂದು ನಾನು ಧೃತರಾಷ್ಟ್ರನನ್ನು ಪ್ರಾರ್ಥಿಸಿದೆನು. ಆದರೆ ದುಷ್ಟಾತ್ಮನಾದ ದುರ್ಯೋಧನನು ತಾನೇ ಸಾರ್ವಭೌಮನಾಗಿರುವೆನೆಂದು ಭಾವಿಸಿ ಆ ಐದು ಗ್ರಾಮಗಳನ್ನು

ಕೊಡಲೂ ಸಮ್ಮತಿಸುತ್ತಿಲ್ಲ. ಇದಕ್ಕಿಂತಲೂ ದುಃಖಕರವಾದುದು ಮತ್ತೇನಿದೆ? ಜನಾರ್ದನ!

**ಕುಲೇ ಜಾತಸ್ಯ ವೃದ್ಧಸ್ಯ ಪರವಿತ್ತೇಷು ಗೃದ್ಧ್ಯತಃ ।**
**ಲೋಭಃ ಪ್ರಜ್ಞಾನಮಾಹನ್ತಿ ಪ್ರಜ್ಞಾ ಹನ್ತಿ ಹತಾ ಹ್ರಿಯಮ್ ॥೧೮॥**

ಮನುಷ್ಯನು ಉತ್ತಮಕುಲದಲ್ಲಿ ಹುಟ್ಟಿದ್ದರೂ ಮತ್ತು ವೃದ್ಧನಾಗಿದ್ದರೂ–ಇತರರ ಸ್ವತ್ತಿನಲ್ಲಿ ಆಶೆಯನ್ನು ಹೊಂದಿದರೆ–ಆ ಲೋಭವು ಅವನ ವಿಚಾರಶಕ್ತಿಯನ್ನೇ ಹಾಳುಮಾಡಿಬಿಡುತ್ತದೆ. ವಿಚಾರಶಕ್ತಿಯು ನಷ್ಟವಾಗಿ ಹೋದನಂತರ ಪಾಪಕರ್ಮಗಳನ್ನು ಮಾಡುವುದರಲ್ಲಿರಬೇಕಾದ ಲಜ್ಜೆಯೂ ಅವನಲ್ಲಿ ಉಳಿಯುವುದಿಲ್ಲ.

(ಲಜ್ಜೆಯೂ ನಷ್ಟವಾಗಿಹೋಗುತ್ತದೆ. ಅಂತಹವನು ಯಾವ ಪಾಪ ಕರ್ಮವನ್ನು ಮಾಡಲೂ ಹಿಂಜರಿಯುವುದಿಲ್ಲ.)

**ಹ್ರೀರ್ಹತಾ ಬಾಧತೇ ಧರ್ಮಂ ಧರ್ಮೋ ಹನ್ತಿ ಹತಃ ಶ್ರಿಯಮ್ ।**
**ಶ್ರೀರ್ಹತಾ ಪುರುಷಂ ಹನ್ತಿ ಪುರುಷಸ್ಯಾಧನಂ ವಧಃ ॥೧೯॥**

ಪಾಪಕರ್ಮಮಾಡಲು ಲಜ್ಜೆಯಿಲ್ಲದವನಲ್ಲಿ ಸದ್ಧರ್ಮಗಳು ಉಳಿಯಲಾರವು. ಧರ್ಮವು ನಷ್ಟವಾದೊಡನೆಯೇ ನಷ್ಟವಾಗಿ ಹೊರಟುಹೋಗುವ ಧರ್ಮವು ತನ್ನೊಡನೆ ಮನುಷ್ಯನ ಸಂಪತ್ತನ್ನೂ ಅಪಹರಿಸಿಕೊಂಡು ಹೋಗುತ್ತದೆ. ನಷ್ಟವಾಗಿ ಹೋಗುವ ಸಂಪತ್ತು ಮನುಷ್ಯನನ್ನು ವಿನಾಶಗೊಳಿಸುತ್ತದೆ. ಹೇಗೆಂದರೆ : ಸಂಪತ್ತಿಲ್ಲದಿರುವಿಕೆಯೇ ಮನುಷ್ಯನಿಗೆ ವಧರೂಪವಾಗಿರುತ್ತದೆ. ಸಂಪತ್ತಿಲ್ಲದ ಮನುಷ್ಯನು ಮೃತಪ್ರಾಯನೇ ಸರಿ.

**ಅಧನಾದ್ಧಿ ನಿವರ್ತನ್ತೇ ಜ್ಞಾತಯಃ ಸುಹೃದೋ ದ್ವಿಜಾಃ ।**
**ಅಪುಷ್ಪಾದಫಲಾದ್ವೃಕ್ಷಾದ್ಯಥಾ ಕೃಷ್ಣ ಪತತ್ರಿಣಃ ॥೨೦॥**

ಕೃಷ್ಣ! ಪಕ್ಷಿಗಳು ಪುಷ್ಪವಾಗಲೀ, ಫಲವಾಗಲೀ ಇಲ್ಲದಿರುವ ವೃಕ್ಷವನ್ನು ತ್ಯಜಿಸಿ ಹೊರಟುಹೋಗುವಂತೆ–ಧನಹೀನನಾದವನ ಆಶ್ರಯವನ್ನು ಬಿಟ್ಟು ಜ್ಞಾತಿಗಳೂ, ಸ್ನೇಹಿತರೂ ಮತ್ತು ಬ್ರಾಹ್ಮಣರೂ ಹೊರಟುಹೋಗುತ್ತಾರೆ.

**ಏತಚ್ಚ ಮರಣಂ ತಾತ ಯನ್ಮತ್ತಃ ಪತಿತಾದಿವ ।**
**ಜ್ಞಾತಯೋ ವಿನಿವರ್ತನ್ತೇ ಪ್ರೇತಸತ್ತ್ವಾದಿವಾಸವಃ ॥೨೧॥**

ಪತಿತನಾದ ಮನುಷ್ಯನು ಕಣ್ಣಿಗೆ ಬಿದ್ದೊಡನೆಯೇ ಯಾವ ರೀತಿಯಲ್ಲಿ ಸತ್ಪುರುಷರು ದೂರಸರಿದು ಹೋಗುತ್ತಾರೆಯೋ–ಅದೇ ರೀತಿಯಲ್ಲಿ ಜ್ಞಾತಿ-ಸುಹೃಜ್ಜನರು–ಮುಮೂರ್ಷುವನ್ನು ಪ್ರಾಣಗಳು ಬಿಡುವಂತೆ–ಧನಹೀನನನ್ನು ಬಿಟ್ಟು ಹೊರಟುಹೋಗುತ್ತಾರೆ. ಆದುದರಿಂದ ಅಧನತ್ವವೇ ಅಥವಾ ದರಿದ್ರತೆಯೇ ಮರಣಪ್ರಾಯವಾದುದು, ಕೃಷ್ಣ!

**ನಾತಃ ಪಾಪೀಯಸೀಂ ಕಾಞ್ಚಿದವಸ್ಥಾಂ ಶಮ್ಬರೋಽಬ್ರವೀತ್ ।**
**ಯತ್ರ ನೈವಾದ್ಯ ನ ಪ್ರಾತರ್ಭೋಜನಂ ಪ್ರತಿದೃಶ್ಯತೇ ॥೨೨॥**

ಯಾವ ಮನೆಯಲ್ಲಿ ಅಂದಿನ ಭೋಜನಕ್ಕಾಗಲೀ, ಮಾರನೆಯ ದಿನದ ಬೆಳಗಿನ ಭೋಜನಕ್ಕಾಗಲೀ ಬೇಕಾದ ಆಹಾರಪದಾರ್ಥಗಳಿರುವುದಿಲ್ಲವೋ–ಅಂತಹ ಒಂದು ದರಿದ್ರಾವಸ್ಥೆಗಿಂತಲೂ ಪಾಪಭೂಯಿಷ್ಠವಾದ (ದುಃಖಕರವಾದ) ಮತ್ತೊಂದು ಅವಸ್ಥೆಯೇ ಇಲ್ಲವೆಂದು ಶಂಬರನು ಹೇಳಿದ್ದಾನೆ.

**ಧನಮಾಹುಃ ಪರಂ ಧರ್ಮಂ ಧನೇ ಸರ್ವಂ ಪ್ರತಿಷ್ಠಿತಮ್ ।**
**ಜೀವನ್ತಿ ಧನಿನೋ ಲೋಕೇ ಮೃತಾ ಯೇ ತ್ವಧನಾ ನರಾಃ ॥೨೩॥**

ಧನದ ಮೂಲಕವಾಗಿಯೇ ಎಲ್ಲ ಧರ್ಮಕಾರ್ಯಗಳೂ (ಯಜ್ಞ-ಯಾಗಾದಿಗಳೂ) ನಡೆಯುತ್ತವೆಂದು ಹೇಳುತ್ತಾರೆ. ಆದುದರಿಂದ ಧನಸಂಗ್ರಹಣೆಯೇ ಶ್ರೇಷ್ಠವಾದ ಧರ್ಮ. ಧನದಲ್ಲಿಯೇ ಸರ್ವವೂ ಪ್ರತಿಷ್ಠಿತವಾಗಿದೆ. (ಯಾವ ಕಾರ್ಯವೇ ಆಗಲೀ ಧನದ ಮೂಲಕವಾಗಿಯೇ ಪ್ರಾರಂಭವಾಗಬೇಕಾಗುತ್ತದೆ.) ಸರಿಯಾದ, ಸುಖಕರವಾದ ಜೀವನವನ್ನು ಲೋಕದಲ್ಲಿ ನಡೆಸುತ್ತಿರುವವರು ಧನಿಕರು ಮಾತ್ರ. ನಿರ್ಧನರು ಜೀವಿಸಿದ್ದರೂ ಮೃತಪ್ರಾಯರೇ ಸರಿ. ಬದುಕಿದ್ದರೂ ಸತ್ತವರಂತೆಯೇ ಇರುತ್ತಾರೆ.

**ಯೇ ಧನಾದಪಕರ್ಷನ್ತಿ ನರಂ ಸ್ವಬಲಮಾಸ್ಥಿತಾಃ ।**
**ತೇ ಧರ್ಮಮರ್ಥಂ ಕಾಮಂ ಚ ಪ್ರಮಥ್ನನ್ತಿ ನರಂ ಚ ತಮ್ ॥**

ಯಾರು ತಮ್ಮ ಭುಜಬಲ-ಪರಾಕ್ರಮಗಳಿಂದ ಧನಿಕನಾದೊಬ್ಬ

ಮನುಷ್ಯನನ್ನು ಆಕ್ರಮಿಸಿ ಅವನಲ್ಲಿರುವ ಐಶ್ವರ್ಯವನ್ನು ದೋಚಿಕೊಳ್ಳುತ್ತಾರೆಯೋ–ಅವರು ಆ ಧನಿಕನಲ್ಲಿರುವ ಹಣವನ್ನು ಮಾತ್ರವೇ ದೋಚಿಕೊಂಡರೆಂದು ಹೇಳುವಂತಿಲ್ಲ. ಅವನಲ್ಲಿರುವ ಹಣವನ್ನು ದೋಚಿಕೊಳ್ಳುವ ಮೂಲಕವಾಗಿ ಅವನು ಮಾಡುತ್ತಿದ್ದ ಧರ್ಮ, ಗಳಿಸುತ್ತಿದ್ದ ಅರ್ಥ ಮತ್ತು ಅವನು ನಡೆಸುತ್ತಿದ್ದ ಸುಖಜೀವನವನ್ನೂ ನಾಶಪಡಿಸಿದರೆಂದೇ ಭಾವಿಸಬೇಕು. ಕಟ್ಟಕಡೆಗೆ ಧನವಂತನು ಬಲಿಷ್ಠರ ಆಕ್ರಮಣದಿಂದ ಮತ್ತು ತನ್ನಲ್ಲಿದ್ದ ಧನದ ಅಪಹಾರದಿಂದ ದರಿದ್ರನಾಗಿ, ದಾರಿದ್ರ್ಯದ ಕಷ್ಟವನ್ನು ತಾಳಲಾರದೇ ಸತ್ತೂ ಹೋಗುತ್ತಾನೆ. ಆದುದರಿಂದ ಬಲಿಷ್ಠರು ಧನಿಕನಲ್ಲಿರುವ ಹಣವನ್ನು ಅಪಹರಿಸುವುದರ ಜೊತೆಗೆ ಅವನ ಪ್ರಾಣಾಪಹಾರವನ್ನೂ ಮಾಡುತ್ತಾರೆ. (ಕೌರವರ ಉದ್ದೇಶವು ಇದೇ ಆಗಿರುವುದು.)

**ಏತಾಮವಸ್ಥಾಂ ಪ್ರಾಪ್ಯೈಕೇ ಮರಣಂ ವವ್ರಿರೇ ಜನಾಃ ।**
**ಗ್ರಾಮಾಯೈಕೇ ವನಾಯೈಕೇ ನಾಶಾಯೈಕೇ ಪ್ರವವ್ರಜುಃ ॥೨೫॥**

(ಹಿಂದೆ ಹೇಳಿದುದನ್ನೇ ಮತ್ತೂ ವಿವರಿಸಿ ಧರ್ಮಜನು ಹೇಳುತ್ತಾನೆ.) ಧನವನ್ನು ಕಳೆದುಕೊಂಡು ದರಿದ್ರಾವಸ್ಥೆಯನ್ನು ಪಡೆದವರಲ್ಲಿ ಕೆಲವರು ದಾರಿದ್ರ್ಯವನ್ನು ಅನುಭವಿಸುವುದಕ್ಕಿಂತಲೂ ಮರಣವೇ ಲೇಸೆಂದು ನಿರ್ಧರಿಸಿ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಕೆಲವರು ಗ್ರಾಮಾಂತರಗಳಿಗೆ ಹೋಗಿ ಸೇರಿಕೊಳ್ಳುತ್ತಾರೆ. ಇನ್ನೂ ಕೆಲವರು ಕಾಡಿಗೆ ಹೊರಟುಹೋಗುತ್ತಾರೆ. ಮತ್ತೆ ಕೆಲವರು ಸಾಯಲೆಂದೇ (ಕಣ್ಣಿಗೆ ಕಾಣದಿರಲೆಂದೇ) ಮನೆಬಿಟ್ಟು ಹೊರಟುಬಿಡುತ್ತಾರೆ.

**ಉನ್ಮಾದಮೇಕೇ ಪುಷ್ಯನ್ತಿ ಯಾನ್ತ್ಯನ್ಯೇ ದ್ವಿಷತಾಂ ವಶಮ್ ।**
**ದಾಸ್ಯಮೇಕೇ ಚ ಗಚ್ಛನ್ತಿ ಪರೇಷಾಮರ್ಥಹೇತುನಾ ॥೨೬॥**

ಹಣವನ್ನು ಕಳೆದುಕೊಂಡ ಕೆಲವರು ಹುಚ್ಚರಾಗಿಬಿಡುತ್ತಾರೆ. ಕೆಲವರು ಶತ್ರುವಶರಾಗುತ್ತಾರೆ. ಮತ್ತೆ ಕೆಲವರು ಜೀವಿಕೆಗಾಗಿ ಧನವನ್ನು ಸಂಪಾದಿಸಲು ಮತ್ತೊಬ್ಬ ಧನಿಕನ ಬಳಿಗೆ ಹೋಗಿ ದಾಸ್ಯವೃತ್ತಿಯನ್ನೂ ಅವಲಂಬಿಸುತ್ತಾರೆ.

**ಆಪದೇವಾಸ್ಯ ಮರಣಾತ್ಪುರುಷಸ್ಯ ಗರೀಯಸೀ ।**
**ಶ್ರಿಯೋ ವಿನಾಶಸ್ತದ್ಧ್ಯಸ್ಯ ನಿಮಿತ್ತಂ ಧರ್ಮಕಾಮಯೋಃ ॥೨೭॥**

ಧನದ ವಿನಾಶವೆಂಬುದೇ ಮನುಷ್ಯನಿಗೆ ಮಹತ್ತರವಾದ ಆಪತ್ತು. ಅದು ಮರಣಕ್ಕಿಂತಲೂ ಪ್ರಬಲವಾದುದು. (ಮರಣಸಂಕಟವನ್ನಾದರೂ ಸಹಿಸಿಕೊಳ್ಳಬಹುದು.; ಆದರೆ ದಾರಿದ್ರ್ಯದ ಸಂಕಟವನ್ನು ಸಹಿಸಿಕೊಳ್ಳಲಾಗುವುದಿಲ್ಲ.) ಇದಕ್ಕೆ ಕಾರಣವೇನೆಂದರೆ: ಅರ್ಥವು ಧರ್ಮ ಮತ್ತು ಕಾಮಗಳ ಸಿದ್ಧಿಗೆ ಮುಖ್ಯಕಾರಣವಾಗಿರುತ್ತದೆ.

ಕೃಷ್ಣ! ಮರಣದಲ್ಲಿ ಎರಡು ವಿಧ. ಮೊದಲನೆಯದು : ದಾರಿದ್ರ್ಯದಿಂದ ಪ್ರಾಪ್ತವಾಗುವಂತಹುದು. ಈ ವಿಧವಾದ ಮರಣದಲ್ಲಿ ಮನುಷ್ಯನು ಅಸುವನ್ನು ನೀಗಬೇಕೆಂಬ ನಿಯಮವಿಲ್ಲ. ಬದುಕಿದ್ದರೂ ಸತ್ತವರ ಕೂಟಕ್ಕೇ ಸೇರಿದವನಾಗಿರುತ್ತಾನೆ. ಜೀವಚ್ಛವನಾಗಿರುತ್ತಾನೆ. ಎರಡನೆಯದು : ದೇಹಧರ್ಮದಿಂದ ಪ್ರಾಪ್ತವಾಗುವಂತಹುದು ; ಮನುಷ್ಯನಿಗೆ ವೃದ್ಧಾಪ್ಯವು ಬಂದನಂತರ ಸ್ವಾಭಾವಿಕವಾಗಿ ಪ್ರಾಪ್ತವಾಗುವ ಮರಣ. ಇದು ಶಾಶ್ವತವಾದುದು. ಇಂತಹ ಮರಣವು ಅವನ ಕರ್ಮಾನುಸಾರವಾಗಿ ಪರಲೋಕ ಪ್ರಯಾಣಕ್ಕೆ ಮಾರ್ಗರೂಪವಾಗಿರುತ್ತದೆ. ಯಾವ ಪ್ರಾಣಿಯೇ ಆಗಲಿ ಇಂತಹ ಮರಣದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ.

**ನ ತಥಾ ಬಾಧ್ಯತೇ ಕೃಷ್ಣ ಪ್ರಕೃತ್ಯಾ ನಿರ್ಧನೋ ಜನಃ ।**
**ಯಥಾ ಭದ್ರಾಂ ಶ್ರಿಯಂ ಪ್ರಾಪ್ಯ ತಯಾ ಹೀನಃ ಸುಖೈಧಿತಃ ॥೨೯॥**

ಹುಟ್ಟಿನಿಂದಲೇ ದರಿದ್ರನಾಗಿ ಹುಟ್ಟಿ, ಬೆಳೆಯುವಾಗಲೂ ದರಿದ್ರನಾಗಿಯೇ ಬೆಳೆದು, ಜೀವಮಾನಪರ್ಯಂತ ದಾರಿದ್ರ್ಯವನ್ನೇ ಅನುಭವಿಸುವವನಿಗೆ ದಾರಿದ್ರ್ಯವು ಅಷ್ಟಾಗಿ ಯಾತನೆಯನ್ನುಂಟುಮಾಡುವುದಿಲ್ಲ. ಆದರೆ ಮಂಗಳಕರವಾದ ಅಪಾರಸಂಪತ್ತನ್ನು ಪಡೆದು, ತಾನು ಪಡೆದ ಐಶ್ವರ್ಯಕ್ಕೆ ಅನುಗುಣವಾಗಿ ಸುಖೋಪಭೋಗಗಳನ್ನು ಅನುಭವಿಸುತ್ತಾ ಇದ್ದವನು–ಐಶ್ವರ್ಯದಿಂದ ವಂಚಿತನಾಗಿಬಿಟ್ಟರೆ–ಆತನು ಅನುಭವಿಸುವ ಅಂತಹ ಸಂಕಟವನ್ನು ಹುಟ್ಟಿನಿಂದ ದರಿದ್ರನಾಗಿರುವವನೆಂದಿಗೂ ಅನುಭವಿಸುವುದಿಲ್ಲ.

**ಸ ತದಾತ್ಮಾಪರಾಧೇನ ಸಮ್ಪ್ರಾಪ್ತೋ ವ್ಯಸನಂ ಮಹತ್ ।**
**ಸೇನ್ದ್ರಾನ್ಗರ್ಹಯತೇ ದೇವಾನ್ನಾತ್ಮಾನಂ ಚ ಕಥಞ್ಚನ ॥೩೦॥**

ಐಶ್ವರ್ಯವಂತನಾಗಿರುವವನು ಅನೇಕಸಂದರ್ಭಗಳಲ್ಲಿ ಸ್ವಾಪರಾಧದಿಂದಲೇ ತನ್ನ ಐಶ್ವರ್ಯವೆಲ್ಲವನ್ನೂ ಕಳೆದುಕೊಂಡು ದರಿದ್ರನಾಗುತ್ತಾನೆ. ಮರಣಯಾತನೆಯನ್ನೀಯುವ ಅಂತಹ ದಾರಿದ್ರ್ಯದ ಮಹತ್ತರವಾದ ವ್ಯಸನವನ್ನು ಹೊಂದಿದನಂತರದಲ್ಲಿ ಆ ಸಂಕಟವನ್ನು ತಾಳಲಾರದೇ ತನ್ನ ದುರದೃಷ್ಟಕ್ಕಾಗಿ ಇಂದ್ರಾದಿ ದೇವತೆಗಳನ್ನೂ ನಿಂದಿಸುತ್ತಾನೆ. ಆದರವನು ಒಮ್ಮೆಯಾದರೂ ತಾನೇ ಮಾಡಿದ ಅಪರಾಧದಿಂದ ಹೀಗಾಯಿತೆಂಬುದನ್ನು ಅರಿತು ತನ್ನನ್ನು ನಿಂದಿಸಿಕೊಳ್ಳುವುದಿಲ್ಲ.

**ನ ಚಾಸ್ಯ ಸರ್ವಶಾಸ್ತ್ರಾಣಿ ಪ್ರಭವನ್ತಿ ನಿಬರ್ಹಣೇ ।**
**ಸೋಽಭಿಕ್ರುಧ್ಯತಿ ಭೃತ್ಯಾನಾಂ ಸುಹೃದಶ್ಚಾಭ್ಯಸೂಯತಿ ॥೩೧॥**

ಅಂತಹ ಸಂದರ್ಭಗಳಲ್ಲಿ ಅವನಲ್ಲಿರಬಹುದಾದ ಶಾಸ್ತ್ರಗಳ ಜ್ಞಾನವೂ ಅವನ ಮನಸ್ಸಿನ ವೈಕ್ಲವ್ಯವನ್ನು ನಾಶಗೊಳಿಸಲು ಸಮರ್ಥವಾಗುವುದಿಲ್ಲ. ಸೇವಕರ ವಿಷಯದಲ್ಲಿ ವೃಥಾ ಕೋಪಗೊಳ್ಳುತ್ತಾನೆ. ಸುಹೃದರ ವಿಷಯದಲ್ಲಿಯೂ ದೋಷವನ್ನೆಣಿಸುತ್ತಾನೆ. (ಅವರೇನೇ ಕಾರ್ಯಮಾಡಿದರೂ ತನಗೆ ವ್ಯತಿರಿಕ್ತವಾಗಿಯೇ ಮಾಡುತ್ತಿದ್ದಾರೆಂದು ಭಾವಿಸುತ್ತಾನೆ.)

**ತಂ ತದಾ ಮನ್ಯುರೇವೈತಿ ಸ ಭೂಯಃ ಸಮ್ಪ್ರಮುಹ್ಯತಿ ।**
**ಸ ಮೋಹವಶಮಾಪನ್ನಃ ಕ್ರೂರಂ ಕರ್ಮ ನಿಷೇವತೇ ॥೩೨॥**

ದರಿದ್ರಾವಸ್ಥೆಯಲ್ಲಿ ಮಾನವನಿಗೆ ಕೋಪವು ಬಹಳ ಬೇಗ ಬರುತ್ತದೆ. ಕ್ರೋಧಾಭಿಮೂರ್ಛಿತನಾದ ಅವನಿಗೆ ಕಾರ್ಯಾಕಾರ್ಯಗಳ ವಿವೇಚನೆಯಿರುವುದಿಲ್ಲ. ಕಾರ್ಯಾಕಾರ್ಯವಿವೇಚನೆಯಿಲ್ಲದೇ ಮೋಹವಶನಾದವನು ಕ್ರೂರ ಕರ್ಮಗಳನ್ನು ಮಾಡಲು ಉದ್ಯುಕ್ತನಾಗುತ್ತಾನೆ. (ಹಣವನ್ನು ಪುನಃ ಸಂಪಾದಿಸಬೇಕೆಂಬ ಭ್ರಾಂತಿಯಿಂದ ಮಾಡಬಾರದುದನ್ನೂ ಮಾಡಲು ಹೋಗುತ್ತಾನೆ.)

**ಪಾಪಕರ್ಮತಯಾ ಚೈವ ಸಂಕರಂ ತೇನ ಪುಷ್ಯತಿ ।**
**ಸಂಕರೋ ನರಕಾಯೈವ ಸಾ ಕಾಷ್ಠಾ ಪಾಪಕರ್ಮಣಾಮ್ ॥೩೩॥**

ಧನಸಂಗ್ರಹಕ್ಕಾಗಿ ನಾನಾವಿಧವಾದ ಪಾಪಕರ್ಮಗಳನ್ನು ಮಾಡು

ತ್ತಾನೆ. ಅಂತಹವನಿಗೆ ಉಚ್ಚ-ನೀಚವರ್ಣಗಳ ತಾರತಮ್ಯವಿರುವುದಿಲ್ಲ. ವರ್ಣಸಂಕರಕ್ಕೆ ಪ್ರೋತ್ಸಾಹನೀಡಿ ಬೆಳೆಸುತ್ತಾನೆ. ಆದರೆ ವರ್ಣಸಂಕರ ವೆಂಬುದು ಅತ್ಯಂತಪಾಪಕರವಾದುದು. ಆದುದರಿಂದ ಪಾಪಕರ್ಮಿಗಳ ಅಂತಿಮ ಗತಿಯು ನರಕಪ್ರಾಪ್ತಿಯೇ ಆಗಿರುತ್ತದೆ.

**ನ ಚೇತ್ಪ್ರಬುಧ್ಯತೇ ಕೃಷ್ಣ ನರಕಾಯೈವ ಗಚ್ಛತಿ ।**
**ತಸ್ಯ ಪ್ರಬೋಧಃ ಪ್ರಜ್ಞೈವ ಪ್ರಜ್ಞಾಚಕ್ಷುಸ್ತರಿಷ್ಯತಿ ॥೩೪॥**

ಕೃಷ್ಣ! ಸಮಯದಲ್ಲವನು ಎಚ್ಚೆತ್ತುಕೊಳ್ಳದಿದ್ದರೆ ನಾನು ಹೇಳಿದಂತೆ ಐಶ್ವರ್ಯದಿಂದ ವಂಚಿತನಾದ ದರಿದ್ರನು ನರಕಕ್ಕೆ ಹೋಗುತ್ತಾನೆ. ಅಂತಹ ಸಮಯಗಳಲ್ಲಿ ಅವನ ಅಂತರಾತ್ಮದಲ್ಲಿರುವ ಪ್ರಜ್ಞೆಯೊಂದೇ ಅವನನ್ನು ಎಚ್ಚರಿಸಬಲ್ಲುದು. ಆದುದರಿಂದ ಯಾವನು ಪ್ರಜ್ಞಾಚಕ್ಷುವಾಗಿರು ತ್ತಾನೆಯೋ– ಅಂತಹವನು ದಾರಿದ್ರ್ಯವೆಂಬ ಮೃತ್ಯುವಿನಿಂದ ಪಾರಾಗುತ್ತಾನೆ.

**ಪ್ರಜ್ಞಾಲಾಭೇ ಹಿ ಪುರುಷಃ ಶಾಸ್ತ್ರಾಣ್ಯೇವಾನ್ವವೇಕ್ಷತೇ ।**
**ಶಾಸ್ತ್ರನಿಷ್ಠಃ ಪುನರ್ಧರ್ಮಂ ತಸ್ಯ ಹ್ರೀರಙ್ಗಮುತ್ತಮಮ್ ॥೩೫॥**

**ಹ್ರೀಮಾನ್ಹಿ ಪಾಪಂ ಪ್ರದ್ವೇಷ್ಟಿ ತಸ್ಯ ಶ್ರೀರಭಿವರ್ಧತೇ ।**
**ಶ್ರೀಮಾನ್ಸ ಯಾವದ್ಭವತಿ ತಾವದ್ಭವತಿ ಪೂರುಷಃ ॥೩೬॥**

ಪುರುಷನು ಪ್ರಜ್ಞಾವಂತನಾದರೆ ಜೀವನದಲ್ಲಿ ತನ್ನ ಕರ್ತವ್ಯವೇನೆಂಬು ದನ್ನು ತಿಳಿದುಕೊಳ್ಳುವ ಸಲುವಾಗಿ ಶಾಸ್ತ್ರಗಳನ್ನೇ ಅವಲೋಕಿಸುತ್ತಾನೆ ಅಥವಾ ಅವಲಂಬಿಸುತ್ತಾನೆ. ಶಾಸ್ತ್ರನಿಷ್ಠನಾದವನು ಶಾಸ್ತ್ರವಿಹಿತವಾದ ಧರ್ಮಕಾರ್ಯಗಳನ್ನು ಸ್ವಾಭಾವಿಕವಾಗಿಯೇ ಮಾಡುತ್ತಾನೆ. ಧರ್ಮಕ್ಕೆ ಲಜ್ಜೆಯೆಂಬುದೇ ಅತಿಮುಖ್ಯವಾದ ಅಂಗವಾಗಿರುತ್ತದೆ. ಧರ್ಮವೂ ಮತ್ತು ಲಜ್ಜೆಯೂ ಪ್ರತ್ಯೇಕ-ಪ್ರತ್ಯೇಕವಾಗಿ ಉಳಿಯುವುದಿಲ್ಲ. ಲಜ್ಜಾಶೀಲನಾದ ಪುರುಷನು ಪಾಪಕರ್ಮಗಳನ್ನು ದ್ವೇಷಿಸುತ್ತಾನೆ. ಪಾಪಕರ್ಮಗಳನ್ನು ದ್ವೇಷಿಸುತ್ತಾ ಪಾಪಕಾರ್ಯಗಳಲ್ಲಿ ಪ್ರವೃತ್ತನಾಗದಿರುವುದರಿಂದಲೇ ಅವನ ಸಂಪತ್ತು ದಿನ-ದಿನಕ್ಕೂ ವೃದ್ಧಿಹೊಂದುತ್ತಿರುತ್ತದೆ. ಯಾವಾಗ ಅವನು ಕಾಂತಿಯುಕ್ತನಾಗುತ್ತಾನೆಯೋ, ಶ್ರೀಸಂಪನ್ನನಾಗುತ್ತಾನೆಯೋ, ಆಗವನು ಪುರುಷನಾಗುತ್ತಾನೆ.

**ಧರ್ಮನಿತ್ಯಃ ಪ್ರಶಾನ್ತಾತ್ಮಾ ಕಾರ್ಯಯೋಗವಹಃ ಸದಾ ।**
**ನಾಧರ್ಮೇ ಕುರುತೇ ಬುದ್ಧಿಂ ನ ಚ ಪಾಪೇ ಪ್ರವರ್ತತೇ ॥೩೭॥**

ಸದಾ ಧರ್ಮಕಾರ್ಯಗಳಲ್ಲಿಯೇ ಪ್ರವೃತ್ತನಾಗಿರತಕ್ಕವನು ಶಾಂತ ಚಿತ್ತನಾಗಿ ಸರ್ವಕಾಲಗಳಲ್ಲಿಯೂ ಸತ್ಕರ್ಮಗಳನ್ನೇ ಮಾಡುತ್ತಿರುತ್ತಾನೆ. ಅಂತಹವನು ಅಧರ್ಮಕಾರ್ಯಗಳಲ್ಲಿ ತನ್ನ ಬುದ್ಧಿಯನ್ನು ತೊಡಗಿಸುವುದಿಲ್ಲ. ಪಾಪಕಾರ್ಯಗಳಲ್ಲಿ ಅವನು ಪ್ರವೃತ್ತನೂ ಆಗುವುದಿಲ್ಲ.

**ಅಹ್ರೀಕೋ ವಾ ವಿಮೂಢೋ ವಾ ನೈವ ಸ್ತ್ರೀ ನ ಪುನಃ ಪುಮಾನ್ ।**
**ನಾಸ್ಯಾಧಿಕಾರೋ ಧರ್ಮೇಽಸ್ತಿ ಯಥಾ ಶೂದ್ರಸ್ತಥೈವ ಸಃ ॥೩೮॥**

ಯಾವನು ನಿರ್ಲಜ್ಜನಾಗಿಯೂ, ಮೂಢನಾಗಿಯೂ ಇರುತ್ತಾನೆಯೋ ಅಂತಹವನು 'ಸ್ತ್ರೀ'ಯೆಂದೂ ಪರಿಗಣಿತನಾಗುವುದಿಲ್ಲ; 'ಪುರುಷ' ನೆಂದೂ ಪರಿಗಣಿತನಾಗುವುದಿಲ್ಲ. ಅಂತಹವನಿಗೆ ಧಾರ್ಮಿಕಕ್ರಿಯೆಗಳನ್ನು ಮಾಡುವ ಅಧಿಕಾರವೂ ಇರುವುದಿಲ್ಲ. ಅಂತಹವನು ಶೂದ್ರನಿಗೆ ಸಮಾನ ನಾಗಿರುತ್ತಾನೆ.

**ಹ್ರೀಮಾನವತಿ ದೇವಾಂಶ್ಚ ಪಿತೄನಾತ್ಮಾನಮೇವ ಚ ।**
**ತೇನಾಮೃತತ್ವಂ ವ್ರಜತಿ ಸಾ ಕಾಷ್ಠಾ ಪುಣ್ಯಕರ್ಮಣಾಮ್ ॥೩೯॥**

ಲಜ್ಜಾಶೀಲನಾದ ಪುರುಷನು ದೇವತೆಗಳನ್ನು ಹೋಮ-ಹವನಾದಿ ಧರ್ಮಕಾರ್ಯಗಳಿಂದಲೂ, ಪಿತೃದೇವತೆಗಳನ್ನು ಕವ್ಯಾದಿಗಳಿಂದಲೂ ಸಂರಕ್ಷಿಸು ತ್ತಾನೆ. ಶಾಸ್ತ್ರಪ್ರತಿಪಾದ್ಯವಾದ ಶುಭಕರ್ಮಾನುಷ್ಠಾನಗಳಿಂದ ತನ್ನನ್ನೂ ರಕ್ಷಿಸಿಕೊಳ್ಳುತ್ತಾನೆ. ಅಮೃತತ್ತ್ವವನ್ನೂ ಪಡೆಯುತ್ತಾನೆ. ಅಂತಹ ಪುಣ್ಯ ಕರ್ಮಿಗಳಿಗೆ ಅದೇ ಅತ್ಯಂತಶ್ರೇಷ್ಠವಾದ ಗತಿಯಾಗಿರುತ್ತದೆ.

**ತದಿದಂ ಮಯಿ ತೇ ದೃಷ್ಟಂ ಪ್ರತ್ಯಕ್ಷಂ ಮಧುಸೂದನ ।**
**ಯಥಾ ರಾಜ್ಯಾತ್ಪರಿಭ್ರಷ್ಟೋ ವಸಾಮಿ ವಸತೀರಿಮಾಃ ॥೪೦॥**

ಮಧುಸೂದನ! ಯಾವ ರೀತಿಯಲ್ಲಿ ನಾನು ರಾಜ್ಯಭ್ರಷ್ಟನಾದೆನು ಮತ್ತು ಎಷ್ಟು ಕಷ್ಟದಿಂದ ಈಗ ನಾನಿಲ್ಲಿ ವಾಸಮಾಡಿಕೊಂಡಿರುವೆನು– ಎಂಬುದೆಲ್ಲವನ್ನೂ ನೀನು ಪ್ರತ್ಯಕ್ಷವಾಗಿಯೇ ನೋಡಿರುವೆ. ಮೇಲೆ ಹೇಳಿದಂತೆ ನೀನು ಲಜ್ಜಾಶೀಲತೆಯನ್ನೂ ನನ್ನಲ್ಲಿ ಕಂಡಿರುವೆ.

**ತೇ ವಯಂ ನ ಶ್ರಿಯಂ ಹಾತುಮಲಂ ನ್ಯಾಯೇನ ಕೇನಚಿತ್ ।**
**ಅತ್ರ ನೋ ಯತಮಾನಾನಾಂ ವಧಶ್ಚೇದಪಿ ಸಾಧು ತತ್ ॥೪೧॥**

ಲಜ್ಜಾಶೀಲರಾಗಿರುವ ಮತ್ತು ಧರ್ಮಮಾರ್ಗದಲ್ಲಿಯೇ ನಡೆಯುತ್ತಿರುವ ನಾವು ಯಾವ ಕಾರಣದಿಂದಲೇ ಆದರೂ ಪಿತ್ರಾರ್ಜಿತವಾದ ಸಂಪತ್ತನ್ನು ಪರಿತ್ಯಜಿಸುವುದು ಖಂಡಿತವಾಗಿಯೂ ಸಾಧುವಲ್ಲ. ಪಿತ್ರಾರ್ಜಿತವಾದ ನಮ್ಮ ಸಂಪತ್ತನ್ನು ಪುನಃ ಪಡೆದುಕೊಳ್ಳಬೇಕೆಂಬ ನಮ್ಮ ಪ್ರಯತ್ನದ ಮಧ್ಯದಲ್ಲಿ ನಮ್ಮ ವಧೆಯೇ ಆಗಿಹೋದರೂ ಚಿಂತೆಯಿಲ್ಲ. ಅದೂ ನಮಗೆ ಸಾಧುವಾಗಿಯೇ ಇದೆ. ಅರ್ಧರಾಜ್ಯದ ಪುನಃಪ್ರಾಪ್ತಿಗೆ ನಾವು ಪ್ರಯತ್ನ ಮಾಡುವುದು ನಮ್ಮ ಆದ್ಯಕರ್ತವ್ಯವೂ ಆಗಿರುತ್ತದೆ.

ಮಾಧವ! ನಾವೂ ಮತ್ತು ಕೌರವರೂ ಪರಸ್ಪರಸಂಧಿಯನ್ನು ಮಾಡಿಕೊಂಡು, ಶಾಂತಚಿತ್ತರಾಗಿ ಪರಸ್ಪರವೈರವನ್ನು ತೊರೆದು; ರಾಜ್ಯ ಸಂಪತ್ತನ್ನು ಸಮ-ಸಮನಾಗಿ ಹಂಚಿಕೊಂಡು ಉಪಭೋಗಿಸಬೇಕೆಂಬುದೇ ನಮ್ಮ ಮೊದಲನೆಯ ಅಪೇಕ್ಷೆಯಾಗಿದೆ. ಅದನ್ನು ಬಿಟ್ಟು ಎರಡನೆಯ ಪಕ್ಷ ಅಥವಾ ಎರಡನೆಯ ಮಾರ್ಗವೆಂದರೆ: ಎಲ್ಲ ಕೌರವರನ್ನೂ ಯುದ್ಧದಲ್ಲಿ ಸಂಹರಿಸಿ ಅಖಂಡಭೂಮಂಡಲವನ್ನೂ ಸ್ವಾಧೀನಪಡಿಸಿಕೊಳ್ಳುವುದು. ಆದರೆ ಈ ಎರಡನೆಯ ಪಕ್ಷವು ರೌದ್ರಕರ್ಮದ ಪರಾಕಾಷ್ಠೆಯಾಗಿದೆ. (ಏಕೆಂದರೆ: ವಿಜಯವನ್ನು ಪಡೆಯಲು ನಿರಪರಾಧಿಗಳಾದ ಲಕ್ಷೋಪಲಕ್ಷ ಮಂದಿಯನ್ನು ನಾವು ಸಂಹರಿಸಬೇಕಾಗುವುದು.) ನನ್ನ ಅಭಿಪ್ರಾಯದಲ್ಲಿ ನಮ್ಮ ಶತ್ರುಗಳು ನಮಗೆ ಸಂಬಂಧವಿಲ್ಲದವರಾದರೂ ಅಥವಾ ದಸ್ಯುಗಳೇ ಆಗಿದ್ದರೂ ಅಂತಹವರನ್ನೂ ಸಂಹರಿಸುವುದು ಯೋಗ್ಯವಲ್ಲ. ಹೀಗಿರುವಾಗ ನಿರಪರಾಧಿಗಳಾದ ಒಡನಾಡಿಗಳನ್ನೂ, ಗುರು-ಹಿರಿಯರನ್ನೂ, ಅಣ್ಣ-ತಮ್ಮಂದಿರನ್ನೂ, ಸುಹೃದರನ್ನೂ ಕೊಲ್ಲಲು ಹೇಗೆ ತಾನೇ ಸಾಧ್ಯವಾಗುವುದು? ನಮ್ಮ ವಿರೋಧಪಕ್ಷದಲ್ಲಿರುವವರು ಹೆಚ್ಚು ಮಂದಿ ನಮ್ಮ ಅಣ್ಣ-ತಮ್ಮಂದಿರು, ಗುರುಜನರು ಮತ್ತು ಬಂಧುಗಳೇ ಆಗಿರುತ್ತಾರೆ. ಅವರೆಲ್ಲರ ವಧೆಮಾಡುವುದು ಅತ್ಯಂತ ಪಾಪಕರವೆಂಬುದು ನನ್ನ ಭಾವನೆಯಾಗಿದೆ. ಹೀಗಿರುವಾಗ ಯುದ್ಧದಿಂದ ಯಾವ ಶುಭವನ್ನು ತಾನೇ ಸಾಧಿಸಬಹುದು? ಕೃಷ್ಣ!

**ಪಾಪಃ ಕ್ಷತ್ರಿಯಧರ್ಮೋಽಯಂ ವಯಂ ಚ ಕ್ಷತ್ರಬನ್ಧವಃ ।**
**ಸ ನಃ ಸ್ವಧರ್ಮೋಽಧರ್ಮೋ ವಾ ವೃತ್ತಿರನ್ಯಾ ವಿಗರ್ಹಿತಾ ॥೪೬॥**

ಕ್ಷತ್ರಿಯರಿಗಿರುವ ಈ ಯುದ್ಧವು ಬಹುಪಾಪಕರವಾದುದು. (ಕ್ಷತ್ರಿಯ ಧರ್ಮವೇ ಬಹುಪಾಪಕರವಾದುದು.) ಆದರೆ ನಾವು ಕ್ಷತ್ರಿಯಕುಲದಲ್ಲಿ ಜನ್ಮತಾಳಿದ್ದೇವೆ. ಕ್ಷತ್ರಧರ್ಮದಲ್ಲಿ ಹಲವಾರು ಅಧರ್ಮಕ್ರಿಯೆಗಳಿದ್ದರೂ ಸ್ವಧರ್ಮವನ್ನು ನಾವು ಪರಿತ್ಯಜಿಸುವಂತಿಲ್ಲ, (ಯುದ್ಧವು ಯದ್ಯಪಿ ಪಾಪಕರವೆಂದು ಭಾವಿಸಿದರೂ ಕ್ಷತ್ರಿಯರಿಗದು ಉಚಿತವಾದ ಧರ್ಮವಾಗಿರುವುದರಿಂದ–ನಾವು ಕ್ಷತ್ರಿಯವಂಶದಲ್ಲಿ ಹುಟ್ಟಿರುವುದರಿಂದ–ಅಧರ್ಮವೆನಿಸಿದ ಬಂಧುವಿನಾಶಕರವಾದ ಯುದ್ಧವನ್ನು ಮಾಡಿಯೇ ತೀರಬೇಕು. (ಕ್ಷತ್ರಿಯರಾಗಿ ಹುಟ್ಟಿರುವ ನಾವು ಯಾವ ಕಾರಣದಿಂದಲೂ ಬೇರೆಯ ವೃತ್ತಿಯನ್ನು ಅವಲಂಬಿಸುವಂತಿಲ್ಲ. ಅನ್ಯವೃತ್ತಿಯನ್ನು ಅವಲಂಬಿಸುವುದು ಅತಿನಿಂದ್ಯವಾದುದು.

**ಶೂದ್ರಃ ಕರೋತಿ ಶುಶ್ರೂಷಾಂ ವೈಶ್ಯಾ ವೈ ಪಣ್ಯಜೀವಿಕಾಃ ।**
**ವಯಂ ವಧೇನ ಜೀವಾಮಃ ಕಪಾಲಂ ಬ್ರಾಹ್ಮಣೈರ್ವೃತಮ್ ॥೪೭॥**

ಒಂದೊಂದು ವರ್ಣದಲ್ಲಿಯೂ ಈ ವಿಧವಾದ ಸ್ವಲ್ಪ ದೋಷವಿದ್ದೇ ಇರುತ್ತದೆ. ಶೂದ್ರನು ಶುಶ್ರೂಷಾವೃತ್ತಿಯನ್ನು ಅವಲಂಬಿಸುತ್ತಾನೆ. ವೈಶ್ಯರು ವ್ಯಾಪಾರದಿಂದ ಜೀವಿಸುತ್ತಾರೆ. ಕ್ಷತ್ರಿಯರಾದ ನಾವು, ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ ಆ ಮೂಲಕವಾಗಿ (ಶತ್ರುವಧೆಯಿಂದ) ಜೀವನವನ್ನು ನಡೆಸುತ್ತೇವೆ. ಜೀವಿಕೆಗಾಗಿ ಭಿಕ್ಷಾಪಾತ್ರೆಯು ಬ್ರಾಹ್ಮಣರಿಂದ ಅಂಗೀಕರಿಸಲ್ಪಟ್ಟಿದೆ. (ಬ್ರಾಹ್ಮಣರು ಭಿಕ್ಷೆಯಿಂದ ತಮ್ಮ ಜೀವನ ನಡೆಸುತ್ತಾರೆ.)

**ಕ್ಷತ್ರಿಯಃ ಕ್ಷತ್ರಿಯಂ ಹನ್ತಿ ಮತ್ಸ್ಯೋ ಮತ್ಸ್ಯೇನ ಜೀವತಿ ।**
**ಶ್ವಾ ಶ್ವಾನಂ ಹನ್ತಿ ದಾಶಾರ್ಹ ಪಶ್ಯ ಧರ್ಮೋ ಯಥಾಗತಃ ॥೪೮॥**

ತಮ್ಮವರನ್ನೇ ತಾವು ವಧೆಮಾಡುವ ಧರ್ಮವು ಇಂದಿನದಲ್ಲ ; ಅನಾದಿ ಕಾಲದಿಂದಲೂ ನಡೆದುಬಂದಿದೆ. ಪ್ರಕೃತಿಯಲ್ಲೇ ಈ ವೈಚಿತ್ರ್ಯವು ನಡೆಯುತ್ತಿದೆ. ಕ್ಷತ್ರಿಯನು ಕ್ಷತ್ರಿಯನನ್ನು ಕೊಲ್ಲುತ್ತಾನೆ. ದೊಡ್ಡ ಮೀನು ಸಣ್ಣ ಮೀನನ್ನು ತಿಂದು ಜೀವಿಸುತ್ತದೆ. ಒಂದು ನಾಯಿಯು ಮತ್ತೊಂದು

ನಾಯಿಯನ್ನು ಕಂಡೊಡನೆಯೇ ಗಟ್ಟಿಯಾಗಿ ಬೊಗಳುತ್ತಾ ಕಚ್ಚಲು ಹೋಗುತ್ತದೆ. ಈ ಧರ್ಮವು ಹೇಗೆ ನಡೆದುಬಂದಿದೆಯೆಂಬುದನ್ನಾದರೂ ನೋಡು, ದಾಶಾರ್ಹ!

**ಯುದ್ಧೇ ಕೃಷ್ಣ ಕಲಿರ್ನಿತ್ಯಂ ಪ್ರಾಣಾಃ ಸೀದನ್ತಿ ಸಂಯುಗೇ ।**
**ಬಲಂ ತು ನೀತಿಮಾಧಾಯ ಯುಧ್ಯೇ ಜಯಪರಾಜಯೌ ॥೪೯॥**

**ನಾತ್ಮಚ್ಛನ್ದೇನ ಭೂತಾನಾಂ ಜೀವಿತಂ ಮರಣಂ ತಥಾ ।**
**ನಾಪ್ಯಕಾಲೇ ಸುಖಂ ಪ್ರಾಪ್ಯಂ ದುಃಖಂ ವಾಪಿ ಯದೂತ್ತಮ ॥೫೦॥**

ಕೃಷ್ಣ! ಯುದ್ಧದಲ್ಲಿ ಸರ್ವದಾ ಕಲಿಪುರುಷನು ತಾಂಡವವಾಡುತ್ತಿರುತ್ತಾನೆ. ಈ ಕಾರಣದಿಂದಲೇ ಯುದ್ಧದಲ್ಲಿ ಸಾವಿರಾರು ಪ್ರಾಣಿಗಳು ನಾಶ ಹೊಂದುತ್ತವೆ. ನಾನಾದರೋ ನೀತಿಯನ್ನೇ ಅಥವಾ ಧರ್ಮವನ್ನೇ ಅವಲಂಬಿಸಿಕೊಂಡು ಯುದ್ಧಮಾಡುತ್ತೇನೆ. ಜಯಾಪಜಯಗಳು ದೈವದ ಇಚ್ಛೆಗೆ ಸೇರಿದ್ದಾಗಿವೆ. ಯದೂತ್ತಮನೇ! ಪ್ರಪಂಚದಲ್ಲಿ ಯಾವ ಪ್ರಾಣಿಗೇ ಆದರೂ ತನ್ನ ಇಚ್ಛೆಯಂತೆ ಜೀವಿತವಾಗಲೀ–ಮರಣವಾಗಲೀ ಸಂಭವಿಸುವುದಿಲ್ಲ. ಜೀವಿತದ (ಜೀವನೋಪಾಯದ) ಮತ್ತು ಮರಣದ ನಿಯಾಮಕನು ಬೇರೆಯವನಿದ್ದಾನೆ. ಅಂತೆಯೇ ಜಯಾಪಜಯಗಳೂ ಯಾರೊಬ್ಬರ ಇಚ್ಛೆಗೂ ಒಳಪಡುವುದಿಲ್ಲ. ಅವನು ಯುದ್ಧಮಾಡಬಹುದೇ ಹೊರತು ಜಯದ ನಿರ್ಧಾರಕನು ಬೇರೆಯವನೇ ಆಗಿರುತ್ತಾನೆ. ಇದರಂತೆಯೇ ಸುಖ-ದುಃಖಗಳೂ ಒಬ್ಬನ ಇಚ್ಛೆ ಅಥವಾ ಹಠೋಟಿಗೆ ಸಿಕ್ಕುವುದಿಲ್ಲ. ಇಚ್ಛೆ ಬಂದಾಗ ಸುಖವನ್ನೂ ತಂದುಕೊಳ್ಳಲಾಗುವುದಿಲ್ಲ. ಸುಖ-ದುಃಖಗಳು ಯಾವಾಗ ಬರುತ್ತವೆಯೆಂಬ ಅರಿವೂ ಈ ಹುಲುಮನುಜನಿಗಿರುವುದಿಲ್ಲ. ಒಂದು ಪ್ರಾಣಿಗೆ ಅಥವಾ ಮನುಷ್ಯನಿಗೆ ಸುಖ-ದುಃಖಗಳ ಕಾಲವನ್ನು ದೈವವೇ ನಿಶ್ಚಯಿಸಿರುತ್ತದೆ. ಅದಕ್ಕೆ ಅನುಸಾರವಾಗಿ ಮನುಷ್ಯನು ಸುಖವನ್ನೋ ಅಥವಾ ದುಃಖವನ್ನೋ ಅನುಭವಿಸುತ್ತಿರುತ್ತಾನೆ. ಅಕಾಲದಲ್ಲಿ ಸುಖವಾಗಲೀ, ದುಃಖವಾಗಲೀ ಪ್ರಾಪ್ತವಾಗುವುದಿಲ್ಲ.”

(ಜಯಾಪಜಯಗಳು ದೈವಾಧೀನವೆಂಬುದನ್ನು ಮತ್ತಷ್ಟು ವಿವರಿಸಿ ಧರ್ಮಜನು ಹೇಳುತ್ತಾನೆ :)

“ಒಂದು ಕಡೆಯಲ್ಲಿ ಅಧಿಕಬಲವಿರುವುದರಿಂದಲೇ ಆ ಪಕ್ಷಕ್ಕೆ ವಿಜಯವು ಲಭಿಸುವುದೆಂದು ಹೇಳುವ ಸಾಧ್ಯತೆಯಿಲ್ಲ. ಕೃಷ್ಣ!

**ಏಕೋ ಹ್ಯಪಿ ಬಹೂನ್ಹನ್ತಿ ಘ್ನನ್ತ್ಯೇಕಂ ಬಹವೋಽಪ್ಯುತ ।**
**ಶೂರಂ ಕಾಪುರುಷೋ ಹನ್ತಿ ಅಯಶಸ್ವೀ ಯಶಸ್ವಿನಮ್ ॥೫೧॥**

ಸಮಯದಲ್ಲಿ ಒಬ್ಬನೇ ಒಬ್ಬ ಯೋಧನು ಸಾವಿರಾರು ಯೋಧರನ್ನು ಸಂಹರಿಸುವ ಸಾಧ್ಯತೆಯೂ ಇದೆ. ವೀರನೊಬ್ಬನನ್ನು ಅನೇಕರು ಸೇರಿ ಕೊಲ್ಲುತ್ತಾರೆ. ಮಹಾಶೂರನೆಂದು ಖ್ಯಾತಿಪಡೆದವನನ್ನು ಕಾಪುರುಷನೊಬ್ಬನು (ಹೇಡಿಯು) ಕೊಂದುಬಿಡುತ್ತಾನೆ. ಮಹಾಶೂರನೆಂದು ಕೀರ್ತಿ ಮಂತನಾದವನೊಬ್ಬನನ್ನು ಯಶೋವಂತನಲ್ಲದ ಯೋಧನೊಬ್ಬನು ಕೊಂದುಬಿಡುತ್ತಾನೆ.

**ಜಯೋ ನೈವೋಭಯೋರ್ದೃಷ್ಟೋ ನೋಭಯೋಶ್ಚ ಪರಾಜಯಃ ।**
**ತಥೈವಾಪಚಯೋ ದೃಷ್ಟೋ ವ್ಯಪಯಾನೇ ಕ್ಷಯವ್ಯಯೌ ॥೫೨॥**

ಒಂದು ಪಕ್ಷಕ್ಕೆ ಜಯ; ಮತ್ತೊಂದು ಪಕ್ಷಕ್ಕೆ ಅಪಜಯ—ಇದಂತೂ ಕೊನೆಯಲ್ಲಿ ನಿರ್ಧಾರವಾಗಲೇಬೇಕು. ಏಕೆಂದರೆ: ನಾವಿದುವರೆಗೆ ಎರಡು ಪಕ್ಷಗಳೂ ಜಯಗಳಿಸಿರುವುದನ್ನಾಗಲೀ—ಎರಡು ಪಕ್ಷಗಳೂ ಅಪಜಯ ಗೊಂಡಿರುವುದನ್ನಾಗಲೀ ಕಂಡೂ ಇಲ್ಲ – ಕೇಳಿಯೂ ಇಲ್ಲ. ಎರಡು ಪಕ್ಷಗಳಲ್ಲಿ ಯಾವ ಪಕ್ಷವೇ ಜಯಗಳಿಸಿದರೂ ಎರಡು ಪಕ್ಷಗಳೂ ಯುದ್ಧದ ಕಾರಣದಿಂದ ಕ್ಷಯಿಸಿ ಹೋಗುವುದನ್ನಂತೂ ಕಂಡಿದ್ದೇವೆ. ಎರಡು ಪಕ್ಷ ಗಳಲ್ಲಿ ಯಾವುದಾದರೊಂದು ಪಕ್ಷವು ಯುದ್ಧಮಾಡಲು ಹೆದರಿ ಪಲಾಯನಮಾಡಿದ್ದೇ ಆದರೆ ಆಗಲೂ ಜನಹಾನಿ ಮತ್ತು ಧನಹಾನಿಗಳು ಆ ಪಕ್ಷಕ್ಕೆ ತಪ್ಪಿದ್ದಲ್ಲ.

**ಸರ್ವಥಾ ವೃಜಿನಂ ಯುದ್ಧಂ ಕೋ ಘ್ನನ್ನ ಪ್ರತಿಹನ್ಯತೇ ।**
**ಹತಸ್ಯ ಚ ಹೃಷೀಕೇಶ ಸಮೌ ಜಯಪರಾಜಯೌ ॥೫೩॥**

ಹೃಷೀಕೇಶ! ನನ್ನ ಅಭಿಪ್ರಾಯದಲ್ಲಿ ಯುದ್ಧವು ಸರ್ವಥಾ ಪಾಪಕರ ವಾದುದು. ಇತರರನ್ನು ಕೊಲ್ಲಲು ಹೋಗುವವನು ಮರುಕ್ಷಣದಲ್ಲಿ ಇತರ ರಿಂದ ಹತನಾಗದಿರುತ್ತಾನೆಯೇ? ‘ನಾನು ಬೇರೆಯವರನ್ನು ಕೊಲ್ಲು

ತ್ತೇನೆಯೇ ಹೊರತು ಬೇರೆಯವರು ನನ್ನನ್ನು ಕೊಲ್ಲಲಾರರು'–ಎಂದು ಹೇಳಿಕೊಳ್ಳುವ ಸಾಮರ್ಥ್ಯವು ಯಾರಿಗಿದೆ? ಪ್ರಬಲನು ದುರ್ಬಲನಾದವನಿಗೆ ನಾಲ್ಕು ಏಟುಗಳನ್ನು ಕೊಟ್ಟರೂ ಅದಕ್ಕೆ ಪ್ರತಿಯಾಗಿ ದುರ್ಬಲನು ಒಂದು ಏಟನ್ನಾದರೂ ಕೊಟ್ಟೇ ಕೊಡುತ್ತಾನೆ. ಇತರರನ್ನು ಸಂಹರಿಸಲು ಹೋಗುವವನು ತಾನೂ ಸಾಯಲು ಸಿದ್ಧನಾಗಿಯೇ ಹೋಗಬೇಕು. ಯುದ್ಧದಲ್ಲಿ ಹತನಾದವನಿಗೆ ಜಯಾಪಜಯಗಳೆರಡೂ ಒಂದೇ ಆಗಿರುತ್ತವೆ. ಸಾಯುವವರೆಗೂ–'ಶತ್ರುಗಳನ್ನು ಧ್ವಂಸಮಾಡಬೇಕು. ನಮ್ಮ ಪಕ್ಷವೇ ಗೆಲ್ಲಬೇಕು'–ಎಂಬ ಕ್ಷಾತ್ರವಿರುವುದೇ ಹೊರತು ಸತ್ತುಹೋದನಂತರ ಜಯಾಪಜಯಗಳ ಸೋಂಕೇ ಅವನಿಗಿರುವುದಿಲ್ಲ. (ಒಬ್ಬನ ಪಕ್ಷವು ಗೆದ್ದರೂ ಅವನೇ ಸತ್ತುಹೋದರೆ ಅವನಿಗೆ ಸೋಲು-ಗೆಲುವುಗಳೆರಡೂ ಇರುವುದಿಲ್ಲ.)

**ಪರಾಜಯಶ್ಚ ಮರಣಾನ್ಮನ್ಯೇ ನೈವ ವಿಶಿಷ್ಯತೇ ।**
**ಯಸ್ಯ ಸ್ಯಾದ್ವಿಜಯಃ ಕೃಷ್ಣ ತಸ್ಯಾಪ್ಯಪಚಯೋ ಧ್ರುವಮ್ ॥೫೫॥**

ಕೃಷ್ಣ! ಪರಾಜಯವು ಮರಣಕ್ಕಿಂತಲೂ ಮೇಲಾದುದೆಂದು ನಾನು ಭಾವಿಸುವುದಿಲ್ಲ. (ಪರಾಜಯವು ಮರಣಕ್ಕೆ ಸಮಾನವಾದುದೇ ಆಗಿದೆ.) ಪರಾಜಿತನಾದವನು ಬದುಕಿದ್ದೂ ಸತ್ತವನಂತೆಯೇ ಸರಿ. ಅಂತಹ ವಿಜಯವೂ ಕೂಡ ಮಹತ್ತ್ವದ್ದೇನೂ ಅಲ್ಲ. ಅಪಾರವಾದ ಧನಹಾನಿ-ಮನುಷ್ಯಹಾನಿಗಳಾದನಂತರವೇ ವಿಜಯವು ಲಭ್ಯವಾಗುತ್ತದೆ. ಜಯಗಳಿಸಿದೆನೆಂಬ ಕೀರ್ತಿಯ ಹೊರತಾಗಿ ವಿಜಯಿಯ ಸಕಲಸರ್ವಸ್ವಗಳೂ ನಾಶವಾಗಿರುತ್ತವೆ. ಅವನ ಆಪ್ತರು-ಬಾಂಧವರು-ಮಕ್ಕಳು ಎಲ್ಲರೂ ಆ ವಿಜಯಕ್ಕಾಗಿ ಪ್ರಾಣತೊರೆದಿರುತ್ತಾರೆ. ಆದುದರಿಂದ ವಿಜಯಕ್ಕೂ–ಪರಾಜಯಕ್ಕೂ ಹೆಚ್ಚಿನ ಅಂತರವೇನೂ ಇಲ್ಲ.

**ಅನ್ತತೋ ದಯಿತಂ ಘ್ನನ್ತಿ ಕೇಚಿದಪ್ಯಪರೇ ಜನಾಃ ।**
**ತಸ್ಯಾಙ್ಗ ಬಲಹೀನಸ್ಯ ಪುತ್ರಾನ್ಭ್ರಾತೄನಪಶ್ಯತಃ ।**
**ನಿರ್ವೇದೋ ಜೀವಿತೇ ಕೃಷ್ಣ ಸರ್ವತಶ್ಚೋಪಜಾಯತೇ ॥೫೫॥**

ಅಂಗ! (ಶ್ರೀಕೃಷ್ಣ!) ಯುದ್ಧದ ಅಂತ್ಯವಾಗುವವರೆಗೂ ಶತ್ರುಪಕ್ಷದ ಯಾರೋ ಕೆಲವು ಸೈನಿಕರು ವಿಜಯಿಯನ್ನು ಕೊಲ್ಲದಿದ್ದರೂ

ವಿಜೇತೃವಿನ ಕಡೆಯಲ್ಲಿ ಯುದ್ಧಮಾಡುವ ಮಕ್ಕಳನ್ನೂ ಪ್ರಿಯಬಂಧುಗಳನ್ನೂ ಅವನ ಸಮಕ್ಷಮದಲ್ಲಿಯೇ ಕೊಲ್ಲುತ್ತಾರೆ. ಕಟ್ಟಕಡೆಗೆ ದೈವಯೋಗದಿಂದ ಅವನು ವಿಜಯಗಳಿಸಿದರೂ ಅಪಾರವಾದ ಧನ-ಜನರನ್ನು ಕಳೆದುಕೊಂಡು ಬಲಹೀನನಾಗಿರುತ್ತಾನೆ. ರಣರಂಗದಲ್ಲಿ ಪುತ್ರರನ್ನೂ, ಅಣ್ಣ- ತಮ್ಮಂದಿರನ್ನೂ ಕಳೆದುಕೊಂಡ ಅವನಿಗೆ ಎಲ್ಲ ವಿಷಯಗಳಲ್ಲಿಯೂ ಜುಗುಪ್ಸೆ ಯುಂಟಾಗುತ್ತದೆ.

**ಯೇ ಹ್ಯೇವ ಧೀರಾ ಹ್ರೀಮನ್ತಃ ಆರ್ಯಾಃ ಕರುಣವೇದಿನಃ ।**
**ತ ಏವ ಯುದ್ಧೇ ಹನ್ಯನ್ತೇ ಯವೀಯಾನ್ಮುಚ್ಯತೇ ಜನಃ ॥೫೬॥**

**ಹತ್ವಾಪ್ಯನುಶಯೋ ನಿತ್ಯಂ ಪರಾನಪಿ ಜನಾರ್ದನ ॥೫೭॥**

ಜನಾರ್ದನ! ಯಾರು ಧೀರರೋ, ಲಜ್ಜಾಶೀಲರೋ, ಶ್ರೇಷ್ಠರೋ, ದಯಾಳುಗಳೋ–ಅಂತಹವರೇ ಸಾಮಾನ್ಯವಾಗಿ ಯುದ್ಧದಲ್ಲಿ ಸಾವಿಗೀಡಾ ಗುತ್ತಾರೆ. ಅಧರ್ಮಿಗಳಾದವರು ಉಳಿದುಕೊಂಡೇ ಬಿಡುತ್ತಾರೆ. ಶತ್ರುಗಳನ್ನು ಸಂಹರಿಸಿದವನೂ ನಿಶ್ಚಿಂತನಾಗಿರುವುದಿಲ್ಲ. ಶತ್ರುವನ್ನು ಸಂಹರಿಸಿದ್ದಕ್ಕಾಗಿ ಅನವರತವೂ ಪಶ್ಚಾತ್ತಾಪಪಡುತ್ತಿರುತ್ತಾನೆ.

**ಅನುಬನ್ಧಶ್ಚ ಪಾಪೋಽತ್ರ ಶೇಷಶ್ಚಾಪ್ಯವಶಿಷ್ಯತೇ ।**
**ಶೇಷೋ ಹಿ ಬಲಮಾಸಾದ್ಯ ನ ಶೇಷಮನುಶೇಷಯೇತ್ ।**
**ಸರ್ವೋಚ್ಛೇದೇ ಚ ಯತತೇ ವೈರಸ್ಯಾನ್ತವಿಧಿತ್ಸಯಾ ॥೫೮॥**

ಅನುಬಂಧವು ಅರ್ಥಾತ್ ಯುದ್ಧದಿಂದ ಪಲಾಯನಮಾಡುತ್ತಿರುವ ಶತ್ರುವಿನ ಬೆನ್ನಟ್ಟಿಹೋಗುವುದು ಪಾಪಕರವಾದುದು. ಆದರೆ ಹಾಗೆ ಬೆನ್ನಟ್ಟದೇ ಇರುವುದರಿಂದ ಆಗುವ ಪರಿಣಾಮವೇನು? ಶತ್ರುಶೇಷವು ಹಾಗೆಯೇ ಉಳಿಯುವುದು. ಆ ಶತ್ರುವು ತನ್ನ ಬಲವನ್ನು ಹೆಚ್ಚಿಸಿಕೊಂಡು ಗೆದ್ದವನ ಪಕ್ಷದಲ್ಲಿ ಅಳಿದುಳಿದವರನ್ನು ನಾಶಮಾಡಲೂ ಪ್ರಯತ್ನಿಸುತ್ತಾನೆ. ವಿಜಯಗಳಿಸಿದ ಪಕ್ಷದಲ್ಲಿ ಸರ್ವರನ್ನೂ ವಿನಾಶಮಾಡಲು ಆ ಶತ್ರುಶೇಷವು ಪ್ರಯತ್ನಿಸುತ್ತಲೇ ಇರುತ್ತದೆ. ಶತ್ರುಶೇಷವು ನಿರ್ಮೂಲವಾಗದಿದ್ದರೆ ವೈರದ ಅಂತ್ಯವಾಗುವುದಿಲ್ಲ. ಸೋತವನು ಯಾವಾಗಲೂ ತನ್ನ ಎದು ರಾಳಿಯನ್ನು ಸಂಪೂರ್ಣವಾಗಿ ವಿನಾಶಮಾಡಲು ಸನ್ನಾಹಗಳನ್ನು ಮಾಡು ತ್ತಲೇ ಇರುತ್ತಾನೆ.

**ಜಯೋ ವೈರಂ ಪ್ರಸೃಜತಿ ದುಃಖಮಾಸ್ತೇ ಪರಾಜಿತಃ ।**
**ಸುಖಂ ಪ್ರಶಾನ್ತಃ ಸ್ವಪಿತಿ ಹಿತ್ವಾ ಜಯಪರಾಜಯೌ ॥೫೯॥**

ಕೃಷ್ಣ! ಜಯಶಾಲಿಯಾದವನಿಗೂ ಸುಖವಿಲ್ಲ.; ಸೋತವನಿಗೂ ಸುಖವಿಲ್ಲ. ವಿಜಯವೆಂಬುದು ಹೊಸ ಹೊಸ ಶತ್ರುಗಳನ್ನು ನಿರ್ಮಾಣ ಮಾಡುತ್ತದೆ. ಜಯಗಳಿಸಿದವನ ಮೇಲೆ ಇತರರಿಗೆ ಸ್ವಾಭಾವಿಕವಾಗಿಯೇ



ಅಸೂಯೆಯು ಹುಟ್ಟುತ್ತದೆ. ಆ ಅಸೂಯೆಯೇ ಕಾಲಾನುಕ್ರಮವಾಗಿ ದ್ವೇಷದಲ್ಲಿ ಪರ್ಯವಸಾನಹೊಂದುತ್ತದೆ. ಆದುದರಿಂದ ಇಂದೊಮ್ಮೆ ವಿಜಯ ಗಳಿಸಿದರೂ ಜಯಗಳಿಸಿದವನು ನಿರಾತಂಕನಾಗಿರಲಾರನು. ಸೋತವನಿಗೆ ತಾನು ಸೋತುಹೋದೆನೆಂಬುದೇ ಒಂದು ಅಪಾರವಾದ ಅವರ್ಣನೀಯ

ವಾದ ದುಃಖವಾಗಿರುತ್ತದೆ. ತನ್ನ ಶತ್ರುವಿಗೆ ಪ್ರತಿಮಾಡಲು ಸಾಧ್ಯವಾಗದಿದ್ದರೆ ಕಡೆಯವರೆಗೂ ತನ್ನ ಸೋಲಿನ ವಿಷಯವಾಗಿಯೇ ಚಿಂತಿಸುತ್ತಿರುತ್ತಾನೆ. ಆದುದರಿಂದ ಜಯಾಪಜಯಗಳೆರಡನ್ನೂ ಬಿಟ್ಟವನಿಗೆ, ಯಾರೊಡನೆಯೂ ಯಾವುದಕ್ಕಾಗಿಯೂ ಯುದ್ಧಮಾಡದವನಿಗೆ–ಯಾವ ವಿಧವಾದ ಆತಂಕವೂ ಇರುವುದಿಲ್ಲ. ಅಂತಹವನು ಸುಖವಾಗಿ ಶಾಂತಮನಸ್ಕನಾಗಿ ಬದುಕುತ್ತಾನೆ. (ಸುಖವಾಗಿ ನಿದ್ರಿಸುತ್ತಾನೆ.) ವಿಜಯಿಗಾಗಲೀ–ಸೋತವನಿಗಾಗಲೀ ಸುಖವೆಂಬುದು ಸ್ವಪ್ನದಲ್ಲಿಯೂ ದುರ್ಲಭವಾಗುತ್ತದೆ.

**ಜಾತವೈರಶ್ಚ ಪುರುಷೋ ದುಃಖಂ ಸ್ವಪಿತಿ ನಿತ್ಯದಾ ।**
**ಅನಿವೃತ್ತೇನ ಮನಸಾ ಸಸರ್ಪ ಇವ ವೇಶ್ಮನಿ ॥೬೦॥**

ಯಾರೊಡನೆಯಾದರೂ ದ್ವೇಷಕಟ್ಟಿಕೊಂಡ ಪುರುಷನು–ಸರ್ಪವು ಸೇರಿಕೊಂಡಿರುವ ಮನೆಯಲ್ಲಿ ವಾಸಮಾಡುವವನಂತೆ–ಸರ್ವದಾ ಅಸ್ವಸ್ಥ ವಾದ ಮನಸ್ಸಿನಿಂದ ಕೂಡಿದವನಾಗಿ ದುಃಖದಿಂದ ಕೂಡಿದ ನಿದ್ರೆಮಾಡು ತ್ತಾನೆ. (ಸುಖವಾಗಿ ನಿದ್ರಿಸುತ್ತಿದ್ದಾನೆಂದರೆ ಗಾಢನಿದ್ರೆಯಲ್ಲಿದ್ದಾನೆಂದರ್ಥ. ಒಂದು ವೇಳೆ ನಿದ್ರೆ ಬಂದರೂ ಶತ್ರುವಿನ ದೃಶ್ಯವು ಕನಸಿನಲ್ಲಿ ಕಂಡು ಒಡನೆಯೇ ಗಾಬರಿಯಿಂದ ಎಚ್ಚರಗೊಳ್ಳುತ್ತಾನೆ. ಈ ಕಾರಣದಿಂದ ಶತ್ರು ಗಳನ್ನು ಹೊಂದಿರುವವನು ಸುಖನಿದ್ರೆಯನ್ನು ಅನುಭವಿಸಲಾರನು.)

**ಉತ್ಸಾದಯತಿ ಯಃ ಸರ್ವಂ ಯಶಸಾ ಸ ವಿಮುಚ್ಯತೇ ।**
**ಅಕೀರ್ತಿಂ ಸರ್ವಭೂತೇಷು ಶಾಶ್ವತೀಂ ಸೋಽಧಿಗಚ್ಛತಿ ॥೬೧॥**

ಅರ್ಥಾತ್ ಶತ್ರುಗಳೆಲ್ಲರನ್ನೂ ಸಂಪೂರ್ಣವಾಗಿ ವಿನಾಶಮಾಡುವುದ ರಿಂದ ಒಬ್ಬನು ಸುಖವಾಗಿ ನಿದ್ರಿಸಬಹುದೆಂದಾಯಿತಲ್ಲವೇ? ಆದರೆ ಅದರಿಂದಲೂ ಅವನ ಮನಸ್ಸಿಗೆ ನೆಮ್ಮದಿಯಿರುವುದಿಲ್ಲ. ಯಾವನು ಶತ್ರು ಪಕ್ಷದಲ್ಲಿರುವ ಸರ್ವರನ್ನೂ ವಿನಾಶಗೊಳಿಸುತ್ತಾನೆಯೋ–ಅಂತಹವನು ಯಶಸ್ಸಿನಿಂದ ಹೀನನಾಗುತ್ತಾನೆ. ಶತ್ರುಪಕ್ಷದಲ್ಲಿರುವ ಮಕ್ಕಳು, ವೃದ್ಧರು ಇವರೆಲ್ಲರನ್ನೂ ಸಂಹರಿಸುವವನು ಖಂಡಿತವಾಗಿಯೂ ಯಶೋ ವಂತನಾಗುವುದಿಲ್ಲ. ಪ್ರಪಂಚದ ಎಲ್ಲ ಪ್ರಾಣಿಗಳಲ್ಲಿಯೂ ಅವನು ಶಾಶ್ವತವಾದ ಅಪಕೀರ್ತಿಯನ್ನು ಹೊಂದುತ್ತಾನೆ. ಪ್ರಪಂಚದ ಜನರೆಲ್ಲರೂ

ಅಂತಹವನನ್ನು ತೆಗಳುವರೇ ಹೊರತು ಶತ್ರುಪಕ್ಷವನ್ನು ಸಂಪೂರ್ಣವಾಗಿ ವಿನಾಶಗೊಳಿಸಿದುದಕ್ಕಾಗಿ ಯಾರೊಬ್ಬರೂ ಅವನನ್ನು ಶ್ಲಾಘಿಸುವುದಿಲ್ಲ. ಬಾಲಕರು-ವೃದ್ಧರೆಂಬ ವಿವೇಚನೆಯೇ ಇಲ್ಲದೇ ಸಂಹರಿಸಿದನೆಂಬ ದುಷ್ಕೀರ್ತಿಯು ಶಾಶ್ವತವಾಗಿ ಉಳಿಯುತ್ತದೆ.

**ನ ಹಿ ವೈರಾಣಿ ಶಾಮ್ಯನ್ತಿ ದೀರ್ಘಕಾಲಧೃತಾನ್ಯಪಿ ।**
**ಆಖ್ಯಾತಾರಶ್ಚ ವಿದ್ಯನ್ತೇ ಪುಮಾಂಶ್ಚೇದ್ವಿದ್ಯತೇ ಕುಲೇ ॥೬೨॥**

ಹೆಚ್ಚು ಕಾಲವು ಕಳೆದುಹೋದರೂ ವೈರವು ಶಾಂತವಾಗಿ ಹೋಗುವುದಿಲ್ಲ. ಯಾವ ವಿಧವಾದ ಕ್ರಿಯೆ-ಪ್ರತಿಕ್ರಿಯೆಗಳೂ ಇಲ್ಲದೇ ಅನೇಕವರ್ಷಗಳು ಕಳೆದುಹೋದ ಮಾತ್ರದಿಂದ ವೈರವೆಂಬುದು ನಶಿಸಿಹೋಗುವುದಿಲ್ಲ. ಒಂದು ಕುಲದಲ್ಲಿ ಕೇಳುವವನೊಬ್ಬ ಮನುಷ್ಯನಿದ್ದರೆ ಸಾಕು.; ಹಿಂದೆ ನಡೆದುದೆಲ್ಲವನ್ನೂ ಬಣ್ಣಕಟ್ಟಿ ಒಂದಕ್ಕೆರಡಾಗಿ ಬಣ್ಣಿಸಿ ಹೇಳುವವರನೇಕರಿರುತ್ತಾರೆ. (ಅದರಿಂದಾಗಿ ಸುಪ್ತಿಗೊಂಡಿದ್ದ ವೈರವು ಕ್ಷಣಮಾತ್ರದಲ್ಲಿ ಉಲ್ಬಣಿಸಿ ಬಿಡುತ್ತದೆ.)

**ನ ಚಾಪಿ ವೈರಂ ವೈರೇಣ ಕೇಶವ ವ್ಯುಪಶಾಮ್ಯತಿ ।**
**ಹವಿಷಾಗ್ನಿರ್ಯಥಾ ಕೃಷ್ಣ ಭೂಯ ಏವಾಭಿವರ್ಧತೇ ॥೬೩॥**

ಕೇಶವ! ವೈರದಿಂದ ವೈರವು ಉಪಶಮನವಾಗುವುದಿಲ್ಲ. ಹವಿಸ್ಸಿನಿಂದ ಅಗ್ನಿಯು ಹೇಗೆ ವೃದ್ಧಿಹೊಂದುತ್ತದೆಯೋ–ಅದೇ ರೀತಿಯಲ್ಲಿ ವೈರದಿಂದ ವೈರವೇ ವೃದ್ಧಿಹೊಂದುತ್ತದೆ. (ಶತ್ರುವಿನೊಡನೆ ವರ್ತಿಸುವಾಗ ಶತ್ರುತ್ವದ ಭಾವನೆಯಿಂದ ವರ್ತಿಸುತ್ತಾ ಹೋದರೆ ಅದರ ಪರಿಣಾಮವಾಗಿ ಮತ್ತಷ್ಟು ಶತ್ರುತ್ವವು ಹೆಚ್ಚುವುದೇ ಹೊರತು ಅದರ ಉಪಶಮನವಾಗುವುದಿಲ್ಲ. ವೈರಿಯನ್ನು ಪೂರ್ಣವಾಗಿ ನಾಶಗೊಳಿಸುವುದರಲ್ಲಿ ಪರಿಣಾಮವಾಗುತ್ತದೆ. ವೈರಿಯ ನಾಶದಿಂದ ವೈರವು ನಾಶವಾಗುವುದಿಲ್ಲ. ಶತ್ರುವಿನೊಡನೆ ಸೌಜನ್ಯದಿಂದ ವರ್ತಿಸಿದರೆ ಮತ್ತು ಅವನ ಮನಸ್ಸಿನಲ್ಲಿರುವ ವೈರಭಾವನೆಯನ್ನು ತೊಡೆದು ಹಾಕಿದರೆ ಮಾತ್ರ ವೈರವು ಶಾಂತವಾಗುತ್ತದೆ.)

**ಅತೋಽನ್ಯಥಾ ನಾಸ್ತಿ ಶಾನ್ತಿರ್ನಿತ್ಯಮನ್ತರಮನ್ತತಃ ।**
**ಅನ್ತರಂ ಲಿಪ್ಸಮಾನಾನಾಮಯಂ ದೋಷೋ ನಿರನ್ತರಃ ॥೬೪॥**

ವೈರದಿಂದ ವೈರವನ್ನು ಎದುರಿಸಲು ಹೋದರೆ ಯಾವುದಾದರೊಂದು ಪಕ್ಷದ ನಾಶವಾಗಲೇಬೇಕು. ಅದು ಹೊರತಾಗಿ ಶಾಂತಿ–ಎಂಬುದಿಲ್ಲ. ವೈರಿಯ ಪಕ್ಷದ ದೌರ್ಬಲ್ಯವನ್ನು ಹುಡುಕುತ್ತಿರುವವರಿಗೆ ವೈರವನ್ನು ವೈರದಿಂದಲೇ ಎದುರಿಸಬೇಕೆಂಬ ದೋಷವು ನಿರಂತರವಾಗಿರುತ್ತದೆ. (ಹಾಗಿಲ್ಲದಿದ್ದರೆ ಅವರು ವೈರಿಯ ಪಕ್ಷದ ದೌರ್ಬಲ್ಯವನ್ನು ಹುಡುಕಹೋಗುವುದಿಲ್ಲ.)

**ಪೌರುಷೇ ಯೋ ಹಿ ಬಲವಾನಾಧಿರ್ಹೃದಯಬಾಧನಃ ।**
**ತಸ್ಯ ತ್ಯಾಗೇನ ವಾ ಶಾನ್ತಿರ್ಮರಣೇನಾಪಿ ವಾ ಭವೇತ್ ॥೬೫॥**

ಪುರುಷನಲ್ಲಿರುವ ಮನೋವ್ಯಥೆಯು ಬಲಿಷ್ಠವಾದುದು. ಅದು ಯಾವಾಗಲೂ ಹೃದಯವನ್ನು ಕೊರೆಯುತ್ತಲೇ ಇರುತ್ತದೆ. ಅದು ಇರುವವರೆಗೆ ಶಾಂತಿಯು ದೊರಕಲಾರದು. ಇಂತಹ ಆಧಿಯನ್ನು ತ್ಯಾಗಮಾಡುವುದರಿಂದ ಶಾಂತಿಯು ದೊರೆಯುತ್ತದೆ.; ಅಥವಾ ಮರಣದಿಂದ ಶಾಂತಿಯಾಗುತ್ತದೆ. (ಎಂತಹ ವೀರಪುರುಷನಿಗೇ ಆಗಲೀ ವೈರಿಯೊಬ್ಬನಿದ್ದಾನೆಂದು ಭಾವಿಸಿಕೊಂಡಿರುವುದೇ ನಿರಂತರವಾದ ಮನೋವ್ಯಥೆಗೆ ಕಾರಣವಾಗುತ್ತದೆ. ಆ ಆಧಿಯನ್ನು ತ್ಯಾಗಮಾಡುವುದೆಂದರೆ ವೈರವನ್ನು ತ್ಯಾಗಮಾಡುವುದು.; ವೈರಿಯೊಬ್ಬನಿದ್ದಾನೆಂಬುದನ್ನು ಮರೆಯುವುದು. ಇದು ಕೇವಲ ವೈರಾಗ್ಯದಿಂದ ಸಾಧ್ಯವಾಗಬಹುದು. ಸತ್ತುಹೋಗುವುದರಿಂದ ಈ ರೋಗವು ಹೋಗುವುದರಲ್ಲಿ ಸಂಶಯವಿಲ್ಲ.)

**ಅಥವಾ ಮೂಲಘಾತೇನ ದ್ವಿಷತಾಂ ಮಧುಸೂದನ ।**
**ಫಲನಿರ್ವೃತ್ತಿರಿದ್ಧಾ ಸ್ಯಾತ್ತನ್ನೃಶಂಸತರಂ ಭವೇತ್ ॥೬೬॥**

ಮಧುಸೂದನ! ಅಥವಾ ಶತ್ರುಗಳನ್ನು ನಿರ್ಮೂಲನಮಾಡುವುದರಿಂದ ಅಭೀಷ್ಟವಾದ ಫಲಸಿದ್ಧಿಯಾಗಬಹುದು. ಆದರೆ ಅಂತಹ ಕಾರ್ಯವು ದಯಾ ರಹಿತವಾದ ಕ್ರೂರಕಾರ್ಯವೆನಿಸುವುದು.

**ಯಾ ತು ತ್ಯಾಗೇನ ಶಾನ್ತಿಃ ಸ್ಯಾತ್ತದೃತೇ ವಧ ಏವ ಸಃ ।**
**ಸಂಶಯಾಚ್ಚ ಸಮುಚ್ಛೇದಾದ್ದ್ವಿಷತಾಮಾತ್ಮನಸ್ತಥಾ ॥೬೭॥**

'ಒಂದು ವೇಳೆ ರಾಜ್ಯತ್ಯಾಗದಿಂದಲಾದರೂ ಶಾಂತಿಯುಂಟಾಗುವುದೇ?' ಎಂದು ತರ್ಕಿಸಿದರೆ–ಅದರಿಂದಲೂ ಶಾಂತಿಯು ನೆಲೆಸುವುದೆಂದು ಹೇಳಲಾಗು

ವುದಿಲ್ಲ. ರಾಜ್ಯಪರಿತ್ಯಾಗಮಾಡಿದರೆ ನಮ್ಮ ಅವಸಾನವನ್ನು ನಾವೇ ತಂದುಕೊಂಡಂತಾಗುತ್ತದೆ. ಆದರಿಂದ ಶತ್ರುಗಳೂ ಸಮಾಧಾನದಿಂದಿರುವ ರೆಂದು ಹೇಳಲಾಗುವುದಿಲ್ಲ. ಅವರ ಮನಸ್ಸಿನಲ್ಲಿಯೂ ಸಂಶಯವಿದ್ದೇ ಇರುತ್ತದೆ. ಸಮಯನೋಡಿ ತಮ್ಮನ್ನು ಸಂಹರಿಸಬಹುದೆಂದು ಅವರು ತರ್ಕಿಸುತ್ತಿರುತ್ತಾರೆ. ನಾವಂತೂ ರಾಜ್ಯಪರಿತ್ಯಾಗದಿಂದ ನಿರ್ಧನರಾಗಿ ವಿನಾಶ ಹೊಂದುತ್ತೇವೆ. ಒಂದು ವೇಳೆ ಬದುಕಿದ್ದರೂ ಮೃತಪ್ರಾಯರಾಗಿರುತ್ತೇವೆ.

**ನ ಚ ತ್ಯಕ್ತುಂ ತದಿಚ್ಛಾಮೋ ನ ಚೇಚ್ಛಾಮಃ ಕುಲಕ್ಷಯಮ್ ।**
**ಅತ್ರ ಯಾ ಪ್ರಣಿಪಾತೇನ ಶಾನ್ತಿಃ ಸೈವ ಗರೀಯಸೀ ॥೬೮॥**

ಮಾಧವ! ಆದುದರಿಂದ ನಾವು ರಾಜ್ಯವನ್ನು ಪರಿತ್ಯಜಿಸುವ ಇಚ್ಛೆಯುಳ್ಳವರಾಗಿಲ್ಲ. ಕುಲಕ್ಷಯಕರವಾದ ಯುದ್ಧವನ್ನು ಮಾಡುವ ಇಚ್ಛೆಯೂ ನಮಗಿಲ್ಲ. ನಾವು ವಿನಮ್ರರಾಗಿಯೇ ಇದ್ದು ಅದರಿಂದ ಶಾಂತಿಯು ಲಭ್ಯವಾಗುವುದಾದರೆ–ಅದೇ ಶ್ರೇಷ್ಠವಾದ ಮಾರ್ಗವೆಂಬುದು ನನ್ನ ಅಭಿಪ್ರಾಯವಾಗಿದೆ.

**ಸರ್ವಥಾ ಯತಮಾನಾನಾಮಯುದ್ಧಮಭಿಕಾಂಕ್ಷತಾಮ್ ।**
**ಸಾನ್ತ್ವೇ ಪ್ರತಿಹತೇ ಯುದ್ಧಂ ಪ್ರಸಿದ್ಧಂ ನಾಪರಾಕ್ರಮಃ ॥೬೯॥**

ನಮಗೆ ಯುದ್ಧಮಾಡಲು ಇಚ್ಛೆಯಿಲ್ಲ. ಸಾಮ-ದಾನ-ಭೇದ ಈ ಮೂರು ಉಪಾಯಗಳ ಮೂಲಕವಾಗಿ ನಾವು ನಮ್ಮ ಇಷ್ಟಾರ್ಥವನ್ನು ಪಡೆಯಲು ಸರ್ವಪ್ರಯತ್ನವನ್ನೂ ಮಾಡುತ್ತೇವೆ. ಒಂದು ವೇಳೆ ಸಾಮ-ದಾನ-ಭೇದೋಪಾಯಗಳು ನಿಷ್ಫಲವಾಗುವುದಾದರೆ ಯುದ್ಧವು ಅನಿವಾರ್ಯವೇ ಆಗುವುದು, ಮಾಧವ! ಆಗಲಾದರೂ ನಮ್ಮ ಪರಾಕ್ರಮವನ್ನು ತೋರದಿರಲು ಸಾಧ್ಯವೇ ಇಲ್ಲ.

**ಪ್ರತಿಘಾತೇನ ಸಾನ್ತ್ವಸ್ಯ ದಾರುಣಂ ಸಮ್ಪ್ರವರ್ತತೇ ।**
**ತಚ್ಛುನಾಮಿವ ಸಮ್ಪಾತೇ ಪಣ್ಡಿತೈರುಪಲಕ್ಷಿತಮ್ ॥೭೦॥**

ಶಾಂತಿಯ ಪ್ರಯತ್ನವು ವಿಫಲವಾಯಿತೆಂದರೆ–ಪರಿಣಾಮವು ಬಹಳ ಭೀಕರವಾಗುತ್ತದೆ. ಅಂತಹ ಸಂದರ್ಭವನ್ನು ಪಂಡಿತರಾದವರು ನಾಯಿ ಗಳ ಜಗಳಕ್ಕೆ ಹೋಲಿಸುತ್ತಾರೆ.

**ಲಾಙ್ಗೂಲಚಾಲನಂ ಕ್ಷ್ವೇಡಾ ಪ್ರತಿವಾಚೋ ವಿವರ್ತನಮ್ ।**
**ದನ್ತದರ್ಶನಮಾರಾವಸ್ತತೋ ಯುದ್ಧಂ ಪ್ರವರ್ತತೇ ॥೭೧॥**

(ಯಾವುದೋ ಸ್ಥಳದಲ್ಲಿ ಬಿದ್ದಿರುವ ಆಹಾರವನ್ನು ಪಡೆದುಕೊಳ್ಳುವ ಸಲುವಾಗಿ ಎರಡು ನಾಯಿಗಳೂ ಮುನ್ನುಗ್ಗಿದಾಗ–ಎರಡೂ ಸೇರಿ ಸಿಕ್ಕಿದ ಆಹಾರವನ್ನು ಹಂಚಿಕೊಳ್ಳಬೇಕೆಂಬ ಸಾಂತ್ವಭಾವವೇ ಆ ನಾಯಿಗಳಿಗಿರುವುದಿಲ್ಲ. ತಾನೇ ಅದನ್ನು ತಿಂದುಬಿಡಬೇಕೆಂಬುದು ಆ ಎರಡೂ ನಾಯಿಗಳ ಅಭಿಲಾಷೆಯಾಗಿರುತ್ತದೆ. ಅದನ್ನು ಸಾಧಿಸಿಕೊಳ್ಳಲು ಎರಡೂ ನಾಯಿಗಳೂ ಪರಸ್ಪರವಾಗಿ ಕಚ್ಚಾಡಲು ಸಿದ್ಧವಾಗುತ್ತವೆ.) ಮೊದಲು ಪುಚ್ಛಸ್ಪಂದನ : ಬಾಲಗಳನ್ನಲ್ಲಾಡಿಸುತ್ತವೆ. ಮರುಕ್ಷಣದಲ್ಲಿಯೇ ಒಂದು ನಾಯಿಯು ಗುರುಗುಟ್ಟುತ್ತದೆ. ಅದಕ್ಕುತ್ತರವಾಗಿ ಎದುರಾಗಿ ನಿಂತ ಶ್ವಾನವು ಇನ್ನೂ ಜೋರಾಗಿ ಗುರುಗುಟ್ಟುತ್ತದೆ. ಅದಾದನಂತರ ಎರಡೂ ನಾಯಿಗಳೂ ಹತ್ತಿರಕ್ಕೆ ಬರುತ್ತವೆ. ಬಳಿಕ ಎರಡು ನಾಯಿಗಳ ದಂತದರ್ಶನವಾಗುತ್ತದೆ. ಎರಡೂ ನಾಯಿಗಳೂ ಹಲ್ಲುಕಿರಿಯುತ್ತವೆ. ಒಡನೆಯೇ ಎರಡು ನಾಯಿಗಳೂ ಪರಸ್ಪರವಾಗಿ ಬೊಗಳಲು ಆರಂಭಿಸುತ್ತವೆ. ಮರುಕ್ಷಣದಲ್ಲಿಯೇ ಒಂದು ನಾಯಿಯು ಮತ್ತೊಂದು ನಾಯಿಯ ಮೇಲೆ ಬೀಳುತ್ತದೆ. ಪರಸ್ಪರ ಕಚ್ಚಾಟವು ಪ್ರಾರಂಭವಾಗುತ್ತದೆ.

**ತತ್ರ ಯೋ ಬಲವಾನ್ಕೃಷ್ಣ ಜಿತ್ವಾ ಸೋಽತ್ತಿ ತದಾಮಿಷಮ್ ।**
**ಏವಮೇವ ಮನುಷ್ಯೇಷು ವಿಶೇಷೋ ನಾಸ್ತಿ ಕಶ್ಚನ ॥೭೨॥**

ಆ ಎರಡೂ ನಾಯಿಗಳಲ್ಲಿ ಯಾವುದು ಬಲಿಷ್ಠವಾಗಿರುವುದೋ– ಅದು ಎದುರಾಳಿಯನ್ನು ಕ್ಷಣಾರ್ಧದಲ್ಲಿ ಕಚ್ಚಿ ಓಡಿಸಿ ಮಾಂಸದ ತುಂಡನ್ನು (ಆಹಾರವನ್ನು) ತಿಂದುಹಾಕುತ್ತದೆ. ಅದೇ ರೀತಿ ಮಾನವರಲ್ಲಿಯೂ ನಡೆಯುತ್ತದೆ. (ರಾಜ್ಯದಾಸೆಗಾಗಿ ಪರಸ್ಪರ ಕಚ್ಚಾಡುತ್ತಾರೆ. ರಾಜ್ಯವನ್ನು ಇಬ್ಬರೂ ಹಂಚಿಕೊಂಡು ಸುಖವಾಗಿರಲು ಅಪೇಕ್ಷಿಸುವುದಿಲ್ಲ. ಬಲಿಷ್ಠನಾದವನು ದುರ್ಬಲನನ್ನು ನಿರ್ಮೂಲಮಾಡುತ್ತಾನೆ. ಅನಂತರದಲ್ಲಿ ಅಖಂಡಸಾಮ್ರಾಜ್ಯವನ್ನೂ ಉಪಭುಂಜಿಸುತ್ತಾನೆ. ಆದುದರಿಂದ ಮನುಷ್ಯರಾಡುವ ಜಗಳವು ಅಥವಾ ಯುದ್ಧವು ನಾಯಿಗಳಾಡುವ ಜಗಳಕ್ಕಿಂತಲೂ ಯಾವ ವಿಧವಾದ ವಿಶೇಷತೆಯಿಂದಲೂ ಕೂಡಿರುವುದಿಲ್ಲ, ಕೃಷ್ಣ!

**ಸರ್ವಥಾ ತ್ವೇತದುಚಿತಂ ದುರ್ಬಲೇಷು ಬಲೀಯಸಾಮ್ ।**
**ಅನಾದರೋಽವಿರೋಧಶ್ಚ ಪ್ರಣಿಪಾತೀ ಹಿ ದುರ್ಬಲಃ ॥೭೩॥**

ದುರ್ಬಲರೂ ಮತ್ತು ಬಲಿಷ್ಠರೂ ಹೀಗಿರುವುದು ನನಗೆ ಉಚಿತವಾಗಿಯೇ ಕಾಣುತ್ತದೆ. ದುರ್ಬಲರ ವಿಷಯದಲ್ಲಿ ಬಲಿಷ್ಠರು ಔದಾಸೀನ್ಯದಿಂದಿರಬೇಕು. ಅವರೊಡನೆ ಅವಿರೋಧಿಗಳಾಗಿರಬೇಕು. ದುರ್ಬಲರನ್ನು ದ್ವೇಷಿಸಬಾರದು. ಅದಕ್ಕೆ ಪ್ರತಿಯಾಗಿ ದುರ್ಬಲರು ಯಾವಾಗಲೂ ವಿನಯಶೀಲರಾಗಿರಬೇಕು. ತಮ್ಮಲ್ಲಿ ಸಾಹಸವಿರದಿದ್ದರೂ ಬಲಿಷ್ಠರೊಡನೆ ತೋರಿಕೆಯ ಸಾಹಸವನ್ನು ತೋರಿಸಲೂ ಹೋಗಬಾರದು.

**ಪಿತಾ ರಾಜಾ ಚ ವೃದ್ಧಶ್ಚ ಸರ್ವಥಾ ಮಾನಮರ್ಹತಿ ।**
**ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ಧೃತರಾಷ್ಟ್ರೋ ಜನಾರ್ದನ ॥೭೪॥**

ತಂದೆ, ರಾಜ ಮತ್ತು ವೃದ್ಧ–ಈ ಮೂವರು ಸರ್ವಪ್ರಕಾರಗಳಿಂದಲೂ ಗೌರವಕ್ಕೆ ಅರ್ಹರು. ಈ ಕಾರಣದಿಂದ ಧೃತರಾಷ್ಟ್ರನು ನಮಗೆ ಮಾನ್ಯನೂ ಮತ್ತು ಪೂಜ್ಯನೂ ಆಗಿರುತ್ತಾನೆ.

ಆದರೆ ಧೃತರಾಷ್ಟ್ರನಿಗೆ ಮಗನ ಮೇಲಿನ ವ್ಯಾಮೋಹವು ಬಲವತ್ತರ ವಾಗಿದೆ. ಆ ಕಾರಣದಿಂದಲೇ ಅವನು ಪುತ್ರವಶನಾಗಿದ್ದಾನೆ. ತನ್ನ ಮಾರ್ಗವು ಅಧರ್ಮವಾದುದೆಂದು ತಿಳಿದಿದ್ದರೂ ಪುತ್ರನ ಇಚ್ಛೆಗೆ ವಿರುದ್ಧವಾಗಿ ನಡೆಯುವುದಿಲ್ಲ. ಈ ಕಾರಣದಿಂದಲೇ ಅವನು, ನಾವು ವಿನಮ್ರರಾಗಿ ನಮಗೆ ಸಲ್ಲಬೇಕಾದ ರಾಜ್ಯವನ್ನು ಕೇಳಲು ಹೋದರೂ ತಿರಸ್ಕರಿಸುತ್ತಾನೆ. ಈ ಸಂದರ್ಭದಲ್ಲಿ ಯಾವ ಮಾರ್ಗವು ಉಚಿತವೆಂದು ನೀನು ಭಾವಿಸುವೆ, ಕೃಷ್ಣ! ನಾವು ಅರ್ಥಹೀನರೂ ಆಗಬಾರದು ; ಧರ್ಮಬಾಹಿರರೂ ಆಗಬಾರದು. ಇದನ್ನು ಸಾಧಿಸಿಕೊಳ್ಳಲು ನಮಗಾವ ಮಾರ್ಗವಿದೆ? ಮಾಧವ! ಪುರುಷೋತ್ತಮ! ಮಧುಸೂದನ! ಇಂತಹ ಒಂದು ಕ್ಲಿಷ್ಟಪರಿಸ್ಥಿತಿಯೊದಗಿರುವಾಗ ನಿನ್ನನ್ನು ಬಿಟ್ಟು ಬೇರೆ ಯಾರ ಸಲಹೆಯನ್ನು ಕೇಳಲಿ? ದೇವ!

**ಪ್ರಿಯಶ್ಚ ಪ್ರಿಯಕಾಮಶ್ಚ ಗತಿಜ್ಞಃ ಸರ್ವಕರ್ಮಣಾಮ್ ।**
**ಕೋ ಹಿ ಕೃಷ್ಣಾಸ್ತಿ ನಸ್ತ್ವಾದೃಕ್ಸರ್ವನಿಶ್ಚಯವಿತ್ಸುಹೃತ್ ॥೭೫॥**

ಮಹಾನುಭಾವ! ನೀನು ನಮಗೆ ಅತ್ಯಂತಪ್ರಿಯನಾಗಿರುವೆ. ನಮಗೆ ಪ್ರಿಯವನ್ನೇ ಮಾಡಬೇಕೆಂಬ ಅಭಿಲಾಷೆಯುಳ್ಳವನಾಗಿರುವೆ. ಸರ್ವಕಾರ್ಯಗಳ ಪರಿಣಾಮವನ್ನೂ ತಿಳಿದವನಾಗಿರುವೆ. ಮುಂದೆ ಹೀಗೆಯೇ ಆಗುವುದೆಂಬ ನಿಶ್ಚಯಜ್ಞಾನವು ನಿನಗಿದೆ. ಮೇಲಾಗಿ ನೀನು ನಮ್ಮ ಆಪ್ತಮಿತ್ರನೂ ಆಗಿರುವೆ. ಇಂತಹ ಸಕಲಗುಣಪರಿಪೂರ್ಣನಾದ ನಿನ್ನನ್ನು ಬಿಟ್ಟು ನಮಗೆ ಸಲಹೆನೀಡುವವರು ಬೇರೆ ಯಾರಿದ್ದಾರೆ?"

ಜನಮೇಜಯ! ಧರ್ಮಜನು ಶ್ರೀಕೃಷ್ಣನನ್ನು ಈ ರೀತಿಯಲ್ಲಿ ಪ್ರಾರ್ಥಿಸಿದನಂತರ ಜನಾರ್ದನನು ಧರ್ಮಜನನ್ನು ಕುರಿತು ಹೇಳಿದನು :

"ಮಹಾರಾಜ! ಎರಡೂ ಪಕ್ಷಗಳ ಹಿತಾರ್ಥವಾಗಿ ನಾನು ಕೌರವರ ಸಭೆಗೆ ಹೋಗುತ್ತೇನೆ. ನಿಮ್ಮ ಅರ್ಥಪ್ರಾಪ್ತಿಗೆ (ರಾಜ್ಯಪ್ರಾಪ್ತಿಗೆ) ಸ್ವಲ್ಪವೂ ಕುಂದುಂಟಾಗದ ರೀತಿಯಲ್ಲಿ ನಿಮ್ಮ ಪ್ರಯೋಜನವನ್ನು ಬಲಿಗೊಡದೇ ನಾನು ಎರಡು ಪಕ್ಷಗಳಿಗೂ ಸಂಧಿಯನ್ನುಂಟುಮಾಡಿದೆನಾದರೆ–ಸಂಧಿಯನ್ನು ಸಾಧಿಸಿದೆನಾದರೆ–ಮಹಾಫಲದಾಯಕವಾದ ಮಹಾಪುಣ್ಯಕಾರ್ಯವೇ ನನ್ನಿಂದ ಸಾಧಿಸಲ್ಪಟ್ಟಂತಾಗುತ್ತದೆ. ಕೋಪಾವಿಷ್ಟರಾಗಿರುವ ಕುರು-ಸೃಂಜಯರನ್ನೂ, ಪಾಂಡವರನ್ನೂ, ಧೃತರಾಷ್ಟ್ರನ ಮಕ್ಕಳನ್ನೂ ಮತ್ತು ಈ ಪೃಥ್ವಿಯನ್ನೂ (ಪೃಥ್ವಿಯಲ್ಲಿರುವ ಸಕಲರಾಜರನ್ನೂ) ಮೃತ್ಯುವಿನ ಪಾಶದಿಂದ ವಿಮೋಚನೆ ಮಾಡುವೆನು."

ಯುಧಿಷ್ಠಿರನು ಹೇಳುತ್ತಾನೆ :

"ಕೃಷ್ಣ! ನೀನು ಕೌರವರ ಸದನಕ್ಕೆ ಹೋಗಬೇಕೆಂಬುದು ನನ್ನ ಅಭಿಮತವಾಗಿರುವುದಿಲ್ಲ. ನೀನಲ್ಲಿ ಉಭಯತ್ರರಿಗೂ ಹಿತಕರವಾದ ಮಾತುಗಳನ್ನೇ ಹೇಳಿದರೂ ಸುಯೋಧನನು ನಿನ್ನ ಮಾತಿನಂತೆ ನಡೆಯುವುದಿಲ್ಲ. (ಈ ಕಾರಣದಿಂದಾಗಿ ನೀನಲ್ಲಿಗೆ ಹೋಗುವುದು ಸಾಧುವಲ್ಲವೆಂದು ನಾನು ಭಾವಿಸುತ್ತೇನೆ.) ಮೇಲಾಗಿ ದುರ್ಯೋಧನನ ವಶವರ್ತಿಯಾದ ಕ್ಷತ್ರಿಯ ಸಮೂಹವೇ ಏಕತ್ರ ಸೇರಿ ಕೌರವಸಭೆಯಲ್ಲಿ ಉಪಸ್ಥಿತವಾಗಿರುತ್ತದೆ. ಅವರ ಮಧ್ಯದಲ್ಲಿ ನೀನು ಹೋಗಿ ಕುಳಿತುಕೊಳ್ಳುವುದನ್ನು ನಾನು ಇಷ್ಟಪಡುವುದಿಲ್ಲ.

**ನ ಹಿ ನಃ ಪ್ರೀಣಯೇದ್ದ್ರವ್ಯಂ ನ ದೇವತ್ವಂ ಕುತಃ ಸುಖಮ್ ।**
**ನ ಚ ಸರ್ವಾಮರೈಶ್ವರ್ಯಂ ತವ ದ್ರೋಹೇಣ ಮಾಧವ ॥೮೪॥**

ದುಷ್ಟದುರ್ಯೋಧನನು ನಿನ್ನ ಮಾತನ್ನು ಕೇಳದಿರುವುದು ಮಾತ್ರ ವಲ್ಲದೇ–ನಿನ್ನ ವಿಷಯದಲ್ಲವನು ದ್ರೋಹವನ್ನೂ ಎಸಗಬಹುದು. (ಅನುಚಿತಕಾರ್ಯವನ್ನೇ ಮಾಡಬಹುದು.) ಅದನ್ನು ನಾನು ಖಂಡಿತವಾಗಿಯೂ ಸಹಿಸಲಾರೆನು. ನಿನಗೆ ತೊಂದರೆಯಾಗಿ ಲಭಿಸುವುದಾದ ಯಾವ ದ್ರವ್ಯವೂ ನಮಗೆ ಪ್ರಿಯವನ್ನುಂಟುಮಾಡುವುದಿಲ್ಲ. ದೇವತ್ವವೂ ನಮಗೆ ಸಂತೋಷ ವನ್ನುಂಟುಮಾಡದೆಂದಮೇಲೆ ಸುಖದಲ್ಲಿ ನಮಗೆ ಆಸಕ್ತಿಯೆಲ್ಲಿಯದು? ಸುಖ ದಲ್ಲೂ ನಮಗೆ ಆಸಕ್ತಿಯಿಲ್ಲ. ಸಕಲದೇವತೆಗಳ ಮಹೈಶ್ವರ್ಯವೂ ನಮಗೆ ಬೇಕಾಗಿಲ್ಲ. (ನೀನು ಅವಮಾನಗೊಂಡಾದರೂ ನಮಗೆ ಇವುಗಳನ್ನು ಸಾಧಿಸಿ ಕೊಡಬೇಕಾಗಿಲ್ಲ.)"

ಮಾಧವನು ಹೇಳುತ್ತಾನೆ :

"ಮಹಾರಾಜ! ಧೃತರಾಷ್ಟ್ರನ ಮಗನಾದ ದುರ್ಯೋಧನನು ಪಾಪ ಕರ್ಮವನ್ನು ಮಾಡಲು ಹೇಸತಕ್ಕವನಲ್ಲವೆಂಬ ವಿಷಯವನ್ನು ನಾನು ತಿಳಿದಿರು ತ್ತೇನೆ. ಅವನು ನನಗೆ ದ್ರೋಹವೆಸಗಲೂಬಹುದು. ಆದರೆ ಅವನು ದ್ರೋಹ ವೆಸಗುವನೆಂದು ಭಾವಿಸಿ ನಾನಲ್ಲಿಗೆ ಹೋಗದಿರುವುದು ಯುಕ್ತವಲ್ಲ. ನಾನಲ್ಲಿಗೆ ಹೋಗಲೇಬೇಕು. ಸಕಲರಾಜರ ಮುಂದೆಯೂ ಸಂಧಿಯ ಪ್ರಸ್ತಾಪವನ್ನು ಮಾಡಬೇಕು. ಸಕಲರಾಜರಿಗೂ ನಾವು ಶಾಂತಿಪ್ರಿಯರೆಂಬ ಮತ್ತು ಯುದ್ಧ ಪ್ರಿಯರಲ್ಲವೆಂಬ ಅರಿವಾಗಬೇಕು. ಅವರು ಮುಂದೆ ನಮ್ಮ ವಿಷಯದಲ್ಲಿ ಕಿಂಚಿತ್ತಾದರೂ ದೋಷವನ್ನೆಣಿಸಬಾರದು. ಈ ಒಂದು ಕಾರಣಕ್ಕಾಗಿ ನಾನಲ್ಲಿಗೆ ಹೋಗುತ್ತೇನೆ. ಆದರೆ, ಯುಧಿಷ್ಠಿರ! ಅವರು ನನಗೆ ತೊಂದರೆ ಯನ್ನುಂಟುಮಾಡುವರೆಂದು ಭ್ರಮಿಸಬೇಡ. ತೊಂದರೆಮಾಡಲು ಪ್ರಯತ್ನಿಸ ಬಹುದೇ ಹೊರತು ನನಗೆ ತೊಂದರೆಕೊಡಲು ಅಥವಾ ನನಗೆ ಲೇಶವಾದರೂ ಅಪಮಾನಮಾಡಲು ಅವರು ಖಂಡಿತವಾಗಿಯೂ ಸಮರ್ಥರಲ್ಲ.

**ನ ಚಾಪಿ ಮಮ ಪರ್ಯಾಪ್ತಾಃ ಸಹಿತಾಃ ಸರ್ವಪಾರ್ಥಿವಾಃ ।**
**ಕ್ರುದ್ಧಸ್ಯ ಸಂಯುಗೇ ಸ್ಥಾತುಂ ಸಿಂಹಸ್ಯೇವೇತರೇ ಮೃಗಾಃ ॥೮೬॥**

ಕೋಪಗೊಂಡ ಸಿಂಹದ ಮುಂದೆ ಇತರ ಮೃಗಗಳು ನಿಲ್ಲಲು ಸಾಧ್ಯವಾಗ ದಂತೆ–ಯುದ್ಧಸಮಯದಲ್ಲಿ ಕ್ರೋಧಪರವಶನಾದ ನನ್ನ ಮುಂದೆ ಆ ಎಲ್ಲ ರಾಜರೂ ಒಟ್ಟಾಗಿಯೂ ನಿಲ್ಲಲಾರರು.

ಅಥ ಚೇತ್ತೇ ಪ್ರವರ್ತನ್ತೇ ಮಯಿ ಕಿಞ್ಚಿದಸಾಮ್ಪ್ರತಮ್ ।
ನಿರ್ದಹೇಯಂ ಕುರೂನ್ಸರ್ವಾನಿತಿ ಮೇ ಧೀಯತೇ ಮತಿಃ ॥೮೭॥

ನಾನು ಸಂಧಿಕಾರ್ಯಕ್ಕಾಗಿ ಅಲ್ಲಿಗೆ ಹೋಗಿರುವಾಗ ನನ್ನ ಪರಾಕ್ರಮ ವೆಷ್ಟೆಂಬುದನ್ನು ಮನಗಾಣದೇ ಕೌರವರೇನಾದರೂ ನನ್ನ ವಿಷಯದಲ್ಲಿ ಸ್ವಲ್ಪ ವಾದರೂ ಅನುಚಿತವಾದ ರೀತಿಯಲ್ಲಿ ನಡೆದುಕೊಂಡರಾದರೆ–ಆ ಎಲ್ಲ ಕುರು ಗಳನ್ನೂ ಕ್ಷಣಮಾತ್ರದಲ್ಲಿ ದಹಿಸಿಬಿಟ್ಟೇನು. ಇದು ನನ್ನ ನಿಶ್ಚಿತಾಭಿಪ್ರಾಯ ವಾಗಿದೆ. ಆದುದರಿಂದ ದುರ್ಯೋಧನನು ನನಗೆ ದ್ರೋಹಮಾಡುವನೆಂಬ ವಿಷಯದಲ್ಲಿ ನೀನು ಆತಂಕಗೊಳ್ಳಬೇಡ. ಮಹಾರಾಜ! ನಾನಲ್ಲಿಗೆ ಶಾಂತಿಯ ಸಂಧಾನಕ್ಕಾಗಿ ಹೋಗುವುದು ಯಾವ ಕಾರಣದಿಂದಲೂ ನಿರರ್ಥಕವಾಗುವು ದಿಲ್ಲ. ಯುಧಿಷ್ಠಿರ! ಒಂದು ವೇಳೆ ನಮ್ಮ ಇಷ್ಟಸಿದ್ಧಿಯಾದರೂ ಆಗಬಹುದು. (ದುರ್ಯೋಧನನು ಅರ್ಧರಾಜ್ಯವನ್ನು ಕೊಡಲು ಒಪ್ಪಿಬಿಡಲೂಬಹುದು.) ಅರ್ಥಸಿದ್ಧಿಯಾಗದಿದ್ದರೂ ನಾವು ಜನನಿಂದೆಯನ್ನಾದರೂ ತಪ್ಪಿಸಿಕೊಳ್ಳು ತ್ತೇವಲ್ಲವೇ? ಜನರ ನಿಂದೆಗೆ ಪಾತ್ರರಾಗದಿರುವುದೂ ಅಥವಾ ಜನರ ಅನು ಕಂಪವನ್ನು ಸಂಪಾದಿಸುವುದೂ ನಮಗೆ ಈ ಸಂದರ್ಭದಲ್ಲಿ ಅತ್ಯಂತಮುಖ್ಯವಾದ ವಿಷಯವೇ ಆಗಿದೆ."

ಧರ್ಮಜನು ಹೇಳುತ್ತಾನೆ :

"ಕೃಷ್ಣ! ನಿನಗೆ ಯಾವುದು ಉಚಿತವೆನಿಸುವುದೋ ಹಾಗೆಯೇ ಮಾಡು. ನಿನಗೆ ಮಂಗಳವಾಗಲಿ. ನೀನು ಪ್ರಸನ್ನತೆಯಿಂದಲೇ ಕೌರವರ ಸಮೀಪಕ್ಕೆ ಹೋಗು. ಕಾರ್ಯಸಿದ್ಧಿಯನ್ನು ಪಡೆದು ಕುಶಲಿಯಾಗಿ ಇಲ್ಲಿಗೆ ಪುನರಾಗಮಿ ಸುವ ನಿನ್ನನ್ನು ನೋಡುವ ಆಶಯದಿಂದಿರುತ್ತೇನೆ.

ವಿಷ್ವಕ್ಸೇನನೇ! ನೀನು ಕುರುಗಳ ಬಳಿಗೆ ಹೋಗಿ ಅವರನ್ನು ಶಾಂತ ಗೊಳಿಸು. ಯುದ್ಧದಿಂದ ವಿಮುಖರನ್ನಾಗಿ ಮಾಡು. ನಾವೆಲ್ಲರೂ ಶುದ್ಧ ಹೃದಯರೂ, ಪ್ರಸನ್ನಚಿತ್ತರೂ ಆಗಿದ್ದುಕೊಂಡು ಕೂಡುಬಾಳ್ವೆಯನ್ನು ನಡೆಸು ವಂತಾಗಲಿ.

ಕೃಷ್ಣ! ನೀನೇ ನಮಗೆ ಸಹೋದರನೂ ಮತ್ತು ಮಿತ್ರನೂ ಆಗಿರುವೆ. ಅರ್ಜುನನಿಗೂ ಮತ್ತು ನನಗೂ ಪರಮಪ್ರಿಯನಾಗಿರುವೆ. ನಿನ್ನ ಸೌಹಾರ್ದದ ವಿಷಯದಲ್ಲಿ ನಾನು ಎಳ್ಳಷ್ಟೂ ಶಂಕಿಸುತ್ತಿಲ್ಲ. ಎರಡೂ ಪಕ್ಷಗಳ ಕಲ್ಯಾಣಕ್ಕಾಗಿ ಪ್ರಯತ್ನಿಸು. ನಿನಗೆ ಮಂಗಳವಾಗಲಿ. ಮಹಾನುಭಾವ! ನೀನು ನಮ್ಮನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವೆ. ಅಂತೆಯೇ ನಿನಗೆ ಕೌರವರ ವಿಷಯವೂ ಚೆನ್ನಾಗಿ ತಿಳಿದಿದೆ. ನಾವು ಏನನ್ನು ಅಪೇಕ್ಷಿಸುತ್ತೇವೆಂಬುದನ್ನೂ ನೀನು ಗ್ರಹಿಸಿರುವೆ. (ನಮ್ಮ ಅಭೀಷ್ಟವೇನೆಂಬುದನ್ನೂ ಗ್ರಹಿಸಿರುವೆ.) ಯಾವ ಸಮಯದಲ್ಲಿ ಹೇಗೆ ಮಾತನಾಡಬೇಕೆಂಬುದನ್ನೂ ತಿಳಿದಿರುವೆ. ಈ ಸಂದರ್ಭದಲ್ಲಿ ನಮ್ಮ ಹಿತಸಾಧನೆಗೆ ಯಾವ ಮಾತುಗಳು ಸಾಧಕವಾಗುವುವೋ–ಅಂತಹ ಮಾತುಗಳನ್ನೇ ನೀನು ದುರ್ಯೋಧನನೊಡನೆ ಆಡಬೇಕು. ನೀನು ಆ ಸಭೆಯಲ್ಲಿ ವಿನಮ್ರತೆಯ ಮಾತುಗಳನ್ನೇ ಆಡ ಬೇಕೆಂದೂ ನಾನು ಹೇಳುವುದಿಲ್ಲ. ವಿನಮ್ರತೆಯ ಮಾತಾಗಲೀ, ದಿಟ್ಟತನದ ಮಾತಾಗಲೀ–ಆ ಮಾತು ಧರ್ಮಯುಕ್ತವಾಗಿರಬೇಕು ; ಯುಕ್ತಿಯುಕ್ತ ವಾಗಿರಬೇಕು ಮತ್ತು ನಮ್ಮಿಬ್ಬರ ಹಿತಾಸಕ್ತಿಯಿಂದಲೂ ಕೂಡಿದುದಾಗಿರ ಬೇಕು. ಅಂತಹ ಮಾತುಗಳನ್ನೇ ನೀನು ಕೌರವರ ಮಹಾಸಭೆಯಲ್ಲಿ ದುರ್ಯೋಧನನೊಡನೆ ಹೇಳಬೇಕು.”

೭೨ನೆಯ ಅಧ್ಯಾಯವು ಮುಗಿಯಿತು.

೭೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಯುಧಿಷ್ಠಿರನನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸಿದುದು

(ರಾಜನಾದವನು ಅಥವಾ ಕ್ಷತ್ರಿಯನಾದವನು ಯುದ್ಧದ ವಿಷಯದಲ್ಲಿ ಎಂದೂ ಅಲಸನಾಗಬಾರದು. ಯದ್ಯಪಿ ಯುಧಿಷ್ಠಿರನ ಅಭಿಪ್ರಾಯದಂತೆ ಯುದ್ಧವು ಬಹುಜನಹಿಂಸಾಕರವಾದುದಾದರೂ ದುಷ್ಟಶಿಕ್ಷಣಕ್ಕೆ ಯುದ್ಧವು ಅನಿವಾರ್ಯವಾಗುತ್ತದೆ.) ಯುದ್ಧದ ವಿಷಯದಲ್ಲಿ ನಿರುತ್ಸಾಹವನ್ನು ತೋರಿದ ಯುಧಿಷ್ಠಿರನಿಗೆ ಉತ್ಸಾಹತುಂಬುತ್ತಾ ಶ್ರೀಕೃಷ್ಣನು ಹೇಳುತ್ತಾನೆ :

“ಮಹಾರಾಜ! ಸಂಜಯನ ಮಾತನ್ನು ಕೇಳಿದೆನು. ನೀನು ಹೇಳಿ

ದುದನ್ನೂ ಕೇಳಿದೆನು. ನಿನ್ನ ಮತ್ತು ಕೌರವರ ಮನೋಗತವಾದ ಅಭಿಪ್ರಾಯವೇನೆಂಬುದನ್ನೂ ನಾನು ತಿಳಿದುಕೊಂಡಿರುವೆನು. ಎಲ್ಲ ವಿಷಯಗಳೂ ನನಗೆ ತಿಳಿದಿರುವುವು. ನಿನ್ನ ಬುದ್ಧಿಗೂ ಮತ್ತು ಕೌರವರ ಬುದ್ಧಿಗೂ ಇರುವ ತಾರತಮ್ಯವಿಷ್ಟೇ, ಯುಧಿಷ್ಠಿರ!

**ತವ ಧರ್ಮಾಶ್ರಿತಾ ಬುದ್ಧಿಸ್ತೇಷಾಂ ವೈರಾಶ್ರಯಾ ಮತಿಃ ।**
**ಯದಯುದ್ಧೇನ ಲಭ್ಯೇತ ತತ್ತೇ ಬಹುಮತಂ ಭವೇತ್ ॥೨॥**

ನಿನ್ನ ಬುದ್ಧಿಯು ಧರ್ಮವನ್ನು ಆಶ್ರಯಿಸಿದೆ. ಧರ್ಮದಲ್ಲಿಯೇ ನಿನ್ನ ಬುದ್ಧಿಯು ಲೀನವಾಗಿಹೋಗಿದೆ. ಕೌರವರ ಬುದ್ಧಿಯಾದರೋ ವೈರವನ್ನೇ ಆಶ್ರಯಿಸಿದೆ. ದ್ವೇಷಸಾಧನೆಯ ಹೊರತಾಗಿ ಅವರಿಗೆ ಧರ್ಮಾಧರ್ಮಗಳ ವಿವೇಚನೆಯೇ ಇಲ್ಲವಾಗಿದೆ. ಯುದ್ಧವಿಲ್ಲದೇ ಸ್ವಲ್ಪವೇ ಪ್ರಾಪ್ತವಾದರೂ ಅದನ್ನೇ ನೀನು ಬಹುವಾಗಿ ಭಾವಿಸುವೆ. ಯುದ್ಧಪ್ರಸಕ್ತಿಯಿಲ್ಲದೆ ಸಂಧಿಯಾದರೆ ಸಾಕೆಂಬುದು ನಿನ್ನ ಅಭಿಮತವಾಗಿದೆ. (ಅರ್ಧರಾಜ್ಯವೇ ಸಿಕ್ಕಬೇಕೆಂಬ ಆಶಯವೂ ನಿನಗಿರುವುದಿಲ್ಲ. ಕೇವಲ ಐದು ಗ್ರಾಮಗಳನ್ನು ಕೊಟ್ಟರೂ ನೀನು ಸಂತುಷ್ಟನಾಗುವೆ.)

ಆದರೆ ಇದು ಕ್ಷತ್ರಿಯಧರ್ಮವಲ್ಲ, ಯುಧಿಷ್ಠಿರ!

**ನ ಚೈವಂ ನೈಷ್ಠಿಕಂ ಕರ್ಮ ಕ್ಷತ್ರಿಯಸ್ಯ ವಿಶಾಮ್ಪತೇ ।**
**ಆಹುರಾಶ್ರಮಿಣಃ ಸರ್ವೇ ನ ಭೈಕ್ಷಂ ಕ್ಷತ್ರಿಯಶ್ಚರೇತ್ ॥೩॥**

ಅಲ್ಪತೃಪ್ತಿಯು ಕ್ಷತ್ರಿಯನ ಸ್ವಾಭಾವಿಕಗುಣವೆನಿಸುವುದಿಲ್ಲ. (ಕ್ಷತ್ರಿಯನೆಂದಿಗೂ ಸಂತುಷ್ಟನಾಗಬಾರದು. ಅಸನ್ತುಷ್ಟೋ ದ್ವಿಜೋ ನಷ್ಟಃ ಸನ್ತುಷ್ಟಶ್ಚ ಮಹೀಪತಿಃ ಎಂದು ಹಿರಿಯರು ಹೇಳುತ್ತಾರೆ.) ನೈಷ್ಠಿಕನಂತೆ ಭಿಕ್ಷಾವೃತ್ತಿಯನ್ನು ಮಾಡುವುದು ಕ್ಷತ್ರಿಯನಿಗೆ ತಕ್ಕುದಲ್ಲ. ಕ್ಷತ್ರಿಯನು ಮಾತ್ರ ಭೈಕ್ಷ್ಯದಿಂದ (ಭಿಕ್ಷಾಟನೆಯಿಂದ) ಜೀವನ ನಡೆಸಬಾರದೆಂದು ಎಲ್ಲ ಆಶ್ರಮದವರೂ ಹೇಳುತ್ತಾರೆ.

**ಜಯೋ ವಧೋ ವಾ ಸಂಗ್ರಾಮೇ ಧಾತ್ರಾದಿಷ್ಟಃ ಸನಾತನಃ ।**
**ಸ್ವಧರ್ಮಃ ಕ್ಷತ್ರಿಯಸ್ಯೈಷ ಕಾರ್ಪಣ್ಯಂ ನ ಪ್ರಶಸ್ಯತೇ ॥೪॥**

ಸನಾತನವಾದ ಈ ಕ್ಷತ್ರಿಯಧರ್ಮವು ಸಾಕ್ಷಾತ್ ಬ್ರಹ್ಮನಿಂದಲೇ ಹೀಗೆ

ಪ್ರತಿಪಾದಿಸಲ್ಪಟ್ಟಿದೆ : 'ಯುದ್ಧದಲ್ಲಿ ಜಯವನ್ನಾದರೂ ಗಳಿಸಬೇಕು ; ಪ್ರಾಣವನ್ನಾದರೂ ತೊರೆಯಬೇಕು. ಕ್ಷತ್ರಿಯನಿಗದು ಸ್ವಧರ್ಮವಾಗಿದೆ. ಈ ವಿಷಯದಲ್ಲಿ ಕ್ಷತ್ರಿಯನಿಗೆ ಕಾರ್ಪಣ್ಯವು ಅಥವಾ ದೀನಭಾವವು ಪ್ರಶಂಸಾರ್ಹವಲ್ಲ.' (ಗ್ರಾಮಪಂಚಕವನ್ನಾದರೂ ಕೊಡುವಂತೆ ಕೇಳು ವುದು ಕ್ಷತ್ರಿಯಧರ್ಮವಾಗುವುದಿಲ್ಲ.) ಕ್ಷತ್ರಿಯನಾದವನು ದೈನ್ಯವನ್ನಾಶ್ರಯಿಸಿ ಜೀವಿಕೆಯನ್ನು ನಡೆಸಲು ಸಾಧ್ಯವಾಗದು, ಧರ್ಮಜ! ದೀನತೆಯು ಯಾರಿಗಿರಬೇಕೋ ಅವರಿಗಿರಬೇಕೇ ಹೊರತು ಕ್ಷತ್ರಿಯನಾದವನಿಗೆ ದೈನ್ಯ ವಾಗಲೀ, ಅಲ್ಪತುಷ್ಟಿಯಾಗಲೀ ಖಂಡಿತವಾಗಿಯೂ ಇರಬಾರದು. ಶತ್ರು ಗಳಿಗೆ ತಾಪವುಂಟುಮಾಡುವ ಸಾಮರ್ಥ್ಯವಿರುವವನೇ! ಮಹಾಬಾಹೋ! ಈ ಸಮಯದಲ್ಲಿ ನಿನ್ನ ಪರಾಕ್ರಮವನ್ನು ತೋರಿಸು. ಶತ್ರುಗಳನ್ನು ಸಂಹರಿಸು.

**ಅತಿಗೃದ್ಧಾಃ ಕೃತಸ್ನೇಹಾ ದೀರ್ಘಕಾಲಂ ಸಹೋಷಿತಾಃ ।**
**ಕೃತಮಿತ್ರಾಃ ಕೃತಬಲಾ ಧಾರ್ತರಾಷ್ಟ್ರಾಃ ಪರಂತಪ ॥೬॥**

ಧರ್ಮಜ! ನೀನು ಯೋಚಿಸುತ್ತಿರುವ ರೀತಿಯಲ್ಲಿ ನಿನ್ನ ಶತ್ರುಗಳು ಯೋಚಿಸುತ್ತಿಲ್ಲ. ಅವರಿಗೆ ನಿಮ್ಮನ್ನು ವಿನಾಶಮಾಡಬೇಕೆಂಬುದೊಂದೇ ಧ್ಯೇಯವಾಗಿದೆ. ಅದಕ್ಕಾಗಿಯೇ ಅವರು ಬಹುಕಾಲದಿಂದಲೂ ಪ್ರಯತ್ನ ವನ್ನು ಮಾಡುತ್ತಿದ್ದಾರೆ. ಪರಂತಪನೇ! ಧೃತರಾಷ್ಟ್ರನ ಮಕ್ಕಳು ಮಹಾ ಲುಬ್ಧರು. (ನಿನಗೆ ಪಂಚಗ್ರಾಮಗಳನ್ನೂ ಕೊಡುವುದಿಲ್ಲ. ಅವರು ಅಷ್ಟು ಕೃಪಣರಾಗಿದ್ದಾರೆ.) ನಿನಗೆ ಸೂಜಿಯ ಮೊನೆಯಷ್ಟು ರಾಜ್ಯವನ್ನೂ ಕೊಡ ಕೂಡದೆಂಬ ಕಾರಣದಿಂದಲೇ ಅವರು ಪೃಥ್ವಿಯ ಎಲ್ಲ ರಾಜರೊಡನೆಯೂ ಮೈತ್ರಿಯನ್ನು ಬೆಳೆಸಿದ್ದಾರೆ. ಎಲ್ಲ ಕಾಲದಲ್ಲಿಯೂ ಅವರು ಆ ರಾಜರ ಒಡನಾಡಿಗಳಾಗಿರುವುದರಿಂದ (ಅವರನ್ನು ಪದೇ ಪದೇ ಕರೆಯಿಸಿ ಗೌರವಿಸು ತ್ತಿರುವುದರಿಂದ) ಪರಸ್ಪರಮೈತ್ರಿಯು ಅತ್ಯಂತ ಗಾಢವಾಗಿದೆ. ಅವರು ಅನೇಕ ಮಹಾವೀರರನ್ನು ಮಿತ್ರರನ್ನಾಗಿ ಮಾಡಿಕೊಂಡಿರುತ್ತಾರೆ. ಅಪಾರ ವಾದ ಬಲವನ್ನು ಸಂಗ್ರಹಿಸಿದ್ದಾರೆ. ವಿಶಾಂಪತೇ! ಈ ಕಾರಣದಿಂದಾಗಿ ನಿನ್ನೊಡನೆ ಅವರು ಸಂಧಿಯನ್ನು ಮಾಡಿಕೊಳ್ಳುವರೆಂಬುದಕ್ಕೆ ನಾನು ಯಾವ ಸೂಚನೆಯನ್ನೂ ಕಾಣುತ್ತಿಲ್ಲ. ಅವರು ನಿನ್ನೊಡನೆ ಸಂಧಿಮಾಡಿಕೊಳ್ಳುವ

ಸಂಭವವೇ ಇಲ್ಲವಾಗಿದೆ. ಭೀಷ್ಮ-ದ್ರೋಣ-ಕೃಪಾದಿ ಅತುಲಪರಾಕ್ರಮಿಗಳೆಲ್ಲರೂ ಅವರ ಪಕ್ಷದಲ್ಲಿರುವುದರಿಂದ ತಮ್ಮ ಪಕ್ಷವು ಬಲವತ್ತರವಾದುದೆಂದೂ–ಅಜಯ್ಯವಾದುದೆಂದೂ ಕೌರವರು ಭಾವಿಸಿದ್ದಾರೆ. ಎಂದಿನವರೆಗೆ ನೀನು ಅವರ ವಿಷಯದಲ್ಲಿ ವಿನಮ್ರಭಾವದಿಂದ ವರ್ತಿಸುವೆಯೋ–ಅಂದಿನ ವರೆಗೂ ಅವರು ನಿನ್ನ ಅರ್ಧರಾಜ್ಯವನ್ನೂ ದಕ್ಕಿಸಿಕೊಳ್ಳುವ ಪ್ರಯತ್ನದಲ್ಲಿಯೇ ಇರುತ್ತಾರೆ. (ನಿನ್ನ ವಿನಮ್ರತೆಗೆ ತಕ್ಕುದಾದ ಪ್ರತಿಕ್ರಿಯೆಯು ಅವರಿಂದ ಲಭಿಸುವುದೆಂದು ಭ್ರಾಂತನಾಗಬೇಡ. ಬಲಸಾಮ್ಯವಿದ್ದರೆ ಸಂಧಿಯಾದೀತು ; ಕೌರವರು ತಾವು ಹೆಚ್ಚು ಬಲಿಷ್ಠರೆಂದು ಭಾವಿಸಿರುವುದರಿಂದ ಸಂಧಿಗೆ ಒಪ್ಪಲಾರರು.)

**ನಾನುಕ್ರೋಶಾನ್ನ ಕಾರ್ಪಣ್ಯಾನ್ನ ಚ ಧರ್ಮಾರ್ಥಕಾರಣಾತ್ ।**
**ಅಲಂ ಕರ್ತುಂ ಧಾರ್ತರಾಷ್ಟ್ರಾಸ್ತವ ಕಾಮಮರಿಂದಮ ॥೬॥**

ಅರಿಂದಮನೇ! ನೀನು ಬಹುವಾಗಿ ಕಷ್ಟಪಡುತ್ತಿರುವೆಯೆಂಬ ಅನುಕಂಪದಿಂದಾಗಲೀ, ನೀನೀ ಸಮಯದಲ್ಲಿ ದೀನನಾಗಿ–ದುರ್ಬಲನಾಗಿ ಇರುವೆಯೆಂಬ ಕಾರಣದಿಂದಾಗಲೀ–ಧೃತರಾಷ್ಟ್ರನ ಮಕ್ಕಳು ನಿನ್ನ ಕಾಮನೆಯನ್ನು ಪೂರೈಸಿಕೊಡುವುದಿಲ್ಲ. (ನೀನು ಕೇಳುವ ಐದು ಗ್ರಾಮಗಳನ್ನೂ ನಿನಗವರು ಕೊಡುವುದಿಲ್ಲ.)

ಪಾಂಡುನಂದನ! ನೀನು ತುಂಡುಬಟ್ಟೆಗಳನ್ನು ಧರಿಸಿ ಹನ್ನೆರಡು ವರ್ಷಗಳ ದುಷ್ಕರವಾದ ವನವಾಸವನ್ನೂ, ಒಂದು ವರ್ಷದ ಅಜ್ಞಾತವಾಸವನ್ನೂ ಅನುಭವಿಸಿದರೂ ಅವರು, ತಾವು ಮಾಡಿದ ದುಷ್ಕಾರ್ಯಕ್ಕಾಗಿ ಸ್ವಲ್ಪವಾದರೂ ಪಶ್ಚಾತ್ತಾಪಗೊಳ್ಳಲಿಲ್ಲ. ನಿಮ್ಮಲ್ಲಿ ಅನುಕಂಪೆಯನ್ನು ತೋರಲಿಲ್ಲ. ಇದೊಂದೇ ಕಾರಣದಿಂದ ಅವರು ನಿನ್ನೊಡನೆ ಸಂಧಿಮಾಡಿಕೊಳ್ಳುವುದಿಲ್ಲವೆಂದು ಪ್ರಮಾಣೀಕರಿಸಿ ಹೇಳಬಹುದಾಗಿದೆ. ದಾನಶೀಲನಾದ, ಕೋಮಲಸ್ವಭಾವದವನಾದ, ಜಿತೇಂದ್ರಿಯನಾದ, ಧರ್ಮಶೀಲನಾದ, ಅನುಕೂಲವಾದ ಧರ್ಮಾಚರಣೆಯುಳ್ಳ ನಿನ್ನನ್ನು–ಪಿತಾಮಹನಾದ ಭೀಷ್ಮ, ದ್ರೋಣ, ಧೀಮಂತನಾದ ವಿದುರ, ಬ್ರಾಹ್ಮಣರು, ಸಾಧು-ಸಂತರು, ಧೃತರಾಷ್ಟ್ರ ರಾಜ, ಪಟ್ಟಣಿಗರು, ಕುರುಮುಖ್ಯರು–ಈ ಎಲ್ಲರ ಸಮ್ಮುಖದಲ್ಲಿಯೂ

ದ್ಯೂತದ ನೆಪದಿಂದ ದುರ್ಯೋಧನನು ವಂಚಿಸಿದನು. ಮಹಾಕ್ರೂರಿಯಾದ ದುರ್ಯೋಧನನು ತಾನೆಸಗಿದ ಆ ಕುತ್ಸಿತಕಾರ್ಯಕ್ಕಾಗಿ ನಾಚುವುದೂ ಇಲ್ಲ. ಇಂತಹ ದುಷ್ಟಶೀಲ-ದುರಾಚಾರಗಳಿಂದ ಕೂಡಿರುವ ದುರ್ಯೋಧನನ ವಿಷಯದಲ್ಲಿ ನೀನು ಖಂಡಿತವಾಗಿಯೂ ಅನುಕಂಪೆಯನ್ನು ತೋರಬಾರದು. ಸರ್ವಜನರ ದೃಷ್ಟಿಯಿಂದಲೂ ಧೃತರಾಷ್ಟ್ರನ ದುಷ್ಟಪುತ್ರರು ವಧಾರ್ಹರೇ ಆಗಿರುತ್ತಾರೆ. ಹೀಗಿರುವಾಗ ಅವರಿಂದಲೇ ಅಪಾರವಾದ ಕಷ್ಟವನ್ನು ಅನುಭವಿಸಿರುವ ನಿನ್ನ ವಿಷಯದಲ್ಲಿ ಹೇಳತಕ್ಕದ್ದೇನಿದೆ? (ನೀನು ಅವರನ್ನು ಕಿಂಚಿತ್ತಾದರೂ ಅನುಕಂಪವಿಲ್ಲದೇ ಸಂಹರಿಸಲೇಬೇಕು.)

ಧರ್ಮಜ! ನೀನು ಹಿಂದೆ ನಡೆದುದೆಲ್ಲವನ್ನೂ ಮರೆತುಬಿಟ್ಟಿರುವಂತೆಯೇ ಕಾಣುತ್ತದೆ. ತುಂಬಿದ ಮಹಾಸಭೆಯಲ್ಲಿ ನಿನ್ನನ್ನು ಕಪಟದ್ಯೂತದಿಂದ ಸೋಲಿಸಿದ ಆ ಕರಾಳದಿನದಂದು ದುರ್ಯೋಧನನಾಡಿದ ಮಾತುಗಳು ನಿನ್ನ ನೆನಪಿನಲ್ಲಿಲ್ಲವೇ? ತನ್ನ ತಮ್ಮಂದಿರೊಡನೆ ಸೇರಿಕೊಂಡು ಅವಾಚ್ಯವಾದ ಅನೇಕ ಕೆಟ್ಟಮಾತುಗಳಿಂದ ನಿನ್ನನ್ನು ಬಹುವಾಗಿ ನಿಂದಿಸಿದನು. ನಿನ್ನ ಆಗಿನ ಸ್ಥಿತಿಯನ್ನು ಕಂಡು ಪ್ರಹೃಷ್ಟನಾಗಿ ಆತ್ಮಪ್ರಶಂಸೆಮಾಡಿಕೊಳ್ಳುತ್ತಾ ತನ್ನ ತಮ್ಮಂದಿರೊಡನೆ ಆ ದುಷ್ಟನು ಏನು ಹೇಳಿದನೆಂಬುದು ಸ್ಮರಣೆಯಲ್ಲಿರುವುದೇ?

**ಏತಾವತ್ಪಾಣ್ಡವಾನಾಂ ಹಿ ನಾಸ್ತಿ ಕಿಂಚಿದಿಹ ಸ್ವಕಮ್ ।**
**ನಾಮಧೇಯಂ ಚ ಗೋತ್ರಂ ಚ ತದಪ್ಯೇಷಾಂ ನ ಶಿಷ್ಯತೇ ॥೧೬॥**

‘ಈಗ ಈ ಬಡಪಾಯಿಗಳಾದ ಪಾಂಡವರಿಗೆ ತಮ್ಮದೆಂದು ಹೇಳಿಕೊಳ್ಳಬಹುದಾದ ವಸ್ತುವು ಯಾವುದೂ ಉಳಿದಿರುವುದಿಲ್ಲ. ಸದ್ಯದಲ್ಲಿ ಇವರಿಗೆ ಉಳಿದಿರುವುದೆಂದರೆ ಪಾಂಡವರೆಂಬ ಹೆಸರು ಮತ್ತು ಗೋತ್ರ. ಈ ಎರಡು ಮಾತ್ರವೇ ಉಳಿದಿರುವುದು. ಇವೂ ಸಹ ಇವರಿಗೆ ಹೆಚ್ಚುಕಾಲ ಉಳಿಯುವುದಿಲ್ಲ. ಮುಂದೆ ಇವರು ನಾಮಾವಶೇಷರಾಗಿಯೂ ಉಳಿಯುವುದಿಲ್ಲ. ಹೇಳಹೆಸರಿಲ್ಲದೇ ವಿನಾಶಹೊಂದುವರು.

**ಕಾಲೇನ ಮಹತಾ ಚೈಷಾಂ ಭವಿಷ್ಯತಿ ಪರಾಭವಃ ।**
**ಪ್ರಕೃತಿಂ ತೇ ಭಜಿಷ್ಯನ್ತಿ ನಷ್ಟಪ್ರಕೃತಯೋ ಮಯಿ ॥೧೭॥**

ಬಹುದೀರ್ಘಕಾಲದವರೆಗೆ ಇವರಿಗೆ ಜನಸಂಪರ್ಕವೇ ಇರುವುದಿಲ್ಲವಾದ ಕಾರಣ ಯಾರ ಸಹಾಯವೂ ಇವರಿಗೆ ಸಿಕ್ಕದೇ ಪರಾಭವಹೊಂದುತ್ತಾರೆ. ಇವರ ಸಾಮ್ರಾಜ್ಯವು ನನ್ನಲ್ಲಿ ಸೇರಿ ನಷ್ಟವಾಗಿ ಹೋಗಲಾಗಿ–ಇವರು ತಮ್ಮ ಜೀವಿಕೆಗಾಗಿ ನಮ್ಮ ದಾಸರಾಗುತ್ತಾರೆ. (ನಮ್ಮ ಸಮೀಪದಲ್ಲಿ ಇವರ ಸ್ವಾಭಾವಿಕವಾದ ಶೌರ್ಯಾದಿಗಳು ನಷ್ಟವಾಗಿ ಹೋಗುವುದರಿಂದ ಮುಂದೆ ಜೀವಿಸಲಾರದೇ ಪ್ರಾಣತೊರೆಯುತ್ತಾರೆ.)' ಹೀಗೆಂಬುದಾಗಿ ಅವನಂದು ತನ್ನ ಅನುಜರೊಡನೆ ಹೇಳಿದನು. ಧರ್ಮಜ! ಇನ್ನೂ ಕೆಲವು ದಾರುಣಘಟನೆಗಳನ್ನು ನಿನ್ನ ಸ್ಮರಣೆಗೆ ತರುತ್ತೇನೆ. ಕಪಟದ್ಯೂತವು ನಡೆಯುತ್ತಲಿದ್ದಿತು. ವಿಜಯದಿಂದ ಕೊಬ್ಬಿಹೋಗಿದ್ದ ಪಾಪಾತ್ಮನಾದ ದುಃಶಾಸನನು ಆ ಸಮಯದಲ್ಲಿ ಅನಾಥೆಯಂತೆ ರೋದನಮಾಡುತ್ತಿದ್ದ ನಿಮ್ಮೈವರ ಪಟ್ಟಮಹಿಷಿಯಾದ ದ್ರೌಪದಿಯ ತಲೆಗೂದಲನ್ನು ಹಿಡಿದು ದರ-ದರನೆ ರಾಜಸಭೆಗೆ ಸೆಳೆದುತಂದನು. ಭೀಷ್ಮ-ದ್ರೋಣಾದಿ ಮಹಾವೀರರ ಸಮ್ಮುಖದಲ್ಲಿಯೇ 'ಹಸು-ಹಸು' ಎಂದೆನ್ನುತ್ತಾ ಇತ್ತಲಿಂದತ್ತ-ಅತ್ತಲಿಂದಿತ್ತ ಸೆಳೆದಾಡುತ್ತಾ ಗಹ-ಗಹಿಸಿ ನಗುತ್ತಿದ್ದನು. ಅಂತಹ ದಾರುಣದೃಶ್ಯವನ್ನು ನೋಡುತ್ತಿದ್ದ ವೀರರಾದ ನಿನ್ನ ಸಹೋದರರು ಅದಕ್ಕೆ ತಕ್ಕ ಪ್ರತಿಕ್ರಿಯೆಗೆ ಸಿದ್ಧರಾಗಿದ್ದರು. ಆದರೆ ಅಂದು ನೀನು ಭೀಮವಿಕ್ರಮರಾದ ನಿನ್ನ ತಮ್ಮಂದಿರನ್ನು ನಿರೋಧಿಸಿದೆ. ಧರ್ಮಪಾಶದಿಂದ ನಿಬದ್ಧರಾದ ನಿನ್ನ ಅನುಜರು ಏನು ಮಾಡಲೂ ಅಸಮರ್ಥರಾದರು. ಪ್ರತಿಕ್ರಿಯೆಮಾಡಲೂ ಇವರಿಗೆ ಸಾಧ್ಯವಾಗದೇ ಹೋಯಿತು. ಮರದ ಗೊಂಬೆಗಳಂತೆ ಆ ದಾರುಣದೃಶ್ಯವನ್ನು ನೋಡುತ್ತಾ ಕುಳಿತಿದ್ದರು. ನೀನು ಕಾಡಿಗೆ ಹೊರಟುಹೋದನಂತರವೂ ಆ ದುಷ್ಟನು ತನ್ನ ಜ್ಞಾತಿ-ಬಾಂಧವರ ಮಧ್ಯದಲ್ಲಿ ಕುಳಿತುಕೊಂಡು ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಾ ನಿನ್ನ ವಿಷಯದಲ್ಲಿ ಇನ್ನೂ ಅನೇಕ ಕಠಿನೋಕ್ತಿಗಳನ್ನಾಡಿದನು. ಕಪಟದ್ಯೂತವನ್ನು ನೋಡಲು ಆಹ್ವಾನಿತರಾಗಿ ಬಂದಿದ್ದ ಇತರ ರಾಜರೂ ಆ ಸಮಯದಲ್ಲಿ ನಿರಪರಾಧಿಯಾದ ನಿನಗೆ ಉಂಟಾದ ದುಃಸ್ಥಿತಿಯನ್ನು ಕಂಡು ಗೋಳಿಡುತ್ತಾ ಕಂಠಪರ್ಯಂತವಾಗಿ ಕಣ್ಣೀರು ಸುರಿಸುತ್ತಾ ತೂಷ್ಣೀಂಭಾವದಿಂದ ಆ ಸಭೆಯಲ್ಲಿ ಕುಳಿತಿದ್ದರು. ದುರ್ಯೋಧನನು ನಿಮ್ಮನ್ನು ಮೋಸದ ಪಗಡೆಯಾಟದ ಮೂಲಕ ಅರಣ್ಯಕ್ಕೆ ಕಳುಹಿಸಿದುದು

ಕ್ಕಾಗಿ ಅಲ್ಲಿದ್ದ ಬ್ರಾಹ್ಮಣಸಮೇತರಾದ ರಾಜರು ದುರ್ಯೋಧನನನ್ನು ಅಭಿನಂದಿಸಲಿಲ್ಲ. ಎಲ್ಲ ಸಭಾಸದರೂ ಅವನು ಮಾಡಿದ ಕುತ್ಸಿತ ಕಾರ್ಯಕ್ಕಾಗಿ ನಿಂದಿಸುತ್ತಿದ್ದರು.

**ಕುಲೀನಸ್ಯ ಚ ಯಾ ನಿನ್ದಾ ವಧೋ ವಾಮಿತ್ರಕರ್ಶನ ।**
**ಮಹಾಗುಣೋ ವಧೋ ರಾಜನ್ನ ತು ನಿನ್ದಾ ಕುಜೀವಿಕಾ ॥೨೪॥**

ಶತ್ರುನಿಷೂದನನೇ! ಸತ್ಕುಲಪ್ರಸೂತನಾದವನಿಗೆ ನಿಂದೆ ಅಥವಾ ವಧೆ–ಈ ಎರಡರಲ್ಲಿ ವಧೆಯೇ ಮಹಾಗುಣಯುಕ್ತವಾಗಿರುತ್ತದೆ. (ಸತ್ಕುಲ ಪ್ರಸೂತನಾದವನು ನಿಂದೆಗೆ ಪಾತ್ರನಾಗುವುದಕ್ಕಿಂತಲೂ ಮರಣವೇ ಲೇಸೆಂದು ಭಾವಿಸುತ್ತಾನೆ.) ನಿಂದೆಗೆ ಪಾತ್ರನಾಗಿಯೂ ಜೀವಿಸಿಕೊಂಡಿರುವುದು ಕುತ್ಸಿತ ಜೀವನವನ್ನು ನಡೆಸಿದಂತಾಗುತ್ತದೆ. ಅದಕ್ಕಿಂತಲೂ ಮರಣವೇ ಲೇಸು.

ನಿರ್ಲಜ್ಜನಾದ ದುರ್ಯೋಧನನು ಯಾವಾಗ ಪೃಥ್ವಿಯ ಎಲ್ಲ ರಾಜರಿಂದಲೂ ನಿಂದಿತನಾದನೋ (ಅವನ ಅಕಾರ್ಯವನ್ನು ಕಂಡು ಪೃಥ್ವಿಯ ಎಲ್ಲ ರಾಜರೂ ಯಾವಾಗ ಅವನನ್ನು ನಿಂದಿಸಿದರೋ) ಆಗಲೇ ಒಂದು ವಿಧದಲ್ಲಿ ಅವನ ವಧೆಯಾಗಿ ಹೋಗಿದೆ. ಯಾವನ ಆಚರಣೆಯು ಇಷ್ಟು ಕಳಂಕಪೂರ್ಣವಾಗಿರುವುದೋ ಅಂತಹವನ ವಧೆಯು ಕೇವಲ ಈಷನ್ಮಾತ್ರ ವಾಗಿರುತ್ತದೆ. (ಸ್ವಲ್ಪವೇ ಪ್ರಯಾಸದಿಂದ ಸಾಧಿಸತಕ್ಕದ್ದಾಗಿರುತ್ತದೆ.) ಹತ್ತಾರು ಬಾರಿ ಅಳ್ಳಾಡಿಸುವುದರಿಂದ ಸಡಿಲವಾದ ಬೇರುಳ್ಳ ವೃಕ್ಷವು ನೆಪಮಾತ್ರಕ್ಕೆ ನಿಂತಿರುವಂತೆ–ಇಂದು ದುರ್ಯೋಧನನಿದ್ದಾನೆ. ಸ್ವಲ್ಪವೇ ಪ್ರಯತ್ನದಿಂದ ಛಿನ್ನಮೂಲವಾದ ವೃಕ್ಷವು ಕೆಳಗುರುಳುವಂತೆ–ಸ್ವಲ್ಪವೇ ಪ್ರಯತ್ನದಿಂದ ದುರ್ಯೋಧನನೂ ವಿನಾಶಹೊಂದುತ್ತಾನೆ.

ಅನಾರ್ಯನಾದ, ದುರ್ಮತಿಯಾದ ದುರ್ಯೋಧನನು, ಸರ್ಪದೋಪಾದಿ ಯಲ್ಲಿ ಸಮಸ್ತಜನರಿಂದಲೂ ವಧಾರ್ಹನು. ಜನರನ್ನು ಕಚ್ಚಲು ಬರುವ ಸರ್ಪವು ವಧಾರ್ಹವಾಗುವಂತೆ–ನಿನ್ನನ್ನೂ ವಿನಾಶಮಾಡಬೇಕೆಂದಿಚ್ಛಿಸಿರುವ ದುರ್ಯೋಧನನು ನಿಶ್ಚಯವಾಗಿಯೂ ವಧಾರ್ಹನು. ದುಷ್ಟಧ್ವಂಸಕನೇ! ನೀನು ಅವನ ವಿಷಯವಾಗಿ ಹೆಚ್ಚು ಯೋಚಿಸಲು ಹೋಗಬೇಡ. ಮಾಡಿರು ವುದನ್ನು ಅನುಭವಿಸಲಿ ; ಬಿಟ್ಟುಬಿಡು. ನೀನು ಧೃತರಾಷ್ಟ್ರನ ವಿ ಷಯದಲ್ಲಿಯೂ

ಮತ್ತು ಪಿತಾಮಹನಾದ ಭೀಷ್ಮನ ವಿಷಯದಲ್ಲಿಯೂ ಯಾವ ಪವಿತ್ರಭಾವನೆಯನ್ನಿಟ್ಟಿರುವೆಯೋ–ಅದು ನಿಶ್ಚಯವಾಗಿಯೂ ಸಾಧುವಾಗಿದೆ. ನಾನು ನಿನ್ನ ಸೌಜನ್ಯವನ್ನು ಖಂಡಿತವಾಗಿಯೂ ಶ್ಲಾಘಿಸುತ್ತೇನೆ. ದುರ್ಯೋಧನನ ವಿಷಯದಲ್ಲಿ ಯಾರಿಗೆ ಎರಡು ವಿಧವಾದ ಅಭಿಪ್ರಾಯವಿದೆಯೋ, ಯಾರು ಅವನನ್ನು ಇದುವರೆಗೂ ಕೆಟ್ಟವನೇ ಅಥವಾ ಒಳ್ಳೆಯವನೇ ಎಂಬುದನ್ನು ನಿರ್ಧರಿಸಿರುವುದಿಲ್ಲವೋ–ಅಂತಹವರ ಸಂಶಯವನ್ನು ನಾನು ಅಲ್ಲಿಗೆ ಹೋದ ನಂತರ ಖಂಡಿತವಾಗಿಯೂ ನಿವಾರಣೆಮಾಡುತ್ತೇನೆ. (ದುರ್ಯೋಧನನು ಯೋಗ್ಯನಲ್ಲವೆಂದೂ, ದುಷ್ಟನೆಂದೂ, ದುರಾಚಾರಿಯೆಂದೂ–ಅವರೆಲ್ಲರಿಗೂ ಮನದಟ್ಟಾಗುವಂತೆ ಹೇಳುತ್ತೇನೆ.)

ಯುಧಿಷ್ಠಿರ! ನಾನು ಆ ರಾಜಸಭಾಮಧ್ಯದಲ್ಲಿ ನಿನ್ನಲ್ಲಿರುವ ಉತ್ತಮವಾದ ಗುಣಗಳನ್ನು ಸಂಕೀರ್ತನಮಾಡುತ್ತೇನೆ. ಅಂತೆಯೇ ದುರ್ಯೋಧನನಲ್ಲಿರುವ ದುರ್ಗುಣಗಳನ್ನೂ ಮತ್ತು ಅವನು ನಿನ್ನ ವಿಷಯದಲ್ಲಿ ಮಾಡಿರುವ ಅಪರಾಧಗಳನ್ನೂ ಉದ್ಘೋಷಿಸುತ್ತೇನೆ. ಧರ್ಮಾರ್ಥಸಹಿತವಾದ ನನ್ನ ಮಾತುಗಳನ್ನು ನಾನಾದೇಶಗಳಿಂದ ಆಗಮಿಸಿರುವ ಭೂಪಾಲರೆಲ್ಲರೂ ಕೇಳಿ ನಿನ್ನ ವಿಷಯದಲ್ಲಿ ಸದಭಿಪ್ರಾಯಗಳನ್ನು ಹೊಂದುತ್ತಾರೆ. 'ಧರ್ಮಜನು ಧರ್ಮಾತ್ಮನು.; ಸತ್ಯವಚನನು' – ಎಂಬ ನಿರ್ಧಾರಕ್ಕೆ ಬರುತ್ತಾರೆ. ಅಂತೆಯೇ ಅವರಿಗೆ ದುರ್ಯೋಧನನ ವಿಷಯದಲ್ಲಿ ಔದಾಸೀನ್ಯವೂ ಉಂಟಾಗುತ್ತದೆ. ಅವನ ವಿಷಯದಲ್ಲವರು ಮೊದಲು ಸದಭಿಪ್ರಾಯವನ್ನು ಹೊಂದಿದ್ದರೂ–ದುರ್ಯೋಧನನು ಲೋಭದಿಂದ ಅನುಚಿತವಾದ ಕಾರ್ಯವನ್ನು ಮಾಡಿಬಿಟ್ಟನು'–ಎಂಬ ನಿರ್ಧಾರಕ್ಕೆ ಬರುತ್ತಾರೆ. (ಆ ರೀತಿಯಲ್ಲಿ ನಾನು ರಾಜಸಭೆಯಲ್ಲಿ ಮಾತನಾಡುತ್ತೇನೆ.) ದುರ್ಯೋಧನನ ನಿಂದನೆಯನ್ನು ನಾನು ರಾಜಸಭೆಯಲ್ಲಿ ಮಾತ್ರವೇ ಮಾಡಿ ಸುಮ್ಮನಾಗಿಬಿಡುವುದಿಲ್ಲ. ಸಂದರ್ಭವು ಸಿಕ್ಕಿದಾಗಲೆಲ್ಲಾ ಅವನನ್ನು ತೆಗಳುತ್ತೇನೆ. ಅವನು ನಿನ್ನ ವಿಷಯದಲ್ಲಿ ಮಾಡಿರುವ ಅಪರಾಧಗಳನ್ನು ಬಹಿರಂಗಪಡಿಸುತ್ತೇನೆ. ಪಟ್ಟಣಿಗರು ಸೇರಿರುವ ಕಡೆಗಳಲ್ಲಿ, ನಾಲ್ಕು ವರ್ಣದವರೂ ಆಬಾಲವೃದ್ಧರಾದಿಯಾಗಿ ಕಲೆತಿರುವ ಸಮ್ಮೇಳನಗಳಲ್ಲಿ–ಸುಯೋಧನನ ಅಪರಾಧಗಳನ್ನು ಉದ್ಘೋಷಿಸುತ್ತೇನೆ. ನೀನು ನನ್ನ ಮೂಲಕವಾಗಿ ಶಾಂತಿಯನ್ನೇ

ಯಾಚಿಸಲಿರುವುದರಿಂದ, ಒಂದು ವೇಳೆ ದುರ್ಯೋಧನನ ದುರ್ಮಾರ್ಗದ ಕಾರಣದಿಂದ ಯುದ್ಧಮಾಡಬೇಕಾಗಿ ಬಂದರೂ ನೀನು ಅಧರ್ಮಾಚರಣೆ ಯನ್ನು ಮಾಡಿದಂತಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಎಲ್ಲ ದೇಶ ಗಳ ರಾಜರೂ ಧೃತರಾಷ್ಟ್ರನನ್ನೂ ಮತ್ತು ಅವನ ಮಕ್ಕಳನ್ನೂ ನಿಂದಿಸು ತ್ತಾರೆ. ಪ್ರಪಂಚದ ರಾಜರೆಲ್ಲರೂ ದುರ್ಯೋಧನನನ್ನು ನ್ಯಾಯಬಾಹಿರ ನೆಂದು ನಿರ್ಧರಿಸಿ ಅವನನ್ನು ಪರಿತ್ಯಾಗಮಾಡಲಾಗಿ ದುರ್ಯೋಧನನು ಮೃತಪ್ರಾಯನೇ ಆಗುತ್ತಾನೆ. ಅಂತಹ ಸಂದರ್ಭವೊಂದು ಒದಗಿಬಿಟ್ಟರೆ ನೀನು ಮಾಡಬೇಕಾದ ಯಾವ ಕಾರ್ಯವು ತಾನೇ ಉಳಿಯುತ್ತದೆ? ಮುಂದೇನು ಮಾಡಬೇಕೆಂಬುದನ್ನು ಮಾತ್ರವೇ ಯೋಚಿಸಬೇಕಾಗುತ್ತದೆ. ಯುಧಿಷ್ಠಿರ! ನಾನಲ್ಲಿಗೆ ಹೋಗಿ, ನಿಮ್ಮ ಪ್ರಯೋಜನವನ್ನು ಎಳ್ಳಷ್ಟೂ ಕಡೆಗಾಣಿಸದೇ ಎಲ್ಲ ಕುರುರಾಜಕುಮಾರರನ್ನೂ ಒಳ್ಳೆಯ ಮಾತುಗಳಿಂದ ಸಾಂತ್ವನಗೊಳಿಸಲು ಪ್ರಯತ್ನಿಸುತ್ತೇನೆ. (ನಿಮ್ಮೊಡನೆ ಸಂಧಿಮಾಡಿಕೊಳ್ಳುವಂತೆ ಸಲಹೆ ನೀಡುತ್ತೇನೆ.) ನನ್ನ ಮಾತಿಗೆ ಅವರ ಪ್ರತಿಕ್ರಿಯೆಯೇನೆಂಬುದನ್ನೂ ಲಕ್ಷ್ಯವಿಟ್ಟು ನೋಡುತ್ತೇನೆ. ನೀನು ಯುದ್ಧದಲ್ಲಿ ಜಯಗಳಿಸಿಯೇ ತೀರಬೇಕೆಂಬ ಕಾರಣದಿಂದ, ಯುದ್ಧದ ವಿಷಯದಲ್ಲಿ ಕೌರವರು ಮಾಡಿಕೊಂಡಿರುವ ಸಿದ್ಧತೆಗಳನ್ನೂ ನಾನಲ್ಲಿ ಸಾವಧಾನವಾಗಿ ಪರಿಶೀಲಿಸಿ, ಅದಕ್ಕೆ ಸಂಬಂಧಪಟ್ಟವರಿಂದ ಯುದ್ಧಸಿದ್ಧತೆಯ ರಹಸ್ಯಗಳನ್ನೂ ತಿಳಿದು ಕೊಂಡು ನಿನ್ನ ಜಯಕ್ಕಾಗಿ ಇಲ್ಲಿಗೆ ಹಿಂದಿರುಗುತ್ತೇನೆ.

ನಿನ್ನ ಇಚ್ಛೆಯಂತೆ ನಾನಲ್ಲಿಗೆ ಸಂಧಿಕಾರ್ಯಕ್ಕಾಗಿ ಹೋಗುತ್ತಿದ್ದರೂ ನನ್ನ ಸಂಪೂರ್ಣಾಭಿಪ್ರಾಯವು ಅವರೊಡನೆ ಯುದ್ಧಮಾಡಬೇಕೆಂಬುದೇ ಆಗಿದೆ. ನಾನು ಯುದ್ಧವನ್ನೇ ಅಪೇಕ್ಷಿಸುತ್ತೇನೆ. ಈಗ ನನ್ನ ಕಣ್ಮುಂದೆ ಕಾಣುತ್ತಿರುವ ನಿಮಿತ್ತಗಳೂ ಯುದ್ಧಸೂಚಕಗಳೇ ಆಗಿವೆ.

ಮೃಗಾಃ ಶಕುನ್ತಾಶ್ಚ ವದನ್ತಿ ಘೋರಂ
ಹಸ್ತ್ಯಶ್ವಮುಖ್ಯೇಷು ನಿಶಾಮುಖೇಷು ।
ಘೋರಾಣಿ ರೂಪಾಣಿ ತಥೈವ ಚಾಗ್ನಿ-
ವರ್ಣಾನ್ಬಹೂನ್ಪುಷ್ಯತಿ ಘೋರರೂಪಾನ್ ॥೭೯॥

ಮೃಗಗಳೂ ಮತ್ತು ಪಕ್ಷಿಗಳೂ ವಿಕಾರವಾಗಿ ಅರಚುತ್ತಿವೆ. ಪ್ರದೋಷ

ಕಾಲಗಳಲ್ಲಿ ಪ್ರಧಾನಭೂತವಾದ ಹಸ್ತ್ಯಶ್ವಗಳ ಸಮೂಹದಲ್ಲಿ ಘೋರ ರೂಪವು ಕಾಣುತ್ತಿದೆ. ಯಜ್ಞಶಾಲೆಯಲ್ಲಿರುವ ಅಗ್ನಿದೇವನೂ ಘೋರ ರೂಪವಾದ ನಾನಾವರ್ಣಗಳ ಜ್ವಾಲೆಗಳಿಂದ ಕೂಡಿದವನಾಗಿದ್ದಾನೆ. ಮನುಷ್ಯಲೋಕಕ್ಷಯಕರನಾದ, ಬಹುಭಯಂಕರನಾದ ಮೃತ್ಯುದೇವನೇನಾದರೂ ಬರುವ ಘಟನೆಯಿಲ್ಲದಿದ್ದರೆ ಇಂತಹ ಅತಿಘೋರವಾದ ವಾತಾವರಣವು (ದುಃಶಕುನಗಳು) ಪ್ರಾಪ್ತವಾಗುತ್ತಿರಲಿಲ್ಲ. ಈ ದುಃಶಕುನಗಳಿಂದ ಸರ್ವವಿನಾಶಕರನಾದ ಮೃತ್ಯುವಿನ ಆವಿರ್ಭಾವವು ಇಷ್ಟರಲ್ಲಿಯೇ ಆಗಲಿದೆಯೆಂಬುದನ್ನು ಊಹಿಸಬಹುದಾಗಿದೆ. ಈ ಕಾರಣದಿಂದಾಗಿ ನಿನ್ನ ಸಮಸ್ತ ಯೋಧರೂ ಶಸ್ತ್ರಗಳನ್ನು ಹಿಡಿಯಲಿ. ಶತಘ್ನಿಯೇ ಮೊದಲಾದ ಯುದ್ಧಯಂತ್ರಗಳನ್ನು ಸಿದ್ಧಗೊಳಿಸಲಿ. ಕವಚಗಳನ್ನು ತೊಟ್ಟುಕೊಳ್ಳಲಿ. ರಥಸೈನ್ಯವನ್ನೂ, ಗಜಸೈನ್ಯವನ್ನೂ ಮತ್ತು ಅಶ್ವಸೈನ್ಯವನ್ನೂ ಸಿದ್ಧಗೊಳಿಸಲಿ. ನಿನ್ನ ಕಡೆಯ ಸಕಲಯೋಧರೂ ಯುದ್ಧದಲ್ಲಿ ಜಯಗಳಿಸಬೇಕೆಂದು ದೃಢವಾಗಿ ನಿಶ್ಚಯಿಸಿ ತಮ್ಮ ತಮ್ಮ ಹಸ್ತ್ಯಶ್ವರಥಗಳನ್ನು ಸಿದ್ಧಮಾಡಿಕೊಳ್ಳಲಿ. ಯುದ್ಧಕ್ಕಾಗಿ ಯಾವ ಯಾವ ಸಾಮಗ್ರಿಗಳ ಸಂಗ್ರಹವಾಗಬೇಕಾಗಿರುವುದೋ–ಆ ಎಲ್ಲ ಸಾಮಗ್ರಿಗಳನ್ನೂ ನಿನ್ನ ಸೇವಕರು ಸಂಗ್ರಹಿಸಲಿ. ಇವಿಷ್ಟು ಕಾರ್ಯಗಳನ್ನೂ ನೀನು ನಿನ್ನ ಅನುಯಾಯಿಗಳ ಮೂಲಕವಾಗಿ ಈಗಲೇ ಮಾಡಿಸು, ಯುಧಿಷ್ಠಿರ!

ದುರ್ಯೋಧನೋ ನ ಹ್ಯಲಮದ್ಯ ದಾತುಂ
ಜೀವಂಸ್ತವೈತನ್ನೃಪತೇ ಕಥಂಚಿತ್ ।
ಯತ್ತೇ ಪುರಸ್ತಾದಭವತ್ಸಮೃದ್ಧಂ
ದ್ಯೂತೇ ಹೃತಂ ಪಾಣ್ಡವಮುಖ್ಯ ರಾಜ್ಯಮ್ ॥೪೨॥

ಪಾಂಡವಮುಖ್ಯನೇ! ನಿನಗಿರುವ ಭ್ರಾಂತಿಯನ್ನು ದೂರಮಾಡು. ನಿನ್ನ ಯಾವ ಸಂಪತ್ಸಮೃದ್ಧವಾದ ರಾಜ್ಯವನ್ನು ದುರ್ಯೋಧನನು ಕೇವಲ ಕಪಟದ್ಯೂತದಿಂದ ಅಪಹರಿಸಿದನೋ–ಆ ರಾಜ್ಯವನ್ನು ಅವನು ಜೀವಿಸಿರುವ ಪರ್ಯಂತವಾಗಿ ಯಾವುದೇ ಕಾರಣದಿಂದಲೂ ನಿನಗೆ ಕೊಡಲಾರನು. ಇದು ನಿಶ್ಚಯ.”

ಌನೆಯ ಅಧ್ಯಾಯವು ಮುಗಿಯಿತು.

೭೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಭೀಮಸೇನನು ಶಾಂತಿಯ ವಿಷಯವನ್ನು ಪ್ರಸ್ತಾಪಿಸಿದುದು

ಪಾರಿಕ್ಷಿತ! ಶ್ರೀಕೃಷ್ಣನು ಧರ್ಮಜನೊಡನೆ ಮಾತನ್ನು ಮುಗಿಸಿದ ಬಳಿಕ ಭೀಮಸೇನನು ಶ್ರೀಕೃಷ್ಣನೊಡನೆ ಹೇಳಿದನು :

"ಮಧುಸೂದನ! ನೀನು ಕುರುರಾಜಸಭಾಮಧ್ಯದಲ್ಲಿ ಮಾತನಾಡುವಾಗ ಯಾವ ರೀತಿಯಲ್ಲಿ ಮಾತನಾಡಿದರೆ ಶಾಂತಿಸ್ಥಾಪನೆಯಾಗುವುದೋ ಅಥವಾ ನಮ್ಮಿರ್ವರಿಗೂ ಸಂಧಿಯೇರ್ಪಡುವುದೋ–ಅದೇ ರೀತಿಯಲ್ಲಿ ಮಾತನಾಡಬೇಕು. ಮಧ್ಯದಲ್ಲಿ ಯುದ್ಧದ ಮಾತನ್ನು ಪ್ರಸ್ತಾಪಿಸಿ ಅವರನ್ನು ಭಯಪಡಿಸಬೇಡ. ಅಸಹನಶೀಲನಾದ, ಕ್ರುದ್ಧನಾದ, ಶ್ರೇಯಸ್ಸಿಗೆ ವಿರೋಧಿಯಾದ, ಗುರು-ಹಿರಿಯರನ್ನು ದ್ವೇಷಿಸುವ (ಅವರ ಮಾತನ್ನು ಕೇಳದಿರುವ) ಮನಸ್ಸಿನಲ್ಲಿ ಅನೇಕಾನೇಕ ಮಹತ್ವಾಕಾಂಕ್ಷೆಗಳನ್ನು ತುಂಬಿಕೊಂಡಿರುವ ದುರ್ಯೋಧನನನ್ನು ಉದ್ದೇಶಿಸಿ ನಿಷ್ಠುರವಾದ ಮಾತುಗಳನ್ನಾಡಬೇಡ. ಅವನನ್ನು ಬಹಳ ಸೌಜನ್ಯದಿಂದಲೇ ಮಾತನಾಡಿಸು. ಅವನು ಸ್ವಭಾವದಿಂದಲೇ ಪಾಪಾತ್ಮನಾಗಿರುತ್ತಾನೆ. ದಸ್ಯುಗಳಂತೆಯೇ ಅವನು ಕ್ರೂರಹೃದಯನೂ ಆಗಿರುತ್ತಾನೆ. ಐಶ್ವರ್ಯದ ಮದದಿಂದ ಉನ್ಮತ್ತನಾಗಿಹೋಗಿದ್ದಾನೆ. ಪಾಂಡವರೊಡನೆ ವೈರಬೆಳೆಸಿದ್ದಾನೆ. ಆ ಪಾಪಾತ್ಮನಿಗೆ ದೂರದೃಷ್ಟಿಯಿಲ್ಲ. ಅವನು ಮುಂದೇನಾಗಬಹುದೆಂಬುದನ್ನು ಯೋಚಿಸತಕ್ಕವನಲ್ಲ. ಬಹುನಿಷ್ಠುರ ವಾದ ಮಾತುಗಳನ್ನಾಡತಕ್ಕವನು. ಪರನಿಂದಾಪರನು; ಕ್ರೂರಪರಾಕ್ರಮೀ; ದೀರ್ಘಕೋಪೀ; ಅತಿದೀರ್ಘಕಾಲದವರೆಗೆ ಕೋಪವನ್ನು ಮನಸ್ಸಿನಲ್ಲಿಟ್ಟು ಕೊಂಡು ಛಲವನ್ನು ಸಾಧಿಸುವ ಸ್ವಭಾವವುಳ್ಳವನು; ನೀತಿಬಾಹಿರನು ; ಒಲಿಸಲಾಗದವನು ; ಪಾಪಾತ್ಮನು ; ಶಠತ್ವದಲ್ಲಿಯೇ ಹೆಚ್ಚಿನ ಮಮತೆಯುಳ್ಳವನು.

ಮ್ರಿಯೇತಾಪಿ ನ ಭಜ್ಯೇತ ನೈವ ಜಹ್ಯಾತ್ಸ್ವಕಂ ಮತಮ್ ।
ತಾದೃಶೇನ ಶಮಃ ಕೃಷ್ಣ ಮನ್ಯೇ ಪರಮದುಷ್ಕರಃ ॥೫॥

ಆ ದುಷ್ಟನು ಸತ್ತಾದರೂ ಹೋದಾನು ; ಆದರೆ ಬಗ್ಗತಕ್ಕವನಲ್ಲ. ತನ್ನ ಅಭಿಮತವನ್ನೆಂದಿಗೂ ಬದಲಾಯಿಸತಕ್ಕವನಲ್ಲ. ಅಂತಹವನೊಡನೆ ಶಾಂತಿಯು ಪರಮದುಷ್ಕರವೆಂದೇ ನಾನು ಭಾವಿಸುತ್ತೇನೆ, ಕೃಷ್ಣ! ಪ್ರಿಯ

ಸುಹೃದರ ಹಿತವಾದ ಮಾತುಗಳನ್ನೂ ಅಲಕ್ಷಿಸತಕ್ಕವನು; ಧರ್ಮವೆಂಬುದನ್ನು ಸಂಪೂರ್ಣವಾಗಿ ತೊರೆದಿರತಕ್ಕವನು; ಅನೃತಪ್ರಿಯನು; ಹಿತೈಷಿಗಳ ಹಿತವಾಕ್ಯಗಳನ್ನು ಖಂಡಿಸತಕ್ಕವನು ಮತ್ತು ದುಷ್ಟವಾದ ಮಾತುಗಳಿಂದ ಹಿತೈಷಿಗಳ ಮನಸ್ಸನ್ನು ನೋಯಿಸತಕ್ಕವನು. ಅಂತಹವನೊಡನೆ ಶಾಂತಿಯು ಪರಮದುಷ್ಕರವೆಂದೇ ಕಾಣುತ್ತದೆ. ಅವನು ಯಾವಾಗಲೂ ಕ್ರೋಧಾಭಿಭೂತನಾಗಿರತಕ್ಕವನು. ಈ ಕಾರಣದಿಂದಲೇ ಅವನ ಸ್ವಭಾವವೂ ಬಹಳ ದುಷ್ಟವಾಗಿಯೇ ಇದೆ. ಹುಲ್ಲಿನ ಮಧ್ಯೆ ನುಸುಳಿಕೊಂಡಿರುವ ಹಾವಿನಂತೆ ದುಷ್ಟಸ್ವಭಾವದಿಂದ ಕೂಡಿರುವ ದುರ್ಯೋಧನನು ಇತರರ ವಿಷಯದಲ್ಲಿ ಪಾಪಕಾರ್ಯಗಳನ್ನು ಮಾಡುತ್ತಲೇ ಇರುತ್ತಾನೆ.

ಮಾಧವ! ದುರ್ಯೋಧನನಿಗೆ ಸೇನಾಬಲವೆಷ್ಟಿದೆ? ಅವನ ಶೀಲ ಮತ್ತು ಸ್ವಭಾವಗಳೇನು? ಅವನ ಬಲ ಮತ್ತು ಪರಾಕ್ರಮಗಳೆಷ್ಟು?–ಈ ವಿಷಯಗಳೆಲ್ಲವೂ ನಿನಗೆ ಸಂಪೂರ್ಣವಾಗಿ ತಿಳಿದೇ ಇರುವುದು. ಈ ವಿಷಯಗಳನ್ನು ನಾನು ನಿನಗೆ ವಿವರಿಸಿ ಹೇಳಬೇಕಾದ ಕಾರಣವಿಲ್ಲ. ನಿನಗೆ ತಿಳಿದಿರುವಂತೆ ಈ ಹಿಂದೆ ಕುರುಗಳೂ ಮತ್ತು ನಾವೂ ಬಂಧು-ಬಾಂಧವರೊಡನೆ ಇಂದ್ರಾದಿ ದೇವತೆಗಳೋಪಾದಿಯಲ್ಲಿ ಪರಸ್ಪರವಾಗಿ ಹೊಂದಿಕೊಂಡು ಆನಂದದಿಂದಲೇ ಇದ್ದೆವು. ಆದರೆ ಈಗ–ಶಿಶಿರಋತುವು ಕಳೆದನಂತರ ಬರುವ ಬೇಸಿಗೆಯಲ್ಲಿ ಕಾಡುಗಿಚ್ಚಿನಿಂದ ಅರಣ್ಯಗಳು ಭಸ್ಮವಾಗಿ ಹೋಗುವಂತೆ– ದುರ್ಯೋಧನನ ಕೋಪಾಗ್ನಿಯಿಂದ ಭರತವಂಶವೇ ಸುಟ್ಟುಹೋಗುವುದರಲ್ಲಿದೆ. ಹಿಂದೆಯೂ ಕ್ರೋಧಶೀಲರಾದ ಹದಿನೆಂಟು ರಾಜರು ಜ್ಞಾತಿಗಳನ್ನೂ, ಸುಹೃದರನ್ನೂ, ಬಾಂಧವರನ್ನೂ ನಿರ್ಮೂಲ ಮಾಡಿದ್ದರು. ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಅಸುರರೇ ಹೆಚ್ಚುತ್ತಿರಲಾಗಿ, ಧರ್ಮದ ಅಂತ್ಯವಾಗುತ್ತಿರಲಾಗಿ, ಭೀಕರಕಲಹವು ಪ್ರಾರಂಭವಾಯಿತು. ಅದೇ ಸಮಯದಲ್ಲಿ ಹೈಹಯವಂಶದಲ್ಲಿ ವಂಶವಿನಾಶಕನಾದ ಮುದಾವರ್ತನೆಂಬುವನು ಹುಟ್ಟಿದನು. ನೀಪರಲ್ಲಿ ಜನಮೇಜಯನೆಂಬುವನು ಹುಟ್ಟಿದನು. ತಾಲಜಂಘರಲ್ಲಿ ಬಹುಲನೆಂಬುವನು ಹುಟ್ಟಿದನು. ಕೃಮಿವಂಶದಲ್ಲಿ ವಸು ಎಂಬುವನು ಹುಟ್ಟಿದನು. ಅವನು ಉದ್ಧತನಾಗಿದ್ದನು. ಸುವೀರರಲ್ಲಿ ಅಜಬಿಂದು ಎಂಬುವನೂ, ಸುರಾಷ್ಟ್ರರಲ್ಲಿ ರುಷರ್ಧಿಕನೆಂಬುವನೂ, ಬಲೀಹರಲ್ಲಿ ಅರ್ಕಜನೆಂಬುವನೂ, ಚೀನರಲ್ಲಿ ಧೌತ

ಮೂಲಕನೆಂಬುವನೂ, ವಿದೇಹರಲ್ಲಿ ಹಯಗ್ರೀವನೆಂಬುವನೂ, ಮಹೌಜಸರಲ್ಲಿ ವರಯು ಎಂಬುವನೂ, ಸುಂದರವಂಶದಲ್ಲಿ ಬಾಹು ಎಂಬುವನೂ, ದೀಪಾಕ್ಷರಲ್ಲಿ ಪುರೂರವನೂ, ಚೇದಿ-ಮತ್ಸ್ಯರಲ್ಲಿ ಸಹಜ ಎಂಬುವನೂ, ಪ್ರವೀರವಂಶದಲ್ಲಿ ವೃಷಧ್ವಜನೂ, ಚಂದ್ರವತ್ಸಕುಲದಲ್ಲಿ ಧಾರಣನೂ, ಮುಕುಟವಂಶದಲ್ಲಿ ವಿಗಾಹನನೂ, ನಂದಿವೇಗಕುಲದಲ್ಲಿ ಶಮನೂ ಹುಟ್ಟಿದರು. ಯುಗಾಂತದಲ್ಲಿ ಹುಟ್ಟಿದ ಅವರೆಲ್ಲರೂ ಕುಲಪಾಂಸನರಾಗಿಯೂ, ಕುಪುರುಷರಾಗಿಯೂ, ಅಧಮರಾಗಿಯೂ ಇದ್ದರು. ಅವರು ತಾವು ಹುಟ್ಟಿದ ವಂಶವನ್ನೇ ನಾನಾರೀತಿಗಳಲ್ಲಿ ವಿನಾಶಗೊಳಿಸಿದರು. ಬಂಧು-ಬಾಂಧವರ, ಸುಹೃದರ ನಾಶಕ್ಕೆ ಕಾರಣರಾದರು. ಆ ಹದಿನೆಂಟು ಮಂದಿ ಕುಲಪಾಂಸನರಂತೆ ಕುರುಕುಲ ಕಳಂಕನಾದ, ನೀಚನಾದ, ಪಾಪಪೂರುಷನಾದ ದುರ್ಯೋಧನನೂ ದ್ವಾಪರ ಯುಗದ ಕಡೆಯ ಭಾಗವಾದ ಈ ಸಮಯದಲ್ಲಿ ಹುಟ್ಟಿ ಕಾಲನಿಂದ ಚೋದಿತ ನಾಗಿ ಈ ನಮ್ಮ ಕುರುವಂಶದ ವಿನಾಶಕನೇ ಆಗಬಹುದು. ಜನಾರ್ದನ! ಈ ಕಾರಣದಿಂದಾಗಿ :

**ತಸ್ಮಾನ್ಮೃದು ಶನೈರ್ಬ್ರೂಯಾ ಧರ್ಮಾರ್ಥಸಹಿತಂ ಹಿತಮ್ ।**
**ಕಾಮಾನುಬನ್ಧಬಹುಲಂ ನೋಗ್ರಮುಗ್ರಪರಾಕ್ರಮ ॥೧೯॥**

ಅವನೊಡನೆ ಬಹಳ ಮೃದುವಾಗಿ ಮಾತನಾಡಬೇಕು. ಅದನ್ನೂ ಮೆಲ್ಲ-ಮೆಲ್ಲನೆ ಹೇಳಬೇಕು. (ವೇಗವಾಗಿ ಹೇಳಿದರೆ ಮಾತಿನ ಮಾರ್ದವವು ಕಡಿಮೆಯಾಗುತ್ತದೆ.) ಧರ್ಮಾರ್ಥಸಹಿತವಾದ ಮಾತನ್ನೇ ಹೇಳಬೇಕು. ನೀನಾಡುವ ಮಾತುಗಳು ಅವನ ಇಚ್ಛೆಗೆ ಅನುಗುಣವಾಗಿವೆಯೋ ಎಂಬಂತೆಯೇ ಇರಬೇಕು. ಉಗ್ರಪರಾಕ್ರಮಿಯೇ! ಆದರೆ ನೀನು ಮಾತಿನಲ್ಲಿ ಮಾತ್ರ ಉಗ್ರತ್ವವನ್ನು ಬಳಸಬಾರದು.

**ಅಪಿ ದುರ್ಯೋಧನಂ ಕೃಷ್ಣ ಸರ್ವೇ ವಯಮಧಶ್ಚರಾಃ ।**
**ನೀಚೈರ್ಭೂತ್ವಾನುಯಾಸ್ಯಾಮೋ ಮಾ ಸ್ಮ ನೋ ಭರತಾನಶನ್ ॥**

ನಾವೆಲ್ಲರೂ ದುರ್ಯೋಧನನನ್ನು ಅನುಸರಿಸಿಯೇ ನಡೆದುಕೊಳ್ಳುತ್ತೇವೆ. ಅವನ ಅಡಿಯಾಳುಗಳಾಗಿರುತ್ತೇವೆ. ಅವನ ಮುಂದೆ ಅತ್ಯಂತವಿನಮ್ರಭಾವ

ದಿಂದಿರುತ್ತೇವೆ. (ಅವನು ಅಷ್ಟಕ್ಕಾದರೂ ಅವಕಾಶಮಾಡಿಕೊಟ್ಟರೆ ಸಾಕು.) ನಮ್ಮ ಭರತವಂಶವು ನಾಶವಾಗಕೂಡದೆಂಬುದೊಂದೇ ನಮ್ಮ ಆಶಯವಾಗಿದೆ, ಕೃಷ್ಣ!

ನಾವಿಬ್ಬರೂ ಪರಸ್ಪರವಾಗಿ ಮೈತ್ರಿಯಿಂದಿರಲು ಸಾಧ್ಯವಾಗದಿದ್ದರೂ ಔದಾಸೀನ್ಯದಿಂದಾದರೂ ಇರಲು ಸಾಧ್ಯವಾಗುವಂತೆ ಮಾತನಾಡು, ಕೃಷ್ಣ! ಅವರ ಗೋಜು ನಮಗೆ ಬೇಡ ; ನಮ್ಮ ಗೋಜು ಅವರಿಗೂ ಬೇಡ. ಹಾಗಾದರೂ ಇರಬಹುದಾಗಿದೆ. ಆದರೆ ಕುಲಕ್ಷಯದಿಂದುಂಟಾಗಬಹುದಾದ ದೋಷವು ಕುರುಗಳಿಗೆ ತಟ್ಟಬಾರದು. ಕೃಷ್ಣ! ಇದನ್ನೇ ನೀನು ಸಾಧಿಸಬೇಕು. ವಾಸುದೇವ! ಆ ಸಭೆಯಲ್ಲಿ ಉಪಸ್ಥಿತನಾಗಿರುವ ಪಿತಾಮಹನಾದ, ವೃದ್ಧನಾದ ಭೀಷ್ಮನನ್ನೂ ಮತ್ತು ಅಲ್ಲಿರುವ ಸಭಾಸದರನ್ನೂ ಕುರಿತು ನೀನು ಹೀಗೆ ಹೇಳಬೇಕು ; 'ಭ್ರಾತೃಗಳಲ್ಲಿ ಸೌಭ್ರಾತ್ರವುಂಟಾಗಲಿ. ಅಣ್ಣ-ತಮ್ಮಂದಿರು ಪರಸ್ಪರಪ್ರೀತಿಯಿಂದಿರಲಿ. ದುರ್ಯೋಧನನು ಪ್ರಸನ್ನನಾಗಲಿ."

**ಅಹಮೇತದ್ಬ್ರವೀಮ್ಯೇವಂ ರಾಜಾ ಚೈವ ಪ್ರಶಂಸತಿ ।**
**ಅರ್ಜುನೋ ನೈವ ಯುದ್ಧಾರ್ಥೀ ಭೂಯಸೀ ಹಿ ದಯಾರ್ಜುನೇ ॥**

ನಮ್ಮ ಕಡೆಯಲ್ಲಿ ಯಾರೊಬ್ಬರಿಗೂ ಯುದ್ಧವು ಬೇಡವೆಂಬುದಕ್ಕೆ ಯುದ್ಧಪ್ರಿಯನಾದ ನಾನೇ ಈ ಮಾತುಗಳನ್ನು ಹೇಳುತ್ತಿರುವುದೇ ಸಾಕ್ಷಿ ಯಾಗಿದೆ. ಯುಧಿಷ್ಠಿರರಾಜನೂ ನನ್ನ ಈ ಮಾತುಗಳನ್ನು ಬಹುವಾಗಿಯೇ ಪ್ರಶಂಸೆಮಾಡುತ್ತಾನೆ. ಅರ್ಜುನನಿಗಂತೂ ಯುದ್ಧಮಾಡುವ ಇಚ್ಛೆಯೇ ಇಲ್ಲ. ಮೇಲಾಗಿ ಅರ್ಜುನನು ಬಹುದಯಾಪರನು."

೭೪ನೆಯ ಅಧ್ಯಾಯವು ಮುಗಿಯಿತು.

೭೫ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ವಾಸುದೇವನು ಭೀಮಸೇನನನ್ನು ಉತ್ತೇಜಿಸಿದುದು

(ಅಮರ್ಷಣನಾದ ಭೀಮಸೇನನ ಬಾಯಲ್ಲಿ ಇಂತಹ ಮಾತು ಬಂದುದು ಅಚ್ಚರಿಯ ವಿಷಯವೇ ಸರಿ. ವೈಶಂಪಾಯನರೂ ಈ ವಿಷಯವನ್ನೇ ಜನಮೇಜಯನಿಗೆ ಹೇಳುತ್ತಾರೆ: )

**ಏತಚ್ಛ್ರುತ್ವಾ ಮಹಾಬಾಹುಃ ಕೇಶವಃ ಪ್ರಹಸನ್ನಿವ ।**
**ಅಭೂತಪೂರ್ವಂ ಭೀಮಸ್ಯ ಮಾರ್ದವೋಪಹಿತಂ ವಚಃ ॥೧॥**

ಭೀಮಸೇನನ ಮೃದುಪೂರ್ಣವಾದ ಮತ್ತು ಅಭೂತಪೂರ್ವವಾದ (ಹಿಂದೆಂದೂ ಆಡದೇ ಇರತಕ್ಕ) ಮಾತುಗಳನ್ನು ಕೇಳಿ ಶ್ರೀಕೇಶವನು ನಗುತ್ತಿರುವನೋ ಎಂಬ ಮುಖಭಾವದಿಂದ ಕೂಡಿದವನಾಗಿ– 'ಭೀಮಸೇನನೇ ಈ ಮಾತುಗಳನ್ನು ಹೇಳುತ್ತಿರುವನೇ? ಪರ್ವತವೇನಾದರೂ ತನ್ನ ಮಹತ್ತ್ವವನ್ನು (ಗುರುತ್ವವನ್ನು) ಕಳೆದುಕೊಂಡು ಲಘುವಾಗಿ ಬಿಟ್ಟಿರುವುದೇ? ಅಗ್ನಿಗೆ ಶೀತಲತ್ವವು ಪ್ರಾಪ್ತವಾಗಿರುವುದೇ? ಈ ಎರಡೂ ಸಾಧ್ಯವಾಗುವುದಾದರೆ ಭೀಮನಲ್ಲಿ ಮೃದುತ್ವವು ಸಾಧ್ಯವಾಗುವುದು'– ಹೀಗೆಂಬುದಾಗಿ ಶಾರ್ಙ್ಗಧನ್ವನಾದ ಶೌರಿಯು–ವಾಯುದೇವನು ಅಗ್ನಿದೇವನನ್ನು ಧಗ-ಧಗನೆ ಪ್ರಜ್ವಲನಗೊಳಿಸುವಂತೆ–ತನ್ನ ಯುಕ್ತಿಯುಕ್ತವಾದ ಮಾತುಗಳಿಂದ ಭೀಮಸೇನನನ್ನು ಉತ್ತೇಜಿತನನ್ನಾಗಿ ಮಾಡುತ್ತಾ ಕೃಪಾರಸದಲ್ಲಿ ಮುಳುಗಿ ಹೋಗಿದ್ದ ಭೀಮಸೇನನನ್ನು ಕುರಿತು ಹೀಗೆಂದು ಹೇಳಿದನು :

"ಭೀಮಸೇನ! ಹಿಂದೆಲ್ಲಾ ನೀನು, ಇತರರಿಗೆ ಹಿಂಸೆಕೊಡುವುದರಿಂದಲೇ ಆನಂದಿಸುತ್ತಿರುವ ಕ್ರೂರಿಗಳಾದ ಧೃತರಾಷ್ಟ್ರನ ಮಕ್ಕಳನ್ನು ಮರ್ದನಮಾಡಲು ಇಚ್ಛಿಸುವವನಾಗಿ, ಯುದ್ಧವನ್ನೇ ಬಹುವಾಗಿ ಪ್ರಶಂಸಿಸುತ್ತಿದ್ದೆ. ಅವರ ಮರ್ದನವನ್ನೇ ಯಾವಾಗಲೂ ಮನದಲ್ಲಿ ನೆನೆಯುತ್ತಾ ನೀನು ನಿದ್ರೆಯನ್ನೂ ಮಾಡುತ್ತಿರಲಿಲ್ಲ. ಯಾವಾಗಲೂ ಎಚ್ಚರವಾಗಿಯೇ ಇರುತ್ತಿದ್ದೆ. ಬಾಗಿಕೊಂಡು ಕೆಳಗೆ ಮುಖಮಾಡಿಕೊಂಡು ಮಲಗುತ್ತಿದ್ದೆ. ಒಂದು ವೇಳೆ ಅಪ್ಪಿ-ತಪ್ಪಿ ನಿನಗೆ ನಿದ್ರೆ ಬಂದಂತಾದರೂ

ನಿದ್ರೆಯಲ್ಲೂ ನೀನು ನೆಮ್ಮದಿಯಿಲ್ಲದ, ಘೋರವಾದ ಕೋಪಯುಕ್ತವಾದ ಮಾತುಗಳನ್ನೇ ಯಾವಾಗಲೂ ಆಡುತ್ತಿದ್ದೆ.

ಭೀಮಸೇನ! ದುರ್ಯೋಧನಾದಿಗಳು ಮಾಡಿದ ದುಷ್ಕ್ರಿಯೆಗಳನ್ನು ನೀನು ಬಾರಿ-ಬಾರಿಗೂ ನೆನೆದು ದೀರ್ಘವಾದ ನಿಟ್ಟುಸಿರುಬಿಡುತ್ತಿದ್ದೆ. ಕೋಪಾಗ್ನಿಯಿಂದಲೇ ನೀನು ಪರಿತಪಿಸುತ್ತಿದ್ದೆ. ಧೂಮದಿಂದ ಆವೃತವಾದ ಅಗ್ನಿಯಂತೆ ನೀನು ಅಪ್ರಶಾಂತಮನಸ್ಕನಾಗಿರುತ್ತಿದ್ದೆ. (ಅಗ್ನಿಗೆ ಧೂಮವು ಕವಿದು ಅಗ್ನಿಯ ಪ್ರಕಾಶವನ್ನು ಮಸುಕುಗೊಳಿಸುವಂತೆ–ನಿನ್ನ ಮನಸ್ಸಿನಲ್ಲಿ ಅಶಾಂತಿಯು ಆವರಿಸಿದ್ದು ನಿನ್ನ ತೇಜಸ್ಸನ್ನು ಕುಂದಿಸಿದ್ದಿತು.) ಬಹಳ ದೊಡ್ಡದಾದ ಹೊರೆಹೊತ್ತ ದುರ್ಬಲಮನುಷ್ಯನು ಒಂದೆಡೆಯಲ್ಲಿ ಹೊರೆಯನ್ನಿಳಿಸಿ ನಿಟ್ಟುಸಿರುಬಿಡುತ್ತಾ ಕುಳಿತುಕೊಳ್ಳುವಂತೆ–ನೀನೂ ಕೂಡ ಏಕಾಂತದಲ್ಲಿ ಹೃದಯದ ಭಾರವನ್ನು ತಾಳಲಾರದೇ ನಿಟ್ಟುಸಿರುಬಿಡುತ್ತ ಮಲಗಿರುತ್ತಿದ್ದೆ. ನೀನು ಯಾರೊಡನೆಯೂ ಮಾತನಾಡದೇ ಹೀಗೆ ಯಾವಾಗಲೂ ನಿಟ್ಟುಸಿರುಬಿಡುತ್ತಾ ಕುಳಿತಿರುವುದನ್ನು ನೋಡಿ–ನಿನ್ನ ಮನಸ್ಸಿನ ಕೋಪಾವೇಶವನ್ನರಿಯದ ಜನರು ನಿನ್ನನ್ನು ಹುಚ್ಚನೆಂದೂ ಹೇಳುತ್ತಿದ್ದರು. ಯಾವ ರೀತಿಯಲ್ಲಿ ಮದಿಸಿದ ಆನೆಯೊಂದು ವೃಕ್ಷಗಳನ್ನು ಬುಡಸಹಿತವಾಗಿ ಕಿತ್ತು ಅನಂತರದಲ್ಲಿ ತನ್ನ ಕಾಲುಗಳಿಂದ ಅವುಗಳನ್ನು ಮೆಟ್ಟಿ ಮುರಿದುಹಾಕಿ ಮುಂದೆ ಸಾಗುತ್ತದೆಯೋ–ಅದೇ ರೀತಿಯಲ್ಲಿ ನೀನೂ ಸಹ ನಿನ್ನ ಕಾಲುಗಳಿಂದ ಭೂಮಿಯನ್ನು ಬಲವಾಗಿ ಪ್ರಹರಿಸುತ್ತಾ ಗಟ್ಟಿಯಾಗಿ ಗರ್ಜಿಸುತ್ತ ಮನಬಂದೆಡೆಗೆ ಓಡಿಬಿಡುತ್ತಿದ್ದೆ. ನೀನು ನಿನ್ನ ಮನಸ್ಸಿನಲ್ಲಿದ್ದ ಸಂಕಟದಿಂದಾಗಿ ಯಾರೊಡನೆಯೂ ಸೇರುತ್ತಿರಲಿಲ್ಲ. ಯಾರೊಡನೆಯೂ ಪ್ರಸನ್ನತೆಯಿಂದ ಮಾತನಾಡುತ್ತಿರಲಿಲ್ಲ. ಯಾವಾಗಲೂ ಏಕಾಂತದಲ್ಲಿ ಒಬ್ಬನೇ ಕುಳಿತು ಕಾಲಕಳೆಯುತ್ತಿದ್ದೆ. ಹಗಲಿನಲ್ಲಾಗಲೀ, ರಾತ್ರಿಯಲ್ಲಾಗಲೀ ನೀನು ಯಾರೊಬ್ಬನನ್ನೂ ಅಭಿನಂದಿಸಲು ಅಥವಾ ಗೌರವಿಸಲು ಹೋಗುತ್ತಿರಲಿಲ್ಲ. ಯಾರ ಗೊಡವೆಯೂ ನಿನಗೆ ಬೇಕಾಗಿರಲಿಲ್ಲ. ಏಕಾಂತದಲ್ಲಿದ್ದಾಗ ಯಾವಾಗಲಾದರೊಮ್ಮೆ ನೀನು ಅಟ್ಟಹಾಸದಿಂದ ನಗುತ್ತಿದ್ದುದೂ ಉಂಟು. ಮರುಕ್ಷಣದಲ್ಲಿಯೇ ಗಟ್ಟಿಯಾಗಿ ಅತ್ತುಬಿಡುತ್ತಿದ್ದೆ. ಅನೇಕವೇಳೆ ನೀನು ನಿನ್ನ ತಲೆಯನ್ನು ಎರಡು ಮಂಡಿಗಳ ಮಧ್ಯದಲ್ಲಿರಿಸಿಕೊಂಡು ಕಣ್ಮುಚ್ಚಿ ಬಹಳ

ಹೊತ್ತಿನವರೆಗೆ ಕುಳಿತುಬಿಡುತ್ತಿದ್ದೆ. ಭೀಮಸೇನ! ಮತ್ತೆ ಕೆಲವು ಸಮಯಗಳಲ್ಲಿ ನೀನು ಇದ್ದಕ್ಕಿದ್ದಂತೆಯೇ ಹುಬ್ಬುಗಳನ್ನು ಗಂಟಿಕ್ಕಿಕೊಳ್ಳುತ್ತಾ ತುಟಿಕಚ್ಚುತ್ತಿದ್ದೆ. ಬಾರಿ-ಬಾರಿಗೂ ದುರ-ದುರನೆ ಏನನ್ನೋ ನೋಡುತ್ತಿರುವನಂತೆ ಕಾಣುತ್ತಿದ್ದೆ. ಈ ಎಲ್ಲವೂ ನಿನ್ನಲ್ಲಿದ್ದ ಕೋಪದ ಪ್ರತಿಕ್ರಿಯೆಗಳೇ ಅಲ್ಲವೇ?

**ಯಥಾ ಪುರಸ್ತಾತ್ಸವಿತಾ ದೃಶ್ಯತೇ ಶುಕ್ರಮುಚ್ಚರನ್ ।**
**ಯಥಾ ಚ ಪಶ್ಚಾನ್ನಿರ್ಮುಕ್ತೋ ಧ್ರುವಂ ಪರ್ಯೇತಿ ರಶ್ಮಿವಾನ್ ॥**

**ತಥಾ ಸತ್ಯಂ ಬ್ರವೀಮ್ಯೇತನ್ನಾಸ್ತಿ ತಸ್ಯ ವ್ಯತಿಕ್ರಮಃ ।**
**ಹನ್ತಾಹಂ ಗದಯಾಭ್ಯೇತ್ಯ ದುರ್ಯೋಧನಮಮರ್ಷಣಮ್ ॥**

'ತನ್ನ ತೇಜೋಮಂಡಲವನ್ನು ಸರ್ವತ್ರ ಪ್ರಸರಿಸುತ್ತಾ, ಸೂರ್ಯನು ಯಾವ ರೀತಿಯಲ್ಲಿ ಪೂರ್ವದಿಕ್ಕಿನಲ್ಲಿ ಉದಯಿಸುವನೋ ಮತ್ತು ಯಾವ ರೀತಿಯಲ್ಲಿ ಅದೇ ಸೂರ್ಯನು ಮೇರುಪರ್ವತವನ್ನು ಪ್ರದಕ್ಷಿಣೆಮಾಡಿಕೊಂಡು ಸಾಯಂಕಾಲವಾಗುತ್ತಲೇ ಪಶ್ಚಿಮದಿಕ್ಕಿನಲ್ಲಿ ಅಸ್ತಂಗತನಾಗುವನೋ– ಸೂರ್ಯನ ಉದಯಾಸ್ತಗಳು ಎಷ್ಟು ಖಚಿತವಾಗಿ ಮತ್ತು ಸತ್ಯವಾಗಿ ನಡೆಯುತ್ತಿವೆಯೋ–ಅದೇ ರೀತಿಯಲ್ಲಿ ನಾನು ಸತ್ಯವಾದ ಈ ಮಾತುಗಳನ್ನಾಡುತ್ತೇನೆ. ಸೂರ್ಯನ ಉದಯಾಸ್ತಗಳಲ್ಲಿ ಯಾವ ವಿಧವಾದ ವ್ಯತಿಕ್ರಮವೂ ಇಲ್ಲದಂತೆ ನನ್ನ ಈ ಮಾತಿನಲ್ಲಿಯೂ ಯಾವ ವಿಧವಾದ ವ್ಯತಿಕ್ರಮವೂ ಇರುವುದಿಲ್ಲ. ಮಹಾಕೋಪಿಷ್ಠನಾದ ದುರ್ಯೋಧನನನ್ನು ಎದುರಿಸಿ ಅವನನ್ನು ಈ ಗದೆಯಿಂದ ಸಂಹಾರಮಾಡುತ್ತೇನೆ'–ಹೀಗೆಂದು ನಿನ್ನ ಸೋದರರ ಮಧ್ಯದಲ್ಲಿ ಆಗಾಗ ಗದೆಯನ್ನು ಮುಟ್ಟಿ ಪ್ರತಿಜ್ಞೆಮಾಡುತ್ತಿದ್ದೆ. ಹಾಗಿದ್ದ ನಿನ್ನ ಬುದ್ಧಿಯು ಇಂದು ಶಾಂತಿತತ್ತ್ವವನ್ನು ಗ್ರಹಣಮಾಡಿಬಿಟ್ಟಿದೆಯಲ್ಲವೇ? ಭೀಮಸೇನ!

**ಅಹೋ ಯುದ್ಧಾಭಿಕಾಂಕ್ಷಾಣಾಂ ಯುದ್ಧಕಾಲ ಉಪಸ್ಥಿತೇ ।**
**ಚೇತಾಂಸಿ ವಿಪ್ರತೀಪಾನಿ ಯತ್ತ್ವಾಂ ಭೀರ್ಭೀಮ ವಿನ್ದತಿ ॥೧೫॥**

'ಯುದ್ಧವೇ ನಡೆಯಬೇಕು. ನಾವು ಸೇಡನ್ನು ತೀರಿಸಿಕೊಳ್ಳಲೇ ಬೇಕು'–ಎಂದು ಹಗಲಿರುಳೂ ಕಾತರಿಸುತ್ತಿದ್ದವರ ಮನಸ್ಸು ಯುದ್ಧ

ಕಾಲವು ಸಮೀಪಿಸುತ್ತಿದ್ದಂತೆ ವಿಪರ್ಯಾಸಗೊಳ್ಳುತ್ತಿದೆ. ಇದೊಂದು ಅಚ್ಚರಿಯೇ ಸರಿ. ಭೀಮಸೇನ! ನಿನ್ನನ್ನೂ ಭಯವು ಆವರಿಸಿಬಿಟ್ಟಿರುವುದೆಂದು ತೋರುತ್ತದೆ. (ಹಾಗಿಲ್ಲದಿದ್ದರೆ ನೀನು ಇಂತಹ ಶಾಂತಿಯ ಮಾತುಗಳ ನ್ನಾಡುತ್ತಿರಲಿಲ್ಲ.) ಅಥವಾ ನಿನ್ನ ಶಾಂತಿಯ ಪ್ರಾರ್ಥನೆಗೆ ಮತ್ತೂ ಒಂದು ಕಾರಣವಿರಬಹುದು. ನಿದ್ರೆಯಲ್ಲಿಯೂ ಜಾಗ್ರದವಸ್ಥೆಯಲ್ಲಿಯೂ ಅಶುಭ ಸೂಚಕಶಕುನಗಳೇ ಯಾವಾಗಲೂ ನಿನಗೆ ಗೋಚರವಾಗುತ್ತಿವೆ. ಈ ಕಾರಣ ದಿಂದಲೇ ನೀನು ಶಾಂತಿಯನ್ನು ಇಚ್ಛಿಸುತ್ತಿರಬಹುದು. ಈಗಲಂತೂ ನಿನ್ನ ಬಾಯಲ್ಲಿ ಪೌರುಷದ ಮಾತೇ ಹೊರಡುತ್ತಿಲ್ಲ. ನಪುಂಸಕನಂತೆಯೇ ಮಾತನಾಡುತ್ತಿರುವೆ. ಭೀಮಸೇನ! ನಿಶ್ಚಯವಾಗಿಯೂ ನೀನೀಗ ಮೋಹ ವಶನಾಗಿರುವೆ. ಆದುದರಿಂದಲೇ ನಿನ್ನ ಬುದ್ಧಿಯು ಇಂತಹ ವಿಕೃತರೂಪ ವನ್ನು ತಾಳಿದೆ. ನಿನ್ನ ಹೃದಯವು ತರ-ತರನೆ ನಡುಗುತ್ತಿದೆ. ನಿನ್ನ ಮನಸ್ಸು ಶಿಥಿಲವಾಗುತ್ತಿದೆ. ನಿನ್ನ ತೊಡೆಗಳೂ ಪ್ರಕಂಪಿಸುತ್ತಿವೆ. ಈ ಕಾರಣದಿಂದಲೇ ನೀನು ಶಾಂತಿಯನ್ನು ಅಪೇಕ್ಷಿಸುತ್ತಿರಬಹುದಲ್ಲವೇ?

ಅನಿತ್ಯಂ ಕಿಲ ಮರ್ತ್ಯಸ್ಯ ಪಾರ್ಥ ಚಿತ್ತಂ ಚಲಾಚಲಮ್ ।
ವಾತವೇಗಪ್ರಚಲಿತಾ ಅಷ್ಠೀಲಾ ಶಾಲ್ಮಲೇರಿವ ॥೧೯॥

ಭೀಮಸೇನ! ಮನುಷ್ಯನ ಮನಸ್ಸು ಯಾವಾಗಲೂ ಸ್ಥಿರವಾಗಿರುವು ದಿಲ್ಲ. ವಾಯುವೇಗದಿಂದ ಅತ್ತಿಂದಿತ್ತ ಹಾರಿಹೋಗುವ ಬೂರುಗದ ಬೀಜದೋಪಾದಿಯಲ್ಲಿ–ಮನುಷ್ಯನ ಮನಸ್ಸು ಅತ್ತಲಿಂದಿತ್ತ ಹರಿದಾಡು ತ್ತಿರುತ್ತದೆ. ವಿಕೃತಗೊಂಡಿರುವ ಈ ನಿನ್ನ ಬುದ್ಧಿಯು, ಮನುಷ್ಯರಂತೆ ಮಾತನಾಡುವ ಹಸುಗಳ ಮಾತಿನಂತೆ–ವಿಕೃತವಾಗಿ ಕಾಣುತ್ತಿದೆ. ನೌಕೆ ಯಿಲ್ಲದವರು ಸಮುದ್ರದಲ್ಲಿ ಮುಳುಗಿಹೋಗುವಂತೆ–ಈ ನಿನ್ನ ಮಾತು ಪಾಂಡವರನ್ನು ದುಃಖಸಮುದ್ರದಲ್ಲಿ ಮುಳುಗುವಂತೆ ಮಾಡುತ್ತದೆ.

ಭೀಮಸೇನ! ನಿನಗೆ ಸಲ್ಲದ ಈ ಶಾಂತಿಯ ಮಾತುಗಳನ್ನು ನೀನು ಆಡುತ್ತಿರುವೆ. ಇದನ್ನು ಕೇಳಿದ ನನಗೆ 'ಪರ್ವತವು ನಡೆದುಕೊಂಡು ಬರುತ್ತಿದೆ'–ಎಂದು ಯಾರಾದರೂ ಹೇಳಿದರೆ ಎಷ್ಟು ಆಶ್ಚರ್ಯವಾಗುವುದೋ ಅಷ್ಟೊಂದು ಆಶ್ಚರ್ಯವಾಗಿದೆ. ಭಾರತ! ಭೀಮಸೇನ! ಈ ಸಮಯದಲ್ಲಿ

ನಿನ್ನ ಕರ್ತವ್ಯವೇನೆಂಬುದನ್ನು ಯೋಚಿಸಿ ನೋಡು. ನೀನು ಯಾವ ಕುಲದಲ್ಲಿ ಜನ್ಮತಾಳಿರುವೆಯೆಂಬುದನ್ನೂ ಮನಗಾಣುವವನಾಗು. ಧೀರನಂತೆ ಎದ್ದು ನಿಲ್ಲು. ವಿಷಾದಪಡಬೇಡ. ಅಧೀರನಾಗಬೇಡ. ಕ್ಷತ್ರಿಯೋಚಿತ ಕರ್ಮದಲ್ಲಿ ಸ್ಥಿರನಾಗಿರು. ಈ ವಿಧವಾದ ಮನೋದೌರ್ಬಲ್ಯವು ನಿನಗೆ–ನಿನ್ನಂತಹ ವೀರನಿಗೆ–ಸರ್ವಥಾ ಯೋಗ್ಯವಲ್ಲ. ಕ್ಷತ್ರಿಯನಾದವನು ಪರಾಕ್ರಮದಿಂದ ಪಡೆಯದೇ ಇರುವ ವಸ್ತುವನ್ನು ಉಪಭೋಗಿಸಬಾರದು. (ಪರಾಕ್ರಮದ ಮೂಲಕವಾಗಿ ಪಡೆದ ರಾಜ್ಯವನ್ನು ಕ್ಷತ್ರಿಯನಾದವನು ಉಪಭೋಗಿಸುವನು ಮತ್ತು ಅಂತಹುದನ್ನು ಉಪಭೋಗಿಸಲು ಕ್ಷತ್ರಿಯನಿಗೆ ಹೆಚ್ಚು ಸಂತಸವಾಗುವುದು. ಯಾಚನೆಯಿಂದ ಅಥವಾ ಕೃಪಣತೆಯಿಂದ ಕ್ಷತ್ರಿಯನು ಯಾವುದನ್ನೂ ಪಡೆಯಲಾಗದು. ಆ ಮೂಲಕವಾಗಿ ಪಡೆದ ವಸ್ತುವಿನಿಂದ ಕ್ಷತ್ರಿಯನು ಹೆಚ್ಚಿನ ಸಂತೋಷವನ್ನು ಪಡೆಯುವುದಿಲ್ಲ. ಯಾಚನೆಯಿಂದ ಬರುವ ವಸ್ತುವು ಕ್ಷತ್ರಿಯನಾದವನಿಗೆ ಉಪಭೋಗಿಸಲು ಅರ್ಹವಾದ ವಸ್ತುವೇ ಆಗುವುದಿಲ್ಲ.)”

೭೫ನೆಯ ಅಧ್ಯಾಯವು ಮುಗಿಯಿತು.

೭೬ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಭೀಮಸೇನನ ಉತ್ತರ

ಜನಮೇಜಯ! ವಾಸುದೇವನಿಂದ ಭರ್ತ್ಸಿತನಾದ, ನಿತ್ಯಕೋಪಿಯಾದ, ಅಸಹನಶೀಲನಾದ ಭೀಮಸೇನನು ಸುಶಿಕ್ಷಿತವಾದ ಕುದುರೆಯಂತೆ ಒಡನೆಯೇ ಎರಡು ಹೆಜ್ಜೆಗಳನ್ನು ಮುಂದಿಟ್ಟು ಅನಂತರದಲ್ಲಿ ಶ್ರೀಕೃಷ್ಣನನ್ನು ಕುರಿತು ಹೇಳಿದನು :

“ಅಚ್ಯುತ! ನಾನು ಯಾವುದೋ ಒಂದು ಮಾರ್ಗದಲ್ಲಿ ನನ್ನ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದಿರುತ್ತೇನೆ. ಆದರೆ ನೀನು ಮಾತ್ರ ನನ್ನನ್ನೀಗ ಸರಿಯಾಗಿ ಅರ್ಥಮಾಡಿಕೊಳ್ಳದೇ ಮನೋದೌರ್ಬಲ್ಯದಿಂದ ಕೂಡಿರುವವನೆಂದು ಭಾವಿಸಿ ಮಾತನಾಡುತ್ತಿರುವೆ. ನೀನು ನನ್ನ ಜೊತೆಯಲ್ಲಿಯೇ ಬಹಳಕಾಲ

ದಿಂದಿರುವೆ. ನನ್ನ ಸ್ವಾಭಾವಿಕಗುಣಗಳು ನಿನಗೆ ಚೆನ್ನಾಗಿ ತಿಳಿದಿರುವುವು. ನಾನು ಯುದ್ಧದಲ್ಲಿಯೇ ಹೆಚ್ಚು ಪ್ರೀತಿಯುಳ್ಳವನೆಂದೂ ಮತ್ತು ನಿಜವಾದ ಪರಾಕ್ರಮವಿರುವವನೆಂದೂ ನೀನು ತಿಳಿದಿರುವೆ. ಅಥವಾ ನೀನು ನನ್ನ ಜೊತೆ ಯಲ್ಲಿಯೇ ಬಹಳ ಕಾಲವಿದ್ದರೂ ನನ್ನ ಪರಾಕ್ರಮವೇನೆಂಬುದು ನಿನಗೆ ತಿಳಿಯ ದಿರಲೂಬಹುದು. ಈಜುವವನಿಗೆ ಸರೋವರದ ಆಳವು ತಿಳಿಯದಿರುವುದು ಸ್ವಾಭಾವಿಕ. (ಸರೋವರದ ಆಳವು ತಿಳಿಯಬೇಕಾದರೆ ಅದರಲ್ಲಿ ಸಂಪೂರ್ಣವಾಗಿ ಮುಳುಗಿಯೇ ತಿಳಿದುಕೊಳ್ಳಬೇಕು.) ಈ ಕಾರಣದಿಂದಲೇ ನೀನು ಅನುಚಿತವಾದ ಮಾತುಗಳಿಂದ ನನ್ನನ್ನು ಆಕ್ಷೇಪಿಸುತ್ತಿರುವೆ. ಭೀಮಸೇನನ ನಿಜಸ್ವರೂಪವೇನೆಂಬುದನ್ನು ತಿಳಿದುಕೊಂಡಿರುವ ಯಾವನು ತಾನೇ ನೀನೀಗ ಆಡಿದ ರೀತಿಯಲ್ಲಿ ಅಯುಕ್ತವಾದ ಮಾತುಗಳನ್ನು ಭೀಮಸೇನನ ಮುಂದೆಯೇ ಆಡುವ ಸಾಹಸಮಾಡುತ್ತಾನೆ? ವೃಷ್ಣಿನಂದನನೇ! ನೀನು ಹೀಗೆ ಅನನುರೂಪವಾದ ಮಾತುಗಳನ್ನು ನನ್ನೊಡನೆ ಹೇಳಿದುದರಿಂದ ನನ್ನ ಬಲವೆಷ್ಟೆಂಬುದನ್ನು ವಿವರಿಸಿ ಹೇಳುತ್ತೇನೆ. ನನಗೆ ಸಮಾನರಾದ ಬಲಶಾಲಿಗಳು ಈ ವಿಶ್ವದಲ್ಲೇ ಇಲ್ಲವೆಂಬುದನ್ನೂ ಸಮರ್ಥಿಸುತ್ತೇನೆ.

**ಸರ್ವಥಾನಾರ್ಯಕರ್ಮೈತತ್ಪ್ರಶಂಸಾ ಸ್ವಯಮಾತ್ಮನಃ ।**
**ಅತಿವಾದಾಪವಿದ್ಧಸ್ತು ವಕ್ಷ್ಯಾಮಿ ಬಲಮಾತ್ಮನಃ ॥೬॥**

ದಸ್ಯುಗಳಾದವರು ಮಾತ್ರವೇ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳು ತ್ತಾರೆ. ಆರ್ಯನಾದವನೆಂದಿಗೂ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವು ದಿಲ್ಲ. ಆದರೆ ಇಲ್ಲ-ಸಲ್ಲದ ಮಾತುಗಳಿಂದ ನನ್ನನ್ನು ನೀನು ಬಾಧೆಪಡಿಸಿದೆ ಯಾದ ಕಾರಣ ನನ್ನ ಪರಾಕ್ರಮವೆಷ್ಟೆಂಬುದನ್ನು ಹೇಳಬಯಸುತ್ತೇನೆ. ಕೃಷ್ಣ! ಈ ಭೂತಲ ಮತ್ತು ಸ್ವರ್ಗಗಳ ಕಡೆಗೆ ನಿನ್ನೀ ದೃಷ್ಟಿಯನ್ನು ಹಾಯಿಸು. ಎಲ್ಲ ಪ್ರಜೆಗಳೂ ಈ ಭೂಮಿ ಮತ್ತು ಸ್ವರ್ಗಗಳಲ್ಲಿಯೇ ವಾಸಮಾಡುತ್ತಿದ್ದಾರೆ. ಭೂ-ಸ್ವರ್ಗಗಳೇ ಎಲ್ಲ ಪ್ರಾಣಿಗಳಿಗೂ ಮಾತಾ-ಪಿತೃರೂಪಗಳಾಗಿವೆ. ಇವುಗಳೆರಡೂ ಅಚಲವಾದುವುಗಳು.; ಅನಂತವಾದುವುಗಳು.; ಆಶ್ರಯ ರಹಿತವಾದ ಪ್ರತಿಷ್ಠಾನಗಳು. ಒಂದು ವೇಳೆ ಚರಾಚರಸಹಿತವಾದ ಭೂ-ಸ್ವರ್ಗಗಳು ಏಕಕಾಲದಲ್ಲಿ ಕೋಪಗೊಂಡು–ಎರಡು ಬಂಡೆಗಳು

ಪರಸ್ಪರ ಸೇರಿಕೊಳ್ಳುವಂತೆ–ಏಕತ್ರ ಮಿಲನವಾಗಿ ಹೋದ ಪಕ್ಷದಲ್ಲಿ ನಾನು ನನ್ನೀ ಭುಜಗಳಿಂದ ಚರಾಚರಸಹಿತವಾದ ಆ ಭೂ-ಸ್ವರ್ಗಗಳನ್ನು ಪ್ರತ್ಯೇಕಿಸ ಬಲ್ಲೆನು. ದೊಡ್ಡದಾದ ಪರಿಘಗಳೋಪಾದಿಯಲ್ಲಿರುವ ಈ ನನ್ನ ತೋಳುಗಳ ಮಧ್ಯಭಾಗವನ್ನಾದರೂ ನೋಡು, ಕೃಷ್ಣ! ಪರಿಘಾಯುಧಕ್ಕೆ ಸಮಾನ ವಾಗಿರುವ ಈ ತೋಳುಗಳ ನಡುವೆ ಸಿಕ್ಕಿಕೊಂಡನಂತರ ಬಿಡಿಸಿಕೊಳ್ಳುವಷ್ಟು ಸಾಮರ್ಥ್ಯವಿರುವ ಪುರುಷನನ್ನು ನಾನೀ ಪೃಥ್ವಿಯಲ್ಲಿ ಇದುವರೆಗೂ ಕಂಡಿಲ್ಲ. ಕೃಷ್ಣ! ಶ್ರೇಷ್ಠಪರ್ವತವಾದ ಹಿಮವಂತ, ಮಹಾಸಮುದ್ರ ಮತ್ತು ಬಲ ನೆಂಬ ರಾಕ್ಷಸನನ್ನು ಸಂಹರಿಸಿರುವ ವಜ್ರಪಾಣಿಯಾದ ಇಂದ್ರ–ಈ ಮೂವರಲ್ಲಿ ಯಾವನೊಬ್ಬನೂ ನನ್ನ ತೋಳುಗಳ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡವನನ್ನು ಸಂರಕ್ಷಿಸಲಾರನು. ಒಬ್ಬೊಬ್ಬರೇ ಏಕೆ? ಮೂವರೂ ಸೇರಿ ತಮ್ಮ ಬಲವೆಲ್ಲ ವನ್ನೂ ಕೇಂದ್ರೀಕರಿಸಿದರೂ ನನ್ನ ಬಾಹುಗಳಿಂದ ಬಂಧಿತನಾದವನನ್ನು ಬಿಡಿಸಿ ಕೊಳ್ಳುವ ಸಾಧ್ಯತೆಯಿಲ್ಲ, ತಿಳಿಯಿತೇ? ಕೃಷ್ಣ! ಪಾಂಡವರ ವಿಷಯದಲ್ಲಿ ದ್ರೋಹವನ್ನೆಸಗಲಿಚ್ಛಿಸಿರುವ (ಪಾಂಡವರನ್ನು ಕೊಲ್ಲಲಿಚ್ಛಿಸಿರುವ) ವಧಾರ್ಹ ರಾದ ಸರ್ವಕ್ಷತ್ರಿಯರನ್ನೂ ನಾನು ಭೂಮಿಯ ಮೇಲೆ ಕೆಡವಿ ಈ ನನ್ನ ಪಾದಗಳ ತಲದಿಂದ ನೆಗ್ಗಿಬಿಡುತ್ತೇನೆ. ಪೃಥ್ವಿಯ ರಾಜರು ಯಾವ ರೀತಿಯಲ್ಲಿ ನನ್ನಿಂದ ಪರಾಜಿತರಾದರು ಮತ್ತು ಹೇಗೆ ನಮಗೆ ಆಶ್ರಿತರಾದರು?–ಎಂಬ ವಿಷಯವು ನಿನಗೆ ತಿಳಿಯದೇ ಇಲ್ಲ. ಅಚ್ಯುತ! ನೀನು ನನ್ನ ಪರಾಕ್ರಮವೆಷ್ಟೆಂಬುದನ್ನು ಚೆನ್ನಾಗಿ ತಿಳಿದುಕೊಂಡಿರುವೆ. ಉದಯಿಸುವ ಸೂರ್ಯನ ಪ್ರಕಾಶದಂತೆ ಸ್ಪಷ್ಟವಾಗಿ ಕಾಣುತ್ತಿರುವ ನನ್ನ ಪರಾಕ್ರಮದ ಪರಾಕಾಷ್ಠೆಯು ನಿನಗೆ ತಿಳಿದೇ ಇಲ್ಲವಾದರೆ ಭಯಂಕರವಾದ ಯುದ್ಧಸಮಯದಲ್ಲಾದರೂ ನೀನು ನನ್ನ ಪರಾಕ್ರಮವೆಷ್ಟೆಂಬುದನ್ನು ಮನಗಾಣುವೆ.

**ಪರುಷೈರಾಕ್ಷಿಪಸಿ ಕಿಂ ವ್ರಣಂ ಪೂತಿಮಿವೋನ್ನಯನ್ ॥೧೪॥**

ನೋವನ್ನುಂಟುಮಾಡುತ್ತಿರುವ ವ್ರಣವೊಂದನ್ನು, ಕೀವನ್ನು ತೆಗೆಯುವ ಉದ್ದೇಶದಿಂದ ಚೆನ್ನಾಗಿ ಹಿಸುಕಿ ನೋವನ್ನು ಹೆಚ್ಚಿಸುವಂತೆ ಮೊದಲೇ ಸಂತಪ್ತನಾಗಿರುವ ನನ್ನನ್ನು ಕಠಿನವಾಕ್ಯಗಳಿಂದ ಪುನಃ ತಿರಸ್ಕರಿಸುವೆಯೇಕೆ? ಕಠಿನವಾಕ್ಯಗಳಿಂದ ನನ್ನ ಮನಸ್ಸನ್ನು ಮತ್ತೂ ನೋಯಿಸುವೆಯೇಕೆ? ನಾನೇನೋ ಈಗ ಯಥಾಮತಿ ನನ್ನ ಪರಾಕ್ರಮವನ್ನು ಬಣ್ಣಿಸಿ ಹೇಳಿದ್ದೇನೆ.

ಆದರೆ ನಾನು ಹೇಳಿಕೊಂಡಿರುವುದಕ್ಕಿಂತಲೂ ಅಧಿಕವಾದ ಪರಾಕ್ರಮವು ನನ್ನಲ್ಲಿರುವುದೆಂದು ಭಾವಿಸು. ಯಾವ ದಿನ ಸರ್ವವಿನಾಶಕರವಾದ, ಭಯಂಕರವಾದ ಯುದ್ಧವು ಪ್ರಾರಂಭವಾಗುವುದೋ ಅಂದು ನೀನು ನನ್ನ ಪರಾಕ್ರಮವೆಷ್ಟೆಂಬುದನ್ನು ಪ್ರತ್ಯಕ್ಷವಾಗಿಯೇ ನೋಡುವೆ, ಕೃಷ್ಣ! ಭಯಂಕರವಾದ ಯುದ್ಧವು ಪ್ರಾರಂಭವಾದನಂತರ ಪರಮಕ್ರುದ್ಧನಾದ ನಾನು–ಗಜಸೈನ್ಯವನ್ನೂ, ಅಶ್ವಸೈನ್ಯವನ್ನೂ, ರಥಸೈನ್ಯವನ್ನೂ, ಪದಾತಿಗಳನ್ನೂ ಧ್ವಂಸಗೊಳಿಸುತ್ತಾ ಕ್ಷತ್ರಿಯರ್ಷಭರನ್ನು ಸಂಹರಿಸುವುದನ್ನು ನೀನೇ ಕಾಣಲಿರುವೆ. ಶ್ರೇಷ್ಠರಾದ ಮತ್ತು ಮುಖ್ಯರಾದ ವೀರರನ್ನು ನಾನು ಕ್ಷಣ-ಕ್ಷಣಕ್ಕೂ ಸಂಹರಿಸುತ್ತಿರುವುದನ್ನೂ ನೀನೂ ಕಾಣುವೆ ಮತ್ತು ಲೋಕವೂ (ಜನವೂ) ಎವೆಯಿಕ್ಕದೇ ನೋಡುತ್ತಿರುತ್ತದೆ.

ನ ಮೇ ಸೀದನ್ತಿ ಮಜ್ಜಾನೋ ನ ಮಮೋದ್ವೇಪತೇ ಮನಃ ।
ಸರ್ವಲೋಕಾದಭಿಕ್ರುದ್ಧಾನ್ನ ಭಯಂ ವಿದ್ಯತೇ ಮಮ ॥೧೭॥

ಕಿಂ ತು ಸೌಹೃದಮೇವೈತತ್ಕೃಪಯಾ ಮಧುಸೂದನ ।
ಸರ್ವಾಂಸ್ತಿತಿಕ್ಷೇ ಸಂಕ್ಲೇಶಾನ್ಮಾ ಸ್ಮ ನೋ ಭರತಾನಶನ್ ॥೧೮॥

ಕೃಷ್ಣ! ನನ್ನಲ್ಲಿರುವ ಮಾಂಸಖಂಡಗಳಿನ್ನೂ ಶಿಥಿಲವಾಗಿಲ್ಲ. ನನ್ನ ಹೃದಯವೂ ಸಹ ಯಾವ ಕಾರಣದಿಂದಲೂ ಕಂಪಿಸುತ್ತಿಲ್ಲ. ಎಲ್ಲ ಲೋಕಗಳೂ ಕೋಪಗೊಂಡು ಏಕಮುಖವಾಗಿ ನನ್ನ ಮೇಲೆ ಬೀಳಲು ಬಂದರೂ ನಾನು ಭಯಪಡತಕ್ಕವನಲ್ಲ. ಮಧುಸೂದನ! ಕೇವಲ ದಯೆಯ ಕಾರಣದಿಂದ, ಅನುಕಂಪದ ಕಾರಣದಿಂದ, ಸೌಜನ್ಯದ ಕಾರಣದಿಂದ–ನಾನು ಎಲ್ಲ ಕ್ಲೇಶಗಳನ್ನೂ ನುಂಗಿಕೊಳ್ಳಲು ಸಿದ್ಧನಿದ್ದೇನೆ. ಭರತವಂಶೀಯರ ವಿನಾಶವಾಗಕೂಡದೆಂಬ ಕೃಪೆಯೇ ಈ ನನ್ನ ಸೌಹಾರ್ದಕ್ಕೆ ಕಾರಣವಾಗಿದೆ. ಕೃಷ್ಣ!”

ಌನೆಯ ಅಧ್ಯಾಯವು ಮುಗಿಯಿತು.

೭೭ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಭೀಮಸೇನನನ್ನು ಆಶ್ವಸಿಸಿದುದು

ಭೀಮಸೇನನ ಮಾತುಗಳನ್ನು ಕೇಳಿದನಂತರ ಶ್ರೀಕೃಷ್ಣನು ಹೇಳಿದನು :

"ಭೀಮಸೇನ! ನಿನ್ನ ಮನೋಗತವಾದ ಅಭಿಪ್ರಾಯವೇನೆಂಬುದನ್ನು ತಿಳಿಯುವ ಸಲುವಾಗಿಯೇ ನಿನ್ನೊಡನೆ ನನಗಿರುವ ಸಲಿಗೆಯ ಕಾರಣದಿಂದ ಈ ಮಾತುಗಳನ್ನಾಡಿದೆನೇ ಹೊರತು ನಿನ್ನನ್ನು ಆಕ್ಷೇಪಿಸಲೆಂದಾಗಲೀ, ನಿನ್ನ ಯುದ್ಧಪಾಂಡಿತ್ಯವನ್ನು ಪರೀಕ್ಷಿಸಬೇಕೆಂದಾಗಲೀ, ಕೋಪದಿಂದಾಗಲೀ ಅಥವಾ ನಿನಗೆ ಉಪದೇಶಮಾಡಬೇಕೆಂದಾಗಲೀ–ನಾನೀ ಮಾತುಗಳ ನ್ನಾಡಿರುವುದಿಲ್ಲ.

ಕೌಂತೇಯ! ನಿನ್ನ ಮಾಹಾತ್ಮ್ಯವನ್ನು ನಾನು ಪೂರ್ಣವಾಗಿ ತಿಳಿದಿರುತ್ತೇನೆ. ನಿನ್ನ ಬಲವೆಷ್ಟೆಂಬುದನ್ನೂ ನಾನು ತಿಳಿದಿರುತ್ತೇನೆ. ನೀನಿದು ವರೆಗೆ ಮಾಡಿರುವ ಅದ್ಭುತಕರ್ಮಗಳನ್ನೂ ನೋಡಿರುತ್ತೇನೆ. ಆದುದರಿಂದ ನಾನು ಖಂಡಿತವಾಗಿಯೂ ನಿನ್ನನ್ನು ಅವಹೇಳನಮಾಡಲು ಈ ಮಾತುಗಳ ನ್ನಾಡಿರುವುದಿಲ್ಲ. ನಿನ್ನಲ್ಲೆಷ್ಟು ಕಲ್ಯಾಣಗುಣಗಳಿವೆಯೆಂದು ನೀನು ಭಾವಿ ಸಿರುವೆಯೋ ಅದಕ್ಕೆ ಸಾವಿರದಷ್ಟು ಕಲ್ಯಾಣಗುಣಗಳು ನಿನ್ನಲ್ಲಿವೆಯೆಂದೂ ನಾನು ಭಾವಿಸುತ್ತೇನೆ. ಸರ್ವರಾಜರಿಂದಲೂ ಸಮ್ಮಾನಿತವಾದ ಯಾವ ವಂಶದಲ್ಲಿ ನೀನು ಜನ್ಮತಾಳಿರುವೆಯೋ–ಆ ಕುಲಪ್ರತಿಷ್ಠೆಗೆ ಅನುಗುಣವಾಗಿ, ನೀನು ನಿನ್ನ ಬಂಧುಗಳಿಂದಲೂ ಸುಹೃದರಿಂದಲೂ ಸಂಪೂಜಿತನಾಗಿರುವೆ. ಆದರೆ ಒಂದು ವಿಷಯವನ್ನು ಹೇಳಲಿಚ್ಛಿಸುತ್ತೇನೆ. ಬಹುಸಂದಿಗ್ಧವಾದ ಅಥವಾ ಬಹುಸೂಕ್ಷ್ಮವಾದ ಧರ್ಮವನ್ನು ಜಿಜ್ಞಾಸೆಮಾಡುವಾಗ ಜನರು ದೇವ ಮತ್ತು ಮಾನುಷಪರ್ಯಾಯಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. (ಯುದ್ಧಮಾಡುವುದು ಉಚಿತವೇ-ಅನುಚಿತವೇ? ಎಂದು ನಿಶ್ಚಯ ಮಾಡುವಾಗ–'ವಂಶವಿನಾಶಕರವಾದ ಯುದ್ಧವು ಬೇಡ ; ಶಾಂತಿಯಿಂದಿರಲು ಪ್ರಯತ್ನಿಸೋಣ'–ಎಂಬ ನಿಶ್ಚಯಕ್ಕೆ ಬರಲು ಯತ್ನಿಸುತ್ತಾರೆಯೇ ಹೊರತು ದೈವಸಂಕಲ್ಪವು ಹೇಗಿರುವುದೋ? ದೈವಸಂಕಲ್ಪದಲ್ಲಿ ಯುದ್ಧವಾಗ

ಬೇಕೆಂದಿದ್ದರೆ ಮನುಷ್ಯನಿಗದನ್ನು ತಪ್ಪಿಸಲು ಸಾಧ್ಯವೇ?–ಎಂಬುದನ್ನು ಯೋಚಿಸಹೋಗುವುದಿಲ್ಲ.)

ಪುರುಷನ ಅರ್ಥಸಿದ್ಧಿಗೆ ಈ ದೈವಬಲ ಅಥವಾ ದೈವಸಂಕಲ್ಪವೇ ಹೆಚ್ಚು ಕಾರಣವಾಗುತ್ತದೆ. ದೈವಬಲವಿಲ್ಲದ ಕಾರ್ಯವೇ ವಿನಾಶಕ್ಕೂ ಹಾದಿಯಾಗುತ್ತದೆ. ಪೌರುಷದಿಂದಲೇ ಅರ್ಥಸಿದ್ಧಿಯಾಗುವುದೆಂಬುದು ಸಂದೇಹಾಸ್ಪದ. (ಪೌರುಷದ ಜೊತೆಗೆ ದೈವಬಲವಿದ್ದರೆ ಮಾತ್ರ ಅರ್ಥಸಿದ್ಧಿಯಾಗುವುದೇ ಹೊರತು ಕೇವಲ ಪೌರುಷದಿಂದ ಅರ್ಥಸಿದ್ಧಿಯಾಗುವುದಿಲ್ಲ. ಆದುದರಿಂದ ಯಾವುದೇ ಕಾರ್ಯಕ್ಕೆ ಪ್ರಯತ್ನಿಸಬೇಕಾದರೂ ಯಾವುದೇ ನಿರ್ಧಾರವನ್ನು ಕೈಗೊಳ್ಳಬೇಕಾದರೂ ದೈವದ ಬಲವೆಷ್ಟಿದೆಯೆಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇದನ್ನು ಗಣನೆಗೆ ತೆಗೆದುಕೊಳ್ಳದಿದ್ದರೆ ಮಾಡಿದ ನಿರ್ಧಾರವು ವ್ಯರ್ಥವಾಗುತ್ತದೆ.) 'ಇದು ಒಳ್ಳೆಯದು ; ಇದು ಕೆಟ್ಟುದು'– ಎಂದು ಬಹುಕಾಲ ತರ್ಕ-ವಿತರ್ಕಗಳಿಂದ ಸಿದ್ಧಮಾಡಿದ ವಿದ್ವಾಂಸರ ನಿರ್ಣಯ ಅಥವಾ ನಿರ್ದೇಶನವೂ ಅನೇಕ ಸಮಯಗಳಲ್ಲಿ–ಕ್ಷಣ-ಕ್ಷಣಕ್ಕೂ ದಿಕ್ಕು ಬದಲಾಯಿಸಿ ಬೀಸುವ ಚಂಡಮಾರುತದಂತೆ– ವಿಪರ್ಯಾಸವಾಗುತ್ತದೆ. (ವಸಿಷ್ಠರು ರಾಮನ ಪಟ್ಟಾಭಿಷೇಕಕ್ಕಾಗಿ ನಿರ್ದುಷ್ಟವಾದ ಲಗ್ನವನ್ನೇ ಇಟ್ಟುಕೊಟ್ಟರು. ಆದರೆ ಪರ್ಯವಸಾನವು ರಾಮನ ಅರಣ್ಯವಾಸದಲ್ಲಾಯಿತು.) ಆದುದರಿಂದ, ಭೀಮಸೇನ! ಕೇವಲ ಮನುಷ್ಯಸಂಕಲ್ಪವೂ ಮತ್ತು ಕೇವಲ ಪೌರುಷವೂ ಕೆಲಸಕ್ಕೆ ಬಾರದುವುಗಳಾಗುತ್ತವೆ.

**ಸುಮನ್ತ್ರಿತಂ ಸುನೀತಂ ಚ ನ್ಯಾಯತಶ್ಚೋಪಪಾದಿತಮ್ ।**
**ಕೃತಂ ಮಾನುಷ್ಯಕಂ ಕರ್ಮ ದೈವೇನಾಪಿ ವಿರುಧ್ಯತೇ ॥೮॥**

ತಜ್ಞರೊಡನೆ ಸಮಾಲೋಚಿಸಿರುತ್ತಾನೆ ; ವಿವೇಕಪೂರ್ಣವಾಗಿ ಮಾಡುತ್ತಾನೆ ; ಮಾಡುವ ಕಾರ್ಯವೂ ನ್ಯಾಯಸಮ್ಮತವಾಗಿಯೇ ಇರುತ್ತದೆ. ಇಂತಹ ವಿವೇಚನಾಪೂರ್ಣವಾದ ಮನುಷ್ಯನ ಕಾರ್ಯಕ್ಕೆ ದೈವದಿಂದ ವಿಘ್ನವುಂಟಾಗುತ್ತದೆ. (ಇಷ್ಟು ವಿವೇಚಿಸಿ ಕಾರ್ಯಮಾಡಿದರೂ ಫಲ ಸಿಗುವುದಿಲ್ಲ. ಇದು ದೈವದ ಕೈವಾಡ. ಆದುದರಿಂದಲೇ ಮಾನವನು ತಾನು ಮಾಡುವುದನ್ನು ಚೊಕ್ಕವಾಗಿ ಶ್ರದ್ಧೆಯಿಂದ ವಿವೇಚನೆಯಿಂದ

ಮಾಡಿದಮಾತ್ರದಿಂದ ಒಂದು ಕಾರ್ಯದ ಸಾಧನೆಯಾಗುವುದಿಲ್ಲ. ಪುರುಷಪ್ರಯತ್ನ ಮತ್ತು ದೈವಬಲ ಎರಡೂ ಕಾರ್ಯಸಿದ್ಧಿಗೆ ಬೇಕಾಗುತ್ತವೆ.)

**ದೈವಮಪ್ಯಕೃತಂ ಕರ್ಮ ಪೌರುಷೇಣ ವಿಹನ್ಯತೇ ।**
**ಶೀತಮುಷ್ಣಂ ತಥಾ ವರ್ಷಂ ಕ್ಷುತ್ಪಿಪಾಸೇ ಚ ಭಾರತ ॥೯॥**

ದೈವಕೃತವಾದ ಕಾರ್ಯವನ್ನೂ ಪುರುಷಪ್ರಯತ್ನದಿಂದ ನಿವಾರಿಸಿ ಕೊಳ್ಳಲು ಸಾಧ್ಯವೆಂಬುದಕ್ಕೆ ಸಾಧಾರಣವಾಗಿ ಈ ಉದಾಹರಣೆಗಳನ್ನು ಕೊಡಬಹುದಾಗಿದೆ–ಶೀತವು ದೈವಕೃತವಾದುದು ; ಇದನ್ನು ನಾವು ವಸ್ತ್ರದ ಆಚ್ಛಾದನೆಯಿಂದ ನಿವಾರಿಸಿಕೊಳ್ಳಬಹುದು. ಉಷ್ಣವು ದೈವಕೃತವಾದುದು ; ಇದನ್ನು ನಾವು ಬೀಸಣಿಗೆಯಿಂದ ನಿವಾರಿಸಿಕೊಳ್ಳಬಹುದು. ಮಳೆಯು ದೈವಕೃತವಾದುದು ; ಇದನ್ನು ನಾವು ಛತ್ರಿಯಿಂದ ನಿವಾರಿಸಿಕೊಳ್ಳಬಹುದು. ಹಸಿವು-ಬಾಯಾರಿಕೆಗಳು ದೈವಕೃತವಾದುವುಗಳು ; ಇವುಗಳನ್ನು ನಾವು ಅನ್ನವನ್ನು ತಿನ್ನುವುದರಿಂದಲೂ, ನೀರನ್ನು ಕುಡಿಯುವುದರಿಂದಲೂ ನಿವಾರಿಸಿಕೊಳ್ಳಬಹುದು. ದೈವದ ಸಂಬಂಧವೇ ಇಲ್ಲದೇ ಮನುಷ್ಯನು ಜನ್ಮಾಂತರಗಳಲ್ಲಿ ಮಾಡಿದ ಕರ್ಮಗಳ ದುಷ್ಫಫಲವನ್ನು ಈ ಜನ್ಮದಲ್ಲಿ ಪ್ರಾಯಶ್ಚಿತ್ತರೂಪವಾದ ಕರ್ಮಗಳಿಂದ ಕಳೆದುಕೊಳ್ಳಬಹುದಾಗಿದೆ. ಇದಕ್ಕೆ ಅನೇಕವಾದ ಉದಾಹರಣೆಗಳೂ ಇವೆ. (ಶ್ರುತಿ-ಸ್ಮೃತಿಗಳು ಇದನ್ನೇ ಪ್ರತಿಪಾದಿಸಿವೆ. 'ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ। ಧರ್ಮೇಣ ಪಾಪಮಪನುದತಿ । ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ' ಇತ್ಯಾದಿ ವಾಕ್ಯಗಳು ಪೌರುಷದಿಂದ ಅಥವಾ ಮನುಷ್ಯನ ಸಾಧನೆಯಿಂದ ಸಾಧಿಸಬಹುದಾದುವುಗಳ ವಿಷಯವಾಗಿ ಹೇಳುತ್ತವೆ. ಮನುಷ್ಯನು ತನ್ನ ಅನೇಕ ಉಪದ್ರವಗಳನ್ನು ಸ್ವಕೃತ್ಯುಕ್ತಕರ್ಮಗಳ ಮೂಲಕವಾಗಿ ಕಳೆದುಕೊಳ್ಳಬಹುದಾಗಿದೆ.) ಈ ಕಾರಣಗಳಿಂದಾಗಿ ಮಾನವನು :

**ಲೋಕಸ್ಯ ನಾನ್ಯತೋ ವೃತ್ತಿಃ ಪಾಣ್ಡವಾನ್ಯತ್ರ ಕರ್ಮಣಃ ।**
**ಏವಂ ಬುದ್ಧಿಃ ಪ್ರವರ್ತೇತ ಫಲಂ ಸ್ಯಾದುಭಯಾನ್ವಯೇ ॥೧೧॥**

ಪಾಂಡವ! ಈ ಲೋಕದಲ್ಲಿ ಪುರುಷಪ್ರಯತ್ನವನ್ನು ಬಿಟ್ಟು ಬೇರೆ

ಯಾವ ರೀತಿಯಿಂದಲೂ ಜೀವನನಿರ್ವಾಹವು ಸಾಧ್ಯವಿಲ್ಲವೆಂದು ಬುದ್ಧಿಪೂರ್ವಕವಾಗಿ ನಿರ್ಧರಿಸಿ ಕಾರ್ಯಪ್ರವೃತ್ತನಾಗಬೇಕು. ಆದರೆ ಫಲವು ಮಾತ್ರ ಪುರುಷಪ್ರಯತ್ನ ಮತ್ತು ದೈವಾನುಗ್ರಹ–ಇವೆರಡರ ಸಂಬಂಧದಿಂದ ಪ್ರಾಪ್ತವಾಗುತ್ತದೆ.

**ಯ ಏವಂ ಕೃತಬುದ್ಧಿಃ ಸ ಕರ್ಮಸ್ವೇವ ಪ್ರವರ್ತತೇ ।**
**ನಾಸಿದ್ಧೌ ವ್ಯಥತೇ ತಸ್ಯ ನ ಸಿದ್ಧೌ ಹರ್ಷಮಶ್ನುತೇ ॥೧೨॥**

ಯಾವನು ತನ್ನ ಮನಸ್ಸಿನಲ್ಲಿ 'ಕೆಲಸಮಾಡುವ ಕರ್ತವ್ಯ ನನ್ನದು ; ಫಲವು ದೈವಾಯತ್ತವಾದುದು'–ಹೀಗೆಂಬುದಾಗಿ ನಿಶ್ಚಯಿಸಿಕೊಂಡು ಕಾರ್ಯಪ್ರವೃತ್ತನಾಗುತ್ತಾನೆಯೋ–ಅಂತಹವನು ಕಾರ್ಯವು ಸಿದ್ಧಿಸದಿದ್ದರೆ (ಕೆಲಸಕ್ಕೆ ಅನುಗುಣವಾದ ಫಲವು ಸಿಕ್ಕದಿದ್ದರೆ) ವ್ಯಥೆಪಡುವುದಿಲ್ಲ. ಕಾರ್ಯವು ಸಿದ್ಧಿಸಿದರೆ (ಕೆಲಸಕ್ಕೆ ತಕ್ಕುದಾದ ಪ್ರತಿಫಲವು ಸಿಕ್ಕಿದರೆ) ಸಂತೋಷಪಡುವುದೂ ಇಲ್ಲ. ಭೀಮಸೇನ! ಯುದ್ಧದ ವಿಷಯದಲ್ಲಿಯೂ ನಾನು ಈ ನನ್ನ ನಿಶ್ಚಯವನ್ನೇ ಹೇಳಲಿಚ್ಛಿಸುತ್ತೇನೆ.

**ನೈಕಾನ್ತಸಿದ್ಧಿರ್ವಕ್ತವ್ಯಾ ಶತ್ರುಭಿಃ ಸಹ ಸಂಯುಗೇ ॥೧೩॥**

ಶತ್ರುಗಳೊಡನೆ ಯುದ್ಧಮಾಡುವಾಗ ವಿಜಯವು ಲಭಿಸಿಯೇ ತೀರುವುದೆಂದು ಯಾವ ಕಾರಣದಿಂದಲೂ ಹೇಳುವ ಸಾಧ್ಯತೆಯಿಲ್ಲ. (ಮಾಡಿದ ಕರ್ಮಕ್ಕೆ ಯುಕ್ತವಾದ ಫಲವನ್ನು ಪಡೆಯಲು ದೈವವನ್ನೇ ಆಶ್ರಯಿಸಬೇಕು.)

ದೈವದಿಂದ ಪ್ರಾಪ್ತವಾಗುವ ವಿಘ್ನವನ್ನು ನಿವಾರಿಸಿಕೊಳ್ಳಲು ಸಾಧ್ಯವಾಗಲಾರದೆಂಬ ಅಭಿಪ್ರಾಯವಲ್ಲ. ದೈವಿಕವಾದ ವಿಘ್ನವನ್ನೂ ಪುರುಷಪ್ರಯತ್ನದಿಂದ ನಿವಾರಿಸಿಕೊಳ್ಳುವ ಸಾಧ್ಯತೆಯಿದೆ.

**ನಾತಿಪ್ರಹೀಣರಶ್ಮಿಃ ಸ್ಯಾತ್ತಥಾ ಭಾವವಿಪರ್ಯಯೇ ।**
**ವಿಷಾದಮರ್ಚ್ಛೇದ್ಗ್ಲಾನಿಂ ವಾಪ್ಯೇತಮರ್ಥಂ ಬ್ರವೀಮಿ ತೇ ॥೧೪॥**

ಅದೃಷ್ಟವು ವ್ಯತ್ಯಸ್ತವಾದಾಗ ತೇಜೋಹೀನನಾಗಕೂಡದು. ವಿಷಾದಪಡಬಾರದು. ಮನಸ್ಸನ್ನು ದುರ್ಬಲಗೊಳಿಸಬಾರದು. ಇದನ್ನು ಒತ್ತಿ ಹೇಳುವ ಕಾರಣದಿಂದಲೇ ನಾನು ನಿನ್ನೊಡನೆ ಈ ಮಾತುಗಳನ್ನಾಡುತ್ತಿದ್ದೇನೆ.

ಪಾಂಡವ! ನಾಳೆಯೇ ನಾನು ಧೃತರಾಷ್ಟ್ರನ ಸಮೀಪಕ್ಕೆ ಹೋಗಿ ನಿಮ್ಮ ಅರ್ಥಸಿದ್ಧಿಯನ್ನು ಸ್ವಲ್ಪವೂ ಕಡೆಗಾಣಿಸದೇ (ನಿಮ್ಮ ಅರ್ಥಸಿದ್ಧಿಯ ಸಲುವಾಗಿಯೇ) ನಿಮ್ಮಿಬ್ಬರ ನಡುವೆ ಶಾಂತಿಯೇರ್ಪಡುವಂತೆ ಪ್ರಯತ್ನಿಸುತ್ತೇನೆ.

**ಶಮಂ ಚೇತ್ತೇ ಕರಿಷ್ಯನ್ತಿ ತತೋಽನನ್ತಂ ಯಶೋ ಮಮ ।**
**ಭವತಾಂ ಚ ಕೃತಃ ಕಾಮಸ್ತೇಷಾಂ ಚ ಶ್ರೇಯ ಉತ್ತಮಮ್ ॥೬॥**

ಅವರೇನಾದರೂ ನಿಮ್ಮೊಡನೆ ಶಾಂತಿಯಿಂದಿರಲು ಇಚ್ಛಿಸಿ ಸಂಧಿಮಾಡಿಕೊಳ್ಳುವುದಾದರೆ–ನಿಮ್ಮಿಬ್ಬರಲ್ಲಿ ಮೈತ್ರಿಯನ್ನು ಸ್ಥಾಪಿಸಿದುದಕ್ಕಾಗಿ ನನಗೆ ಶಾಶ್ವತವಾದ ಯಶಸ್ಸು ಲಭಿಸುತ್ತದೆ. ನಿಮ್ಮ ಮನೋರಥವೂ ಪೂರ್ಣವಾದಂತಾಗುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಈ ಶಾಂತಿಸಂಧಾನದಿಂದ ಕೌರವರಿಗೂ ಉತ್ತಮವಾದ ಶ್ರೇಯಸ್ಸು ಲಭಿಸುತ್ತದೆ.

**ತೇ ಚೇದಭಿನಿವೇಕ್ಷ್ಯನ್ತೇ ನಾಭ್ಯುಪೈಷ್ಯನ್ತಿ ಮೇ ವಚಃ ।**
**ಕುರವೋ ಯುದ್ಧಮೇವಾತ್ರ ಘೋರಂ ಕರ್ಮ ಭವಿಷ್ಯತಿ ॥೧೭॥**

ಒಂದು ವೇಳೆ ಕುರುಗಳೇನಾದರೂ ನನ್ನ ಮಾತನ್ನು ಕೇಳದೇ ತಮ್ಮ ಅಭಿಪ್ರಾಯವನ್ನೇ ಸ್ಥಿರೀಕರಿಸುವುದಾದರೆ (ತಮ್ಮ ಹಠವನ್ನೇ ಮುಂದುವರಿಸುವುದಾದರೆ) ಯುದ್ಧವೇ ಮುಂದಿನ ಕಾರ್ಯವಾಗಿರುತ್ತದೆ. ಆದರೆ ಅದು ಬಹುಘೋರಕರ್ಮವಾಗಿ ಪರಿಣಮಿಸುತ್ತದೆ. ಆ ಯುದ್ಧದ ಸಂಪೂರ್ಣ ಭಾರವೂ ನಿನ್ನ ಮೇಲೆಯೇ ಬಿದ್ದಿರುತ್ತದೆ. (ಯುದ್ಧದಲ್ಲಿ ನೀನು ರಥಕ್ಕೆ ಸಮಾನನಾಗಿರುವೆ, ಭೀಮಸೇನ!) ಅರ್ಜುನನೂ ಸ್ವಲ್ಪಭಾಗ ಭಾರವನ್ನು ಹೊರಬೇಕಾಗಬಹುದು. (ಅರ್ಜುನನು ಅಶ್ವಸಮಾನನಾಗಿದ್ದಾನೆ.) ನೀವಿಬ್ಬರೂ ಸೇರಿ ಸೇನಾಸಮೂಹದ ರಕ್ಷಣೆಯ ಹೊಣೆಗಾರಿಕೆಯನ್ನೂ ವಹಿಸಿಕೊಳ್ಳಬೇಕಾಗುವುದು.

**ಅಹಂ ಹಿ ಯನ್ತಾ ಬೀಭತ್ಸೋರ್ಭವಿತಾ ಸಂಯುಗೇ ಸತಿ ।**
**ಧನಂಜಯಸ್ಯೈಷ ಕಾಮೋ ನ ಹಿ ಯುದ್ಧಂ ನ ಕಾಮಯೇ ॥೧೮॥**

ಒಂದು ವೇಳೆ ಯುದ್ಧವೇ ನಡೆಯುವುದಾದ ಪಕ್ಷದಲ್ಲಿ ನಾನು ಧನಂಜಯನ ಸಾರಥಿಯಾಗಿರುತ್ತೇನೆ. ಅರ್ಜುನನ ಇಚ್ಛೆಯೂ ಇದೇ

ಆಗಿರುವುದು. ಯುದ್ಧಮಾಡಕೂಡದೆಂಬ ಅಭಿಪ್ರಾಯವು ನನಗಿರುವುದಿಲ್ಲ. ನಾನೂ ಯುದ್ಧಕಾಮನೇ ಆಗಿದ್ದರೂ ಧನಂಜಯನ ಪ್ರೀತ್ಯರ್ಥವಾಗಿ ಅವನ ಸಾರಥ್ಯವನ್ನು ಮಾಡುತ್ತೇನೆ. ಸಂಧಾನದ ವಿಷಯವಾಗಿ ನಿನ್ನ ಅಭಿಪ್ರಾಯ ವನ್ನು ಕೇಳಲಾಗಿ ನೀನು ಕೌರವರೊಡನೆ ಶಾಂತಿಯುತವಾದ ಸಹಬಾಳ್ವೆಗೆ ಹೆಚ್ಚು ಮಹತ್ತ್ವವನ್ನು ಕೊಟ್ಟು ನಿರ್ವೀರ್ಯದ ಮಾತನ್ನು ಆಡಿದುದರಿಂದ ನಿನ್ನ ಬುದ್ಧಿಯನ್ನು ಶಂಕಿಸಿ (ನಿನ್ನ ಬುದ್ಧಿಯು ದುರ್ಬಲವಾಗಿಬಿಟ್ಟಿರುವುದೋ ಎಂದು ಸಂಶಯಿಸಿ) ನನ್ನೀ ಮಾತುಗಳಿಂದ ನಿನ್ನ ಪರಾಕ್ರಮವನ್ನು ಉದ್ದೀಪನಗೊಳಿಸಿದೆನು.”

೭೭ನೆಯ ಅಧ್ಯಾಯವು ಮುಗಿಯಿತು.

೭೮ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಅರ್ಜುನನ ಉತ್ತರ

ಭೀಮನೊಡನೆ ಮಾತುಕತೆಗಳಾದನಂತರದಲ್ಲಿ ಶ್ರೀಕೃಷ್ಣನು ಅರ್ಜುನನ ಅಭಿಪ್ರಾಯವನ್ನು ಕೇಳಿದನು. ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೇಳಿದನು : “ಕೃಷ್ಣ! ನಾನೇನು ಹೇಳಬೇಕೆಂದಿದ್ದೆನೋ ಅವೆಲ್ಲವನ್ನೂ ಯುಧಿಷ್ಠಿರನೇ ಹೇಳಿಬಿಟ್ಟಿದ್ದಾನೆ. ನಾನು ಹೇಳಬೇಕಾದುದೇನೂ ಇಲ್ಲ. ಆದರೆ ನೀನು ಹೇಳಿದ ಮಾತುಗಳನ್ನು ಕೇಳಿದನಂತರ ನನಗೆ ಹೀಗೆ ಭಾಸವಾಗುತ್ತಿದೆ. ಧೃತರಾಷ್ಟ್ರನಿಗಿರುವ ಲೋಭದ ಕಾರಣದಿಂದಲೋ, ಇಂದು ನಮಗಿರುವ ದೈನ್ಯದ ಕಾರಣದಿಂದಲೋ–ನಮ್ಮಿಬ್ಬರಲ್ಲಿ ಸಂಧಿಯೇರ್ಪಡುವುದು ಸುಕರವಲ್ಲವೆಂದು ನೀನು ಭಾವಿಸಿರುವಂತಿದೆ. ಅಥವಾ ಪುರುಷನ ಪರಾಕ್ರಮವು ನಿಷ್ಫಲವಾದುದೆಂದೂ, ಪೂರ್ವಜನ್ಮದ ಕರ್ಮಫಲಾನುಸಾರ ವಾಗಿಯೇ ಎಲ್ಲವೂ ನಡೆಯುವುದೆಂದೂ, ಕೇವಲ ಪೌರುಷದಿಂದಲೇ ಎಲ್ಲ ವನ್ನೂ ಸಾಧಿಸಲು ಸಾಧ್ಯವಾಗಲಾರದೆಂದೂ–ನೀನು ಭಾವಿಸಿರುವಂತಿದೆ. ವಾಸುದೇವ! ಈ ವಿಷಯದಲ್ಲಿ ನೀನು ಹೇಳಿದ ಮಾತುಗಳು ಯಥಾರ್ಥ ವಾದುವುಗಳೇ ಆಗಿವೆ. ಪೂರ್ವಜನ್ಮದ ಕರ್ಮಫಲಾನುಸಾರವಾಗಿಯೇ ಎಲ್ಲವೂ ನಡೆಯುತ್ತವೆಯೆಂಬುದು ನಿಶ್ಚಯ. ಆದರೆ ಎಲ್ಲ ಸಮಯ

ಗಳಲ್ಲಿಯೂ ಇದೇ ರೀತಿಯಲ್ಲಿ ನಡೆಯುವುದೆಂದು ಹೇಳುವುದಕ್ಕಾಗುವುದಿಲ್ಲ. **'ಅಸಾಧ್ಯಮಪಿ ಕಿಂಚನ'** – ಯಾವ ಕಾರ್ಯವೇ ಆಗಲೀ ಅಸಾಧ್ಯವಾದುದೆಂದು ಹೇಳುವ ಕಾರಣವಿಲ್ಲ. (ಪೂರ್ವಜನ್ಮದ ಕರ್ಮಫಲವನ್ನೂ ನಮ್ಮ ಸಾಧನೆಗಳಿಂದ ಬದಲಾಯಿಸಬಹುದಾಗಿದೆ.)

ಕೃಷ್ಣ! ನಮ್ಮ ಈ ಕಷ್ಟವು ನಮ್ಮನ್ನು ಕೊನೆಗಾಣಿಸುವ ಕಷ್ಟವೆಂದು ಭಾವಿಸಿರುವೆಯೇನು? ಯಾರಿಗೆ ಜನ್ಮಾಂತರದಿಂದ ಪ್ರಾಪ್ತವಾದ ಫಲವಿರುವುದಿಲ್ಲವೋ–ಅಂತಹವರಿಗೆ ಅವರು ವ್ಯವಸ್ಥಿತವಾಗಿ ಮಾಡುವ ಕಾರ್ಯಗಳೇ ಫಲದಾಯಕಗಳಾಗುತ್ತವೆ.

**(ಕುರ್ವನ್ತಿ ತೇಷಾಂ ಕರ್ಮಾಣಿ ಯೇಷಾಂ ನಾಸ್ತಿ ಫಲೋದಯಃ ।**

ಎಂದು ಪಾಠವಿದೆ. **ಯೇಷಾಂ ಫಲೋದಯಃ ನಾಸ್ತಿ ತೇಷಾಂ ಕರ್ಮಾಣಿ ಕುರ್ವನ್ತಿ** – ಯಾರಿಗೆ ಫಲೋದಯ ಅಥವಾ ಅದೃಷ್ಟವಿಲ್ಲವೋ ಅಂತಹವರ ಕರ್ಮಗಳು **ಕುರ್ವನ್ತಿ** = ಮಾಡುತ್ತವೆ. ಏನು ಮಾಡುತ್ತವೆ? ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಅದಕ್ಕಾಗಿ ವ್ಯಾಖ್ಯಾನಕಾರರು **ಕುರ್ವನ್ತಿ** ಎಂಬುದು ಆರ್ಷಪ್ರಯೋಗವೆಂದೂ **ಕೃಣ್ವನ್ತಿ** ಎಂಬ ಪದವಿರಬೇಕಾಗಿದ್ದಿತೆಂದೂ ಹೇಳಿದ್ದಾರೆ. **ಕೃಣ್ವನ್ತಿ** ಎಂದರೆ **ಕೃ-ಹಿಂಸಾಯಾಂ** ಎಂಬ ಧಾತ್ವರ್ಥದ ಪ್ರಕಾರ **ಹಿಂಸನ್ತಿ** - ಹಿಂಸಿಸುತ್ತವೆ. ಅರ್ಥಾತ್ ಅವರ ಕಾರ್ಯಗಳೆಲ್ಲವೂ ವಿನಾಶಹೊಂದುತ್ತವೆ ಎಂದು ಅರ್ಥವಾಗುತ್ತದೆ. ಮತ್ತೊಬ್ಬ ವಿದ್ವಾಂಸರು ಹೀಗೆ ಅರ್ಥಮಾಡಿದ್ದಾರೆ : **ಕುರ್ವನ್ತಿ ತೇಷಾಂ ಕರ್ಮಾಣಿ ಯೇಷಾಂ ನಾಸ್ತಿ ಫಲೋದಯಃ ।** 1) **ಯೇಷಾಂ ಫಲೋದಯಃ ನಾಸ್ತಿ ತೇಷಾಂ ಕರ್ಮಾಣಿ ಫಲೋದಯಂ ಕುರ್ವನ್ತಿ** ಎಂದು ಅನ್ವಯಮಾಡಬಹುದು. 'ಕಣ್ಣುಕಾಣದಿದ್ದರೆ ಚಿಕಿತ್ಸೆಯಿಂದ ಗುಣಪಡಿಸಿಕೊಳ್ಳುವುದು.; ಮಳೆ ಬರದಿದ್ದರೆ ಪರ್ಜನ್ಯಜಪಾದಿಗಳಿಂದ ಮಳೆಬರುವಂತೆ ಮಾಡಿಕೊಳ್ಳುವುದು.' 2) **'ಯೇಷಾಂ ಫಲೋದಯೋ ನಾಸ್ತಿ ತೇಷಾಮಪಿ ಸಂಬನ್ಧೀನಿ ಕರ್ಮಾಣಿ (ತತ್ಸಂಬನ್ಧಿನಃ) ಕುರ್ವನ್ತಿ'** ಎಂದೂ ಅನ್ವಯಿಸಬಹುದು. ದೈವಯೋಗವು ತಿಳಿಯದುದರಿಂದ ವಾಸ್ತವವಾಗಿ ದೈವಾನುಕೂಲ್ಯವಿಲ್ಲದಿದ್ದರೂ ಅವರಿಗಾಗಿ ಮಾಡಬೇಕಾದ

ಕರ್ಮಗಳನ್ನು ಅವರ ಸಂಬಂಧಿಗಳು ಮಾಡುತ್ತಾರೆ. ಒಬ್ಬನು ರೋಗಪೀಡಿತನಾದರೆ ವೈದ್ಯರು ಸಂಶಯವನ್ನು ವ್ಯಕ್ತಪಡಿಸಿದರೂ, ಜ್ಯೋತಿಷಿಗಳು ಆಯುರ್ದಾಯವಿಲ್ಲವೆಂದರೂ ಮಾಡಿಸಬೇಕಾದ ಚಿಕಿತ್ಸೆಯನ್ನೂ, ಜಪಾದಿಗಳನ್ನೂ ಅವನ ಬಂಧುಗಳು ಮಾಡಿಸಿಯೇ ಮಾಡಿಸುತ್ತಾರೆ.)

ಅರ್ಜುನನು ಮುಂದುವರಿದು ಹೇಳುತ್ತಾನೆ :

"ಸಮೀಚೀನವಾಗಿ ಯಾವ ಕಾರ್ಯವು ಮಾಡಲ್ಪಡುತ್ತದೆಯೋ–ಆ ಕಾರ್ಯವು ನಿಶ್ಚಯವಾಗಿಯೂ ಫಲದಾಯಕವಾಗುತ್ತದೆ. ಆದುದರಿಂದ ನಮ್ಮ ಶತ್ರುಗಳೊಡನೆ ಸಂಧಿಯು ಏರ್ಪಡುವ ರೀತಿಯಲ್ಲಿ ನೀನಲ್ಲಿ ವರ್ತಿಸು, ಕೃಷ್ಣ! ಪ್ರಜಾಪತಿಯು ಯಾವ ರೀತಿಯಲ್ಲಿ ದೇವತೆಗಳಿಗೂ ಮತ್ತು ಅಸುರರಿಗೂ ಮಿತ್ರನಾಗಿರುವನೋ–ಅದೇ ರೀತಿಯಲ್ಲಿ ನೀನು ನಮಗೂ ಮತ್ತು ಕೌರವರಿಗೂ ಪ್ರಧಾನಭೂತನಾದ ಮಿತ್ರನಾಗಿರುವೆ.

ಕೃಷ್ಣ! ನೀನೀ ಸಮಯದಲ್ಲಿ ಕುರು-ಪಾಂಡವರಿಬ್ಬರಲ್ಲಿ ಯಾರೊಬ್ಬರಿಗೂ ದುಃಖವಾಗದ ರೀತಿಯಲ್ಲಿ ಪ್ರಯತ್ನಿಸು. ಕೌರವ-ಪಾಂಡವರು ನೀರೋಗ ದೃಢಕಾಯರಾಗಿರಬೇಕು. ಕ್ಷೇಮದಿಂದಿರಬೇಕು. ಎರಡು ಪಕ್ಷಗಳಿಗೂ ಹಿತಕರವಾದ ಈ ಕಾರ್ಯಸಿದ್ಧಿಯು ನಿನಗೆ ದುಷ್ಕರವಲ್ಲವೆಂದು ನಾನು ಭಾವಿಸುತ್ತೇನೆ. ಹೀಗೆ ಮಾಡುವುದೇ ನಿನ್ನ ಕಾರ್ಯದ ಔಚಿತ್ಯವಾಗಿದೆ. ಇದು ನಿನ್ನ ಅವಶ್ಯವಾದ ಕರ್ತವ್ಯವೂ ಆಗಿದೆ. ನೀನಲ್ಲಿಗೆ ಪ್ರಯಾಣಮಾಡುವುದರಿಂದಲೇ ನೀನೀ ಕಾರ್ಯವನ್ನು ಸಾಧಿಸುವೆ. ಜನಾರ್ದನ! ಈ ವಿಶ್ವಾಸವು ನನಗಿದೆ. ದುರಾತ್ಮನಾದ ದುರ್ಯೋಧನನ ವಿಷಯದಲ್ಲಿ ನೀನು ಮತ್ತೇನನ್ನಾದರೂ ಮಾಡುವ ಇಚ್ಛೆಯುಳ್ಳವನಾಗಿದ್ದರೆ ಈ ಒಂದು ಸಂಧಿಕಾರ್ಯದ ಮೂಲಕವಾಗಿಯೇ ಆ ನಿನ್ನ ಸಕಲೇಚ್ಛೆಗಳೂ ನಡೆದೇ ಹೋಗುತ್ತವೆ. ಮಾಧವ! ಕೌರವರೊಡನೆ ನಮ್ಮ ಸಂಧಿಯಾದರೂ ಆಗಲೀ ; ಆಗದೇ ಹೋದರೂ ಹೋಗಲಿ ಅಥವಾ ನಿನ್ನ ಇಚ್ಛಾನುಸಾರವಾಗಿ ಯಾವ ವಿಧವಾದ ಸಂಧಿ-ವಿಗ್ರಹಗಳಾದರೂ ನಡೆಯಲಿ. ನೀನು ಸಂಪೂರ್ಣವಾಗಿ ವಿಚಾರಿಸಿ ಅಥವಾ ವಿಮರ್ಶಿಸಿ ಯಾವ ವಿಧವಾದ ಅಭಿಪ್ರಾಯವನ್ನು ವ್ಯಕ್ತಪಡಿಸುವೆಯೋ–ಅದೇ ನಮಗೂ ಆದರಣೀಯವೇ ಸರಿ. ನಿನ್ನ ಆಶಯವನ್ನು ನಾವು ಪೂರ್ಣವಾಗಿ

ಗೌರವಿಸುತ್ತೇವೆ. ಕೃಷ್ಣ! ಆ ದುಷ್ಟ ದುರ್ಯೋಧನನು ನಮ್ಮಣ್ಣನಲ್ಲಿದ್ದ ಅಪಾರವಾದ ಸಂಪತ್ತನ್ನು ಕಂಡು ಸಹಿಸಲಿಲ್ಲ. ಅಂತಹ ಅಪಾರಸಂಪತ್ತನ್ನು ಪಡೆದುಕೊಳ್ಳಲು ಅವನಿಗೆ ಕ್ಷತ್ರಿಯಯೋಗ್ಯಧರ್ಮವಾದ ಯುದ್ಧದಿಂದ ಸಾಧ್ಯವಾಗಲಿಲ್ಲ. ಮಧುಸೂದನ! ಬೇರಾವ ಉಪಾಯವೂ ಸಿಕ್ಕದೇ ದ್ಯೂತ ವಾಡುವುದರಲ್ಲಿ ನಿಷ್ಣಾತನಾದ ಆ ಕ್ರೂರಿಯು ವಂಚನೆಯಿಂದ, ಕುಟಿಲೋ ಪಾಯದಿಂದ ನಮ್ಮಣ್ಣನಲ್ಲಿದ್ದ ರಾಜ್ಯವನ್ನು ಅಪಹರಿಸಿಬಿಟ್ಟನು. ಅಂತಹ ದುಷ್ಟಾತ್ಮನು ಮಕ್ಕಳು ಮತ್ತು ಬಂಧು-ಬಳಗಗಳಿಂದ ಸಮೇತನಾಗಿ ವಧಾರ್ಹನಲ್ಲನೆಂಬುವುದಿಲ್ಲ, ಕೃಷ್ಣ! (ನಿಶ್ಚಯವಾಗಿಯೂ ವಧಾರ್ಹನೇ ಸರಿ.)

**ಕಥಂ ಹಿ ಪುರುಷೋ ಜಾತಃ ಕ್ಷತ್ರಿಯೇಷು ಧನುರ್ಧರಃ ।**
**ಸಮಾಹೂತೋ ನಿವರ್ತೇತ ಪ್ರಾಣತ್ಯಾಗೇಽಪ್ಯುಪಸ್ಥಿತೇ ॥೧೩॥**

ಕ್ಷತ್ರಿಯವಂಶದಲ್ಲಿ ಹುಟ್ಟಿ, ಧನುರ್ಧರನಾಗಿದ್ದು (ಕ್ಷತ್ರಿಯವೃತ್ತಿ ಯನ್ನೇ ಅವಲಂಬಿಸಿಕೊಂಡಿದ್ದು) ಯುದ್ಧಕ್ಕೆ (ಅಥವಾ ದ್ಯೂತಕ್ಕೆ) ಆಹ್ವಾನಿತನಾದರೆ ಯುದ್ಧದಿಂದ (ಅಥವಾ ದ್ಯೂತದಿಂದ) ಯಾವನು ತಾನೇ ಹಿಮ್ಮೆಟ್ಟುತ್ತಾನೆ? ಪ್ರಾಣತ್ಯಾಗವೆಂಬುದು ಎಂದಾದರೊಂದು ದಿನ ಸಿದ್ಧ ವಾಗಿಯೇ ಇರುವಾಗ ಕ್ಷತ್ರಿಯನಾದವನು ಯುದ್ಧಮಾಡಲು (ದ್ಯೂತ ವಾಡಲು) ಖಂಡಿತವಾಗಿಯೂ ಹಿಂಜರಿಯುವುದಿಲ್ಲ. ವಾರ್ಷ್ಣೇಯ! ನಾವು ಅಧರ್ಮದ ಅಥವಾ ವಂಚನೆಯ ಪಗಡೆಯಾಟದಿಂದ ಪರಾಜಿತರಾದುದನ್ನೂ ಮತ್ತು ಅದೇ ಕಾರಣದಿಂದಲೇ ದೋಷರಹಿತರಾದ ನಮ್ಮನ್ನು ಅರಣ್ಯಕ್ಕೆ ಕಳುಹಿಸಿದುದನ್ನೂ ನೋಡಿ–'ದುರ್ಯೋಧನನು ನನ್ನಿಂದಲೇ ವಧ್ಯನಾಗ ತಕ್ಕವನು'–ಎಂಬುದಾಗಿ ನಾನು ಅಂದೇ ನಿಶ್ಚಯಿಸಿ ಕಾಡಿಗೆ ಹೋದೆನು. ಕೃಷ್ಣ! ನೀನು ಮಿತ್ರರಿಗೋಸ್ಕರ ಯಾವ ಕೆಲಸವನ್ನಾದರೂ ಮಾಡುವೆ. ನಿನ್ನ ವಿಷಯದಲ್ಲಿ ಅದು ಅದ್ಭುತವೆನಿಸುವುದಿಲ್ಲ. ಈಗ ನೀನು ಕೈಗೊಂಡಿರುವ ಕಾರ್ಯವು ಮಾರ್ದವದಿಂದಾಗಲೀ, ಕಠೋರತೆಯಿಂದಾಗಲೀ–ಹೇಗೆ ಸಿದ್ಧಿಸು ವುದೆಂಬುದು ಇಂದಿನ ವಿಚಾರವಾಗಿದೆ. ಮಾಧವ! ಒಂದು ವೇಳೆ, ಈ ಸಮಯದಲ್ಲಿ ಕೌರವರ ವಧೆಯೇ ಶ್ರೇಷ್ಠವಾದುದೆಂದು ಭಾವಿಸುವೆಯಾದರೆ–

ಅದನ್ನೇ ಬಹುಶೀಘ್ರವಾಗಿ ಸಾಧಿಸಿಬಿಡು. ಈ ವಿಷಯವನ್ನು ನೀನು ಪುನಃ ಪುನಃ ಪರ್ಯಾಲೋಚಿಸಲು ಹೋಗಲೇಬೇಡ.

ವಾಸುದೇವ! ಪಾಪಬುದ್ಧಿಯವನಾದ ದುರ್ಯೋಧನನಿಂದ ತುಂಬಿದ ಸಭೆಯಲ್ಲಿ ದ್ರೌಪದಿಯು ಹೇಗೆ ಕ್ಲೇಶಿತಳಾದಳೆಂಬ ವಿಷಯವು ನಿನಗೆ ತಿಳಿದೇ ಇದೆ. ಆ ಸಮಯದಲ್ಲಿಯೂ ನಾವು ದ್ರೌಪದಿಯ ವಿಷಯದಲ್ಲಿ ಅವರು ಮಾಡಿದ ಮಹಾಪರಾಧವನ್ನೂ ಸಹಿಸಿಕೊಂಡುಬಿಟ್ಟೆವು. ಅಂತಹವನಿಂದು ಪಾಂಡವರ ವಿಷಯದಲ್ಲಿ ಸೌಜನ್ಯದಿಂದ ವರ್ತಿಸುವನು–ಎಂಬ ವಿಷಯದಲ್ಲಿ ನನ್ನ ಬುದ್ಧಿಗೆ ನಂಬಿಕೆಯುಂಟಾಗುತ್ತಿಲ್ಲ. (ನನ್ನ ಬುದ್ಧಿಗಿದು ಗೋಚರವಾಗಿಲ್ಲ. ಅಥವಾ ನಾನಿದನ್ನು ನಂಬುವುದಿಲ್ಲ.) ಚೌಳುಮಣ್ಣಿನಲ್ಲಿ ಬಿತ್ತಿದ ಬೀಜದಂತೆಯೇ–ನಿನ್ನ ಸಂಧಾನದ ಪ್ರಯತ್ನವೂ ವ್ಯರ್ಥವಾಗಬಹುದೆಂದೇ ನಾನು ಭಾವಿಸುತ್ತೇನೆ.

ಕೃಷ್ಣ! ಈ ಕಾರಣಗಳಿಂದ, ಯಾವುದು ಯುಕ್ತವೆಂದು ಭಾವಿಸುವೆಯೋ, ಯಾವುದು ಪಾಂಡವರಿಗೆ ಹಿತಕರವಾಗುವುದೋ ಮತ್ತು ಯಾವ ಕಾರ್ಯವನ್ನು ಅತ್ಯವಶ್ಯವಾಗಿ ಮಾಡಬೇಕಾಗಿರುವುದೋ – ಅವೆಲ್ಲವನ್ನೂ ಸಮಗ್ರವಾಗಿ ಸಮಾಲೋಚಿಸಿ ಆದಷ್ಟು ಶೀಘ್ರವಾಗಿ ನಿರ್ಧಾರಿತವಾದ ರೀತಿಯಲ್ಲಿ ಕಾರ್ಯವನ್ನು ಪ್ರಾರಂಭಿಸು."

೭೮ನೆಯ ಅಧ್ಯಾಯವು ಮುಗಿಯಿತು.

೭೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಅರ್ಜುನನಿಗೆ ಶ್ರೀಕೃಷ್ಣನ ಉತ್ತರ

ಪಾರಿಕ್ಷಿತ! ಅರ್ಜುನನ ಮಾತುಗಳನ್ನು ಕೇಳಿ ಶ್ರೀಕೃಷ್ಣನು ಹೇಳಿದನು :

"ಅರ್ಜುನ! ನೀನು ಹೇಳಿದಂತೆಯೇ ಆಗಲಿ. ಪಾಂಡವರೂ ಮತ್ತು ಕೌರವರೂ ಉಪದ್ರವರಹಿತರಾಗಿರುವಂತೆಯೇ ಮಾಡಲು ಪ್ರಯತ್ನಮಾಡುತ್ತೇನೆ. ಶಾಂತಿ ಮತ್ತು ಯುದ್ಧ–ಈ ಎರಡು ಕರ್ಮಗಳಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂಬ ವಿಷಯವು ಸಂಪೂರ್ಣವಾಗಿ ನನಗೆ ಸೇರಿದುದೇ ಆಗಿರುವುದು. (ನಾನು ದೌತ್ಯವನ್ನು ವಹಿಸಿ ಅಲ್ಲಿಗೆ ಹೋದನಂತರ ಅವರನ್ನು

ನಾನು ಯುದ್ಧಕ್ಕಾದರೂ ಪ್ರಚೋದಿಸಬಹುದು ; ಶಾಂತಿಗಾದರೂ ಒಲಿಸಿ ಕೊಳ್ಳಲು ಪ್ರಯತ್ನಿಸಬಹುದು. ಆದರೆ ನಾನು ಯುದ್ಧಕ್ಕಾಗಿ ಅಥವಾ ಶಾಂತಿಗಾಗಿ ಪ್ರಯತ್ನಿಸಬಹುದೇ ಹೊರತು ನನ್ನ ಪ್ರಯತ್ನದಿಂದಲೇ ಯಾವುದೂ ನಿರ್ಧಾರವಾಗುವುದಿಲ್ಲ. ಪ್ರಯತ್ನವು ನಮ್ಮದಾದರೂ ಫಲವು ನಮ್ಮ ಇಚ್ಛೆಗೆ ಸೇರಿದುದಲ್ಲ. ದೈವಾಯತ್ತವಾದುದು.)

**ಕ್ಷೇತ್ರಂ ಹಿ ರಸವಚ್ಛುದ್ಧಂ ಕರ್ಮಣೈವೋಪಪಾದಿತಮ್ ।**
**ಋತೇ ವರ್ಷಾನ್ನ ಕೌನ್ತೇಯ ಜಾತು ನಿರ್ವರ್ತಯೇತ್ಫಲಮ್ ॥೨॥**

ಗದ್ದೆಯು ಸಾರವತ್ತಾಗಿದೆ. ಪರಿಶುದ್ಧವಾಗಿದೆ. ಸಕಾಲದಲ್ಲಿ ಉತ್ತು, ಬೀಜ ಬಿತ್ತಿ, ಕಳೆಗಳನ್ನು ತೆಗೆದು ಪರಿಶುದ್ಧಗೊಳಿಸಲಾಗಿದೆ. ಇವಿಷ್ಟೂ ಮನುಷ್ಯನಿಂದ ಸಾಧ್ಯವಾಗುವ ಕೆಲಸಗಳು. ಗದ್ದೆಯನ್ನು ಹಸನುಮಾಡಿ ಬೀಜಬಿತ್ತುವ ಕೆಲಸವನ್ನು ಮನುಷ್ಯನು ಮಾಡಬಲ್ಲನು. ಆದರೆ ಮಳೆಬರುವುದು ಅಥವಾ ಬಿಡುವುದು ಮನುಷ್ಯನ ಹತೋಟಿಗೆ ಸೇರಿದುದಲ್ಲ. ಮಳೆಯೇನಾದರೂ ಬಾರದಿದ್ದರೆ ಬೆಳೆಯು ಅಪ್ಪಿ-ತಪ್ಪಿಯೂ ಬರುವುದಿಲ್ಲ. ಆದುದರಿಂದ ಮನುಷ್ಯನ ಕಾರ್ಯವು ಫಲಕಾರಿಯಾಗಬೇಕಾದರೆ ದೈವದ ಒಲುಮೆಯು ಅನಿವಾರ್ಯ.

**ತತ್ರ ವೈ ಪೌರುಷಂ ಬ್ರೂಯುರಾಸೇಕಂ ಯತ್ರ ಕಾರಿತಮ್ ।**
**ತತ್ರ ಚಾಪಿ ಧ್ರುವಂ ಪಶ್ಯೇಚ್ಛೋಷಣಂ ದೈವಕಾರಿತಮ್ ॥೩॥**

ಒಂದು ವೇಳೆ ಮಳೆಯು ಹೋಗಿಬಿಟ್ಟರೆ ಜಲಾಶಯಗಳಿಂದಲಾದರೂ ನೀರನ್ನು ಹಾಯಿಸಿ ಕೃಷಿಗೆ ನೀರನ್ನೊದಗಿಸಿಕೊಳ್ಳುವುದು ಪುರುಷಪ್ರಯತ್ನ. ಇಲ್ಲಿಯೂ ಸಹ ಫಲಿತಾಂಶವೇನೆಂಬುದನ್ನು ಕಾದು ನೋಡಬೇಕು. ಜಲಾಶಯಗಳಲ್ಲಿ ನೀರು ನಿರಂತರವಾಗಿರುವುದಾದರೆ ಮಾತ್ರ ಮನುಷ್ಯನ ಆ ಪ್ರಯತ್ನವು ಫಲಿತವಾಗುತ್ತದೆ. ಆದರೆ ಕಾಲಕ್ಕೆ ಸರಿಯಾಗಿ ಮಳೆ ಬರದೇ ಜಲಾಶಯಗಳೇ ಒಣಗಿಹೋಗಬಹುದು. ಅಂತಹ ಸಂದರ್ಭದಲ್ಲಿ ಪುರುಷ ಪ್ರಯತ್ನವು ವ್ಯರ್ಥವಾಗುತ್ತದೆ. ಜಲಾಶಯಗಳು ಶುಷ್ಕವಾಗುವುದು ದೈವೇಚ್ಛೆಗೆ ಸೇರಿದುದಾಗಿರುತ್ತದೆ.

**ತದಿದಂ ನಿಶ್ಚಿತಂ ಬುದ್ಧ್ಯಾ ಪೂರ್ವೈರಪಿ ಮಹಾತ್ಮಭಿಃ ।**
**ದೈವೇ ಚ ಮಾನುಷೇ ಚೈವ ಸಂಯುಕ್ತಂ ಲೋಕಕಾರಣಮ್ ॥೪॥**

ಈ ಕಾರಣದಿಂದಲೇ ಹಿಂದಿನ ಮಹಾನುಭಾವರು ಬುದ್ಧಿಪೂರ್ವಕ ವಾಗಿ ಈ ವಿಷಯವನ್ನು ನಿಶ್ಚಯಮಾಡಿ ಪುರುಷಪ್ರಯತ್ನ ಮತ್ತು ದೈವಾನುಗ್ರಹ–ಈ ಎರಡರ ಸಹಯೋಗದಿಂದ ಲೋಕಹಿತದ ಸಾಧನೆಯಾಗುತ್ತದೆಂದು ಹೇಳಿರುತ್ತಾರೆ.

**ಅಹಂ ಹಿ ತತ್ಕರಿಷ್ಯಾಮಿ ಪರಂ ಪುರುಷಕಾರತಃ ।**
**ದೈವಂ ತು ನ ಮಯಾ ಶಕ್ಯಂ ಕರ್ಮ ಕರ್ತುಂ ಕಥಂಚನ ॥೫॥**

ನಿಮ್ಮಿಬ್ಬರ ಸಹಯೋಗಕ್ಕಾಗಿ ಮನುಷ್ಯಪ್ರಯತ್ನದಿಂದ ಎಷ್ಟು ಮಾಡಲು ಸಾಧ್ಯವೋ–ಅಷ್ಟು ಕಾರ್ಯವನ್ನು ನಾನು ಮಾಡಿ ಮುಗಿಸುತ್ತೇನೆ. ಆದರೆ ದೈವದ ಕಾರ್ಯವನ್ನೂ ಮಾಡಿ ಮುಗಿಸಲು ನನ್ನಿಂದ ಶಕ್ಯವಾಗುವುದಿಲ್ಲ. ಸಂಧಾನದ ಪ್ರಯತ್ನಕ್ಕೆ ದೈವವು ಪ್ರತಿಕೂಲವಾಗಿರುವುದಾದರೆ ನಾನದನ್ನು ಸರಿಪಡಿಸಲಾರೆನು. (ಶಾಂತಿಸಂಧಾನಕ್ಕೆ ಇರುವ ಪ್ರಾತಿಕೂಲ್ಯವನ್ನು ಶ್ರೀಕೃಷ್ಣನು ಮುಂದೆ ಪ್ರತಿಪಾದಿಸುತ್ತಾನೆ.)

**ಸ ಹಿ ಧರ್ಮಂ ಚ ಲೋಕಂ ಚ ತ್ಯಕ್ತ್ವಾ ಚರತಿ ದುರ್ಮತಿಃ ।**
**ನ ಹಿ ಸಂತಪ್ಯತೇ ತೇನ ತಥಾರೂಪೇಣ ಕರ್ಮಣಾ ॥೬॥**

ದುರ್ಮತಿಯಾದ ದುರ್ಯೋಧನನು ಧರ್ಮ ಮತ್ತು ಲೋಕಾಚಾರ ಗಳನ್ನು ಪರಿತ್ಯಜಿಸಿ ಸ್ವೇಚ್ಛೆಯಿಂದ ವರ್ತಿಸುತ್ತಿದ್ದಾನೆ. ಇಂತಹ ಲೋಕ ವಿರುದ್ಧವಾದ ಮತ್ತು ಧರ್ಮವಿರುದ್ಧವಾದ ಕಾರ್ಯಮಾಡಿಯೂ ಅವನು ಪಶ್ಚಾತ್ತಾಪಪಡತಕ್ಕವನಾಗಿಲ್ಲ. ಅರ್ಜುನ! ದುರ್ಯೋಧನನು ತಾನು ಮಾಡಿದ ಅಧರ್ಮಕಾರ್ಯಕ್ಕೆ ಪಶ್ಚಾತ್ತಾಪಪಡದಿರುವುದರ ಜೊತೆಗೆ ಅವನ ಪಾಪಬುದ್ಧಿಯೂ ದಿನ-ದಿನಕ್ಕೂ ವೃದ್ಧಿಯಾಗುತ್ತಲೇ ಇದೆ. ಅವನ ದುರ್ಮಂತ್ರಿಗಳಾದ ಕರ್ಣ, ಶಕುನಿ ಮತ್ತು ಅವನ ತಮ್ಮ ದುಃಶಾಸನ ಇವ ರೆಲ್ಲರೂ ಅನೇಕವಿಧವಾದ ಪ್ರೇರಣೆಗಳಿಂದ ದುರ್ಯೋಧನನ ಪಾಪ ಬುದ್ಧಿಯನ್ನು ಮತ್ತಷ್ಟು ವೃದ್ಧಿಗೊಳಿಸುತ್ತಿದ್ದಾರೆ. ಇನ್ನೂ ಹೆಚ್ಚಿನ ಪಾಪ ಕಾರ್ಯಮಾಡಲು ಅವನನ್ನು ಪ್ರೋತ್ಸಾಹಿಸುತ್ತಿದ್ದಾರೆ. ಪಾರ್ಥ! ನನ್ನ

ನಿಶ್ಚಯವೇನೆಂದರೆ.: ಸುಯೋಧನನು ರಾಜ್ಯತ್ಯಾಗದಿಂದ ಖಂಡಿತವಾಗಿಯೂ ಶಾಂತನಾಗುವುದಿಲ್ಲ. ಬಂಧು-ಬಾಂಧವರೊಡನೆ ಅವನು ಮರಣ ಹೊಂದಿದ ಹೊರತಾಗಿ ಅವನಿಗೆ ಶಾಂತಿಯೆಂಬುದಿಲ್ಲ. (ಅವನು ಬದುಕಿರುವವರೆಗೂ ಸಂಧಾನಕ್ಕೆ ಒಪ್ಪುವುದಿಲ್ಲ ; ರಾಜ್ಯವನ್ನೂ ಕೊಡುವುದಿಲ್ಲ.)

**ನ ಚಾಪಿ ಪ್ರಣಿಪಾತೇನ ತ್ಯಕ್ತುಮಿಚ್ಛತಿ ಧರ್ಮರಾಟ್ ।**
**ಯಾಚ್ಯಮಾನಶ್ಚ ರಾಜ್ಯಂ ಸ ನ ಪ್ರದಾಸ್ಯತಿ ದುರ್ಮತಿಃ ॥೯॥**

ಸಂಧಿಮಾಡಿಕೊಳ್ಳಬೇಕೆಂಬ ಏಕೈಕವಾದ ಆಶಯದಿಂದ ದುರ್ಯೋಧನನಿಗೆ ಸಂಪೂರ್ಣವಾಗಿ ಶರಣಾಗತನಾಗಿ ರಾಜ್ಯವನ್ನು ಬಿಟ್ಟುಬಿಡಬೇಕೆನ್ನುವ ಅಭಿಲಾಷೆಯು ಯುಧಿಷ್ಠಿರನಿಗೂ ಇರುವುದಿಲ್ಲ. ಎಷ್ಟೇ ವಿನಮ್ರತೆಯಿಂದ ಧರ್ಮರಾಜನು ಪುನಃ-ಪುನಃ ಯಾಚಿಸಿದರೂ ದುರ್ಮತಿಯಾದ ದುರ್ಯೋಧನನು ರಾಜ್ಯವನ್ನು ಕೊಡುವುದೂ ಇಲ್ಲ.

**ನ ತು ಮನ್ಯೇ ಸ ತದ್ವಾಚ್ಯೋ ಯದ್ಯುಧಿಷ್ಠಿರಶಾಸನಮ್ ।**
**ಉಕ್ತಂ ಪ್ರಯೋಜನಂ ಯತ್ತು ಧರ್ಮರಾಜೇನ ಭಾರತ ॥೧೦॥**

**ತಥಾ ಪಾಪಸ್ತು ತತ್ಸರ್ವಂ ನ ಕರಿಷ್ಯತಿ ಕೌರವಃ ।**
**ತಸ್ಮಿಂಶ್ಚಾಕ್ರಿಯಮಾಣೇಽಸೌ ಲೋಕೇ ವಧ್ಯೋ ಭವಿಷ್ಯತಿ ॥೧೧॥**

ಯುಧಿಷ್ಠಿರನು ಐದು ಗ್ರಾಮಗಳನ್ನಾದರೂ ಕೇಳುವಂತೆ ಆಜ್ಞೆಮಾಡಿರುತ್ತಾನೆ. ದುರ್ಯೋಧನನೊಡನೆ ವಿನಮ್ರತಾಪೂರ್ವಕವಾಗಿ ಶಾಂತಿ ಸಂಧಾನದ ಮಾತುಕತೆಗಳನ್ನಾಡುವುದರಿಂದ ಪ್ರಯೋಜನವಾಗಬಹುದೆಂದು ಹೇಳಿದ್ದಾನೆ. ಆದರೆ ನನ್ನ ಅಭಿಪ್ರಾಯದಲ್ಲಿ ದುರ್ಯೋಧನನಲ್ಲಿಗೆ ಹೋಗಿ ಯುಧಿಷ್ಠಿರನ ಶಾಸನದಂತೆ ಐದು ಗ್ರಾಮಗಳನ್ನು ಕೇಳುವುದು ಉಚಿತವಲ್ಲ. ಹಾಗೆ ಕೇಳಿದರೂ ಪಾಪಾತ್ಮನಾದ ಅವನು ಒಪ್ಪುವುದೂ ಇಲ್ಲ ; ನಮ್ಮ ಮಾತಿನಂತೆ ಅವನು ನಡೆಯುವುದೂ ಇಲ್ಲ. (ಐದು ಗ್ರಾಮಗಳನ್ನೂ ಅವನು ಕೊಡಲಾರನು.) ಅವನು ಯಾವಾಗ ನಾವು ಹೇಳಿದಂತೆ ಮಾಡುವುದಿಲ್ಲವೋ– ಆಗವನು ಈ ಲೋಕದಲ್ಲಿ ವಧೆಗೆ ಅರ್ಹನಾಗುತ್ತಾನೆ. ಆಗವನ ವಧೆಯು ಅನಿವಾರ್ಯವಾಗುತ್ತದೆ.

**ಮಮ ಚಾಪಿ ಸ ವಧ್ಯೋ ಹಿ ಜಗತಶ್ಚಾಪಿ ಭಾರತ ।**
**ಯೇನ ಕೌಮಾರಕೇ ಯೂಯಂ ಸರ್ವೇ ವಿಪ್ರಕೃತಾಃ ಸದಾ ॥೧೨॥**

**ವಿಪ್ರಲುಪ್ತಂ ಚ ವೋ ರಾಜ್ಯಂ ನೃಶಂಸೇನ ದುರಾತ್ಮನಾ ।**
**ನ ಚೋಪಶಾಮ್ಯತೇ ಪಾಪಃ ಶ್ರಿಯಂ ದೃಷ್ಟ್ವಾ ಯುಧಿಷ್ಠಿರೇ ॥**

ಜಗತ್ತಿನ ದೃಷ್ಟಿಯಿಂದಲೂ ಮತ್ತು ನನ್ನ ದೃಷ್ಟಿಯಿಂದಲೂ ದುರ್ಯೋಧನನು ಸರ್ವಥಾ ವಧ್ಯನೇ ಸರಿ. ಬಾಲ್ಯದಲ್ಲಿಯೇ ನಿಮಗೆ ತೊಂದರೆ ಕೊಟ್ಟನು. ಪ್ರಾಪ್ತವಯಸ್ಕರಾದನಂತರ ನಿಮಗೆ ಲಭ್ಯವಾದ ರಾಜ್ಯವನ್ನು ಪಡೆದು ನಿಮ್ಮ ಪಾಡಿಗೆ ನೀವು ಸುಖದಿಂದಿರುವಾಗ–ಕ್ರೂರಿಯಾದ ಮತ್ತು ದುರಾತ್ಮನಾದ ಅವನು ಕೇವಲ ವಂಚನೆಯಿಂದ ನಿಮ್ಮ ರಾಜ್ಯವನ್ನು ಅಪಹರಿಸಿದನು. ಮತ್ತೆ ರಾಜ್ಯಶ್ರೀಯನ್ನು ಯುಧಿಷ್ಠಿರನೇನಾದರೂ ಪಡೆಯುವುದಾದರೆ ಯುಧಿಷ್ಠಿರನಲ್ಲಿರುವ ಆ ಸಂಪತ್ತನ್ನು ಕಂಡು ಅವನು ಖಂಡಿತವಾಗಿಯೂ ಶಾಂತನಾಗಿರುವುದಿಲ್ಲ. ಅರ್ಜುನ! ಈ ಎಲ್ಲ ಕಾರಣಗಳಿಂದಲೂ ದುರ್ಯೋಧನನು ವಧಾರ್ಹನೇ ಸರಿ.

ಪಾರ್ಥ! ನಿನ್ನಿಂದ ನನ್ನನ್ನು ಬೇರ್ಪಡಿಸಬೇಕೆಂದು ಆ ದುರಾತ್ಮನು ಎಷ್ಟೋ ಸಲ ಪ್ರಯತ್ನಿಸಿದನು. ಆದರೆ ಅವನ ಪಾಪಪೂರ್ಣವಾದ ಅಭಿಪ್ರಾಯವನ್ನು ನಾನು ಅಂಗೀಕರಿಸಲಿಲ್ಲ. ನಾನು ಯಾವಾಗಲೂ ಯುಧಿಷ್ಠಿರನ ಪಕ್ಷಪಾತಿಯೆಂಬ ದುರ್ಯೋಧನನ ಅಭಿಪ್ರಾಯವೂ ನಿನಗೆ ತಿಳಿದಿದೆಯಲ್ಲವೇ? ಅರ್ಜುನ!

**ಸಂಜಾನಂಸ್ತಸ್ಯ ಚಾತ್ಮಾನಂ ಮಮ ಚೈವ ಪರಂ ಮತಮ್ ।**
**ಅಜಾನನ್ನಿವ ಮಾಂ ಕಸ್ಮಾದರ್ಜುನಾದ್ಯಾಭಿಶಙ್ಕಸೇ ॥೧೬॥**

ನನ್ನ ವಿಷಯದಲ್ಲಿ ದುರ್ಯೋಧನನಿಗೆ ಯಾವ ವಿಧವಾದ ಅಭಿಪ್ರಾಯವಿರುವುದೆಂಬುದೂ ನಿನಗೆ ತಿಳಿದಿದೆ. ನನ್ನ ದೃಢನಿಶ್ಚಯವೇನೆಂಬುದೂ ನಿನಗೆ ತಿಳಿದಿದೆ. (ಮಮ ಪ್ರಾಣಾ ಹಿ ಪಾಣ್ಡವಾಃ-ಪಾಂಡವರು ನನ್ನ ಪ್ರಾಣಸಮರೆಂದೇ ನಾನು ತಿಳಿದಿರುತ್ತೇನೆ.) ಹೀಗಿರುವಾಗ ಯಾವುದೊಂದು ವಿಷಯವೂ ತಿಳಿದೇ ಇಲ್ಲವೋ ಎಂಬಂತೆ ನನ್ನ ವಿಷಯದಲ್ಲಿ ಸಂಶಯಿಸಿ ಮಾತನಾಡುತ್ತಿರುವೆಯೇಕೆ? ಪಾರ್ಥ!

**ಯಚ್ಚಾಪಿ ಪರಮಂ ದಿವ್ಯಂ ತಚ್ಚಾಪ್ಯನುಗತಂ ತ್ವಯಾ ।**
**ವಿಧಾನಂ ವಿಹಿತಂ ಪಾರ್ಥ ಕಥಂ ಶರ್ಮ ಭವೇತ್ಪರೈಃ ॥೧೭॥**

(ಈ ಶ್ಲೋಕವು ತೋರಿಕೆಗೆ ಬಹಳ ಸುಲಭವಾಗಿಯೇ ಕಾಣುತ್ತದೆ. ಆದರೆ ಅರ್ಥಮಾಡಲು ಸ್ವಲ್ಪ ಕಷ್ಟವೆನಿಸುತ್ತದೆ. ವ್ಯಾಖ್ಯಾನಕಾರರು ದಿವ್ಯಂ ವಿಧಾನಂ ಭೂಭಾರಾಪಹರಣಾರ್ಥಂ ಸ್ವರ್ಗಾದ್ದೇವಾನಾಮವತರಣಂ ವಿಹಿತಂ– ಭೂಭಾರಹರಣಾರ್ಥವಾಗಿ ಸ್ವರ್ಗದಿಂದ ದೇವತೆಗಳ ಅವತರಣವಾಯಿತು– ಎಂದು ಹೇಳಿದ್ದಾರೆ. ಪರಮಂ ಎಂಬುದಕ್ಕಾಗಲೀ **ಅನುಗತಂ ತ್ವಯಾ** – ಎಂಬುದಕ್ಕಾಗಲೀ ವ್ಯಾಖ್ಯಾನಮಾಡಿರುವುದಿಲ್ಲ. ಇವರ ವ್ಯಾಖ್ಯಾನವನ್ನೇ ಅನುಸರಿಸಿ ಗೀತಾಪ್ರೆಸ್ಸಿನವರು ಮಹಾಭಾರತದ ಹಿಂದೀ ವ್ಯಾಖ್ಯಾನದಲ್ಲಿಯೂ - "ಜೋ ದೇವತಾವೋಂಕಾ ಪರಮ ದಿವ್ಯ (ಭೂಭಾರ್ ಉತಾರನೇಕೇಲಿಯೇ) ನಿಶ್ಚಿತ್ ವಿಧಾನ್ ಹೈ ಉಸಸೇ ಭೀ ತುಮ್ ಸರ್ವಥಾ ಪರಿಚಿತ್ ಹೋ । ಫಿರ್ ಶತ್ರುವೋಂಕೇ ಸಾತ್ ಸಂಧಿ ಕೈಸೇ ಹೋ ಸಕತೀ ಹೈ? - ದೇವತೆಗಳ ಪರಮದಿವ್ಯವಾದ (ಭೂಭಾರವನ್ನು ಕಡಿಮೆಮಾಡಬೇಕೆಂಬ) ನಿಶ್ಚಯವಾದ ಯಾವ ಸಂಕಲ್ಪವಿದೆಯೋ ಅದರ ಪರಿಚಯವು ಸರ್ವಥಾ ನಿನಗೂ ಇರುವುದು. ಹೀಗಿರುವಾಗ ಶತ್ರುಗಳೊಡನೆ ಸಂಧಿಕಾರ್ಯವು ಹೇಗೆ ತಾನೇ ನಡೆದೀತು?" – ಎಂದು ಅನುವಾದ ಮಾಡಿದ್ದಾರೆ. ಆಂಗ್ಲಭಾಷೆಯಲ್ಲಿ ಈ ಶ್ಲೋಕದ ಭಾಷಾಂತರವನ್ನು ಹೀಗೆ ಮಾಡಿದ್ದಾರೆ :

The great act also which was ordained in heaven is known to you. How then O Partha, can peace be concluded with foe?

ದಿವ್ಯಂ ವಿಧಾನಂ – ಈ ಪದಗಳಿಗೆ ಅನೇಕಾರ್ಥಗಳನ್ನು ಮಾಡಬಹುದಾಗಿರುವುದರಿಂದ ಮೇಲೆ ವಿದ್ವಾಂಸರು ಕೊಟ್ಟಿರುವ ಅರ್ಥಗಳು ಸರಿಯಲ್ಲವೆಂದಾಗಲೀ–ಅಸಂಗತವೆಂದಾಗಲೀ ಹೇಳುವ ಆಶಯವು ನಮಗೆ ಖಂಡಿತವಾಗಿಯೂ ಇರುವುದಿಲ್ಲ. ಈ ಸಂದರ್ಭದಲ್ಲಿ ಭೂಭಾರ, ಅವತಾರ, ಸ್ವರ್ಗ– ಈ ಅರ್ಥಗಳಿಗಿಂತಲೂ ಈ ಕೆಳಗಿನ ಅರ್ಥವು ಸಮನ್ವಯವಾದೀತೆಂಬುದು ನಮ್ಮ ಅಭಿಪ್ರಾಯವಾಗಿದೆ.)

ಅರ್ಜುನ! ಮಹತ್ತರವಾದ ಯಾವ ದಿವ್ಯಸೂಚನೆಗಳು ಕಾಣುತ್ತಿವೆಯೋ ಅವುಗಳು ನಿನ್ನಿಂದಲೂ ಗ್ರಹಿಸಲ್ಪಟ್ಟಿವೆ. (ಅವುಗಳನ್ನು ನೀನೂ

ಕಾಣುತ್ತಿರುವೆ.) ಅಶುಭಸೂಚಕಗಳಾದ ಉತ್ಪಾತಗಳು ತಲೆದೋರಿರುವಾಗ ಶತ್ರುಗಳೊಡನೆ ಶಾಂತಿಸಂಧಾನವು ಹೇಗೆ ತಾನೇ ಸಫಲವಾದೀತು? ಇಂದಿನ ದಿವ್ಯವಾದ ಅಶುಭಸೂಚಕಚಿಹ್ನೆಗಳನ್ನು ನೋಡಿದರೆ ಭೂಭಾರಹರಣದ ವಿಧಾನವು ಈ ಯುದ್ಧದ ಮೂಲಕವಾಗಿಯೇ ವಿಹಿತವಾಗಿದೆ–ಎಂದು ಕಾಣುತ್ತಿದೆ. (ದಿವ್ಯವೆಂದರೆ ಉತ್ಪಾತ, ಅಶುಭಸೂಚಕವಾದ ಚಿಹ್ನೆ, ಸಾಮೂಹಿಕವಿಪತ್ತನ್ನು ಸೂಚಿಸುವ ಉಲ್ಕಾಪಾತ, ಬಾಲಚುಕ್ಕಿ ಮುಂತಾದುವು. ಉತ್ಪಾತಗಳಲ್ಲಿ ಮೂರು ವಿಧ: ದಿವ್ಯ, ಅಂತರಿಕ್ಷ ಮತ್ತು ಭೌಮ. ಗ್ರಹ-ನಕ್ಷತ್ರಗಳು ವಿಕಾರವಾದ ರೀತಿಯಲ್ಲಿ ಕಾಣಿಸಿಕೊಳ್ಳುವುದು – ಧೂಮಕೇತು, ಉಲ್ಕಾಪಾತ, ಸಿಡಿಲು, ಬಿರುಗಾಳಿ, ಸೂರ್ಯ-ಚಂದ್ರರ ಸುತ್ತಲೂ ಕಟ್ಟುವ ಪರಿವೇಷ–ಮುಂತಾದುವು ದಿವ್ಯವಾದ ಉತ್ಪಾತಗಳು. ಅಂತರಿಕ್ಷದಲ್ಲಿ ನಗರಗಳು, ಅಕಾಲದಲ್ಲಿ ಇಂದ್ರಧನುಸ್ಸು ಕಾಣಿಸಿಕೊಳ್ಳುವುದು–ಮುಂತಾದುವು ಅಂತರಿಕ್ಷೋತ್ಪಾತಗಳು. ಸ್ಥಾವರ-ಜಂಗಮಗಳಿಂದ ಉಂಟಾಗುವುದು ಭೌಮೋತ್ಪಾತಗಳು.

ಈ ಉತ್ಪಾತದ ವಿಷಯವನ್ನೇ ಕೃಷ್ಣನಿಲ್ಲಿ ಹೇಳಿದ್ದಾನೆ. ಹಿಂದೆ ಧರ್ಮಜನೊಡನೆಯೂ ಹೇಳಿರುತ್ತಾನೆ. ಈ ಅರ್ಥವು ಸಂದರ್ಭಕ್ಕೆ ಹೆಚ್ಚು ಸಮಂಜಸವಾಗಿದೆಯೆಂಬುದು ನಮ್ಮ ಅಭಿಪ್ರಾಯವಾಗಿದೆ.)

**ಯತ್ತು ವಾಚಾ ಮಯಾ ಶಕ್ಯಂ ಕರ್ಮಣಾ ವಾಪಿ ಪಾಣ್ಡವ ।**
**ಕರಿಷ್ಯೇ ತದಹಂ ಪಾರ್ಥ ನ ತ್ವಾಶಂಸೇ ಶಮಂ ಪರೈಃ ॥೧೮॥**

ಮಾತಿನ ಮೂಲಕವಾಗಿ ಅವರನ್ನು ಒಪ್ಪಿಸಲು ನನ್ನಿಂದ ಎಷ್ಟು ಸಾಧ್ಯವಾಗುವುದೋ, ಕಾರ್ಯದ ಮೂಲಕವಾಗಿ ಅವರನ್ನು ಒಪ್ಪಿಸಲು ಎಷ್ಟು ಸಾಧ್ಯವಾಗುವುದೋ–ಅವೆಲ್ಲವನ್ನೂ ನಾನು ಮಾಡುತ್ತೇನೆ. (ಮೃದುವಾಗಿಯೇ ಮಾತನಾಡುತ್ತೇನೆ. ಮಾತುಕತೆಗಳಿಗೆ ನಾಲ್ಕಾರು ಬಾರಿ ಕರೆದರೂ ಹೋಗುತ್ತೇನೆ.) ಆದರೆ ಶತ್ರುಗಳೊಡನೆ ನಾನು ಸಂಧಿಯನ್ನು ಮಾತ್ರ ಅಪೇಕ್ಷಿಸುವವನಲ್ಲ. (ಸಂಧಿಯಾಗುವುದೆಂದು ಭಾವಿಸುವುದಿಲ್ಲ.)

ಕಳೆದ ವರ್ಷ ಗೋಗ್ರಹಣಸಮಯದಲ್ಲಿ ದುರ್ಯೋಧನನು–ಶಾಂತಿಗಾಗಿ ಭೀಷ್ಮನಿಂದ ಮಾರ್ಗದಲ್ಲಿ ಯಾಚಿಸಲ್ಪಟ್ಟರೂ ಎರಡೂ ಪಕ್ಷದವರಿಗೂ ಹಿತ

ವಾಗುವಂತಹ ಭೀಷ್ಮನ ಮಾತುಗಳನ್ನು ಅವನು ಒಪ್ಪಲಿಲ್ಲವೇಕೆ? ಅವನಿಗೆ ನಿಮ್ಮೊಡನೆ ಶಾಂತಿಯಿಂದಿರುವ ಇಚ್ಛೆಯಿಲ್ಲವೆಂಬುದು ಅದರಿಂದಲೇ ಸ್ಪಷ್ಟ ವಾಗಿದೆ, ಅರ್ಜುನ! ಪಿತಾಮಹನಾದ ಭೀಷ್ಮನೇ ಆ ಸಮಯದಲ್ಲಿ ಉಭಯ ಪಕ್ಷದವರಿಗೂ ಹಿತಕರವಾದ ಸಲಹೆಯನ್ನು ನೀಡಿದರೂ ದುರ್ಯೋಧನ ನದನ್ನು ಅಂಗೀಕರಿಸಲಿಲ್ಲ. ನೀನು ಯಾವಾಗ ಅವರನ್ನು ಪರಾಜಯಗೊಳಿಸಲೇ ಬೇಕೆಂದು ಸಂಕಲ್ಪಿಸಿಬಿಟ್ಟೆಯೋ–ಆಗಲೇ ಅವರು ಪರಾಜಿತರಾಗಿಹೋದರೆಂದು ಭಾವಿಸು, ಅರ್ಜುನ! (ನಿನ್ನದು ಸತ್ಯಸಂಕಲ್ಪ.) ದುರ್ಯೋಧನನ ವಿಷಯ ವಾಗಿ ಹೇಳುವುದಾದರೆ, ನೀವು ಕ್ಷಣಕಾಲವಾದರೂ ಲೇಶಾಂಶರಾಜ್ಯವನ್ನು ಪಡೆದುಕೊಳ್ಳುವುದನ್ನೂ ಅವನು ಸಹಿಸುವುದಿಲ್ಲ. (ಇದು ಶತಾಂಶಸತ್ಯವಾದರೂ ಧರ್ಮರಾಜನ ಶಾಸನದಂತೆ ನಾನು ಸರ್ವಥಾ ಈ ಕಾರ್ಯವನ್ನು ಮಾಡಲೇಬೇಕು.) ದುರಾತ್ಮನಾದ ದುರ್ಯೋಧನನ ಪಾಪಕರ್ಮವು ಪುನಃ ಎಲ್ಲರಿಗೂ ವ್ಯಕ್ತವಾಗುವಂತೆ ಮಾಡಬೇಕು. (ಅವನೆಷ್ಟೇ ಪಾಪಿಷ್ಠನೆಂದೂ ದುರಾತ್ಮನೆಂದೂ ತಿಳಿದಿದ್ದರೂ ಯುಧಿಷ್ಠಿರನ ಆಜ್ಞಾನುಸಾರವಾಗಿ ನಡೆದು ದುರ್ಯೋಧನನ ಪಾಪಕರ್ಮದ ಪರಮಾವಧಿಯನ್ನು ಪುನಃ ಪ್ರದರ್ಶಿಸಬೇಕಾಗಿದೆ.)"

೭೯ನೆಯ ಅಧ್ಯಾಯವು ಮುಗಿಯಿತು.

೮೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ನಕುಲನ ನಿವೇದನೆ

ಜನಮೇಜಯ! ಕೃಷ್ಣಾರ್ಜುನರ ಮಾತುಕತೆಗಳಾದನಂತರ ನಕುಲನು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾನೆ :

"ಮಾಧವ! ಧರ್ಮಜ್ಞನಾದ ಮತ್ತು ಉದಾರನಾದ ಧರ್ಮರಾಜನು ನಿನ್ನನ್ನು ಉದ್ದೇಶಿಸಿ ಅನೇಕಪ್ರಕಾರವಾದ ಮಾತುಗಳನ್ನಾಡಿರುವನು ಮತ್ತು ನೀನು ಆ ಎಲ್ಲ ಮಾತುಗಳನ್ನೂ ಕೇಳಿಯೇ ಇರುವೆ. ರಾಜನ ಅಭಿಪ್ರಾಯ ವನ್ನು ತಿಳಿದ ನಮ್ಮ ಎರಡನೆಯ ಅಣ್ಣನಾದ ಭೀಮಸೇನನೂ ಮೊದಲು ಸಂಧಿಯನ್ನೇ ಶ್ಲಾಘಿಸಿ ಮಾತನಾಡಿದನು. ನೀನು ಅವನ ಮಾತಿನಲ್ಲಿ ಅಚ್ಚರಿ

ಯನ್ನೂ ಮತ್ತು ತಿರಸ್ಕಾರವನ್ನೂ ತೋರಿದನಂತರ ಹಾಗೂ ನಿನ್ನ ಅಭಿಮತವನ್ನು ಅವನು ತಿಳಿದನಂತರ ತನ್ನ ಬಾಹುಬಲದ ವಿಷಯವಾಗಿಯೂ ಹೇಳಿದನು. ಇದೇ ರೀತಿಯಲ್ಲಿ ನಮ್ಮ ಮೂರನೆಯ ಅಣ್ಣನಾದ ಅರ್ಜುನನು ಯಾವ ಮಾತುಗಳನ್ನಾಡಿದನೋ– ಆ ಎಲ್ಲ ಮಾತುಗಳನ್ನೂ ನೀನು ಕೇಳಿರುವೆ. ನೀನೂ ಸಹ ನಿನ್ನ ಅಭಿಮತವೇನೆಂಬುದನ್ನು ಅರ್ಜುನನೊಡನೆ ಮತ್ತು ಇತರ ನಮ್ಮ ಅಣ್ಣಂದಿರೊಡನೆ ವಿಶದವಾಗಿಯೇ ಹೇಳಿರುವೆ.

**ಸರ್ವಮೇತದತಿಕ್ರಮ್ಯ ಶ್ರುತ್ವಾ ಪರಮತಂ ಭವಾನ್ ।**
**ಯತ್ಪ್ರಾಪ್ತಕಾಲಂ ಮನ್ಯೇಥಾಸ್ತತ್ಕುರ್ಯಾಃ ಪುರುಷೋತ್ತಮ ॥೪॥**

ಪುರುಷೋತ್ತಮ! ಈ ನಮ್ಮ ಅಣ್ಣಂದಿರ ಅಭಿಮತದಂತೆಯೇ ನೀನು ನಡೆಯಬೇಕೆಂದು ನಾನು ಹೇಳುವುದಿಲ್ಲ. ಶತ್ರುಗಳೇನು ಹೇಳುವರೆಂಬುದನ್ನೂ ಸಾವಧಾನದಿಂದ ಕೇಳಿ ಆ ಕಾಲದಲ್ಲಿ ಯಾವುದನ್ನು ಮಾಡುವುದು ನಿನಗೆ ಉಚಿತವೆಂದು ತೋರುವುದೋ–ಅದನ್ನೇ ಮಾಡು. ನಮ್ಮ ಅಣ್ಣಂದಿರು ಹೇಳಿದುದನ್ನು ಮೀರಿಯೂ ಕಾರ್ಯಮಾಡಬಹುದು.

**ತಸ್ಮಿಂಸ್ತಸ್ಮಿನ್ನಿಮಿತ್ತೇ ಹಿ ಮತಂ ಭವತಿ ಕೇಶವ ।**
**ಪ್ರಾಪ್ತಕಾಲಂ ಮನುಷ್ಯೇಣ ಕ್ಷಮಂ ಕಾರ್ಯಮರಿಂದಮ ॥೫॥**

ಅರಿಂದಮನೇ! ಆಯಾ ಕಾರಣಕ್ಕೆ ತಕ್ಕಂತೆ ಮನುಷ್ಯನ ಅಭಿಪ್ರಾಯವೂ ವ್ಯತ್ಯಾಸವಾಗುತ್ತಾ ಹೋಗುತ್ತದೆ. (ಧರ್ಮಿಷ್ಠನಾದ ಯುಧಿಷ್ಠಿರನಿಗೆ ಕೌರವರ ಕುಲವು ವಿನಾಶವಾಗಕೂಡದೆಂಬ ಅಭಿಪ್ರಾಯವಿರುವುದು ಸ್ವಾಭಾವಿಕ. ತುಂಬಿದ ಸಭೆಯಲ್ಲಿ ದುರಾತ್ಮರಿಂದ ಸೆಳೆದಾಡಲ್ಪಟ್ಟ ದ್ರೌಪದಿಗೆ ಕೌರವವಂಶವು ನಿರ್ಮೂಲವಾಗಬೇಕೆಂಬ ಅಭಿಪ್ರಾಯವಿರುವುದು ಸ್ವಾಭಾವಿಕ.) ಆದುದರಿಂದ ಮನುಷ್ಯನಿಗೆ ಯಾವ ಕಾಲದಲ್ಲಿ ಯಾವ ಕಾರ್ಯವು ಉಚಿತವೆನಿಸುವುದೋ–ಅದನ್ನು ಮಾಡಬೇಕು. (ತನ್ನ ಅಂದಿನ ಅಭಿಮತದಂತೆಯೇ ತಾನು ಯಾವಾಗಲೂ ನಡೆದುಕೊಳ್ಳುತ್ತೇನೆಂದು ಹೇಳುವ ಸಾಧ್ಯತೆಯಿಲ್ಲ. ಕಾಲ-ದೇಶ-ವರ್ತಮಾನಗಳು ಒಬ್ಬನ ಅಭಿಮತವನ್ನು ಬಲಾತ್ಕಾರಪೂರ್ವಕವಾಗಿಯೇ ವ್ಯತ್ಯಸ್ತಪಡಿಸುತ್ತವೆ. ಒಬ್ಬನ ಅಭಿಮತವೇ ಅನೇಕವೇಳೆ ಅನೇಕಕಾರಣಗಳಿಂದ ವ್ಯತ್ಯಸ್ತವಾಗುತ್ತಿರುತ್ತದೆ.

ಇಂದು ಒಂದು ವಿಷಯದಲ್ಲಿ ಸದಭಿಪ್ರಾಯವಿರುವವನು ಸ್ವಲ್ಪಕಾಲಾನಂತರ ಅದೇ ವಿಷಯದಲ್ಲಿ ದುರಭಿಪ್ರಾಯವನ್ನೂ ಹೊಂದಬಹುದಾಗಿದೆ. ಒಬ್ಬ ನಲ್ಲಿಯೇ ಸಮಯಕ್ಕೆ ಅನುಸಾರವಾಗಿ ಅಭಿಪ್ರಾಯಭೇದವುಂಟಾಗುವುದೆಂದ ಮೇಲೆ ಬೇರೆ ಬೇರೆ ಮನುಷ್ಯರಲ್ಲಿ ಅಭಿಪ್ರಾಯಭೇದಗಳಿರುವುದರಲ್ಲಿ ಆಶ್ಚರ್ಯವೇನಿದೆ?)

**ಅನ್ಯಥಾ ಚಿನ್ತಿತೋ ಹ್ಯರ್ಥಃ ಪುನರ್ಭವತಿ ಸೋಽನ್ಯಥಾ ।**
**ಅನಿತ್ಯಮತಯೋ ಲೋಕೇ ನರಾಃ ಪುರುಷಸತ್ತಮ ॥೬॥**

ಪುರುಷೋತ್ತಮ! ಒಮ್ಮೆ ಯೋಚಿಸಿದ ಮತ್ತು ಅದರಂತೆ ಮಾಡಿದ ನಿರ್ಧಾರವು ಕಾಲ-ದೇಶ-ವರ್ತಮಾನಗಳನ್ನು ಅನುಸರಿಸಿ ಪುನಃ ವ್ಯತ್ಯಯ ಗೊಳ್ಳುತ್ತದೆ. ಒಂದು ನಿರ್ಧಾರವೇ ಅಥವಾ ಅಭಿಮತವೇ ಶಾಶ್ವತವಾಗಿ ಒಬ್ಬನಲ್ಲಿ ಉಳಿಯುವುದಿಲ್ಲ. ಲೋಕದಲ್ಲಿ ಮನುಷ್ಯರು ಸ್ಥಿರಚಿತ್ತರಲ್ಲ. ಈ ವಿಷಯವು ನಮಗೂ ಅನ್ವಯಿಸುತ್ತದೆ.

**ಅನ್ಯಥಾ ಬುದ್ಧಯೋ ಹ್ಯಾಸನ್ನಸ್ಮಾಸು ವನವಾಸಿಷು ।**
**ಅದೃಶ್ಯೇಷ್ವನ್ಯಥಾ ಕೃಷ್ಣ ದೃಶ್ಯೇಷು ಪುನರನ್ಯಥಾ ॥೭॥**

ನಾವು ಕಾಡಿನಲ್ಲಿದ್ದಾಗ ನಮ್ಮ ಬುದ್ಧಿಯು ಒಂದು ಬಗೆಯಾಗಿದ್ದಿತು. 'ಈ ವನವಾಸವು ಎಂದಿಗೆ ಮುಗಿಯುವುದು? ಹನ್ನೆರಡು ವರ್ಷಗಳನ್ನು ಕಳೆಯುವುದು ಹೇಗೆ? ನಮ್ಮೊಡನಿರುವ ಬ್ರಾಹ್ಮಣರ ರಕ್ಷಣೆ-ಪೋಷಣೆಗಳು ಹೇಗೆ? ಈ ವನವಾಸವು ಕಳೆದರೆ ಸಾಕು'–ಇತ್ಯಾದಿ ವಿಷಯಗಳಲ್ಲಿಯೇ ನಮ್ಮ ಬುದ್ಧಿಯು ಲೀನವಾಗಿರುತ್ತಿತ್ತು. ಹನ್ನೆರಡು ವರ್ಷಗಳ ವನವಾಸವನ್ನು ಸಾಧ್ಯವಾದಷ್ಟು ಬೇಗ ಕಳೆದುಬಿಡಬೇಕೆಂದು ನಮ್ಮ ಮನಸ್ಸು ತವಕಿಸು ತ್ತಿದ್ದಿತು. ಹನ್ನೆರಡು ವರ್ಷಗಳ ವನವಾಸವನ್ನು ಕಳೆಯುವುದೊಂದೇ ಅಂದಿನ ನಮ್ಮ ಧ್ಯೇಯವಾಗಿದ್ದಿತು. ಅನಂತರ ಅಜ್ಞಾತವಾಸವನ್ನು ಪ್ರಾರಂಭಿಸಿದೆವು. ಅಜ್ಞಾತಸಮಯದಲ್ಲಿ ಯಾರಿಗೂ ತಿಳಿಯದ ರೀತಿಯಲ್ಲಿರ ಬೇಕೆಂಬುದೊಂದೇ ನಮ್ಮ ಅಭಿಮತವಾಗಿದ್ದಿತು. ಅದರ ಸಾಧನೆಯೂ ಆಗಿ ಹೋಯಿತು. ಅಜ್ಞಾತವಾಸದನಂತರ ಈಗ ನಾವು ಬೇರೊಂದು ಅಭಿಮತ ವನ್ನು ಹೊಂದಿದವರಾಗಿದ್ದೇವೆ. ರಾಜ್ಯವನ್ನು ಪುನಃ ಸಾಧ್ಯವಾದಷ್ಟು ಬೇಗ

ಪಡೆದುಕೊಳ್ಳಬೇಕೆಂಬುದೇ ಇಂದಿನ ನಮ್ಮ ಅಭಿಮತವಾಗಿದೆ. ರಾಜ್ಯವನ್ನು ಪಡೆದುಕೊಂಡ ಮೇಲೆ ಪುನಃ ನಮ್ಮ ಅಭಿಪ್ರಾಯಗಳು ವ್ಯತ್ಯಾಸಗೊಳ್ಳ ಬಹುದು. ಮಾಧವ! ಆದುದರಿಂದ ಕಾಲ-ದೇಶ-ವರ್ತಮಾನಗಳಿಗೆ ಅನುಸಾರ ವಾಗಿ ಮನುಷ್ಯನ ಅಭಿಪ್ರಾಯಗಳೂ ವ್ಯತ್ಯಾಸಗೊಳ್ಳುತ್ತಲೇ ಇರುತ್ತವೆ.

**ಅಸ್ಮಾಕಮಪಿ ವಾರ್ಷ್ಣೇಯ ವನೇ ವಿಚರತಾಂ ತದಾ ।**
**ನ ತಥಾ ಪ್ರಣಯೋ ರಾಜ್ಯೇ ಯಥಾ ಸಮ್ಪ್ರತಿ ವರ್ತತೇ ॥೮॥**

ಕೃಷ್ಣ! ನನಗೆ ನೆನಪಿರುವಂತೆಯೇ, ನಾವು ಅರಣ್ಯಗಳಲ್ಲಿ ಅಲೆದಾಡು ತ್ತಿದ್ದಾಗ ನಮಗೆ ರಾಜ್ಯದ ವಿಷಯದಲ್ಲಿ ಈಗಿರುವಂತೆ ಹೆಚ್ಚಿನ ಆದರವೇ ಇರಲಿಲ್ಲ. ರಾಜ್ಯವನ್ನು ಪಡೆದುಕೊಳ್ಳಬೇಕೆಂಬ ಉತ್ಕಟೇಚ್ಛೆಯು ಅರಣ್ಯ ದಲ್ಲಿದ್ದಾಗ ನಮಗೆ ಉಂಟಾಗಲೇ ಇಲ್ಲ.

ಜನಾರ್ದನ! ನಾವು ವನವಾಸದಿಂದ ಪ್ರತಿನಿವೃತ್ತರಾದೆವೆಂಬ ವಾರ್ತೆ ಯನ್ನು ಕೇಳಿ ನಿನ್ನ ಅನುಗ್ರಹದಿಂದಾಗಿ ಏಳು ಅಕ್ಷೌಹಿಣೀಸೈನಿಕರು ನಮ್ಮ ನೆರವಿಗೆ ಆಗಮಿಸಿದ್ದಾರೆ. ಇವರೆಲ್ಲರೂ ಪುರುಷವ್ಯಾಘ್ರರು. ಅಚಿಂತ್ಯವಾದ, ಅಪಾರವಾದ ಬಲವುಳ್ಳವರು ಮತ್ತು ಪೌರುಷವುಳ್ಳವರು. ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿರತಕ್ಕವರು. ಇಂತಹವರನ್ನು ರಣರಂಗದಲ್ಲಿ ನೋಡಿದ ಯಾವನು ತಾನೇ ಭಯಪಡದೇ ಇರುವನು? ತನ್ನ ಪ್ರಾಣವು ಉಳಿಯಲಾರದೆಂದು ಯಾರು ತಾನೇ ಚಿಂತಿಸುವುದಿಲ್ಲ?

(ತಮ್ಮಂತೆಯೇ ದುರ್ಯೋಧನನ ಮನಸ್ಸೂ ವ್ಯತ್ಯಾಸವಾದೀತೆಂಬ ಅಭಿಪ್ರಾಯವು ನಕುಲನದಾಗಿದೆ. ಹಿಂದೆ ದುರ್ಯೋಧನನು ರಾಜ್ಯವನ್ನು ಕೊಡಲು ಸಮ್ಮತಿಸದಿದ್ದರೂ ಇಂದು ನಮ್ಮ ಕಡೆಗೆ ಏಳು ಅಕ್ಷೌಹಿಣೀ ಸೈನ್ಯವು ಬಂದಿರುವಾಗ ತನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಬಹುದು. ಅಥವಾ ಯುಕ್ತಿಯುಕ್ತವಾದ ಕೃಷ್ಣನ ಮಾತನ್ನು ಕೇಳಿ ರಾಜ್ಯವನ್ನು ಕೊಡಲೂ ಒಪ್ಪಬಹುದು.

ಎಲ್ಲರ ಮಾತನ್ನೂ ಅತಿಕ್ರಮಿಸಿ ತನಗೆ ತೋರಿದಂತೆ ಮಾಡಬಹುದೆಂದು ಮೊದಲು ಹೇಳಿದ ನಕುಲನೂ ಶ್ರೀಕೃಷ್ಣನಿಗೆ ಸಲಹೆನೀಡದೇ ಇರಲಿಲ್ಲ. ತನ್ನ ಅಭಿಮತವನ್ನೂ ಶ್ರೀಕೃಷ್ಣನ ಮುಂದಿಟ್ಟನು. ತನ್ನ ಅಭಿಪ್ರಾಯವೂ

ಕೃಷ್ಣನಿಗೆ ಒಪ್ಪಿಗೆಯಾಗದಿದ್ದರೆ ಅದನ್ನು ಅತಿಕ್ರಮಿಸಿ ಶ್ರೀಕೃಷ್ಣನು ನಡೆದುಕೊಳ್ಳಬಹುದೆಂಬುದೇ ನಕುಲನ ಅಭಿಪ್ರಾಯವಾಗಿತ್ತು.)

**ಸ ಭವಾನ್ಕುರುಮಧ್ಯೇ ತಂ ಸಾನ್ತ್ವಪೂರ್ವಂ ಭಯೋತ್ತರಮ್ ।**
**ಬ್ರೂಯಾದ್ವಾಕ್ಯಂ ಯಥಾ ಮನ್ದೋ ನ ವ್ಯಥೇತ ಸುಯೋಧನಃ ॥**

ಮಾಧವ! ಮೂರ್ಖನಾದ ದುರ್ಯೋಧನನು ಕೋಪಗೊಳ್ಳದ ರೀತಿಯಲ್ಲಿ ನೀನು ಕುರುರಾಜರ ಮಧ್ಯದಲ್ಲಿ ಅವನೊಡನೆ ಸೌಜನ್ಯದಿಂದಲೇ ಮಾತನಾಡು. ಸಾಂತ್ವವಚನಗಳನ್ನೇ ಹೇಳು. ಸಂಧಿಗೇನಾದರೂ ಅವನು ಸಮ್ಮತಿಸದಿದ್ದರೆ ಕಡೆಯಲ್ಲಿ ಭಯೋತ್ಪಾದಕವಾದ ಮಾತುಗಳನ್ನೇ ಹೇಳು. (ನಮ್ಮ ಕಡೆಯ ವೀರರನ್ನು ಅವನ ಸ್ಮರಣೆಗೆ ತಂದು ಯುದ್ಧದಿಂದ ಸರ್ವನಾಶವಾಗುವುದೆಂಬುದನ್ನೂ ಅವನಿಗೆ ಮನದಟ್ಟು ಮಾಡಿಕೊಡು.)

ಮಾಧವ! ನಿನಗೆ ತಿಳಿದಿರುವಂತೆ ಯುಧಿಷ್ಠಿರ, ಭೀಮಸೇನ, ಅಪರಾಜಿತನಾದ ಅರ್ಜುನ, ಸಹದೇವ, ನಾನು, ಬಲರಾಮ, ನೀನು, ಸಾತ್ಯಕಿ, ಮಹಾವೀರ್ಯನಾದ ಮಕ್ಕಳಿಂದೊಡಗೂಡಿದ ವಿರಾಟ, ಸಾಮಾತ್ಯನಾದ ದ್ರುಪದ, ಧೃಷ್ಟದ್ಯುಮ್ನ, ವಿಕ್ರಾಂತನಾದ ಕಾಶಿರಾಜ, ಚೇದಿಯ ರಾಜನಾದ ಧೃಷ್ಟಕೇತು-ಇವರೆಲ್ಲರನ್ನೂ ಎದುರಿಸಿ, ಮಾಂಸ ಮತ್ತು ರಕ್ತಗಳಿಂದ ಪುಷ್ಟನಾಗಿರುವ ಯಾವ ಮನುಷ್ಯನು ತಾನೇ ಯುದ್ಧಮಾಡಿಯಾನು?

**ಸ ಭವಾನ್ಗಮನಾದೇವ ಸಾಧಯಿಷ್ಯತ್ಯಸಂಶಯಮ್ ।**
**ಇಷ್ಟಮರ್ಥಂ ಮಹಾಬಾಹೋ ಧರ್ಮರಾಜಸ್ಯ ಕೇವಲಮ್ ॥೧೭॥**

ಮಹಾಬಾಹುವೇ! ನೀನು ಹಸ್ತಿನಾಪಟ್ಟಣಕ್ಕೆ ಹೋಗುವುದರಿಂದಲೇ (ಹೆಚ್ಚು ಪ್ರಯಾಸವಿಲ್ಲದೆಯೇ) ಧರ್ಮರಾಜನ ಇಷ್ಟಾರ್ಥವನ್ನು ನೆರವೇರಿಸುವೆ. ಇದರಲ್ಲಿ ಸಂಶಯಲೇಶವೂ ಇಲ್ಲ. ವಿದುರ, ಭೀಷ್ಮ, ದ್ರೋಣ, ಬಾಹ್ಲಿಕ-ಇವರೆಲ್ಲರೂ ನೀನಲ್ಲಿ ಹೇಳಲಿರುವ ಶ್ರೇಯಸ್ಕರವಾದ ಮಾತುಗಳನ್ನು ಅರ್ಥಮಾಡಿಕೊಳ್ಳಲು ಸಮರ್ಥರಾಗಿರುತ್ತಾರೆ. ಭೀಷ್ಮ-ದ್ರೋಣಾದಿಗಳು ಜನಾಧಿಪನಾದ ಧೃತರಾಷ್ಟ್ರನನ್ನೂ ಸಹಾಮಾತ್ಯನಾದ ಪಾಪಚಾರಿಯಾದ ಸುಯೋಧನನನ್ನೂ ತಮ್ಮ ಸೂಕ್ತಿಗಳಿಂದ ಸಮಾಧಾನಗೊಳಿಸುತ್ತಾರೆ. (ನಿನ್ನ ಮಾತಿನಂತೆ ನಡೆಯಲು ಸಲಹೆ ನೀಡುತ್ತಾರೆ.)

**ಶ್ರೋತಾ ಚಾರ್ಥಸ್ಯ ವಿದುರಸ್ತ್ವಂ ಚ ವಕ್ತಾ ಜನಾರ್ದನ ।**
**ಕಮಿವಾರ್ಥಂ ನಿವರ್ತನ್ತಂ ಸ್ಥಾಪಯೇತಾಂ ನ ವರ್ತ್ಮನಿ ॥೧೮॥**

ಜನಾರ್ದನ! ನೀನು ಪ್ರವಚನಕಾರನಾಗಿರುವಾಗ ನೀನು ಹೇಳುವ ಮಾತುಗಳನ್ನು ಕೇಳಲು (ಯೋಗ್ಯರೀತಿಯಲ್ಲಿ ಅರ್ಥಮಾಡಿಕೊಳ್ಳಲು) ವಿದುರನಿರುವಾಗ–ಕೆಟ್ಟುಹೋಗಲಿರುವ ಯಾವ ಕಾರ್ಯವು ತಾನೇ ಸರಿ ಹೋಗುವುದಿಲ್ಲ? ) ನೀವಿಬ್ಬರೂ ಸೇರಿ ಯಾವ ಕಾರ್ಯವನ್ನು ತಾನೇ ಸರಿಯಾದ ಮಾರ್ಗಕ್ಕೆ ಸೆಳೆದು ತರುವುದಿಲ್ಲ? (ವಿದುರನೂ ಮತ್ತು ನೀನು ಸೇರಿದಿರೆಂದರೆ ಸಾಧಿಸಲಾಗದ ಕಾರ್ಯವೇ ಇಲ್ಲ.")

ಟ೦ನೆಯ ಅಧ್ಯಾಯವು ಮುಗಿಯಿತು.

ಟ೧ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಯುದ್ಧಕ್ಕೆ ಸಹದೇವ ಮತ್ತು ಸಾತ್ಯಕಿಯರ ಸಮ್ಮತಿ : ಸಮಸ್ತಯೋಧರ ಸಮರ್ಥನೆ

ನಕುಲನು ಮಾತು ಮುಗಿಸಿದನಂತರ ಸಹದೇವನು ತನ್ನ ಅಭಿಪ್ರಾಯ ವನ್ನು ಶ್ರೀಕೃಷ್ಣನೊಡನೆ ಹೇಳಿದನು :

"ವಾಸುದೇವ! ಧರ್ಮಜನು ನಿನ್ನೊಡನೆ ಹೇಳಿರುವುದು ಧರ್ಮಸಮ್ಮತ್ರ ವಾಗಿಯೇ ಇದೆ. ಅದೇ ಸನಾತನಧರ್ಮ. ಆದರೆ ಈ ವಿಷಯದಲ್ಲಿ ನನ್ನ ಅಭಿಪ್ರಾಯವು ಮಾತ್ರ ಹೀಗಿದೆ.

ಕೌರವ-ಪಾಂಡವರಿಗೆ ಯುದ್ಧವೇ ಆಗಬೇಕು. ಯುದ್ಧವಾಗುವ ರೀತಿಯಲ್ಲಿಯೇ ನೀನು ಕಾರ್ಯಮಾಡಬೇಕು.

**ಯದಿ ಪ್ರಶಮಮಿಚ್ಛೇಯುಃ ಕುರವಃ ಪಾಣ್ಡವೈಃ ಸಹ ।**
**ತಥಾಪಿ ಯುದ್ಧಂ ದಾಶಾರ್ಹ ಯೋಜಯೇಥಾಃ ಸಹೈವ ತೈಃ ॥೨॥**

ಒಂದು ವೇಳೆ ಕುರುಗಳೇ ಪಾಂಡವರೊಡನೆ ಶಾಂತಿಯನ್ನು ಅಪೇಕ್ಷಿಸಿ ದರೂ, ನೀನು ಅವರಿಗೂ ನಮಗೂ ಯುದ್ಧವಾಗುವಂತೆಯೇ ಮಾಡಬೇಕು. ಪಾಂಚಾಲಿಯು ಅಂತಹ ಅವಸ್ಥೆಯಲ್ಲಿ ತುಂಬಿದ ಸಭೆಗೆ ಸೆಳೆಯಲ್ಪಟ್ಟ ಳೆಂಬುದನ್ನು ನೋಡಿ ಅದರಿಂದ ಉದ್ಭೂತವಾಗಿರುವ ನನ್ನ ಕೋಪವು ದುರ್ಯೋಧನನ ವಧೆಯೊಂದರಿಂದ ಹೊರತಾಗಿ ಹೇಗೆ ಶಾಂತವಾದೀತು?

**ಯದಿ ಭೀಮಾರ್ಜುನೌ ಕೃಷ್ಣ ಧರ್ಮರಾಜಶ್ಚ ಧಾರ್ಮಿಕಃ ।**
**ಧರ್ಮಮುತ್ಸೃಜ್ಯ ತೇನಾಹಂ ಯೋದ್ಧುಮಿಚ್ಛಾಮಿ ಸಂಯುಗೇ ॥೩॥**

ಒಂದು ವೇಳೆ ಭೀಮಾರ್ಜುನರೂ ಮತ್ತು ಧಾರ್ಮಿಕನಾದ ಯುಧಿಷ್ಠಿರನೂ ಧರ್ಮವನ್ನೇ ಮುಂದೆಮಾಡಿಕೊಂಡು ಯುದ್ಧವನ್ನು ಮಾಡಲಿಚ್ಛಿಸುವುದಿಲ್ಲವಾದರೆ–ಧರ್ಮವನ್ನು ಪರಿತ್ಯಾಗಮಾಡಿಯಾದರೂ ರಣಭೂಮಿಯಲ್ಲಿ ದುರ್ಯೋಧನನೊಡನೆ ನಾನು ಯುದ್ಧಮಾಡಲಿಚ್ಛಿಸುತ್ತೇನೆ."

ಸಹದೇವನ ಮಾತುಗಳನ್ನು ಕೇಳಿ ಸಂತುಷ್ಟನಾದ ಸಾತ್ಯಕಿಯು ಹೇಳಿದನು :

"ಮಹಾಬಾಹೋ! ಮಹಾಮತಿಯಾದ ಸಹದೇವನು ಸತ್ಯವಾದ ಮಾತುಗಳನ್ನೇ ಹೇಳಿದ್ದಾನೆ. ದುರ್ಯೋಧನನ ದುಷ್ಟಕಾರ್ಯದ ಕಾರಣದಿಂದ ನನ್ನಲ್ಲಿ ಉದ್ಭೂತವಾಗಿರುವ ಕೋಪವೂ ಅವನ ವಧೆಯಿಂದಲೇ ಉಪಶಮನಹೊಂದುವುದು. ಚೀರಾಜಿನಗಳನ್ನು ಧರಿಸಿ ಬಹುದುಃಖಿತರಾಗಿದ್ದ ಪಾಂಡವರನ್ನು ಕಾಡಿನಲ್ಲಿ ನೋಡಿ ನಿನ್ನಲ್ಲಿಯೂ ಕೋಪವು ಉದ್ಭೂತವಾದುದು ನಿನ್ನ ಸ್ಮರಣೆಯಲ್ಲಿಲ್ಲವೇ? ಕೃಷ್ಣ! ಈ ಕಾರಣದಿಂದಾಗಿ ಮಾದ್ರಿಯ ಮಗನಾದ, ರಣಧೀರನಾದ, ಶೂರನಾದ ಸಹದೇವನು ಯಾವ ಮಾತನ್ನು ಹೇಳಿದನೋ–ಆ ಮಾತು ಇಲ್ಲಿಗೆ ಯುದ್ಧದ ಸಲುವಾಗಿ ಆಗಮಿಸಿರುವ ಎಲ್ಲ ಯೋಧರಿಗೂ ಸಮ್ಮತವಾಗಿದೆ."

ಜನಮೇಜಯ! ಸಾತ್ಯಕಿಯು ತನ್ನ ನಿರ್ಧಾರವನ್ನು ಶ್ರೀಕೃಷ್ಣನೊಡನೆ ಹೇಳುತ್ತಿರಲಾಗಿ, ಯೋಧಸಮೂಹದಲ್ಲಿ ಅತ್ಯಂತಭಯಂಕರವಾದ ಸಿಂಹನಾದಗಳು ಕೇಳಿಬಂದುವು. ಯುದ್ಧವನ್ನು ಮಾಡಬೇಕೆಂಬ ಉತ್ಕಟೇಚ್ಛೆಯಿಂದಲೇ ಅಲ್ಲಿಗೆ ಆಗಮಿಸಿದ್ದ ಆ ಎಲ್ಲ ವೀರರೂ ಸಾತ್ಯಕಿಯನ್ನು ಸಂತೋಷಗೊಳಿಸುತ್ತಾ ಅವನ ಮಾತನ್ನು 'ಸಾಧು-ಸಾಧು' ಎಂಬ ಪ್ರಶಂಸಾಘೋಷಣೆಗಳಿಂದ ಬಹುವಾಗಿ ಗೌರವಿಸಿದರು."

ಎಂಬತ್ತೊಂದನೆಯ ಅಧ್ಯಾಯವು ಮುಗಿಯಿತು.

## ದ್ರೌಪದಿಯು ಶ್ರೀಕೃಷ್ಣನೊಡನೆ ತನ್ನ ದುಃಖವನ್ನು ಹೇಳಿಕೊಂಡುದು : ಶ್ರೀಕೃಷ್ಣನ ಆಶ್ವಾಸನೆ

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

"ಜನಮೇಜಯ! ಕಪ್ಪಾದ ಮತ್ತು ನೀಳವಾದ ಕೇಶರಾಶಿಯಿಂದ ಪರಿಶೋಭಿಸುತ್ತಿದ್ದ, ದ್ರುಪದರಾಜನ ಮಗಳಾದ ಕೃಷ್ಣೆಯು ಧರ್ಮಾರ್ಥ ಸಹಿತವಾದ ಮತ್ತು ಹಿತಕರವಾದ ಧರ್ಮರಾಜನ ಮಾತುಗಳನ್ನು ಕೇಳಿ ಶೋಕಾಭಿತಪ್ತಳಾಗಿ, ವೀರೋಚಿತವಾದ ಮಾತುಗಳನ್ನಾಡಿದ ಸಹದೇವನನ್ನೂ ಮತ್ತು ಮಹಾರಥನಾದ ಸಾತ್ಯಕಿಯನ್ನೂ ಶ್ಲಾಘನೆಮಾಡುತ್ತಾ ಅಲ್ಲಿಯೇ ಕುಳಿತಿದ್ದ ದಾಶಾರ್ಹಕುಲಭೂಷಣನಾದ ಶ್ರೀಕೃಷ್ಣನನ್ನು ಕುರಿತು ಹೇಳಿದಳು :

ಶಾಂತಮನಸ್ಕನಾಗಿ ಕುಳಿತಿದ್ದ ಮತ್ತು ಸಾಂತ್ವಯುಕ್ತವಾದ ಮಾತುಗಳನ್ನಾಡಿದ ಭೀಮಸೇನನನ್ನು ನೋಡಿ ದ್ರೌಪದಿಯ ಮನಸ್ಸು ಬಹಳ ಬೇಸರಗೊಂಡಿತು. ಮನನಶೀಲಳಾದ ದ್ರೌಪದಿಯು ಕಂಬನಿದುಂಬಿದ ಕಣ್ಣುಗಳಿಂದ ಕೂಡಿದವಳಾಗಿ ಈ ಮಾತುಗಳನ್ನು ಹೇಳಿದಳು.:

"ಮಹಾಬಾಹುವೇ! ಧರ್ಮಜ್ಞನೇ! ಮಾಧವ! ಯಾವ ರೀತಿಯಲ್ಲಿ ಅಮಾತ್ಯಸಹಿತನಾದ, ಧೃತರಾಷ್ಟ್ರನ ಮಗನಾದ ದುರ್ಯೋಧನನು ವಂಚನೆಯ ಮಾರ್ಗವನ್ನು ಹಿಡಿದು ಪಾಂಡವರನ್ನು ಸುಖಭೋಗಗಳಿಂದ (ರಾಜ್ಯದಿಂದ) ಭ್ರಷ್ಟರನ್ನಾಗಿ ಮಾಡಿದನೆಂಬ ವಿಷಯವು ನಿನಗೆ ತಿಳಿದೇ ಇರುವುದು. ಧೃತರಾಷ್ಟ್ರನು ಸಂಜಯನಿಗೆ ರಹಸ್ಯದಲ್ಲಿ ಏನು ಹೇಳಿದನು ಮತ್ತು ಯಾವ ಉದ್ದೇಶದ ಸಾಧನೆಗಾಗಿ ಅವನನ್ನಿಲ್ಲಿಗೆ ಕಳುಹಿಸಿದ್ದನೆಂಬ ವಿಷಯವೂ ನಿನಗೆ ತಿಳಿದಿದೆ. ಸಂಜಯನು ಇಲ್ಲಿಗೆ ಬಂದು ಯುಧಿಷ್ಠಿರನೊಡನೆ ಹೇಳಿದ ಮಾತುಗಳನ್ನು ನೀನು ಪ್ರತ್ಯಕ್ಷವಾಗಿಯೇ ಕೇಳಿರುವೆ. ಸಂಜಯನೊಡನೆ ಯುಧಿಷ್ಠಿರನು ಹೇಳಿರುವ ಮಾತುಗಳೂ ನಿನಗೆ ತಿಳಿದಿವೆ. ಅದನ್ನೇ ನಾನು ನಿನ್ನ ಸ್ಮರಣೆಗೆ ಪುನಃ ತರುತ್ತೇನೆ.

ಪಞ್ಚ ನಸ್ತಾತ ದೀಯನ್ತಾಂ ಗ್ರಾಮಾ ಇತಿ ಮಹಾದ್ಯುತೇ ।
ಅವಿಸ್ಥಲಂ ವೃಕಸ್ಥಲಂ ಮಾಕನ್ದೀಂ ವಾರಣಾವತಮ್ ॥೭॥

ಅವಸಾನಂ ಮಹಾಬಾಹೋ ಕಞ್ಚಿದೇಕಂ ಚ ಪಞ್ಚಮಮ್ ।
ಇತಿ ದುರ್ಯೋಧನೋ ವಾಚ್ಯಃ ಸುಹೃದಶ್ಚಾಸ್ಯ ಕೇಶವ ॥೮॥



ಮಹಾದ್ಯುತಿಮಂತನಾದ ಕೇಶವನೇ! ಯುಧಿಷ್ಠಿರನು ಸಂಜಯನಿಗೆ ಈ ಮಾತುಗಳನ್ನು ಹೇಳಿದನು.:

‘ಸಂಜಯ! ಅವಿಸ್ಥಲ, ವೃಕಸ್ಥಲ, ಮಾಕನ್ದೀ, ವಾರಣಾವತ ಮತ್ತು ಕೊನೆಯದಾದ ಯಾವುದಾದರೊಂದು ಗ್ರಾಮ–ಈ ಐದು ಗ್ರಾಮ ಗಳನ್ನು ದುರ್ಯೋಧನನು ನಮಗೆ ಕೊಡಲಿ. ಈ ವಿಷಯವನ್ನು ದುರ್ಯೋ

ಧನನಿಗೂ ಹೇಳಬೇಕು. ಅವನ ಮಿತ್ರರಿಗೂ ಹೇಳಬೇಕು.'–ಹೀಗೆ ಸಂಜಯನ ಮೂಲಕವಾಗಿ ಯುಧಿಷ್ಠಿರನು ದುರ್ಯೋಧನನಿಗೆ ಹೇಳಿಕಳುಹಿಸಿರುವನು.

ಆದರೆ, ಕೃಷ್ಣ! ಕೌರವರೊಡನೆ ಸಂಧಿಯನ್ನೇ ಮಾಡಿಕೊಳ್ಳಬೇಕೆಂದು ಬಹುವಾಗಿ ಆಶಿಸಿರುವ ಶ್ರೀಮಂತನಾದ ಧರ್ಮರಾಜನ ವಿನಮ್ರತಾಪೂರ್ವಕವಾದ ಮಾತುಗಳನ್ನು ಕೇಳಿಯೂ ದುರ್ಯೋಧನನು ಅದನ್ನು ನಡೆಸಿಕೊಡಲಿಲ್ಲ. ಕೇವಲ ಐದು ಗ್ರಾಮಗಳನ್ನು ಕೊಡಲೂ ಅವನು ಮುಂದೆ ಬರಲಿಲ್ಲ. ದುರ್ಯೋಧನನು ರಾಜ್ಯವನ್ನು ಕೊಡದೆಯೇ ಸಂಧಿಮಾಡಿಕೊಳ್ಳುವ ಅಪೇಕ್ಷೆಯುಳ್ಳವನಾಗಿದ್ದರೆ ಅಲ್ಲಿಗೆ ಹೋಗಿ ಅದನ್ನು ಖಂಡಿತವಾಗಿಯೂ ಒಪ್ಪಬಾರದು. (ಸಂಧಿಯಾಗಬೇಕಾದರೆ ರಾಜ್ಯವನ್ನು ಕೊಡಲೇಬೇಕು. ಹಾಗಿಲ್ಲದಿದ್ದರೆ ಅಲ್ಲಿಗೆ ನೀನು ಹೋಗಬೇಕಾದ ಅಗತ್ಯವೇ ಇಲ್ಲ.) ಸೃಂಜಯರೊಡನೆ ಕೂಡಿರುವ ಪಾಂಡವರು ಕೋಪಗೊಂಡಿರುವ ಮತ್ತು ಘೋರವಾದ (ಅಗಾಧವಾದ) ಧೃತರಾಷ್ಟ್ರನ ಸೇನೆಯನ್ನೆದುರಿಸಿ ನಿಂತು ಯುದ್ಧಮಾಡಲು ಖಂಡಿತವಾಗಿಯೂ ಸಮರ್ಥರಾಗಿದ್ದಾರೆ.

ಮಧುಸೂದನ! ಸಾಮದಿಂದಾಗಲೀ, ದಾನದಿಂದಾಗಲೀ–ಅವರಿಂದ ಯಾವ ವಿಧವಾದ ಪ್ರಯೋಜನವನ್ನೂ ಪಡೆದುಕೊಳ್ಳುವ ಸಾಧ್ಯತೆಯಿಲ್ಲ. ಆದುದರಿಂದ ಅವರ ವಿಷಯದಲ್ಲಿ ನೀನು ಕೃಪೆಯನ್ನೆಂದಿಗೂ ತೋರಬಾರದು.

**ಸಾಮ್ನಾ ದಾನೇನ ವಾ ಕೃಷ್ಣ ಯೇ ನ ಶಾಮ್ಯನ್ತಿ ಶತ್ರವಃ ।**
**ಯೋಕ್ತವ್ಯಸ್ತೇಷು ದಣ್ಡಃ ಸ್ಯಾಜ್ಜೀವಿತಂ ಪರಿರಕ್ಷತಾ ॥೧೩॥**

ಸಾಮದಿಂದಾಗಲೀ, ದಾನದಿಂದಾಗಲೀ ಯಾವ ಶತ್ರುಗಳು ಸಮಾಧಾನವನ್ನು ಹೊಂದುವುದಿಲ್ಲವೋ ಅಂತಹವರ ವಿಷಯದಲ್ಲಿ–ತನ್ನ ಜೀವಿತದ ರಕ್ಷಣೆಯನ್ನು ಅಭಿಲಾಷಿಸುವವನು–ದಂಡಪ್ರಯೋಗವನ್ನೇ ಮಾಡಬೇಕು.

ಮಹಾಬಾಹುವಾದ ಅಚ್ಯುತನೇ! ಈ ಕಾರಣದಿಂದಾಗಿ ನೀನು ಪಾಂಡವರಿಂದಲೂ, ಸೃಂಜಯರಿಂದಲೂ ಕೂಡಿದವನಾಗಿ ಅವರ ಮೇಲೆ ಮಹಾದಂಡವನ್ನೇ ಪ್ರಯೋಗಮಾಡಬೇಕು. ಈ ಕಾರ್ಯವು ಕುಂತಿಯ ಪುತ್ರರು ಮಾಡಲು ಯೋಗ್ಯವಾಗಿದೆ. (ಕುಂತೀಪುತ್ರರು ಈಗ ಈ ಕಾರ್ಯವನ್ನೇ ಮಾಡಬೇಕು.) ಇದರಿಂದ ನಿನ್ನ ಯಶಸ್ಸೂ ವೃದ್ಧಿಗೊಳ್ಳುವುದು.

ಮಾಡಬೇಕಾದ ಕರ್ತವ್ಯವನ್ನೂ ಮಾಡಿ ಮುಗಿಸಿದಂತಾಗುವುದು. ಸರ್ವ ಕ್ಷತ್ರಿಯರ ಸಮುದಾಯಕ್ಕೂ ಈ ಕಾರ್ಯವು ಸುಖಾವಹವಾಗಿ ಪರಿಣಮಿಸುವುದು.

**ಕ್ಷತ್ರಿಯೇಣ ಹಿ ಹನ್ತವ್ಯಃ ಕ್ಷತ್ರಿಯೋ ಲೋಭಮಾಸ್ಥಿತಃ ।**
**ಅಕ್ಷತ್ರಿಯೋ ವಾ ದಾಶಾರ್ಹ ಸ್ವಧರ್ಮಮನುತಿಷ್ಠತಾ ॥೧೬॥**

ಸ್ವಧರ್ಮದಲ್ಲಿಯೇ ನಿರತನಾಗಿರುವ ಕ್ಷತ್ರಿಯನಿಂದ–ಲೋಭಕ್ಕೆ ಆಶ್ರಯಕೊಡುವ ಮನುಷ್ಯನು ಕ್ಷತ್ರಿಯನೇ ಆಗಿರಲಿ ; ಅಕ್ಷತ್ರಿಯನೇ ಆಗಿರಲಿ–ಸಂಹರಿಸಲ್ಪಡಬೇಕು. (ಧರ್ಮನಿಷ್ಠನಾದ ಕ್ಷತ್ರಿಯನು ಲೋಭಿಯಾದವನನ್ನು ಕೊಲ್ಲಲೇಬೇಕು, ಕೃಷ್ಣ!)

**ಅನ್ಯತ್ರ ಬ್ರಾಹ್ಮಣಾತ್ತಾತ ಸರ್ವಪಾಪೇಷ್ವವಸ್ಥಿತಾತ್ ।**
**ಗುರುರ್ಹಿ ಸರ್ವವರ್ಣಾನಾಂ ಬ್ರಾಹ್ಮಣಃ ಪ್ರಸೃತಾಗ್ರಭುಕ್ ॥೧೭॥**

ಬ್ರಾಹ್ಮಣನೊಬ್ಬನನ್ನು ಬಿಟ್ಟು, ಲೋಭಿಯಾದವನು ಇತರ ಯಾವ ವರ್ಣದಲ್ಲಿಯೇ ಇರಲಿ–ಅಂತಹವನನ್ನು ಸ್ವಧರ್ಮನಿಷ್ಠನಾಗಿರುವ ಕ್ಷತ್ರಿಯನು ಕೊಲ್ಲಲೇಬೇಕು. ಬ್ರಾಹ್ಮಣನು ಅನೇಕವಿಧವಾದ ಅಕಾರ್ಯಗಳಲ್ಲಿ ತೊಡಗಿದ್ದರೂ ಅವನನ್ನು ಕೊಲ್ಲಬಾರದು. ಏಕೆಂದರೆ: ಬ್ರಾಹ್ಮಣನು ಎಲ್ಲ ವರ್ಣದವರಿಗೂ ಗುರುವಾಗಿರುತ್ತಾನೆ ಮತ್ತು ಪೂಜ್ಯನಾಗಿರುತ್ತಾನೆ. (**ಪ್ರಸೃತಂ ಪ್ರದತ್ತಂ ಚ ತದಗ್ರಂ ಚ, ತಸ್ಯ ಭೋಕ್ತಾ ಪ್ರಸೃತಾಗ್ರಭುಕ್- ಪೂಜ್ಯ ಇತ್ಯರ್ಥಃ** ಎಂಬುದಾಗಿ ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.)

**ಯಥಾವಧ್ಯೇ ವಧ್ಯಮಾನೇ ಭವೇದ್ದೋಷೋ ಜನಾರ್ದನ ।**
**ಸ ವಧ್ಯಸ್ಯಾವಧೇ ದೃಷ್ಟ ಇತಿ ಧರ್ಮವಿದೋ ವಿದುಃ ॥೧೮॥**

ಜನಾರ್ದನ! ಯಾವ ರೀತಿಯಲ್ಲಿ ವಧೆಗೆ ಅನರ್ಹನಾದವನನ್ನು ವಧೆಮಾಡಿದರೆ ದೋಷವುಂಟಾಗುವುದೋ–ಅದೇ ರೀತಿಯಲ್ಲಿ ವಧೆಗೆ ಅರ್ಹನಾದವನನ್ನು ವಧೆಮಾಡದಿದ್ದರೂ ದೋಷವು ಪ್ರಾಪ್ತವಾಗುವುದೆಂದು ಧರ್ಮವನ್ನು ತಿಳಿದವರು ಭಾವಿಸುತ್ತಾರೆ. ಆದುದರಿಂದ, ಕೃಷ್ಣ! ವಧೆಗೆ ಅರ್ಹರಾದವರನ್ನು ವಧಿಸದೇ ಇರುವುದರಿಂದ ಪ್ರಾಪ್ತವಾಗುವ ದೋಷಕ್ಕೆ ನೀನು ಭಾಗಿಯಾಗದ

ರೀತಿಯಲ್ಲಿ ವರ್ತಿಸು. ಪಾಂಡವರಿಂದಲೂ, ದಾಶಾರ್ಹರಿಂದಲೂ ಮತ್ತು ಸೈನ್ಯಸಹಿತರಾದ ಸೃಂಜಯರಿಂದಲೂ ಕೂಡಿದವನಾಗಿ ವಧೆಗೆ ಅರ್ಹರಾದವರನ್ನು ವಧಿಸುವ ಪ್ರಯತ್ನಮಾಡು.

ಕೃಷ್ಣ! ನಿನ್ನೊಡನೆ ನನಗಿರುವ ಹೆಚ್ಚಿನ ಸಲಿಗೆಯಿಂದಾಗಿ ನಾನು ಹಿಂದೆ ಹೇಳಿದುದನ್ನೇ ಪುನಃ ಹೇಳುತ್ತೇನೆ. ಕೇಶವ! ನಿನಗೆ ತಿಳಿದಿರುವಂತೆ ಈ ವಿಶ್ವದಲ್ಲಿ ನನಗೆ ಸಮಾನರಾದ ಸ್ತ್ರೀಯರು ಬೇರೆ ಯಾರಿದ್ದಾರೆ?

**ಸುತಾ ದ್ರುಪದರಾಜಸ್ಯ ವೇದಿಮಧ್ಯಾತ್ಸಮುತ್ಥಿತಾ ।**
**ಧೃಷ್ಟದ್ಯುಮ್ನಸ್ಯ ಭಗಿನೀ ತವ ಕೃಷ್ಣ ಪ್ರಿಯಾ ಸಖೀ ॥೨೧॥**

ನಾನು ದ್ರುಪದರಾಜನ ಮಗಳು. ಅಯೋನಿಜೆ. ಯಜ್ಞಕುಂಡದ ಮಧ್ಯದಿಂದ ಆವಿರ್ಭೂತಳಾದವಳು. ಮಹಾಪರಾಕ್ರಮಿಯಾದ ಮತ್ತು ನನ್ನಂತೆಯೇ ಅಯೋನಿಜನಾದ ಧೃಷ್ಟದ್ಯುಮ್ನನ ತಂಗಿ. ಎಲ್ಲಕ್ಕಿಂತಲೂ ಮಿಗಿಲಾಗಿ ನಿನ್ನ ಪ್ರೀತಿಗೆ ಪಾತ್ರಳಾದ ಸಖಿಯೂ ನಾನಾಗಿರುತ್ತೇನೆ.

**ಆಜಮೀಢಕುಲಂ ಪ್ರಾಪ್ತಾ ಸ್ನುಷಾ ಪಾಣ್ಡೋರ್ಮಹಾತ್ಮನಃ ।**
**ಮಹಿಷೀ ಪಾಣ್ಡುಪುತ್ರಾಣಾಂ ಪಞ್ಚೇನ್ದ್ರಸಮವರ್ಚಸಾಮ್ ॥೨೨॥**

ಹುಟ್ಟಿದುದು ಸುಪ್ರಸಿದ್ಧವಾದ ಪಾಂಚಾಲವಂಶದಲ್ಲಾದರೆ ಸೇರಿದುದು ಸುಪ್ರಸಿದ್ಧವಾದ ಅಜಮೀಢಕುಲಕ್ಕೆ. ಮಹಾತ್ಮನಾದ ಪಾಂಡುವಿಗೆ ಸೊಸೆಯಾದೆನು. ಪಂಚೇಂದ್ರಸಮಾನವರ್ಚಸ್ವಿಗಳಾದ ಪಾಂಡುಪುತ್ರರ ಪಟ್ಟಮಹಿಷಿಯಾಗಿದ್ದೇನೆ.

**ಸುತಾ ಮೇ ಪಞ್ಚಭಿರ್ವೀರೈಃ ಪಞ್ಚ ಜಾತಾ ಮಹಾರಥಾಃ ।**
**ಅಭಿಮನ್ಯುರ್ಯಥಾ ಕೃಷ್ಣ ತಥಾ ತೇ ತವ ಧರ್ಮತಃ ॥೨೩॥**

ಈ ಐವರು ವೀರಪತಿಗಳಿಂದ ನನಗೆ ಮಹಾರಥರಾದ ಐವರು ವೀರ ಪುತ್ರರು ಹುಟ್ಟಿದ್ದಾರೆ. ಅಭಿಮನ್ಯುವು ಯಾವ ರೀತಿಯಲ್ಲಿ ಭಾಗಿನೇಯನಾಗಿ ನಿನ್ನ ಪ್ರೀತಿಗೆ ಪಾತ್ರನಾಗಿರುವನೋ–ಅದೇ ರೀತಿಯಲ್ಲಿ ಈ ನನ್ನ ಐವರು ಮಕ್ಕಳೂ ಧರ್ಮತಃ ನಿನ್ನ ಪ್ರೀತಿಗೆ ಪಾತ್ರರಾಗಿರುತ್ತಾರೆ. (ನಿನ್ನ ಭಾಗಿನೇಯರಾಗಿದ್ದಾರೆ.)

**ಸಾಹಂ ಕೇಶಗ್ರಹಂ ಪ್ರಾಪ್ತಾ ಪರಿಕ್ಲಿಷ್ಟಾ ಸಭಾಂ ಗತಾ ।**
**ಪಶ್ಯತಾಂ ಪಾಣ್ಡುಪುತ್ರಾಣಾಂ ತ್ವಯಿ ಜೀವತಿ ಕೇಶವ ॥೨೪॥**

ಅಂತಹ ಸೌಭಾಗ್ಯಶಾಲಿನಿಯಾದ, ಸತ್ಕುಲಪ್ರಸೂತೆಯಾದ, ಸಾಧ್ವಿಯಾದ, ಅಯೋನಿಜೆಯಾದ, ಪತಿವ್ರತೆಯಾದ ನಾನು–ವೀರರಾದ ಪಾಂಡುಪುತ್ರರು ನೋಡುತ್ತಿದ್ದಂತೆಯೇ–ನೀನಿನ್ನೂ ಜೀವಿಸಿರುವಾಗಲೇ–ನೀಳವಾದ ಮತ್ತು ಕಪ್ಪಾದ ನನ್ನ ತಲೆಗೂದಲಿನ ಮೂಲಕವಾಗಿ ದುಷ್ಟನಿಂದ ಹಿಡಿಯಲ್ಪಟ್ಟೆನು. ಆ ದುಷ್ಟನಿಂದಲೇ ಅತ್ತಲಿಂದಿತ್ತ ಸೆಳೆದಾಡಲ್ಪಟ್ಟು ಬಹುವಾದ ಕ್ಲೇಶವನ್ನೂ ಅಪಮಾನವನ್ನೂ ಅನುಭವಿಸಿದೆನು. ಅಂತಹ ಅವಸ್ಥೆಯಲ್ಲಿ ನಾನು ತುಂಬಿದ ಸಭೆಗೆ ಹೋದೆನು. (ಆ ದುಷ್ಟನು ನನ್ನ ಮುಡಿಯನ್ನು ಹಿಡಿದು ತುಂಬಿದ ಸಭೆಗೆ ದರದರನೆ ಸೆಳೆದುಕೊಂಡು ಹೋದನು.) ಪಾಂಡವರೂ, ಪಾಂಚಾಲರೂ ಮತ್ತು ವೃಷ್ಣಿಗಳೂ ಜೀವಿಸಿರುವಾಗಲೇ ಮಹಾಪಾಪಿಷ್ಠರಾದ ಕೌರವರಿಗೆ ದಾಸಿಯಾದೆನು. ದಾಸ್ಯಭಾವದಿಂದಲೇ ನಾನು ಆ ಸಭಾಮಧ್ಯದಲ್ಲಿರಬೇಕಾಯಿತು.

**ನಿರಮರ್ಷೇಷ್ವಚೇಷ್ಟೇಷು ಪ್ರೇಕ್ಷಮಾಣೇಷು ಪಾಣ್ಡುಷು ।**
**ಪಾಹಿ ಮಾಮಿತಿ ಗೋವಿನ್ದ ಮನಸಾ ಚಿನ್ತಿತೋಽಸಿ ಮೇ ॥೨೬॥**

ನಾನು ಅಂತಹ ಒಂದು ದುರವಸ್ಥೆಯಲ್ಲಿದ್ದಾಗ–ತಮ್ಮ ಧರ್ಮಪತ್ನಿಯನ್ನು ತಮ್ಮ ಕಣ್ಣೆದುರಿನಲ್ಲಿಯೇ ಅತ್ತಿತ್ತ ಸೆಳೆದಾಡುತ್ತಿದ್ದಾಗ–ನನ್ನ ಪತಿಗಳೂ ತೂಷ್ಣೀಂಭಾವದಿಂದ ಕುಳಿತು ನೋಡುತ್ತಿದ್ದರು. ಕೋಪಗೊಳ್ಳಲಿಲ್ಲ. ದುಷ್ಟರಿಂದ ನನ್ನನ್ನು ಬಿಡಿಸಿಕೊಳ್ಳಲು ಯಾವ ವಿಧವಾದ ಪ್ರಯತ್ನವನ್ನೂ ಮಾಡಲಿಲ್ಲ ; ನಿಷ್ಕ್ರೋಧರಾಗಿ ನಿಶ್ಚೇಷ್ಟರಾಗಿ ದಾರುಣದೃಶ್ಯವನ್ನು ನೋಡುತ್ತಾ ಕುಳಿತಿದ್ದರು. ಆ ಸಮಯದಲ್ಲಿ ನಾನೇನು ಮಾಡಿದೆನೆಂಬುದು ನಿನಗೊಬ್ಬನಿಗೇ ಗೊತ್ತು. 'ಪಾಹಿ ಮಾಂ ಗೋವಿನ್ದ' - 'ಗೋವಿಂದನೇ! ನನ್ನನ್ನು ರಕ್ಷಿಸು' 'ನನ್ನ ಮಾನವನ್ನುಳಿಸು'–ಹೀಗೆಂಬುದಾಗಿ ನಿನ್ನನ್ನೇ ನಾನು ಮನಸ್ಸಿನಲ್ಲಿಯೇ ಚಿಂತಿಸಿದೆನು. (ನಿನ್ನನ್ನೇ ಮೊರೆಹೊಕ್ಕೆನು.)

ಆ ಸಮಯದಲ್ಲಿ ಸಕಲೈಶ್ವರ್ಯಸಂಪನ್ನನಾದ, ನನ್ನ ಮಾವನಾದ ಧೃತರಾಷ್ಟ್ರರಾಜನು ನನ್ನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ವರಂ ವೃಣೀಷ್ವ ಪಾಞ್ಚಾಲಿ ವರಾರ್ಹಾಸಿ ಮತಾ ಮಮ ॥೨೭॥**

'ವರವನ್ನು ಕೇಳು, ಪಾಂಚಾಲಿ! ನೀನು ವರಪಡೆಯಲು ಯೋಗ್ಯ

ಳಾದವಳೆಂಬುದು ನನ್ನ ಅಭಿಮತವಾಗಿದೆ. (ನನಗೆ ಸಮ್ಮತಳಾದ ನೀನು ವರಕ್ಕೆ ಯೋಗ್ಯಳು.)'

ನನ್ನ ಮಾವನು ಹೀಗೆಂದು ಹೇಳಿದೊಡನೆಯೇ ನಾನು ವರಗಳನ್ನು ಕೇಳಿದೆನು, ಕೃಷ್ಣ!

**ಅದಾಸಾಃ ಪಾಣ್ಡವಾಃ ಸನ್ತು ಸರಥಾಃ ಸಾಯುಧಾ ಇತಿ ॥೨೮॥**

'ಪಾಂಡವರು ದಾಸ್ಯದಿಂದ ಮುಕ್ತರಾಗಲಿ. ಇವರು ಸರಥರೂ ಸಾಯುಧರೂ ಆಗಲಿ. ದಾಸ್ಯಭಾವದಿಂದ ಮುಕ್ತರಾಗುವುದು ಮಾತ್ರವಲ್ಲ. ಅವರಿಗೆ ಆಯುಧಗಳನ್ನು ಹೊಂದಿರಲೂ ಮತ್ತು ರಥಗಳಲ್ಲಿ ಕುಳಿತುಕೊಳ್ಳಲೂ ಅವಕಾಶವಿರಬೇಕು.' ನಾನು ಹೀಗೆಂದು ವರಕೇಳಿದ ನಂತರವೇ ಪಾಂಡವರು ದಾಸ್ಯಭಾವದಿಂದ ವಿಮೋಚನೆಯನ್ನು ಹೊಂದಿ ಅರಣ್ಯದಲ್ಲಿ ವಾಸಮಾಡುವ ಸಲುವಾಗಿ ಹೊರಟರು, ಕೇಶವ! ಇಂತಹ ಅನೇಕ ದುಃಖಗಳನ್ನು ನಾವು ಇದುವರೆಗೂ ಅನುಭವಿಸಿದ್ದೇವೆ. ಅನೇಕಕಷ್ಟಗಳನ್ನೂ ಅನುಭವಿಸಿದ್ದೇವೆ. ನಾನು ಪಟ್ಟ ಕಷ್ಟ ಮತ್ತು ದುಃಖಗಳೆಲ್ಲವೂ ನಿನಗೆ ಸಂಪೂರ್ಣವಾಗಿ ತಿಳಿದಿವೆ. ಜನಾರ್ದನ! ಪುಂಡರೀಕಾಕ್ಷ! ಭರ್ತೃ-ಜ್ಞಾತಿ-ಬಾಂಧವರಿಂದ ಕೂಡಿರುವ ನಮ್ಮನ್ನು ಸಂರಕ್ಷಿಸು.

**ನನ್ವಹಂ ಕೃಷ್ಣ ಭೀಷ್ಮಸ್ಯ ಧೃತರಾಷ್ಟ್ರಸ್ಯ ಚೋಭಯೋಃ ।**
**ಸ್ನುಷಾ ಭವಾಮಿ ಧರ್ಮೇಣ ಸಾಹಂ ದಾಸೀಕೃತಾ ಬಲಾತ್ ॥೨೯॥**

ಧರ್ಮಶಾಸ್ತ್ರದ ಪ್ರಕಾರ ನಾನು ಭೀಷ್ಮ ಮತ್ತು ಧೃತರಾಷ್ಟ್ರರಿಬ್ಬರಿಗೂ ಸೊಸೆಯಲ್ಲವೇ? ಕೃಷ್ಣ! ಅವರ ಸೊಸೆಯಾಗಿದ್ದೂ ನಾನು ಬಲಾತ್ಕಾರದಿಂದ ದಾಸಿಯಾಗಿ ಮಾಡಲ್ಪಟ್ಟೆನು."

ಹಿಂದಿನದೆಲ್ಲವನ್ನೂ ನೆನೆಯುತ್ತಿದ್ದಂತೆ ದ್ರೌಪದಿಯ ದುಃಖವೂ ಹೆಚ್ಚಿತು. ಹೃದಯದಲ್ಲಡಗಿದ್ದ ಕೋಪವೂ ಉಲ್ಬಣಿಸಿತು. ಸಿಂಹಿಣಿಯಂತೆ ಗರ್ಜನೆ ಮಾಡುತ್ತಾ ಹೇಳಿದಳು :

**ಧಿಕ್ಪಾರ್ಥಸ್ಯ ಧನುಷ್ಮತ್ತಾಂ ಭೀಮಸೇನಸ್ಯ ಧಿಗ್ಬಲಮ್ ।**
**ಯತ್ರ ದುರ್ಯೋಧನಃ ಕೃಷ್ಣ ಮುಹೂರ್ತಮಪಿ ಜೀವತಿ ॥೩೦॥**

"ಪರಮಪಾಪಿಯಾದ, ವಧಾರ್ಹನಾದ ದುರ್ಯೋಧನನು ಇಷ್ಟು ಅಪರಾಧಮಾಡಿಯೂ ಜೀವಿಸಿದ್ದಾನಲ್ಲವೆ! ಅಪರಾಧವನ್ನು ಎಸಗಿದ ಮರು

ಕ್ಷಣದಲ್ಲಿಯೇ ಅವನ ವಧೆಯಾಗಬೇಕಾಗಿದ್ದಿತು. ಅಪರಾಧಮಾಡಿದನಂತರ ಮುಹೂರ್ತಕಾಲವಾದರೂ ಅವನು ಜೀವಿಸಿರಲು ಅವಕಾಶಕೊಡುವುದೂ ಕ್ಷತ್ರಿಯರಿಗೆ ಉಚಿತವಾದ ಧರ್ಮವಾಗಿರಲಿಲ್ಲ. ಆದರೆ ಅವನು ಇನ್ನೂ ಬದುಕಿದ್ದಾನೆ. ಪಾಂಡವರಿಗಿರುವ ಶೌರ್ಯ-ಪರಾಕ್ರಮಗಳೆಲ್ಲವೂ ವ್ಯರ್ಥವಾಗಿ ಹೋಯಿತು. ಇವರಿಂದು ಕ್ಷತ್ರಿಯರಿಗೆ ಉಚಿತವಾದ ಕಾರ್ಯಮಾಡುತ್ತಿಲ್ಲ. ಅರ್ಜುನನು ಧನುಷ್ಮಂತರಲ್ಲಿ ಶ್ರೇಷ್ಠನೆಂದು ಕೀರ್ತಿಗಳಿಸಿರುವುದೂ ವ್ಯರ್ಥವಾಗಿ ಹೋಯಿತು. ಇವನಿಗೆ ಆ ಕೀರ್ತಿಯು ಖಂಡಿತವಾಗಿಯೂ ಸಲ್ಲದು. ಇವನ ಧನುಷ್ಮತ್ತೆಗೆ ಧಿಕ್ಕಾರವಿರಲಿ! ಭೀಮಸೇನನು ಹತ್ತುಸಾವಿರ ಆನೆಗಳ ಬಲವಿರುವವನೆಂದು ಪ್ರಸಿದ್ಧನಾಗಿರುತ್ತಾನೆ. ಅಷ್ಟು ಬಲವಿರುವುದರಿಂದಲೂ ಅವನು ಸಾಧಿಸಿದ ಕಾರ್ಯವೇನು? ಆದ ಪ್ರಯೋಜನವಾದರೂ ಏನು? ಆದುದರಿಂದ ಭೀಮ ಸೇನನ ಬಲಕ್ಕೂ ಧಿಕ್ಕಾರವಿರಲಿ?

**ಯದಿ ತೇಽಹಮನುಗ್ರಾಹ್ಯಾ ಯದಿ ತೇಽಸ್ತಿ ಕೃಪಾ ಮಯಿ ।**
**ಧಾರ್ತರಾಷ್ಟ್ರೇಷು ವೈ ಕೋಪಃ ಸರ್ವಃ ಕೃಷ್ಣ ವಿಧೀಯತಾಮ್ ॥**

ಮಾಧವ! ನಾನೇನಾದರೂ ನಿನ್ನ ಅನುಗ್ರಹವನ್ನು ಪಡೆದುಕೊಳ್ಳಲು ಯೋಗ್ಯಳಾಗಿದ್ದರೆ, ನಿನಗೇನಾದರೂ ನನ್ನ ಮೇಲೆ ಸ್ವಲ್ಪವಾದರೂ ಕೃಪೆ ಯಿದ್ದರೆ–ನಿನ್ನಲ್ಲಿರುವ ಎಲ್ಲ ಕೋಪವನ್ನೂ ಧೃತರಾಷ್ಟ್ರನ ಮಕ್ಕಳ ಮೇಲೆ ಪ್ರಯೋಗಿಸು. (ನಿನ್ನ ಕೋಪದಿಂದಲೇ ಅವರನ್ನು ಭಸ್ಮಮಾಡಿಬಿಡು.')

ಜನಮೇಜಯ! ಹೀಗೆಂದು ಹೇಳಿ, ಸುಂದರಾಂಗಿಯಾದ, ಕಪ್ಪಾದ ಕಡೆಗಣ್ಣುಗಳಿಂದ ಕೂಡಿದ್ದ, ಕಮಲನಯನೆಯಾದ, ಗಜಗಮನೆಯಾದ, ದ್ರುಪದಸುತೆಯಾದ ಕೃಷ್ಣೆಯು–ಮೃದುವಾಗಿಯೂ, ಕೆದರದೆಯೂ ಇದ್ದ, ತುದಿಯಲ್ಲಿ ಕೊಂಕಿಸಿಕೊಂಡಿದ್ದ (ಗುಂಗುರಾಗಿದ್ದ,) ನೋಡಲು ಬಹು ರಮಣೀಯವಾಗಿ ಕಾಣುತ್ತಿದ್ದ, ಬಹಳ ಕಪ್ಪಾಗಿದ್ದ, ಸಕಲವಿಧವಾದ ಸುಗಂಧ ದ್ರವ್ಯಗಳ ಲೇಪನದಿಂದಲೂ ಸುವಾಸಿತವಾಗಿದ್ದ, ಸರ್ವಶುಭಲಕ್ಷಣಯುಕ್ತ ವಾಗಿದ್ದ, ಮಹಾಸರ್ಪದ ಶರೀರದಂತೆ ಥಳ-ಥಳಿಸುತ್ತಿದ್ದ ತನ್ನ ಕೇಶಪಾಶದ ಅಗ್ರಭಾಗವನ್ನು ಎಡಗೈಯಿಂದ ಹಿಡಿದುಕೊಂಡು ಕಂಬನಿದುಂಬಿದ ಕಣ್ಣು ಗಳಿಂದ ಕೂಡಿದವಳಾಗಿ ಕೃಷ್ಣನನ್ನು ಕುರಿತು ಪುನಃ ಹೇಳತೊಡಗಿದಳು :

**ಅಯಂ ತೇ ಪುಣ್ಡರೀಕಾಕ್ಷ ದುಃಶಾಸನಕರೋದ್ಧೃತಃ ।**
**ಸ್ಮರ್ತವ್ಯಃ ಸರ್ವಕಾರ್ಯೇಷು ಪರೇಷಾಂ ಸಂಧಿಮಿಚ್ಛತಾ ॥೩೬॥**

“ಪುಂಡರೀಕಾಕ್ಷ! ಕೃಷ್ಣ! ಈ ನನ್ನ ಮುಡಿಯೇ ದುಷ್ಟದುಃಶಾಸನನ ಕೈಯಿಂದ ಉದ್ಧೃತವಾದುದು (ಸೆಳೆಯಲ್ಪಟ್ಟಿದ್ದು.) ಶತ್ರುಗಳೊಡನೆ ಸಂಧಿಯನ್ನಿಚ್ಛಿಸುವ, ಸಂಧಿಕಾರ್ಯದ ಸಾಧನೆಗಾಗಿ ಪ್ರಯತ್ನಿಸುವ ನೀನು ಎಲ್ಲ ಕಾರ್ಯಗಳಲ್ಲಿಯೂ ಮತ್ತು ಎಲ್ಲ ಕಾಲಗಳಲ್ಲಿಯೂ ಈ ಮುಡಿಯನ್ನು ಸ್ಮರಣೆಯಲ್ಲಿಟ್ಟುಕೊಳ್ಳಬೇಕು.

ಒಂದು ವೇಳೆ ಭೀಮಾರ್ಜುನರೇನಾದರೂ ಪ್ರಾಣದ ಮೇಲಿನ ಲೋಭ ದಿಂದಾಗಿ ದೀನರಾಗಿ ಕೌರವರೊಡನೆ ಸಂಧಿಮಾಡಿಕೊಳ್ಳುವ ಅಪೇಕ್ಷೆಯುಳ್ಳವ ರಾಗಿರುವುದಾದರೆ–ವೃದ್ಧನಾದ ನನ್ನ ತಂದೆಯು ಮಹಾರಥರಾದ ಪುತ್ರ ರಿಂದೊಡಗೂಡಿ ಕೌರವರೊಡನೆ ಯುದ್ಧಮಾಡುತ್ತಾನೆ. ಮಧುಸೂದನ! ಮಹಾವೀರ್ಯರಾದ ನನ್ನ ಐವರು ಮಕ್ಕಳೂ ಅಭಿಮನ್ಯುವನ್ನು ಮುಂದೆ ಮಾಡಿಕೊಂಡು ಕುರುಗಳೊಡನೆ ಯುದ್ಧಮಾಡುತ್ತಾರೆ.

**ದುಃಶಾಸನಭುಜಂ ಶ್ಯಾಮಂ ಸಂಛಿನ್ನಂ ಪಾಂಸುಗುಣ್ಠಿತಮ್ ।**
**ಯದ್ಯಹಂ ತು ನ ಪಶ್ಯಾಮಿ ಕಾ ಶಾನ್ತಿರ್ಹೃದಯಸ್ಯ ಮೇ ॥೩೯॥**

ಮಾಧವ! ಛಿದ್ರ-ಛಿದ್ರವಾಗಿ ತುಂಡರಿಸಲ್ಪಟ್ಟು ನೆಲದ ಮೇಲೆ ಬಿದ್ದು ಧೂಳಿನಿಂದ ಆವರಿಸಲ್ಪಟ್ಟ ಶ್ಯಾಮಲವರ್ಣದ ದುಃಶಾಸನನ ಭುಜವನ್ನು ನಾನು ಈ ನನ್ನ ಕಣ್ಣುಗಳಿಂದ ನೋಡದೆಯೇ ಇದ್ದರೆ ( ಅಂತಹ ಸುಯೋಗ ವೊಂದು ಒದಗಿಬರದಿದ್ದರೆ) – ನನ್ನ ಹೃದಯಕ್ಕೆ ಶಾಂತಿಯೆಂಬುದೆಲ್ಲಿದೆ? ಅಕಳಂಕಳಾದ ನನ್ನ ಮುಡಿಯನ್ನು ಹಿಡಿದ ಆ ದುಷ್ಟನ ಕೈಗಳು ಕೆಳಗೆ ಬೀಳುವವರೆಗೂ ನನ್ನ ಮನಸ್ಸಿಗೆ ಶಾಂತಿಯಿಲ್ಲ.

**ತ್ರಯೋದಶ ಹಿ ವರ್ಷಾಣಿ ಪ್ರತೀಕ್ಷನ್ತ್ಯಾ ಗತಾನಿ ಮೇ ।**
**ವಿಧಾಯ ಹೃದಯೇ ಮನ್ಯುಂ ಪ್ರದೀಪ್ತಮಿವ ಪಾವಕಮ್ ॥೪೦॥**

ಪ್ರಜ್ವಲಿಸುವ ಅಗ್ನಿಯಂತಿರುವ ನನ್ನ ಕೋಪಾಗ್ನಿಯನ್ನು ಹೃದಯ ದಲ್ಲಡಗಿಸಿಕೊಂಡು ಆ ಒಂದು ದೃಶ್ಯವನ್ನು ಕಾಣಬೇಕೆನ್ನುವ ಹಂಬಲದಲ್ಲಿಯೇ ಹದಿಮೂರು ವರ್ಷಗಳನ್ನು ಕಳೆದಿರುವೆನು.

**ವಿದೀರ್ಯತೇ ಮೇ ಹೃದಯಂ ಭೀಮವಾಕ್ಯಶಲ್ಯಪೀಡಿತಮ್ ।**
**ಯೋಽಯಮದ್ಯ ಮಹಾಬಾಹುರ್ಧರ್ಮಮೇವಾನುಪಶ್ಯತಿ ॥೪೧॥**

ಮಾಧವ! ಇಂದು ಭೀಮನಾಡಿದ ಸಂಧಿಯ ಪರವಾದ ಮಾತುಗಳೆಂಬ ಶಲ್ಯದಿಂದ ಪೀಡಿತವಾದ ನನ್ನ ಹೃದಯವು ಸೀಳಿಹೋಗುತ್ತಿದೆಯೋ ಎಂಬಂತೆ ಕಾಣುತ್ತಿದೆ. 'ದುಃಶಾಸನಸ್ಯ ರುಧಿರಂ ಪಾತಾಸ್ಮಿ ಮೃಗರಾಡಿವ–ಸಿಂಹವು ಕ್ಷುದ್ರಮೃಗಗಳ ರಕ್ತಪಾನಮಾಡುವಂತೆ–ದುಃಶಾಸನನ ರಕ್ತವನ್ನು ಹೀರಿಬಿಡುತ್ತೇನೆ!'–ಎಂದು ಧೀರಪ್ರತಿಜ್ಞೆಯನ್ನು ಮಾಡಿದ್ದ ಭೀಮನು ಇಂದು ಧರ್ಮಮಾರ್ಗಾವಲಂಬಿಯಾಗಿಬಿಟ್ಟಿದ್ದಾನೆ."

ಜನಮೇಜಯ! ಕೃಷ್ಣನೊಡನೆ ಹೀಗೆಂದು ಹೇಳುತ್ತಿದ್ದಾಗ ವಿಶಾಲ ನೇತ್ರೆಯಾದ, ತುಂಬಿಕೊಂಡಿದ್ದ ಶ್ರೋಣಿಪ್ರದೇಶದಿಂದ ಕೂಡಿದ್ದ ದ್ರೌಪದಿಯು ಅಳುತ್ತಿದ್ದಳು. ಎರಡು ಕಣ್ಣುಗಳಿಂದಲೂ ಧಾರಾಕಾರವಾಗಿ ಕಂಬನಿಯು ಹರಿಯತೊಡಗಿತು. ಕುತ್ತಿಗೆಯಿಂದ ಮಾತೇ ಹೊರಡದಾಯಿತು. ದುಃಖವನ್ನು ತಡೆದುಕೊಳ್ಳಲು ಸಾಧ್ಯವಾಗಲೇ ಇಲ್ಲ. ಬಿಕ್ಕಿ-ಬಿಕ್ಕಿ ಅಳುತ್ತಿದ್ದಳು. ಗಟ್ಟಿಯಾಗಿ ಅಳುತ್ತಿದ್ದಳು. ಗದ್ಗದಸ್ವರಸಹಿತವಾಗಿ ಅಳುತ್ತಿದ್ದಳು. ಅಳುವಿನಿಂದಾಗಿ ಅವಳ ಶರೀರವು ಕಂಪಿಸುತ್ತಿತ್ತು. ಗಳ-ಗಳನೆ ಅಳುತ್ತಿದ್ದುದರಿಂದ ಒಂದು ಮಾತನ್ನೂ ಆಡುವುದಕ್ಕಾಗುತ್ತಿರಲಿಲ್ಲ. ಅತ್ಯಂತ ಬಿಸಿಯಾಗಿದ್ದ ಅವಳ ಕಣ್ಣೀರು ಸ್ತನಗಳ ಮೇಲೆ ಹರಿದು ಕೆಳಗೆ ಬೀಳುತ್ತಿದ್ದಿತು. ಅದನ್ನು ನೋಡಿದರೆ ಅವಳ ಹೃದಯದಲ್ಲಡಗಿದ್ದ ಕೋಪಾಗ್ನಿಯು ದ್ರವೀಭೂತವಾಗಿ ಅಶ್ರುಬಿಂದುಗಳ ರೂಪದಲ್ಲಿ ನೇತ್ರಗಳ ಮೂಲಕ ಹೊರಗೆ ಬರುತ್ತಿರುವುದೋ–ಎಂಬಂತೆ ಕಾಣುತ್ತಿದ್ದಿತು. (ಇಲ್ಲಿ ಅತ್ಯುಷ್ಣಂ ಎಂಬುದಕ್ಕೆ ವ್ಯಾಖ್ಯಾನಕಾರರು ವಹ್ನಿಂ ಎಂದು ಅರ್ಥಮಾಡಿರುತ್ತಾರೆ.) ಹೀಗೆ ಬಿಕ್ಕಿ-ಬಿಕ್ಕಿ ಅಳುತ್ತಿದ್ದ ಕೃಷ್ಣೆಯನ್ನು ಸಮಾಧಾನಗೊಳಿಸುತ್ತಾ ಮಾಧವನು ಹೇಳಿದನು :

**ಅಚಿರಾದ್ದ್ರಕ್ಷ್ಯಸೇ ಕೃಷ್ಣೇ ರುದತೀರ್ಭರತಸ್ತ್ರಿಯಃ ॥೪೪॥**

"ಕೃಷ್ಣೇ! (ನೀನೀಗ ಅಳುತ್ತಿರುವಂತೆ) ಕೌರವರ ಪತ್ನಿಯರೂ ಅಳುವುದನ್ನು ಅತ್ಯಲ್ಪಕಾಲದಲ್ಲಿಯೇ ಕಾಣಲಿರುವೆ. ನೀನು ಯಾರ ವಿಷಯ ದಲ್ಲಿಂದು ಕೋಪಗೊಂಡಿರುವೆಯೋ–ಅವರ ಪತ್ನಿಯರೂ, ಜ್ಞಾತಿ-ಬಾಂಧ

ವರೂ, ಮಿತ್ರರೂ, ಸೈನಿಕರೂ ತಮ್ಮ ಪತಿ-ಪಿತೃ-ಸುತರೂ ರಣಭೂಮಿಯಲ್ಲಿ ಹತರಾದುದನ್ನು ಕೇಳಿ ಇದೇ ರೀತಿ ರೋದಿಸುತ್ತಾರೆ.

**ಅಹಂ ಚ ತತ್ಕರಿಷ್ಯಾಮಿ ಭೀಮಾರ್ಜುನಯಮೈಃ ಸಹ ।**
**ಯುಧಿಷ್ಠಿರನಿಯೋಗೇನ ದೈವಾಚ್ಚ ವಿಧಿನಿರ್ಮಿತಾತ್ ॥೪೭॥**

ಭೀಮಸೇನನಾಗಲೀ, ಯುಧಿಷ್ಠಿರನಾಗಲೀ ಈಗ ಏನು ಹೇಳಿದರೆಂಬ ವಿಷಯವಾಗಿ ನೀನು ಯೋಚಿಸುವ ಕಾರಣವಿಲ್ಲ. ಭೀಮಾರ್ಜುನ-ನಕುಲ-ಸಹದೇವರೊಡನೆ ಯುಧಿಷ್ಠಿರನ ಆಜ್ಞೆಯನ್ನು ಪಡೆದುಕೊಂಡು ವಿಧಿವಿಹಿತ ವಾದ ಅದೃಷ್ಟದ ಕಾರಣದಿಂದಲೂ ನಾನೇ ಈ ಕಾರ್ಯವನ್ನು ಮಾಡುತ್ತೇನೆ. ಕಾಲವಶರಾಗಿರುವ ಧೃತರಾಷ್ಟ್ರನ ಮಕ್ಕಳು ನನ್ನ ಮಾತನ್ನೇನಾದರೂ ಕೇಳದೇ ಹೋದರೆ – ನಮ್ಮಿಂದ ಸಂಹೃತರಾಗಿ ನಾಯಿ ಮತ್ತು ಗುಳ್ಳೇನರಿಗಳಿಗೆ ಆಹಾರಭೂತರಾಗಿ ನೆಲದ ಮೇಲೆ ಬೀಳುತ್ತಾರೆ.

**ಚಲೇದ್ಧಿ ಹಿಮವಾಞ್ಶೈಲೋ ಮೇದಿನೀ ಶತಧಾ ಫಲೇತ್ ।**
**ದ್ಯೌಃ ಪತೇಚ್ಚ ಸನಕ್ಷತ್ರಾ ನ ಮೇ ಮೋಘಂ ವಚೋ ಭವೇತ್ ॥**

ಒಂದು ವೇಳೆ ಹಿಮವತ್ಪರ್ವತವು ಚಲಿಸಲೂಬಹುದು ; ಪೃಥ್ವಿಯು ನೂರಾರು ಭಾಗಗಳಾಗಿ ಸೀಳಿಹೋಗಲೂಬಹುದು ; ನಕ್ಷತ್ರಸಹಿತವಾದ ಆಕಾಶವು ಕಳಚಿಯೂ ಬೀಳಬಹುದು. ಆದರೆ ನಾನಾಡಿದ ಮಾತು ಮಾತ್ರ ಖಂಡಿತವಾಗಿಯೂ ನಿಷ್ಪ್ರಯೋಜಕವಾಗುವುದಿಲ್ಲ, ದ್ರೌಪದಿ!

**ಸತ್ಯಂ ತೇ ಪ್ರತಿಜಾನಾಮಿ ಕೃಷ್ಣೇ ಬಾಷ್ಪೋ ನಿಗೃಹ್ಯತಾಮ್ ।**
**ಹತಾಮಿತ್ರಾಞ್ಶ್ರಿಯಾ ಯುಕ್ತಾನಚಿರಾದ್ದ್ರಕ್ಷ್ಯಸೇ ಪತೀನ್ ॥೪೮॥**

ಕೃಷ್ಣೇ! ಶುಭಾಂಗಿ! ಕಣ್ಣೀರು ಸುರಿಸುವುದನ್ನು ನಿಲ್ಲಿಸು. ನಾನು ಪ್ರತಿಜ್ಞೆ ಮಾಡಿ ಈ ಮಾತನ್ನು ನಿನ್ನೊಡನೆ ಹೇಳುತ್ತಿದ್ದೇನೆ. ಶತ್ರುಗಳನ್ನು ಸಂಹರಿಸಿ ಸಂಪದ್ಯುಕ್ತರಾಗುವ ನಿನ್ನ ಪತಿಗಳನ್ನು ನೀನು ಅತ್ಯಲ್ಪಕಾಲದಲ್ಲಿಯೇ ಕಾಣಲಿರುವೆ."

ಲ೨ನೆಯ ಅಧ್ಯಾಯವು ಮುಗಿಯಿತು.

೮೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಹಸ್ತಿನೆಗೆ ಶ್ರೀಕೃಷ್ಣನ ಪ್ರಸ್ಥಾನ: ಯುಧಿಷ್ಠಿರನು ಕುಂತಿಗೂ ಮತ್ತು ಕೌರವರಿಗೂ ಸಂದೇಶವನ್ನು ಕಳುಹಿಸಿದುದು: ಮಾರ್ಗಮಧ್ಯದಲ್ಲಿ ಶ್ರೀಕೃಷ್ಣನು ಮಹರ್ಷಿಗಳನ್ನು ಸಂದರ್ಶಿಸಿದುದು

ಪಾರಿಕ್ಷಿತ! ಶ್ರೀಕೃಷ್ಣನು ದ್ರೌಪದಿಯನ್ನು ಸಾಂತ್ವನಗೊಳಿಸಿದನಂತರ ಅರ್ಜುನನು ಶ್ರೀಕೃಷ್ಣನೊಡನೆ ಹೇಳಿದನು.:

"ಕೃಷ್ಣ! ನೀನು ಕುರುಗಳೆಲ್ಲರಿಗೂ ಉತ್ತಮಸುಹೃದನಾಗಿರುವೆ. ಎರಡು ಪಕ್ಷಗಳವರಿಗೂ ನೀನು ಸಂಬಂಧಿಯೂ ಆಗಿರುವೆ ಮತ್ತು ಅತ್ಯಂತ ಪ್ರಿಯನೂ ಆಗಿರುವೆ. ಈ ಕಾರಣಗಳಿಂದಾಗಿ ನೀನು ಪಾಂಡವರಿಗೂ ಮತ್ತು ಧೃತರಾಷ್ಟ್ರನ ಮಕ್ಕಳಿಗೂ ಪರಸ್ಪರಸೌಹಾರ್ದವನ್ನು ಕಲ್ಪಿಸುವುದು ನಿನ್ನ ಕರ್ತವ್ಯವಾಗಿದೆ. ಉಭಯತ್ರರ ನಡುವೆ ಸಂಧಿಯೇರ್ಪಡುವಂತೆ ಮಾಡುವ ಸಾಮರ್ಥ್ಯವೂ ನಿನಗಿದೆ.

ಶತ್ರುನಾಶಕನೇ! ಪುಂಡರೀಕಾಕ್ಷ! ನೀನಿಲ್ಲಿಂದ ಹಸ್ತಿನೆಗೆ ಪ್ರಯಾಣ ಮಾಡಿ ಅಸಹನಶೀಲನಾದ, ನಮ್ಮಣ್ಣನಾದ ದುರ್ಯೋಧನನನ್ನು ಸಂಧಿಸಿ ಅವನೊಡನೆ ಯಾವ ವಿಧವಾದ ಮಾತುಗಳನ್ನಾಡುವುದರಿಂದ ಪರಸ್ಪರವಾಗಿ ಸಂಧಿಯೇರ್ಪಡಲು ಸಾಧ್ಯವಾಗುವುದೋ–ಅಂತಹ ಸೌಜನ್ಯದ ಮತ್ತು ಹಿತಕರವಾದ ಮಾತುಗಳನ್ನೇ ಹೇಳು. ಧರ್ಮಯುಕ್ತವಾದ, ಮಂಗಳಕರವಾದ, ಬಾಧಾರಹಿತವಾದ, ಹಿತಕರವಾದ ನಿನ್ನ ಮಾತುಗಳನ್ನು ಆ ಮೂರ್ಖನೇನಾದರೂ ಅಂಗೀಕರಿಸದಿದ್ದರೆ ಕಾಲವಶನಾಗುತ್ತಾನೆ."

ಶ್ರೀಕೃಷ್ಣನು ಹೇಳುತ್ತಾನೆ :

**ಧರ್ಮ್ಯಮಸ್ಮದ್ಧಿತಂ ಚೈವ ಕುರೂಣಾಂ ಯದನಾಮಯಮ್ ।**
**ಏಷ ಯಾಸ್ಯಾಮಿ ರಾಜಾನಂ ಧೃತರಾಷ್ಟ್ರಮಭೀಪ್ಸಯಾ ॥೫॥**

"ನಿಜ, ಪಾರ್ಥ! ನೀನು ಹೇಳಿದಂತೆಯೇ ನಾನು ಸಾಧಿಸಲಿರುವ ಕಾರ್ಯವು ಧರ್ಮಸಮ್ಮತವಾಗಿಯೂ ಇರಬೇಕು ; ನಮ್ಮೆಲ್ಲರಿಗೂ ಹಿತ ವಾಗಿಯೂ ಇರಬೇಕು. ಕೌರವರಿಗೂ ಅದರಿಂದ ಯಾವ ವಿಧವಾದ ಬಾಧೆಯೂ

ಉಂಟಾಗಬಾರದು. ಇವಿಷ್ಟನ್ನು ಸಾಧಿಸುವ ಇಚ್ಛೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನಾನು ಧೃತರಾಷ್ಟ್ರರಾಜನನ್ನು ಸಂಧಿಸಲು ಪ್ರಯಾಣ ಮಾಡುತ್ತೇನೆ."

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ತತೋ ವ್ಯಪೇತತಮಸಿ ಸೂರ್ಯೇ ವಿಮಲವದ್ಗತೇ ।
ಮೈತ್ರೇ ಮುಹೂರ್ತೇ ಸಮ್ಪ್ರಾಪ್ತೇ ಮೃದ್ವರ್ಚಿಷಿ ದಿವಾಕರೇ ॥೬॥

ಕೌಮುದೇ ಮಾಸಿ ರೇವತ್ಯಾಂ ಶರದನ್ತೇ ಹಿಮಾಗಮೇ ।
ಸ್ಫೀತಸಸ್ಯಸುಖೇ ಕಾಲೇ ಕಲ್ಯಃ ಸತ್ತ್ವವತಾಂ ವರಃ ॥೭॥

ಮಙ್ಗಲ್ಯಾಃ ಪುಣ್ಯನಿರ್ಘೋಷಾ ವಾಚಃ ಶೃಣ್ವಂಶ್ಚ ಸೂನೃತಾಃ ।
ಬ್ರಾಹ್ಮಣಾನಾಂ ಪ್ರತೀತಾನಾಮೃಷೀಣಾಮಿವ ವಾಸವಃ ॥೮॥

ಕೃತ್ವಾ ಪೌರ್ವಾಹ್ಣಿಕಂ ಕೃತ್ಯಂ ಸ್ನಾತಃ ಶುಚಿರಲಂಕೃತಃ ।
ಉಪತಸ್ಥೇ ವಿವಸ್ವನ್ತಂ ಪಾವಕಂ ಚ ಜನಾರ್ದನಃ ॥೯॥

ಋಷಭಂ ಪೃಷ್ಠ ಆಲಭ್ಯ ಬ್ರಾಹ್ಮಣಾನಭಿವಾದ್ಯ ಚ ।
ಅಗ್ನಿಂ ಪ್ರದಕ್ಷಿಣಂ ಕೃತ್ವಾ ಪಶ್ಯನ್ಕಲ್ಯಾಣಮಗ್ರತಃ ॥೧೦॥

ತತ್ಪ್ರತಿಜ್ಞಾಯ ವಚನಂ ಪಾಣ್ಡವಸ್ಯ ಜನಾರ್ದನಃ ।
ಶಿನೇರ್ನಪ್ತಾರಮಾಸೀನಮಭ್ಯಭಾಷತ ಸಾತ್ಯಕಿಮ್ ॥೧೧॥

"ಜನಮೇಜಯಮಹಾರಾಜ! ಅನಂತರದಲ್ಲಿ ರಾತ್ರಿಯ ಕತ್ತಲು ಕಳೆದುಹೋಗಲಾಗಿ, ಸೂರ್ಯನು ಉದಯಿಸಿ ನಿರ್ಮಲಾಕಾಶವನ್ನು ಪ್ರವೇಶಿಸಿ ಎಳೆಬಿಸಿಲಿನಿಂದ ಕೂಡಿರಲಾಗಿ, ಶರತ್ಕಾಲದ ಅಂತ್ಯದಲ್ಲಿ ಮತ್ತು ಹಿಮಂತರ್ತುವಿನ ಪ್ರಾರಂಭದಲ್ಲಿ, ಕಾರ್ತೀಕಮಾಸದ ರೇವತೀನಕ್ಷತ್ರದ ದಿನ ಮೈತ್ರಮುಹೂರ್ತದಲ್ಲಿ, ಕ್ಷೇತ್ರಗಳಲ್ಲಿ ದಟ್ಟವಾದ ಸಸ್ಯಗಳಿದ್ದು ಸರ್ವತ್ರ ಸುಖಾವಹವಾದ ಕಾಲದಲ್ಲಿ, ಸತ್ತ್ವಗುಣಿಗಳಲ್ಲಿ ಶ್ರೇಷ್ಠನಾದ ಮತ್ತು ಸಮರ್ಥನಾದ ಶ್ರೀಕೃಷ್ಣನು–ಪ್ರಾತಃಕಾಲದಲ್ಲಿ ಋಷಿಗಳ ಮುಖಾರವಿಂದದಿಂದ ಇಂದ್ರನು ಮಂಗಳಮಯವಾದ ಸ್ವಸ್ತಿವಾಚನವನ್ನು ಕೇಳುವಂತೆ–ವಿಶ್ರುತರಾದ ಬ್ರಾಹ್ಮಣರು ಹೇಳುತ್ತಿದ್ದ ಸುಮಧುರವಾದ ಮಂಗಳಕರವಾದ ಪುಣ್ಯಾಹವಾಚನವನ್ನು ಆಲಿಸುತ್ತಾ, ಪ್ರಾತಃಕಾಲದಲ್ಲಿ ಮಾಡಬೇಕಾದ

ಶೌಚ-ಮುಖಮಾರ್ಜನ-ಸ್ನಾನಾದಿಗಳನ್ನು ಮುಗಿಸಿ, ಪರಿಶುದ್ಧನಾಗಿ, ಪೀತಾಂಬರದಿಂದ ಅಲಂಕೃತನಾಗಿ, ಸಂಧ್ಯಾವಂದನೆಯನ್ನೂ ಸೂರ್ಯೋಪ ಸ್ಥಾನವನ್ನೂ ಮಾಡಿ, ಔಪಾಸನದ ಮೂಲಕವಾಗಿ ಅಗ್ನಿದೇವನನ್ನು ತೃಪ್ತಿಪಡಿಸಿ, ಅನಂತರ ಎತ್ತಿನ ಪೃಷ್ಠಭಾಗವನ್ನು ಸ್ಪರ್ಶಿಸಿ, ಬ್ರಾಹ್ಮಣರನ್ನು ಅಭಿವಂದಿಸಿ, ಅಗ್ನಿಯನ್ನು ಪ್ರದಕ್ಷಿಣೆಮಾಡಿ, ಅಗ್ರಭಾಗದಲ್ಲಿದ್ದ ಪೂರ್ಣ ಕುಂಭವೇ ಮೊದಲಾದ ಶುಭಸೂಚಕಗಳಾದ ಮತ್ತು ಮಂಗಳಪ್ರದಗಳಾದ ವಸ್ತುಗಳನ್ನು ಸಂದರ್ಶಿಸಿ, ಯುಧಿಷ್ಠಿರನ ಮಾತನ್ನು ಸ್ಮರಿಸಿಕೊಂಡು ತನ್ನ ಸಮೀಪದಲ್ಲಿ ಕುಳಿತಿದ್ದ ಶಿನಿಯ ಪೌತ್ರನಾದ ಸಾತ್ಯಕಿಯನ್ನು ಕುರಿತು ಈ ಮಾತುಗಳನ್ನು ಹೇಳಿದನು :

"ಸಾತ್ಯಕಿಯೇ! ಶಂಖ, ಚಕ್ರ, ಗದೆ, ತೂಣೀರ, ಶಕ್ತ್ಯಾಯುಧ, ಇನ್ನೂ ಇತರ ಶಸ್ತ್ರಾಸ್ತ್ರಗಳನ್ನೂ ಮತ್ತು ಉಪಕರಣಗಳನ್ನೂ ನನ್ನ ರಥದಲ್ಲಿಡು.

('ಮೈತ್ರ' ಎಂಬುದಕ್ಕೆ 'ಜನ್ಮರ್ಕ್ಷಾತ್ ಅಷ್ಟಮ ತಾರಾಯಾಂ'–ಜನ್ಮನಕ್ಷತ್ರದಿಂದ ಎಂಟನೆಯ ತಾರೆ–ಎಂದಿದ್ದಾರೆ ವ್ಯಾಖ್ಯಾನಕಾರರು. ಜನ್ಮನಕ್ಷತ್ರದಿಂದ ಅಂದಿನ ನಕ್ಷತ್ರದವರೆಗೆ ಎಣಿಕೆ ಮಾಡಿದರೆ ಮೊದಲನೆಯದು ಜನ್ಮತಾರೆ, ಎರಡನೆಯದು ಸಂಪತ್ತಾರೆ, ಮೂರನೆಯದು ವಿಪತ್ತಾರೆ, ನಾಲ್ಕನೆಯದು ಕ್ಷೇಮತಾರೆ, ಐದನೆಯದು ಪ್ರತ್ಯಕ್ತಾರೆ, ಆರನೆಯದು ಸಾಧನತಾರೆ, ಏಳನೆಯದು ನೈಧನತಾರೆ, ಎಂಟನೆಯದು ಮಿತ್ರತಾರೆ, ಒಂಬತ್ತನೆಯದು ಪರಮಮೈತ್ರತಾರೆ. ಅದರಲ್ಲಿ ಶ್ರೀಕೃಷ್ಣನ ಜನ್ಮನಕ್ಷತ್ರವಾದ ರೋಹಿಣಿಯಿಂದ ರೇವತಿಯವರೆಗೆ ಎಣಿಕೆ ಮಾಡಿದರೆ ಮೈತ್ರತಾರೆಯು ಬರುವುದಿಲ್ಲ. ಸಾಧನತಾರೆಯಾಗುತ್ತದೆ. ಅರ್ಜುನನ ನಕ್ಷತ್ರವಾದ ಪುಬ್ಬಾನಕ್ಷತ್ರದಿಂದ ಎಣಿಕೆಮಾಡಿದರೆ ಮೈತ್ರತಾರೆ ಅಥವಾ ಎಂಟನೆಯ ತಾರೆಯಾಗುತ್ತದೆ. ಆದುದರಿಂದ ಇಲ್ಲಿ 'ಮೈತ್ರತಾರೆ' ಎನ್ನುವುದಕ್ಕಿಂತಲೂ ಮೈತ್ರಮುಹೂರ್ತವೆಂದೇ ಅರ್ಥಮಾಡುವುದು ಸಾಧುವಾಗಿ ಕಾಣುತ್ತದೆ. ಅಥವಾ ಅರ್ಜುನನನ್ನು ಪ್ರಧಾನೀಕರಿಸಿ ಮೈತ್ರತಾರೆ ಎಂದು ಹೇಳಬೇಕಾಗುತ್ತದೆ.)

**ದುರ್ಯೋಧನಶ್ಚ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ ।**
**ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ ॥೧೩॥**

ದುರ್ಯೋಧನನು ದುಷ್ಟಾತ್ಮನಾಗಿದ್ದಾನೆ. ಶಕುನಿಯೊಡನೆ ಕೂಡಿದ ಕರ್ಣನೂ ದುಷ್ಟಾತ್ಮನೇ ಸರಿ. ನೀತಿಶಾಸ್ತ್ರದ ಪ್ರಕಾರ ಶತ್ರುವು ದುರ್ಬಲನೇ ಆಗಿದ್ದರೂ ಬಲಿಷ್ಠರಾದವರು ಅಂತಹ ದುರ್ಬಲಶತ್ರುವನ್ನೂ ಉಪೇಕ್ಷಿಸ ಬಾರದು. (ಹೀಗಿರುವಾಗ ನಮ್ಮ ಶತ್ರುಗಳು ಬಲಿಷ್ಠರೂ ಆಗಿರುತ್ತಾರೆ. ದುಷ್ಟಾತ್ಮರೂ ಆಗಿರುತ್ತಾರೆ. ಅಂತಹವರನ್ನು ಉಪೇಕ್ಷಿಸಿ ಸುಮ್ಮನಿದ್ದು ಬಿಡುವುದು ಸಾಧುವಲ್ಲ. ಅವರ ನಿರ್ಮೂಲನಕ್ಕೆ ತಕ್ಕುದಾದ ಉಪಾಯವನ್ನು ಹುಡುಕಬೇಕು. ಅವರನ್ನು ಎದುರಿಸಲು ಸಿದ್ಧರಾಗಿರಬೇಕು.)"

ಶ್ರೀಕೃಷ್ಣನು ಹೀಗೆಂದು ಹೇಳಿದನಂತರದಲ್ಲಿ ಚಕ್ರ-ಗದಾಧಾರಿಯಾದ ಶ್ರೀಕೃಷ್ಣನ ಅಭಿಪ್ರಾಯವೇನೆಂಬುದನ್ನು ತಿಳಿದ ಅವನ ಸೇವಕರು ರಥವನ್ನು ಸಿದ್ಧಗೊಳಿಸುವ ಸಲುವಾಗಿ ಮುಂದೆ ಧಾವಿಸಿದರು.

ಪ್ರಳಯಕಾಲದ ಯಜ್ಞೇಶ್ವರನಂತೆ ಜಾಜ್ವಲ್ಯಮಾನವಾಗಿದ್ದ, ಅಂತ ರಿಕ್ಷದಲ್ಲಿ ಸಂಚರಿಸುವ ವಿಮಾನದಂತೆ ಬಹುವೇಗವಾಗಿ ಹೋಗುವ ಸಾಮರ್ಥ್ಯವನ್ನು ಹೊಂದಿದ್ದ, ಸೂರ್ಯ-ಚಂದ್ರರ ಪ್ರಕಾಶದಂತೆ ಅತ್ಯಂತ ಪ್ರಕಾಶದಿಂದ ಕೂಡಿದ್ದ ಚಕ್ರಗಳಿಂದ ಸಮಲಂಕೃತವಾಗಿದ್ದ, ಅರ್ಧಚಂದ್ರ ರಿಂದಲೂ, ಪೂರ್ಣಚಂದ್ರರಿಂದಲೂ, ಮೀನುಗಳಿಂದಲೂ, ಮೃಗ-ಪಕ್ಷಿ ಗಳಿಂದಲೂ ಚಿತ್ರಿತವಾಗಿದ್ದ, ಪುಷ್ಪಗಳಿಂದಲೂ–ಮಣಿರತ್ನಗಳಿಂದಲೂ ಸಮಲಂಕೃತವಾಗಿದ್ದ, (ರಥದ ಸುತ್ತಲೂ ಅರ್ಧಚಂದ್ರಾಕೃತಿಗಳು, ಪೂರ್ಣ ಚಂದ್ರಾಕೃತಿಗಳು, ಮೀನುಗಳು ಮತ್ತು ಮೃಗ-ಪಕ್ಷಿಗಳು ನಾನಾರೀತಿಯಲ್ಲಿ ಚಿತ್ರಿತವಾಗಿದ್ದುವು. ರಥವು ಪುಷ್ಪಹಾರಗಳಿಂದಲೂ ಮತ್ತು ಮಣಿ-ರತ್ನಾದಿ ಗಳಿಂದಲೂ ಅಲಂಕೃತವಾಗಿದ್ದಿತು.) ಮಧ್ಯಾಹ್ನದ ಸೂರ್ಯನಂತೆ ಪ್ರಕಾಶ ಮಾನವಾಗಿದ್ದ, ಅತ್ಯಂತವಿಶಾಲವಾಗಿದ್ದ, ನೋಡಲು ಬಹಳ ಸುಂದರವಾಗಿ ಕಾಣುತ್ತಿದ್ದ, ಮಣಿಗಳಿಂದಲೂ–ಸುವರ್ಣಗಳಿಂದಲೂ ಚಿತ್ರ-ವಿಚಿತ್ರವಾಗಿ ಮಾಡಲ್ಪಟ್ಟ ಭಾಗಗಳನ್ನು ಹೊಂದಿದ್ದ ಸುಮನೋಹರವಾದ ಧ್ವಜದಂಡವನ್ನೂ ಮತ್ತು ಒಳ್ಳೆಯ ಪತಾಕೆಯನ್ನೂ ಹೊಂದಿದ್ದ, ಸಕಲಸಂಭಾರ

ಗಳಿಂದಲೂ ಸಜ್ಜಾಗಿದ್ದ, ಇತರರಿಂದ ಎದುರಿಸಿ ನಿಲ್ಲಲು ಅಸಾಧ್ಯವಾಗಿದ್ದ, ವ್ಯಾಘ್ರಚರ್ಮದಿಂದ ಆಚ್ಛಾದಿತವಾಗಿದ್ದ, ಶತ್ರುಗಳ ಯಶಸ್ಸನ್ನು ಅಪಹರಿಸುವ ಸಾಮರ್ಥ್ಯವನ್ನು ಪಡೆದಿದ್ದ, ಯಾದವರಿಗೆ ಆನಂದದಾಯಕವಾಗಿದ್ದ ರಥಕ್ಕೆ ಸ್ನಾನಮಾಡಿಸಿ ಅದನ್ನು ಚಿನ್ನದ ಕಡಿವಾಣಗಳೇ ಮುಂತಾದುವುಗಳಿಂದ ಸಿಂಗರಿಸಲ್ಪಟ್ಟ ಶೈಬ್ಯ, ಸುಗ್ರೀವ, ಮೇಘಪುಷ್ಪ ಮತ್ತು ಬಲಾಹಕಗಳೆಂಬ ನಾಲ್ಕು ಕುದುರೆಗಳಿಂದ ಸೇವಕರು ಸಜ್ಜುಗೊಳಿಸಿದರು. ಶ್ರೀಕೃಷ್ಣನ ಮಹಿಮೆಯನ್ನು ಮತ್ತಷ್ಟು ಹೆಚ್ಚಿಸುವ ಸಲುವಾಗಿ ಗರುಡನಿದ್ದ ಧ್ವಜವನ್ನು ರಥದ ಮೇಲೆ ಕಟ್ಟಿದರು. ರಥವು ಚಲಿಸುತ್ತಿದ್ದ ಕಾಲದಲ್ಲಿ ಆ ಧ್ವಜವು ಸುಮಧುರವಾದ ಶಬ್ದವನ್ನುಂಟುಮಾಡುತ್ತಿದ್ದಿತು. ಮೇರುಪರ್ವತದ ಶಿಖರದಂತೆ ಸ್ವರ್ಣದ ಕಾಂತಿಯಿಂದ ಪ್ರಜ್ವಲಿಸುತ್ತಿದ್ದ, ಮೇಘ ಮತ್ತು ದುಂದುಭಿಗಳಿಗೆ ಸಮಾನವಾಗಿ ಧ್ವನಿಮಾಡುತ್ತಿದ್ದ, ಇಚ್ಛಾನುಸಾರವಾಗಿ ಪ್ರಯಾಣಮಾಡಬಲ್ಲ ವಿಮಾನದಂತಿದ್ದ ರಥವನ್ನು ಭಗವಾನ್ ಶ್ರೀಕೃಷ್ಣನು ಆರೋಹಣಮಾಡಿದನು. ಅನಂತರದಲ್ಲಿ ಸಾತ್ಯಕಿಯನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಪೃಥ್ವಿಯನ್ನೂ ಮತ್ತು ಅಂತರಿಕ್ಷವನ್ನೂ ರಥಘೋಷದಿಂದ ಶಬ್ದಾಯಮಾನವನ್ನಾಗಿ ಮಾಡುತ್ತಾ ಪುರುಷೋತ್ತಮನು ಹೊರಟನು. ಮರುಕ್ಷಣದಲ್ಲಿಯೇ ಆಕಾಶದಲ್ಲಿದ್ದ ಕಾರ್ಮುಗಿಲು ಅದೃಶ್ಯವಾಗಿಹೋಯಿತು. ಗಾಳಿಯು ಮಂದವಾಗಿಯೂ, ಮಂಗಳಕರವಾಗಿಯೂ ಬೀಸತೊಡಗಿತು. ಆ ಕಾರಣದಿಂದಲೇ ಭೂಮಿಯಲ್ಲಿದ್ದ ಧೂಳು ಮೇಲೇಳದೇ ಪ್ರಶಾಂತವಾಗಿದ್ದಿತು. ವಾಸುದೇವನ ಪ್ರಯಾಣಕಾಲದಲ್ಲಿ ಮೃಗ-ಪಕ್ಷಿಗಳು ಪ್ರದಕ್ಷಿಣಾಕಾರವಾಗಿಯೂ, ಯಥಾಕ್ರಮವಾಗಿಯೂ ಹೋಗುತ್ತಿದ್ದುವು. ಮಂಗಲಾರ್ಥಸೂಚಕವಾದ ಶಬ್ದಮಾಡುತ್ತಾ ಎಲ್ಲ ದಿಕ್ಕುಗಳಿಂದಲೂ ಸಾರಸ, ಶತಪತ್ರ ಮತ್ತು ಹಂಸಗಳೇ ಮೊದಲಾದ ಪಕ್ಷಿಗಳು ಶ್ರೀಕೃಷ್ಣನನ್ನು ಹಿಂಬಾಲಿಸಿದುವು. ಮಂತ್ರಪೂರ್ವಕವಾದ ಆಹುತಿಗಳಿಂದಲೂ ಮಹಾಹೋಮಗಳಿಂದಲೂ ಆರಾಧಿತನಾದ ಅಗ್ನಿದೇವನು ಪ್ರದಕ್ಷಿಣಾಕಾರನಾಗಿಯೂ ಧೂಮರಹಿತನಾಗಿಯೂ ಪ್ರಜ್ವಲಿಸುತ್ತಿದ್ದನು. ಇಂದ್ರನ ತಮ್ಮನಾದ, ಯಾದವರಿಗೆ ಸುಖಾವಹನಾದ ಶ್ರೀಕೃಷ್ಣನನ್ನು ವಸಿಷ್ಠ, ವಾಮದೇವ, ಭೂರಿದ್ಯುಮ್ನ,

ಗಯ, ಕ್ರಥ, ಶುಕ್ರ, ನಾರದ, ವಾಲ್ಮೀಕಿ, ಮರುತ್ತ, ಕುಶಿಕ, ಭೃಗು–ಇವರೇ ಮೊದಲಾದ ದೇವರ್ಷಿಗಳೂ, ಬ್ರಹ್ಮರ್ಷಿಗಳೂ (ಅದೃಶ್ಯರಾಗಿಯೇ) ಪ್ರದಕ್ಷಿಣೆಮಾಡಿದರು. (ಪ್ರದಕ್ಷಿಣಾಕಾರವಾಗಿ ಶ್ರೀಕೃಷ್ಣನ ರಥವನ್ನು ಸುತ್ತಿದರು.) ಈ ರೀತಿಯಲ್ಲಿ ಶ್ರೀಕೃಷ್ಣನು ಅನೇಕಾನೇಕ ಮಹಾಭಾಗರಾದ ಮಹರ್ಷಿಗಳಿಂದಲೂ ಮತ್ತು ಸಾಧು-ಸಂತರಿಂದಲೂ ಸಂಪೂಜಿತನಾಗಿ ಹಸ್ತಿನಾಪುರಕ್ಕೆ ಅಭಿಮುಖವಾಗಿ ಪ್ರಯಾಣಹೊರಟನು. ಕುಂತೀಪುತ್ರರಾದ ಯುಧಿಷ್ಠಿರ, ಭೀಮಸೇನ, ಅರ್ಜುನ, ಮಾದ್ರಿಯ ಮಕ್ಕಳಾದ ನಕುಲ-ಸಹದೇವರು, ಪರಾಕ್ರಮಿಯಾದ ಚೇಕಿತಾನ, ಚೇದಿರಾಜನಾದ ಧೃಷ್ಟಕೇತು, ದ್ರುಪದ, ಕಾಶಿರಾಜ, ಮಹಾರಥ ನಾದ ಶಿಖಂಡೀ, ಧೃಷ್ಟದ್ಯುಮ್ನ, ಮಕ್ಕಳಿಂದೊಡಗೂಡಿದ ವಿರಾಟರಾಜ ಮತ್ತು ಕೇಕಯರಾಜ–ಇವರೆಲ್ಲರೂ ಕಾರ್ಯದ ಸಿದ್ಧಿಗಾಗಿಯೂ ಮತ್ತು ಶಿಷ್ಟಾಚಾರಕ್ಕೆ ಅನುಗುಣವಾಗಿಯೂ ಹಸ್ತಿನೆಗೆ ಪ್ರಯಾಣಹೊರಟಿದ್ದ ಶ್ರೀಕೃಷ್ಣನನ್ನು ಅನುಸರಿಸಿ ಹೊರಟರು.

ದ್ಯುತಿಮಂತನಾದ, ಧರ್ಮಾತ್ಮನಾದ ಯುಧಿಷ್ಠಿರನು ಶ್ರೀಕೃಷ್ಣನನ್ನೇ ಹಿಂಬಾಲಿಸಿ ಸ್ವಲ್ಪದೂರ ಹೋದನಂತರ ಸಕಲರಾಜರ ಸಮಕ್ಷದಲ್ಲಿ ಶ್ರೀಕೃಷ್ಣನನ್ನು ಕುರಿತು ಮತ್ತೂ ಕೆಲವು ಮಾತುಗಳನ್ನು ಹೇಳಿದನು.

**ಯೋ ವೈ ನ ಕಾಮಾನ್ನ ಭಯಾನ್ನ ಲೋಭಾನ್ನಾರ್ಥಕಾರಣಾತ್ ।**
**ಅನ್ಯಾಯಮನುವರ್ತೇತ ಸ್ಥಿರಬುದ್ಧಿರಲೋಲುಪಃ ॥೩೪॥**

**ಧರ್ಮಜ್ಞೋ ಧೃತಿಮಾನ್ಪ್ರಾಜ್ಞಃ ಸರ್ವಭೂತೇಷು ಕೇಶವಃ ।**
**ಈಶ್ವರಃ ಸರ್ವಭೂತಾನಾಂ ದೇವದೇವಃ ಸನಾತನಃ ॥೩೫॥**

**ತಂ ಸರ್ವಗುಣಸಮ್ಪನ್ನಂ ಶ್ರೀವತ್ಸಕೃತಲಕ್ಷಣಮ್ ।**
**ಸಮ್ಪರಿಷ್ವಜ್ಯ ಕೌನ್ತೇಯಃ ಸಂದೇಷ್ಟುಮುಪಚಕ್ರಮೇ ॥೩೬॥**

ಯಾವನು ಕಾಮದಿಂದಾಗಲೀ, ಭಯದಿಂದಾಗಲೀ, ಲೋಭದಿಂದಾಗಲೀ, ಯಾವುದಾದರೂ ಕಾರ್ಯಸಿದ್ಧಿಯ ಕಾರಣದಿಂದಾಗಲೀ ನ್ಯಾಯವಲ್ಲದ ರೀತಿಯಲ್ಲಿ ವರ್ತಿಸುವುದಿಲ್ಲವೋ–ಯಾವನಿಗೆ ಸ್ಥಿರವಾದ ಅಚಂಚಲವಾದ ಬುದ್ಧಿಯಿರುವುದೋ–ಯಾವನು ಆಸೆಯೆಂಬುದನ್ನು ತೊರೆದಿರುವನೋ–

ಯಾವನು ಧರ್ಮಜ್ಞನೋ–ಧೈರ್ಯವಂತನೋ–ಪ್ರಾಜ್ಞನೋ–ಎಲ್ಲ ಪ್ರಾಣಿಗಳ ಹೃತ್ಕಮಲಗಳಲ್ಲಿಯೂ ವಿರಾಜಮಾನನಾಗಿರುವನೋ–ಸರ್ವ ಪ್ರಾಣಿಗಳಿಗೂ ಈಶ್ವರನೋ–ಯಾವನು ದೇವತೆಗಳಿಗೂ ದೇವತೆಯೋ–ಯಾವನು ಕೇಶವನೆಂದೂ ಪ್ರಸಿದ್ಧನಾಗಿರುವನೋ–ಯಾವನು ಸನಾತನನೋ– ಅಂತಹ ಸರ್ವಗುಣಸಂಪನ್ನನಾದ, ಶ್ರೀವತ್ಸಾಂಕಿತವಕ್ಷನಾದ ಶ್ರೀಕೇಶವನನ್ನು ಯುಧಿಷ್ಠಿರನು ಗಾಢವಾಗಿ ಆಲಿಂಗಿಸಿಕೊಂಡು ನೆತ್ತಿಯನ್ನು ಆಘ್ರಾಣಿಸಿ ಸಂದೇಶವನ್ನೀಯಲು ಉಪಕ್ರಮಿಸಿದನು :

"ಶತ್ರುಸಂಹಾರಕನೇ! ಜನಾರ್ದನ! ನಮ್ಮ ತಾಯಿಯಾದ ಕುಂತಿಯು ಅಬಲೆಯಾದರೂ ನಮ್ಮನ್ನು ಬಾಲ್ಯದಿಂದ ಸಾಕಿಸಲಹಿದಳು. ಅವಳು ಯಾವಾಗಲೂ ಉಪವಾಸ, ತಪಸ್ಸು, ವ್ರತ-ನಿಯಮಾದಿಗಳಲ್ಲಿಯೇ ಕಾಲಕಳೆಯತಕ್ಕವಳು. ಮಕ್ಕಳಿಗೆ ಮಂಗಳವಾಗಲೆಂದು ಸದಾ ಆಶಿಸತಕ್ಕವಳು. ದೇವತಾತಿಥಿಪೂಜೆಗಳಲ್ಲಿಯೂ, ಗುರುಶುಶ್ರೂಷೆಯಲ್ಲಿಯೂ ಸರ್ವದಾ ನಿರತಳಾಗಿರತಕ್ಕವಳು. ಮಕ್ಕಳಲ್ಲಿ ಹೆಚ್ಚಿನ ವಾತ್ಸಲ್ಯವುಳ್ಳವಳು. ಮಕ್ಕಳಿಗೆ ಯಾವಾಗಲೂ ಪ್ರಿಯವನ್ನೇ ಮಾಡತಕ್ಕವಳು. ನಮ್ಮೈವರ ಪ್ರೀತಿಗೂ ಪಾತ್ರಳಾದವಳು. ದುರ್ಯೋಧನನ ಭಯದಿಂದ ನಮ್ಮನ್ನು ಕಾಪಾಡಿದವಳು. ಸಮುದ್ರದಲ್ಲಿ ಮುಳುಗಿಹೋಗುತ್ತಿರುವವರನ್ನು ನೌಕೆಯೊಂದು ಯಾವ ರೀತಿಯಲ್ಲಿ ಸಂರಕ್ಷಿಸುತ್ತದೆಯೋ–ಅದೇ ರೀತಿಯಲ್ಲಿ ಅನೇಕ ಸಮಯಗಳಲ್ಲಿ ಮೃತ್ಯುವಿನ ದವಡೆಯಲ್ಲಿದ್ದ ನಮ್ಮನ್ನು ಉದ್ಧರಿಸಿದವಳು. ದುಃಖಪಡಲು ಅನರ್ಹಳಾದ ಅವಳು ನಮಗಾಗಿ ಅನೇಕವಿಧವಾದ ಕಷ್ಟಗಳನ್ನೂ–ದುಃಖವನ್ನೂ ಸತತವಾಗಿ ಅನುಭವಿಸುತ್ತಲೇ ಇದ್ದಾಳೆ. ಅಂತಹ ನಮ್ಮ ತಾಯಿಯನ್ನು ಕಂಡು ನಾವು ಅವಳ ಕುಶಲವನ್ನು ಪ್ರಶ್ನಿಸಿದೆವೆಂದು ಹೇಳು. ಮಾಧವ! ಅವಳನ್ನು ಕಂಡೊಡನೆಯೇ ನೀನು ಅವಳಿಗೆ ಅಭಿವಾದನಮಾಡಿ ಗಾಢವಾಗಿ ಆಲಿಂಗಿಸಿಕೊಂಡು ಪುತ್ರವಿರಹದಿಂದ ಪರಿತಪ್ತಳಾಗಿರುವ ಅವಳಿಗೆ ಪಾಂಡವರ ಯೋಗ-ಕ್ಷೇಮಗಳನ್ನು ತಿಳಿಸುತ್ತಾ ಬಾರಿ-ಬಾರಿಗೂ ಆಶ್ವಾಸನೆಯನ್ನಿತ್ತು ಸಮಾಧಾನಗೊಳಿಸು. ಕೃಷ್ಣ! ನಮ್ಮ ತಾಯಿಯು ವಿವಾಹವಾಗಿ ಮಾವನಮನೆಗೆ ಬಂದ ದಿನದಿಂದಲೂ ನಾನಾವಿಧವಾದ ದುಃಖಗಳನ್ನೇ

ಕಾಣುತ್ತಿದ್ದಾಳೆ ಮತ್ತುಕಷ್ಟಗಳನ್ನೂ ಅನುಭವಿಸುತ್ತಿದ್ದಾಳೆ. ದುಃಖವನ್ನನುಭವಿಸಲು ಅನರ್ಹಳಾದ ಆ ರಾಜಮಾತೆಯು ಈಗಲೂ ಹಸ್ತಿನಾಪಟ್ಟಣದಲ್ಲಿ ನಾನಾವಿಧವಾದ ಮಾನಸಿಕಕ್ಲೇಶಗಳನ್ನು ಅನುಭವಿಸುತ್ತಲೇ ಇದ್ದಾಳೆ.



ಅರಿಂದಮನೇ! ನಿಶ್ಚಯವಾಗಿಯೂ ನಮ್ಮ ಸಕಲಕಷ್ಟಗಳೂ ದೂರವಾಗುವ ಕಾಲವೇನಾದರೂ ಬಂದೀತೇ? ಬಾಲ್ಯ ಮೊದಲುಗೊಂಡು ಕಷ್ಟದಲ್ಲಿಯೇ ತೊಳಲುತ್ತಿರುವ ನಮ್ಮ ತಾಯಿಗೆ ಸ್ವಲ್ಪವಾದರೂ ಸುಖವನ್ನು ಉಂಟುಮಾಡಲು ಸಾಧ್ಯವಾಗುವುದೇ?

ನಾವು ಅರಣ್ಯಕ್ಕೆ ಹೊರಟಾಗ ಅವಳು ಮಾಡುತ್ತಿದ್ದ ರೋದನವನ್ನು ನೆನೆಸಿಕೊಂಡರೆ ಈಗಲೂ ದುಃಖವು ಉಕ್ಕಿ ಬರುವುದು, ಕೃಷ್ಣ! ಮಕ್ಕಳ

ಮೇಲೆ ಹೆಚ್ಚಿನ ವಾತ್ಸಲ್ಯವಿದ್ದ, ನಮ್ಮ ವನವಾಸದ ವಿಷಯವನ್ನು ಕೇಳಿ ಬಹುದೀನೆಯಾಗಿದ್ದ ಅವಳು ಕಾತರತೆಯಿಂದ ನಮ್ಮ ಹಿಂದೆಯೇ ಓಡಿಯೋಡಿ ಬರುತ್ತಿದ್ದಳು. ಗಟ್ಟಿಯಾಗಿ ಅಳುತ್ತಿದ್ದಳು. ಅಂತಹವಳನ್ನು ನಾವು ಬಿಟ್ಟು ಅರಣ್ಯಕ್ಕೆ ಹೊರಟುಹೋದೆವು. ಆನರ್ತದೇಶೀಯರಿಂದ ಸತ್ಕೃತನಾದ ಶ್ರೀಕೇಶವನೇ! ಮಕ್ಕಳ ಸಂಬಂಧವಾಗಿ ಹಲವಾರು ದುಃಖಗಳನ್ನು ಅನುಭವಿಸುತ್ತಾ ಕೃಶಳಾದ ನಮ್ಮ ತಾಯಿಯು ಬದುಕಿರುವಳೆಂದರೆ–ಬಹುದುಃಖಗಳಿಂದಲೂ ಮಾನವನು ಸಾಯುವುದಿಲ್ಲವೆಂದು ತಿಳಿದುಬರುತ್ತದೆ. ಅಂತಹ ದೀನಳಾದ ನನ್ನ ತಾಯಿಗೆ ನಮಿಸಿ ಕುಶಲಪ್ರಶ್ನೆಗಳನ್ನು ಕೇಳಿದನಂತರ ಕುರುಶ್ರೇಷ್ಠನಾದ ಧೃತರಾಷ್ಟ್ರನನ್ನೂ ಮತ್ತು ನನಗಿಂತಲೂ ಅಧಿಕವಯಸ್ಕರಾದ ರಾಜರನ್ನೂ ನನ್ನ ಪರವಾಗಿ ನಮಸ್ಕರಿಸಬೇಕು.

ಅನಂತರದಲ್ಲಿ ಭೀಷ್ಮ, ದ್ರೋಣ, ಕೃಪ, ಬಾಹ್ಲಿಕಮಹಾರಾಜ, ದ್ರೋಣಪುತ್ರನಾದ ಅಶ್ವತ್ಥಾಮಾ, ಸೋಮದತ್ತ ಮತ್ತು ಭರತವಂಶದ ಇತರ ರಾಜರನ್ನೂ ನನ್ನ ಪರವಾಗಿ ಕುಶಲಪ್ರಶ್ನೆಗಳನ್ನು ಕೇಳಬೇಕು. ಅನಂತರದಲ್ಲಿ ಕುರುಗಳ ಮಂತ್ರಧಾರಕನಾದ (ಮಂತ್ರಿಯಾದ) ಮಹಾಪ್ರಾಜ್ಞನಾದ, ಅಸಾಧಾರಣಬುದ್ಧಿಯುಳ್ಳವನಾದ, ಮರ್ಮಜ್ಞನಾದ ವಿದುರನನ್ನು ಗಾಢಾಲಿಂಗನಮಾಡಿಕೊಂಡು ನನ್ನ ಮಾತಿನಂತೆ ಅವನ ಕುಶಲಪ್ರಶ್ನೆಮಾಡು."

ಜನಮೇಜಯ! ಯುಧಿಷ್ಠಿರನು ಅನೇಕರಾಜರ ಮಧ್ಯದಲ್ಲಿ ಶ್ರೀಕೃಷ್ಣನಿಗೆ ಹೀಗೆಂದು ಹೇಳಿ ಶ್ರೀಕೃಷ್ಣನಿಗೊಮ್ಮೆ ಪ್ರದಕ್ಷಿಣೆಮಾಡಿ ಅವನ ಅನುಜ್ಞೆಯನ್ನು ಪಡೆದು ಹಿಂದಿರುಗಿದನು.

ಯುಧಿಷ್ಠಿರನು ಹಿಂದಿರುಗಿದರೂ ಸಹ ಅರ್ಜುನನು ಪುನಃ ಸ್ವಲ್ಪ ದೂರದವರೆಗೆ ಶ್ರೀಕೃಷ್ಣನನ್ನೇ ಅನುಸರಿಸಿ ಹೋಗಿ ಅಪರಾಜಿತನಾದ, ಶತ್ರುಸಂಹಾರಕನಾದ, ಪುರುಷರ್ಷಭನಾದ, ಸುಹೃತ್ತಮನಾದ, ದಾಶಾರ್ಹಕುಲನಂದನನಾದ ಶ್ರೀಕೃಷ್ಣನನ್ನು ಕುರಿತು ಹೀಗೆಂದು ಹೇಳಿದನು :

"ಗೋವಿಂದ! ನಾವು ಹಿಂದೆ ಮಂತ್ರಾಲೋಚನೆಮಾಡಿ ಅರ್ಧರಾಜ್ಯವನ್ನು ಪಡೆದುಕೊಂಡು ಸಂಧಿಮಾಡಿಕೊಳ್ಳಬಹುದೆಂಬ ಯಾವ ನಿರ್ಣಯ

ವನ್ನು ಮಾಡಿದ್ದೆವೋ–ಅದು ನಮ್ಮ ಕಡೆಯ ಎಲ್ಲ ರಾಜರಿಗೂ ತಿಳಿದಿದೆ. ಒಂದು ವೇಳೆ ದುರ್ಯೋಧನನು ಲೋಭವನ್ನು ಬಿಟ್ಟು ನಮ್ಮನ್ನು ಅನಾದರಣೆ ಮಾಡದೇ ಯಥಾಯೋಗ್ಯವಾಗಿ ಸತ್ಕರಿಸಿ ಅರ್ಧರಾಜ್ಯವನ್ನೇ ನಮಗೆ ಕೊಟ್ಟು ಬಿಟ್ಟರೆ–ಅದರಿಂದ ಅವನು ನಮಗೆ ಅತ್ಯಂತಪ್ರಿಯವಾದ ಕಾರ್ಯವನ್ನೇ ಮಾಡಿಕೊಟ್ಟಂತಾಗುತ್ತದೆ. ಹೀಗೆ ಮಾಡುವುದರಿಂದ ಕೌರವರೂ ಸಹ ಮಹಾ ಭಯದಿಂದ ವಿಮುಕ್ತರಾಗುತ್ತಾರೆ. ಚತುರುಪಾಯಗಳನ್ನು ತಿಳಿಯದಿರುವ, ಧೃತರಾಷ್ಟ್ರನ ಮಗನಾದ ದುರ್ಯೋಧನನೇನಾದರೂ ಅರ್ಧರಾಜ್ಯವನ್ನು ಕೊಡುವುದಕ್ಕೆ ಬದಲಾಗಿ ವಿಪರೀತಾಚರಣೆಯನ್ನೇ ಮಾಡಹೋದರೆ–ನಿಶ್ಚಯವಾಗಿಯೂ ಜನಾರ್ದನ! ಕ್ಷತ್ರಿಯರೆಲ್ಲರನ್ನೂ ನಾನು ನಾಶಮಾಡಿಬಿಡುತ್ತೇನೆ.”

ಜನಮೇಜಯ! ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೇಳಿದ ಮಾತುಗಳನ್ನು ಕೇಳಿ ಭೀಮಸೇನನಿಗೆ ಬಹಳ ಸಂತೋಷವಾಯಿತು. ದುರ್ಯೋಧನನನ್ನು ನೆನೆದ ಕೂಡಲೇ ಭೀಮನನ್ನು ಕೋಪವೂ ಆವರಿಸಿತು. ಕೋಪದ ಆಧಿಕ್ಯದಿಂದಾಗಿ ಭೀಮಸೇನನು ಮತ್ತೆ-ಮತ್ತೆ ನಡುಗುತ್ತಿದ್ದನು.

ಕೋಪದಿಂದ ನಡುಗುತ್ತಿದ್ದನಲ್ಲದೇ ಭೀಮನು ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ನಾನಾವಿಧವಾದ ರಣಗರ್ಜನೆಗಳನ್ನೂ ಮಾಡುತ್ತಾ ಗಟ್ಟಿಯಾಗಿ ಕಿರುಚುತ್ತಿದ್ದನು. ಧನಂಜಯನ ಮಾತುಗಳನ್ನು ಕೇಳಿದೊಡನೆಯೇ ಅವನ ಮನಸ್ಸು ಹರ್ಷದಿಂದ ಉತ್ತೇಜಿತವಾಯಿತು. ಹರ್ಷ-ಕೋಪಗಳೆರಡೂ ಭೀಮಸೇನನಲ್ಲಿ ಉದ್ಭೂತವಾದುವು. ಭೀಮಸೇನನ ಆ ಕರ್ಕಶ ನಿನಾದವನ್ನು ಕೇಳಿ ಧನುರ್ಧಾರಿಗಳಾದ ರಾಜರೆಲ್ಲರೂ ಭಯದಿಂದ ನಡುಗಿದರು. ಅವರ ವಾಹನಗಳಾಗಿದ್ದ ಕುದುರೆ, ಆನೆ ಮೊದಲಾದ ಪ್ರಾಣಿಗಳೂ ಭೀಮನ ಆ ರಣಗರ್ಜನೆಗಳನ್ನು ಕೇಳಿ ಭಯಗೊಂಡು ಮಲ-ಮೂತ್ರಗಳನ್ನು ವಿಸರ್ಜನೆ ಮಾಡಿದುವು. ಅರ್ಜುನನು ಈ ಪ್ರಕಾರ ಶ್ರೀಕೇಶವನೊಡನೆ ಸಂಭಾಷಿಸಿ, ಸಂಧಾನವು ಮುರಿದುಹೋದಲ್ಲಿ (**ಅನ್ತಂ ನೂನಂ ಕರಿಷ್ಯಾಮಿ**) ಎಂಬ ತನ್ನ ನಿರ್ಧಾರವನ್ನೂ ಸ್ಪಷ್ಟಪಡಿಸಿ ಶ್ರೀಕೃಷ್ಣನನ್ನೊಮ್ಮೆ ಗಾಢಾಲಿಂಗನಮಾಡಿಕೊಂಡು ಹಿಂದಿರುಗಿದನು. ತನ್ನನ್ನನುಸರಿಸಿ

ಬಂದಿದ್ದ ಎಲ್ಲ ರಾಜರೂ ಪ್ರತಿನಿವೃತ್ತರಾಗಲಾಗಿ ಶೈಬ್ಯ-ಸುಗ್ರೀವಾದಿ ಕುದುರೆಗಳಿಂದ ಎಳೆಯಲ್ಪಡುತ್ತಿದ್ದ ರಥದಲ್ಲಿ ಉಪವಿಷ್ಟನಾಗಿದ್ದ ಜನಾರ್ದನನು ಹರ್ಷಾನ್ವಿತನಾಗಿ ಬಹುವೇಗದಿಂದ ಮುಂದೆ ಪ್ರಯಾಣಮಾಡಿದನು. ಸಾರಥಿ



ಯಾದ ದಾರುಕನಿಂದ ಪ್ರಚೋದಿತವಾದ ಕುದುರೆಗಳು-ಮಾರ್ಗವನ್ನೇ ಕುಡಿದುಬಿಡುತ್ತಿವೆಯೋ ಎಂಬಂತೆ ಮತ್ತು ಆಕಾಶವನ್ನೇ ನುಂಗಿಹಾಕುತ್ತಿವೆಯೋ-ಎಂಬಂತೆ ಬಹುಶೀಘ್ರಗತಿಯಲ್ಲಿ ಹೋಗುತ್ತಿದ್ದುವು. ಹೀಗೆಯೇ ಪ್ರಯಾಣಮಾಡುತ್ತಿರಲಾಗಿ ಮಹಾಬಾಹುವಾದ ಕೇಶವನು ಎರಡು ಪಾರ್ಶ್ವಗಳಲ್ಲಿಯೂ ನಿಂತಿದ್ದ, ಬ್ರಹ್ಮತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಋಷಿಗಳ ಸಮೂಹವನ್ನು ಕಂಡನು. ಒಡನೆಯೇ ಜನಾರ್ದನನು ರಥದಿಂದಿಳಿದು

ಎರಡು ಪಾರ್ಶ್ವಗಳಲ್ಲಿಯೂ ನಿಂತಿದ್ದ ಮಹರ್ಷಿಗಳಿಗೆ ಅಭಿವಾದನಮಾಡಿ ಗೌರವಿಸಿ ಹೇಳಿದನು :

**ಕಚ್ಚಿಲ್ಲೋಕೇಷು ಕುಶಲಂ ಕಚ್ಚಿದ್ಧರ್ಮಃ ಸ್ವನುಷ್ಠಿತಃ ।**
**ಬ್ರಾಹ್ಮಣಾನಾಂ ತ್ರಯೋ ವರ್ಣಾಃ ಕಚ್ಚಿತ್ತಿಷ್ಠನ್ತಿ ಶಾಸನೇ ॥೬೨॥**

"ಪೂಜ್ಯರೇ! ಲೋಕಗಳಲ್ಲಿ ಎಲ್ಲರೂ ಕುಶಲಿಗಳಾಗಿರುವರೇ? ಲೋಕದಲ್ಲಿ ಧರ್ಮವು ಸರಿಯಾಗಿ ಪರಿಪಾಲಿಸಲ್ಪಡುತ್ತಿದೆಯೇ? ಬ್ರಾಹ್ಮಣರ ಧರ್ಮಶಾಸನಾನುಸಾರವಾಗಿ ಕ್ಷತ್ರಿಯ-ವೈಶ್ಯ-ಶೂದ್ರರು ನಡೆದುಕೊಳ್ಳುತ್ತಿರುವರೇ?"

ಮಹರ್ಷಿಗಳಿಗೆ ಯೋಗ್ಯವಾದ ಪೂಜೆಯನ್ನು ಸಲ್ಲಿಸಿ ಪುನಃ ಮಧುಸೂದನನು ಮಹರ್ಷಿಗಳನ್ನು ಪ್ರಶ್ನಿಸಿದನು :

"ಮಹರ್ಷಿಗಳೇ! ಪೂಜ್ಯರಾದ ತಾವು ಎಲ್ಲಿಗೆ ಹೊರಟಿದ್ದೀರಿ? ನೀವು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಆಗಮಿಸಿರುವಿರಿ? ನಾನು ತಮಗಾಗಿ ಯಾವ ಕಾರ್ಯವನ್ನು ಮಾಡಿಕೊಡಲಿ? ಯಾವ ಅರ್ಥಸಿದ್ಧಿಗಾಗಿ ನೀವುಗಳು ಭೂಲೋಕಕ್ಕೆ ಆಗಮಿಸಿರುತ್ತೀರಿ?"

ಶ್ರೀಕೃಷ್ಣನ ಮಾತುಗಳನ್ನು ಕೇಳಿ ದೇವ-ದೈತ್ಯರಿಗೆ ಒಡೆಯನಾದ, ಬ್ರಹ್ಮನ ಮಿತ್ರನಾದ, ಜಮದಗ್ನಿಮಹರ್ಷಿಗಳ ಮಗನಾದ, ಭಗವಂತನಾದ ಪರಶುರಾಮನು ಶ್ರೀಕೃಷ್ಣನ ಸಮೀಪಕ್ಕೆ ಬಂದು ಅವನನ್ನು ಗಾಢಾಲಿಂಗನ ಮಾಡಿಕೊಂಡು ಹೇಳಿದನು :

"ಮಹಾಮತಿಯಾದ ಕೇಶವನೇ! ಪುರಾತನಕಾಲದಲ್ಲಿ ನಡೆದ ದೇವಾಸುರರ ಸಂಗ್ರಾಮವನ್ನು ನೋಡಿರುವ ಪುಣ್ಯಾತ್ಮರಾದ ದೇವರ್ಷಿಗಳೂ, ವೇದ-ಶಾಸ್ತ್ರಗಳನ್ನು ತಿಳಿದುಕೊಂಡಿರುವ ಅನೇಕಾನೇಕ ಬ್ರಾಹ್ಮಣ ವಿದ್ವಾಂಸರೂ, ರಾಜರ್ಷಿಗಳೂ, ನಿನ್ನನ್ನು ಸಮ್ಮಾನಿಸಲಿರುವ ತಪಸ್ವಿಗಳೂ– ಎಲ್ಲ ಕಡೆಗಳಿಂದಲೂ ಆಗಮಿಸಿರುವ ಈ ಕ್ಷತ್ರಿಯರಾಜರನ್ನೂ, ಸಭಾಸದರನ್ನೂ ಮತ್ತು ಸತ್ಯಸ್ವರೂಪನಾದ ನಿನ್ನನ್ನೂ ಹಸ್ತಿನಾಪಟ್ಟಣದಲ್ಲಿ ನೋಡುವ ಇಚ್ಛೆಯುಳ್ಳವರಾಗಿದ್ದಾರೆ. ಪ್ರೇಕ್ಷಣೀಯವಾದ ಮತ್ತು ಮಹತ್ತ್ವಪೂರ್ಣವಾದ ಕ್ಷತ್ರಿಯರಿಂದ ತುಂಬಿದ ಆ ಮಹಾಸಭೆಯನ್ನು ನೋಡಲು ನಾವಲ್ಲಿಗೆ

ಹೋಗುತ್ತಿದ್ದೇವೆ. ಮಾಧವನೇ! ಕುರುಗಳ ಮತ್ತು ರಾಜರ ಮಧ್ಯದಲ್ಲಿ ನೀನು ಹೇಳಲಿರುವ ಧರ್ಮಾರ್ಥಸಹಿತವಾದ ಮಾತುಗಳನ್ನು ಕೇಳಲಿಚ್ಛಿಸಿದ್ದೇವೆ.

ಯದುಕುಲಸಿಂಹನೇ! ಭೀಷ್ಮ-ದ್ರೋಣಾದಿಗಳೂ, ಮಹಾಮತಿಯಾದ ವಿದುರನೂ ಮತ್ತು ನೀನೂ ಆ ಮಹಾಸಭೆಯಲ್ಲಿ ಭಾಗವಹಿಸುತ್ತೀರಿ. ಸತ್ಯವೂ, ಹಿತವೂ ಮತ್ತು ದಿವ್ಯವೂ ಆದ ನಿನ್ನ ಮತ್ತು ಭೀಷ್ಮಾದಿಗಳ ಮಾತುಗಳನ್ನು ಕೇಳಲು ಆಶಿಸಿದ್ದೇವೆ. ನಾವು ನಿನ್ನ ಅನುಮತಿಯನ್ನು ಪಡೆದು ಮುಂದೆ ಪ್ರಯಾಣಮಾಡುತ್ತೇವೆ. ಪುನಃ ನಾವು ನಿನ್ನನ್ನು ಕಾಣುತ್ತೇವೆ. ನೀನು ನಿರ್ವಿಘ್ನವಾಗಿ ಮುಂದೆ ಪ್ರಯಾಣಮಾಡು. ಬಲದಿಂದಲೂ ಮತ್ತು ತೇಜಸ್ಸಿನಿಂದಲೂ ಪರಿಪೂರ್ಣನಾದ ನೀನು ಸಭೆಯನ್ನು ಪ್ರವೇಶಮಾಡಿ ದಿವ್ಯವಾದ ಆಸನದಲ್ಲಿ ಮಂಡಿತನಾದಾಗ, ನಾವು ಪುನಃ ನಿನ್ನನ್ನು ಸಂದರ್ಶಿಸುತ್ತೇವೆ.”

ಲ೩ನೆಯ ಅಧ್ಯಾಯವು ಮುಗಿಯಿತು.

ಲ೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಪ್ರಯಾಣಮಾಡುತ್ತಿರುವಾಗ ಮಾರ್ಗದಲ್ಲಾದ ಶುಭಾಶುಭಶಕುನಗಳ ವರ್ಣನೆ : ಮಾರ್ಗದಲ್ಲಿದ್ದ ಅನೇಕಾನೇಕ ಗ್ರಾಮಸ್ಥರಿಂದ ಶ್ರೀಕೃಷ್ಣನಿಗೆ ಸತ್ಕಾರ : ವೃಕಸ್ಥಲದಲ್ಲಿ ವಿಶ್ರಾಂತಿ

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

“ಪರಂತಪನೇ! ಜನಮೇಜಯ! ಶತ್ರುಪಕ್ಷದ ವೀರರನ್ನು ಧ್ವಂಸ ಮಾಡಲು ಸಮರ್ಥರಾದ, ಶಸ್ತ್ರಪಾಣಿಗಳಾದ ಹತ್ತು ಮಂದಿ ಮಹಾರಥರೂ, ಸಾವಿರ ಕಾಲಾಳುಗಳೂ, ಒಂದು ಸಾವಿರ ಕುದುರೆಸವಾರರೂ, ನೂರಾರು ಮಂದಿ ವಿನಯಶೀಲರಾದ ಸೇವಕರೂ ಹಸ್ತಿನಾವತಿಗೆ ಪ್ರಯಾಣಮಾಡುತ್ತಿದ್ದ ಮಹಾಬಾಹುವಾದ ದೇವಕೀಪುತ್ರನಾದ ಶ್ರೀಕೃಷ್ಣನನ್ನನುಸರಿಸಿ ಹೊರಟರು. ವಿಪುಲವಾದ ಭೋಜ್ಯಸಾಮಗ್ರಿಗಳ ಬಂಡಿಗಳೂ ಶ್ರೀಕೃಷ್ಣನ ಹಿಂದೆ ಹೊರಟುವು.”

ಜನಮೇಜಯನು ಪ್ರಶ್ನಿಸುತ್ತಾನೆ :

“ವೈಶಂಪಾಯನರೇ! ದಾಶಾರ್ಹಕುಲತಿಲಕನಾದ, ಮಹಾತ್ಮನಾದ ಮಧುಸೂದನನು ಹೇಗೆ ಪ್ರಯಾಣಮಾಡಿದನು ಮತ್ತು ಪ್ರಯಾಣಮಾಡುತ್ತಿದ್ದ ಮಹೌಜಸ್ಕನಾದ ಶ್ರೀಕೃಷ್ಣನ ಮುಂದೆ ಯಾವ ವಿಧವಾದ ಶಕುನಗಳು ಮೂಡಿಬಂದುವು?–ಈ ಎಲ್ಲ ವಿಷಯಗಳನ್ನೂ ನನಗೆ ವಿಶದವಾಗಿ ಹೇಳಿರಿ.”

“ಜನಮೇಜಯ! ಮಹಾತ್ಮನಾದ ಶ್ರೀಕೃಷ್ಣನು ಹಸ್ತಿನಾಪಟ್ಟಣಕ್ಕೆ ಪ್ರಯಾಣಮಾಡುತ್ತಿದ್ದ ಕಾಲದಲ್ಲಿ ಯಾವ ಯಾವ ದಿವ್ಯಶಕುನಗಳೂ ಮತ್ತು ಉತ್ಪಾತಸೂಚಕವಾದ ಅಪಶಕುನಗಳೂ ಮೂಡಿಬಂದುವೋ–ಅವೆಲ್ಲವನ್ನೂ ನಾನು ಸವಿಸ್ತರವಾಗಿಯೇ ಹೇಳುತ್ತೇನೆ.; ಕೇಳು.

ಅನಭ್ರೇಽಶನಿನಿರ್ಘೋಷಃ ಸವಿದ್ಯುತ್ಸಮಜಾಯತ ।
ಅನ್ವಗೇವ ಚ ಪರ್ಜನ್ಯಃ ಪ್ರಾವರ್ಷದ್ವಿಘನೇ ಭೃಶಮ್ ॥೫॥

ಆಕಾಶದಲ್ಲಿ ಮೋಡವೇ ಇಲ್ಲದಿದ್ದಾಗ ಮಿಂಚಿನಿಂದ ಕೂಡಿದ ಸಿಡಿಲಿನ ಶಬ್ದವು ಮೂಡಿಬಂದಿತು. ಒಡನೆಯೇ ಮೋಡವಿಲ್ಲದ ಆಕಾಶದಿಂದ ಧಾರಾಕಾರವಾಗಿ ಮಳೆಯೂ ಸುರಿಯಿತು.

ಪ್ರತ್ಯಗೂಹುರ್ಮಹಾನದ್ಯಃ ಪ್ರಾಙ್ಮುಖಾಃ ಸಿನ್ಧುಸಪ್ತಮಾಃ ।
ವಿಪರೀತಾ ದಿಶಃ ಸರ್ವಾ ನ ಪ್ರಾಜ್ಞಾಯತ ಕಿಂಚನ ॥೬॥

ಪೂರ್ವದಿಕ್ಕಿಗೆ ಪ್ರವಹಿಸುತ್ತಿದ್ದ ಮಹಾನದಿಗಳು ಪಶ್ಚಿಮಕ್ಕೂ, ಪಶ್ಚಿಮಕ್ಕೆ ಹರಿಯುತ್ತಿದ್ದ ಸಿಂಧುವೇ ಮೊದಲಾದ ಏಳು ಮಹಾನದಿಗಳು ಪೂರ್ವಕ್ಕೂ ಪ್ರವಹಿಸತೊಡಗಿದುವು. ನಾಲ್ಕು ದಿಕ್ಕುಗಳೂ ಅಸ್ತವ್ಯಸ್ತವಾದ ವಿಪರೀತವಾದ ವಾತಾವರಣವನ್ನು ಹೊಂದಿದುವು. ಯಾವ ದಿಕ್ಕಿನಲ್ಲಿಯೂ ಏನೊಂದೂ ಕಾಣುತ್ತಿರಲಿಲ್ಲ. (ಸಿಂಧುವೇ ಮೊದಲಾದ ಮಹಾನದಿಗಳು ಈಗಲೂ ಪೂರ್ವದಿಕ್ಕಿಗೆ ಹರಿಯುವುದಿಲ್ಲ. ಎಲ್ಲ ನದಿಗಳೂ ಅಸ್ತವ್ಯಸ್ತವಾಗಿ ಹರಿಯುತ್ತಿದ್ದುವೆಂದು ತಾತ್ಪರ್ಯ.)

ಪ್ರಾಜ್ವಲನ್ನಗ್ನಯೋ ರಾಜನ್ಪೃಥಿವೀ ಸಮಕಮ್ಪತ ।
ಉದಪಾನಾಶ್ಚ ಕುಮ್ಭಾಶ್ಚ ಪ್ರಾಸಿಞ್ಚಞ್ಛತಶೋ ಜಲಮ್ ॥೭॥

ಮತ್ತೊಂದೆಡೆಯಲ್ಲಿ ಅಗ್ನಿಗಳು ಹೊತ್ತಿಕೊಂಡು ಉರಿಯತೊಡಗಿದುವು. ಭೂಮಿಯು ನಡುಗಿತು. ಜಲಾಶಯಗಳಲ್ಲಿಯೂ–ಕುಂಭಗಳಲ್ಲಿಯೂ ಇದ್ದ ನೀರು ನೂರು ಪಟ್ಟು ಹೆಚ್ಚಾಗಿ ಉಕ್ಕಿ ಹೊರಚೆಲ್ಲಿ ಹರಿಯಿತು.

**ತಮಃ ಸಂವೃತಮಪ್ಯಾಸೀತ್ಸರ್ವಂ ಜಗದಿದಂ ತಥಾ ।**
**ನ ದಿಶೋ ನಾದಿಶೋ ರಾಜನ್ಪ್ರಜಾಯನ್ತೇ ಸ್ಮ ರೇಣುನಾ ॥೮॥**

ಮಹಾರಾಜ! ಮತ್ತೊಂದು ಕಡೆಯಲ್ಲಿ ವಾತಾವರಣವು ಹೀಗಿದ್ದಿತು. ಸರ್ವತ್ರ ಧೂಳು ಆವರಿಸಿ ಪ್ರಪಂಚವೆಲ್ಲವೂ ಕತ್ತಲೆಯಿಂದ ಮುಚ್ಚಿಹೋಗಿದೆಯೋ ಎಂಬಂತೆ ಕಾಣುತ್ತಿದ್ದಿತು. ಧೂಳಿನಿಂದ ಪ್ರಾದುರ್ಭೂತವಾದ ಆ ಕತ್ತಲಿನ ಕಾರಣದಿಂದಾಗಿ ಯಾವುದು ದಿಕ್ಕು–ಯಾವುದು ದಿಕ್ಕಲ್ಲ? ಅಥವಾ ಪೂರ್ವ ಯಾವುದು–ಪಶ್ಚಿಮ ಯಾವುದು? ಎಂಬುದೇ ತಿಳಿಯುತ್ತಿರಲಿಲ್ಲ.

**ಪ್ರಾದುರಾಸೀನ್ಮಹಾಞ್ಶಬ್ದಃ ಖೇ ಶರೀರಮದೃಶ್ಯತ ।**
**ಸರ್ವೇಷು ರಾಜನ್ದೇಶೇಷು ತದದ್ಭುತಮಿವಾಭವತ್ ॥೯॥**

ಎಂದೂ ಕೇಳದ ಭಯಂಕರಶಬ್ದವು ಆ ಸಮಯದಲ್ಲಿ ಪ್ರಾದುರ್ಭವಿಸಿತು. ಆಕಾಶದಲ್ಲಿ ಮನುಷ್ಯಾಕೃತಿಗಳು ಕಾಣತೊಡಗಿದುವು. ಎಲ್ಲ ದೇಶಗಳ ಜನರೂ ಆ ಮಹಾಶಬ್ದವನ್ನು ಕೇಳಿದರು. ಅದನ್ನು ಪರಮಾದ್ಭುತದಂತೆ ಎಲ್ಲರೂ ಭಾವಿಸಿದರು.

**ಪ್ರಾಮಥ್ನಾದ್ಧಾಸ್ತಿನಪುರಂ ವಾತೋ ದಕ್ಷಿಣಪಶ್ಚಿಮಃ ।**
**ಆರುಜನ್ಗಣಶೋ ವೃಕ್ಷಾನ್ಪರುಷೋಽಶನಿನಿಸ್ವನಃ ॥೧೦॥**

ಹಸ್ತಿನಾಪುರದ ಸುತ್ತಲೂ ಉಂಟಾದ ಅದ್ಭುತವಾದ ಘಟನೆಗಳನ್ನು ಹೇಳುವೆನು; ಕೇಳು, ಜನಮೇಜಯ! ದಕ್ಷಿಣ-ಪಶ್ಚಿಮವಾಗಿರುವ (ನೈಋತ್ಯಕ್ಕೆ) ಚಂಡಮಾರುತವು ಬೀಸತೊಡಗಿತು. ಅದರಿಂದಾಗಿ ಹಸ್ತಿನಾಪಟ್ಟಣವೇ ಅಲುಗಾಡಿತು. ಚಂಡಮಾರುತವು ಹಸ್ತಿನಾಪಟ್ಟಣದ ಸಮೀಪದಲ್ಲಿದ್ದ ಅನೇಕಾನೇಕ ಮಹಾವೃಕ್ಷಗಳ ಸಮೂಹವನ್ನೇ ಬುಡಮೇಲುಮಾಡಿಬಿಟ್ಟಿತು. ಚಂಡಮಾರುತದ ಸಿಡಿಲಿಗೆ ಸಮಾನವಾದ ಅತಿಕಠೋರವಾದ ಶಬ್ದವೂ ಸುತ್ತಲೂ ಕೇಳಿಬರುತ್ತಿದ್ದಿತು.

**ಯತ್ರ ಯತ್ರ ಚ ವಾರ್ಷ್ಣೇಯೋ ವರ್ತತೇ ಪಥಿ ಭಾರತ ।**
**ತತ್ರ ತತ್ರ ಸುಖೋ ವಾಯುಃ ಸರ್ವಂ ಚಾಸೀತ್ಪ್ರದಕ್ಷಿಣಮ್ ॥೧೧॥**

ಆದರೆ, ಜನಮೇಜಯ! ವೃಷ್ಣಿಕುಲನಂದನನಾದ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋಗುವ ದಾರಿಯಲ್ಲಿ ಎಲ್ಲೆಲ್ಲಿ ಇರುತ್ತಿದ್ದನೋ–ಅಲ್ಲಿ ಗಾಳಿಯು ಸುಖಮಯವಾಗಿರುತ್ತಿದ್ದಿತು ಮತ್ತು ಎಲ್ಲವೂ ಪ್ರದಕ್ಷಿಣಾಕಾರವಾಗಿರುತ್ತಿದ್ದಿತು. ಮೃಗ-ಪಕ್ಷಿಗಳೆಲ್ಲವೂ ಶ್ರೀಕೃಷ್ಣನ ಬಲಭಾಗದಲ್ಲಿ ಹಾದುಹೋಗುತ್ತಿದ್ದುವು. (ಶುಭಶಕುನಗಳಾಗುತ್ತಿದ್ದುವು.)

**ವವರ್ಷ ಪುಷ್ಪವರ್ಷಂ ಚ ಕಮಲಾನಿ ಚ ಭೂರಿಶಃ ।**
**ಸಮಶ್ಚ ಪನ್ಥಾ ನಿರ್ದುಃಖೋ ವ್ಯಪೇತಕುಶಕಣ್ಟಕಃ ॥೧೨॥**

ಶ್ರೀಕೃಷ್ಣನು ಪ್ರಯಾಣಮಾಡುತ್ತಿದ್ದಾಗ ಅವನ ಮೇಲೆ ಹೂಮಳೆ ಸುರಿಯುತ್ತಿತ್ತು. ಕಮಲಪುಷ್ಪಗಳೂ ಯಥೇಚ್ಛವಾಗಿ ಸುರಿಯುತ್ತಿದ್ದುವು. ಅವನು ಪ್ರಯಾಣಮಾಡುತ್ತಿದ್ದ ಮಾರ್ಗವೂ ದರ್ಭೆಗಳಿಂದಲೂ ಮುಳ್ಳಿನಿಂದಲೂ ರಹಿತವಾಗಿತ್ತು. ಹಳ್ಳ-ಕೊಳ್ಳಗಳಿಲ್ಲದೇ ಸಮನೆಲವಾಗಿದ್ದಿತು. ಈ ಕಾರಣದಿಂದಾಗಿ ಶ್ರೀಕೃಷ್ಣನ ಪ್ರಯಾಣವು ನಿರಾತಂಕವಾಗಿದ್ದಿತು.

**ಸಂಸ್ತುತೋ ಬ್ರಾಹ್ಮಣೈರ್ಗೀರ್ಭಿಸ್ತತ್ರ ತತ್ರ ಸಹಸ್ರಶಃ ।**
**ಅರ್ಚ್ಯತೇ ಮಧುಪರ್ಕೈಶ್ಚ ವಸುಭಿಶ್ಚ ವಸುಪ್ರದಃ ॥೧೩॥**

ಶ್ರೀಕೃಷ್ಣನು ಪ್ರಯಾಣಮಾಡುತ್ತಿದ್ದ ಮಾರ್ಗದಲ್ಲಿ ಅನೇಕ ಕಡೆಗಳಲ್ಲಿ ಸಾವಿರಾರು ಬ್ರಾಹ್ಮಣರು ಗುಂಪು-ಗುಂಪಾಗಿ ಶ್ರೀಕೃಷ್ಣನ ಸಮೀಪಕ್ಕೆ ಬಂದು ಸುಮನೋಹರವಾದ ವಾಕ್ಕುಗಳಿಂದ ವಸುಪ್ರದನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡುತ್ತಿದ್ದರು. ಮಧುಪರ್ಕವನ್ನಿತ್ತು ಯಥಾಶಾಸ್ತ್ರವಾಗಿ ಪೂಜೆ ಮಾಡುತ್ತಿದ್ದರು. ಕಪ್ಪ-ಕಾಣಿಕೆಗಳನ್ನಿತ್ತು ಸಮ್ಮಾನಿಸುತ್ತಿದ್ದರು. (ವಸುಪ್ರದಃ = ವಸೂನಿ ಪ್ರದದಾತೀತಿ - ಎಂದು ವ್ಯುತ್ಪತ್ತಿಮಾಡಿ ಧನದಾತೃವಾದ ಭಗವಾನ್ ಶ್ರೀಕೃಷ್ಣನು ತನ್ನನ್ನು ಪೂಜಿಸಲು ಬಂದ ಬ್ರಾಹ್ಮಣರೆಲ್ಲರನ್ನೂ ಯಥೇಚ್ಛವಾದ ಧನದಿಂದ ತೃಪ್ತಿಪಡಿಸಿದನು–ಎಂದೂ ಅರ್ಥಮಾಡಿದ್ದಾರೆ.) ಸರ್ವಪ್ರಾಣಿಗಳ ಹಿತದಲ್ಲಿಯೇ ಸರ್ವದಾ ನಿರತನಾದ

ಶ್ರೀಕೃಷ್ಣನು ಪ್ರಯಾಣಮಾಡುತ್ತಿದ್ದ ಮಾರ್ಗದ ಅಕ್ಕ-ಪಕ್ಕಗಳಲ್ಲಿದ್ದ ಊರುಗಳ, ಹಳ್ಳಿಗಳ ಮತ್ತು ಪಟ್ಟಣಗಳ ಸ್ತ್ರೀಯರು ತಂಡ-ತಂಡವಾಗಿ ಮಾರ್ಗದಲ್ಲಿ ಅವನನ್ನು ಸಂಧಿಸಿ ಸುಗಂಧಯುಕ್ತವಾಗಿದ್ದ ಕಾಡುಹೂವುಗಳನ್ನು ಶ್ರೀಕೃಷ್ಣನ ಮೇಲೆ ಎರಚುತ್ತಿದ್ದರು. (ಶ್ರೀಕೃಷ್ಣನ ಮೇಲೆ ಹೂಮಳೆಗರೆಯುತ್ತಿದ್ದರು.) ಅನಂತರದಲ್ಲಿ ಶ್ರೀಕೃಷ್ಣನು ಮುಂದೆ ಪ್ರಯಾಣಮಾಡುತ್ತಾ ಸಕಲವಿಧವಾದ ಸಸ್ಯಸಂಪತ್ತಿನಿಂದಲೂ ಕೂಡಿದ್ದ, ರಮ್ಯವಾಗಿದ್ದ, ಅತ್ಯಂತಸುಖಕರವಾಗಿದ್ದ, ಧರ್ಮಕ್ಷೇತ್ರವಾಗಿದ್ದ ಶಾಲಿಭವನವೆಂಬ ಸ್ಥಳಕ್ಕೆ ಬಂದನು.

ಶಾಲಿಭವನದಿಂದ ಹೊರಟು ಶ್ರೀಕೃಷ್ಣನು ಮಾರ್ಗದಲ್ಲಿ ಅನೇಕಾನೇಕ ರಮ್ಯವಾದ ಹೃದಯಾಹ್ಲಾದಕರವಾದ ಪಶು-ಪಕ್ಷಿಗಳುಳ್ಳ ಗ್ರಾಮಗಳನ್ನೂ, ಪುರಗಳನ್ನೂ, ಪಟ್ಟಣಗಳನ್ನೂ ಮತ್ತು ಅನೇಕರಾಷ್ಟ್ರಗಳನ್ನೂ ನೋಡುತ್ತಾ ಮುಂದೆ-ಮುಂದೆ ಪ್ರಯಾಣಮಾಡಿದನು.

**ನಿತ್ಯಂ ಹೃಷ್ಟಾಃ ಸುಮನಸೋ ಭಾರತೈರಭಿರಕ್ಷಿತಾಃ ।**
**ನೋದ್ವಿಗ್ನಾಃ ಪರಚಕ್ರಾಣಾಂ ವ್ಯಸನಾನಾಮಕೋವಿದಾಃ ॥೧೭॥**

ಭರತಕುಲದ ಅರಸರಿಂದ ಸಂರಕ್ಷಿತರಾದ ಆ ಪ್ರದೇಶದ ಜನರು ನಿತ್ಯ ಹೃಷ್ಟರಾಗಿದ್ದರು. ಸಂತೋಷಭರಿತರಾಗಿದ್ದರು. ಸುಮನಸ್ಕರಾಗಿದ್ದರು. ಶತ್ರುಗಳಿಂದ ಬಾಧೆಯುಂಟಾಗುವುದೆಂಬ ಉದ್ವಿಗ್ನತೆಯು ಅವರಿಗಿರಲಿಲ್ಲ. ಯಾವ ವಿಧವಾದ ವ್ಯಸನಗಳೂ ಅವರಿಗಿರಲಿಲ್ಲ. ವ್ಯಸನಗಳೆಂದರೇನೆಂಬುದೇ ಅವರಿಗೆ ತಿಳಿದಿರಲಿಲ್ಲ.

---

*ಶಾಲಿಭವನಂ–ಎಂಬುದಕ್ಕೆ ಭತ್ತದ ಗದ್ದೆ ಎಂದೂ ಅರ್ಥವಾಗುತ್ತದೆ. ಆದರೆ ಭತ್ತದ ಗದ್ದೆಗೆ ಪರಮಧರ್ಮಿಷ್ಠಂ ಎಂಬುದು ವಿಶೇಷಣವಾಗುವುದಿಲ್ಲ. ಪರಮ ಧರ್ಮಿಷ್ಠವಾದ ಭತ್ತದ ಗದ್ದೆ ಎಂದು ಅರ್ಥಮಾಡುವುದೂ ಅಸಂಗತವಾಗುತ್ತದೆ. ಸರ್ವಸಸ್ಯಸಮಾಚಿತಂ ಎಂಬುದೂ ವಿಶೇಷಣವಾಗುವುದಿಲ್ಲ. ಭತ್ತದ ಗದ್ದೆಯಲ್ಲಿ ಭತ್ತದ ಸಸಿಗಳಿರಲು ಸಾಧ್ಯವೇ ಹೊರತು ಎಲ್ಲ ಸಸ್ಯಗಳೂ ಇರಲು ಸಾಧ್ಯವಾಗುವುದಿಲ್ಲ. ಮೇಲಾಗಿ ಶಾಲಿಭವನಂ ಅಭ್ಯಗಾತ್ ಎಂದೂ ಸ್ಪಷ್ಟವಾಗಿರುವುದರಿಂದ ಶಾಲಿಭವನ ಎಂಬುದನ್ನು ಊರು ಅಥವಾ ಶಾಲಿಭವನ ಎಂಬ ಹೆಸರಿನ ಸ್ಥಳ–ಎಂದು ಅರ್ಥಮಾಡಲಾಗಿದೆ.

ಉಪಪ್ಲಾವ್ಯದಿಂದ ಹೊರಟ ಶ್ರೀಕೃಷ್ಣನು ತಮ್ಮ ಊರಿನ ಮಾರ್ಗದಲ್ಲಿ ಬರುತ್ತಿದ್ದಾನೆಂಬ ವಾರ್ತೆಯನ್ನು ಕೇಳಿದೊಡನೆಯೇ ಮಾರ್ಗದ ಪಕ್ಕದ ಊರುಗಳಲ್ಲಿದ್ದ ಜನರು ವಿಷ್ವಕ್ಸೇನನನ್ನು ಸಂದರ್ಶಿಸಬೇಕೆಂಬ ಹರ್ಷಾತಿ ರೇಕದಿಂದ ಮಾರ್ಗದಲ್ಲಿ ಗುಂಪು-ಗುಂಪಾಗಿ ನಿಲ್ಲುತ್ತಿದ್ದರು. ತಮ್ಮ ದೇಶಕ್ಕೆ ಅತಿಥಿಯಾಗಿ ಆಗಮಿಸಿರುವ, ಹುತಮಾಡಿದ ಯಜ್ಞೇಶ್ವರನಂತೆ ಉಜ್ವಲ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ, ಪೂಜಾರ್ಹನಾದ, ಪ್ರಭುವಾದ ಶ್ರೀಕೃಷ್ಣ ನನ್ನು ಯಥೋಚಿತವಾಗಿ ಪೂಜಿಸುತ್ತಿದ್ದರು. ಪ್ರಯಾಣವನ್ನು ಮುಂದು ವರಿಸಿದ ಶತ್ರುಸಂಹಾರಕನಾದ ಶ್ರೀಕೃಷ್ಣನು ವೃಕಸ್ಥಲವನ್ನು ಸೇರುವ ವೇಳೆಗೆ ಸರಿಯಾಗಿ ವಿಸ್ತೃತವಾದ ಕಿರಣಗಳಿಂದ ಕೂಡಿದ್ದ ಸೂರ್ಯನು ಆಕಾಶದಲ್ಲಿ ಕೆಂಪುಛ್ಛಾಯೆಯನ್ನು ಹೊಂದಿದನು. (ಅಸ್ತಂಗತನಾಗುತ್ತಿದ್ದನು.) ಶ್ರೀಕೃಷ್ಣನು ವೃಕಸ್ಥಲವನ್ನು ಸೇರಿದೊಡನೆಯೇ ರಥದಿಂದಿಳಿದು, ಯಥಾವಿಧಿಯಾಗಿ ಶೌಚಾದಿಗಳನ್ನು ಮುಗಿಸಿ ಕುದುರೆಗಳನ್ನು ರಥದಿಂದ ಬಿಚ್ಚುವಂತೆ ದಾರುಕನಿಗೆ ಹೇಳಿ ಸಂಧ್ಯೋಪಾಸನೆಯನ್ನು ಮಾಡಲು ಉಪ ಕ್ರಮಿಸಿದನು. ಶ್ರೀಕೃಷ್ಣನ ನಿರ್ದೇಶದಂತೆ ದಾರುಕನು ರಥದಿಂದ ಯಥಾ ಶಾಸ್ತ್ರವಾಗಿ ಕುದುರೆಗಳನ್ನು ಬಿಚ್ಚಿ, ಅವುಗಳನ್ನು ಉಪಚರಿಸಿ ಅವುಗಳ ಕಡಿವಾಣಗಳನ್ನೂ ತೆಗೆದುಹಾಕಿ, ಅವುಗಳನ್ನು ನಾನಾಪ್ರಕಾರವಾದ ಬಂಧನ ಗಳಿಂದ ಸಂಪೂರ್ಣವಾಗಿ ಮುಕ್ತಿಗೊಳಿಸಿ ಬಿಟ್ಟುಬಿಟ್ಟನು. ಮಧುಸೂದನನು ಸಂಧ್ಯಾವಂದನಾದಿ ಸಕಲಕರ್ಮಗಳನ್ನೂ ಮುಗಿಸಿದವನಾಗಿ ತನ್ನೊಡನಿದ್ದವರಿಗೆ ಹೇಳಿದನು :

“ಯುಧಿಷ್ಠಿರನ ಕಾರ್ಯಸಿದ್ಧಿಗಾಗಿ ನಾವು ಈ ರಾತ್ರಿಯನ್ನು ಇಲ್ಲಿಯೇ ಕಳೆಯೋಣ.”

ಶ್ರೀಕೃಷ್ಣನನ್ನೇ ಅನುಸರಿಸಿ ಬರುತ್ತಿದ್ದ ಸೇವಕರು ಅವನ ಅಭಿ ಪ್ರಾಯವನ್ನು ತಿಳಿದವರಾಗಿ ತಂಗಲು ತಾತ್ಕಾಲಿಕವಾದ ಮನೆಗಳನ್ನು (ಗುಡಾರಗಳನ್ನು) ಕ್ಷಣಮಾತ್ರದಲ್ಲಿ ನಿರ್ಮಿಸಿದರು. ಉತ್ತಮೋತ್ತಮವಾದ ಅನ್ನ-ಪಾನಾದಿಗಳು ಸಿದ್ಧವಾದುವು.

ವೃಕಸ್ಥಲಗ್ರಾಮದಲ್ಲಿ ಬ್ರಾಹ್ಮಣೋಚಿತವಾದ ವೃತ್ತಿಯನ್ನು ಅವ ಲಂಬಿಸಿದ್ದ, ಆರ್ಯರಾದ, ಕುಲೀನರಾದ, ಲಜ್ಜಾಶೀಲರಾದ ಬ್ರಾಹ್ಮಣ

ಶ್ರೇಷ್ಠರು ಶ್ರೀಕೃಷ್ಣನು ತಂಗಿದ್ದ ಸ್ಥಳಕ್ಕೆ ಬಂದು ಮಹಾತ್ಮನಾದ ಶತ್ರು ಹಂತಕನಾದ ಹೃಷೀಕೇಶನನ್ನು ಆಶೀರ್ವಾದಗಳಿಂದಲೂ, ಸ್ವಸ್ತಿವಾಚನ ಗಳಿಂದಲೂ ಯಥೋಚಿತವಾಗಿ ಪೂಜಿಸಿದರು. ಸರ್ವಲೋಕಪೂಜಿತನಾದ, ದಾಶಾರ್ಹನಂದನನಾದ ಶ್ರೀಕೃಷ್ಣನನ್ನು ವಿವಿಧೋಪಚಾರಗಳಿಂದ ಪೂಜಿಸಿದ ನಂತರ ಆ ಬ್ರಾಹ್ಮಣರು ಸಕಲಸಂಪದ್ಯುಕ್ತವಾಗಿದ್ದ ತಮ್ಮ ಮನೆಗಳನ್ನು ಮಹಾತ್ಮನಾದ ಶ್ರೀಕೃಷ್ಣನಿಗೆ ಅರ್ಪಿಸಿದರು. (ತಮ್ಮ ಮನೆಗಳಲ್ಲಿಯೇ ಬಿಡಾರಮಾಡುವಂತೆ ಪ್ರಾರ್ಥಿಸಿದರು.)



ದಯಾಮಯನಾದ, ಭಕ್ತಪರಾಧೀನನಾದ ಶ್ರೀಕೃಷ್ಣನು–'ಕೃತಂ' 'ನಿಮ್ಮ ಈ ಪೂಜೆಯಿಂದಲೇ ತೃಪ್ತನಾಗಿದ್ದೇನೆ. ರತ್ನಖಚಿತವಾದ ಸೌಧ

ಗಳು ನಿಮ್ಮವುಗಳೇ ಆಗಿರಲಿ'–ಎಂಬುದಾಗಿ ಹೇಳಿ ಯಥಾಯೋಗ್ಯವಾಗಿ ಅವರನ್ನು ತಾನೂ ಸತ್ಕರಿಸಿ ಅವರ ಪ್ರಾರ್ಥನೆಯಂತೆ ಮತ್ತು ಅವರ ಪ್ರೀತ್ಯರ್ಥವಾಗಿ ಬ್ರಾಹ್ಮಣರ ಮನೆಗಳನ್ನೊಮ್ಮೆ ಪ್ರವೇಶಿಸಿ ಅವರೊಡನೆಯೇ ತನ್ನ ಬಿಡಾರಕ್ಕೆ ಹಿಂತಿರುಗಿದನು. ತನ್ನ ಬಿಡಾರದಲ್ಲಿಯೇ ವೃಕಸ್ಥಲನಿವಾಸಿಗಳಾದ ಬ್ರಾಹ್ಮಣರಿಗೆ ಶುಚಿ-ರುಚಿಯಾಗಿ ಮೃಷ್ಟಾನ್ನದ ಭೋಜನಮಾಡಿಸಿ ಅವರೊಡನೆ ತಾನೂ ಭೋಜನಮಾಡಿ ಅತ್ಯಂತಸುಖದಿಂದ ಆ ರಾತ್ರಿಯನ್ನು ಕಳೆದನು.

೮೪ನೆಯ ಅಧ್ಯಾಯವು ಮುಗಿಯಿತು.

೮೫ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ದುರ್ಯೋಧನನು ಶ್ರೀಕೃಷ್ಣನ ಸ್ವಾಗತಕ್ಕಾಗಿ ಮಾರ್ಗದಲ್ಲಿ ವಿಶ್ರಾಂತಿಗೃಹಗಳನ್ನು ನಿರ್ಮಿಸಿದುದು

ಜನಮೇಜಯ! ಶ್ರೀಕೃಷ್ಣನು ಹಸ್ತಿನಾಪಟ್ಟಣಕ್ಕೆ ಬರುತ್ತಿದ್ದಾನೆಂಬ ವಾರ್ತೆಯನ್ನು ದೂತರ ಮೂಲಕ ಕೇಳಿದ ಧೃತರಾಷ್ಟ್ರನು ಪರಮಹೃಷ್ಟನಾಗಿ, ರೋಮಾಂಚಿತನಾಗಿ, ಮಹಾಭುಜನಾದ ಭೀಷ್ಮನನ್ನೂ, ದ್ರೋಣರನ್ನೂ, ಸಂಜಯನನ್ನೂ ಮತ್ತು ಮಹಾಮತಿಯಾದ ವಿದುರನನ್ನೂ ಯಥಾಯೋಗ್ಯವಾಗಿ ಸತ್ಕರಿಸಿ ಅಮಾತ್ಯಸಹಿತನಾದ ದುರ್ಯೋಧನನನ್ನು ಕುರಿತು ಹೇಳಿದನು :

"ಕುರುನಂದನ! ಎಲ್ಲೆಲ್ಲಿಯೂ ಪರಮಾಶ್ಚರ್ಯಕರವಾದ ಮಾತುಗಳು ಕೇಳಿಬರುತ್ತಿವೆ. ಸ್ತ್ರೀಯರು, ಬಾಲಕರು, ವೃದ್ಧರು ಎಲ್ಲರೂ ತಮ್ಮ-ತಮ್ಮ ಮನೆಗಳಲ್ಲಿ ಪರಮಾಶ್ಚರ್ಯಕರವಾದ ಈ ಮಾತನ್ನಾಡುತ್ತಿದ್ದಾರೆ. ಹೊರಗಿನಿಂದ ಬಂದವರನ್ನು ಸತ್ಕರಿಸಿ ಇದೇ ಮಾತು ಮೊದಲು ಮಾಡಿ ಈ ಊರಿನ ಗೃಹಸ್ಥರು ಮಾತನ್ನಾಡುತ್ತಿದ್ದಾರೆ. ಹೊರಗಿನಿಂದ ಬಂದವರೂ ಯೋಗ-ಕ್ಷೇಮವನ್ನು ವಿಚಾರಿಸಿದೊಡನೆಯೇ ಇದೇ ವಿಷಯವಾಗಿ ಈ ಊರಿನವರನ್ನು ಪ್ರಶ್ನಿಸುತ್ತಾರೆ. ನಾಲ್ಕು ಮಾರ್ಗಗಳು ಸೇರುವ ಸ್ಥಳಗಳಲ್ಲಿಯೂ ಸಭೆಗಳಲ್ಲಿಯೂ ಇದೇ ವಿಷಯವನ್ನು ಕುರಿತು ಪ್ರಜೆಗಳು ನಾನಾಪ್ರಕಾರವಾಗಿ ಮಾತನಾಡಿಕೊಳ್ಳುತ್ತಿದ್ದಾರೆ.

ಉಪಾಯಾಸ್ಯತಿ ದಾಶಾರ್ಹಃ ಪಾಣ್ಡವಾರ್ಥೇ ಪರಾಕ್ರಮೀ ॥೫॥

'ಮಹಾಪರಾಕ್ರಮಿಯಾದ ಶ್ರೀಕೃಷ್ಣನು ಪಾಂಡವರ ಸಲುವಾಗಿ ಹಸ್ತಿನಾಪುರಕ್ಕೆ ಆಗಮಿಸುತ್ತಾನೆ'–ಎಂಬ ಈ ಮಾತೇ ಪಟ್ಟಣದಲ್ಲಿ ಎಲ್ಲರ ಬಾಯಲ್ಲೂ ಕೇಳಿಬರುತ್ತಿದೆ. ದುರ್ಯೋಧನ! ಮಧುಸೂದನನು ಸರ್ವ ಪ್ರಕಾರದಿಂದಲೂ ಮಾನ್ಯನೂ ಮತ್ತು ಪೂಜ್ಯನೂ ಆಗಿರುತ್ತಾನೆ.

ತಸ್ಮಿನ್ಹಿ ಯಾತ್ರಾ ಲೋಕಸ್ಯ ಭೂತಾನಾಮೀಶ್ವರೋ ಹಿ ಸಃ ।
ತಸ್ಮಿನ್ಧೃತಿಶ್ಚ ವೀರ್ಯಂ ಚ ಪ್ರಜ್ಞಾ ಚೌಜಶ್ಚ ಮಾಧವೇ ॥೬॥

ಲೋಕಯಾತ್ರೆಯೆಲ್ಲವೂ ಅವನಲ್ಲಿಯೇ ಪ್ರತಿಷ್ಠಿತವಾಗಿದೆ. (ಲೋಕ ವ್ಯಾಪಾರವು ಅವನಿಂದಲೇ ನಡೆಯುವುದಾಗಿದೆ.) ಅವನು ಸರ್ವಪ್ರಾಣಿಗಳಿಗೂ ಈಶ್ವರನಾಗಿರುವುದೇ ಇದಕ್ಕೆ ಕಾರಣವಾಗಿದೆ. ಮಾಧವನಲ್ಲಿ ಧೈರ್ಯ, ವೀರ್ಯ, ಪ್ರಜ್ಞೆ ಮತ್ತು ಓಜಸ್ಸುಗಳು ಮೂರ್ತಿಮತ್ತಾಗಿ ನೆಲೆಸಿವೆ.

ಸ ಮಾನ್ಯತಾಂ ನರಶ್ರೇಷ್ಠಃ ಸ ಹಿ ಧರ್ಮಃ ಸನಾತನಃ ।
ಪೂಜಿತೋ ಹಿ ಸುಖಾಯ ಸ್ಯಾದಸುಖಃ ಸ್ಯಾದಪೂಜಿತಃ ॥೭॥

ನರಶ್ರೇಷ್ಠನಾದ ಶ್ರೀಕೃಷ್ಣನು ನಮ್ಮಿಂದ ಯಥೋಚಿತವಾಗಿ ಸಮ್ಮಾನಿಸಲ್ಪಡಲಿ. ಶ್ರೀಕೃಷ್ಣನನ್ನು ಸಮ್ಮಾನಿಸುವುದೇ ಸನಾತನಧರ್ಮ. ಅವನನ್ನು ನಾವು ಪೂಜಿಸಿದರೆ ಅವನು ನಮ್ಮ ಸುಖಕ್ಕೆ ಕಾರಣನಾಗುತ್ತಾನೆ. ಅವನನ್ನು ಪೂಜಿಸದಿದ್ದರೆ ಅವನು ನಮ್ಮ ಕಷ್ಟಕ್ಕೆ ಕಾರಣನಾಗುತ್ತಾನೆ.

ಸ ಚೇತ್ತುಷ್ಯತಿ ದಾಶಾರ್ಹಃ ಉಪಚಾರೈರರಿಂದಮಃ ।
ಕೃಷ್ಣಾತ್ಸರ್ವಾನಭಿಪ್ರಾಯಾನ್ಪ್ರಾಪ್ಸ್ಯಾಮಃ ಸರ್ವರಾಜಸು ॥೮॥

ನಾವು ಮಾಡುವ ಉಪಚಾರಗಳಿಂದ ದಾಶಾರ್ಹನೇನಾದರೂ ಸಂತುಷ್ಟನಾದನೆಂದರೆ ಈ ರಾಜರ ಮಧ್ಯದಲ್ಲಿ ನಮಗೆ ಇಷ್ಟವಾದುವುಗಳನ್ನೆಲ್ಲಾ ಶ್ರೀಕೃಷ್ಣನಿಂದ ನಾವು ಪಡೆದುಕೊಳ್ಳಬಹುದಾಗಿದೆ. ಮಗು, ದುರ್ಯೋಧನ! ಶ್ರೀಕೃಷ್ಣನ ಸ್ವಾಗತ ಮತ್ತು ಸತ್ಕಾರಗಳಿಗಾಗಿ ಈಗಲೇ ಸರ್ವಸಿದ್ಧತೆ

ಗಳನ್ನೂ ಏರ್ಪಡಿಸು. ಸಕಲವಿಧವಾದ ಕಾಮ್ಯವಸ್ತುಗಳನ್ನೂ ಒಳಗೊಂಡಿರುವ ವಿಶ್ರಾಂತಿಗೃಹಗಳು ಅವನು ಆಗಮಿಸುತ್ತಿರುವ ಮಾರ್ಗದುದ್ದಕ್ಕೂ ನಿರ್ಮಿತವಾಗಲಿ. ಶ್ರೀಕೃಷ್ಣನಿಗೆ ನಿನ್ನ ಮೇಲೆ ಅತಿಶಯವಾದ ಪ್ರೀತಿಯು ಹುಟ್ಟುವ ರೀತಿಯಲ್ಲಿ ನೀನೀಸಮಯದಲ್ಲಿ ನಡೆದುಕೊಳ್ಳಬೇಕು." ಧೃತರಾಷ್ಟ್ರನು ಹೀಗೆಂಬುದಾಗಿ ದುರ್ಯೋಧನನಿಗೆ ಹೇಳಿ ಅನಂತರದಲ್ಲಿ ಭೀಷ್ಮನ ಕಡೆಗೆ ತಿರುಗಿ ಕೇಳಿದನು :

"ಈ ವಿಷಯದಲ್ಲಿ ನಿನ್ನ ಅಭಿಮತವೇನು ? ಭೀಷ್ಮ!"

ಒಡನೆಯೇ ಭೀಷ್ಮನೂ, ಸಕಲಸಭಾಸದರೂ ಧೃತರಾಷ್ಟ್ರನು ಹೇಳಿದ ಮಾತುಗಳನ್ನು ಪ್ರಶಂಸೆಮಾಡುತ್ತಾ–"ನೀನು ಹೇಳಿದುದು ಪರಮೋತ್ಕೃಷ್ಟವಾದ ಮಾತಾಗಿದೆ"–ಎಂದು ತಮ್ಮೆಲ್ಲರ ಸಂಪೂರ್ಣವಾದ ಒಪ್ಪಿಗೆಯನ್ನಿತ್ತರು.

ರಾಜನಾದ ದುರ್ಯೋಧನನೂ ಸಕಲರ ಅಭಿಮತವೇನೆಂಬುದನ್ನು ಮನಗಂಡವನಾಗಿ ಶ್ರೀಕೃಷ್ಣನು ಆಗಮಿಸುತ್ತಿದ್ದ ಮಾರ್ಗದಲ್ಲಿ ವಿಶ್ರಾಂತಿಗೃಹಗಳನ್ನು ನಿರ್ಮಿಸಲು ಆಜ್ಞಾಪಿಸಿದನು ಮತ್ತು ವಿಶ್ರಾಂತಿಧಾಮಕ್ಕೆ ಬೇಕಾದ ಬಹುರಮ್ಯವಾದ ವಸ್ತುಗಳನ್ನೂ ಕಳುಹಿಸಿಕೊಡಲು ಉಪಕ್ರಮಿಸಿದನು. ದುರ್ಯೋಧನನ ಆಜ್ಞೆಯಾದೊಡನೆಯೇ ಶಿಲ್ಪಕಲಾಪ್ರವೀಣರು ರಮಣೀಯವಾದ ಅನೇಕಪ್ರದೇಶಗಳಲ್ಲಿ, ಪ್ರತ್ಯೇಕ-ಪ್ರತ್ಯೇಕವಾಗಿ ಸರ್ವವಿಧರತ್ನಗಳಿಂದಲೂ ಸಮಲಂಕೃತವಾದ ಅನೇಕ ವಿಶ್ರಾಂತಿಧಾಮಗಳನ್ನು ಸಿದ್ಧಗೊಳಿಸಿದರು. ವಿಶ್ರಾಂತಿಧಾಮಗಳು ಸಿದ್ಧವಾದೊಡನೆಯೇ ದುರ್ಯೋಧನನು ಅಲಂಕಾರೋಪಕರಣಗಳನ್ನು ಅಲ್ಲಿಗೆ ಕಳುಹಿಸಿಕೊಟ್ಟನು. ಚಿತ್ರ-ವಿಚಿತ್ರವಾದ, ನಾನಾವಿಧವಾದ ಗುಣಗಳನ್ನು ಹೊಂದಿದ್ದ (ಮೆತ್ತನೆಯಾಗಿರುವುದು, ಸುತ್ತಲೂ ತಿರುಗಲು ಅನುಕೂಲವುಳ್ಳದ್ದು–ಇತ್ಯಾದಿ) ಆಸನಗಳನ್ನು ಕಳುಹಿಸಿಕೊಟ್ಟನು. ಸೇವೆಮಾಡಲು ಸುಂದರಸ್ತ್ರೀಯರನ್ನು ಕಳುಹಿಸಿಕೊಟ್ಟನು. ಶರೀರವನ್ನು ಅಲಂಕರಿಸಿಕೊಳ್ಳಲು ನಾನಾವಿಧವಾದ ಗಂಧಗಳನ್ನು ಕಳುಹಿಸಿದನು. ಬಹುಸೂಕ್ಷ್ಮವಾದ ಮತ್ತು ನವುರಾದ ವಸ್ತ್ರಗಳನ್ನು ಕಳುಹಿಸಿದನು. ಶುಚಿ-ರುಚಿಯಾದ ಅನ್ನ-ಪಾನಗಳನ್ನೂ, ವಿಧ-ವಿಧವಾದ ಭಕ್ಷ್ಯ-ಭೋಜ್ಯಗಳನ್ನೂ ಮತ್ತು ನೂರಾರು ಜನ ಅಡಿಗೆಯವರನ್ನೂ ಕಳುಹಿಸಿದನು. ಶ್ರೀಕೃಷ್ಣನು ಬರುತ್ತಿದ್ದ ಮಾರ್ಗದಲ್ಲಿ ನಿರ್ಮಿತವಾಗಿದ್ದ ವಿಶ್ರಾಂತಿ

ಧಾಮಗಳಿಗೆ ದುರ್ಯೋಧನನು ಸುಗಂಧಯುಕ್ತವಾದ ಮಾಲೆಗಳನ್ನೂ ಕಳುಹಿಸಿಕೊಟ್ಟನು. ಮೊದಲನೆಯ ರಾತ್ರಿ ಶ್ರೀಕೃಷ್ಣನು ವೃಕಸ್ಥಲದಲ್ಲಿ ತಂಗುವ ನೆಂಬುದನ್ನೂಹಿಸಿ ಆ ಗ್ರಾಮದಲ್ಲಿ ಬಹುರತ್ನಗಳಿಂದ ಅಲಂಕೃತವಾಗಿದ್ದ, ಸುಮನೋಹರವಾಗಿದ್ದ ವಿಶ್ರಾಂತಿಧಾಮವನ್ನು ವಿಶೇಷಪ್ರಯತ್ನದಿಂದ ನಿರ್ಮಿಸಿದನು. ದೇವಯೋಗ್ಯವಾದ, ಅತಿಮಾನುಷವಾದ ವಿಶ್ರಾಂತಿ ಧಾಮಗಳನ್ನು ಮಾರ್ಗದುದ್ದಕ್ಕೂ ನಿರ್ಮಿಸಿ ಅವುಗಳನ್ನು ಸಕಲವಿಧವಾದ ಉಪಕರಣಗಳಿಂದಲೂ ಸಜ್ಜುಗೊಳಿಸಿದನಂತರ ದುರ್ಯೋಧನನು ಆ ವಿಷಯವನ್ನು ಧೃತರಾಷ್ಟ್ರನಿಗೆ ನಿವೇದಿಸಿದನು. ಆದರೆ ಯದುಕುಲತಿಲಕನಾದ ಶ್ರೀಕೇಶವನು ಬಹುಮೌಲ್ಯಗಳಾಗಿದ್ದ, ರತ್ನಖಚಿತವಾಗಿದ್ದ, ಸರ್ವಾಲಂಕಾರ ಗಳಿಂದ ಸುಶೋಭಿಸುತ್ತಿದ್ದ ದುರ್ಯೋಧನನಿಂದ ನಿರ್ಮಿತವಾಗಿದ್ದ ಆ ವಿಶ್ರಾಂತಿಧಾಮಗಳನ್ನು ಕಣ್ಣೆತ್ತಿಯೂ ನೋಡದೇ ಹಸ್ತಿನಾಪಟ್ಟಣಕ್ಕೆ ಆಗಮಿಸಿದನು.”

೮೫ನೆಯ ಅಧ್ಯಾಯವು ಮುಗಿಯಿತು.

೮೬ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ದುಃಶಾಸನನ ಅರಮನೆಯಲ್ಲಿ ತಂಗುವ ವಿಚಾರವನ್ನು ಧೃತರಾಷ್ಟ್ರನು ಪ್ರಕಟಗೊಳಿಸಿದುದು

ಪಾರಿಕ್ಷಿತ! ಧೃತರಾಷ್ಟ್ರನು ವಿದುರನಿಗೆ ಹೇಳುತ್ತಾನೆ :

“ವಿದುರ! ದೂತರ ಮೂಲಕ ನಮಗೆ ಬಂದಿರುವ ವಾರ್ತೆಯ ಪ್ರಕಾರ ಶ್ರೀಕೃಷ್ಣನು ಉಪಪ್ಲಾವ್ಯದಿಂದ ಹೊರಟು ಹಸ್ತಿನಾಪಟ್ಟಣದ ಕಡೆಗೆ ಬರುತ್ತಿದ್ದಾಗ ಇಂದು ಸಾಯಂಕಾಲ ವೃಕಸ್ಥಲದಲ್ಲಿ ತಂಗಿದ್ದು ನಾಳೆ ಪ್ರಾತಃಕಾಲ ಹಸ್ತಿನಾಪಟ್ಟಣಕ್ಕೆ ಆಗಮಿಸುತ್ತಾನೆ.

**ಆಹುಕಾನಾಮಧಿಪತಿಃ ಪುರೋಗಃ ಸರ್ವಸಾತ್ವತಾಮ್ ।**
**ಮಹಾಮನಾ ಮಹಾವೀರ್ಯೋ ಮಹಾಸತ್ತ್ವೋ ಜನಾರ್ದನಃ ॥**

ಭಗವಾನ್ ಜನಾರ್ದನನು ಆಹುಕವಂಶದ ಕ್ಷತ್ರಿಯರಿಗೆ ಅಧಿಪತಿ ಯಾಗಿರುತ್ತಾನೆ. ಅದೇ ರೀತಿಯಲ್ಲಿ ಸಮಸ್ತಸಾತ್ವತರಿಗೂ (ಯಾದವರಿಗೂ)

ಮೂರ್ಧನ್ಯನಾಗಿದ್ದಾನೆ. ಅವನ ಮನಸ್ಸು ಬಹುವಿಶಾಲವಾದುದು. ಅವನು ಮಹಾವೀರ್ಯನೂ ಮತ್ತು ಮಹಾಸತ್ತ್ವನೂ (ಸತ್ತ್ವಗುಣಪರಿಪೂರ್ಣನೂ ಅಥವಾ ಹೆಚ್ಚು ಬಲವಿರುವವನೂ) ಆಗಿರುತ್ತಾನೆ.

**ಸ್ಫೀತಸ್ಯ ವೃಷ್ಣಿರಾಷ್ಟ್ರಸ್ಯ ಭರ್ತಾ ಗೋಪ್ತಾ ಚ ಮಾಧವಃ ।**
**ತ್ರಯಾಣಾಮಪಿ ಲೋಕಾನಾಂ ಭಗವಾನ್ಪ್ರಪಿತಾಮಹಃ ॥೩॥**

ಸಕಲಸಂಪತ್ಸಮೃದ್ಧವಾದ ವೃಷ್ಣಿರಾಷ್ಟ್ರಕ್ಕೆ ಶ್ರೀಕೃಷ್ಣನು ಒಡೆಯನೂ ರಕ್ಷಕನೂ ಆಗಿರುತ್ತಾನೆ. ಪಿತಾಮಹನಿಗೂ (ಬ್ರಹ್ಮನಿಗೂ) ಜನ್ಮದಾತನಾದ ಅವನು ಮೂರು ಲೋಕಗಳಿಗೂ ಪ್ರಪಿತಾಮಹನೆನಿಸಿದ್ದಾನೆ.

**ವೃಷ್ಣ್ಯಂಧಕಾಃ ಸುಮನಸೋ ಯಸ್ಯ ಪ್ರಜ್ಞಾಮುಪಾಸತೇ ।**
**ಆದಿತ್ಯಾ ವಸವೋ ರುದ್ರಾ ಯಥಾ ಬುದ್ಧಿಂ ಬೃಹಸ್ಪತೇಃ ॥೪॥**

ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ ದೇವಗುರುವಾದ ಬೃಹಸ್ಪತಿಯ ಬುದ್ಧಿಗೆ ಅನುಸಾರವಾಗಿ (ಸೂಕ್ತವಾದ ಸಲಹೆಗಳಿಗೆ ಅನುಸಾರವಾಗಿ) ನಡೆಯುವಂತೆ–ಸುಮನಸರಾದ ವೃಷ್ಣಿ ಮತ್ತು ಅಂಧಕ ವಂಶೀಯರು ಶ್ರೀಕೃಷ್ಣನ ಪ್ರಜ್ಞೆಯನ್ನೇ ಆಶ್ರಯಿಸಿದ್ದಾರೆ. (ಅವನ ನಿರ್ದೇಶನದಂತೆ ನಡೆದುಕೊಳ್ಳುತ್ತಾರೆ.)

ಅಂತಹ ಮಹಾತ್ಮನಾದ, ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನಿಗೆ ನಿನ್ನ ಸಮಕ್ಷದಲ್ಲಿಯೇ ಪೂಜೆಮಾಡುತ್ತೇನೆ. (ಸತ್ಕಾರವನ್ನು ನೀಡುತ್ತೇನೆ.) ನಾನು ಮಾಡಬೇಕೆಂದಿರುವ ಸತ್ಕಾರದ ವಿಧಾನವನ್ನಾದರೂ ಕೇಳಿರಿ. ವಿದುರ! ಒಂದೇ ಬಣ್ಣದ, ಒಳ್ಳೆಯ ಮೈಕಟ್ಟಿನ, ಬಾಹ್ಲಿಕದೇಶದಲ್ಲಿ ಹುಟ್ಟಿದ, ಉತ್ತಮೋತ್ತಮವಾದ, ನಾಲ್ಕು ನಾಲ್ಕು ಕುದುರೆಗಳಿಂದ ಯುಕ್ತವಾದ, ಸುವರ್ಣಮಯವಾದ ಹದಿನಾರು ರಥಗಳನ್ನು ಪುರುಷೋತ್ತಮನಾದ ಶ್ರೀಕೃಷ್ಣನಿಗೆ ಬಹುಮಾನವಾಗಿ ಕೊಡುತ್ತೇನೆ. ನಿತ್ಯವೂ ಮದೋದಕವನ್ನು ಸುರಿಸುವ, ನೇಗಿಲಿನ ದಂಡಕ್ಕೆ ಸಮಾನವಾದ ದಂತಗಳಿಂದ ಕೂಡಿರುವ, ಶತ್ರುಪಕ್ಷದವರನ್ನು ಪ್ರಹರಿಸುವ, ಎಂಟೆಂಟು ಮಂದಿ ಅನುಚರರಿಂದ ಕೂಡಿರುವ ಎಂಟು ಮದಗಜಗಳನ್ನು ಶ್ರೀಕೃಷ್ಣನಿಗೆ ಪಾರಿತೋಷಿಕವಾಗಿ ಕೊಡು

ತ್ತೇನೆ. ಮಕ್ಕಳಾಗದಿರುವ (ನವಯುವತಿಯರಾದ,) ಶುಭಲಕ್ಷಣಗಳುಳ್ಳ, ಸುವರ್ಣಕ್ಕೆ ಸಮಾನವಾದ ಕಾಂತಿಯಿಂದ ಕೂಡಿರುವ ನೂರಾರು ಮಂದಿ ಸೇವಕಿಯರನ್ನೂ, ಅಷ್ಟೇ ಸಂಖ್ಯೆಯ ಸೇವಕರನ್ನೂ ಶ್ರೀಕೃಷ್ಣನನ್ನು ಉಪಚರಿಸಲು ಕಳುಹಿಸಿಕೊಡುತ್ತೇನೆ. ಪರ್ವತಪ್ರದೇಶದ ಜನರಿಂದ ನನಗೆ ಕಾಣಿಕೆಯಾಗಿ ಕೊಡಲ್ಪಟ್ಟಿರುವ ಸುಖಸ್ಪರ್ಶಗಳಾದ ಹದಿನೆಂಟು ಸಾವಿರ ಉಣ್ಣೆಯ ಕಂಬಳಿಗಳನ್ನು ಶ್ರೀಕೃಷ್ಣನಿಗೆ ಪಾರಿತೋಷಿಕವಾಗಿ ಕೊಡುತ್ತೇನೆ. ಚೀನಾದೇಶದಲ್ಲಿ ಉತ್ಪಾದಿತವಾದ, ಉತ್ತಮೋತ್ತಮವಾದ ಸಾವಿರಾರು ಮೃಗ ಚರ್ಮಗಳು ನನ್ನ ಭಂಡಾರದಲ್ಲಿ ತುಂಬಿವೆ. ಅವುಗಳಲ್ಲಿ ಶ್ರೀಕೃಷ್ಣನು ಅಪೇಕ್ಷಿಸಿದಷ್ಟನ್ನೂ ಕೊಟ್ಟುಬಿಡುತ್ತೇನೆ. ವಿದುರ! ಒಳ್ಳೆಯ ಪ್ರಕಾಶದಿಂದ ಕೂಡಿರುವ ನಿರ್ಮಲವಾದ ದಿವ್ಯಮಣಿಯು ನನ್ನಲ್ಲಿದೆ. ಅದು ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಥಳ-ಥಳನೆ ಪ್ರಕಾಶಿಸುತ್ತಿರುತ್ತದೆ. ಆ ದಿವ್ಯಮಣಿಯನ್ನು ಧರಿಸಲು ಶ್ರೀಕೃಷ್ಣನೇ ಯೋಗ್ಯನಾಗಿರುತ್ತಾನೆ. ಆದುದರಿಂದ ಅಮೂಲ್ಯವಾದ ಆ ದಿವ್ಯಮಣಿಯನ್ನೂ ಅವನಿಗೆ ಕೊಟ್ಟುಬಿಡುತ್ತೇನೆ. ವಿದುರ! ನನ್ನಲ್ಲಿ ಒಂದೇ ದಿನದಲ್ಲಿ ಹದಿನಾಲ್ಕು ಯೋಜನ ದೂರ ಪ್ರಯಾಣಮಾಡಲು ಸಮರ್ಥವಾದ ಯಾನವಿದೆ. ಹೇಸರಗತ್ತೆಗಳಿಂದ ಕೂಡಿರುವ ಆ ಅದ್ಭುತ ಯಾನವನ್ನೂ ನಾನು ಶ್ರೀಕೃಷ್ಣನಿಗೆ ಪಾರಿತೋಷಿಕವಾಗಿ ಕೊಟ್ಟುಬಿಡಲು ನಿಶ್ಚಯಿಸಿದ್ದೇನೆ. ವಿದುರ! ಶ್ರೀಕೃಷ್ಣನ ಜೊತೆಯಲ್ಲಿ ಎಷ್ಟು ಕುದುರೆ ಆನೆ ಮುಂತಾದ ವಾಹನಗಳು ಬರುತ್ತವೆಯೋ, ಎಷ್ಟು ಮಂದಿ ಸೇವಕರು ಬರುತ್ತಾರೆಯೋ–ಅವರೆಲ್ಲರಿಗೂ ಬೇಕಾಗಬಹುದಾದ ಭೋಜ್ಯವಸ್ತುಗಳನ್ನು ಒಂದಕ್ಕೆ ಎಂಟು ಪಟ್ಟು ಹೆಚ್ಚಾಗಿ ಸರ್ವಕಾಲದಲ್ಲಿಯೂ ಕಳುಹಿಸುತ್ತಲೇ ಇರುತ್ತೇನೆ.

ವಿದುರ! ದುರ್ಯೋಧನನೊಬ್ಬನನ್ನುಳಿದು ನನ್ನ ಎಲ್ಲ ಮಕ್ಕಳೂ ಮತ್ತು ಮೊಮ್ಮಕ್ಕಳೂ ವಸ್ತ್ರಾಭರಣಗಳಿಂದ ವಿಭೂಷಿತರಾಗಿ, ಸ್ವಚ್ಛವಾಗಿಯೂ ಸುಂದರವಾಗಿಯೂ ಇರುವ ರಥಗಳಲ್ಲಿ ಕುಳಿತು ಶ್ರೀಕೃಷ್ಣನನ್ನು ಇದಿರ್ಗೊಳ್ಳಲು ಹೋಗುತ್ತಾರೆ. ಚೆಲುವೆಯರಾದ ಸಾವಿರಾರು ಮಂದಿ ವಾರಾಂಗನೆಯರು ಸುಮನೋಹರವಾದ ವಸ್ತ್ರಾಭರಣಗಳಿಂದ ಅಲಂಕೃತ ರಾಗಿ ಶ್ರೀಕೇಶವನನ್ನು ಇದಿರ್ಗೊಂಡು ನಗರಕ್ಕೆ ಕರೆತರಲು ಪಾದಚಾರಿಗಳಾಗಿಯೇ

ಹೋಗುತ್ತಾರೆ. ನಮ್ಮ ಹಸ್ತಿನಾಪಟ್ಟಣದಿಂದ ಜನಾರ್ದನನನ್ನು ಇದಿರ್ಗೊಳ್ಳಲು ಅಥವಾ ಅವನನ್ನು ಮಾರ್ಗದಲ್ಲಿಯೇ ಸಂದರ್ಶಿಸಲು ಹೋಗುವ ಮಂಗಳಾಂಗಿಯರಾದ ಕನ್ಯೆಯರೆಲ್ಲರೂ ಮುಖಾವರಣರಹಿತರಾಗಿಯೇ ಹೋಗುತ್ತಾರೆ. ವಿಶ್ವದ ಪ್ರಜೆಗಳು ತೇಜೋಮಯನಾದ ಸೂರ್ಯನನ್ನು ಸಂದರ್ಶಿಸುವಂತೆ–ಹೆಂಗಸರೂ, ಗಂಡಸರೂ, ಮಕ್ಕಳೂ ಮತ್ತು ವೃದ್ಧರಿಂದ ಕೂಡಿದ ಈ ಪಟ್ಟಣವೇ ತೇಜಃಪುಂಜಯುಕ್ತನಾದ ಜನಾರ್ದನನನ್ನು ನೋಡಿ ಆನಂದಿಸಲಿ.”

ರಾಜನಾದ ಧೃತರಾಷ್ಟ್ರನು ವಿದುರನೊಡನೆ ಹೀಗೆ ಹೇಳಿ, ಅನಂತರ ಸಮೀಪದಲ್ಲಿಯೇ ಇದ್ದ ಸೇವಕನೊಬ್ಬನಿಗೆ ಹೀಗೆ ಆಜ್ಞಾಪಿಸಿದನು : “ಪಟ್ಟಣದ ಎಲ್ಲ ದಿಕ್ಕುಗಳಲ್ಲಿಯೂ ದೊಡ್ಡ-ದೊಡ್ಡ ಬಾವುಟಗಳು ಹಾರಿಸಲ್ಪಡಲಿ. ರಾಜಬೀದಿಯು ಜಲಸೇಚನದಿಂದ ರಜೋರಹಿತವಾಗಲಿ (ಮಾರ್ಗದುದ್ದಕ್ಕೂ ನೀರನ್ನು ಚುಮುಕಿಸಿ ಧೂಳಿಲ್ಲದಂತೆ ಮಾಡಿರಿ.) ದುಃಶಾಸನನ ಅರಮನೆಯು ದುರ್ಯೋಧನನ ಅರಮನೆಗಿಂತಲೂ ಉತ್ಕೃಷ್ಟವಾಗಿದೆ. (ಆದುದರಿಂದ ಅದೇ ಮಹಾತ್ಮನಾದ ಶ್ರೀಕೃಷ್ಣನ ವಾಸಕ್ಕೆ ಯೋಗ್ಯವಾಗಿದೆ.) ದುಃಶಾಸನನ ಅರಮನೆಯನ್ನೀಗಲೇ ಸಕಲಸಂಭಾರಗಳಿಂದ ಸಮೃದ್ಧವನ್ನಾಗಿಯೂ, ಸರ್ವಾಲಂಕಾರಯುಕ್ತವಾದುದನ್ನಾಗಿಯೂ ಮಾಡಿರಿ. ಆ ಅರಮನೆಯನ್ನು ಸರ್ವಪ್ರಕಾರಗಳಿಂದಲೂ ಅಲಂಕರಿಸಿರಿ.

ದುಃಶಾಸನನ ಅರಮನೆಯು ಸುಂದರವಾದ ಪ್ರಾಕಾರಗಳುಳ್ಳ ಅನೇಕ ಉಪಭವನಗಳಿಂದ ಸುಶೋಭಿತವಾಗಿದೆ. ಮಂಗಳಕರವಾಗಿಯೂ ಬಹು ರಮಣೀಯವಾಗಿಯೂ ಇದೆ. ಸರ್ವರ್ತುಗಳಲ್ಲಿಯೂ ಆ ಅರಮನೆಯಲ್ಲಿ ಒಂದೇ ರೀತಿಯಾದ ಆಹ್ಲಾದಕರವಾದ ವಾತಾವರಣವಿರುತ್ತದೆ. ಋತುಭೇದದ ವಿಭಿನ್ನವಾತಾವರಣವು ಈ ಅರಮನೆಯಲ್ಲಿರುವವರಿಗೆ ಕಂಡು ಬರುವುದೇ ಇಲ್ಲ. ಮೇಲಾಗಿ ಆ ಅರಮನೆಯು ಅಪಾರವಾದ ಐಶ್ವರ್ಯದಿಂದಲೂ ಪರಿಪೂರ್ಣವಾಗಿದೆ. ನನ್ನ ಮತ್ತು ದುರ್ಯೋಧನನ ಅಪಾರವಾದ ರತ್ನರಾಶಿಯಲ್ಲಿ ಯಾವ ಯಾವ ಅಮೂಲ್ಯರತ್ನಗಳನ್ನು ವಾರ್ಷ್ಣೇಯನು

ಅಪೇಕ್ಷಿಸುತ್ತಾನೆಯೋ–ಅವುಗಳನ್ನವನಿಗೆ ಕೊಟ್ಟುಬಿಡುವುದರಲ್ಲಿ ಸಂಶಯವೇ ಇಲ್ಲ."

ಲ೬ನೆಯ ಅಧ್ಯಾಯವು ಮುಗಿಯಿತು.

ಲ೭ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ವಿದುರನ ಹಿತೋಕ್ತಿ

ಪಾರಿಕ್ಷಿತ! ಧೃತರಾಷ್ಟ್ರನ ಮಾತುಗಳನ್ನು ಕೇಳಿದನಂತರ ವಿದುರನು ರಾಜನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ನೀನು ಮೂರು ಲೋಕಗಳಲ್ಲಿಯೂ ಶ್ರೇಷ್ಠನಾದ ಪುರುಷನಾಗಿರುವೆ. ಮೂರು ಲೋಕಗಳಿಂದಲೂ ಗೌರವಿಸಲ್ಪಡುತ್ತಿರುವೆ. ಸಂಭಾವಿತನಾಗಿರುವೆ. ಈ ಭೂಲೋಕದಲ್ಲಿನ ಎಲ್ಲ ಪ್ರಜೆಗಳೂ ನಿನ್ನನ್ನು ಬಹುವಾಗಿ ಗೌರವಿಸುತ್ತಾರೆ. ನೀನು ಪಶ್ಚಿಮವಯಸ್ಕನಾಗಿರುವೆ. (ವೃದ್ಧನಾಗಿರುವೆ.) ವೃದ್ಧನಾಗಿರುವ ಈ ಸಮಯದಲ್ಲಿ ನೀನು ಏನು ಹೇಳುವೆಯೋ ಅದು ಶಾಸ್ತ್ರಾಧಾರಯುಕ್ತವಾಗಿಯೂ, ತರ್ಕಶುದ್ಧವಾಗಿಯೂ (ಲೌಕಿಕಯುಕ್ತಿಗಳಿಂದ ಕೂಡಿದುದಾಗಿಯೂ) ಇರುತ್ತದೆ. ನೀನು ಸ್ಥವಿರನಾಗಿರುವುದರಿಂದಲೇ ನಿನ್ನ ಮಾತುಗಳೂ ಅನುಭವಯುಕ್ತವಾದ, ಪಕ್ವವಾದ ಮತ್ತು ಸುಸ್ಥಿರವಾದ ಮಾತುಗಳಾಗಿವೆ. (ನಿನ್ನ ವೃದ್ಧಾಪ್ಯಕ್ಕೆ ಅನುಗುಣವಾದ ಮಾತುಗಳನ್ನೇ ಆಡಿರುತ್ತೀಯೆ.)

**ಲೇಖಾ ಶಶಿನಿ ಭಾಃ ಸೂರ್ಯೇ ಮಹೋರ್ಮಿರಿವ ಸಾಗರೇ ।**
**ಧರ್ಮಸ್ತ್ವಯಿ ತಥಾ ರಾಜನ್ನಿತಿ ವ್ಯವಸಿತಾಃ ಪ್ರಜಾಃ ॥೩॥**

ಚಂದ್ರನಲ್ಲಿ ಷೋಡಶಕಲೆಗಳು ಯಾವ ರೀತಿಯಲ್ಲಿ ಸುಸ್ಥಿರವಾಗಿರುವುವೋ, ಸೂರ್ಯನಲ್ಲಿ ಪ್ರಭೆಯು ಯಾವ ರೀತಿಯಲ್ಲಿ ಸುಸ್ಥಿರವಾಗಿರುವುದೋ ಮತ್ತು ಸಮುದ್ರದಲ್ಲಿ ಅಲೆಗಳು ಯಾವ ರೀತಿಯಲ್ಲಿ ನಿರಂತರವಾಗಿರುವುವೋ–ಅದೇ ರೀತಿಯಲ್ಲಿ ನಿನ್ನಲ್ಲಿ ಧರ್ಮವು ನೆಲೆಸಿರುವುದೆಂದು ಪ್ರಜೆಗಳು ಭಾವಿಸಿದ್ದಾರೆ. ನಿನ್ನ ಕಲ್ಯಾಣಗುಣಗಳಿಂದ ಈ ಲೋಕವು ಸರ್ವದಾ

ಪ್ರಭಾವಿತವಾಗಿದೆ. ಆದುದರಿಂದ ಬಾಂಧವಸಹಿತನಾದ ನೀನು ಆ ಕಲ್ಯಾಣಗುಣಗಳ ರಕ್ಷಣೆಗಾಗಿ ಅನುದಿನವೂ ಪ್ರಯತ್ನಿಸು.

**ಆರ್ಜವಂ ಪ್ರತಿಪದ್ಯಸ್ವ ಮಾ ಬಾಲ್ಯಾದ್ಬಹು ನೀನಶಃ ।**
**ರಾಜನ್ಪುತ್ರಾಂಶ್ಚ ಪೌತ್ರಾಂಶ್ಚ ಸುಹೃದಶ್ಚೈವ ಸುಪ್ರಿಯಾನ್ ॥೫॥**

ಮಹಾರಾಜ! ಎಲ್ಲ ವಿಷಯಗಳಲ್ಲಿಯೂ ಎಲ್ಲ ಕಾರ್ಯಗಳಲ್ಲಿಯೂ ಸರಳತೆಯಿರಲಿ, ಋಜುಮಾರ್ಗವಿರಲಿ. ಋಜುಮಾರ್ಗವನ್ನೇ ಅವಲಂಬಿಸು. ಬಾಲಬುದ್ಧಿಯಿಂದ (ಚಾಪಲ್ಯದಿಂದ ಅಥವಾ ಮೂರ್ಖತೆ ಯಿಂದ) ಕುಟಿಲತೆಗೆ ಅವಕಾಶಕೊಡಬೇಡ. ಕುಟಿಲೋಪಾಯಕ್ಕೆ ಕೈಹಾಕಿ ಪ್ರಿಯರಾದ ಮಕ್ಕಳ, ಮೊಮ್ಮಕ್ಕಳ ಮತ್ತು ಸ್ನೇಹಿತರ ಸರ್ವನಾಶಕ್ಕೆ ಕಾರಣನಾಗಬೇಡ.

**ಯತ್ತ್ವಮಿಚ್ಛಸಿ ಕೃಷ್ಣಾಯ ರಾಜನ್ನತಿಥಯೇ ಬಹು ।**
**ಏತದನ್ಯಚ್ಚ ದಾಶಾರ್ಹಃ ಪೃಥಿವೀಮಪಿ ಚಾರ್ಹತಿ ॥೬॥**

ಅತಿಥಿಯಾಗಿ ಬರಲಿರುವ ಶ್ರೀಕೃಷ್ಣನಿಗೆ ನೀನು ಪಾರಿತೋಷಿಕವಾಗಿ ಅನೇಕಾನೇಕ ಅಮೂಲ್ಯವಸ್ತುಗಳನ್ನು ಕೊಡಲಿಚ್ಛಿಸಿರುವೆಯಲ್ಲವೇ? ದಾಶಾರ್ಹನು ಇಷ್ಟು ವಸ್ತುಗಳನ್ನು ಮಾತ್ರವಲ್ಲ ; ಇನ್ನೂ ಹೆಚ್ಚಿನ ಅಮೂಲ್ಯ ವಸ್ತುಗಳನ್ನೂ ಬಹುಮಾನವಾಗಿ ಪಡೆದುಕೊಳ್ಳಲು ಅರ್ಹನಾಗಿರುತ್ತಾನೆ. ಒಂದೇ ಮಾತಿನಲ್ಲಿ ಹೇಳುವುದಾದರೆ : ಅವನು ಪರ್ವತ-ನದ-ನದೀ-ಸಮುದ್ರ ಯುಕ್ತವಾದ ಈ ಅಖಂಡಪೃಥ್ವಿಯನ್ನೇ ಪಾರಿತೋಷಿಕವನ್ನಾಗಿ ಪಡೆದು ಕೊಳ್ಳಲು ಅರ್ಹನಾಗಿರುತ್ತಾನೆ.

**ನ ತು ತ್ವಂ ಧರ್ಮಮುದ್ದಿಶ್ಯ ತಸ್ಯ ವಾ ಪ್ರಿಯಕಾರಣಾತ್ ।**
**ಏತದ್ದಿತ್ಸಸಿ ಕೃಷ್ಣಾಯ ಸತ್ಯೇನಾತ್ಮಾನಮಾಲಭೇ ॥೭॥**

ಮಹಾರಾಜ! ನಾನು ಸತ್ಯದ ಮೇಲೆ ಆಣೆಯಿಟ್ಟು ಹೃದಯಬಿಚ್ಚಿ ಹೇಳುತ್ತೇನೆ. ನೀನೀಗ ಶ್ರೀಕೃಷ್ಣನಿಗೆ ಕೊಡುವೆನೆಂದು ಹೇಳಿರುವ ಅಮೂಲ್ಯ ವಸ್ತುಗಳನ್ನು ಅವನಿಗೆ ಧರ್ಮದ ಕಾರಣದಿಂದಲೂ ಕೊಡುತ್ತಿಲ್ಲ ; ಶ್ರೀಕೃಷ್ಣ ನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಕಾರಣದಿಂದಲೂ ಕೊಡುತ್ತಿಲ್ಲ. (ಈ ವಿಷಯದಲ್ಲಿ ನಿನಗೆ ಧರ್ಮಬುದ್ಧಿಯೂ ಇಲ್ಲ ; ಶ್ರೀಕೃಷ್ಣನ ಮೇಲಿನ ಪ್ರೀತಿ-ವಿಶ್ವಾಸಗಳಿಂದಲೂ ನೀನೀ ಕಾರ್ಯವನ್ನು ಮಾಡಲು ಹೊರಟಿಲ್ಲ.)

ಮಾಯೈಷಾ ಸತ್ಯಮೇವೈತಚ್ಛದ್ಮೈತದ್ಭೂರಿದಕ್ಷಿಣ ।
ಜಾನಾಮಿ ತ್ವನ್ಮತಂ ರಾಜನ್ಗೂಢಂ ಬಾಹ್ಯೇನ ಕರ್ಮಣಾ ॥೮॥

ಯಜ್ಞ-ಯಾಗಾದಿಗಳಲ್ಲಿ ಯಥೇಚ್ಛವಾಗಿ ದಾನ-ದಕ್ಷಿಣೆಗಳನ್ನು ಕೊಡುವ ದಾನಶೀಲನೇ! ನೀನು ಮಾಡುತ್ತಿರುವುದೆಲ್ಲವೂ ಕೃತ್ರಿಮ, ಮೋಸ. ಇದು ಶತಾಂಶ ಸತ್ಯವೆಂದು ಸಾರಿ ಹೇಳುತ್ತೇನೆ. ನಿನ್ನ ಬಾಹ್ಯಕರ್ಮಗಳಿಂದ ಅಥವಾ ಹೊರಗಿನ ಆಚರಣೆಗಳಿಂದ ನಿನ್ನ ಹೃದ್ಗತವಾದ ಅಭಿಪ್ರಾಯವೇನೆಂಬುದನ್ನು ನಾನು ಚೆನ್ನಾಗಿ ತಿಳಿದುಕೊಂಡಿರುತ್ತೇನೆ.

ಪಞ್ಚ ಪಞ್ಚೈವ ಲಿಪ್ಸನ್ತಿ ಗ್ರಾಮಕಾನ್ಪಾಣ್ಡವಾ ನೃಪ ।
ನ ಚ ದಿತ್ಸಸಿ ತೇಭ್ಯಸ್ತಾಂಸ್ತಚ್ಛಮಂ ನ ಕರಿಷ್ಯಸಿ ॥೯॥

ಪಂಚಪಾಂಡವರು ತಾವು ಜೀವಿಸಿರಲು ಕೇವಲ ಐದೇ ಐದು ಗ್ರಾಮಗಳನ್ನು ಅಪೇಕ್ಷಿಸುತ್ತಿದ್ದಾರೆ. ಆ ಐದು ಗ್ರಾಮಗಳನ್ನೂ ನೀನವರಿಗೆ ಕೊಡಲು ಸಿದ್ಧನಾಗಿಲ್ಲ. ಅವರೊಡನೆ ಸಂಧಿಮಾಡಿಕೊಳ್ಳಲು ನಿನಗೆ ಸರ್ವಥಾ ಇಷ್ಟವಿಲ್ಲವೆಂಬುದು ಇದರಿಂದಲೇ ಬಹಳ ಸ್ಪಷ್ಟವಾಗಿ ಕಾಣುತ್ತದೆ.

ಶ್ರೀಕೃಷ್ಣನಿಗೆ ಕೊಡಬೇಕೆಂದಿರುವ ಸತ್ಕಾರದ ವಿಷಯವಾಗಿ ನಿನ್ನ ಮನಸ್ಸಿನಲ್ಲಿರುವ ನಿಗೂಢವಾದ ಆಶಯವನ್ನು ಇನ್ನೂ ಸ್ಪಷ್ಟವಾಗಿ ಹೇಳಲೇ? ಮಹಾರಾಜ!

ಅರ್ಥೇನ ತು ಮಹಾಬಾಹುಂ ವಾರ್ಷ್ಣೇಯಂ ತ್ವಂ ಜಿಹೀರ್ಷಸಿ ।
ಅನೇನ ಚಾಪ್ಯುಪಾಯೇನ ಪಾಣ್ಡವೇಭ್ಯೋ ಬಿಭೇತ್ಸ್ಯಸಿ ॥೧೦॥

ಅಪಾರವಾದ ಹಣಕೊಟ್ಟು ಮಹಾಬಾಹುವಾದ ವಾರ್ಷ್ಣೇಯನನ್ನು ನೀನು ಅಪಹರಿಸಬೇಕೆಂದು ಆಶಿಸಿರುವೆ. (ನಿನ್ನ ಕಡೆಗೆ ಸೆಳೆದುಕೊಳ್ಳಬೇಕೆಂದು ಆಶಿಸಿರುವೆ.) ಈ ಉಪಾಯದಿಂದ ನೀನು ಪಾಂಡವರಿಂದ ಶ್ರೀಕೃಷ್ಣನನ್ನು ಪ್ರತ್ಯೇಕಗೊಳಿಸಲೂ ಆಶಿಸಿರುವೆ. ಮಹಾರಾಜ! ಇದೇ ಅಲ್ಲವೇ ಶ್ರೀಕೃಷ್ಣನಿಗೆ ನೀನು ಮಾಡಲಿಚ್ಛಿಸಿರುವ ಅಮೋಘವಾದ ಸತ್ಕಾರದ ಹಿನ್ನೆಲೆ?

ಹಣದ ರಾಶಿಯನ್ನು ಸುರಿದು ಶ್ರೀಕೃಷ್ಣನನ್ನು ನಿನ್ನ ಕಡೆಗೆ ಸೆಳೆದುಕೊಳ್ಳಬೇಕೆಂದೂ, ಪಾಂಡವರಿಂದ ಬೇರ್ಪಡಿಸಬೇಕೆಂದೂ ನೀನು ಕೇವಲ

ಭ್ರಾಂತಿಯಿಂದ ನಿಶ್ಚಯಿಸಿರುವೆ. ಈ ಭೇದೋಪಾಯವು ಮಹಾಮಹಿಮನಾದ ಶ್ರೀಕೃಷ್ಣನ ವಿಷಯದಲ್ಲಿ ಸಫಲವಾಗಲಾರದು.

**ನ ಚ ವಿತ್ತೇನ ಶಕ್ಯೋಽಸೌ ನೋದ್ಯಮೇನ ನ ಗರ್ಹಯಾ ।**
**ಅನ್ಯೋ ಧನಂಜಯಾತ್ಕರ್ತುಮೇತತ್ತತ್ತ್ವಂ ಬ್ರವೀಮಿ ತೇ ॥೧೧॥**

ಅಪಾರವಾದ ಹಣವನ್ನು ಕೊಡುವುದರಿಂದಾಗಲೀ, ಮತ್ತಾವುದೇ ಕಾರ್ಯದಿಂದಾಗಲೀ, ಅವನನ್ನು ನಿಂದಿಸುವುದರಿಂದಾಗಲೀ (ಹೆದರಿಸುವುದರಿಂದಾಗಲೀ)–ಧನಂಜಯನಿಂದ ಶ್ರೀಕೃಷ್ಣನನ್ನು ಪ್ರತ್ಯೇಕಿಸುವ ಸಾಧ್ಯತೆಯೇ ಇಲ್ಲ. ಈ ನಿಗೂಢತತ್ತ್ವವನ್ನು ನಾನು ಪುನಃ ಪುನಃ ಹೇಳುತ್ತೇನೆ. ಕೃಷ್ಣಾರ್ಜುನರೆಂದಿಗೂ ಬೇರೆಯಾಗಲಾರರು.

**ವೇದ ಕೃಷ್ಣಸ್ಯ ಮಾಹಾತ್ಮ್ಯಂ ವೇದಾಸ್ಯ ದೃಢಭಕ್ತಿತಾಮ್ ।**
**ಅತ್ಯಾಜ್ಯಮಸ್ಯ ಜಾನಾಮಿ ಪ್ರಾಣೈಸ್ತುಲ್ಯಂ ಧನಂಜಯಮ್ ॥೧೨॥**

ನಾನು ಶ್ರೀಕೃಷ್ಣನ ಮಹಿಮೆಯನ್ನೂ ತಿಳಿದಿರುತ್ತೇನೆ. ಕೃಷ್ಣನಿಗೆ ಅರ್ಜುನನಲ್ಲಿ ನಿರತಿಶಯವಾದ ಮತ್ತು ದೃಢವಾದ ಪ್ರೀತಿಯಿರುವುದನ್ನೂ ಮನಗಂಡಿದ್ದೇನೆ. ಪ್ರಾಣಸಮಾನನಾದ ಅರ್ಜುನನನ್ನು ಶ್ರೀಕೃಷ್ಣನು ಯಾವುದೇ ಕಾರಣದಿಂದಲೂ ಪರಿತ್ಯಾಗಮಾಡಲಾರನೆಂಬುದನ್ನೂ ನಾನು ಬಹುಸ್ಪಷ್ಟವಾಗಿ ತಿಳಿದಿರುತ್ತೇನೆ.

ಅಪಾರಧನಪ್ರದಾನದಿಂದ ಶ್ರೀಕೃಷ್ಣನನ್ನು ನಿನ್ನವನನ್ನಾಗಿ ಮಾಡಿಕೊಳ್ಳಬೇಕೆಂದಿರುವ ನೀನು–ಶ್ರೀಕೃಷ್ಣನು ನಿನ್ನ ಈ ಕುತಂತ್ರಮನೋಭಾವದ ಕೊಡುಗೆಯನ್ನು ಸ್ವೀಕರಿಸಿಬಿಡುವನೆಂದು ಭಾವಿಸಿರುವೆಯಾ? ಅವನಿಲ್ಲಿಗೆ ಬಂದಾಗ ನೀನು ಕೊಡಲಿರುವ ಅಮೋಘವಾದ ಸತ್ಕಾರದಲ್ಲಿ ಅವನು ಇಷ್ಟುಮಾತ್ರವನ್ನೇ ಪರಿಗ್ರಹಿಸುವನು.

**ಅನ್ಯತ್ಕುಮ್ಭಾದಪಾಂ ಪೂರ್ಣಾದನ್ಯತ್ಪಾದಾವಸೇಚನಾತ್ ।**
**ಅನ್ಯತ್ಕುಶಲಸಮ್ಪ್ರಶ್ನಾನ್ನೈಷಿಷ್ಯತಿ ಜನಾರ್ದನಃ ॥೧೩॥**

ತನ್ನ ಸ್ವಾಗತಕ್ಕಾಗಿ ಬ್ರಾಹ್ಮಣಮುಖೇನ ಕೊಂಡೊಯ್ಯುವ ಜಲಸಹಿತವಾದ ಪೂರ್ಣಕುಂಭವನ್ನು ಸ್ಪರ್ಶಮಾಡುವನು. ಎರಡನೆಯದಾಗಿ ಪಾದ್ಯದ ಸಂಬಂಧವಾಗಿ ನೀನು ಕೊಡಲಿರುವ ನೀರಿನಿಂದ ಕಾಲುತೊಳೆಯು

ವನು. ನಿನ್ನ ಕಡೆಯ ಪ್ರಮುಖರ ಕುಶಲಪ್ರಶ್ನೆಗಳಿಗೆ ಗಮನಕೊಡುವನು. ಇಷ್ಟು ಹೊರತಾಗಿ ನೀನು ಕೊಡಲಿಚ್ಛಿಸಿರುವ ಯಾವುದೇ ವಸ್ತುವನ್ನೂ ಶ್ರೀಕೃಷ್ಣನು ಸ್ಪರ್ಶಿಸುವುದೂ ಇಲ್ಲ.

**ಯತ್ತ್ವಸ್ಯ ಪ್ರಿಯಮಾತಿಥ್ಯಂ ಮಾನಾರ್ಹಸ್ಯ ಮಹಾತ್ಮನಃ ।**
**ತದಸ್ಮೈ ಕ್ರಿಯತಾಂ ರಾಜನ್ಮಾನಾರ್ಹೋಽಸೌ ಜನಾರ್ದನಃ ॥೧೪॥**

ಅತಿಥಿಯಾಗಿ ಬಂದವನಿಗೆ ಸತ್ಕಾರಮಾಡಬೇಕಾದರೆ ಅವನಿಗೆ ಪ್ರಿಯ ವಾಗುವ ರೀತಿಯಲ್ಲಿ ಪ್ರಿಯವಾದ ವಸ್ತುಗಳನ್ನು ಕೊಟ್ಟು ಸತ್ಕಾರಮಾಡ ಬೇಕು. ಆದುದರಿಂದ ಸಮ್ಮಾನಿಸಲು ಯೋಗ್ಯನಾದ, ಮಹಾತ್ಮನಾದ ಶ್ರೀಕೃಷ್ಣನಿಗೆ ಯಾವ ರೀತಿಯಲ್ಲಿ ಸಮ್ಮಾನಮಾಡಿದರೆ ಹೆಚ್ಚು ಪ್ರೀತಿ ಯುಂಟಾಗುವುದೋ ಅಥವಾ ಅವನಿಗೆ ಈ ಸಮಯದಲ್ಲಿ ಯಾವುದು ಪ್ರಿಯ ವಾದ ಆತಿಥ್ಯವೆನಿಸುವುದೋ–ಅದನ್ನು ತಿಳಿದು ಅಂತಹ ಪ್ರಿಯವಾದ ಆತಿಥ್ಯ ವನ್ನು ಶ್ರೀಕೃಷ್ಣನಿಗೆ ನೀಡುವವನಾಗು. ನಿಶ್ಚಯವಾಗಿಯೂ ಜನಾರ್ದನನು ಪೂಜಾರ್ಹನೇ ಆಗಿರುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ.

**ಆಶಂಸಮಾನಃ ಕಲ್ಯಾಣಂ ಕುರೂನಭ್ಯೇತಿ ಕೇಶವಃ ।**
**ಯೇನೈವ ರಾಜನ್ನರ್ಥೇನ ತದೇವಾಸ್ಮಾ ಉಪಾಕುರು ॥೧೫॥**

ಶ್ರೀಕೃಷ್ಣನೀಗ ಯಾವ ಕಾರಣದಿಂದ ನಮ್ಮಲ್ಲಿಗೆ ಬರುತ್ತಿದ್ದಾನೆಂಬುದನ್ನು ಮನಗಾಣು. (ಅವನೀಗ ನೀನು ಕೊಡಲಿರುವ ರಾಜಯೋಗ್ಯವಾದ ಆತಿಥ್ಯವನ್ನು ಸ್ವೀಕರಿಸುವುದಕ್ಕಾಗಲೀ, ಅಮೂಲ್ಯವಾದ ವಸ್ತ್ರಾಭರಣ ಗಳನ್ನು ಪಡೆದುಕೊಳ್ಳುವುದಕ್ಕಾಗಲೀ ನಿನ್ನಲ್ಲಿಗೆ ಬರುತ್ತಿಲ್ಲ.) ಕೌರವ-ಪಾಂಡವರಿಬ್ಬರಿಗೂ ಕಲ್ಯಾಣವನ್ನು ಅಭಿಲಾಷಿಸಿ ಶ್ರೀಕೃಷ್ಣನೀಗ ಕುರುಗಳ ಸಮೀಪಕ್ಕೆ ಬರುತ್ತಿದ್ದಾನೆ. ಅವನು ಯಾವ ಕಾರ್ಯಕ್ಕಾಗಿ ಇಲ್ಲಿಗೆ ಬರುತ್ತಿ ದ್ದಾನೆಯೋ ಆ ಕಾರ್ಯದ ಪ್ರಯೋಜನವನ್ನು ಮಾಡಿಕೊಟ್ಟು ತನ್ಮೂಲಕ ವಾಗಿ ಅವನನ್ನು ಸತ್ಕರಿಸು. (ಸಂಧಿಗಾಗಿ ಬರುತ್ತಿರುವ ಶ್ರೀಕೃಷ್ಣನಿಗೆ ಸಂಧಿಯ ಉಪಹಾರವನ್ನಿತ್ತು ಸತ್ಕರಿಸು. ಅವನ ಆಶಯದಂತೆ ಪಾಂಡವ ರೊಡನೆ ಸಂಧಿಯನ್ನು ಮಾಡಿಕೋ. ಈ ಒಂದು ಸತ್ಕಾರದಿಂದ ಮಾತ್ರ ಅವನು ಪರಮಪ್ರೀತನಾಗುತ್ತಾನೆ.)

ಶಮಮಿಚ್ಛತಿ ದಾಶಾರ್ಹಸ್ತವ ದುರ್ಯೋಧನಸ್ಯ ಚ ।
ಪಾಣ್ಡವಾನಾಂ ಚ ರಾಜೇನ್ದ್ರ ತದಸ್ಯ ವಚನಂ ಕುರು ॥೧೬॥

ದಾಶಾರ್ಹಕುಲಭೂಷಣನಾದ ಶ್ರೀಕೃಷ್ಣನು ನಿನ್ನ, ದುರ್ಯೋಧನನ ಮತ್ತು ಪಾಂಡವರ ನಡುವೆ ಸಂಧಿಯನ್ನೇರ್ಪಡಿಸಲು ಇಚ್ಛಿಸಿದ್ದಾನೆ. ಸಂಧಿಯ ವಿಷಯದಲ್ಲಿ ಅವನೇನು ಹೇಳುತ್ತಾನೆಯೋ ಅದರಂತೆ ನಡೆದುಕೋ.

ಪಿತಾಸಿ ರಾಜನ್ಪುತ್ರಾಸ್ತೇ ವೃದ್ಧಸ್ತ್ವಂ ಶಿಶವಃ ಪರೇ ।
ವರ್ತಸ್ವ ಪಿತೃವತ್ತೇಷು ವರ್ತನ್ತೇ ತೇ ಹಿ ಪುತ್ರವತ್ ॥೧೭॥

ಮಹಾರಾಜ! ಪಾಂಡವರನ್ನು ಬೇರೆಯವರೆಂದು ಭಾವಿಸಬೇಡ. ನೀನವರಿಗೆ ತಂದೆಯಾಗಿರುವೆ. ಅವರು ನಿನಗೆ ಮಕ್ಕಳಾಗಿದ್ದಾರೆ. ನೀನು ವೃದ್ಧನಾಗಿರುವೆ. ಅವರಿನ್ನೂ ಶಿಶುಪ್ರಾಯರಾಗಿದ್ದಾರೆ. ನೀನು ತಂದೆಯಂತೆ ವ್ಯವಹರಿಸು. ನಿಶ್ಚಯವಾಗಿಯೂ ನಿನ್ನನ್ನು ಸಾಕ್ಷಾತ್ ತಂದೆಯೆಂದೇ ಭಾವಿಸಿ ವಿನೀತರಾದ ಪುತ್ರರಂತೆ ಅವರೂ ನಡೆದುಕೊಳ್ಳುತ್ತಾರೆ."

೮೭ನೆಯ ಅಧ್ಯಾಯವು ಮುಗಿಯಿತು.

೮೮ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ದುರ್ಯೋಧನನು ಶ್ರೀಕೃಷ್ಣನ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಮಂಡಿಸಿದುದು : ಅವನ ಕುತಂತ್ರದಿಂದ ಕುಪಿತನಾದ ಭೀಷ್ಮನು ಸಭಾತ್ಯಾಗ ಮಾಡಿದುದು

ಜನಮೇಜಯ! ವಿದುರನು ಹೇಳಿದ ಮಾತುಗಳನ್ನು ಕೇಳಿದನಂತರ ದುರ್ಯೋಧನನು ಧೃತರಾಷ್ಟ್ರನಿಗೆ ಹೇಳಿದನು :

"ತಂದೆಯೇ! ಪೂರ್ವಕೃತನಿರ್ಧಾರದಿಂದ ಚ್ಯುತನಾಗದ–(ಅಚ್ಯುತನಾದ) ಶ್ರೀಕೃಷ್ಣನ ವಿಷಯದಲ್ಲಿ ವಿದುರನೇನು ಹೇಳಿದನೋ ಅದು ಸತ್ಯವಾದ ಮಾತಾಗಿದೆ. ಪಾಂಡವರ ವಿಷಯದಲ್ಲಿ ಜನಾರ್ದನನು ವಿಶೇಷವಾದ ಅನುರಾಗವನ್ನು ಹೊಂದಿರುತ್ತಾನೆ. ಆದುದರಿಂದಲೇ ಅವನನ್ನು ಪಾಂಡವರಿಂದ ಪ್ರತ್ಯೇಕಿಸುವ ಅಥವಾ ನಮ್ಮ ಕಡೆಗೆ ಹರಣಮಾಡುವ (ಸೆಳೆದು

ಕೊಳ್ಳುವ) ಸಾಧ್ಯತೆಯಿಲ್ಲ. ಅವನು ಅಚ್ಯುತನಾದುದರಿಂದ ಪಕ್ಷಾಂತರ ಮಾಡನು. ಈ ಕಾರಣದಿಂದ ಅಮೂಲ್ಯವಾದ ರತ್ನರಾಶಿಯನ್ನೇ ಕೊಟ್ಟರೂ ಶ್ರೀಕೃಷ್ಣನು ನಮ್ಮ ವಿಷಯದಲ್ಲಿ ಸುಪ್ರೀತನಾಗಲಾರನು. ಆದುದರಿಂದ :

**ಯತ್ತತ್ಸತ್ಕಾರಸಂಯುಕ್ತಂ ದೇಯಂ ವಸು ಜನಾರ್ದನೇ ।**
**ಅನೇಕರೂಪಂ ರಾಜೇನ್ದ್ರ ನ ತದ್ದೇಯಂ ಕದಾಚನ ॥೨॥**

ನೀನು ಸತ್ಕಾರದ ಮೂಲಕವಾಗಿ ಅನೇಕವಿಧವಾದ ಅಪಾರವಾದ ಯಾವ ಐಶ್ವರ್ಯವನ್ನು ಜನಾರ್ದನನಿಗೆ ಕೊಡಲಿಚ್ಛಿಸಿರುವೆಯೋ–ಅದನ್ನು ನೀನು ಖಂಡಿತವಾಗಿಯೂ ಕೊಡಲೇಕೂಡದು. ನೀನು ಕೊಡಲಿಚ್ಛಿಸಿರುವ ಅಪಾರವಾದ ಐಶ್ವರ್ಯವನ್ನು ಪಡೆದುಕೊಳ್ಳಲು ಶ್ರೀಕೃಷ್ಣನು ಯೋಗ್ಯನಲ್ಲವೆಂದಲ್ಲ. (ವಿದುರನು ಹೇಳಿದಂತೆಯೇ ಅವನು ಈ ಪೃಥ್ವಿಯನ್ನೇ ಪಾರಿತೋಷಿಕವನ್ನಾಗಿ ಪಡೆದುಕೊಳ್ಳಲು ಅರ್ಹನಾಗಿರುತ್ತಾನೆ.) ಆದರೆ ಅವನನ್ನು ಐಶ್ವರ್ಯದ ಕೊಡುಗೆಗಳ ಮೂಲಕವಾಗಿ ಸತ್ಕರಿಸಲು ಇದು ಯೋಗ್ಯವಾದ ಸಮಯವಲ್ಲ. ದೇಶ-ಕಾಲಗಳು ಇದಕ್ಕೆ ತಕ್ಕುದಾಗಿಲ್ಲ. ಈ ಸಮಯದಲ್ಲಿ ನಾವೇನಾದರೂ ವಿಶೇಷರೀತಿಯಲ್ಲಿ ಅಧೋಕ್ಷಜನನ್ನು ಸತ್ಕರಿಸಲು ಹೋದರೆ ಅವನು–'ಕೌರವರು ಭಯಪಟ್ಟುಕೊಂಡು ತನಗೆ ಸತ್ಕಾರಮಾಡುತ್ತಿದ್ದಾರೆ'–ಎಂದು ಭಾವಿಸುತ್ತಾನೆ. ಕ್ಷತ್ರಿಯನಾದವನಿಗೆ ಯಾವ ಕಾರ್ಯವನ್ನು ಮಾಡುವುದರಿಂದ ಅಪಮಾನವಾಗುವುದೋ– ಅಂತಹ ಕಾರ್ಯವನ್ನು ಬುದ್ಧಿವಂತನಾದ ಕ್ಷತ್ರಿಯನು ಖಂಡಿತವಾಗಿಯೂ ಮಾಡಕೂಡದೆಂಬುದಾಗಿ ನನ್ನ ಮನಸ್ಸು ನಿಶ್ಚಯಿಸಿದೆ.

**ಸ ಹಿ ಪೂಜ್ಯತಮೋ ಲೋಕೇ ಕೃಷ್ಣಃ ಪೃಥುಲಲೋಚನಃ ।**
**ತ್ರಯಾಣಾಮಪಿ ಲೋಕಾನಾಂ ವಿದಿತಂ ಮಮ ಸರ್ವಥಾ ॥೩॥**

ವಿಶಾಲನೇತ್ರನಾದ ಶ್ರೀಕೃಷ್ಣನು ಈ ಒಂದು ಲೋಕಕ್ಕೇ ಮಾತ್ರವಲ್ಲ ; ಮೂರು ಲೋಕಗಳಿಗೂ ಪೂಜ್ಯತಮನೆಂಬ ವಿಷಯವು ನನಗೆ ಸರ್ವಥಾ ತಿಳಿದಿದೆ. ಆದರೂ ಈ ಸಮಯದಲ್ಲಿ ನಾವು ಅವನಿಗೆ ವಿಶೇಷರೀತಿಯಲ್ಲಿ ಸತ್ಕಾರಮಾಡಲು ಹೋಗಬಾರದು.

**ನ ತು ತಸ್ಮೈ ಪ್ರದೇಯಂ ಸ್ಯಾತ್ತಥಾ ಕಾರ್ಯಗತಿಃ ಪ್ರಭೋ ।**
**ವಿಗ್ರಹಃ ಸಮುಪಾರಬ್ಧೋ ನ ಹಿ ಶಾಮ್ಯತ್ಯವಿಗ್ರಹಾತ್ ॥೬॥**

ಅವನಿಗೆ ಈ ಸಮಯದಲ್ಲಿ ಯಾವ ವಿಧವಾದ ಪಾರಿತೋಷಿಕವನ್ನೂ ಕೊಡಲೇಕೂಡದು. ಈಗಿನ ಸಂದರ್ಭವೇ ಹಾಗಿದೆ. ಸಂದರ್ಭಕ್ಕೆ ಅನುಸಾರವಾಗಿ ನಾವು ನಡೆದುಕೊಳ್ಳಲೇಬೇಕು. ನಮಗೂ ಪಾಂಡವರಿಗೂ ಕಲಹವು ಆರಂಭವಾಗಿಬಿಟ್ಟಿದೆ. ತಿಳಿವಳಿಕೆಯಿಲ್ಲದ ಅಥವಾ ವಿವೇಚನೆಯಿಲ್ಲದ ಈ ಅತಿಥಿಸತ್ಕಾರದಿಂದ ಪ್ರಾರಂಭವಾಗಿರುವ ಕಲಹವು ಉಪಶಮನವಾಗುವುದಿಲ್ಲ."

ಜನಮೇಜಯ! ದುರ್ಯೋಧನನಾಡಿದ ಮಾತುಗಳನ್ನು ಕೇಳಿ ಕುರುಕುಲಪಿತಾಮಹನಾದ ಭೀಷ್ಮನು ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನೊಡನೆ ಹೇಳಿದನು :

**ಸತ್ಕೃತೋಽಸತ್ಕೃತೋ ವಾಪಿ ನ ಕ್ರುದ್ಧ್ಯೇತ ಜನಾರ್ದನಃ ।**
**ನಾಲಮೇನಮವಜ್ಞಾತುಂ ನಾವಜ್ಞೇಯೋ ಹಿ ಕೇಶವಃ ॥೭॥**

"ಮಹಾರಾಜ! ಪರಂಧಾಮನಾದ ಜನಾರ್ದನನಿಗೆ ನೀವು ಸತ್ಕಾರ ಮಾಡಿದರೂ ಸರಿಯೇ; ಸತ್ಕಾರಮಾಡದಿದ್ದರೂ ಸರಿಯೇ–ಅವನದಕ್ಕಾಗಿ ಕೋಪಿಸಿಕೊಳ್ಳತಕ್ಕವನಲ್ಲ. ಆದರೆ ಅವನಿಲ್ಲಿಗೆ ಬಂದಾಗ ಅವನನ್ನು ಅನಾದರಣೆಮಾಡುವುದು ಖಂಡಿತವಾಗಿಯೂ ಉಚಿತವಲ್ಲ. ಕೇಶವನೆಂದಿಗೂ ತಿರಸ್ಕರಣೀಯನಲ್ಲ.

**ಯತ್ತು ಕಾರ್ಯಂ ಮಹಾಬಾಹೋ ಮನಸಾ ಕಾರ್ಯತಾಂ ಗತಮ್ ।**
**ಸರ್ವೋಪಾಯೈರ್ನ ತಚ್ಛಕ್ಯಂ ಕೇನಚಿತ್ಕರ್ತುಮನ್ಯಥಾ ॥೮॥**

ಯಾವ ಕಾರ್ಯವು ಶ್ರೀಕೃಷ್ಣನ ಮನಸ್ಸಿನಲ್ಲಿ ಕಾರ್ಯತ್ವವನ್ನು ಹೊಂದಿಬಿಟ್ಟಿರುವುದೋ, ಯಾವ ಕಾರ್ಯವನ್ನು ಹೀಗೆಯೇ ಮಾಡಿ ಮುಗಿಸಬೇಕೆಂದು ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಬಿಟ್ಟಿರುವನೋ–ಆ ಕಾರ್ಯವು ಅವನ ಮನಸ್ಸಂಕಲ್ಪದಂತೆಯೇ ನಡೆದುಹೋಯಿತೆಂದೇ ಹೇಳಬಹುದಾಗಿದೆ. ಅವನು ಸತ್ಯಸಂಕಲ್ಪನು. ಅವನು ಮಾಡಿದ ಸಂಕಲ್ಪಕ್ಕೆ ಎಂದೂ ಚ್ಯುತಿಯುಂಟಾಗುವುದಿಲ್ಲ. ಯಾವುದೇ ಉಪಾಯದಿಂದಲಾದರೂ

ಸರಿಯೇ-ಅವನ ಸತ್ಯಸಂಕಲ್ಪಕ್ಕೆ ವಿರುದ್ಧವಾಗಿ ಮಾಡಲು ಈ ಪೃಥ್ವಿಯಲ್ಲಿರುವ ಯಾವನಿಂದಲೂ ಸಾಧ್ಯವಾಗಲಾರದು, ಧೃತರಾಷ್ಟ್ರ!

ವಿದುರನ ಅಭಿಪ್ರಾಯವನ್ನು ನಾನೂ ಅನುಮೋದಿಸುತ್ತೇನೆ.

**ಸ ಯದ್ಬ್ರೂಯಾನ್ಮಹಾಬಾಹುಸ್ತತ್ಕಾರ್ಯಮವಿಶಙ್ಕಯಾ ।**
**ವಾಸುದೇವೇನ ತೀರ್ಥೇನ ಕ್ಷಿಪ್ರಂ ಸಂಶಾಮ್ಯ ಪಾಣ್ಡವೈಃ ॥೧೦॥**



ವಾಸುದೇವನಲ್ಲಿ ಅಥವಾ ಅವನಾಡುವ ಮಾತುಗಳಲ್ಲಿ ಯಾವ ವಿಧವಾದ ಸಂಶಯವನ್ನೂ ಇಟ್ಟುಕೊಳ್ಳದೇ ಅವನೇನು ಹೇಳುತ್ತಾನೆಯೋ ಅದರಂತೆ ನಡೆದುಕೊಳ್ಳುವುದೇ ಇಂದಿನ ಕರ್ತವ್ಯವಾಗಿದೆ. ಪುಣ್ಯತಮನಾದ ವಾಸು

ದೇವನ ಮಧ್ಯಸ್ಥ್ಯದಿಂದ ಸಾಧ್ಯವಾದಷ್ಟು ಬೇಗ ಪಾಂಡವರೊಡನೆ ಸಂಧಾನ ಮಾಡಿಕೋ.

**ಧರ್ಮ್ಯಮರ್ಥ್ಯಂ ಚ ಧರ್ಮಾತ್ಮಾ ಧ್ರುವಂ ವಕ್ತಾ ಜನಾರ್ದನಃ ।**
**ತಸ್ಮಿನ್ವಾಚ್ಯಾಃ ಪ್ರಿಯಾ ವಾಚೋ ಭವತಾ ಬಾನ್ಧವೈಃ ಸಹ ॥೧೧॥**

ಧರ್ಮಾತ್ಮನಾದ ಜನಾರ್ದನನು ಧರ್ಮಾರ್ಥಯುಕ್ತವಾದ ಮಾತುಗಳನ್ನೇ ಆಡುತ್ತಾನೆ. (ಧರ್ಮಾತ್ಮನ ಮುಖಾರವಿಂದದಿಂದ ಅಧರ್ಮದ ಮಾತುಗಳೆಂದಿಗೂ ಬರಲಾರವು.) ಬಂಧು-ಬಾಂಧವರಿಂದೊಡಗೂಡಿದ ನೀನು ಇಲ್ಲಿಗೆ ಆಗಮಿಸಲಿರುವ ಶ್ರೀಹರಿಯೊಡನೆ ಅವನಿಗೆ ಪ್ರಿಯವಾಗಬಹುದಾದ ಮಾತುಗಳನ್ನೇ ಆಡಬೇಕು.”

ಭೀಷ್ಮನಾಡಿದ ಮಾತುಗಳನ್ನು ಕೇಳಿ ದುರ್ಯೋಧನನು ಕುಪಿತನಾಗಿಯೇ ಹೇಳಿದನು :

“ಪಿತಾಮಹ! ಅಖಂಡವಾದ ಈ ರಾಜ್ಯಸಂಪತ್ತನ್ನು ಆಜೀವಪರ್ಯಂತವಾಗಿ ಪಾಂಡವರೊಡನೆ ಹಂಚಿಕೊಂಡು ಉಪಭೋಗಿಸುವೆನೆಂಬ ಪರ್ಯಾಯವೇ ಇಲ್ಲ. (ನಾವಿಬ್ಬರೂ ಒಂದಾಗಿ ಸೌಮನಸ್ಯದಿಂದ ಸೌಜನ್ಯದಿಂದ ಜೀವನನಡೆಸುವ ಅಥವಾ ರಾಜ್ಯಭಾರಮಾಡುವ ಸಾಧ್ಯತೆಯೇ ಇಲ್ಲ.) ಪ್ರಕೃತದಲ್ಲಿ ಶ್ರೀಕೃಷ್ಣನಿಲ್ಲಿಗೆ ಬಂದರೇನು ಮಾಡಬೇಕೆಂಬ ವಿಷಯವನ್ನು ನಾನೇ ನನ್ನ ಗೆಳೆಯರೊಡನೆ ಸಮಾಲೋಚಿಸಿ ನಿರ್ಧರಿಸಿದ್ದೇನೆ. ಇದೊಂದು ಮಹಾಸಾಹಸಕಾರ್ಯವೇ ಸರಿ. ನಾನು ಮಾಡಬೇಕೆಂದು ನಿಶ್ಚಯಿಸಿರುವ ಆ ಮಹಾಸಾಹಸಕಾರ್ಯವು ಯಾವುದೆಂಬುದನ್ನು ಹೇಳುವೆನು ; ಕೇಳು :

**ಪರಾಯಣಂ ಪಾಣ್ಡವಾನಾಂ ನಿಯಚ್ಛಾಮಿ ಜನಾರ್ದನಮ್ ॥೧೩॥**

ಪಾಂಡವರಿಗೆ ಆಶ್ರಯಭೂತನಾಗಿರುವ ಜನಾರ್ದನನನ್ನು ಬಂಧಿಸಿಬಿಡುತ್ತೇನೆ. (ಸೆರೆಹಿಡಿದುಬಿಡುತ್ತೇನೆ.)

**ತಸ್ಮಿನ್ಬದ್ಧೇ ಭವಿಷ್ಯನ್ತಿ ವೃಷ್ಣಯಃ ಪೃಥಿವೀ ತಥಾ ।**
**ಪಾಣ್ಡವಾಶ್ಚ ವಿಧೇಯಾ ಮೇ ಸ ಚ ಪ್ರಾತರಿಹೈಷ್ಯತಿ ॥೧೪॥**

ಶ್ರೀಕೃಷ್ಣನನ್ನು ಸೆರೆಹಿಡಿದೆನೆಂದರೆ ನಿರಾಶ್ರಿತರಾಗುವ ವೃಷ್ಣಿಗಳೂ (ಯದುವಂಶೀಯರೂ) ಈ ಪೃಥ್ವಿಯಲ್ಲಿರುವ ಸಕಲರಾಜರೂ ಮತ್ತು

ಪಾಂಡವರೂ ನನಗೆ ವಿಧೇಯರಾಗಿ ನಡೆದುಕೊಳ್ಳುತ್ತಾರೆ. ಆದುದರಿಂದ ಈ ಕಾರ್ಯವನ್ನು ಮಾಡುತ್ತೇನೆ. ಶ್ರೀಕೃಷ್ಣನು ನಾಳೆಯ ಪ್ರಾತಃಕಾಲವೇ ಇಲ್ಲಿಗೆ ಬರುವವನಿದ್ದಾನೆ.

**ಅತ್ರೋಪಾಯಾನ್ಯಥಾಸಮ್ಯಜ್ಞ ಬುದ್ಧ್ಯೇತ ಜನಾರ್ದನಃ ।**
**ನ ಚಾಪಾಯೋ ಭವೇತ್ಕಶ್ಚಿತ್ತದ್ಭವಾನ್ಪ್ರಬ್ರವೀತು ಮೇ ॥೧೫॥**

ಈ ಮಹಾಸಾಹಸಕಾರ್ಯಕ್ಕೆ ನೀನೂ ಸೂಕ್ತಸಲಹೆಯನ್ನು ನೀಡಬೇಕಾಗಿದೆ. ಪಿತಾಮಹ! ನಾವು ಅವನ ಬಂಧನಕ್ಕಾಗಿ ಇಲ್ಲಿ ಕೈಗೊಂಡಿರುವ ಉಪಾಯಗಳೊಂದೂ ಅವನಿಗೆ ತಿಳಿಯಬಾರದು. ಅವನನ್ನು ಬಂಧಿಸುವುದರಿಂದ ನಾವು ಯಾವ ವಿಧವಾದ ಅಪಾಯಕ್ಕೂ ಒಳಗಾಗಬಾರದು. ಇದನ್ನು ಸಾಧಿಸಲು ಸೂಕ್ತವಾದ ಸಲಹೆಯನ್ನು ನೀನೂ ಕೊಡಬೇಕು."

ಜನಮೇಜಯ! ಧೃತರಾಷ್ಟ್ರನು ಧನ-ಕನಕಾದಿಗಳನ್ನು ಕೊಟ್ಟು ಶ್ರೀಕೃಷ್ಣನನ್ನು ಒಲಿಸಿಕೊಳ್ಳಬೇಕೆಂದಿದ್ದರೆ–ಅವನ ಮಗನು ಶ್ರೀಕೃಷ್ಣನನ್ನು ಬಂಧಿಸಬೇಕೆಂದೇ ನಿಶ್ಚಯಿಸಿದನು. ಶ್ರೀಕೃಷ್ಣನೊಡನೆ ಕಲಹಕ್ಕೆ ಸಿದ್ಧನಾಗುತ್ತಿರುವೆನೆಂಬ ಬಹುಘೋರವಾದ ದುರ್ಯೋಧನನ ಮಾತುಗಳನ್ನು ಕೇಳಿ ಅಮಾತ್ಯಸಹಿತನಾದ ಧೃತರಾಷ್ಟ್ರನು ಕುಸಿದೇ ಹೋದನು ; ಬಹುದುಃಖಿತನಾದನು. ತನ್ನ ಮಕ್ಕಳ ಭವಿಷ್ಯವನ್ನು ಚಿಂತಿಸಿ ಔದಾಸೀನ್ಯವನ್ನೇ ಹೊಂದಿದನು. ಧೃತರಾಷ್ಟ್ರನಿಗೆ ಪುತ್ರಪ್ರೇಮದ ಆಧಿಕ್ಯದಿಂದಾಗಿ ಮಗನ ಮಾತಿಗೆ ವಿರುದ್ಧವಾಗಿ ಆಜ್ಞೆಮಾಡುವ ಸಾಹಸವಿರಲಿಲ್ಲ. ಕಂಗೆಟ್ಟ ಮುಖದಿಂದ ಕೂಡಿದ್ದ ಧೃತರಾಷ್ಟ್ರನು ದುರ್ಯೋಧನನನ್ನು ಕುರಿತು ಈ ಮಾತುಗಳನ್ನು ಹೇಳಿದನು :

**ಮೈವಂ ವೋಚಃ ಪ್ರಜಾಪಾಲ ನೈಷ ಧರ್ಮಃ ಸನಾತನಃ ।**
**ದೂತಶ್ಚ ಹಿ ಹೃಷೀಕೇಶಃ ಸಮ್ಬನ್ಧೀ ಚ ಪ್ರಿಯಶ್ಚ ನಃ ।**
**ಅಪಾಪಃ ಕೌರವೇಯೇಷು ಸ ಕಥಂ ಬನ್ಧಮರ್ಹತಿ ॥೧೬॥**

"ಪ್ರಜಾಪಾಲನೇ! ಶ್ರೀಕೃಷ್ಣನನ್ನು ಬಂಧಿಸುವ ಕಾರ್ಯಕ್ಕೆ ಪ್ರವರ್ತಿಸುವುದಂತಿರಲಿ ; ಪರಾತ್ಪರನಾದ ಶ್ರೀಕೃಷ್ಣನನ್ನು ಬಂಧಿಸುವೆನೆಂದು

ಮಾತಿನಲ್ಲಿ ಕೂಡ ಹೇಳಬೇಡ. ಹೀಗೆ ಮಾಡುವುದು ಅಥವಾ ಹೀಗೆ ಮಾತನಾಡುವುದು ಸನಾತನಧರ್ಮವೆನಿಸುವುದಿಲ್ಲ. ಅವನನ್ನು ಬಂಧಿಸುವುದೆಂತು? ಬಂಧಿಸುವ ಕಾರಣವಾದರೂ ಏನಿದೆ? ಅವನು ನಮ್ಮಲ್ಲಿಗೆ ಪಾಂಡವರ ದೂತನಾಗಿ ಬರುತ್ತಿದ್ದಾನೆ. ದೂತರನ್ನು ಬಂಧಿಸುವುದಾಗಲೀ, ವಧೆಮಾಡುವುದಾಗಲೀ, ಅಪಮಾನಗೊಳಿಸುವುದಾಗಲೀ ಸರ್ವಥಾ ಧರ್ಮವಲ್ಲ. ಮೇಲಾಗಿ ಶ್ರೀಕೃಷ್ಣನು ನಮ್ಮ ಬಂಧು. ನಮಗೆ ಬಹುಪ್ರಿಯನಾದವನು. ಕೌರವರ ವಿಷಯದಲ್ಲಿ ಅವನು ಇದುವರೆಗೆ ಯಾವ ವಿಧವಾದ ಅಪರಾಧವನ್ನೂ ಮಾಡಿರುವುದಿಲ್ಲ. ಅಂತಹವನು ಹೇಗೆ ತಾನೇ ಬಂಧನಯೋಗ್ಯನಾಗುತ್ತಾನೆ?"

ಜನಮೇಜಯ! ಧೃತರಾಷ್ಟ್ರನು ದೈನ್ಯದಿಂದ ತನ್ನ ಪುತ್ರನೊಡನೆ ಹೀಗೆಂದು ಹೇಳಿದನಂತರ ಭೀಷ್ಮನು ಕುಪಿತನಾಗಿ ಧೃತರಾಷ್ಟ್ರನನ್ನು ಕುರಿತು ಹೇಳಿದನು :

**ಪರೀತಸ್ತವ ಪುತ್ರೋಽಯಂ ಧೃತರಾಷ್ಟ್ರ ಸುಮನ್ದಧೀಃ ।**
**ವೃಣೋತ್ಯನರ್ಥಂ ನೈವಾರ್ಥಂ ಯಾಚ್ಯಮಾನಃ ಸುಹೃಜ್ಜನೈಃ ॥**

"ಮಹಾರಾಜ! ಮಹಾಮೂರ್ಖನಾದ ನಿನ್ನ ಮಗನು ಕಾಲವಶನಾಗಿಬಿಟ್ಟಿದ್ದಾನೆ. ಸುಹೃದರಾದವರೆಷ್ಟೇ ಪ್ರಾರ್ಥಿಸಿದರೂ (ಎಷ್ಟೇ ಸಲಹೆ ನೀಡಿದರೂ) ಅನರ್ಥವನ್ನೇ ತಂದುಕೊಳ್ಳುತ್ತಿರುವನೇ ಹೊರತು ಅರ್ಥಸಾಧನೆಗೆ ಕಿಂಚಿತ್ತಾದರೂ ಪ್ರಯತ್ನಿಸುತ್ತಿಲ್ಲ. ನೀನೂ ಕೂಡ ಸುಹೃದರ ಹಿತಕರವಾದ ಮಾತುಗಳನ್ನು ಕೇಳದೇ, ಪಾಪಕಾರ್ಯದಲ್ಲಿಯೇ ಆಸಕ್ತನಾಗಿ ಕುಮಾರ್ಗದಲ್ಲೇ ಹೋಗುತ್ತಿರುವ ಈ ಪಾಪಿಷ್ಠನನ್ನೇ ಅನುಸರಿಸಿ ಹೋಗುತ್ತಿರುವೆ. ಎಂತಹ ಕ್ಲಿಷ್ಟವಾದ ಕಾರ್ಯವನ್ನಾದರೂ ಅನಾಯಾಸದಿಂದ ಮಾಡುವ ಸಾಮರ್ಥ್ಯವಿರುವ ಶ್ರೀಕೃಷ್ಣನನ್ನು ಬಂಧಿಸಲು ಹೋದೊಡನೆಯೇ ಮಹಾಮೂರ್ಖನಾದ ನಿನ್ನ ಮಗನು ತನ್ನ ದುರುಳರಾದ ಮಂತ್ರಿಗಳಿಂದ ಸಮೇತನಾಗಿ ವಿನಾಶಹೊಂದುತ್ತಾನೆ. ಧರ್ಮಮಾರ್ಗವನ್ನು ಸಂಪೂರ್ಣವಾಗಿ ತ್ಯಜಿಸಿರುವ, ಮಹಾಕ್ರೂರಿಯಾದ, ದುರ್ಬುದ್ಧಿಯವನಾದ ಮತ್ತು ಪಾಪಿಷ್ಠನಾದ ನಿನ್ನ ಮಗನ ಅನರ್ಥಕರವಾದ ಮಾತುಗಳನ್ನು ಯಾವುದೇ ಕಾರಣದಿಂದಲೂ ಕೇಳುವ ಇಚ್ಛೆಯೂ ನನಗಿಲ್ಲ."

ಜನಮೇಜಯ! ಬಹುಕುಪಿತನಾಗಿದ್ದ, ಸತ್ಯಪರಾಕ್ರಮನಾದ,

ಭಾರತಶ್ರೇಷ್ಠನಾದ, ವೃದ್ಧನಾದ ಭೀಷ್ಮನು ಹೀಗೆ ಹೇಳಿ ಆಸನದಿಂದೆದ್ದು ಸಭಾಂಗಣವನ್ನು ಬಿಟ್ಟು ಹೊರಟೇಹೋದನು.

೮೮ನೆಯ ಅಧ್ಯಾಯವು ಮುಗಿಯಿತು.

೮೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಹಸ್ತಿನಾಪುರದಲ್ಲಿ ಶ್ರೀಕೃಷ್ಣನಿಗೆ ಸ್ವಾಗತ: ಧೃತರಾಷ್ಟ್ರನ ಮತ್ತು ವಿದುರನ ಮನೆಗಳಲ್ಲಿ ಶ್ರೀಕೃಷ್ಣನಿಗೆ ಸತ್ಕಾರ

ಜನಮೇಜಯ! ಇತ್ತಲಾಗಿ ವೃಕಸ್ಥಲದಲ್ಲಿ ಶ್ರೀಕೃಷ್ಣನು ಪ್ರಾತಃಕಾಲ ದಲ್ಲೆದ್ದು ಸಕಲವಾದ ನಿತ್ಯಕರ್ಮಗಳನ್ನೂ ಮುಗಿಸಿಕೊಂಡವನಾಗಿ ವೃಕಸ್ಥಲ ದಲ್ಲಿದ್ದ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಹಸ್ತಿನಾಪಟ್ಟಣಕ್ಕೆ ಹೊರಟನು.

ಹಸ್ತಿನಾಪಟ್ಟಣಕ್ಕೆ ಪ್ರಯಾಣಹೊರಟ ಮಹಾಬಾಹುವಾದ, ಮಹಾ ಬಲನಾದ ಶ್ರೀಕೃಷ್ಣನಿಗೆ ಪ್ರಯಾಣಕ್ಕೆ ಅನುಜ್ಞೆಯನ್ನಿತ್ತ ವೃಕಸ್ಥಲ ನಿವಾಸಿಗಳು ಶ್ರೀಕೃಷ್ಣನು ಹೊರಡುವ ಮೊದಲು ಅವನನ್ನು ಪ್ರದಕ್ಷಿಣೆ ಮಾಡಿದರು.

ಶ್ರೀಕೃಷ್ಣನು ಹಸ್ತಿನಾಪಟ್ಟಣಕ್ಕೆ ಅನತಿದೂರದಲ್ಲಿ ಬರುತ್ತಿರುವನೆಂಬ ವಾರ್ತೆಯು ತಿಳಿದೊಡನೆಯೇ ದುರ್ಯೋಧನನೊಬ್ಬನನ್ನುಳಿದು ಧೃತರಾಷ್ಟ್ರನ ಇತರ ಎಲ್ಲ ಮಕ್ಕಳೂ, ಭೀಷ್ಮ-ದ್ರೋಣ-ಕೃಪರೇ ಮೊದಲಾಗಿ ಎಲ್ಲರೂ ಯಥಾಯೋಗ್ಯವಾಗಿ ಅಲಂಕರಿಸಿಕೊಂಡು ಶ್ರೀಕೃಷ್ಣನನ್ನು ಸ್ವಾಗತಿಸಲು ಪಟ್ಟಣದಿಂದ ಹೊರಟರು. ಶ್ರೀಕೃಷ್ಣನ ದರ್ಶನವನ್ನು ಪಡೆಯುವ ಸಲುವಾಗಿ ಕೆಲವು ಪೌರರು ಯಾನಗಳಲ್ಲಿಯೂ, ಮತ್ತೆ ಕೆಲವರು ಕುದುರೆ ಗಳ ಮೇಲೂ, ಮತ್ತೆ ಕೆಲವರು ಕಾಲ್ನಡಿಗೆಯಲ್ಲಿಯೂ ಗುಂಪು-ಗುಂಪಾಗಿ ಸಾಲು-ಸಾಲಾಗಿ ಹೊರಟರು. ಶ್ರೀಕೃಷ್ಣನು ಹಸ್ತಿನಾಪಟ್ಟಣದ ಹೆಬ್ಬಾ ಗಿಲಿಗೆ ಬರುತ್ತಲೇ ಭೀಷ್ಮಪ್ರಮುಖರಾದ ಕೌರವರೂ ಮತ್ತು ಪಟ್ಟಣಿಗರೂ ಶ್ರೀಕೃಷ್ಣನನ್ನು ಆದರದಿಂದ ಸ್ವಾಗತಿಸಿದರು. ಅಕ್ಲಿಷ್ಟಕರ್ಮನಾದ ಭೀಷ್ಮನಿಂದಲೂ, ದ್ರೋಣರಿಂದಲೂ ಮತ್ತು ಧೃತರಾಷ್ಟ್ರನ ಮಕ್ಕಳಿಂದಲೂ ಪರಿವೃತನಾಗಿ ಶ್ರೀಕೃಷ್ಣನು ನಗರಪ್ರವೇಶಮಾಡಿದನು. ಶ್ರೀಕೃಷ್ಣನನ್ನು

ಸಮ್ಮಾನಿಸುವ ಸಲುವಾಗಿ ಹಸ್ತಿನಾಪಟ್ಟಣವೇ ತಳಿರು-ತೋರಣಗಳಿಂದ ಸರ್ವತ್ರ ಅಲಂಕೃತವಾಗಿದ್ದಿತು. ಶ್ರೀಕೃಷ್ಣನು ಆಗಮಿಸುತ್ತಿದ್ದ ರಾಜ ಮಾರ್ಗವು ರತ್ನಹಾರಗಳಿಂದಲೂ, ವಜ್ರ-ವೈಡೂರ್ಯಗಳಿಂದಲೂ ಸಮಲಂಕೃತ ವಾಗಿದ್ದಿತು. ಶ್ರೀಕೃಷ್ಣನು ಆಗಮಿಸಿದ ಆ ಸಮಯದಲ್ಲಿ ಮನೆಯಲ್ಲಿ ಒಂದು ಪ್ರಾಣಿಯೂ ಉಳಿಯಲಿಲ್ಲ. ಸ್ತ್ರೀ-ಬಾಲ-ವೃದ್ಧರೇ ಆದಿಯಾಗಿ ಹಸ್ತಿನಾ ಪಟ್ಟಣದ ಸಕಲಪ್ರಜೆಗಳೂ ಪರಂಧಾಮನಾದ ವಾಸುದೇವನನ್ನು ಸಂದರ್ಶಿಸ ಬೇಕೆಂಬ ಆಶಯದಿಂದ ಮನೆಗಳನ್ನು ಬಿಟ್ಟು ಶ್ರೀಕೃಷ್ಣನು ಬರುತ್ತಿದ್ದ ರಾಜ ಮಾರ್ಗದ ಎರಡೂ ಪಾರ್ಶ್ವಗಳಲ್ಲಿಯೂ ಕಿಕ್ಕಿರಿದು ನಿಂತುಬಿಟ್ಟಿದ್ದರು. ಶ್ರೀಕೃಷ್ಣನು ರಾಜಮಾರ್ಗವನ್ನು ಪ್ರವೇಶಿಸಿದೊಡನೆಯೇ ಎರಡು ಪಾರ್ಶ್ವ ಗಳಲ್ಲಿಯೂ ನಿಂತಿದ್ದ ಪಟ್ಟಣಿಗರು ವಾಸುದೇವನನ್ನು ನೋಡಿ ಆನಂದಭರಿತ ರಾಗಿ ಅವನನ್ನು ಸುಮಧುರಗೀತೆಗಳಿಂದ ನಾನಾವಿಧವಾಗಿ ಸ್ತೋತ್ರಮಾಡು ತ್ತಿದ್ದರು. ರಾಜಮಾರ್ಗದಲ್ಲಿ ನಿಲ್ಲಲು ಸ್ಥಳವಿಲ್ಲದೇ ಅನೇಕ ಸುಂದರಸ್ತ್ರೀಯರು ರಾಜಮಾರ್ಗದುದ್ದಕ್ಕೂ ಇದ್ದ ದೊಡ್ಡ-ದೊಡ್ಡ ಸೌಧಗಳ ಉಪ್ಪರಿಗೆಗಳಲ್ಲಿ ಅಧಿಕಸಂಖ್ಯೆಯಲ್ಲಿ ನಿಂತು ಶ್ರೀಕೃಷ್ಣನನ್ನು ನೋಡುತ್ತಿದ್ದರು. ಅವರ ಭಾರದಿಂದಾಗಿ ಆ ಸೌಧಗಳು ಸುಸ್ಥಿರವಾಗಿರಲು ಸಾಧ್ಯವಾಗದೇ ಅತ್ತಲಿತ್ತ ಅಲುಗಾಡುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. (ಉಪ್ಪರಿಗೆಗಳಲ್ಲಿದ್ದ ಸುಂದರ ಸ್ತ್ರೀಯರ ಮುಖಾರವಿಂದಗಳು ಮಾತ್ರವೇ ಕಾಣುತ್ತಿದ್ದುವು. ಕಿಕ್ಕಿರಿದು ಸ್ತ್ರೀಯರು ಆ ಉಪ್ಪರಿಗೆಗಳಲ್ಲಿದ್ದುದರಿಂದ ಭಾರವನ್ನು ಸಹಿಸಲಾರದೇ ಉಪ್ಪರಿಗೆಗಳೇ ಚಲಿಸುತ್ತಿರುವಂತೆ ಕಾಣುತ್ತಿದ್ದಿತು.) ರಾಜಮಾರ್ಗವು ಶ್ರೀಕೃಷ್ಣನ ದರ್ಶನಾಕಾಂಕ್ಷಿಗಳಾದ ಮಾನವರಿಂದ ತುಂಬಿ-ತುಳುಕುತ್ತಿರಲಾಗಿ, ಬಹುವೇಗವಾಗಿ ಹೋಗುವ ಸ್ವಭಾವವುಳ್ಳ ಶ್ರೀಕೃಷ್ಣನ ಕುದುರೆಗಳು ಮಂದಗತಿಯಲ್ಲಿ ಹೋಗುವಂತಾಯಿತು. (ಶ್ರೀಕೃಷ್ಣನನ್ನು ನೋಡುವ ಆಸೆಯಿಂದ ಜನರು ಮುಂದೆ ಮುಂದೆ ನುಗ್ಗಿಬರುತ್ತಿದ್ದುದರಿಂದ ಕುದುರೆಗಳು ತಮ್ಮ ವೇಗ ಗತಿಯನ್ನು ಕುಂಠಿತಗೊಳಿಸಿ ನಿಧಾನವಾಗಿ ಹೋಗಬೇಕಾಯಿತು.) ಶತ್ರುಕರ್ಶನನಾದ, ಪುಂಡರೀಕಾಕ್ಷನಾದ ಶ್ರೀಕೃಷ್ಣನು ಅನೇಕಪ್ರಾಸಾದಗಳಿಂದ ಶೋಭಾಯಮಾನವಾಗಿದ್ದ, ಬಿಳುಪಾದ ಕಾಂತಿಯಿಂದ ಕೂಡಿದ್ದ ಧೃತರಾಷ್ಟ್ರ

ರಾಜನ ಅರಮನೆಯನ್ನು ಪ್ರವೇಶಿಸಿದನು. ಶತ್ರುನಿಷೂದನನಾದ ಶ್ರೀಕೇಶವನು ಅರಮನೆಯ ಮೂರು ಹಜಾರಗಳನ್ನೂ (ಚೌಕಿಗಳನ್ನೂ) ದಾಟಿ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರರಾಜನ ಸಮೀಪಕ್ಕೆ ಹೋದನು. ದಾಶಾರ್ಹನು ತನ್ನ ಸಮೀಪಕ್ಕೆ ಆಗಮಿಸುತ್ತಿರಲಾಗಿ ಪ್ರಜ್ಞಾಚಕ್ಷುವಾದ, ಯಶೋವಂತನಾದ ಧೃತರಾಷ್ಟ್ರನು ಭೀಷ್ಮ-ದ್ರೋಣಾದಿಗಳೊಡನೆ ಎದ್ದು



ನಿಂತನು. ಜನಾರ್ದನನನ್ನು ಗೌರವಿಸುವ ಸಲುವಾಗಿ ಕೃಪ, ಸೋಮದತ್ತ, ಬಾಹ್ಲಿಕಮಹಾರಾಜ–ಇವರೆಲ್ಲರೂ ತಮ್ಮ-ತಮ್ಮ ಆಸನಗಳಿಂದ ಎದ್ದುನಿಂತರು. ಅನಂತರದಲ್ಲಿ ಶ್ರೀಕೃಷ್ಣನು ಯಶೋವಂತನಾದ ಧೃತರಾಷ್ಟ್ರನ ಬಳಿಗೆ ಹೋಗಿ ಅವನ ಸಮೀಪದಲ್ಲಿಯೇ ಇದ್ದ ಕುರುಕುಲಪಿತಾಮಹನಾದ ಭೀಷ್ಮನನ್ನು

ವಿನಮ್ರವಾದ ಮಾತುಗಳಿಂದ ಅಭಿನಂದಿಸಿದನು. ಹೀಗೆ ಅಭಿನಂದಿಸುವಾಗಲೂ ಧರ್ಮದ ಆನುಪೂರ್ವಿಯಿಂದಲೇ ಅವರನ್ನು ವಂದಿಸಿದನು. (ಧರ್ಮದ ಅನುಪೂರ್ವಿಯೆಂದರೆ ಧೃತರಾಷ್ಟ್ರಾದಿಗಳ ವಯಸ್ಸು, ಅವರ ಕುಲ-ಗೋತ್ರಗಳು, ಪಡೆದುಕೊಂಡಿರುವ ಯಶಸ್ಸು– ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಂಡು ಅದಕ್ಕನುಸಾರವಾಗಿ ಅವರನ್ನು ಗೌರವಿಸುವುದು. ಹೀಗೆ ಮಾಡುವಾಗ ಕೇವಲ ಐಶ್ವರ್ಯಕ್ಕೆ ಪ್ರಾಧಾನ್ಯವು ಬರುವುದಿಲ್ಲ. ಐಶ್ವರ್ಯವು ಗೌಣವಾಗಿ ಉಳಿಯುವುದು.) ಅನಂತರ ಮಧುಸೂದನನು ಅಲ್ಲಿ ನೆರೆದಿದ್ದ ರಾಜರನ್ನು ಒಬ್ಬರಾದ ಮೇಲೊಬ್ಬರಂತೆ ಸಂಧಿಸಿದನು. ರಾಜರ ವಯಸ್ಸನ್ನು ಗಣನೆಗೆ ತೆಗೆದುಕೊಂಡು ಹಿರಿಯರ ಆನುಪೂರ್ವಿಯಿಂದ ಶ್ರೀಕೃಷ್ಣನು ಅವರೆಲ್ಲರನ್ನೂ ಅಭಿನಂದಿಸಿದನು. ಶ್ರೀವಾಸುದೇವನು ಧೃತರಾಷ್ಟ್ರನನ್ನೂ ಮತ್ತು ಭೀಷ್ಮನನ್ನೂ ಸಂದರ್ಶಿಸಿದ ನಂತರದಲ್ಲಿ ಪುತ್ರಸಹಿತರಾದ ದ್ರೋಣಾಚಾರ್ಯರನ್ನೂ, ಬಾಹ್ಲಿಕರಾಜನನ್ನೂ, ಕೃಪರನ್ನೂ, ಸೋಮದತ್ತನನ್ನೂ ಸಂಧಿಸಿದನು. ಅಲ್ಲಿಯೇ ಒಂದೆಡೆಯಲ್ಲಿ ಸುಂದರವಾದ, ಸ್ವಚ್ಛವಾದ, ಸ್ವರ್ಣಮಯವಾದ, ವಿಶಾಲವಾದ ಆಸನವಿದ್ದಿತು. ಧೃತರಾಷ್ಟ್ರನ ಆಜ್ಞಾನುಸಾರವಾಗಿ ಶ್ರೀಕೃಷ್ಣನು ಆ ಭವ್ಯವಾದ ಆಸನದಲ್ಲಿ ಕುಳಿತನು. ಅನಂತರದಲ್ಲಿ ಧೃತರಾಷ್ಟ್ರನ ಪುರೋಹಿತರು ಜನಾರ್ದನನನ್ನು ಸತ್ಕರಿಸುವ ಸಲುವಾಗಿ ನ್ಯಾಯಸಮ್ಮತವಾದ ರೀತಿಯಲ್ಲಿ ಬಳುವಳಿಕೊಡಲು ಉತ್ತಮವಾದ ಗೋವನ್ನೂ, ಮಧುಪರ್ಕಸಾಮಗ್ರಿಗಳನ್ನೂ ಮತ್ತು ಅರ್ಘ್ಯ-ಪಾದ್ಯಾದಿಗಳಿಗಾಗಿ ಶುದ್ಧೋದಕವನ್ನೂ ತಂದರು. ಮಧುಪರ್ಕಪೂರ್ವಕವಾದ ಸತ್ಕಾರವು ಮುಗಿದನಂತರ ಗೋವಿಂದನು ಸ್ವಲ್ಪ ಕಾಲದವರೆಗೆ ನಗು-ನಗುತ್ತಲೇ ಕುರುರಾಜರ ಮಧ್ಯದಲ್ಲಿ ಒಬ್ಬೊಬ್ಬರನ್ನೂ ಮಾತನಾಡಿಸುತ್ತಾ ಅವರ ಹೆಸರು, ದೇಶ–ಮುಂತಾದುವನ್ನು ಕೇಳಿ ತಿಳಿದುಕೊಳ್ಳುತ್ತಾ, ಅವರಿಗೂ ತನಗೂ ಇರಬಹುದಾದ ಹಿಂದಿನ ಸಂಬಂಧವನ್ನೂ ನೆನಪುಮಾಡಿಕೊಳ್ಳುತ್ತಾ ಸುಖಸಂಕಥಾವಿನೋದಗಳಲ್ಲಿ ನಿರತನಾಗಿದ್ದನು.

ಧೃತರಾಷ್ಟ್ರನಿಂದ ಪೂಜಿತನಾದ ಮತ್ತು ಸಮ್ಮಾನಿತನಾದ ಯಶೋವಂತನಾದ ಶ್ರೀಕೃಷ್ಣನು ಅನಂತರದಲ್ಲಿ ರಾಜನ ಅನುಜ್ಞೆಯನ್ನು ಪಡೆದು ರಾಜಭವನವನ್ನು ಬಿಟ್ಟು ಹೊರಟನು. ಹಿಂದೆಯೇ ಹೇಳಿದಂತೆ ಕುರುರಾಜ

ಕುಮಾರರೊಡನೆ ನ್ಯಾಯಸಮ್ಮತವಾದ ರೀತಿಯಲ್ಲಿ ಕಲೆತು, ಯಥೋಚಿತವಾದ ಮಾತುಗಳನ್ನಾಡಿದನಂತರ ಮಾಧವನು ಬಹುರಮ್ಯವಾಗಿದ್ದ ವಿದುರನ ಮನೆಯನ್ನು ಪ್ರವೇಶಿಸಿದನು. ಅನಿರೀಕ್ಷಿತವಾಗಿ ತನ್ನ ಮನೆಗೆ ಆಗಮಿಸಿದ ಶ್ರೀಕೃಷ್ಣನನ್ನು ವಿದುರನು ಸಕಲವಿಧವಾದ ಮಂಗಳದ್ರವ್ಯಗಳೊಡನೆ ಎದುರುಗೊಂಡು ಸಮಸ್ತಗುಣಪರಿಪೂರ್ಣವಾದ ಇಚ್ಛಾವಸ್ತುಗಳಿಂದ



ಮನಸ್ತೃಪ್ತಿಯಾಗುವಂತೆ ಆರಾಧಿಸಿದನು. ಅನಂತರ ವಿದುರನು, ಪೂಜೆಯಿಂದ ಸುಪ್ರೀತನಾದ ಶ್ರೀಕೃಷ್ಣನನ್ನು ಕುರಿತು ಹೇಳಿದನು :

**ಯಾ ಮೇ ಪ್ರೀತಿಃ ಪುಷ್ಕರಾಕ್ಷ ತ್ವದ್ದರ್ಶನಸಮುದ್ಭವಾ ।**
**ಸಾ ಕಿಮಾಖ್ಯಾಯತೇ ತುಭ್ಯಮನ್ತರಾತ್ಮಾಸಿ ದೇಹಿನಾಮ್ ॥೨೪॥**

"ಪುಷ್ಕರಾಕ್ಷ! ಮಾಧವ! ಶ್ರೀಕೃಷ್ಣ! ಪ್ರಭೋ! ನಿನ್ನ ದಿವ್ಯದರ್ಶನದಿಂದಾಗಿ ನನ್ನ ಹೃದಯದಲ್ಲುಂಟಾಗಿರುವ ಸಂತೋಷವನ್ನು ನಾನೇನೆಂದು ಹೇಳಲಿ? ಏನೆಂದು ವರ್ಣಿಸಲಿ? ಮಹಾನುಭಾವ! ನಾನಿಂದು ಆನಂದ ಸಾಗರದಲ್ಲಿ ಮುಳುಗಿಹೋಗಿಬಿಟ್ಟಿದ್ದೇನೆ. ಆದರೆ ನಿನ್ನ ದಿವ್ಯದರ್ಶನದಿಂದ ನನ್ನ ಹೃದಯದಲ್ಲಿ ಯಾವ ವಿಧವಾದ ಪ್ರಸನ್ನತೆಯುಂಟಾಗಿದೆಯೆಂಬುದನ್ನು ನಾನು ನಿನಗೆ ಹೇಳುವ ಕಾರಣವಿಲ್ಲ. ನೀನು ಸಕಲಪ್ರಾಣಿಗಳ ಅಂತರಾತ್ಮನೇ ಆಗಿರುವೆಯಲ್ಲವೇ? ಸಕಲಪ್ರಾಣಿಗಳ ಹೃನ್ಮಂದಿರಗಳಲ್ಲಿಯೂ ವಾಸಿಸುತ್ತಿರುವ ನಿನಗೆ ನನ್ನ ಹೃನ್ಮಂದಿರದಲ್ಲುಂಟಾಗಿರುವ ವಿಕಾಸವೂ ತಿಳಿದೇ ಇದೆ"–ಹೀಗೆಂದು ಹೇಳಿದ ವಿದುರನು ಶ್ರೀಕೃಷ್ಣನಿಗೆ ಯಥೋಚಿತವಾಗಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಿದನು. ಅನಂತರ ಸಕಲಧರ್ಮಜ್ಞನಾದ, ಬುದ್ಧಿವಂತರಲ್ಲಿ ಶ್ರೇಷ್ಠನಾದ ವಿದುರನು–ಸತ್ಕೃತನಾದ, ಪ್ರಿಯಸುಹೃದನಾದ, ಮಧುಸೂದನನಾದ ಗೋವಿಂದನನ್ನು ಕುರಿತು ಪಾಂಡುಪುತ್ರರ ಸಂಬಂಧವಾದ ಕುಶಲಪ್ರಶ್ನೆಗಳನ್ನು ಮಾಡಿದನು. (ಪಾಂಡುಪುತ್ರರ ಯೋಗ-ಕ್ಷೇಮಗಳನ್ನು ವಿಚಾರಿಸಿದನು.) ಪ್ರತ್ಯಕ್ಷವಾಗಿಯೇ ನೋಡಿ ಎಲ್ಲ ವಿಷಯಗಳನ್ನೂ ತಿಳಿದುಕೊಂಡಿದ್ದ ಶ್ರೀಕೃಷ್ಣನು ಧರ್ಮತತ್ಪರನಾದ, ಸತ್ಪುರುಷನಾದ, ಕೋಪರಹಿತನಾದ, ಧೀಮಂತನಾದ, ವಿದುರನಿಗೆ ಪಾಂಡವರ ಎಲ್ಲ ಕಾರ್ಯಗಳನ್ನೂ ಸವಿಸ್ತರವಾಗಿ ಹೇಳಿದನು.

೮೯ನೆಯ ಅಧ್ಯಾಯವು ಮುಗಿಯಿತು.

೯೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಕುಂತಿಯ ಸಮೀಪಕ್ಕೆ ಹೋದುದು: ಪುತ್ರರನ್ನು ನೆನೆದು ವಿಲಪಿಸಿದ ಕುಂತಿಯನ್ನು ಸಮಾಧಾನಗೊಳಿಸಿದುದು

ಜನಮೇಜಯ! ಹಿಂದೆ ಹೇಳಿದ ರೀತಿಯಲ್ಲಿ ಶ್ರೀಕೃಷ್ಣನು ವಿದುರನ ಮನೆಗೆ ಹೋಗಿ ಅವನ ಆತಿಥ್ಯವನ್ನು ಸ್ವೀಕರಿಸಿದನು. ಮಧ್ಯಾಹ್ನಾನಂತರ ಶತ್ರುಧ್ವಂಸಕನಾದ ಜನಾರ್ದನನು ತನ್ನ ತಂದೆಯ ತಂಗಿಯಾದ (ಸೋದರತ್ತೆಯಾದ) ಕುಂತೀದೇವಿಯ ಬಳಿಗೆ ಹೋದನು. ಪ್ರಸನ್ನನಾದ ಸೂರ್ಯನ ಪ್ರಕಾಶಕ್ಕೆ ಸಮಾನವಾದ ಪ್ರಕಾಶದಿಂದ ಕಂಗೊಳಿಸುತ್ತಿದ್ದ ಶ್ರೀಕೃಷ್ಣನು

ತನ್ನ ಬಳಿಗೆ ಬರುತ್ತಿರುವುದನ್ನು ನೋಡಿದ ಕುಂತಿಯು ತಾನೇ ಒಂದೆರಡು ಹೆಜ್ಜೆಗಳು ಮುಂದೆ ನಡೆದು ಶ್ರೀಕೃಷ್ಣನನ್ನು ಬಾಚಿತಬ್ಬಿಕೊಂಡು ತನ್ನ ಮಕ್ಕಳನ್ನು ಸ್ಮರಿಸುತ್ತಾ ಗೋಳಾಡಿದಳು. ಸತ್ತ್ವಶಾಲಿಗಳಾದ ತನ್ನ ಮಕ್ಕಳ ಜೊತೆಯಲ್ಲಿದ್ದುಕೊಂಡು ಅವರೊಡನೆ ಸರಸಸಲ್ಲಾಪ ಮಾಡುತ್ತಿದ್ದಾಗ ನೋಡಿದ್ದ ವೃಷ್ಣಿಕುಲನಂದನನಾದ ಗೋವಿಂದನನ್ನು ಬಹಳ ಕಾಲಾನಂತರ ದಲ್ಲಿ ಪುನಃ ನೋಡಿದ ಕುಂತಿಯು ಶ್ರೀಕೃಷ್ಣನನ್ನು ಬಾಚಿತಬ್ಬಿಕೊಂಡು ಗಳ-ಗಳನೆ ಅತ್ತುಬಿಟ್ಟಳು. ಶ್ರೀಕೃಷ್ಣನು ಅತ್ತೆಯ ಕಣ್ಣೊರೆಸಿ ಸಮಾಧಾನ ಪಡಿಸಿದನು. ಕುಂತಿಯು ಶ್ರೀಕೃಷ್ಣನನ್ನು ಆಸನದಲ್ಲಿ ಕುಳ್ಳಿರಿಸಿ ಯಥೋಚಿತ ವಾಗಿ ಸತ್ಕರಿಸಿದಳು. ವಿಷಣ್ಣವದನೆಯಾಗಿದ್ದ ಕುಂತಿಯು ಬಿಕ್ಕಿ-ಬಿಕ್ಕಿ ಅಳುತ್ತಾ, ಕಣ್ಣೀರು ಸುರಿಸುತ್ತಾ, ಸ್ಪಷ್ಟವಾಗಿ ಮಾತಾಡಲಾಗದೇ ಗದ್ಗದಧ್ವನಿಯಿಂದ–ಆಸನದಲ್ಲಿ ಉಪವಿಷ್ಟನಾಗಿದ್ದ ಯೋಧಶ್ರೇಷ್ಠನಾದ ಶ್ರೀಕೃಷ್ಣನನ್ನು ಕುರಿತು ಹೇಳಿದಳು :

“ವಾಸುದೇವ! ಯಾವ ನನ್ನ ಮಕ್ಕಳು ಬಾಲ್ಯದಿಂದಲೂ ಗುರು ಶುಶ್ರೂಷೆಯಲ್ಲಿಯೇ ನಿರತರಾಗಿದ್ದರೋ, ಅನ್ಯೋನ್ಯವಾಗಿ ಸ್ನೇಹಭಾವ ದಿಂದಿರುತ್ತಿದ್ದರೋ, ಜನಸಮುದಾಯದಲ್ಲಿರಲು ಅಥವಾ ಜನನಾಯಕರಾಗಲು ಅರ್ಹರಾಗಿದ್ದರೋ–ಅಂತಹ ನನ್ನ ಮಕ್ಕಳು ವಂಚನೆಯ ಮೂಲಕ ರಾಜ್ಯ ಭ್ರಷ್ಟರಾಗಿ ನಿರ್ಜನವಾದ ಅರಣ್ಯಕ್ಕೆ ಹೊರಟುಹೋದರು. ಜನಾರ್ದನ! ನನ್ನ ಮಕ್ಕಳು ಕ್ರೋಧ-ಹರ್ಷಗಳೆರಡನ್ನೂ ಜಯಿಸಿದ್ದರು. ಉದ್ವೇಗದ ಸ್ಥಿತಿಯಲ್ಲಿದ್ದರೂ ಕೋಪಗೊಳ್ಳುತ್ತಿರಲಿಲ್ಲ. ಸುಖವು ಬಂದಾಗ ಹೆಚ್ಚು ಸಂತೋಷಿಸುತ್ತಲೂ ಇರಲಿಲ್ಲ. ಸಮಭಾವದಿಂದಿರುತ್ತಿದ್ದರು. ಸರ್ವಸಮತ್ವ ವನ್ನು ಸಾಧಿಸಿದ್ದರು. ದ್ವಂದ್ವಾತೀತರಾಗಿದ್ದರು. ಬ್ರಾಹ್ಮಣರ ಹಿತರಕ್ಷಣೆ ಮಾಡುತ್ತಿದ್ದರು. ಸತ್ಯವಾದಿಗಳಾಗಿದ್ದರು. ಅಂತಹ ಪಾರ್ಥರು ತಮಗೆ ಪ್ರಿಯರಾದವರನ್ನೂ ಮತ್ತು ಸುಖವನ್ನೂ ತ್ಯಜಿಸಿ, ಮಕ್ಕಳ ವಿಯೋಗ ದುಃಖವನ್ನು ತಡೆದುಕೊಳ್ಳಲಾರದೇ ಗೋಳಿಡುತ್ತಿದ್ದ ನನ್ನನ್ನೂ ಇಲ್ಲಿಯೇ ಬಿಟ್ಟು ಅರಣ್ಯಕ್ಕೆ ಹೊರಟುಹೋದರು. ಹೋದವರು ಸುಮ್ಮನೇ ಹೋದರೇ? ಕೇಶವ! ಅರಣ್ಯಕ್ಕೆ ತೆರಳಿದ ಅವರು ನನ್ನ ಹೃದಯವನ್ನೇ ಸಮೂಲವಾಗಿ ಕಿತ್ತುಕೊಂಡು ಹೊರಟುಹೋದರು. (ನನ್ನ ಶರೀರವೊಂದು ಇಲ್ಲುಳಿಯಿತೇ

ಹೊರತು ನನ್ನ ಹೃದಯವು ಅವರೊಡನೆಯೇ ಹೊರಟುಹೋಗಿದೆ.) ಮಹಾತ್ಮ ರಾದ ಆ ನನ್ನ ಮಕ್ಕಳು ಈ ವಿಧವಾದ ಕಷ್ಟವನ್ನು ಖಂಡಿತವಾಗಿಯೂ ಅನುಭವಿಸಬಾರದಾಗಿತ್ತು. ಹೀಗಿದ್ದರೂ ಅವರೇಕೆ ಇಂತಹ ಪರಮದಾರುಣ ವಾದ ಕಷ್ಟಕ್ಕೆ ಭಾಗಿಗಳಾದರು? ಕೃಷ್ಣ! ಅವರು ಬಾಲಕರಾಗಿದ್ದಾಗ ಸಿಂಹ, ವ್ಯಾಘ್ರ ಮತ್ತು ಆನೆಗಳಿಂದ ನಿಬಿಡವಾಗಿದ್ದ ಕಾಡಿನಲ್ಲಿ ವಾಸಮಾಡುತ್ತಿದ್ದರು. ತಂದೆಯನ್ನು ಕಳೆದುಕೊಂಡು ಅವರು ಕೇವಲ ಅಬಲೆಯಾದ ನನ್ನಿಂದ ಲಾಲಿತ ರಾದರು. ಈಗಲಾದರೋ ಅವರ ಸ್ಥಿತಿಯು ಇನ್ನೂ ಹೀನವಾಗಿದೆ. ಅಂದವ ರನ್ನು ಲಾಲಿಸಿ-ಪೋಷಿಸಲು ನಾನಾದರೂ ಅವರ ಜೊತೆಯಲ್ಲಿದ್ದೆನು. ಈಗವರು ತಾಯಿ-ತಂದೆಗಳಿಬ್ಬರಿಂದಲೂ ವಿಹೀನರಾಗಿ ಮಹಾರಣ್ಯದಲ್ಲಿ ಹನ್ನೆರಡು ವರ್ಷಗಳನ್ನು ಹೇಗೆ ಕಳೆದರು? ಕೇಶವ! ಬಾಲ್ಯದಿಂದಲೂ ಈ ನನ್ನ ಮಕ್ಕಳು ಶಂಖ ಮತ್ತು ದುಂದುಭಿಗಳ ಘೋಷದಿಂದಲೂ, ವೇಣು-ಮೃದಂಗಾದಿಗಳ ಸುಶ್ರಾವ್ಯವಾದ ಧ್ವನಿಗಳಿಂದಲೂ ಎಚ್ಚರಗೊಳ್ಳುತ್ತಿದ್ದರು. ಹಿಂದಿನ ಆ ದಿನಗಳಲ್ಲಿ ಅವರು ಪ್ರಾಸಾದಗಳ ಅಗ್ರಭಾಗಗಳಲ್ಲಿ ರಂಕುಮೃಗಚರ್ಮಗಳಿಂದ ಆಚ್ಛಾದಿತವಾದ ಸುಪತ್ತಿಗೆಗಳಲ್ಲಿ ಮಲಗಿರುತ್ತಿದ್ದಾಗ–ಆನೆಗಳು ಮಾಡುತ್ತಿದ್ದ ಗರ್ಜನೆಗಳಿಂದಲೂ, ಕುದುರೆಗಳ ಕೆನೆಯುವ ಶಬ್ದಗಳಿಂದಲೂ, ರಥನೇಮಿಗಳ ಗಂಭೀರಶಬ್ದಗಳಿಂದಲೂ ಎಚ್ಚರಗೊಳ್ಳುತ್ತಿದ್ದರು. ಶಂಖ ಮತ್ತು ಭೇರಿಗಳ ನಿನಾದಗಳಿಂದಲೂ, ಬ್ರಾಹ್ಮಣರು ಮಾಡುತ್ತಿದ್ದ ಪುಣ್ಯಾಹಘೋಷಗಳೊಡನೆ ಸೇರಿರುತ್ತಿದ್ದ ವೇಣು-ವೀಣಾನಾದಗಳ ಸುಮಧುರಧ್ವನಿಗಳಿಂದಲೂ ಎಚ್ಚರಗೊಳ್ಳುತ್ತಿದ್ದರು. ಬ್ರಾಹ್ಮಣರ ಸ್ವಸ್ತಿವಾಚನಯುಕ್ತವಾದ ಆಶೀರ್ವಾದಗಳಿಂದ ಗೌರವಿಸಲ್ಪಡುತ್ತಿದ್ದ ನನ್ನ ಮಕ್ಕಳು ಬ್ರಾಹ್ಮಣರನ್ನು ವಸ್ತ್ರ, ರತ್ನ ಮತ್ತು ಅಲಂಕಾರವಸ್ತುಗಳಿಂದ ಸಂಪೂಜಿಸುತ್ತಿದ್ದರು. ಮಹಾತ್ಮರಾದ ಬ್ರಾಹ್ಮಣರು ಮಂಗಳಯುಕ್ತವಾದ ವಸ್ತುಗಳಿಂದ ಅಭಿನಂದಿತರಾಗುತ್ತಿದ್ದರು. ಪೂಜಿತರಾದ ಮತ್ತು ಪೂಜಾರ್ಹರಾದ ಸತ್ಪುರುಷರೂ ವಂದಿ-ಮಾಗಧರೂ ಪಾಂಡವರ ಗುಣಗಾನಮಾಡುತ್ತಿದ್ದರು. ಆ ಪರಿಸರದಲ್ಲಿ ಅನುದಿನವೂ ಎಚ್ಚರಗೊಳ್ಳುತ್ತಿದ್ದ ಪಾಂಡವರು ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ಇಡೀ ರಾತ್ರಿಯಲ್ಲಿ ಹಿಂಸ್ರ ಪ್ರಾಣಿಗಳ ಕ್ರೂರಶಬ್ದಗಳನ್ನು ಕೇಳುತ್ತಾ ನಿದ್ರೆಯನ್ನೇ ಮಾಡುತ್ತಿರಲಿಲ್ಲ ವೆಂದು ತೋರುತ್ತದೆ. ಇಂತಹ ದುರ್ದೆಸೆಗೆ ಅವರು ಈಡಾಗಬಾರದಾಗಿತ್ತು.

ಕೃಷ್ಣ! ಭೇರೀ-ಮೃದಂಗಗಳ ನಿನಾದಗಳಿಂದಲೂ, ಶಂಖ-ವೇಣುಗಳ ನಿಃಸ್ವನ ಗಳಿಂದಲೂ, ಸ್ತ್ರೀಯರ ಮಧುರಗೀತನಿನಾದಗಳಿಂದಲೂ, ವಂದಿ-ಮಾಗಧ-ಸೂತರ ಸ್ತೋತ್ರಗಳಿಂದಲೂ ಎಚ್ಚರಗೊಳ್ಳುತ್ತಿದ್ದ ಆ ನನ್ನ ಮಕ್ಕಳು ಮಹಾರಣ್ಯದಲ್ಲಿ ಹಿಂಸ್ರಮೃಗಗಳ ಧ್ವನಿಯಿಂದ ಎಚ್ಚರಗೊಳ್ಳುವ ದುಃಸ್ಥಿತಿಗೆ ಬರುವಂತಾಯಿತು. ಅವರಿಗಿಂತಹ ದುಃಸ್ಥಿತಿಯು ಏಕೆ ಪ್ರಾಪ್ತವಾಯಿತು? ಕೃಷ್ಣ!

ವಾಸುದೇವ! ನಿನಗೆ ತಿಳಿದಿರುವಂತೆಯೇ ನನ್ನ ಮಕ್ಕಳು ಸಾಮಾನ್ಯರಲ್ಲ. ಪರಮಧಾರ್ಮಿಕರು. ಅಮಿತಪರಾಕ್ರಮಿಗಳು. ನನ್ನ ಹಿರಿಯ ಮಗನಾದ ಯುಧಿಷ್ಠಿರನು ಪರಮಧಾರ್ಮಿಕನು.

ಹ್ರೀಮಾನ್ಸತ್ಯಧೃತಿರ್ದಾನ್ತೋ ಭೂತಾನಾಮನುಕಮ್ಪಿತಾ ॥೧೭॥

ಕಾಮದ್ವೇಷೌ ವಶೇ ಕೃತ್ವಾ ಸತಾಂ ವರ್ತ್ಮಾನುವರ್ತತೇ ।
ಅಮ್ಬರೀಷಸ್ಯ ಮಾನ್ಧಾತುರ್ಯಯಾತೇರ್ನಹುಷಸ್ಯ ಚ ॥೧೮॥

ಭರತಸ್ಯ ದಿಲೀಪಸ್ಯ ಶಿಬೇರೌಶೀನರಸ್ಯ ಚ ।
ರಾಜರ್ಷೀಣಾಂ ಪುರಾಣಾನಾಂ ಧುರಂ ಧತ್ತೇ ದುರುದ್ವಹಾಮ್ ॥೧೯॥

ಶೀಲವೃತ್ತೋಪಸಮ್ಪನ್ನೋ ಧರ್ಮಜ್ಞಃ ಸತ್ಯಸಂಗರಃ ।
ರಾಜಾ ಸರ್ವಗುಣೋಪೇತಸ್ತ್ರೈಲೋಕ್ಯಸ್ಯಾಪಿ ಯೋ ಭವೇತ್ ॥೨೦॥

ಅಜಾತಶತ್ರುರ್ಧರ್ಮಾತ್ಮಾ ಶುದ್ಧಜಾಮ್ಬೂನದಪ್ರಭಃ ।
ಶ್ರೇಷ್ಠಃ ಕುರುಷು ಸರ್ವೇಷು ಧರ್ಮತಃ ಶ್ರುತವೃತ್ತತಃ ।
ಪ್ರಿಯದರ್ಶೋ ದೀರ್ಘಭುಜಃ ಕಥಂ ಕೃಷ್ಣ ಯುಧಿಷ್ಠಿರಃ ॥೨೧॥

ನನ್ನ ಹಿರಿಯ ಮಗನಾದ ಯುಧಿಷ್ಠಿರನು ಲಜ್ಜಾಶೀಲನು ; ಸತ್ಯನಿಷ್ಠನು ; ಜಿತೇಂದ್ರಿಯನು ; ಸರ್ವಪ್ರಾಣಿಗಳ ವಿಷಯದಲ್ಲಿಯೂ ದಯಾಪರನು ; ಕಾಮ (ರಾಗ) ಮತ್ತು ದ್ವೇಷ–ಇವೆರಡನ್ನೂ ವಶದಲ್ಲಿಟ್ಟುಕೊಂಡಿರುವವನು (ರಾಗ-ದ್ವೇಷರಹಿತನಾದವನು.) ಸತ್ಪುರುಷರ ಮಾರ್ಗವನ್ನೇ ಅನುಸರಿಸಿ ನಡೆಯತಕ್ಕವನು. ಅಂಬರೀಷ, ಮಾಂಧಾತಾ, ಯಯಾತಿ,

ನಹುಷ, ಭರತ, ದಿಲೀಪ, ಉಶೀನರನ ಪುತ್ರನಾದ ಶಿಬಿ–ಮುಂತಾದ ಪೂರ್ವಕಾಲದ ರಾಜರ್ಷಿಗಳಂತೆ–ಸಾಮಾನ್ಯರು ಹೊರಲಸಾಧ್ಯವಾದ ಭಾರವನ್ನು ಹೊತ್ತಿದ್ದಾನೆ. (ಅವರೆಲ್ಲರೂ ಧರ್ಮಧುರವನ್ನು ಹೊತ್ತಿದ್ದರು. ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದರು. ಅವರಂತೆಯೇ ಇವನೂ ಪರಮ ಧಾರ್ಮಿಕನಾಗಿರಲು ನಿಶ್ಚಯಿಸಿದ್ದಾನೆ. ಧರ್ಮದ ಧುರವೆಂಬುದು ರಾಜ್ಯಧುರಕ್ಕಿಂತಲೂ ಬಹುಭಾರವಾದುದು. ಬಹುಕಠಿನವಾದುದು.) ಧರ್ಮಜನು ಶೀಲ ಮತ್ತು ಸದ್ವೃತ್ತಗಳಿಂದ ಪರಿಪೂರ್ಣನಾದವನು ; (ಸದಾಚಾರಸಂಪನ್ನನು ;) ಧರ್ಮಜ್ಞನು ; ಸತ್ಯಪ್ರತಿಜ್ಞನು. ಸಕಲ ಗುಣಪರಿಪೂರ್ಣನಾದ ಯಾವನು ಮೂರು ಲೋಕಗಳಿಗೂ ರಾಜನಾಗಲು ಅರ್ಹನೋ–ಅಂತಹ ಧರ್ಮಾತ್ಮನಾದ ಅಜಾತಶತ್ರುವಾದ ಯುಧಿಷ್ಠಿರನು ಶುದ್ಧವಾದ ಚಿನ್ನದ ಕಾಂತಿಯಿಂದ ಕೂಡಿದವನಾಗಿದ್ದಾನೆ. ಧರ್ಮದ ದೃಷ್ಟಿಯಿಂದಲೂ, ವಿದ್ಯೆಯ ದೃಷ್ಟಿಯಿಂದಲೂ, ನಡತೆಯ ದೃಷ್ಟಿಯಿಂದಲೂ ಅವನು ಕುರುರಾಜಕುಮಾರರಲ್ಲಿಯೇ ಶ್ರೇಷ್ಠನೆನಿಸಿದ್ದಾನೆ. ಪ್ರಿಯದರ್ಶನನೂ ದೀರ್ಘಬಾಹುವೂ ಆದ ನನ್ನ ಹಿರಿಯ ಮಗ ಯುಧಿಷ್ಠಿರನೇನು ಹೇಳಿದ್ದಾನೆ? ಕೃಷ್ಣ!

ಯಃ ಸ ನಾಗಾಯುತಪ್ರಾಣೋ ವಾತರಂಹಾ ಮಹಾಬಲಃ ।
ಸಾಮರ್ಷಃ ಪಾಣ್ಡವೋ ನಿತ್ಯಂ ಪ್ರಿಯೋ ಭ್ರಾತುಃ ಪ್ರಿಯಂಕರಃ ॥

ಕೀಚಕಸ್ಯ ತು ಸಜ್ಞಾತೇರ್ಯೋ ಹನ್ತಾ ಮಧುಸೂದನ ।
ಶೂರಃ ಕ್ರೋಧವಶಾನಾಂ ಚ ಹಿಡಿಮ್ಬಸ್ಯ ಬಕಸ್ಯ ಚ ॥೨೩॥

ಪರಾಕ್ರಮೇ ಶಕ್ರಸಮೋ ಮಾತರಿಶ್ವಸಮೋ ಬಲೇ ।
ಮಹೇಶ್ವರಸಮಃ ಕ್ರೋಧೇ ಭೀಮಃ ಪ್ರಹರತಾಂ ವರಃ ॥೨೪॥

ಕ್ರೋಧಂ ಬಲಮಮರ್ಷಂ ಚ ಯೋ ನಿಧಾಯ ಪರಂತಪಃ ।
ಜಿತಾತ್ಮಾ ಪಾಣ್ಡವೋಽಮರ್ಷೀ ಭ್ರಾತುಸ್ತಿಷ್ಠತಿ ಶಾಸನೇ ॥೨೫॥

ತೇಜೋರಾಶಿಂ ಮಹಾತ್ಮಾನಂ ವರಿಷ್ಠಮಮಿತೌಜಸಮ್ ।
ಭೀಮಂ ಪ್ರದರ್ಶನೇನಾಪಿ ಭೀಮಸೇನಂ ಜನಾರ್ದನ ॥೨೬॥

ತಂ ಮಮಾಚಕ್ಷ್ವ ವಾರ್ಷ್ಣೇಯ ಕಥಮದ್ಯ ವೃಕೋದರಃ ।
ಆಸ್ತೇ ಪರಿಘಬಾಹುಃ ಸ ಮಧ್ಯಮಃ ಪಾಣ್ಡವೋ ಬಲೀ ॥೨೭॥

ಮಧುಸೂದನ! ಭೀಮಪರಾಕ್ರಮನಾದ, ಮಹಾಬಲಿಷ್ಠನಾದ ಭೀಮಸೇನನು ಹತ್ತು ಸಾವಿರ ಆನೆಗಳ ಬಲವನ್ನು ಹೊಂದಿರುತ್ತಾನೆ. ವಾಯುವಿಗೆ ಸಮಾನವಾದ ವೇಗವುಳ್ಳವನಾಗಿದ್ದಾನೆ. ಮಹಾಬಲಿಷ್ಠನಾಗಿದ್ದಾನೆ. ಸ್ವಭಾವದಲ್ಲಿ ಅವನು ಅಸಹಿಷ್ಣುವೇ ಆದರೂ ಅಣ್ಣನಿಗೆ ಪ್ರಿಯವಾದ ಕಾರ್ಯವನ್ನೇ ಮಾಡತಕ್ಕವನು. ಆದುದರಿಂದಲೇ ಅವನು ಯುಧಿಷ್ಠಿರನಿಗೆ ಬಹು ಪ್ರಿಯನೇ ಆಗಿರುತ್ತಾನೆ. ಜ್ಞಾತಿ-ಬಾಂಧವಸಹಿತನಾದ ದುಷ್ಟಕೀಚಕನನ್ನು ಸಂಹಾರಮಾಡಿದವನು. ಕ್ರೋಧವಶರ ಮತ್ತು ಬಕ-ಹಿಡಿಂಬರ ಸಂಹಾರಕನು. ಪರಾಕ್ರಮದಲ್ಲಿ ಇಂದ್ರನಿಗೆ ಸಮಾನನಾದವನು. ಬಲದಲ್ಲಿ ವಾಯುದೇವನಿಗೆ ಸಮಾನನಾದವನು. ಕೋಪದಲ್ಲಿ ಮಹೇಶ್ವರನ ಕೋಪಕ್ಕೆ ಸಮಾನವಾದ ಕೋಪವುಳ್ಳವನು. ಶತ್ರುಭಯಂಕರನು. ಯುದ್ಧದಲ್ಲಿ ಶ್ರೇಷ್ಠನು. ಇಷ್ಟಿದ್ದರೂ ಅಣ್ಣನ ಮಾತಿಗೆ ಪ್ರತಿಹೇಳತಕ್ಕವನಲ್ಲ. ಯದ್ಯಪಿ ಭೀಮನು ಸಹನೆಯಿಲ್ಲದವನೇ ಆಗಿದ್ದರೂ ಮಹಾಕೋಪಿಷ್ಠನೇ ಆಗಿದ್ದರೂ–ಕೋಪವನ್ನೂ, ಬಲವನ್ನೂ, ಅಸಹಿಷ್ಣುತೆಯನ್ನೂ ಪರಂತಪನಾದ ಭೀಮನು ಬದಿಗೊತ್ತಿ ಜಿತಾತ್ಮನಾಗಿ ಅಣ್ಣನಾದ ಯುಧಿಷ್ಠಿರನ ಶಾಸನದಂತೆಯೇ ನಡೆಯತಕ್ಕವನಾಗಿದ್ದಾನೆ. ತೇಜಸ್ಸಿನ ರಾಶಿಯಂತೆಯೇ ಕಾಣುವ, ಮಹಾತ್ಮನಾದ, ಸರ್ವಶ್ರೇಷ್ಠನಾದ, ಅಮಿತೌಜಸ್ಕನಾದ, ನೋಡಲೂ ಹೆಸರಿಗೆ ತಕ್ಕಂತೆ ಭೀಮನಾಗಿ (ಬಹುಭಯಂಕರನಾಗಿ) ಕಾಣುವ ಭೀಮಸೇನನ ಸಮಾಚಾರಗಳನ್ನು ನನ್ನೊಡನೆ ಹೇಳು. ಪಾಂಡವರಲ್ಲಿ ಮಧ್ಯಮನಾದ, ಪರಿಘಕ್ಕೆ ಸಮಾನವಾದ ಬಾಹುಗಳಿಂದ ಕೂಡಿರುವ ವೃಕೋದರನು ಈಗ ಹೇಗಿದ್ದಾನೆ?

ಅರ್ಜುನೇನಾರ್ಜುನೋ ಯಃ ಸ ಕೃಷ್ಣ ಬಾಹುಸಹಸ್ರಿಣಾ ।
ದ್ವಿಬಾಹುಃ ಸ್ಪರ್ಧತೇ ನಿತ್ಯಮತೀತೇನಾಪಿ ಕೇಶವ ॥೨೮॥

ಕ್ಷಿಪತ್ಯೇಕೇನ ವೇಗೇನ ಪಞ್ಚ ಬಾಣಶತಾನಿ ಯಃ ।
ಇಷ್ವಸ್ತ್ರೇ ಸದೃಶೋ ರಾಜ್ಞಃ ಕಾರ್ತವೀರ್ಯಸ್ಯ ಪಾಣ್ಡವಃ ॥೨೯॥

**ತೇಜಸಾದಿತ್ಯಸದೃಶೋ ಮಹರ್ಷಿಸದೃಶೋ ದಮೇ ।**
**ಕ್ಷಮಯಾ ಪೃಥಿವೀತುಲ್ಯೋ ಮಹೇನ್ದ್ರಸಮವಿಕ್ರಮಃ ॥೩೦॥**

**ಆಧಿರಾಜ್ಯಂ ಮಹದ್ದೀಪ್ತಂ ಪ್ರಥಿತಂ ಮಧುಸೂದನ ।**
**ಆಹೃತಂ ಯೇನ ವೀರ್ಯೇಣ ಕುರೂಣಾಂ ಸರ್ವರಾಜಸು ॥೩೧॥**

**ಯಸ್ಯ ಬಾಹುಬಲಂ ಸರ್ವೇ ಪಾಣ್ಡವಾಃ ಪರ್ಯುಪಾಸತೇ ।**
**ಸ ಸರ್ವರಥಿನಾಂ ಶ್ರೇಷ್ಠಃ ಪಾಣ್ಡವಃ ಸತ್ಯವಿಕ್ರಮಃ ॥೩೨॥**

**ಯಂ ಗತ್ವಾಭಿಮುಖಃ ಸಂಖ್ಯೇ ನ ಜೀವನ್ಕಶ್ಚಿದಾವ್ರಜೇತ್ ।**
**ಯೋ ಜೇತಾ ಸರ್ವಭೂತಾನಾಮಜೇಯೋ ಜಿಷ್ಣುರಚ್ಯುತ ॥೩೩॥**

**ಯೋಽಪಾಶ್ರಯಃ ಪಾಣ್ಡವಾನಾಂ ದೇವಾನಾಮಿವ ವಾಸವಃ ।**
**ಸ ತೇ ಭ್ರಾತಾ ಸಖಾ ಚೈವ ಕಥಮದ್ಯ ಧನಂಜಯಃ ॥೩೪॥**

ಕೃಷ್ಣ! ನಮ್ಮ ಅರ್ಜುನನು ಎರಡೇ ತೋಳುಗಳಿಂದ ಕೂಡಿದವನಾಗಿದ್ದರೂ, ಪ್ರಾಚೀನಕಾಲದಲ್ಲಿ ಸಾವಿರ ತೋಳುಗಳಿಂದ ಕೂಡಿದ್ದ, ತನಗಿಂತಲೂ ಒಂಬೈನೂರ ತೊಂಬತ್ತೆಂಟು ತೋಳುಗಳನ್ನು ಹೆಚ್ಚಾಗಿ ಪಡೆದಿದ್ದ ಮಹಾಪರಾಕ್ರಮಿಯೆನಿಸಿದ್ದ ಕಾರ್ತವೀರ್ಯಾರ್ಜುನನೊಡನೆ ಸ್ಪರ್ಧಿಸುತ್ತಾನೆ. (ಅವನ ಪರಾಕ್ರಮಕ್ಕೆ ಇವನ ಪರಾಕ್ರಮವು ಅನುರೂಪವಾದುದೆಂದು ಹೇಳುತ್ತಾರೆ.) ಧನುರ್ವಿದ್ಯೆಯಲ್ಲಿ ನಮ್ಮ ಅರ್ಜುನನು ಕಾರ್ತವೀರ್ಯಾರ್ಜುನನಿಗೆ ಸದೃಶನೆಂಬುದರಲ್ಲಿ ತಥ್ಯಾಂಶವಿದೆ. ಯದ್ಯಪಿ ನಮ್ಮ ಅರ್ಜುನನು ಎರಡೇ ತೋಳುಗಳನ್ನು ಹೊಂದಿದ್ದರೂ ಐದು ನೂರು ಬಾಣಗಳನ್ನು ಏಕಕಾಲದಲ್ಲಿ ಸಮಾನವೇಗದಿಂದ ಪ್ರಯೋಗಿಸುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಅರ್ಥಾತ್ ಕಾರ್ತವೀರ್ಯನ ಸಾವಿರತೋಳುಗಳು ಮಾಡುವ ಕಾರ್ಯವನ್ನು ನಮ್ಮ ಅರ್ಜುನನ ಎರಡು ತೋಳುಗಳೇ ಮಾಡುತ್ತವೆ. ಆದುದರಿಂದ ಅರ್ಜುನನು ಧನುರ್ವಿದ್ಯೆಯಲ್ಲಿ ಕಾರ್ತವೀರ್ಯನಿಗೆ ಸರಿಸಮಾನನು. ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನೆನಿಸಿದ್ದಾನೆ. ಪೃಥ್ವೀದೇವಿಗಿರುವ ಕ್ಷಮಾಗುಣವು ಅರ್ಜುನನಿಗೂ ಇರುವುದು. ಮಹೇಂದ್ರನ ಪರಾಕ್ರಮಕ್ಕೆ ಅನುರೂಪವಾದ ಪರಾಕ್ರಮವು ನಮ್ಮ ಪಾರ್ಥನಿಗಿದೆ. ಪ್ರಪಂಚದಲ್ಲಿರುವ ಎಲ್ಲ ರಾಜರುಗಳಿಗಿಂತಲೂ ಕುರುಗಳು ಇಂದು ವಿಶಾಲವಾದ ಸಾಮ್ರಾಜ್ಯಕ್ಕೆ ಅಧಿಪತಿಗಳಾಗಿರು

ತ್ತಾರೆ. ಸುಪ್ರಸಿದ್ಧವಾದ ದೇದೀಪ್ಯಮಾನವಾದ ಕುರುಗಳಲ್ಲಿರುವ ಇಂದಿನ ಈ ಮಹಾಸಾಮ್ರಾಜ್ಯವು ಅರ್ಜುನನ ಬಾಹುಬಲದಿಂದಲೇ ವಿಸ್ತಾರಿತವಾಯಿತು. ಯಾವನ ಬಾಹುಬಲವನ್ನು ಎಲ್ಲ ಪಾಂಡವರೂ ಅವಲಂಬಿಸಿರುತ್ತಾರೆಯೋ–ಅವನು (ಅರ್ಜುನನು) ರಥಿಕರಲ್ಲಿ ಶ್ರೇಷ್ಠನೆನಿಸಿದ್ದಾನೆ. ಸತ್ಯಪರಾಕ್ರಮನಾಗಿದ್ದಾನೆ. ನಮ್ಮ ಅರ್ಜುನನಿಗೆದುರಾಗಿ ಯುದ್ಧಮಾಡಲು ಯಾವನೇ ಹೋದರೂ, ಅವನು ಎಂತಹ ಪರಾಕ್ರಮಿಯೇ ಆಗಿದ್ದರೂ ಜೀವಸಹಿತನಾಗಿ ಹಿಂದಿರುಗಲಾರನು. ಅರ್ಜುನನು ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳನ್ನೂ ಜಯಿಸುವ ಸಾಮರ್ಥ್ಯವನ್ನು ಪಡೆದಿರುತ್ತಾನೆ. ಆದರೆ ಮತ್ತೊಬ್ಬರಿಂದವನು ಜಯಿಸಲ್ಪಡತಕ್ಕವನಲ್ಲ. ಆದುದರಿಂದಲೇ ಅವನಿಗೆ 'ಜಿಷ್ಣು' ಎಂಬ ಅನ್ವರ್ಥನಾಮವೂ ಇದೆ. 'ಜಯವಾನ್ ಜಿಷ್ಣು ರುಚ್ಯತೇ.'

ಇಂದ್ರನು ಯಾವ ರೀತಿಯಲ್ಲಿ ದೇವತೆಗಳಿಗೆ ಆಶ್ರಯನಾಗಿರುವನೋ–ಅದೇ ರೀತಿಯಲ್ಲಿ ಅರ್ಜುನನು ಪಾಂಡವರಿಗೆ ಆಶ್ರಯನಾಗಿದ್ದಾನೆ. ಅರ್ಜುನನು ನಿನಗೆ ಸೋದರನೂ (ಸೋದರಸಮಾನನೂ) ನೆಚ್ಚಿನ ಮಿತ್ರನೂ ಆಗಿರುತ್ತಾನೆ. ಅವನೀಗ ಹೇಗಿರುವನು? ಕೃಷ್ಣ!

**ದಯಾವಾನ್ಸರ್ವಭೂತೇಷು ಹ್ರೀನಿಷೇವೋ ಮಹಾಸ್ತ್ರವಿತ್ ।**
**ಮೃದುಶ್ಚ ಸುಕುಮಾರಶ್ಚ ಧಾರ್ಮಿಕಶ್ಚ ಪ್ರಿಯಶ್ಚ ಮೇ ॥೩೫॥**

**ಸಹದೇವೋ ಮಹೇಷ್ವಾಸಃ ಶೂರಃ ಸಮಿತಿಶೋಭನಃ ।**
**ಭ್ರಾತೄಣಾಂ ಕೃಷ್ಣ ಶುಶ್ರೂಷುರ್ಧರ್ಮಾರ್ಥಕುಶಲೋ ಯುವಾ ॥೩೬॥**

**ಸದೈವ ಸಹದೇವಸ್ಯ ಭ್ರಾತರೋ ಮಧುಸೂದನ ।**
**ವೃತ್ತಂ ಕಲ್ಯಾಣವೃತ್ತಸ್ಯ ಪೂಜಯನ್ತಿ ಮಹಾತ್ಮನಃ ॥೩೭॥**

**ಜ್ಯೇಷ್ಠಾಪಚಾಯಿನಂ ವೀರಂ ಸಹದೇವಂ ಯುಧಾಂ ಪತಿಮ್ ।**
**ಶುಶ್ರೂಷುಂ ಮಮ ವಾರ್ಷ್ಣೇಯ ಮಾದ್ರೀಪುತ್ರಂ ಪ್ರಚಕ್ಷ್ವ ಮೇ ॥**

ಮಧುಸೂದನ! ಸಕಲಪ್ರಾಣಿಗಳ ವಿಷಯದಲ್ಲಿಯೂ ದಯಾಪರನಾದ, ಲಜ್ಜಾಶೀಲನಾದ, ಮಹಾಸ್ತ್ರಗಳನ್ನು ತಿಳಿದಿರುವ, ಮೃದುಸ್ವಭಾವದವನಾದ, ಸುಕುಮಾರನಾದ, ಧಾರ್ಮಿಕನಾದ, ನನಗೆ ಪರಮಪ್ರಿಯನಾದ, ಮಹಾಧನು

ರ್ಧರನಾದ, ಶೂರನಾದ, ಯುದ್ಧಭೂಮಿಗೇ ಅಲಂಕಾರಪ್ರಾಯನಾದ, ಅಣ್ಣಂದಿರ ಶುಶ್ರೂಷೆಯಲ್ಲಿ ಸದಾ ನಿರತನಾದ, ಧರ್ಮಾರ್ಥಕುಶಲನಾದ, ಯುವಕನಾದ, ಮಂಗಳಕರನಾದ, ಶುದ್ಧವಾದ ಆಚಾರ-ವ್ಯವಹಾರಗಳುಳ್ಳ, ತನ್ನ ಸದ್ವೃತ್ತಿಯಿಂದ ಯಾವಾಗಲೂ ಅಣ್ಣಂದಿರ ಪ್ರಶಂಸೆಗೆ ಪಾತ್ರನಾಗಿರುವ ಸಹದೇವನು ಏನು ಮಾಡುತ್ತಿರುವನೆಂಬುದನ್ನು ತಿಳಿಸು. ಯಾವನು ತನ್ನ ದೊಡ್ಡಣ್ಣನ ವಿಷಯದಲ್ಲಿ ಹೆಚ್ಚು ಅನುರಕ್ತನಾಗಿರುವನೋ, ವೀರನೋ, ಯೋಧರಲ್ಲಿ ಶ್ರೇಷ್ಠನೋ, ಯಾವಾಗಲೂ ನನ್ನ ಶುಶ್ರೂಷೆಯಲ್ಲಿಯೇ ನಿರತನಾಗಿರುತ್ತಿದ್ದನೋ–ಅಂತಹ ಮಾದ್ರೀಪುತ್ರನಾದ ಸಹದೇವನ ವಿಷಯವಾಗಿ ಹೇಳು.

**ಸುಕುಮಾರೋ ಯುವಾ ಶೂರೋ ದರ್ಶನೀಯಶ್ಚ ಪಾಣ್ಡವಃ ।**
**ಭ್ರಾತೄಣಾಂ ಚೈವ ಸರ್ವೇಷಾಂ ಪ್ರಿಯಃ ಪ್ರಾಣೋ ಬಹಿಶ್ಚರಃ ॥೩೯॥**

**ಚಿತ್ರಯೋಧೀ ಚ ನಕುಲೋ ಮಹೇಷ್ವಾಸೋ ಮಹಾಬಲಃ ।**
**ಕಚ್ಚಿತ್ಸಕುಶಲೀ ಕೃಷ್ಣ ವತ್ಸೋ ಮಮ ಸುಖೈಧಿತಃ ॥೪೦॥**

ಸುಕುಮಾರನಾದ, ಯುವಕನಾದ, ಶೂರನಾದ, ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನುವಷ್ಟು ಸುಂದರನಾಗಿರುವ, ಎಲ್ಲ ಸೋದರರಿಗೂ ಹೊರಗೆ ಸಂಚರಿಸುವ ಪ್ರಾಣರೂಪನಾಗಿರುವ (ಪ್ರಾಣಪ್ರಿಯನಾದ), ಚಿತ್ರಯೋಧಿಯಾದ, ಮಹಾಧನುರ್ಧರನಾದ, ಮಹಾಬಲನಾದ, ನನ್ನಿಂದ ಬಹುಸುಖವಾಗಿ ಪಾಲಿಸಲ್ಪಡುತ್ತಿದ್ದ ನನ್ನ ಮಗನಾದ ನಕುಲನು ಕುಶಲಿಯಾಗಿದ್ದಾನೆಯೇ?

**ಸುಖೋಚಿತಮದುಃಖಾರ್ಹಂ ಸುಕುಮಾರಂ ಮಹಾರಥಮ್ ।**
**ಅಪಿ ಜಾತು ಮಹಾಬಾಹೋ ಪಶ್ಯೇಯಂ ನಕುಲಂ ಪುನಃ ॥೪೧॥**

ಮಹಾಬಾಹುವೇ! ಸುಖಪಡಲು ಯೋಗ್ಯನಾದ, ದುಃಖಪಡಲು ಅನರ್ಹನಾದ, ಸುಕುಮಾರನಾದ, ಮಹಾರಥನಾದ, ಮಹಾಬಾಹುವಾದ ನನ್ನ ಪ್ರಿಯನಕುಲನನ್ನು ಪುನಃ ನಾನು ನೋಡುವೆನೇ?

**ಪಕ್ಷ್ಮ ಸಮ್ಪಾತಜೇ ಕಾಲೇ ನಕುಲೇನ ವಿನಾಕೃತಾ ।**
**ನ ಲಭಾಮಿ ಧೃತಿಂ ವೀರ ಸಾದ್ಯ ಜೀವಾಮಿ ಪಶ್ಯ ಮಾಮ್ ॥೪೨॥**

ವೀರಶ್ರೇಷ್ಠನೇ! ನಾನು ಈ ಹಿಂದೆ ಕಣ್ಣುರೆಪ್ಪೆ ಹೊಡೆಯುವಷ್ಟು ಕಾಲವೂ ನಕುಲನಿಂದ ಬೇರೆಯಾಗಿರಲು ಅಧೈರ್ಯಪಡುತ್ತಿದ್ದೆನು. ಅವನನ್ನು ಒಂದು ಕ್ಷಣವಾದರೂ ಬಿಟ್ಟಿರಲು ನನಗೆ ಧೈರ್ಯವೇ ಬರುತ್ತಿರಲಿಲ್ಲ. ಅಂತಹವಳಿಂದು ಅವನನ್ನಗಲಿ ಅನೇಕವರ್ಷಗಳು ಕಳೆದುಹೋದರೂ ಜೀವಿಸಿಯೇ ಇರುವ ನನ್ನ ಈಗಿನ ಧೈರ್ಯವನ್ನಾದರೂ ನೋಡು.

ಜನಾರ್ದನ! ನನ್ನ ಎಲ್ಲ ಮಕ್ಕಳಿಗಿಂತಲೂ ನನಗೆ ದ್ರೌಪದಿಯೇ ಪ್ರಿಯತಮಳು. ಅವಳು ಸತ್ಕುಲಪ್ರಸೂತಳು, ರೂಪಸಂಪನ್ನಳು ಮತ್ತು ಸಕಲಗುಣಪರಿಪೂರ್ಣಳು. ಪುತ್ರರೊಡನಿರುವುದಕ್ಕಿಂತಲೂ ಪತಿಗಳೊಡನಿರುವುದೇ ಶ್ರೇಷ್ಠವೆಂದು ಭಾವಿಸಿದ ಸತ್ಯವಾದಿನಿಯಾದ ದ್ರೌಪದಿಯು ತನ್ನ ಐವರು ಪ್ರಿಯಪುತ್ರರನ್ನೂ ಪರಿತ್ಯಜಿಸಿ ಪಾಂಡವರನ್ನೇ ಅನುಸರಿಸಿದಳು.

**ಮಹಾಭಿಜನಸಮ್ಪನ್ನಾ ಸರ್ವಕಾಮ್ಯೈಃ ಸುಪೂಜಿತಾ ।**
**ಈಶ್ವರೀ ಸರ್ವಕಲ್ಯಾಣೀ ದ್ರೌಪದೀ ಕಥಮಚ್ಯುತ ॥೪೫॥**

ಉತ್ತಮಕುಲಸಂಭೂತೆಯಾದ, ಪತಿಗಳಿಂದ ಸಕಲವಿಧವಾದ ಕಾಮನೆಗಳನ್ನೂ ಪೂರೈಸಿಕೊಳ್ಳುವುದರ ಮೂಲಕವಾಗಿ ಆದರಿಸಲ್ಪಡುತ್ತಿರುವ, ಮಹಾರಾಣಿಯಾದ, ಸರ್ವಮಂಗಳೆಯಾದ ದ್ರೌಪದಿಯೀಗ ಹೇಗಿರುವಳು? ಜನಾರ್ದನ!

ಅವಳ ದುರದೃಷ್ಟವನ್ನು ಏನೆಂದು ಹೇಳಲಿ? ಮಾಧವ! ಅವಳಿಗೆ ಐವರು ಪತಿಗಳು. ಅವರೆಲ್ಲರೂ ಮಹಾಶೂರರು. ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರು. ಶತ್ರುಗಳನ್ನು ಸಂಹರಿಸುವುದರಲ್ಲಿ ನಿಪುಣರು. ದೊಡ್ಡ-ದೊಡ್ಡ ಧನುಸ್ಸುಗಳನ್ನು ಹೊಂದಿರತಕ್ಕವರು. ಅಂತಹವರ ಜೊತೆಯಲ್ಲಿರುವ ದ್ರೌಪದಿಯು ದುಃಖಕ್ಕೀಡಾದಳೆಂದರೆ ಹೇಳುವುದೇನಿದೆ? ಕೃಷ್ಣ! ಇದು ಹದಿನಾಲ್ಕನೆಯ ವರ್ಷ. ಪುತ್ರವಿಯೋಗಸಂತಪ್ತಳಾಗಿರುವ, ಸತ್ಯವಾದಿನಿಯಾದ ದ್ರೌಪದಿಯನ್ನು ನಾನು ಕಂಡು ಹದಿಮೂರು ವರ್ಷಗಳೇ ಆದುವು.

**ನ ನೂನಂ ಕರ್ಮಭಿಃ ಪುಣ್ಯೈರಶ್ನುತೇ ಪುರುಷಃ ಸುಖಮ್ ।**
**ದ್ರೌಪದೀ ಚೇತ್ತಥಾವೃತ್ತಾ ನಾಶ್ನುತೇ ಸುಖಮವ್ಯಯಮ್ ॥೪೬॥**

ಸದಾಚಾರಳಾದ, ಸದ್ವೃತ್ತಳಾದ, ಸುಗುಣೆಯಾದ, ಸತ್ಕುಲಪ್ರಸೂತೆ ಯಾದ, ಪತಿಪರಾಯಣೆಯಾದ ದ್ರೌಪದಿಯೇ ತನ್ನ ಸತ್ಕರ್ಮಗಳಿಗೆ ಅನುಗುಣವಾದ ಅಕ್ಷಯವಾದ ಸುಖವನ್ನು ಪಡೆಯಲಿಲ್ಲವೆಂದಮೇಲೆ– ಪುಣ್ಯಕರ್ಮಗಳನ್ನು ಮಾಡುವುದರಿಂದ ಪುರುಷನು ಸುಖವನ್ನು ಪಡೆಯುತ್ತಾನೆಂಬುದು ಶುದ್ಧ ಸುಳ್ಳು, ಕೃಷ್ಣ! ನಿಶ್ಚಯವಾಗಿ ಹೇಳುವುದಾದರೆ–ಈ ಹಿಂದೆ ಹೇಳಿದಂತೆ ಯುಧಿಷ್ಠಿರನಾಗಲೀ, ಭೀಮನಾಗಲೀ, ಅರ್ಜುನನಾಗಲೀ, ನಕುಲ- ಸಹದೇವರೇ ಆಗಲೀ–ನನಗೆ ದ್ರೌಪದಿಗಿಂತಲೂ ಪ್ರಿಯರಲ್ಲ. ಏಕೆಂದರೆ: ಅವಳು ನನ್ನ ಮಕ್ಕಳಿಗಿಂತಲೂ ಹೆಚ್ಚು ದುಃಖವನ್ನು ಅನುಭವಿಸಿದ್ದಾಳೆ. ಅಂದು ಪಟ್ಟದರಸಿಯಾಗಿದ್ದ ದ್ರೌಪದಿಯನ್ನು ಸಭೆಗೆ ಸೆಳೆದುತಂದಾಗ ಯಾವ ದಾರುಣದೃಶ್ಯವನ್ನು ನೋಡಿದೆನೋ–ಅದಕ್ಕಿಂತಲೂ ದುಃಖಕರವಾದುದು ಯಾವುದಿದೆ? ಕೃಷ್ಣ! ಅದಕ್ಕಿಂತಲೂ ಹೆಚ್ಚಿನ ದುಃಖವು ನನಗೆ ಹಿಂದೆ ಯಾವಾಗಲೂ ಆಗಿರಲಿಲ್ಲ. ಮಾಧವ! ಕ್ರೋಧ-ಲೋಭಾಭಿಭೂತನಾದ, ಅನಾರ್ಯನಾದ ದುರ್ಯೋಧನನಿಂದ ದುಃಶಾಸನನ ಮೂಲಕವಾಗಿ ಸಭಾಭವನಕ್ಕೆ ದರ-ದರನೆ ಸೆಳೆದು ತರಿಸಲ್ಪಟ್ಟ, ತನ್ನ ಮಾವಂದಿರ (ಗುರುಜನರ) ಸಮೀಪದಲ್ಲಿ ನಿಂತಿದ್ದ, ರಜಸ್ವಲೆಯಾಗಿದ್ದ, ಏಕವಸ್ತ್ರಧರಳಾಗಿದ್ದ ದ್ರೌಪದಿ ಯನ್ನು ಸರ್ವಕುರುಗಳೂ ನೋಡುತ್ತಾ ಕುಳಿತಿದ್ದರು. ಆ ಮಹಾಸಭೆಯಲ್ಲಿ ಧೃತರಾಷ್ಟ್ರ, ಮಹಾರಾಜನಾದ ಬಾಹ್ಲಿಕ, ಕೃಪ, ಸೋಮದತ್ತ ಮತ್ತು ಇತರ ಕುರುವಂಶೀಯರಿದ್ದರೂ ಎಲ್ಲರೂ ನಿಷ್ಕ್ರಿಯರಾಗಿ ವಿಷಣ್ಣವದನರಾಗಿ ಕುಳಿತಿದ್ದರು. ಯಾರೂ ಪ್ರತಿಭಟಿಸಿ ಮಾತನಾಡಲಿಲ್ಲ. ಆದರೆ ಆ ಮಹಾ ಸಭೆಯಲ್ಲಿ ಆ ಹೀನಕೃತ್ಯವನ್ನು ವಿದುರನೊಬ್ಬನು ಮಾತ್ರ ಪ್ರತಿಭಟಿಸಿ ಮಾತನಾಡಿದನು. ಆದುದರಿಂದ ಆ ಸಭೆಯಲ್ಲಿ ಉಪಸ್ಥಿತರಾಗಿದ್ದವರಲ್ಲಿ ನಾನು ವಿದುರನೊಬ್ಬನನ್ನು ಮಾತ್ರವೇ ಗೌರವಿಸುವೆನು, ಕೃಷ್ಣ!

**ವೃತ್ತೇನ ಹಿ ಭವತ್ಯಾರ್ಯೋ ನ ಧನೇನ ನ ವಿದ್ಯಯಾ ॥೫೩॥**

ಸದ್ವೃತ್ತಿ-ಸದಾಚಾರಗಳಿಂದ ಮಾತ್ರವೇ ಒಬ್ಬ ಮನುಷ್ಯನು ಆರ್ಯ (ಪೂಜ್ಯ) ನಾಗುತ್ತಾನೆಯೇ ಹೊರತು ಅಪಾರಧನವನ್ನು ಪಡೆದಿರುವುದ ರಿಂದಾಗಲೀ, ಅಪಾರವಿದ್ಯೆಯನ್ನು ಕಲಿತಿರುವುದರಿಂದಾಗಲೀ–ಆರ್ಯನಾಗುವು

ದಿಲ್ಲ. ಕೃಷ್ಣ! ಮಹಾಬುದ್ಧಿಯಾದ, ಮಹಾತ್ಮನಾದ, ಗಂಭೀರಸ್ವಭಾವವುಳ್ಳ ವಿದುರನಿಗೆ ಅವನಲ್ಲಿರುವ ಶೀಲವೇ ಅಲಂಕಾರಪ್ರಾಯವಾಗಿದೆ. ಆ ಶೀಲವೇ ಲೋಕವಿಖ್ಯಾತಿಯನ್ನೂ ಪಡೆದಿದೆ. ವಿದುರನು ಸುಶೀಲನೆಂದು ಸರ್ವತ್ರ ಖ್ಯಾತಿಯನ್ನು ಪಡೆದಿರುತ್ತಾನೆ.”

ಜನಮೇಜಯ! ಕುಂತಿಗೆ ಆ ಸಮಯದಲ್ಲಿ ಸಂತೋಷ-ದುಃಖಗಳೆರಡೂ ಏಕಕಾಲದಲ್ಲುಂಟಾದುವು. ಜಗದಾನಂದಕಂದನಾದ ಶ್ರೀಕೃಷ್ಣನನ್ನು ನೋಡಿ ಆನಂದಭರಿತಳಾದಳು. ತನ್ನ ಮಕ್ಕಳ ದುರ್ಗತಿಯನ್ನು ನೆನೆದು ಪರಮ ದುಃಖಿತೆಯೂ ಆದಳು. ಅವಳು ಅನುಭವಿಸಿದ ಮತ್ತು ಅವಳ ಮಕ್ಕಳು ಅನುಭವಿಸಿದ ನಾನಾವಿಧವಾದ ದುಃಖಗಳನ್ನೂ ಶ್ರೀಕೃಷ್ಣನ ಮುಂದೆ ಹೃದಯವಿದ್ರಾವಕವಾಗುವ ರೀತಿಯಲ್ಲಿ ತೋಡಿಕೊಂಡಳು :

“ಕೃಷ್ಣ! ಹಿಂದಿನ ಕೆಲವು ರಾಜರಿಂದ ಯಾವ ಅಕ್ಷದ್ಯೂತ ಮತ್ತು ಮೃಗವಧೆಗಳು ಆಚರಿಸಲ್ಪಡುತ್ತಿದ್ದುವೋ–ಅದು ಈ ನನ್ನ ಮಕ್ಕಳಿಗೆ ಸುಖಾವಹವಾಯಿತೇನು? (ಪಗಡೆಯಾಡುವುದು. ಮೃಗಗಳನ್ನು ಬೇಟೆಯಾಡುವುದು ಇವುಗಳು ರಾಜವ್ಯಸನಗಳು.) ಈ ವ್ಯಸನಗಳನ್ನು ಕಟ್ಟಿಕೊಂಡ ನನ್ನ ಮಕ್ಕಳು ದುರ್ದೆಸೆಗೀಡಾಗಬೇಕಾಯಿತು ಮತ್ತು ಅದೇ ವ್ಯಸನವೇ ದ್ರೌಪದಿಯ ಮಾನಭಂಗಕ್ಕೂ ಕಾರಣವಾಯಿತು. ಅಂದಿನ ದೃಶ್ಯವು ಈಗಲೂ ನನ್ನ ಕಣ್ಣಮುಂದಿದೆ, ಕೃಷ್ಣ! ಅದನ್ನು ನೆನೆದೊಡನೆಯೇ ನನ್ನ ಹೃದಯವು ಬೆಂದುಹೋಗುತ್ತದೆ.

ಕುರುರಾಜರ ಸಮ್ಮುಖದಲ್ಲಿ ತುಂಬಿದ ಸಭೆಯಲ್ಲಿ ಧೃತರಾಷ್ಟ್ರನ ಮಕ್ಕಳಿಂದ ದ್ರೌಪದಿಯು ಮರಣರೂಪವಾದ ಕ್ಲೇಶವನ್ನೇ ಅನುಭವಿಸಿದಳು. ಅಂದು ತುಂಬಿದ ಸಭೆಯಲ್ಲಿ ಅವಳಿಗಾದ ಅಪಮಾನವು ನನ್ನ ಹೃದಯವನ್ನು ಇಂದೂ ದಹಿಸುತ್ತಿದೆ.

ನನ್ನ ಮಕ್ಕಳು ಪಟ್ಟಣದಿಂದ ಹೊರಟುದು, ಕಾಡು-ಮೇಡುಗಳಲ್ಲಿ ಅಲೆದಾಡಿದುದು ಮತ್ತು ಅಲ್ಲವರು ನಾನಾವಿಧವಾದ ಕಷ್ಟಗಳಿಗೆ ಗುರಿಯಾದುದು–ಈ ಎಲ್ಲವೂ ನನ್ನ ಸ್ಮರಣೆಯಲ್ಲಿದೆ, ಜನಾರ್ದನ!

ಬಾಲಕರಾದ ನನ್ನ ಮಕ್ಕಳ ಬಹುಕಷ್ಟಕರವಾದ ಅಜ್ಞಾತಚರ್ಯೆ, ಅವರು ಪುನಃ ರಾಜ್ಯವನ್ನು ಪಡೆದುಕೊಳ್ಳಲು ಉಂಟಾಗಿರುವ ತಡೆ–ಇವುಗಳು ನನಗೆ ಬಹುವಾದ ಕ್ಲೇಶವನ್ನುಂಟುಮಾಡಿವೆ. ನಾನು ನನ್ನ ಮಕ್ಕಳೊಡನಿದ್ದಿದ್ದರೆ ನನಗೆ ಇವು ಅಷ್ಟೊಂದು ಕ್ಲೇಶವಾಗಿ ಕಾಣುತ್ತಿರಲಿಲ್ಲ. ದುರ್ಯೋಧನನಿಂದ ವಂಚಿತರಾದ ನನ್ನ ಮಕ್ಕಳು ರಾಜ್ಯವನ್ನು ಕಳೆದುಕೊಂಡು ಹದಿಮೂರು ವರ್ಷಗಳಾದುವು. ಇದು ಹದಿನಾಲ್ಕನೆಯ ವರ್ಷ. ಸುಖೋಪಭೋಗಗಳಿಂದ ಪುಣ್ಯಕರ್ಮಗಳ ಫಲವೂ ಕ್ಷಯಿಸುವುದೆನ್ನುವುದಾದರೆ–ಕ್ಲೇಶಾನುಭವದಿಂದ ಪಾಪಕರ್ಮಗಳ ಫಲವೂ ಕ್ಷಯಿಸಲೇಬೇಕು, ಅಲ್ಲವೇ? ಕೃಷ್ಣ! ನನ್ನ ಮಕ್ಕಳು ಹದಿಮೂರು ವರ್ಷಗಳ ಕಾಲ ದುಃಖವನ್ನೇ ಅನುಭವಿಸಿರುವುದರಿಂದ ಅವರ ಪಾಪಕರ್ಮಗಳ ಫಲವೂ ಪೂರ್ಣವಾಗಿ ಕ್ಷಯಿಸಿ ಈಗ ಅವರಿಗೆ ಸುಖವು ಪ್ರಾಪ್ತವಾಗಲೇಬೇಕಲ್ಲವೇ? ದುರ್ಯೋಧನನು ಅಬಾಧಿತನಾಗಿ ಈ ಹದಿಮೂರು ವರ್ಷಗಳು ಸುಖೋಪಭೋಗಗಳನ್ನು ಅನುಭವಿಸಿರುವುದರಿಂದ ಅವನ ಪುಣ್ಯಕರ್ಮಗಳೆಲ್ಲವೂ ಕ್ಷಯಿಸಿ ಅವನು ಮುಂದೆ ದುಃಖಕ್ಕೆ ಭಾಗಿಯಾಗಲೇಬೇಕಲ್ಲವೇ?

(ಈ ಸಂದರ್ಭದಲ್ಲಿ ಕುಂತಿಯು ಪುಣ್ಯ-ಪಾಪಗಳ ಫಲಕ್ಷಯದ ವಿಷಯವನ್ನು ತನ್ನ ಮಕ್ಕಳಿಗೆ ಅನ್ವಯಿಸಿ ತಾರ್ಕಿಕವಾಗಿ ಮಾತನಾಡಿದ್ದಾಳೆ. ಪುಣ್ಯಫಲಕ್ಷಯವೆಂಬುದು–ಭೂಲೋಕದಲ್ಲಿ ಪುಣ್ಯಮಾಡಿ ಆ ಪುಣ್ಯಕರ್ಮದ ಫಲದಿಂದ ಮರಣಾನಂತರದಲ್ಲಿ ಸ್ವರ್ಗವನ್ನು ಪಡೆದು ಅಲ್ಲಿಯ ಸುಖೋಪಭೋಗಗಳನ್ನು ಅನುಭವಿಸುವುದು. ಸ್ವರ್ಗದಲ್ಲಿ ಪಾಪ ಮತ್ತು ಪುಣ್ಯಕರ್ಮಗಳನ್ನು ಮಾಡುವ ಸಾಧ್ಯತೆಯಿಲ್ಲ. ಭೂಲೋಕದಲ್ಲಿ ಮಾಡಿದ ಪುಣ್ಯಕರ್ಮಕ್ಕೆ ಅನುಗುಣವಾದ ಸುಖೋಪಭೋಗಗಳನ್ನು ಅನುಭವಿಸಲು ಮಾತ್ರವೇ ಅಲ್ಲಿ ಸಾಧ್ಯವಾಗುತ್ತದೆ. ದಿನಗಳು ಕಳೆದಂತೆ ಪುಣ್ಯಕರ್ಮಫಲವು ಕ್ಷೀಣಿಸುತ್ತಿರುತ್ತದೆ. ಪುಣ್ಯಕರ್ಮಫಲವು ಮುಗಿದೊಡನೆಯೇ ಸ್ವರ್ಗದ ವಾಸವು ತಪ್ಪಿ ಪುನಃ ಭೂಮಿಯಲ್ಲಿ ಜನ್ಮತಾಳಬೇಕಾಗುತ್ತದೆ. ಪುಣ್ಯಫಲಕ್ಷಯಕ್ಕೆ ಇದೊಂದು ವಿಧಾನ. ಭೂಲೋಕದಲ್ಲಿಯೇ ಜನ್ಮಾಂತರಗಳ ಪಾಪ-ಪುಣ್ಯಗಳಿಗೆ ಅನುಗುಣವಾಗಿ ಸುಖ-ದುಃಖಗಳನ್ನು ಅನುಭವಿಸುವುದು ಮತ್ತೊಂದು ವಿಧಾನ. ಜನ್ಮಾಂತರದ ಪುಣ್ಯವಿಶೇಷದಿಂದ ದುರ್ಯೋಧನನು ಹದಿಮೂರು ವರ್ಷಗಳ

ಕಾಲ ಸುಖೋಪಭೋಗದಿಂದಿದ್ದನು. ಯುಧಿಷ್ಠಿರಾದಿಗಳು ಅಷ್ಟೇ ವರ್ಷಗಳ ಕಾಲ ಕಷ್ಟಪಡುತ್ತಿದ್ದರು. ದುರ್ಯೋಧನನು ಜನ್ಮಾಂತರದಲ್ಲಿ ಸಂಚಯಿಸಿದ್ದ ಪುಣ್ಯವು ಮುಗಿದುಹೋಯಿತು. ಕಷ್ಟದ ಅನುಭವದಿಂದ ಯುಧಿಷ್ಠಿರಾದಿಗಳ ಪಾಪವೂ ಕಳೆಯಿತು. ಆದುದರಿಂದ ದುರ್ಯೋಧನನಿಗೆ ಕಷ್ಟವೂ ಯುಧಿಷ್ಠಿರಾದಿಗಳಿಗೆ ಸುಖವೂ ಪ್ರಾಪ್ತವಾಗಬೇಕಾದುದು ನ್ಯಾಯವಾಗಿಯೇ ಇದೆ. ಕ್ಲೇಶಾನುಭವದಿಂದ ಪಾಪನಾಶವಾಗುವುದೆಂಬುದನ್ನು ನಾವು ಇಂದೂ ನಂಬುತ್ತೇವೆ. ಉಪವಾಸಾದಿಗಳಿಂದ, ಏಕಭುಕ್ತವೇ ಮೊದಲಾದ ವ್ರತಾದಿಗಳಿಂದ ಪಾಪಪರಿಹಾರವಾಗುವುದೆಂಬ ನಂಬಿಕೆಯು ಈಗಲೂ ನಮಗಿದೆ. ಹೀಗಿರುವಾಗ ಪಾಂಡವರು ಹದಿಮೂರು ವರ್ಷಗಳ ಕಾಲ ಕ್ಲೇಶವನ್ನು ಅನುಭವಿಸಿರುವುದರಿಂದ ಒಂದು ವೇಳೆ ಅವರಲ್ಲೇನಾದರೂ ಪಾಪವಿದ್ದಿದ್ದರೆ ಅದು ಆ ಅವಧಿಯಲ್ಲಿ ಸಂಪೂರ್ಣವಾಗಿ ಕ್ಷಯಿಸಿರಬೇಕು. ಪಾಪವು ಕ್ಷಯಿಸಿದನಂತರ ಸುಖವುಂಟಾಗಲೇಬೇಕು–ಎಂಬುದು ಕುಂತಿಯ ಅಭಿಪ್ರಾಯವಾಗಿದೆ.)

ಕುಂತಿಯು ಮುಂದುವರಿದು ಹೇಳುತ್ತಾಳೆ :

"ಕೃಷ್ಣ! ಧೃತರಾಷ್ಟ್ರನ ಮಕ್ಕಳಲ್ಲಿದ್ದುದಕ್ಕಿಂತಲೂ ವಿಶೇಷವಾದ ಪ್ರೇಮವು ನನಗೆ ಪಾಂಡವರ ಮೇಲೆ ಯಾವಾಗಲೂ ಇರಲಿಲ್ಲ. ನಾನು ಇಬ್ಬರನ್ನೂ ಒಂದೇ ಭಾವನೆಯಿಂದ–ಒಂದೇ ವಿಶ್ವಾಸದಿಂದ–ಒಂದೇ ಪ್ರೀತಿಯಿಂದ ಕಾಣುತ್ತಿದ್ದೆನು. ನಾನು ಈ ಒಂದು ಸತ್ಯನಿಷ್ಠೆಯಲ್ಲಿದ್ದುದರಿಂದಲೇ ಮುಂದಾಗಬಹುದಾದ ಕೆಲವು ವಿಷಯಗಳನ್ನು ಪ್ರತ್ಯಕ್ಷವಾಗಿಯೇ ಕಾಣುತ್ತಿರುವೆನು. ಮುಂದೆ ನಡೆಯಲಿರುವ ಕುರು-ಪಾಂಡವರ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ ರಾಜ್ಯಶ್ರೀಯನ್ನು ಪಡೆದು ಪಾಂಡವರೊಡನೆ ನೀನು ಹೊರಗೆ ಬರುತ್ತಿರುವ ದೃಶ್ಯವನ್ನು ನಾನು ಇಂದೇ ಕಾಣುತ್ತಿದ್ದೇನೆ. ನನ್ನ ಮಕ್ಕಳನ್ನು ಇತರರಾರೂ ಜಯಿಸಲಾರರು, ಕೃಷ್ಣ! ಏಕೆಂದರೆ : ಅವರಲ್ಲಿರುವ ಸತ್ತ್ವವು (ಪರಾಕ್ರಮವು) ಅಂತಹುದು.

ಈಗ ಪ್ರಾಪ್ತವಾಗಿರುವ ಕಷ್ಟಗಳೆಲ್ಲಕ್ಕೂ ನಾನೇ ಕಾರಣಳೆಂದೂ ಹೇಳಿಕೊಳ್ಳುವುದಿಲ್ಲ. ನನ್ನನ್ನೇ ನಾನು ದೂಷಿಸಿಕೊಳ್ಳುವುದಿಲ್ಲ. ದುರ್ಯೋಧನನೇ ಕಾರಣನೆಂದೂ ಹೇಳುವುದಿಲ್ಲ. ನನ್ನ ತಂದೆಯನ್ನೇ ನಾನು ದೂಷಿಸುತ್ತೇನೆ.

ಏಕೆಂದರೆ : ಸದ್ವೃತ್ತಿಯುಳ್ಳ ದಾನಿಯೊಬ್ಬನು ಯಾಚಕನಿಗೆ ಹಣವನ್ನು ದಾನವಾಗಿ ಕೊಡುವಷ್ಟೇ ಸುಲಭವಾಗಿ ನಿಶ್ಚಿಂತೆಯಿಂದ ನನ್ನನ್ನು ಕುಂತಿ ಭೋಜನಿಗೆ ಕೊಟ್ಟುಬಿಟ್ಟನು. ಆಗ ನಾನಿನ್ನೂ ಬಾಲೆಯಾಗಿದ್ದೆನು. ಕೈಯಲ್ಲಿ ಚೆಂಡನ್ನಿಟ್ಟುಕೊಂಡು ಆಟವಾಡುತ್ತಿದ್ದೆನು. ಹಾಗಿದ್ದ ನನ್ನನ್ನು ನಿನ್ನ ಪಿತಾಮಹನು ತನ್ನ ಪರಮಮಿತ್ರನಾದ, ಮಹಾತ್ಮನಾದ ಕುಂತಿಭೋಜನಿಗೆ ಕೇವಲ ಸ್ನೇಹದ ಕಾರಣದಿಂದಾಗಿ ಕೊಟ್ಟುಬಿಟ್ಟನು. ಈ ರೀತಿಯಲ್ಲಿ ನಾನು ತಂದೆಯಿಂದಲೂ ವಂಚಿತಳಾದೆನು. ಸೇರಿದ (ಪತಿಯ) ಮನೆಯಲ್ಲಿಯೂ ಸಹ ನನ್ನ ಗುರುಜನರಿಂದ ತಿರಸ್ಕೃತಳಾದೆನು. ಈ ಕಾರಣದಿಂದಾಗಿ ನಾನಿಂದು ಬಹುದುಃಖಿತಳಾಗಿದ್ದೇನೆ. ನಾನು ಇನ್ನೂ ಹೆಚ್ಚುಕಾಲ ಜೀವಿಸಿದ್ದೇನು ಫಲ? ಕೃಷ್ಣ!

ಅರ್ಜುನನ ಜನ್ಮಕಾಲದಲ್ಲಿ ನಾನು ಸೂತಿಕಾಗೃಹದಲ್ಲಿದ್ದಾಗ ರಾತ್ರಿಯಲ್ಲಿ ಅಶರೀರವಾಣಿಯು ಹೀಗೆ ಹೇಳಿತು :

**ಪುತ್ರಸ್ತೇ ಪೃಥಿವೀಂ ಜೇತಾ ಯಶಶ್ಚಾಸ್ಯ ದಿವಂ ಸ್ಪೃಶೇತ್ ।**
**ಹತ್ವಾ ಕುರೂನ್ಮಹಾಜನ್ಯೇ ರಾಜ್ಯಂ ಪ್ರಾಪ್ಯ ಧನಂಜಯಃ ।**
**ಭ್ರಾತೃಭಿಃ ಸಹ ಕೌನ್ತೇಯಸ್ತ್ರೀನ್ಮೇಧಾನಾಹರಿಷ್ಯತಿ ॥೬೬॥**

'ನಿನ್ನ ಈ ಮಗನು ಭೂಮಂಡಲವನ್ನೇ ಜಯಿಸುತ್ತಾನೆ. ಇವನ ಯಶಸ್ಸು ಸ್ವರ್ಗಕ್ಕೂ ವ್ಯಾಪಿಸುತ್ತದೆ. ಧನಂಜಯನು ಮಹಾಸಂಗ್ರಾಮದಲ್ಲಿ ಕುರುಗಳನ್ನು ಸಂಹಾರಮಾಡಿ ಕಳೆದುಹೋಗಿದ್ದ ರಾಜ್ಯವನ್ನು ಪುನಃ ಪಡೆದುಕೊಳ್ಳುತ್ತಾನೆ. ತನ್ನ ಅಗ್ರಜಾನುಜರೊಡನೆ ಮೂರು ಅಶ್ವಮೇಧಯಾಗಗಳನ್ನು ಮಾಡುತ್ತಾನೆ. (ಧರ್ಮರಾಜನು ಮಾಡುವ ಅಶ್ವಮೇಧಕ್ಕೆ ಬೆಂಬಲನಾಗುತ್ತಾನೆ.)'

**ನಾಹಂ ತಾಮಭ್ಯಸೂಯಾಮಿ ನಮೋ ಧರ್ಮಾಯ ವೇಧಸೇ ।**
**ಕೃಷ್ಣಾಯ ಮಹತೇ ನಿತ್ಯಂ ಧರ್ಮೋ ಧಾರಯತಿ ಪ್ರಜಾಃ ॥೬೭॥**

ಅಶರೀರವಾಣಿಯು ಅಂದು ಹಾಗೆ ಹೇಳಿತು. ಈಗಿನ ಪರಿಸ್ಥಿತಿಯನ್ನು ನೋಡಿದರೆ ಎಲ್ಲವೂ ವಿಪರೀತವಾಗಿದೆ. ಆದರೆ ಈ ಕಾರಣದಿಂದ ನಾನು ಅಶರೀರವಾಣಿಯನ್ನು ದೂಷಿಸಲು ಹೋಗುವುದಿಲ್ಲ. ಜಗತ್ತಿನ ಸೃಷ್ಟಿಗೆ ಕಾರಣ ವಾದ ಬ್ರಹ್ಮರೂಪವಾಗಿರುವ ಧರ್ಮಕ್ಕೆ ನಮಸ್ಕಾರಮಾಡುತ್ತೇನೆ. ಮಹಾ

ವಿಷ್ಣುಸ್ವರೂಪವಾದ ಧರ್ಮಕ್ಕೆ ನಮಸ್ಕಾರಮಾಡುತ್ತೇನೆ. ಧರ್ಮವೇ ಸಕಲ ಪ್ರಜೆಗಳನ್ನೂ ಧಾರಣೆಮಾಡಿಕೊಂಡಿದೆ, ಕೃಷ್ಣ!

**ಧರ್ಮಶ್ಚೇದಸ್ತಿ ವಾರ್ಷ್ಣೇಯ ಯಥಾ ವಾಗಭ್ಯಭಾಷತ ।**
**ತ್ವಂ ಚಾಪಿ ತತ್ತಥಾ ಕೃಷ್ಣ ಸರ್ವಂ ಸಮ್ಪಾದಯಿಷ್ಯಸಿ ॥೬೮॥**

ಕೃಷ್ಣ! ಈ ಪೃಥ್ವಿಯಲ್ಲಿ ಧರ್ಮವೆಂಬುದೊಂದು ಇರುವುದೇ ಆದರೆ–ಅರ್ಜುನನು ಹುಟ್ಟಿದಾಗ ಅಶರೀರವಾಣಿಯು ಯಾವ ರೀತಿಯಲ್ಲಿ ಹೇಳಿತೋ ಅದೇ ರೀತಿಯಲ್ಲಿ ನೀನು ಸಕಲವನ್ನೂ ನಿರ್ವಹಿಸಿಕೊಡುತ್ತೀಯೆ. (ಗಾಂಡೀವಿಯು ಯುದ್ಧದಲ್ಲಿ ಕುರುಗಳನ್ನು ಸಂಹರಿಸುವಂತೆ ಮಾಡಿ ಯುಧಿಷ್ಠಿರನಿಗೆ ರಾಜ್ಯವು ಲಭ್ಯವಾಗುವಂತೆ ಮಾಡುವೆ.)

**ನ ಮಾಂ ಮಾಧವ ವೈಧವ್ಯಂ ನಾರ್ಥನಾಶೋ ನ ವೈರತಾ ।**
**ತಥಾ ಶೋಕಾಯ ದಹತಿ ಯಥಾ ಪುತ್ರೈರ್ವಿನಾಭವಃ ॥೬೯॥**

ನನ್ನ ಮಕ್ಕಳ ಅಗಲುವಿಕೆಯಿಂದ ನನಗೆಷ್ಟು ದುಃಖವಾಗಿರುವುದೋ ಅಷ್ಟು ದುಃಖವು ನಾನು ವಿಧವೆಯಾದುದರಿಂದಾಗಲೀ, ನನ್ನ ಮಕ್ಕಳು ರಾಜ್ಯವನ್ನು ಕಳೆದುಕೊಂಡುದರಿಂದಾಗಲೀ, ಬಂಧುಜನರೊಡನೆ ವೈರಕಟ್ಟಿಕೊಂಡುದರಿಂದಾಗಲೀ ಉಂಟಾಗಲಿಲ್ಲ. (ಪುತ್ರವಿರಹಶೋಕವು ನನ್ನ ಹೃದಯವನ್ನೇ ಸುಟ್ಟುಹಾಕುತ್ತಿದೆ.)

ಗಾಂಡೀವಧನುಷ್ಮಂತನಾದ, ಸಕಲಶಸ್ತ್ರಾಸ್ತ್ರಗಳನ್ನೂ ತಿಳಿದುಕೊಂಡಿರುವವರಲ್ಲಿ ಸರ್ವಶ್ರೇಷ್ಠನೆನಿಸಿರುವ ಧನಂಜಯನನ್ನು ನಾನು ಕಾಣುತ್ತಿಲ್ಲ. ಕಳೆದ ಹದಿಮೂರು ವರ್ಷಗಳಿಂದ ಅವನ ಮುದ್ದುಮುಖದ ದರ್ಶನವೇ ಇಲ್ಲ. ಅವನನ್ನು ಕಾಣದೇ ನನ್ನ ಹೃದಯಕ್ಕೆ ಶಾಂತಿಯೆಂಬುದು ಹೇಗೆ ತಾನೇ ಸಿಕ್ಕೀತು? ಕೃಷ್ಣ! ಯುಧಿಷ್ಠಿರನನ್ನೂ, ಧನಂಜಯನನ್ನೂ, ಭೀಮನನ್ನೂ ಮತ್ತು ನಕುಲ-ಸಹದೇವರನ್ನೂ ಕಂಡು ಹದಿಮೂರು ವರ್ಷಗಳಾದುವು, ಗೋವಿಂದ! ಇದು ಹದಿನಾಲ್ಕನೆಯ ವರ್ಷವಾದರೂ ನನ್ನ ಐವರು ಮಕ್ಕಳಲ್ಲಿ ನಾನು ಯಾರೊಬ್ಬರನ್ನೂ ಕಾಣಲಾಗಿಲ್ಲ.

**ಜೀವನಾಶಂ ಪ್ರಣಷ್ಟಾನಾಂ ಶ್ರಾದ್ಧಂ ಕುರ್ವನ್ತಿ ಮಾನವಾಃ ।**
**ಅರ್ಥತಸ್ತೇ ಮಮ ಮೃತಾಸ್ತೇಷಾಂ ಚಾಹಂ ಜನಾರ್ದನ ॥೭೨॥**

ತಮ್ಮ ಸಂಬಂಧಿಗಳು (ತಂದೆ-ತಾಯಿ ಮುಂತಾದವರು) ಬಹಳ ಕಾಲದವರೆಗೆ (ಹನ್ನೆರಡು ವರ್ಷಗಳ ಪರ್ಯಂತವಾಗಿ) ಕಾಣದಿದ್ದರೆ, ತಪ್ಪಿಸಿಕೊಂಡು ಹೊರಟುಹೋಗಿದ್ದರೆ–ಅಂತಹವರು ಸತ್ತುಹೋಗಿರುವರೆಂದು ನಿಶ್ಚಯಿಸಿ ಮಾನವರು ಅವರಿಗೆ ಶ್ರಾದ್ಧಾದಿಗಳನ್ನು ಮಾಡಿಬಿಡುತ್ತಾರೆ. ಕಳೆದ ಹದಿಮೂರು ವರ್ಷಗಳಿಂದಲೂ ನಾನು ನನ್ನ ಮಕ್ಕಳನ್ನು ಕಾಣದೇ ಇರುವುದರಿಂದ ಅವರು ನನ್ನ ಪಾಲಿಗೆ ಸತ್ತುಹೋದಂತೆಯೇ. ಅವರೂ ನನ್ನನ್ನು ಕಾಣದೇ ಇರುವುದರಿಂದ ಅವರ ಪಾಲಿಗೆ ನಾನೂ ಸತ್ತುಹೋದಂತೆಯೇ. ಜನಾರ್ದನ! ಧರ್ಮಾತ್ಮನಾದ ಯುಧಿಷ್ಠಿರರಾಜನನ್ನು ಸಂಧಿಸಿದಾಗ ನೀನು ಹೀಗೆಂದು ಹೇಳು.

**ಭೂಯಾಂಸ್ತೇ ಹೀಯತೇ ಧರ್ಮೋ ಮಾ ಪುತ್ರಕ ವೃಥಾ ಕೃಥಾಃ ॥**

"ಮಗುವೇ! ವೃಥಾ ಕಾಲಯಾಪನೆಯನ್ನು ಮಾಡುತ್ತಿರಬೇಡ. ಅದರಿಂದ ನಿನ್ನ ರಾಜಧರ್ಮಕ್ಕೇ ಮಹತ್ತಾದ ಹಾನಿಯುಂಟಾಗುತ್ತದೆ."

**ಪರಾಶ್ರಯಾ ವಾಸುದೇವ ಯಾ ಜೀವತಿ ಧಿಗಸ್ತು ತಾಮ್ ।**
**ವೃತ್ತೇಃ ಕಾರ್ಪಣ್ಯಲಬ್ಧಾಯಾ ಅಪ್ರತಿಷ್ಠೈವ ಜ್ಯಾಯಸೀ ॥೭೪॥**

ಯಾವಳು ಪರಾಶ್ರಯದಲ್ಲಿ ತನ್ನ ಜೀವನವನ್ನು ನಡೆಸುತ್ತಾಳೆಯೋ ಅಂತಹವಳಿಗೆ ಧಿಕ್ಕಾರವಿರಲಿ. ಕಾರ್ಪಣ್ಯವೃತ್ತಿಯಿಂದ ಜೀವನವನ್ನು ನಡೆಸಿಕೊಂಡು ಬದುಕಿರುವುದಕ್ಕಿಂತಲೂ ಸತ್ತುಹೋಗುವುದೇ ಲೇಸು, ಕೃಷ್ಣ! ಈ ಕಾರಣದಿಂದಾಗಿ ನೀನು ಧನಂಜಯನಿಗೂ ಮತ್ತು ಯುದ್ಧಮಾಡಲೆಂದೇ ನಿತ್ಯವೂ ಉತ್ಸಾಹಪೂರ್ವಕವಾದ ಪ್ರಯತ್ನವುಳ್ಳ ಭೀಮಸೇನನಿಗೂ ಈ ರೀತಿಯಾಗಿ ಹೇಳು :

**ಯದರ್ಥಂ ಕ್ಷತ್ರಿಯಾ ಸೂತೇ ತಸ್ಯ ಕಾಲೋಽಯಮಾಗತಃ ।**
**ಅಸ್ಮಿಂಶ್ಚೇದಾಗತೇ ಕಾಲೇ ಮಿಥ್ಯಾ ಚಾತಿಕ್ರಮಿಷ್ಯತಿ ।**
**ಲೋಕಸಮ್ಭಾವಿತಾಃ ಸನ್ತಃ ಸುನೃಶಂಸಂ ಕರಿಷ್ಯಥ ॥೭೬॥**

**ನೃಶಂಸೇನ ಚ ವೋ ಯುಕ್ತಾಂಸ್ತ್ಯಜೇಯಂ ಶಾಶ್ವತೀ ಸಮಾಃ ।**
**ಕಾಲೇ ಹಿ ಸಮನುಪ್ರಾಪ್ತೇ ತ್ಯಕ್ತವ್ಯಮಪಿ ಜೀವನಮ್ ॥೭೭॥**

ಯಾವ ಕಾರ್ಯದ ಸಾಧನೆಗಾಗಿ ಕ್ಷತ್ರಿಯಾಣಿಯು ಮಕ್ಕಳನ್ನು ಹಡೆ

ಯುತ್ತಾಳೆಯೋ–ಆ ಕಾರ್ಯವನ್ನು ಸಾಧಿಸುವ ಕಾಲವೀಗ ಸನ್ನಿಹಿತವಾಗಿದೆ. ಕಾರ್ಯವನ್ನು ಸಾಧಿಸಬೇಕಾಗಿರುವ ಈ ಸಮಯದಲ್ಲಿ ನೀವು ಸುಮ್ಮನಿದ್ದು ಬಿಟ್ಟರೆ ಪ್ರಾಪ್ತವಾದ ಸಮಯವು ವ್ಯರ್ಥವಾಗಿ ಕಳೆದುಹೋಗುತ್ತದೆ. ಹೀಗೆ ಮಾಡಿದಲ್ಲಿ ಇಂದು ಲೋಕಸಂಭಾವಿತರಾಗಿರುವ ಮತ್ತು ಸತ್ಪುರುಷರೆನಿಸಿ ಕೊಂಡಿರುವ ನೀವು ಅತ್ಯಂತನಿಹೀನರಾಗುತ್ತೀರಿ. ಮಾಡಬೇಕಾದ ಕಾರ್ಯ ವನ್ನು ಮಾಡದೇ ಪ್ರಪಂಚದ ದೃಷ್ಟಿಯಲ್ಲಿ ಅತಿತುಚ್ಛರಾಗುವ ನಿಮ್ಮನ್ನು ನಾನು ಖಂಡಿತವಾಗಿಯೂ ನನ್ನ ಜೀವನಪರ್ಯಂತವಾಗಿಯೂ ತೊರೆಯುತ್ತೇನೆ. ಪ್ರಾಣಭಯದಿಂದಾಗಿ ನೀವು ಕರ್ತವ್ಯಪರಿಪಾಲನೆಯಲ್ಲಿ ವಿಮುಖರಾಗ ಬಾರದು. ಸಮಯದಲ್ಲಿ ಕರ್ತವ್ಯದ ನಿರ್ವಹಣೆಗೆ ಪ್ರಾಣಪರಿತ್ಯಾಗವನ್ನಾ ದರೂ ಮಾಡಬೇಕಾಗುವುದು.''

ಕೃಷ್ಣ! ಭೀಮಾರ್ಜುನರಿಗೆ ಈ ರೀತಿ ಹೇಳಿದನಂತರ ಕ್ಷತ್ರಧರ್ಮ ರತರಾದ ಮಾದ್ರಿಯ ಮಕ್ಕಳನ್ನು ಕುರಿತು ಹೀಗೆಂದು ಹೇಳಬೇಕು :

**ವಿಕ್ರಮೇಣಾರ್ಜಿತಾನ್ಭೋಗಾನ್ವೃಣೀತಂ ಜೀವಿತಾದಪಿ ॥೭೮॥**

"ಪರಾಶ್ರಯದಿಂದ ಬಾಳುವುದಕ್ಕಿಂತಲೂ ಜೀವನವನ್ನಾದರೂ ಪಣ ವನ್ನಾಗಿಟ್ಟು ಯುದ್ಧಮಾಡಿ ನಿಮ್ಮ ಭುಜಬಲ-ಪರಾಕ್ರಮಗಳಿಂದ ಲಭ್ಯ ವಾಗುವ ಸುಖೋಪಭೋಗಗಳನ್ನು ಮಾತ್ರವೇ ಪಡೆಯಿರಿ. (ಮತ್ತೊಬ್ಬರ ಆಶ್ರಯ ಅಥವಾ ಅನುಸರಣೆಯಿಂದ ಪಡೆದುಕೊಳ್ಳಬಹುದಾದ ಸುಖೋಪ ಭೋಗಗಳನ್ನು ಪರಿತ್ಯಾಗಮಾಡಿರಿ." )

ಮಾಧವ! ಕ್ಷತ್ರಧರ್ಮದಿಂದ ಜೀವಿಸುತ್ತಿರುವ ಮನುಷ್ಯನ ಮನಸ್ಸಿಗೆ ಶೌರ್ಯ-ಪರಾಕ್ರಮಗಳಿಂದ ಪ್ರಾಪ್ತವಾಗುವ ಧನ-ಕನಕಾದಿಗಳೇ ಸರ್ವಕಾಲ ದಲ್ಲಿಯೂ ಸಂತೋಷವನ್ನುಂಟುಮಾಡುತ್ತವೆ. (ಕ್ಷತ್ರಿಯಧರ್ಮದಲ್ಲಿರು ವವನು ಯಾಚನೆಯಿಂದ ಲಭ್ಯವಾಗುವ ಧನ-ಕನಕಾದಿಗಳಿಂದ ಖಂಡಿತವಾಗಿಯೂ ಸಂತೋಷಪಡುವುದಿಲ್ಲ.)

ಮಹಾಬಾಹುವೇ! ಶ್ರೀಕೃಷ್ಣ! ನೀನಿಲ್ಲಿಂದ ಪ್ರಯಾಣಮಾಡಿದ ನಂತರ–ಶಸ್ತ್ರಾಸ್ತ್ರಗಳನ್ನು ಪಡೆದಿರುವವರೆಲ್ಲರಿಗೂ ಶ್ರೇಷ್ಠನಾದವನೆಂದು ಕೀರ್ತಿಯನ್ನು ಪಡೆದಿರುವ, ವೀರನಾದ, ಪಾಂಡುನಂದನನಾದ ಅರ್ಜುನನ ಬಳಿಗೆ ಹೋಗಿ, ದ್ರೌಪದಿಯು ಹೇಳುವಂತೆ ಮತ್ತು ಅವಳ ಅಭಿಪ್ರಾಯಕ್ಕೆ

ಅನುಸಾರವಾಗಿಯೇ ನಡೆದುಕೊಳ್ಳುವಂತೆ ಅವನಿಗೆ ಹೇಳು. ಕೃಷ್ಣ! ಭೀಮಾರ್ಜುನರ ಪರಾಕ್ರಮವೆಷ್ಟೆಂಬುದು ನಿನಗೆ ಸ್ಪಷ್ಟವಾಗಿ ತಿಳಿದೇ ಇರುವುದು. ಅವರಿಬ್ಬರೂ ಕುಪಿತರಾದರೆಂದರೆ ಯಮರಾಜನೋಪಾದಿ ಯಲ್ಲಿ ತಮಗೆದುರಾಗಿ ಬಂದು ಯುದ್ಧಕ್ಕೆ ನಿಲ್ಲುವ ದೇವತೆಗಳನ್ನೂ ಜಯಿಸುವಷ್ಟು ಸಾಹಸಿಗಳಾಗಿರುತ್ತಾರೆ. ದ್ರೌಪದಿಯನ್ನು ತುಂಬಿದ ಸಭೆಗೆ ಸೆಳೆದು ತಂದುದು ಮತ್ತು ಕರ್ಣ-ದುಃಶಾಸನರು ಅವಳ ವಿಷಯವಾಗಿ ಕರ್ಣಕಠೋರವಾದ ಮಾತುಗಳನ್ನಾಡಿದುದು–ಇವುಗಳೆಲ್ಲವೂ ಭೀಮಾ-ರ್ಜುನರಿಗೆ ಮಾಡಿದ ಅಪಮಾನಗಳು. ಆ ಮಹಾವೀರರ ಪ್ರತ್ಯಕ್ಷದಲ್ಲಿಯೇ ಆ ಹೀನಕೃತ್ಯವು ನಡೆಯಿತಲ್ಲವೇ? ಅಂತಹ ಕುತ್ಸಿತಕಾರ್ಯವನ್ನು ಕುರುಮುಖ್ಯರ ಸಮಕ್ಷದಲ್ಲಿಯೇ ಮಾಡಿ ದುರ್ಯೋಧನನು ಭೀಮಸೇನನಿಗೆ ಅಪರಾಧವನ್ನೆಸಗಿರುವನು. ಅಂತಹ ನೀಚಕಾರ್ಯಕ್ಕೆ ತಕ್ಕುದಾದ ಫಲವನ್ನು ದುರ್ಯೋಧನನು ಕಾಣಲೇಬೇಕು. ಕಂಡೇ ಕಾಣುತ್ತಾನೆ. ಭೀಮಸೇನನ ಸ್ವಭಾವವನ್ನು ನಾನು ಚೆನ್ನಾಗಿ ತಿಳಿದಿದ್ದೇನೆ. ಕೃಷ್ಣ! ಒಬ್ಬನ ಮೇಲೆ ಅವನಿಗೆ ಹಗೆತನವುಂಟಾಯಿತೆಂದರೆ ಅವನು ಶಾಂತಿಯಿಂದಿರತಕ್ಕವನಲ್ಲ. ಮೇಲಾಗಿ ಅವನ ಮನಸ್ಸಿನಲ್ಲಿ ಹಗೆತನವು ಅಚ್ಚಳಿಯದೇ ಇದ್ದೇ ಇರುತ್ತದೆ. ದೀರ್ಘಕಾಲವು ಕಳೆದುಹೋದರೂ ಅವನ ಮನಸ್ಸಿಗೆ ಶಾಂತಿಯುಂಟಾಗುವು ದಿಲ್ಲ. ತನ್ನ ವಿರೋಧಿಗಳ ಅಥವಾ ಶತ್ರುಪಕ್ಷದವರ ಸಂಹಾರವಾದನಂತರವೇ ಅವನ ಮನಸ್ಸು ಶಾಂತವಾಗುತ್ತದೆ. ಯಾವತ್ತಿನವರೆಗೆ ಶತ್ರುಕರ್ಶನನಾದ ಭೀಮನು ಶತ್ರುಪಕ್ಷದವರನ್ನು ಕಡೆಗಾಣಿಸುವುದಿಲ್ಲವೋ–ಅವತ್ತಿನವರೆಗೂ ಅವನ ಮನಸ್ಸಿನಿಂದ ಹಗೆತನವು ಅಳಿದುಹೋಗುವುದಿಲ್ಲ. ಅವನ ಮನಸ್ಸಿಗೆ ಶಾಂತಿಯೂ ಸಿಕ್ಕುವುದಿಲ್ಲ.

ನ ದುಃಖಂ ರಾಜ್ಯಹರಣಂ ನ ಚ ದ್ಯೂತೇ ಪರಾಜಯಃ ।
ಪ್ರವ್ರಾಜನಂ ತು ಪುತ್ರಾಣಾಂ ನ ಮೇ ತದ್ದುಃಖಕಾರಣಮ್ ॥೮೬॥

ಯತ್ತು ಸಾ ಬೃಹತೀ ಶ್ಯಾಮಾ ಏಕವಸ್ತ್ರಾ ಸಭಾಂ ಗತಾ ।
ಅಶೃಣೋತ್ಪರುಷಾ ವಾಚಃ ಕಿಂ ನು ದುಃಖತರಂ ತತಃ ॥೮೭॥

ಮಾಧವ! ಕೌರವರು ನನ್ನ ಮಕ್ಕಳ ರಾಜ್ಯವನ್ನು ಅಪಹರಿಸಿದ್ದಕ್ಕಾ

ಗಿಯೂ ನನಗೆ ಅಷ್ಟು ದುಃಖವುಂಟಾಗಲಿಲ್ಲ. ನನ್ನ ಮಗನು ಪಗಡೆಯಾಟದಲ್ಲಿ ಸೋತುದಕ್ಕಾಗಿಯೂ ದುಃಖವುಂಟಾಗಲಿಲ್ಲ. ನನ್ನ ಮಕ್ಕಳನ್ನು ಅರಣ್ಯಕ್ಕೆ ಕಳುಹಿಸಿದುದರಿಂದಲೂ ನನಗೆ ದುಃಖವುಂಟಾಗಲಿಲ್ಲ. ಇವುಗಳಾವುವೂ ನನ್ನ ದುಃಖಕ್ಕೆ ಕಾರಣಗಳಲ್ಲ. ಕೃಷ್ಣ! ಶ್ರೇಷ್ಠಳಾದ, ಶ್ಯಾಮಲವರ್ಣದ, ಯುವತಿಯಾದ ನನ್ನ ಸೊಸೆಯು–ರಜಸ್ವಲೆಯಾಗಿದ್ದು ಏಕವಸ್ತ್ರಧರಳಾಗಿದ್ದ ಕಾಲದಲ್ಲಿ ತುಂಬಿದ ಸಭೆಗೆ ಸೆಳೆಯಲ್ಪಟ್ಟು ಕರ್ಣಕಠೋರವಾದ ಮಾತುಗಳನ್ನು ಕೇಳಿದಳು. ಇದೇ ನನ್ನ ದುಃಖಕ್ಕೆ ಕಾರಣ, ಕೃಷ್ಣ! ಇದಕ್ಕಿಂತಲೂ ದುಃಖತರವಾದುದು ಮತ್ತೊಂದೇನಿದೆ?

ಸರ್ವದಾ ಕ್ಷತ್ರಿಯಧರ್ಮದಲ್ಲಿಯೇ ನಿರತಳಾಗಿರುತ್ತಿದ್ದ, ಸರ್ವಾಂಗ ಸುಂದರಿಯಾದ ನನ್ನ ಸೊಸೆಯು ಆ ಸಮಯದಲ್ಲಿ ಸ್ತ್ರೀಧರ್ಮದಿಂದಿದ್ದಳು. (ರಜಸ್ವಲೆಯಾಗಿದ್ದಳು.) ಯದ್ಯಪಿ ಅವಳಿಗೆ ಐವರು ನಾಥರಿದ್ದರೂ ಆ ಸಮಯದಲ್ಲವಳು ಒಬ್ಬ ನಾಥನನ್ನೂ ತನ್ನ ರಕ್ಷಣೆಗಾಗಿ ಪಡೆದುಕೊಳ್ಳಲಿಲ್ಲ. (ಆ ಸಮಯದಲ್ಲಿ ಯಾರೊಬ್ಬರೂ ಅವಳ ರಕ್ಷಣೆಗೆ ಹೋಗಲಿಲ್ಲ.) ಪುತ್ರ ಸಹಿತಳಾದ ಯಾವ ಕುಂತಿಗೆ (ನನಗೆ) ಬಲಿಷ್ಠರಲ್ಲಿ ಶ್ರೇಷ್ಠನಾದ ಬಲರಾಮ, ಮಹಾರಥನಾದ ಪ್ರದ್ಯುಮ್ನ ಮತ್ತು ನೀನು ರಕ್ಷಕರಾಗಿರುವಿರೋ–ಅಂತಹ ನಾನಿಂದು ದುಃಖಭಾಗಿನಿಯಾಗಿದ್ದೇನೆ. ದುರ್ಧರ್ಷನಾದ ಭೀಮನಿನ್ನೂ ಜೀವಿಸಿರುವಾಗ ಮತ್ತು ಯುದ್ಧದಲ್ಲಿ ಯಾವಾಗಲೂ ಹಿಮ್ಮೆಟ್ಟದ ಅರ್ಜುನನಿನ್ನೂ ಜೀವಿಸಿರುವಾಗ–ನಾನು ಈ ವಿಧವಾದ ದುಃಖವನ್ನು ಅನುಭವಿಸುತ್ತಿದ್ದೇನೆ, ಪುರುಷೋತ್ತಮ! (ಇದು ನಿಶ್ಚಯವಾಗಿಯೂ ನನ್ನ ದೌರ್ಭಾಗ್ಯವಲ್ಲವೇ?")

ಜನಮೇಜಯ! ಇದೇ ಮುಂತಾಗಿ ತನ್ನ ಮನಸ್ಸಿನ ದುಃಖವನ್ನು ಹೇಳಿಕೊಳ್ಳುತ್ತಾ ಶೋಕಿಸುತ್ತಿದ್ದ, ಪುತ್ರರ ಸಂಬಂಧವಾದ ಮನೋರೋಗದಿಂದ ಪೀಡಿತಳಾಗಿದ್ದ, ತಂದೆಯ ತಂಗಿಯಾದ ಕುಂತೀದೇವಿಯನ್ನು ಪಾರ್ಥಸಖನಾದ ಶ್ರೀಕೃಷ್ಣನು ಅನೇಕವಿಧವಾದ ಸಾಂತ್ವವಚನಗಳಿಂದ ಸಂತೈಸಿದನು :

"ಅತ್ತೆ! ಈ ಪ್ರಪಂಚದಲ್ಲಿ ನಿನ್ನಂತಹ ಸೌಭಾಗ್ಯಶಾಲಿನಿಯಾದ

ಸ್ತ್ರೀಯು ಬೇರೊಬ್ಬರಾರಿದ್ದಾರೆ? ನೀನು ಸುಪ್ರಸಿದ್ಧನಾದ ಶೂರರಾಜನ ಪುತ್ರಿಯಾಗಿರುವೆ ಮತ್ತು ಸುಪ್ರಸಿದ್ಧವಾದ ಅಜಮೀಢಕುಲಕ್ಕೆ ಸೇರಿರುವೆ. ಕಮಲದ ಬಳ್ಳಿಯು ಅಗಾಧವಾದ ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ ಒಯ್ಯಲ್ಪಡುವಂತೆ, ಸುಪ್ರಸಿದ್ಧವಾದ ಆ ಕುಲಕ್ಕೆ ಹೋಗಿ ಸೇರಿರುವೆ. ನೀನು ಹಿಂದೆ ಸರ್ವಮಂಗಳಮಯಿಯಾದ ಮಹಾರಾಣಿಯೇ ಆಗಿದ್ದೆ. ನಿನ್ನ ಗಂಡನಿಂದಲೂ ಸಮ್ಮಾನಿತಳಾಗಿದ್ದೆ. ಈ ಕಾರಣದಿಂದ ನೀನು ವೀರಮಾತೆಯು ಮಾತ್ರವಲ್ಲದೇ–ವೀರಪತ್ನಿಯೂ ಆಗಿರುವೆ. ಸಕಲಗುಣಸಂಪನ್ನಳಾಗಿರುವೆ. ಮಹಾಪ್ರಾಜ್ಞಳಾಗಿರುವೆ. ನಿನ್ನಂತಹವರು ಸುಖ-ದುಃಖಗಳೆರಡನ್ನೂ ಸಮಾನವೆಂದು ಭಾವಿಸಿ ಸಹಿಸಿಕೊಳ್ಳುವುದು ಯೋಗ್ಯವಾಗಿದೆ. ಇದಕ್ಕೆ ಅನುಗುಣವಾಗಿಯೇ ನಿನ್ನ ಮಕ್ಕಳೂ ಇದ್ದಾರೆ.

**ನಿದ್ರಾತನ್ದ್ರೀ ಕ್ರೋಧಹರ್ಷೌ ಕ್ಷುತ್ಪಿಪಾಸೇ ಹಿಮಾತಪೌ ।**
**ಏತಾನಿ ಪಾರ್ಥಾ ನಿರ್ಜಿತ್ಯ ನಿತ್ಯಂ ವೀರಸುಖೇ ರತಾಃ ॥೯೪॥**

ನಿದ್ರೆ ಮತ್ತು ಆಲಸ್ಯ, ಕೋಪ ಮತ್ತು ಹರ್ಷ, ಹಸಿವು ಮತ್ತು ಬಾಯಾರಿಕೆ, ಶೀತ ಮತ್ತು ಉಷ್ಣ–ಈ ದ್ವಂದ್ವಗಳನ್ನು ನಿನ್ನ ಮಕ್ಕಳು ಸಂಪೂರ್ಣವಾಗಿ ಜಯಿಸಿ ನಿತ್ಯವೂ ವೀರೋಚಿತಸುಖಾನುಭವಿಗಳಾಗಿದ್ದಾರೆ.

**ತ್ಯಕ್ತಗ್ರಾಮ್ಯಸುಖಾಃ ಪಾರ್ಥಾ ನಿತ್ಯಂ ವೀರಸುಖಪ್ರಿಯಾಃ ।**
**ನ ತು ಸ್ವಲ್ಪೇನ ತುಷ್ಯೇಯುರ್ಮಹೋತ್ಸಾಹಾ ಮಹಾಬಲಾಃ ॥೯೫॥**

ನಿನ್ನ ಮಕ್ಕಳು ಗ್ರಾಮ್ಯಸುಖಗಳನ್ನು ಸಂಪೂರ್ಣವಾಗಿ ಪರಿತ್ಯಜಿಸಿದ್ದಾರೆ. ವೀರೋಚಿತವಾದ ಸುಖಗಳೇ ಅವರಿಗೆ ಹೆಚ್ಚು ಪ್ರಿಯವಾಗಿವೆ. ಹೆಚ್ಚಿನ ಉತ್ಸಾಹಶಾಲಿಗಳಾದ ಮತ್ತು ಮಹಾಬಲರಾದ ಅವರು ಅಲ್ಪವಾದ ಐಶ್ವರ್ಯದಿಂದಲೇ ಸಂತುಷ್ಟಿಯನ್ನು ಹೊಂದುವವರಾಗಿಲ್ಲ.

**ಅನ್ತಂ ಧೀರಾ ನಿಷೇವನ್ತೇ ಮಧ್ಯಂ ಗ್ರಾಮ್ಯಸುಖಪ್ರಿಯಾಃ ।**
**ಉತ್ತಮಾಂಶ್ಚ ಪರಿಕ್ಲೇಶಾನ್ಭೋಗಾಂಶ್ಚಾತೀವ ಮಾನುಷಾನ್ ॥೯೬॥**

**ಅನ್ತೇಷು ರೇಮಿರೇ ಧೀರಾ ನ ತೇ ಮಧ್ಯೇಷು ರೇಮಿರೇ ।**
**ಅನ್ತಪ್ರಾಪ್ತಿಂ ಸುಖಂ ಪ್ರಾಹುರ್ದುಃಖಮನ್ತರಮೇತಯೋಃ ॥೯೭॥**

ಧೀರರಾದವರು ಅತ್ಯಂತಕಷ್ಟವನ್ನು ಅನುಭವಿಸಬಲ್ಲರು. ಅತ್ಯಂತ

ಸುಖವೆನಿಸಿದ ಆತ್ಮಾನಂದವನ್ನೂ ಪಡೆಯಬಲ್ಲರು. ಆದರೆ ಗ್ರಾಮ್ಯಸುಖಾಪೇಕ್ಷಿಗಳು ಹೆಚ್ಚು ಕಷ್ಟಸಹಿಷ್ಣುಗಳೂ ಆಗಿರುವುದಿಲ್ಲ. ಅವರಿಗೆ ಆತ್ಮಸುಖದ ಅನುಭವವೂ ಆಗುವುದಿಲ್ಲ. (ಕೇವಲ ಐಹಿಕಸುಖದಲ್ಲಿಯೇ ಆಸಕ್ತರಾಗಿರುತ್ತಾರೆ.) ಧೀರರಾದವರು ತಮ್ಮ ಕರ್ತವ್ಯಪರಿಪಾಲನಾಸಮಯದಲ್ಲಿ ಪ್ರಾಪ್ತವಾಗುವ ಉತ್ತಮೋತ್ತಮವಾದ ಕ್ಲೇಶಗಳನ್ನೂ (ವೈರಾಗ್ಯಪ್ರಾಪ್ತಿಗೆ ಸಾಧಕವಾದ ಕ್ಲೇಶಗಳನ್ನೂ ಅರ್ಥಾತ್ ಶೀತ-ವಾತಾದಿ ದ್ವಂದ್ವಗಳನ್ನೂ) ಸಹಿಸಿಕೊಳ್ಳುತ್ತಾರೆ. ಅಂತೆಯೇ ಸಾಮಾನ್ಯಮನುಷ್ಯನಿಂದ ಪಡೆದುಕೊಳ್ಳಲು ಸಾಧ್ಯವಾಗಲಾರದ ಮಾನವಾತೀತವಾದ ಭೋಗಗಳನ್ನು (ಮನುಷ್ಯಾನಂದ, ಗಂಧರ್ವಾನಂದ, ದೇವಾನಂದ–ಇವೇ ಮುಂತಾದ ಆನಂದಗಳನ್ನು) ಅಂತ್ಯದಲ್ಲಿ ಅನುಭವಿಸಲು ಇಚ್ಛೆಪಡುತ್ತಾರೆ. ಅಂತಪ್ರಾಪ್ತಿಯನ್ನು (ಸುಖ-ದುಃಖಗಳೆರಡಕ್ಕೂ ಅತೀತವಾದ ಸ್ಥಿತಿಯನ್ನು) ಪ್ರಾಜ್ಞರು ಸುಖವೆಂದು ಹೇಳುತ್ತಾರೆ. ಸುಖ-ದುಃಖಗಳೆರಡರ ಮಧ್ಯದಲ್ಲಿ ಸಿಕ್ಕಿಕೊಂಡು ನರಳುವುದನ್ನು ಪ್ರಾಜ್ಞರು ದುಃಖವೆನ್ನುತ್ತಾರೆ. (ಆತ್ಮಸಾಕ್ಷಾತ್ಕಾರವೇ ಪರಮಸುಖ. ಐಹಿಕಭೋಗಲಾಲಸೆಯೇ ಪರಮದುಃಖ. ಧೀರರಾದವರು ಮಾತ್ರವೇ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳಬಲ್ಲರು. ದ್ವಂದ್ವಗಳನ್ನು ಗೆದ್ದವರು ಮಾತ್ರವೇ ವೀರರೂ–ಧೀರರೂ ಆಗಬಲ್ಲರು. ನಿನ್ನ ಮಕ್ಕಳಾದರೂ ದ್ವಂದ್ವಗಳನ್ನು ಗೆದ್ದು ವೀರರೂ-ಧೀರರೂ ಆಗಿರುತ್ತಾರೆ. ಆದುದರಿಂದ ಅವರ ವಿಷಯವಾಗಿ ನೀನು ಪರಿತಾಪಪಡುವ ಕಾರಣವಿಲ್ಲ.)

ಅಮ್ಮ! ಪಾಂಡವರು ಕೃಷ್ಣೆಯೊಡನೆ ನಿನಗೆ ನನ್ನ ಮೂಲಕ ಅಭಿವಾದನಮಾಡಿರುತ್ತಾರೆ. ತಾವು ನಿನ್ನ ಆಶೀರ್ವಾದದಿಂದಾಗಿ ಕುಶಲಿಗಳಾಗಿರುವೆವೆಂದು ಹೇಳಿ ನಿನ್ನ ಆರೋಗ್ಯವನ್ನು ಅವರು ಪ್ರಶ್ನಿಸಿದ್ದಾರೆ.

ಅತ್ತೆ! ನೀರೋಗದೃಢಕಾಯರಾದ, ಸಕಲವಿಧವಾದ ಮನೋರಥಗಳನ್ನೂ ಪೂರ್ಣಮಾಡಿಕೊಂಡು, ಶತ್ರುಗಳನ್ನು ಸಂಹರಿಸಿ ರಾಜ್ಯಶ್ರೀಯಿಂದ ಕೂಡಿ, ಸರ್ವಲೋಕಗಳಿಗೂ ಈಶ್ವರರಾಗುವ ನಿನ್ನ ಮಕ್ಕಳನ್ನು ಬಹುಶೀಘ್ರದಲ್ಲಿಯೇ ಕಾಣಲಿರುವೆ.”

ಈ ವಿಧವಾಗಿ ಜನಾರ್ದನನಿಂದ ಆಶ್ವಸಿತಳಾದ, ಮಕ್ಕಳಿಂದ ಬಹು

ಕಾಲ ವಿಯೋಗವನ್ನು ಹೊಂದಿದ್ದ (ಬಹುಕಾಲದಿಂದ ಮಕ್ಕಳನ್ನಗಲಿದ್ದ,) ಕುಂತೀದೇವಿಯು ಅವಿವೇಕದಿಂದ ಹುಟ್ಟಿದ ಅಜ್ಞಾನವನ್ನು ದೂರಮಾಡಿ ಶ್ರೀಕೃಷ್ಣನನ್ನು ಕುರಿತು ಹೀಗೆ ಹೇಳಿದಳು :

**ಯದ್ಯತ್ತೇಷಾಂ ಮಹಾಬಾಹೋ ಪಥ್ಯಂ ಸ್ಯಾನ್ಮಧುಸೂದನ ।**
**ಯಥಾ ಯಥಾ ತ್ವಂ ಮನ್ಯೇಥಾಃ ಕುರ್ಯಾಃ ಕೃಷ್ಣ ತಥಾ ತಥಾ ॥**

“ಮಹಾಬಾಹುವಾದ ಶ್ರೀಕೃಷ್ಣನೇ! ಪಾಂಡವರಿಗೆ ಯಾವು- ಯಾವುದು ಹಿತಕರವಾಗುವುದೋ ಮತ್ತು ಯಾವು-ಯಾವುದನ್ನು ಮಾಡಿದರೆ ಅವರಿಗೆ ಹಿತವಾಗುವುದೆಂದು ನೀನು ಭಾವಿಸುವೆಯೋ–ಅದನ್ನೇ ಮಾಡು.

**ಅವಿಲೋಪೇನ ಧರ್ಮಸ್ಯ ಅನಿಕೃತ್ಯಾ ಪರಂತಪ ।**
**ಪ್ರಭಾವಜ್ಞಾಸ್ಮಿ ತೇ ಕೃಷ್ಣ ಸತ್ಯಸ್ಯಾಭಿಜನಸ್ಯ ಚ ॥೧೦೨॥**

ಧರ್ಮಕ್ಕೆ ಯಾವ ವಿಧದಲ್ಲಿಯೂ ಲೋಪಬಾರದಂತೆ–ಯಾವ ವಿಧವಾದ ವಂಚನೆಗೂ ಅವಕಾಶವಿಲ್ಲದಂತೆ–ಸಮಯೋಚಿತವಾಗಿ ಕಾರ್ಯ ಮಾಡಬೇಕು. ಕೃಷ್ಣ! ನಿನ್ನ ಸತ್ಯಪರಾಯಣತೆಯ ಮತ್ತು ಸತ್ಕುಲಪ್ರಸೂತಿಯ ಪ್ರಭಾವವೆಷ್ಟೆಂಬುದನ್ನು ನಾನು ತಿಳಿದಿರುತ್ತೇನೆ.

**ವ್ಯವಸ್ಥಾಯಾಂ ಚ ಮಿತ್ರೇಷು ಬುದ್ಧಿವಿಕ್ರಮಯೋಸ್ತಥಾ ।**
**ತ್ವಮೇವ ನಃ ಕುಲೇ ಧರ್ಮಸ್ತ್ವಂ ಸತ್ಯಂ ತ್ವಂ ತಪೋ ಮಹತ್ ॥**

**ತ್ವಂ ತ್ರಾತಾ ತ್ವಂ ಮಹದ್ಬ್ರಹ್ಮ ತ್ವಯಿ ಸರ್ವಂ ಪ್ರತಿಷ್ಠಿತಮ್ ।**
**ಯಥೈವಾತ್ಥ ತಥೈವೈತತ್ತ್ವಯಿ ಸತ್ಯಂ ಭವಿಷ್ಯತಿ ॥೧೦೪॥**

ಕಾರ್ಯವ್ಯವಸ್ಥೆಯಲ್ಲಿ, ಮಿತ್ರಸಂಗ್ರಹದಲ್ಲಿ, ಬುದ್ಧಿ-ಪರಾಕ್ರಮಗಳಲ್ಲಿ ನಿನ್ನ ಪ್ರಭಾವವೆಷ್ಟೆಂಬುದನ್ನು ನಾನು ಚೆನ್ನಾಗಿ ತಿಳಿದಿರುತ್ತೇನೆ. ಕೃಷ್ಣ! ನಮ್ಮ ವಂಶದಲ್ಲಿ ನೀನೇ ಧರ್ಮಮೂರ್ತಿಯಾಗಿ ಅವತರಿಸಿರುವೆ. ನೀನೇ ಸತ್ಯನು. ಮಹಾನ್ ತಪೋರೂಪನೂ ನೀನೇ ಆಗಿರುವೆ. ನೀನೇ ರಕ್ಷಕನು.; ಪರಬ್ರಹ್ಮಪರಮಾತ್ಮಸ್ವರೂಪನೂ ನೀನೇ. ನಿನ್ನಲ್ಲಿಯೇ ಸಕಲವೂ ಪ್ರತಿಷ್ಠಿತ ವಾಗಿದೆ. ನೀನು ಹೇಗೆ ಹೇಳುವೆಯೋ ಅದು ಹಾಗೆಯೇ ನಡೆಯುತ್ತದೆ.

ಏಕೆಂದರೆ : ನಿನ್ನಲ್ಲಿ ಎಲ್ಲವೂ (ನಿನ್ನ ಸಂಕಲ್ಪದಲ್ಲಿರುವುದೆಲ್ಲವೂ) ಸತ್ಯವಾಗಿಯೇ ಪರಿಣಮಿಸುತ್ತದೆ. (ಸತ್ಯಸಂಕಲ್ಪನು ನೀನು.)"

ಕುಂತಿಯು ತನ್ನ ಅಜ್ಞಾನವನ್ನು ತೊರೆದು ಶ್ರೀಕೃಷ್ಣನ ನಿಜಸ್ವರೂಪವನ್ನರಿತು ಅವನ ಗುಣಗಾನಮಾಡಿದನಂತರ ಮಹಾಬಾಹುವಾದ ಶ್ರೀಕೃಷ್ಣನು ಕುಂತಿಗೆ ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸಿ ಅವಳ ಅನುಮತಿಯನ್ನು ಪಡೆದು ದುರ್ಯೋಧನನ ಅರಮನೆಗೆ ಹೊರಟನು.

೯೦ನೆಯ ಅಧ್ಯಾಯವು ಮುಗಿಯಿತು.

೯೧ನೆಯ ಅಧ್ಯಾಯ ಭಗವದ್ಯಾನಪರ್ವ( ಮುಂದುವರಿದಿದೆ.)

## ಕೃಷ್ಣನು ದುರ್ಯೋಧನನ ಅರಮನೆಗೆ ಹೋದುದು: ದುರ್ಯೋಧನನ ಆಮಂತ್ರಣವನ್ನು ತಿರಸ್ಕರಿಸಿ ಶ್ರೀಕೃಷ್ಣನು ವಿದುರನ ಮನೆಗೆ ಹೋಗಿ ಭೋಜನಮಾಡಿದುದು

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ಅರಿಂದಮನಾದ ಶ್ರೀಗೋವಿಂದನು ಕುಂತೀದೇವಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಅವಳ ಅನುಮತಿಯನ್ನು ಪಡೆದು ದುರ್ಯೋಧನನ ಅರಮನೆಗೆ ಹೋದನು. ಇಂದ್ರನ ಅರಮನೆಗೆ ಅನುರೂಪವಾಗಿದ್ದ, ಉತ್ತಮಕಾಂತಿಯಿಂದ ಪರಿಶೋಭಿಸುತ್ತಿದ್ದ, ಚಿತ್ರ-ವಿಚಿತ್ರವಾದ ಆಸನಗಳಿಂದ ಸಜ್ಜಾಗಿದ್ದ, ಅತ್ಯಂತಸುಂದರವಾಗಿದ್ದ ದುರ್ಯೋಧನನ ಅರಮನೆಯೊಳಕ್ಕೆ ಯಾರ ತಡೆಯೂ ಇಲ್ಲದೇ ಪ್ರವೇಶಿಸಿದ ಶ್ರೀಕೃಷ್ಣನು, ಅರಮನೆಯ ಮೂರು ಮಹಾದ್ವಾರಗಳನ್ನೂ ದಾಟಿ ಮುಂದೆ ಹೋಗಿ–ಶರದೃತುವಿನಲ್ಲಿ ಆಕಾಶದಲ್ಲಿರುವ ಬಿಳಿಯ ಮೋಡಕ್ಕೆ ಸಮಾನವಾದ ಛಾಯೆಯಿಂದ ಕೂಡಿದ್ದ, ಪರ್ವತಶಿಖರದಂತೆ ಅತ್ಯುನ್ನತವಾಗಿದ್ದ, ಅದ್ಭುತವಾದ ಪ್ರಭೆಯಿಂದ ಪ್ರಜ್ವಲಿಸುತ್ತಿದ್ದ– ದುರ್ಯೋಧನನ ಅರಮನೆಯ ಪ್ರಾಸಾದವನ್ನು ಹತ್ತಿದನು.

ಸರ್ವಸುಂದರವಾದ ಆ ಪ್ರಾಸಾದದಲ್ಲಿ ಅನೇಕರಾಜರುಗಳಿಂದಲೂ ಕುರುಕುಮಾರರಿಂದಲೂ ಪರಿವೃತನಾಗಿ ಸಿಂಹಾಸನದಲ್ಲಿ ಕುಳಿತಿದ್ದ, ಮಹಾಬಾಹುವಾದ, ಧೃತರಾಷ್ಟ್ರನ ಮಗನಾದ ದುರ್ಯೋಧನನನ್ನು ಶ್ರೀಕೃಷ್ಣನು ನೋಡಿ

ದನು. ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನು ಆಗಮಿಸುತ್ತಿರಲಾಗಿ ಮಹಾ ಯಶೋವಂತನಾದ, ಗಾಂಧಾರಿಯ ಮಗನಾದ ದುರ್ಯೋಧನನು ಅಮಾತ್ಯ ಸಮೇತನಾಗಿ ಮಧುಸೂದನನನ್ನು ಸ್ವಾಗತಿಸುತ್ತಾ ಎದ್ದುನಿಂತನು. ಸ್ವಾಗತಿಸಲು ಮುಂದೆ ಬಂದ ದುರ್ಯೋಧನನಿಂದಲೂ ಮತ್ತು ಮಂತ್ರಿಗಳಿಂದಲೂ ಕೂಡಿದವನಾಗಿ ಶ್ರೀಕೃಷ್ಣನು ಅಲ್ಲಿ ಉಪಸ್ಥಿತರಾಗಿದ್ದ ರಾಜರನ್ನು ಅವರವರ ಸ್ಥಾನ-ಮಾನಗಳಿಗೆ ಮತ್ತು ವಯಸ್ಸಿಗೆ ಅನುಗುಣವಾಗಿ ಸಂಧಿಸಿದನು. (ಶ್ರೀಕೃಷ್ಣನ ಎಡ-ಬಲಪಾರ್ಶ್ವಗಳಲ್ಲಿ ದುರ್ಯೋಧನನೂ ಮತ್ತು ಮಂತ್ರಿಗಳೂ ಹೋಗುತ್ತಿದ್ದು ಪ್ರತಿಯೊಬ್ಬ ರಾಜನನ್ನೂ ಯಥಾನುಕ್ರಮವಾಗಿ ಶ್ರೀಕೃಷ್ಣನಿಗೆ ಪರಿಚಯಮಾಡಿಕೊಟ್ಟರು.) ಅನಂತರ ಶ್ರೀಕೃಷ್ಣನು ನಾನಾವಿಧವಾದ ರತ್ನಗಳಿಂದ ಸಮಲಂಕೃತವಾಗಿದ್ದ, ಸುವರ್ಣಮಯವಾದ, ವಿಧ-ವಿಧವಾದ ರತ್ನಗಂಬಳಿಗಳಿಂದ ಆಚ್ಛಾದಿತವಾಗಿದ್ದ ಮಂಚದ ಮೇಲೆ ಕುಳಿತುಕೊಂಡನು. ಆ ಸಮಯದಲ್ಲಿ ದುರ್ಯೋಧನನು ಶ್ರೀಕೃಷ್ಣನಿಗೆ ಗೋವನ್ನೂ, ಮಧುಪರ್ಕವನ್ನೂ, ಶುದ್ಧೋದಕವನ್ನೂ ಕೊಟ್ಟು ತನ್ನದಾಗಿದ್ದ ಅರಮನೆಗಳನ್ನೂ ರಾಜ್ಯವನ್ನೂ ಔಪಚಾರಿಕವಾಗಿ ಶ್ರೀಕೃಷ್ಣನಿಗೆ ಸಮರ್ಪಿಸಿದನು. ಪ್ರಸನ್ನನಾದ, ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿದ್ದ, ಮಂಚದ ಮೇಲೆ ಕುಳಿತಿದ್ದ ಶ್ರೀಗೋವಿಂದನನ್ನು ಕುರುರಾಜ ಕುಮಾರರು ಅಲ್ಲಿ ನೆರೆದಿದ್ದ ರಾಜರೊಡನೆ ಯಥಾಯೋಗ್ಯವಾಗಿ ಸಮ್ಮಾನಿಸಿದರು. ಅನಂತರ ರಾಜನಾದ ದುರ್ಯೋಧನನು ವಿಜಯಿಗಳಲ್ಲಿ ಶ್ರೇಷ್ಠನಾದ ವಾರ್ಷ್ಣೇಯನನ್ನು ಭೋಜನಕ್ಕಾಗಿ ಆಹ್ವಾನಿಸಿದನು. ಆದರೆ ಶ್ರೀಕೇಶವನು ಅವನ ಆಹ್ವಾನವನ್ನು ಅಂಗೀಕರಿಸಲಿಲ್ಲ. ಅನಂತರ ಆ ಕುರುಸಭೆಯಲ್ಲಿ ದುರ್ಯೋಧನನು ಕರ್ಣನ ಸಲಹೆಯನ್ನು ಪಡೆದು ಶ್ರೀಕೃಷ್ಣನನ್ನು ಕುರಿತು ಮೊದಲು-ಮೊದಲು ಮೃದುವಾಗಿಯೇ ಮಾತನಾಡಿದನು. ಆದರೆ ಕಡೆಯಲ್ಲದು ಧೂರ್ತತೆಯಲ್ಲಿ ಪರ್ಯವಸಾನಹೊಂದಿತು.

"ಜನಾರ್ದನ! ನಿನಗಾಗಿಯೇ ಸಿದ್ಧಮಾಡಲ್ಪಟ್ಟ ಅನ್ನ-ಪಾನ-ವಸ್ತ್ರ-ಶಯನಾದಿಗಳನ್ನು ನೀನೇಕೆ ಉಪಭೋಗಿಸುತ್ತಿಲ್ಲ? ಕೊಟ್ಟುದೆಲ್ಲವನ್ನೂ ತಿರಸ್ಕರಿಸುತ್ತಿರುವೆಯೇಕೆ? ನೀನು ಎರಡು ಪಕ್ಷಗಳಿಗೂ ಸಹಾಯಸಂಪತ್ತಿ

ಯನ್ನು ಒದಗಿಸಿಕೊಟ್ಟಿರುವೆ. ಎರಡು ಪಕ್ಷಗಳ ಹಿತದಲ್ಲಿಯೂ ಆಸಕ್ತನಾಗಿರುವೆ. ಎರಡು ಪಕ್ಷದವರಿಗೂ ಸಂಬಂಧಿಯಾಗಿರುವೆ. ಮೇಲಾಗಿ ಧೃತರಾಷ್ಟ್ರನಿಗೆ ನೀನು ಅತ್ಯಂತಪ್ರಿಯನಾಗಿರುವೆ. ನೀನು ಧರ್ಮಾರ್ಥಗಳನ್ನು



ಯಥಾರ್ಥವಾಗಿ ಸಂಪೂರ್ಣವಾಗಿ ತಿಳಿದುಕೊಂಡಿರುವೆ. ಹೀಗಿದ್ದರೂ ನಾವು ನಿನಗಾಗಿ ಸಿದ್ಧಪಡಿಸಿರುವುದನ್ನು ತಿರಸ್ಕರಿಸುತ್ತಿರುವೆ. ಚಕ್ರ-ಗದಾಧರನೇ! ಇದಕ್ಕೆ ಕಾರಣವೇನೆಂಬುದನ್ನು ಕೇಳಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.”

ಜನಮೇಜಯ! ದುರ್ಯೋಧನನು ಶ್ರೀಕೃಷ್ಣನನ್ನು ಹೀಗೆ ಪ್ರಶ್ನಿಸ

ಲಾಗಿ, ಮಹಾಬುದ್ಧಿವಂತನಾದ ರಾಜೀವಲೋಚನನಾದ ಶ್ರೀಕೃಷ್ಣನು ತನ್ನ ವಿಶಾಲವಾಗಿದ್ದ ಭುಜವನ್ನು ಮೇಲೆತ್ತಿ–ಮಳೆಗಾಲದ ಮೇಘದ ಶಬ್ದದಂತೆ–ಗಂಭೀರವಾದ ಶಬ್ದದಿಂದ ಕೂಡಿದ ಮಾತಿನಿಂದ ಉತ್ತರಿಸಿದನು. ಅವನ ಆ ಉತ್ತರವು ಪರಮಶ್ರೇಷ್ಠವಾಗಿದ್ದಿತು. ಯುಕ್ತಿಯಿಂದ ಕೂಡಿದ್ದಿತು. ದೈನ್ಯರಹಿತವಾಗಿದ್ದಿತು. ಸ್ಪಷ್ಟೋಚ್ಚಾರಣೆಯಿಂದ ಕೂಡಿದ್ದಿತು. ಅಕ್ಷರಸ್ಖಾಲಿತ್ಯವಿರಲಿಲ್ಲ. ಅಕ್ಷರಗಳ ಸಂಕೀರ್ಣತೆಯೂ (ಒಂದಕ್ಕೊಂದು ಸೇರಿಕೊಂಡಿರುವಿಕೆಯೂ) ಇರಲಿಲ್ಲ. ಅಂತಹ ನಿರ್ದುಷ್ಟವಾದ, ಸುಸ್ಪಷ್ಟವಾದ, ಯುಕ್ತಿಯುಕ್ತವಾದ, ಶ್ರೇಷ್ಠವಾದ, ಅಕ್ಷರಸ್ಖಾಲಿತ್ಯವೇ ಆಗಲೀ–ಶಬ್ದಸ್ಖಾಲಿತ್ಯವೇ ಆಗಲೀ ಇಲ್ಲದ ಮಾತನ್ನು ಶ್ರೀಕೃಷ್ಣನು ಹೇಳಿದನು :

**ಕೃತಾರ್ಥಾ ಭುಞ್ಜತೇ ದೂತಾಃ ಪೂಜಾಂ ಗೃಹ್ಣನ್ತಿ ಚೈವ ಹಿ ।**
**ಕೃತಾರ್ಥಂ ಮಾಂ ಸಹಾಮಾತ್ಯಂ ಸಮರ್ಚಿಷ್ಯಸಿ ಭಾರತ ॥೧೮॥**

"ದೂತರಾಗಿ ಬಂದವರು ತಮ್ಮ ಕಾರ್ಯವು ಸಫಲವಾದನಂತರವೇ ಊಟಮಾಡುತ್ತಾರೆ. ಮಾಡುವ ಸತ್ಕಾರಗಳನ್ನೂ ಸ್ವೀಕರಿಸುತ್ತಾರೆ. ದುರ್ಯೋಧನ! ನಾನು ಬಂದಿರುವ ಕಾರ್ಯವು ಸಾಧಿತವಾದೊಡನೆಯೇ ನನ್ನನ್ನೊಬ್ಬನನ್ನೇ ಅಲ್ಲ ; ನನ್ನೊಡನೆ ಬಂದಿರುವ ಅಮಾತ್ಯರನ್ನೂ ನೀನು ಸತ್ಕರಿಸಬಹುದಾಗಿದೆ."

(ಈ ಶ್ಲೋಕಕ್ಕೆ ವ್ಯಾಸರು ಬಹಳ ಮಹತ್ತ್ವವನ್ನು ಕೊಟ್ಟಿದ್ದಾರೆ. ವೈಶಂಪಾಯನರು ಹಿಂದಿನ ಎರಡು ಶ್ಲೋಕಗಳಲ್ಲಿ ಭಗವದ್ವಾಕ್ಯವು ಎಂತಹುದೆಂಬುದನ್ನು ವರ್ಣಿಸಿದ್ದಾರೆ. ದುರ್ಯೋಧನನು ಈ ಹಿಂದೆ ಶ್ರೀಕೃಷ್ಣನು ಊಟಮಾಡದಿರುವುದಕ್ಕೆ ಕಾರಣವನ್ನು ಕೇಳಿದ್ದಾನೆ. ಆದರೆ ಶ್ರೀಕೃಷ್ಣನು ಒಂದೇ ಶ್ಲೋಕದಲ್ಲಿ ಎಲ್ಲಕ್ಕೂ ಸಮಂಜಸವಾಗಿ ಉತ್ತರಿಸಿದ್ದಾನೆ.

'ನೀನು ನಮ್ಮಿಬ್ಬರಿಗೂ ಸಹಾಯಕನಾಗಿರುವೆ, ನಮ್ಮಿಬ್ಬರ ಹಿತ ಚಿಂತಕನೂ ಆಗಿರುವೆ. ನೀನು ನಮಗೆ ಸಂಬಂಧಿಯೂ ಆಗಿರುವೆ. ಧೃತರಾಷ್ಟ್ರನಿಗೆ ಬಹುಪ್ರಿಯನೂ ಆಗಿರುವೆ'–ಇವೇ ಮುಂತಾದ ದುರ್ಯೋಧನನ ಮಾತಿಗೆ ಶ್ರೀಕೃಷ್ಣನ ನಿಷೇಧಪೂರ್ವಕವಾದ ಉತ್ತರವಿಲ್ಲ–ಒಪ್ಪಿಗೆಯ ಉತ್ತರವೂ ಇಲ್ಲ. **'ಕೃತಾರ್ಥಾ ಭುಞ್ಜತೇ ದೂತಾಃ'**-ಎಂಬುದೇ

ಅವನ ಉತ್ತರವಾಗಿದೆ. ಅರ್ಥಾತ್ ನಾನಿಲ್ಲಿ ದೂತನಾಗಿ, ರಾಯಭಾರಿಯಾಗಿ ಬಂದಿರುತ್ತೇನೆ. ದೂತನಾಗಿ ಬಂದಿರುವವನಿಗೆ ಯಾವ ವಿಧವಾದ ಇತರ ಸಂಬಂಧಗಳೂ ಇರಬಾರದು. ವೇತ್ಥ ತತ್ತ್ವೇನ ಸರ್ವಶಃ–ಧರ್ಮಾರ್ಥ ಗಳನ್ನು ಸಂಪೂರ್ಣರೂಪದಿಂದ ಸರ್ವಪ್ರಕಾರದಿಂದಲೂ ತಿಳಿದಿರುವೆ–ಎಂಬ ದುರ್ಯೋಧನನ ಮಾತಿಗೂ ಇದು ಉತ್ತರವಾಗಿದೆ. 'ನಿಜ; ನಾನು ಧರ್ಮಾರ್ಥಗಳನ್ನು ಪರಿಪೂರ್ಣವಾಗಿ ತಿಳಿದಿರುತ್ತೇನೆ. ದೂತನಾಗಿ ಬಂದಿರು ವುದರಿಂದ ದೂತಧರ್ಮವೇನೆಂಬುದನ್ನೂ ಚೆನ್ನಾಗಿ ಅರಿತಿದ್ದೇನೆ. ದೂತರಾಗಿ ಬಂದವರು ಯಾವಾಗಲೂ ಕಾರ್ಯವು ಸಿದ್ಧಿಯಾಗದೇ ಊಟಮಾಡುವುದಿಲ್ಲ ಮತ್ತು ಸತ್ಕಾರವನ್ನೂ ಸ್ವೀಕರಿಸುವುದಿಲ್ಲ.' ವೈಶಂಪಾಯನರು ಹೇಳಿದಂತೆ ಈ ಮಾತು ಯುಕ್ತಿಯುಕ್ತವಾಗಿಯೂ ಇದೆ. 'ದೂತನಾಗಿ ಬಂದಿರುವ ನಾನು ನಿನ್ನ ಸಂಬಂಧೀ ಎಂದುಕೊಂಡು ಊಟಮಾಡಲಾರೆನು. ಊಟಮಾಡ ಕೂಡದೆಂಬ ಅಭಿಪ್ರಾಯವೇನೂ ಅಲ್ಲ. ದೂತನಾಗಿ ಬಂದ ನನ್ನ ಕಾರ್ಯವು ಸಫಲವಾಯಿತೆಂದರೆ ಊಟಮಾಡುತ್ತೇನೆ. ಆಗ ನನ್ನೊಡನೆ ಬಂದಿರುವವ ರನ್ನೂ ನೀನು ಉಪಚರಿಸಬಹುದು. ನಾನೀಗ ನಿನ್ನ ಬಂಧುವಾಗಿ ನಿನ್ನಿಂದ ಆಹ್ವಾನ ವನ್ನು ಪಡೆದು ಬಂದಿರುವುದಿಲ್ಲ. ನೀನು ನನಗೆ ಆಹ್ವಾನ ವನ್ನೂ ಕೊಟ್ಟಿಲ್ಲ. ನಾನಾಗಿಯೇ ಬಂದಿದ್ದೇನೆ. ದೌತ್ಯವನ್ನು ವಹಿಸಿ ಬಂದಿರುತ್ತೇನೆ. ಧರ್ಮರಾಜನ ರಾಯಭಾರಿಯಾಗಿ ಬಂದಿರುತ್ತೇನೆ. ನಾನು ರಾಯಭಾರಿಯಾಗಿ ಬಂದಿರುವಾಗ ನಮ್ಮಿಬ್ಬರ ಸಂಬಂಧದ ಪ್ರಶ್ನೆಯೇ ಉದ್ಭವಿಸುವುದಿಲ್ಲ. ನಾನಿಲ್ಲಿ ದೂತನಾದವನ ಕರ್ತವ್ಯವೇನೆಂಬುದನ್ನರಿತು ವರ್ತಿಸಬೇಕಾಗಿದೆ. ಕಾರ್ಯವು ಸಫಲವಾಗುವವರೆಗೆ ನನ್ನ ಮತ್ತು ನನ್ನ ಕಡೆ ಯವರ ಊಟ-ಉಪಚಾರಗಳ ವ್ಯವಸ್ಥೆಯನ್ನು ನಾನೇ ಮಾಡಿಕೊಳ್ಳುವುದು ನನ್ನ ಕರ್ತವ್ಯವಾಗಿರುತ್ತದೆ. ನಿನ್ನ ಆತಿಥ್ಯವನ್ನು ಸ್ವೀಕರಿಸಿ ನಿನ್ನ ಹಂಗಿಗೆ ನಾನು ಒಳಗಾಗಲಾರೆ. ದೂತನಾಗಿ ಬಂದಿರುವವನು ಯಾರ ಹಂಗಿಗೂ ಒಳ ಗಾಗಬಾರದು. ದೂತನಾಗಿ ಬಂದಿರುವಾಗ ನಿಮ್ಮ ಸಂಬಂಧಿಯಾಗಿದ್ದರೂ ಅಥವಾ ಮಿತ್ರನಾಗಿದ್ದರೂ ಸತ್ಕಾರವನ್ನು ಹೊಂದಲು ಸಾಧ್ಯವಿಲ್ಲ. ದೂತ ನಾಗಿ ಬಂದವನು ದೂತಧರ್ಮವನ್ನೇ ಪರಿಪಾಲಿಸಬೇಕು. ನಡೆ ಮತ್ತು ನುಡಿಗಳು ಬೇರೆಯಾಗಬಾರದು. ದೂತನಾಗಿ ಬಂದವನು ಬಂಧುವೆಂಬ

ಕಾರಣದಿಂದ ನಿನ್ನ ಸತ್ಕಾರವನ್ನು ಸ್ವೀಕರಿಸಿದೆನಾದರೆ ನನ್ನ ನಡೆ ಮತ್ತು ನುಡಿಗಳಲ್ಲಿ ವ್ಯತ್ಯಾಸವುಂಟಾಗುತ್ತದೆ. ಆದುದರಿಂದ ರಾಯಭಾರಿಯಾಗಿ ಬಂದಿರುವವನು ರಾಯಭಾರಿಯಂತೆಯೇ ವರ್ತಿಸಬೇಕು.' ಈ ಒಂದು ಶ್ಲೋಕಕ್ಕೆ ಇಷ್ಟುದೂರ ಅರ್ಥಮಾಡಬಹುದಾಗಿದೆ)

ಶ್ರೀಕೃಷ್ಣನು ಒಂದೇ ಮಾತಿನಲ್ಲಿ ಅಥವಾ ಒಂದೇ ಶ್ಲೋಕದಲ್ಲಿ ನ್ಯಾಯ ಸಮ್ಮತವಾಗಿ, ವ್ಯವಹಾರಸಮ್ಮತವಾಗಿ ಉತ್ತರಿಸಿದರೂ ದುರ್ಯೋಧನನು ಸುಮ್ಮನಾಗಲಿಲ್ಲ. ಪುನಃ ಶ್ರೀಕೃಷ್ಣನನ್ನು ಕುರಿತು ಹೇಳಿದನು :

ನ ಯುಕ್ತಂ ಭವತಾಸ್ಮಾಸು ಪ್ರತಿಪತ್ತುಮಸಾಮ್ಪ್ರತಮ್ ।<br>
ಕೃತಾರ್ಥಂ ವಾಕೃತಾರ್ಥಂ ಚ ತ್ವಾಂ ವಯಂ ಮಧುಸೂದನ ।<br>
ಯತಾಮಹೇ ಪೂಜಯಿತುಂ ದಾಶಾರ್ಹ ನ ಚ ಶಕ್ನುಮಃ ॥೨೦॥

ನ ಚ ತತ್ಕಾರಣಂ ವಿದ್ಮೋ ಯಸ್ಮಿನ್ನೋ ಮಧುಸೂದನ ।<br>
ಪೂಜಾಂ ಕೃತಾಂ ಪ್ರೀಯಮಾಣೈರ್ನಾಮಂಸ್ಥಾಃ ಪುರುಷೋತ್ತಮ ॥೨೧॥

ವೈರಂ ನೋ ನಾಸ್ತಿ ಭವತಾ ಗೋವಿನ್ದ ನ ಚ ವಿಗ್ರಹಃ ।<br>
ಸ ಭವಾನ್ಪ್ರಸಮೀಕ್ಷ್ಯೈತನ್ನೇದೃಶಂ ವಕ್ತುಮರ್ಹತಿ ॥೨೨॥

"ಮಾಧವ! ನೀನು ನಮ್ಮ ವಿಷಯದಲ್ಲಿ ಅನುಚಿತವಾದ ವ್ಯವಹಾರ ವನ್ನು ನಡೆಸುವುದು ಯುಕ್ತವಲ್ಲ. ನೀನು ಬಂದ ಕಾರ್ಯವು ಸಫಲವಾಗು ವುದಕ್ಕೂ ನಾವು ಕೊಡುವ ಸತ್ಕಾರವನ್ನು ನೀನು ಸ್ವೀಕರಿಸುವುದಕ್ಕೂ ಯಾವ ಸಂಬಂಧವೂ ಇಲ್ಲ. ನೀನು ಬಂದಿರುವ ಕಾರ್ಯವು ಫಲಿಸಲಿ ಅಥವಾ ಫಲಿಸದಿರಲಿ–ನಾವು ನಮ್ಮ ಕರ್ತವ್ಯದಂತೆ ಅಥವಾ ನಿನ್ನ ಮೇಲೆ ನಮಗಿರುವ ವಿಶ್ವಾಸಕ್ಕೆ ಅನುಗುಣವಾಗಿ ನಿನ್ನನ್ನು ಸತ್ಕರಿಸಬೇಕೆಂದು ಸರ್ವದಾ ಪ್ರಯತ್ನಿಸುತ್ತಲೇ ಇದ್ದೇವೆ. ಆದರೆ ನಿನ್ನ ಅನುಚಿತವ್ಯವಹಾರದಿಂದಾಗಿ ನಿನ್ನನ್ನು ಸತ್ಕರಿಸಲು ನಮಗೆ ಅವಕಾಶವೇ ಸಿಕ್ಕುತ್ತಿಲ್ಲ. ನಿನ್ನನ್ನು ಸತ್ಕರಿಸಲು ನಾವು ಅಸಮರ್ಥರಾಗಿದ್ದೇವೆ, ಮಧುಸೂದನ!

ಪುರುಷೋತ್ತಮ! ನಿನ್ನ ವಿಷಯದಲ್ಲಿ ವಿಶೇಷವಾದ ಪ್ರೀತ್ಯಾದರ

ಗಳಿಂದ ಕೂಡಿರುವ ನಮ್ಮಿಂದ ಕೊಡಲ್ಪಡುವ ಸತ್ಕಾರವನ್ನು ನೀನು ಸ್ವೀಕರಿಸದಿರಲು ಕಾರಣವೇನೆಂಬುದೇ ನಮಗೆ ತಿಳಿಯದಾಗಿದೆ. ಗೋವಿಂದ! ನಿನ್ನೊಡನೆ ನಮಗೆ ಯಾವಾಗಲೂ ಶತ್ರುತ್ವವಿಲ್ಲ. ಮೇಲಾಗಿ ಯಾವ ಕಾರಣದಿಂದಲೂ ಇದುವರೆಗೆ ನಾವು ನಿನ್ನೊಡನೆ ಜಗಳವನ್ನೂ ಆಡಿಲ್ಲ. ಈ ವಿಷಯಗಳೆಲ್ಲವನ್ನೂ ನೀನು ಸಂಪೂರ್ಣವಾಗಿ ವಿವೇಚಿಸಿ ಉತ್ತರಿಸಬೇಕೇ ಹೊರತು–'ಕೃತಾರ್ಥಾ ಭುಞ್ಜತೇ ದೂತಾಃ' 'ದೂತರಾದವರು ತಾವು ಬಂದ ಕಾರ್ಯವು ಫಲಿಸಿದನಂತರವೇ ಊಟಮಾಡುತ್ತಾರೆ'–ಎಂದು ಸಲ್ಲದ ಮಾತು ಹೇಳುವುದು ಖಂಡಿತವಾಗಿಯೂ ಸೂಕ್ತವಲ್ಲ."

ಜನಮೇಜಯ! ಈ ರೀತಿ ಹೇಳಿದ ಧೃತರಾಷ್ಟ್ರನ ಮಗನಾದ ಮಂತ್ರಿಸಹಿತನಾದ ದುರ್ಯೋಧನನನ್ನು ನೋಡಿ ನಸುನಗುತ್ತಾ ದಾಶಾರ್ಹಕುಲ ಭೂಷಣನಾದ ಶ್ರೀಕೃಷ್ಣನು ಉತ್ತರಿಸಿದನು :

**ನಾಹಂ ಕಾಮಾನ್ನ ಸಂರಮ್ಭಾನ್ನ ದ್ವೇಷಾನ್ನಾರ್ಥಕಾರಣಾತ್ ।**
**ನ ಹೇತುವಾದಾಲ್ಲೋಭಾದ್ವಾ ಧರ್ಮಂ ಜಹ್ಯಾಂ ಕಥಂಚನ ॥೨೪॥**

"ದುರ್ಯೋಧನ! ನಾನು ಯಾವ ವಿಧವಾದ ಆಶೆ-ಆಕಾಂಕ್ಷೆಗಳಿಂದಾಗಲೀ, ಕ್ರೋಧದಿಂದಾಗಲೀ, ದ್ವೇಷದಿಂದಾಗಲೀ, ಸ್ವಾರ್ಥದಿಂದಲೇ ಆಗಲೀ, ಪರಸ್ಪರವಾಗಿರುವ ಭಿನ್ನಾಭಿಪ್ರಾಯಗಳಿಂದಾಗಲೀ, ನೆಪದಿಂದಾಗಲೀ, ಲೋಭದಿಂದಾಗಲೀ–ಧರ್ಮಮಾರ್ಗವನ್ನು ಯಾವುದೇ ಕಾರಣದಿಂದಲೂ ಯಾವಾಗಲೂ ಬಿಟ್ಟುಹೋಗತಕ್ಕವನಲ್ಲ.

**ಸಮ್ಪ್ರೀತಿಭೋಜ್ಯಾನ್ಯನ್ನಾನಿ ಆಪದ್ಭೋಜ್ಯಾನಿ ವಾ ಪುನಃ ।**
**ನ ಚ ಸಮ್ಪ್ರೀಯಸೇ ರಾಜನ್ನ ಚೈವಾಪದ್ಗತಾ ವಯಮ್ ॥೨೫॥**

ಒಬ್ಬನ ಮನೆಯಲ್ಲಿ ಭೋಜನಮಾಡಬೇಕಾದರೆ ಎರಡು ಕಾರಣಗಳಿಂದ ಭೋಜನಮಾಡಬೇಕಾಗುತ್ತದೆ. ಮೊದಲನೆಯ ಕಾರಣ–ಪ್ರೀತಿ. ಇದು ಇಬ್ಬರಲ್ಲೂ ಇರುವ ವಿಶ್ವಾಸ-ಸೌಹಾರ್ದಗಳನ್ನು ಅವಲಂಬಿಸಿರುತ್ತದೆ. ಎರಡನೆಯ ಕಾರಣ–ಆಪತ್ಪ್ರಾಪ್ತಿ. ಹಸಿವಿನಿಂದ ಪ್ರಾಣವೇ ಹೋಗುವ ಸನ್ನಿವೇಶದಲ್ಲಿ ಮಾಡುವ ಭೋಜನ. ಆ ಸಮಯದಲ್ಲಿ ಪ್ರೀತಿಯ ವಿಷಯವೇ ಬರುವುದಿಲ್ಲ. ಹಸಿವನ್ನು ನಿವಾರಿಸಿಕೊಳ್ಳಲು, ಆಪತ್ತಿನಿಂದ ಪಾರಾಗಲು ಯಾರ

ಮನೆಯಲ್ಲಾದರೂ ಭೋಜನಮಾಡಬಹುದು. ಪ್ರಸಕ್ತಸಂದರ್ಭದಲ್ಲಿ ನಿನ್ನ ಮನೆಯಲ್ಲಿ ನಾನು ಭೋಜನಮಾಡಬೇಕಾದರೆ ಈ ಎರಡು ಕಾರಣಗಳೂ ಅನ್ವಯಿಸುವುದಿಲ್ಲ. ನೀನು ನನ್ನ ಮೇಲೆ ಯಾವ ವಿಧವಾದ ವಿಶೇಷವಾದ ಪ್ರೀತಿಯನ್ನೂ ಇಟ್ಟಿರುವುದಿಲ್ಲ. ಆತ್ಮೀಯತೆಯಿಂದ ನೀನೀಗ ನನ್ನನ್ನು ಭೋಜನಕ್ಕೆ ಆಹ್ವಾನಿಸುತ್ತಿಲ್ಲ. ಅಥವಾ ನನಗೆ ಪ್ರಿಯವಾಗುವಂತಹ ಕಾರ್ಯವನ್ನೂ ನೀನು ಮಾಡಿರುವುದಿಲ್ಲ. ನಾನಾದರೂ ಹಸಿವಿನಿಂದ ಬಳಲಿ ಬೇಸತ್ತಿಲ್ಲ. ಯಾವ ವಿಧವಾದ ಆಪತ್ತಿಗೂ ಒಳಗಾಗಿರುವುದಿಲ್ಲ. ಈ ಎರಡು ಕಾರಣಗಳೂ ಇಲ್ಲದಿರುವಾಗ ನಿನ್ನ ಮನೆಯಲ್ಲಿ ಊಟಮಾಡುವ ಅವಶ್ಯಕತೆಯಾದರೂ ಎಲ್ಲಿದೆ? ಸುಯೋಧನ!

**ಅಕಸ್ಮಾದ್ದ್ವೇಷ್ಟಿ ವೈ ರಾಜಞ್ಜನ್ಮಪ್ರಭೃತಿ ಪಾಣ್ಡವಾನ್ ।**
**ಪ್ರಿಯಾನುವರ್ತಿನೋ ಭ್ರಾತೄನ್ಸರ್ವೈಃ ಸಮುದಿತಾನ್ಗುಣೈಃ ॥೨೬॥**

ದುರ್ಯೋಧನ! ಪ್ರಿಯಾನುವರ್ತಿಗಳಾದ, ಸಕಲಸದ್ಗುಣಸಂಪನ್ನರಾದ, ನಿನ್ನ ಭ್ರಾತೃಗಳಾದ ಪಾಂಡವರನ್ನು ಯಾವ ಕಾರಣವೂ ಇಲ್ಲದೇ ಹುಟ್ಟಿದಾಗಿನಿಂದಲೂ ದ್ವೇಷಿಸುತ್ತಲೇ ಇರುವೆ.

**ಅಕಸ್ಮಾಚ್ಚೈವ ಪಾರ್ಥಾನಾಂ ದ್ವೇಷಣಂ ನೋಪಪದ್ಯತೇ ।**
**ಧರ್ಮೇ ಸ್ಥಿತಾಃ ಪಾಣ್ಡವೇಯಾಃ ಕಸ್ತಾನ್ಕಿಂ ವಕ್ತುಮರ್ಹತಿ ॥೨೭॥**

ಯಾವ ಕಾರಣವೂ ಇಲ್ಲದೆ ಧರ್ಮಾತ್ಮರಾದ ಪಾಂಡವರೊಡನೆ ದ್ವೇಷ ಕಟ್ಟಿಕೊಳ್ಳುವುದೂ, ಅವರನ್ನು ದ್ವೇಷಿಸುವುದೂ–ಖಂಡಿತವಾಗಿಯೂ ನಿನಗೆ ಉಚಿತವಲ್ಲ. ಪಾಂಡವರು ಯಾವಾಗಲೂ ಧರ್ಮಮಾರ್ಗದಲ್ಲಿಯೇ ಇರತಕ್ಕವರು. ಅಂತಹವರ ವಿಷಯದಲ್ಲಿ ಯಾರು ಏನನ್ನು ತಾನೇ ಹೇಳಬಲ್ಲರು?

**ಯಸ್ತಾನ್ದ್ವೇಷ್ಟಿ ಸ ಮಾಂ ದ್ವೇಷ್ಟಿ ಯಸ್ತಾನನು ಸ ಮಾಮನು ।**
**ಐಕಾತ್ಮ್ಯಂ ಮಾಂ ಗತಂ ವಿದ್ಧಿ ಪಾಣ್ಡವೈರ್ಧರ್ಮಚಾರಿಭಿಃ ॥೨೮॥**

ಯಾವನು ಧರ್ಮಚಾರಿಗಳಾದ ಪಾಂಡವರನ್ನು ದ್ವೇಷಿಸುತ್ತಾನೆಯೋ–ಅವನು ನನ್ನನ್ನೂ ದ್ವೇಷಿಸುತ್ತಾನೆ. ಯಾವನು ಪಾಂಡವರಿಗೆ ಅನುಕೂಲನಾಗಿರುವನೋ, ಪಾಂಡವರನ್ನು ಪ್ರೀತಿಸುವನೋ–ಅವನು ನನ್ನನ್ನೂ ಪ್ರೀತಿ

ಸುತ್ತಾನೆ. ಇದು ಹೇಗಾದೀತೆಂದು ನೀನು ಪ್ರಶ್ನಿಸಬಹುದು. ದುರ್ಯೋಧನ! ನಾನು ಧರ್ಮಚಾರಿಗಳಾದ ಪಾಂಡವರೊಡನೆ ಐಕಾತ್ಮ್ಯವನ್ನು ಹೊಂದಿರುತ್ತೇನೆ. ಅವರು ಬೇರೆ, ನಾನು ಬೇರೆ–ಎಂಬ ಭಾವನೆಯೇ ನನಗಿರುವುದಿಲ್ಲ. ಅವರು ನನ್ನ ಪಂಚಪ್ರಾಣಸಮಾನರು. ಈ ವಿಷಯವನ್ನು ನೀನು ಮನಗಾಣು, ಸುಯೋಧನ!

**ಕಾಮಕ್ರೋಧಾನುವರ್ತೀ ಹಿ ಯೋ ಮೋಹಾದ್ವಿರುರುತ್ಸತಿ ।**
**ಗುಣವನ್ತಂ ಚ ಯೋ ದ್ವೇಷ್ಟಿ ತಮಾಹುಃ ಪುರುಷಾಧಮಮ್ ॥೨೯॥**

ಕಾಮ ಮತ್ತು ಕ್ರೋಧಗಳಿಗೆ ವಶೀಭೂತನಾದ ಯಾವನು ಮೋಹವಶನಾಗಿ ಗುಣವಂತನಾದವನೊಬ್ಬನೊಡನೆ ವಿರೋಧವನ್ನು ಕಟ್ಟಿಕೊಳ್ಳಲಿಚ್ಛಿಸುತ್ತಾನೆಯೋ ಮತ್ತು ಕಾರಣವೇ ಇಲ್ಲದೇ ದ್ವೇಷಿಸುತ್ತಾನೆಯೋ–ಅಂತಹವನನ್ನು ಪುರುಷಾಧಮನೆಂದು ಹೇಳುತ್ತಾರೆ.

**ಯಃ ಕಲ್ಯಾಣಗುಣಾಂಜ್ಞಾತೀನ್ಮೋಹಾಲ್ಲೋಭಾದ್ದಿದೃಕ್ಷತೇ ।**
**ಸೋಽಜಿತಾತ್ಮಾ ಜಿತಕ್ರೋಧೋ ನ ಚಿರಂ ತಿಷ್ಠತಿ ಶ್ರಿಯಮ್ ॥೩೦॥**

ಯಾವನು ಕಲ್ಯಾಣಗುಣಸಂಪನ್ನರಾದ ಜ್ಞಾತಿಗಳನ್ನು (ಸಹೋದರರನ್ನು) ಮೋಹದಿಂದಲೂ, ಲೋಭದಿಂದಲೂ ನೋಡುತ್ತಾನೆಯೋ (ದುಷ್ಟರಲ್ಲದವರನ್ನು ದುಷ್ಟರೆಂದು ಪರಿಗಣಿಸುತ್ತಾನೆಯೋ, ಅವರ ಐಶ್ವರ್ಯ ವನ್ನು ಕಬಳಿಸಲು ಅಪೇಕ್ಷಿಸುತ್ತಾನೆಯೋ)–ಜಿತೇಂದ್ರಿಯನಲ್ಲದ ಮತ್ತು ಜಿತಕ್ರೋಧನಲ್ಲದ ಅಂತಹ ಮನುಷ್ಯನು ರಾಜ್ಯಶ್ರೀಯನ್ನು ಹೆಚ್ಚುಕಾಲ ಉಪಭೋಗಿಸಲಾರನು.

**ಅಥ ಯೋ ಗುಣಸಮ್ಪನ್ನಾನ್ಹೃದಯಸ್ಯಾಪ್ರಿಯಾನಪಿ ।**
**ಪ್ರಿಯೇಣ ಕುರುತೇ ವಶ್ಯಾಂಶ್ಚಿರಂ ಯಶಸಿ ತಿಷ್ಠತಿ ॥೩೧॥**

ಕೆಲವು ಕಾರಣಗಳಿಂದ ಕೆಲವು ಸಮಯಗಳಲ್ಲಿ ಸಕಲಗುಣಪರಿಪೂರ್ಣರಾಗಿರತಕ್ಕವರೂ ಅಪ್ರಿಯರಾಗಿಯೇ ಇರಬಹುದು. ಹಾಗಿದ್ದರೂ ಅವರು ಗುಣಸಂಪನ್ನರಾಗಿರುವರೆಂಬ ಒಂದೇ ಒಂದು ಕಾರಣದಿಂದ ಅವರೊಡನೆ ಪ್ರಿಯವಾದ ವ್ಯವಹಾರವನ್ನು ನಡೆಸಿ, ಅವರನ್ನು ತನ್ನವರನ್ನಾಗಿ ಮಾಡಿ

ಕೊಂಡಿದ್ದೇ ಆದರೆ ಅಂತಹವನು ಚಿರಕಾಲ ಯಶೋವಂತನಾಗಿ ಬಾಳುತ್ತಾನೆ.

**ಸರ್ವಮೇತನ್ನ ಭೋಕ್ತವ್ಯಮನ್ನಂ ದುಷ್ಟಾಭಿಸಂಹಿತಮ್ ।**
**ಕ್ಷತ್ತುರೇಕಸ್ಯ ಭೋಕ್ತವ್ಯಮಿತಿ ಮೇ ಧೀಯತೇ ಮತಿಃ ॥೩೨॥**

ಸಕಲವಿಧವಾದ ಪರಿಕರಗಳಿಂದಲೂ ಕೂಡಿರುವ ಈ ನಿನ್ನ ಅನ್ನವು ನನ್ನ ಭೋಜನಕ್ಕೆ ಯೋಗ್ಯವಲ್ಲ. ಏಕೆಂದರೆ : ಈ ಅನ್ನವು ದುಷ್ಟಮನೋಭಾವದಿಂದ ಕೂಡಿರುವ ಅನ್ನವಾಗಿದೆ. ಆದುದರಿಂದ ನನ್ನ ಭೋಜನಕ್ಕೆ ಅಯೋಗ್ಯವಾಗಿದೆ. ಈ ಹಸ್ತಿನಾಪಟ್ಟಣದಲ್ಲಿ ವಿದುರನೊಬ್ಬನ ಅನ್ನವು ಮಾತ್ರವೇ ಭೋಜನಕ್ಕೆ ಯೋಗ್ಯವಾಗಿದೆಯೆಂದು ನನ್ನ ಭಾವನೆಯಾಗಿದೆ."

ಜನಮೇಜಯ! ಶ್ರೀಕೃಷ್ಣನು ಅಸಹನಶೀಲನಾದ ದುರ್ಯೋಧನನಿಗೆ ಹೀಗೆ ಹೇಳಿ, ವೈಭವೋಪೇತವಾಗಿದ್ದ ದುರ್ಯೋಧನನ ಅರಮನೆಯಿಂದ ಹೊರಟೇಬಿಟ್ಟನು. ವಿಶಾಲಮನಸ್ಕನಾದ, ಮಹಾಬಾಹುವಾದ ವಾಸುದೇವನು ದುರ್ಯೋಧನನ ಅರಮನೆಯಿಂದ ಹೊರಬಂದು, ಅಂದು ತಂಗಲು ಮಹಾತ್ಮನಾದ ವಿದುರನ ಮನೆಗೆ ಹೊರಟುಹೋದನು.

ಶ್ರೀಕೃಷ್ಣನು ವಿದುರನ ಮನೆಗೆ ಹೊರಟುಹೋದನಂತರ ದ್ರೋಣ, ಕೃಪ, ಭೀಷ್ಮ, ಬಾಹ್ಲಿಕ ಮತ್ತು ಇತರ ಕೌರವರೂ–ಶ್ರೀಕೃಷ್ಣನನ್ನೇ ಅನುಸರಿಸಿ ವಿದುರನ ಮನೆಗೇ ಹೋದರು. ವಿದುರನ ಮನೆಯಲ್ಲಿ ಕುಳಿತಿದ್ದ ಮಹಾಬಾಹುವಾದ, ವೀರನಾದ, ಮಧುಸೂದನನಾದ ಮಾಧವನನ್ನು ಕುರಿತು ಆ ಕುರುಮುಖ್ಯರು ಹೀಗೆಂದು ಹೇಳಿದರು :

**ನಿವೇದಯಾಮೋ ವಾರ್ಷ್ಣೇಯ ಸರತ್ನಾಂಸ್ತೇ ಗೃಹಾನ್ವಯಮ್ ।**

"ವಾರ್ಷ್ಣೇಯ! ನವರತ್ನಗಳಿಂದ ತುಂಬಿರುವ ನಮ್ಮೆಲ್ಲರ ಮನೆಗಳನ್ನೂ ನಿನಗೆ ಅರ್ಪಿಸುವವರಾಗಿದ್ದೇವೆ. ದಯಮಾಡಿ ಸ್ವೀಕರಿಸು."

ಹೀಗೆಂದು ಹೇಳಿದ ಆ ಕೌರವಪ್ರಮುಖರಿಗೆ ಮಹಾತೇಜಸ್ವಿಯಾದ ಮಧುಸೂದನನು ಹೇಳಿದನು :

**ಸರ್ವೇ ಭವನ್ತೋ ಗಚ್ಛನ್ತು ಸರ್ವಾ ಮೇಽಪಚಿತಿಃ ಕೃತಾ ॥೩೭॥**

"ನಿಮ್ಮ ಈ ಮಾತಿನಿಂದಲೇ ನನಗೆ ಸಕಲವಿಧವಾದ ಸಮ್ಮಾನ

ಗಳನ್ನೂ ಮಾಡಿದಂತಾಗಿದೆ. ನೀವೆಲ್ಲರೂ ನಿಮ್ಮ-ನಿಮ್ಮ ಮನೆಗಳಿಗೆ ದಯ ಮಾಡಿರಿ.” ಬಳಿಕ ಕುರುಮುಖ್ಯರೆಲ್ಲರೂ ಶ್ರೀಕೃಷ್ಣನ ಮಾತಿನಂತೆ ಹೊರಟು ಹೋಗಲಾಗಿ, ವಿದುರನು ಅಪರಾಜಿತನಾದ ದಾಶಾರ್ಹನಂದನನಾದ ಶ್ರೀಕೃಷ್ಣ ನನ್ನು ಸಕಲವಿಧವಾದ ಕಾಮ್ಯವಸ್ತುಗಳಿಂದಲೂ ಪ್ರಯತ್ನಪೂರ್ವಕವಾಗಿ ಆರಾಧಿಸಿದನು. ಮಹಾತ್ಮನಾದ ಕೇಶವನಿಗೆ ವಿದುರನು ಶುಚಿಯಾಗಿಯೂ, ರುಚಿಯಾಗಿಯೂ, ಗುಣಯುಕ್ತವಾಗಿಯೂ ಇದ್ದ ಅನೇಕ ವಿಧವಾದ



ಅನ್ನ-ಪಾನೀಯಗಳನ್ನು ತಂದು ಅರ್ಪಿಸಿದನು. ವಿದುರನು ಶ್ರೀಕೃಷ್ಣನ ಭೋಜನಕ್ಕಾಗಿ ಸಿದ್ಧಪಡಿಸಿದ ಗುಣಯುಕ್ತವಾದ ಅನ್ನ-ಪಾನಾದಿಗಳಿಂದ ಶ್ರೀಕೃಷ್ಣನು ಮೊದಲು ಬ್ರಾಹ್ಮಣರನ್ನು ತೃಪ್ತಿಪಡಿಸಿದನು. ವೇದವಿದರಾದ ಬ್ರಾಹ್ಮಣರಿಗೆ ಶ್ರೀಕೃಷ್ಣನು ಯಥೇಚ್ಛವಾಗಿ ಧನವನ್ನೂ ದಾನಮಾಡಿದನು.

ಬ್ರಾಹ್ಮಣರನ್ನು ಯಥಾಯೋಗ್ಯವಾಗಿ ತೃಪ್ತಿಪಡಿಸಿದನಂತರದಲ್ಲಿ–ದೇವತೆಗಳೊಡನೆ ಇಂದ್ರನು ಕುಳಿತುಕೊಳ್ಳುವಂತೆ–ಶ್ರೀಕೃಷ್ಣನು ತನ್ನ ಅನುಯಾಯಿಗಳೊಡನೆ ಕುಳಿತು ವಿದುರನಿಂದ ಸಿದ್ಧಗೊಳಿಸಲ್ಪಟ್ಟಿದ್ದ ಪರಿಶುದ್ಧವಾದ ಗುಣಯುಕ್ತವಾದ ಅನ್ನ-ಪಾನಾದಿಗಳನ್ನು ಸ್ವೀಕರಿಸಿದನು."

೯೧ನೆಯ ಅಧ್ಯಾಯವು ಮುಗಿಯಿತು.

೯೨ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ವಿದುರನು ದುರ್ಯೋಧನಾದಿಗಳ ಮನಸ್ಸಿನಲ್ಲಿರುವ ದುಷ್ಟ ಭಾವನೆಗಳನ್ನು ವಿವರಿಸುತ್ತಾ ಶ್ರೀಕೃಷ್ಣನು ಪುನಃ ಕೌರವಸಭೆಗೆ ಹೋಗುವುದು ಅನುಚಿತವೆಂದು ಸಲಹೆಯನ್ನು ನೀಡಿದುದು

ಜನಮೇಜಯ! ರಾತ್ರಿಯಲ್ಲಿ ಊಟಮಾಡಿ ವಿಶ್ರಾಂತಿಸುಖವನ್ನು ಅನುಭವಿಸುತ್ತಿದ್ದ ಶ್ರೀಕೃಷ್ಣನನ್ನು ಕುರಿತು ವಿದುರನು ಹೇಳಿದನು :

"ಕೇಶವ! ನಿನ್ನ ಈ ಆಗಮನವು ಸಂಪೂರ್ಣವಾಗಿ ವಿಚಾರಮಾಡಿ ಕೈಗೊಂಡ ಕಾರ್ಯಕ್ರಮವಲ್ಲವೆಂದು ನಾನು ಭಾವಿಸುತ್ತೇನೆ. (ಸಂಪೂರ್ಣವಾಗಿ ವಿಚಾರಮಾಡಿದ್ದರೆ ದೌತ್ಯವನ್ನು ವಹಿಸಿ ನೀನಿಲ್ಲಿಗೆ ಬರುತ್ತಿರಲಿಲ್ಲ.)

ದುರ್ಯೋಧನನ ಸ್ವಭಾವವು ಹೇಗಿರುವುದೆಂದರೆ :

ಅರ್ಥಧರ್ಮಾತಿಗೋ ಮನ್ದಃ ಸಂರಮ್ಭೀ ಚ ಜನಾರ್ದನ ।
ಮಾನಘ್ನೋ ಮಾನಕಾಮಶ್ಚ ವೃದ್ಧಾನಾಂ ಶಾಸನಾತಿಗಃ ॥೨॥

ಧರ್ಮಶಾಸ್ತ್ರಾತಿಗೋ ಮೂಢೋ ದುರಾತ್ಮಾ ಪ್ರಗ್ರಹಂ ಗತಃ ।
ಅನೇಯಃ ಶ್ರೇಯಸಾಂ ಮನ್ದೋ ಧಾರ್ತರಾಷ್ಟ್ರೋ ಜನಾರ್ದನ ॥೩॥

ಕಾಮಾತ್ಮಾ ಪ್ರಾಜ್ಞಮಾನೀ ಚ ಮಿತ್ರಧ್ರುಕ್ಸರ್ವಶಙ್ಕಿತಃ ।
ಅಕರ್ತಾ ಚಾಕೃತಜ್ಞಶ್ಚ ತ್ಯಕ್ತಧರ್ಮಾ ಪ್ರಿಯಾನೃತಃ ॥೪॥

ಮೂಢಶ್ಚಾಕೃತಬುದ್ಧಿಶ್ಚ ಇನ್ದ್ರಿಯಾಣಾಮನೀಶ್ವರಃ ।
ಕಾಮಾನುಸಾರೀ ಕೃತ್ಯೇಷು ಸರ್ವೇಷ್ವಕೃತನಿಶ್ಚಯಃ ॥೫॥

**ಏತೈಶ್ಚಾನ್ಯೈಶ್ಚ ಬಹುಭಿರ್ದೋಷೈರೇವ ಸಮನ್ವಿತಃ ।**
**ತ್ವಯೋಚ್ಯಮಾನಃ ಶ್ರೇಯೋऽಪಿ ಸಂರಮ್ಭಾನ್ನಗ್ರಹೀಷ್ಯತಿ ॥೬॥**

ಜನಾರ್ದನ! ಮಂದಾತ್ಮನಾದ ದುರ್ಯೋಧನನು ಅರ್ಥಧರ್ಮವನ್ನು ಉಲ್ಲಂಘಿಸಿರತಕ್ಕವನು. (ಅರ್ಥವನ್ನು ಹೇಗೆ ಸಂಪಾದಿಸಬೇಕು? ಯಾವ ಮೂಲಕವಾಗಿ ಸಂಪಾದಿಸಬೇಕು? ಹೇಗೆ ವ್ಯಯಿಸಬೇಕು?–ಎಂಬುದಕ್ಕೂ ಒಂದು ಧರ್ಮವಿದೆ ; ಒಂದು ನಿಯಮವಿದೆ. ದುರ್ಯೋಧನನಿಗೆ ಅರ್ಥವನ್ನು ಸಂಪಾದಿಸಬೇಕೆಂಬ ಒಂದು ದುರಾಶೆಯಿದೆಯೇ ಹೊರತು ತಾನು ಸಂಪಾದಿಸು ತ್ತಿರುವ ಮಾರ್ಗವು ಧರ್ಮಸಮ್ಮತವಾದುದೇ–ಎಂಬ ಪರಿವೆಯಿಲ್ಲ. ಆದುದ ರಿಂದವನು ಅರ್ಥಧರ್ಮವನ್ನೇ ಸಂಪೂರ್ಣವಾಗಿ ತ್ಯಜಿಸಿದ್ದಾನೆ.) ಮಹಾ ಕೋಪಿಷ್ಠನು. ಬೇರೆಯವರ ಮಾನಕಳೆಯಲು ಸರ್ವದಾ ನಿರತನಾಗಿರ ತಕ್ಕವನು. ತನಗೆ ಸರ್ವರಿಂದಲೂ ಸರ್ವಕಾಲದಲ್ಲಿಯೂ ಸಮ್ಮಾನ ಸಿಗಬೇಕೆಂದು ಇಚ್ಛಿಸತಕ್ಕವನು. ವೃದ್ಧರಾದವರ–ಗುರುಜನರ ನಿರ್ದೇಶವನ್ನು ಅತಿಕ್ರಮಿಸುವವನು. ಧರ್ಮಶಾಸ್ತ್ರಗಳ ವಿಧಿ-ನಿಯಮಗಳನ್ನು ಅತಿ ಕ್ರಮಿಸುವವನು. ಮೂಢನು. ದುರಾತ್ಮನು. ಹಠಮಾರಿ. ಮಂದಾತ್ಮನಾದ ದುರ್ಯೋಧನನು ಶ್ರೇಷ್ಠರ ಮಾರ್ಗಕ್ಕೆ (ಸನ್ಮಾರ್ಗಕ್ಕೆ) ತರಲು ಸಾಧ್ಯ ವಾಗದವನು. ಕೃಷ್ಣ! ಅವನು ಕಾಮಾತ್ಮನು. ಭೋಗಾಭಿಲಾಷಿಯು. ದುರಾಶೆಯುಳ್ಳವನು. ತಾನೇ ಸರ್ವಜ್ಞನೆಂದು ಭಾವಿಸಿಕೊಂಡುಬಿಟ್ಟಿದ್ದಾನೆ. ಮಿತ್ರದ್ರೋಹೀ. ಎಲ್ಲರನ್ನೂ ಅವನು ಸಂಶಯದಿಂದಲೇ ಕಾಣುತ್ತಾನೆ. ಯಾರೊಬ್ಬರ ಮೇಲೂ ಅವನಿಗೆ ನಂಬಿಕೆಯೇ ಇಲ್ಲ. ಇನ್ನೊಬ್ಬರಿಗೆ ಉಪಕಾರ ಮಾಡತಕ್ಕವನಲ್ಲ. ಇತರರು ಮಾಡಿದ ಉಪಕಾರವನ್ನು ಸ್ಮರಿಸತಕ್ಕವನೂ ಅಲ್ಲ. ಧರ್ಮಮಾರ್ಗವನ್ನೇ ಸಂಪೂರ್ಣವಾಗಿ ತ್ಯಜಿಸಿರತಕ್ಕವನು. ಅಸತ್ಯ ಪ್ರಿಯನು. (ಸುಳ್ಳು ಹೇಳುವುದರಲ್ಲಿಯೇ ಹೆಚ್ಚಿನ ಆಸಕ್ತಿಯುಳ್ಳವನು.) ಕೃಷ್ಣ! ದುರ್ಯೋಧನನು ವಿವೇಕಶೂನ್ಯನಾದ ಮೂಢನು. ದೃಢವಾದ ಬುದ್ಧಿಯಿಲ್ಲದವನು (ಚಂಚಲಬುದ್ಧಿಯವನು.) ಇಂದ್ರಿಯಗಳನ್ನು ನಿಗ್ರಹಿಸ ದವನು (ಸ್ವೇಚ್ಛಾಚಾರೀ.) ಅಂಕೆಯಿಲ್ಲದ ಮನಸ್ಸಿನ ಕಾಮನೆಗಳಿಗೆ ಅನುಸಾರ ವಾಗಿಯೇ ನಡೆಯತಕ್ಕವನು. ಯಾವುದೇ ವಿಷಯದಲ್ಲಾದರೂ ಹೀಗೆಯೇ ಮಾಡಬೇಕೆಂಬ ದೃಢನಿರ್ಧಾರವಿಲ್ಲದವನು.

ಕೃಷ್ಣ! ದುರ್ಯೋಧನನು ಮೇಲೆ ಹೇಳಿರುವ ಮತ್ತು ಇತರ ಅನೇಕ ದುರ್ಗುಣಗಳಿಂದಲೂ ಕೂಡಿದವನಾಗಿದ್ದಾನೆ. ನೀನು ಹೇಳುವುದು ಯದ್ಯಪಿ ಶ್ರೇಯಸ್ಕರವೇ ಆಗಿದ್ದರೂ ಕ್ರೋಧವಶನಾದ ಅವನು ನಿನ್ನ ಹಿತವಾದ ಮಾತನ್ನು ಗ್ರಹಿಸುವುದಿಲ್ಲ. ಭೀಷ್ಮ, ದ್ರೋಣ, ಕೃಪ, ಕರ್ಣ, ದ್ರೋಣ ಪುತ್ರನಾದ ಅಶ್ವತ್ಥಾಮಾ ಮತ್ತು ಜಯದ್ರಥ–ಇವರಲ್ಲಿ (ಇವರ ಪರಾಕ್ರಮ ದಲ್ಲಿ) ದುರ್ಯೋಧನನು ಹೆಚ್ಚಿನ ಭರವಸೆಯನ್ನಿಟ್ಟಿದ್ದಾನೆ. ಅತುಲ ಪರಾಕ್ರಮಿಗಳು ತನ್ನ ಕಡೆಯಲ್ಲಿರುವಾಗ ತನಗೆ ಸೋಲೇ ಆಗದೆಂದು ಭಾವಿಸಿ ದ್ದಾನೆ. ಆದುದರಿಂದ ಅವನು ಸಂಧಾನಕ್ಕೆಂದೂ ಮನಗೊಡಲಾರನು, ಕೃಷ್ಣ! ಪಾಂಡವರು ಭೀಷ್ಮ-ದ್ರೋಣಪ್ರಮುಖರಾದ ಮಹಾವೀರರನ್ನೆದುರಿಸಲು ಅಸಮರ್ಥರೆಂದೂ, ಯುದ್ಧರಂಗದಲ್ಲಿ ಅವರನ್ನು ದಿಟ್ಟಿಸಿನೋಡಲು ಕೂಡ ಪಾಂಡವರಿಂದ ಸಾಧ್ಯವಾಗಲಾರದೆಂದೂ–ಕರ್ಣನಿಗೂ ಮತ್ತು ಧೃತರಾಷ್ಟ್ರನ ಮಕ್ಕಳಿಗೂ ಮನದಟ್ಟಾಗಿಬಿಟ್ಟಿದೆ. ಜನಾರ್ದನ! (ಅವರ ಭ್ರಮೆಯನ್ನು ನಿರಸನಗೊಳಿಸಲು ಯಾರಿಂದಲೂ ಸಾಧ್ಯವಿಲ್ಲ.) ಅನೇಕಾನೇಕ ರಾಜರಿಗೆ ಸಂಬಂಧಿಸಿದ ಸೇನೆಗಳೆಲ್ಲವನ್ನೂ ಏಕತ್ರ ಕಲೆಹಾಕಿದ ಮಾತ್ರದಿಂದಲೇ ಬಾಲಬುದ್ಧಿಯುಳ್ಳ, ಯಾವೊಂದು ವಿಚಕ್ಷಣತೆಯೇ ಇಲ್ಲದ ದುರ್ಯೋಧ ನನು–ತಾನು ಕೃತಕೃತ್ಯನಾದೆನೆಂದೇ ಭಾವಿಸಿಬಿಟ್ಟಿದ್ದಾನೆ. ಕರ್ಣನೊಬ್ಬನೇ ಶತ್ರುಗಳೆಲ್ಲರನ್ನೂ ಪರಾಜಯಗೊಳಿಸಲು ಸಮರ್ಥನೆಂಬ ದುರಭಿಪ್ರಾಯವು ದುರ್ಯೋಧನನ ಮನಸ್ಸಿನಲ್ಲಿ ನೆಟ್ಟುಹೋಗಿದೆ. ಈ ಕಾರಣದಿಂದವನು ಖಂಡಿತವಾಗಿಯೂ ಸಂಧಾನಕ್ಕೆ ಒಪ್ಪಲಾರನು. ನಿನ್ನ ಪ್ರಯತ್ನವೇ ಒಂದಾದರೆ ಅವನ ನಿಶ್ಚಯವೇ ಮತ್ತೊಂದಾಗಿದೆ, ಕೃಷ್ಣ! ಧೃತರಾಷ್ಟ್ರನ ಮಕ್ಕಳಲ್ಲಿ ನೂರು ಮಂದಿಗೂ–'ನಾವು ಪಾಂಡವರಿಗೆ ಯಥೋಚಿತವಾದ ರಾಜ್ಯಭಾಗವನ್ನು ಕೊಡಬೇಕಾಗಿಲ್ಲ'–ಎಂಬುದು ದೃಢವಾಗಿಬಿಟ್ಟಿದೆ. ಈ ಕಾರಣದಿಂದಾಗಿ ಎರಡು ಪಕ್ಷಗಳಿಗೂ ''ಸೌಭ್ರಾತ್ರವನ್ನುಂಟುಮಾಡಬೇಕೆಂಬ ಕಾರಣದಿಂದಾಗಿ ಪ್ರಯತ್ನಿಸುತ್ತಿರುವ ನಿನ್ನ ಮಾತು ಅವರಲ್ಲಿ ನಿರರ್ಥಕ ವಾಗುವುದೆಂದೇ ನಾನು ಭಾವಿಸುತ್ತೇನೆ.

**ಯತ್ರ ಸೂಕ್ತಂ ದುರುಕ್ತಂ ಚ ಸಮಂ ಸ್ಯಾನ್ಮಧುಸೂದನ ।**
**ನ ತತ್ರ ಪ್ರಲಪೇತ್ಪ್ರಾಜ್ಞೋ ಬಧಿರೇಷ್ವಿವ ಗಾಯನಃ ॥೧೩॥**

ಯಾವ ಸ್ಥಳದಲ್ಲಿ ಒಳ್ಳೆಯ ಮಾತುಗಳೂ ಮತ್ತು ಕೆಟ್ಟ ಮಾತುಗಳೂ (ಸದುಪದೇಶಗಳೂ ಮತ್ತು ದುರ್ಬೋಧನೆಗಳೂ) ಸಮವಾಗಿ ಪರಿಗಣಿತವಾಗುತ್ತವೆಯೋ, ಎರಡಕ್ಕೂ ತಾರತಮ್ಯವನ್ನು ಕಾಣುವ ವಿವೇಚನೆಯೇ ಇರುವುದಿಲ್ಲವೋ–ಅಂತಹ ಸ್ಥಳದಲ್ಲಿ ಪ್ರಾಜ್ಞನಾದವನು ಹಿತೋಕ್ತಿಗಳನ್ನು ಹೇಳಲು ಹೋಗಲೇಬಾರದು. ಅಂತಹ ಸ್ಥಳಗಳಲ್ಲಿ ಪ್ರಾಜ್ಞನಾದವನು ಮಾತನಾಡಲು ಹೋದರೆ (ಹಿತೋಕ್ತಿಗಳನ್ನು ಹೇಳಲು ಹೋದರೆ) ಆ ಹಿತೋಕ್ತಿಗಳು ಕಿವುಡರ ಮಧ್ಯದಲ್ಲಿ ಮಾಡಿದ ಗಾಯನದಂತೆ ವ್ಯರ್ಥವಾಗಿ ಹೋಗುತ್ತವೆ.

**ಅವಿಜಾನತ್ಸು ಮೂಢೇಷು ನಿರ್ಮರ್ಯಾದೇಷು ಮಾಧವ ।**
**ನ ತ್ವಂ ವಾಕ್ಯಂ ಬ್ರುವನ್ಯುಕ್ತಶ್ಚಾಣ್ಡಾಲೇಷು ದ್ವಿಜೋ ಯಥಾ ॥೧೪॥**

ಯಾವ ರೀತಿಯಲ್ಲಿ ವಿದ್ಯಾವಂತನಾದ ಬ್ರಾಹ್ಮಣನೊಬ್ಬನು ಚಂಡಾಲರ ಮಧ್ಯದಲ್ಲಿ ಕುಳಿತು ಉಪದೇಶಕೊಡುವುದು ಅಯುಕ್ತವೋ–ಅದೇ ರೀತಿಯಲ್ಲಿ ಮಾನ-ಮರ್ಯಾದೆಗಳನ್ನು ಬಿಟ್ಟಿರುವ ಮೂಢರಾದ ಅಜ್ಞಾನಿಗಳ ಸಮೀಪಕ್ಕೆ ಹೋಗಿ ಅವರಿಗೆ ಹಿತೋಪದೇಶಮಾಡುವುದು ನಿನಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ.

**ಸೋಽಯಂ ಬಲಸ್ಥೋ ಮೂಢಶ್ಚ ನ ಕರಿಷ್ಯತಿ ತೇ ವಚಃ ।**
**ತಸ್ಮಿನ್ನಿರರ್ಥಕಂ ವಾಕ್ಯಮುಕ್ತಂ ಸಮ್ಪತ್ಸ್ಯತೇ ತವ ॥೧೫॥**

ನೀನು ಯಾವನಿಗೆ ಹಿತೋಪದೇಶವನ್ನು ಮಾಡಲಿರುವೆಯೋ–ಅವನು ಅಪಾರವಾದ ಬಲವನ್ನು ಸಂಗ್ರಹಮಾಡಿದ್ದಾನೆ. ಮೂಢನಾಗಿದ್ದಾನೆ. ಅವನಿಗೆ ನೀನು ಹೇಳುವ ಬುದ್ಧಿವಾದವು ಖಂಡಿತವಾಗಿಯೂ ನಿರರ್ಥಕವಾಗಿ ಪರಿಣಮಿಸುತ್ತದೆ.

ಕೃಷ್ಣ! ಅವರೆಲ್ಲರೂ ಮಹಾಪಾಪಿಷ್ಠರು. ಅಂತಹ ಪಾಪಿಷ್ಠರು ಸಭೆಯಲ್ಲಿ ಕುಳಿತಿರುವಾಗ ಅವರ ಮಧ್ಯದಲ್ಲಿ ನೀನು ಹೋಗಿ ಕುಳಿತುಕೊಳ್ಳುವುದು ನನಗೆ ಖಂಡಿತವಾಗಿಯೂ ಸರಿಯೆನಿಸುವುದಿಲ್ಲ. ಅಂತಹವರ ಮಧ್ಯೆ ನೀನು ಹೋಗಿ ಅವರಿಗೆ ವಿರೋಧವೆನಿಸುವ ಮಾತುಗಳನ್ನಾಡುವುದೂ ಸಮಂಜಸವಾಗುವುದಿಲ್ಲ, ಕೃಷ್ಣ!

**ಅನುಪಾಸಿತವೃದ್ಧತ್ವಾಚ್ಛ್ರಿಯೋ ದರ್ಪಾಚ್ಚ ಮೋಹಿತಃ ।**
**ವಯೋದರ್ಪಾದಮರ್ಷಾಚ್ಚ ನ ತೇ ಶ್ರೇಯೋ ಗ್ರಹೀಷ್ಯತಿ ॥೧೮॥**

ದುರ್ಯೋಧನನು ವೃದ್ಧರ ಸೇವೆಯನ್ನೆಂದೂ ಮಾಡಿದವನಲ್ಲ. ಐಶ್ವರ್ಯದಿಂದಲೂ ಮತ್ತು ದರ್ಪದಿಂದಲೂ (ಅಹಂಕಾರದಿಂದಲೂ) ಮೋಹಿತನಾಗಿದ್ದಾನೆ. ಮೇಲಾಗಿ ಅವನಿಗೆ ಯೌವನದ ಗರ್ವವೂ ಇದೆ. ಪಾಂಡವರ ವಿಷಯದಲ್ಲಿ ಅವನೆಂದಿಗೂ ಸಹನೆಯಿಂದಿರತಕ್ಕವನಲ್ಲ. ಪಾಂಡವರ ವಿಷಯದಲ್ಲಿ ಅವನಿಗೆ ಯಾವಾಗಲೂ ಅಸಹನೆಯೇ ಇದೆ. ಆದುದರಿಂದ ಅವನು ನಿನ್ನ ಹಿತೋಪದೇಶವನ್ನು ತನಗೆ ಶ್ರೇಯಸ್ಕರವೆಂದು ಖಂಡಿತವಾಗಿಯೂ ಗ್ರಹಿಸುವುದಿಲ್ಲ. ಮೇಲಾಗಿ, ದುರ್ಯೋಧನನ ಬಳಿಯಲ್ಲೀಗ ಪ್ರಬಲವಾದ ಸೈನ್ಯವಿದೆ. ನಿನ್ನ ಮೇಲೂ ಅವನಿಗೆ ಮಹತ್ತರವಾದ ಸಂದೇಹವಿದೆ. ಈ ಕಾರಣದಿಂದಲೂ ನೀನವನಿಗೆ ಹಿತವನ್ನೇ ಹೇಳಿದರೂ–ಅದು ತನಗೆ ಅಹಿತವೆಂದೇ ಭಾವಿಸಿ ನೀನು ಹೇಳಿದಂತೆ ಮಾಡಹೋಗುವುದಿಲ್ಲ. ಇಂದು ಅವನ ಬಳಿಯಲ್ಲಿ ಸಂಗ್ರಹವಾಗಿರುವ ಅಪಾರವಾದ ಸೈನ್ಯದ ಮೇಲೆ, ಅವನ ಕಡೆಯಲ್ಲಿರುವ ಅತಿರಥ-ಮಹಾರಥರ ಮೇಲೆ ಅವನಿಗೆ ದೃಢವಾದ ವಿಶ್ವಾಸವಿದೆ. ಸಕಲದೇವತೆಗಳೊಡನೆ ಇಂದ್ರನೇ ತಮ್ಮ ಮೇಲೆ ಯುದ್ಧಕ್ಕೆ ಬಂದರೂ ತಮ್ಮನ್ನು ಪರಾಜಯಗೊಳಿಸಲಾರನೆಂಬ ದೃಢವಿಶ್ವಾಸವು ಧೃತರಾಷ್ಟ್ರನ ಮಕ್ಕಳೆಲ್ಲರಲ್ಲಿಯೂ ಇದೆ. ಅವರಿಗೆ ತಮ್ಮ ಬಲದಲ್ಲಿ ಇಂತಹ ದೃಢವಿಶ್ವಾಸವಿರುವಾಗ–ಅವರೆಲ್ಲರೂ ಕಾಮ-ಕ್ರೋಧಗಳ ವಶಾನುವರ್ತಿಗಳಾಗಿರುವಾಗ–ನೀನೆಷ್ಟೇ ಸಮರ್ಥವಾದ, ಯುಕ್ತವಾದ, ಉಭಯಪಕ್ಷಗಳಿಗೂ ಹಿತಕರವಾದ ಮಾತುಗಳನ್ನಾಡಿದರೂ ಅವರ ಬುದ್ಧಿಯನ್ನು ಬದಲಾಯಿಸಲು ಸಾಧ್ಯವಾಗುವುದಿಲ್ಲ, ಕೃಷ್ಣ!

**ಮಧ್ಯೇ ತಿಷ್ಠನ್ಹಸ್ತ್ಯನೀಕಸ್ಯ ಮನ್ದೋ**
**ರಥಾಶ್ವಯುಕ್ತಸ್ಯ ಬಲಸ್ಯ ಮೂಢಃ ।**
**ದುರ್ಯೋಧನೋ ಮನ್ಯತೇ ವೀತಭೀತಿಃ**
**ಕೃತ್ಸ್ನಾ ಮಯೇಯಂ ಪೃಥಿವೀ ಜಿತೇತಿ ॥೨೨॥**

ರಥಾಶ್ವ-ಗಜ-ಪದಾತಿಸೈನ್ಯಗಳ ಮಧ್ಯದಲ್ಲಿ–ಮಂದನಾದ, ಮೂಢ

ನಾದ ಮತ್ತು ಭಯರಹಿತನಾದ ದುರ್ಯೋಧನನು ನಿಂತು, ತನ್ನಿಂದ ಈ ಅಖಂಡಪೃಥ್ವಿಯೇ ಜಯಿಸಲ್ಪಟ್ಟಿತೆಂದು ಭಾವಿಸಿಕೊಂಡಿದ್ದಾನೆ. ಧೃತರಾಷ್ಟ್ರನ ಹಿರಿಯ ಮಗನಾದ ದುರ್ಯೋಧನನು ಈ ಭೂಮಂಡಲದಲ್ಲಿ ನಿಃಸಪತ್ನವಾದ (ಶತ್ರುರಹಿತವಾದ) ಮಹಾಸಾಮ್ರಾಜ್ಯವನ್ನು ಅಭಿಲಾಷಿಸುತ್ತಿದ್ದಾನೆ. ಕೃತ್ರಿಮದ ಪಗಡೆಯಾಟದಿಂದ ಪ್ರಾಪ್ತವಾಗಿರುವ ಈ ಅಖಂಡಸಾಮ್ರಾಜ್ಯವು ತನ್ನದೇ ಆಗಿಬಿಟ್ಟಿರುವುದೆಂದೂ ಭಾವಿಸಿಬಿಟ್ಟಿದ್ದಾನೆ. ಈ ಕಾರಣಗಳಿಂದಾಗಿ ಅವನೊಡನೆ ಸಂಧಿಯ ಪ್ರಯತ್ನವು ಸರ್ವಥಾ ನಿರರ್ಥಕವೇ ಸರಿ, ಕೃಷ್ಣ! ಈಗಿನ ಸನ್ನಿವೇಶವನ್ನು ನೋಡಿದರೆ ಈ ಭೂಮಂಡಲದ ವಿನಾಶಕ್ಕೆ ಕಾಲವೂ ಪಕ್ವವಾಗಿದೆಯೆಂದೇ ಕಾಣುತ್ತಿದೆ. (ಪೃಥ್ವಿಯಲ್ಲಿರುವ ಸಕಲರಾಜರ ಅವಸಾನವೂ ಸನ್ನಿಹಿತವಾಗಿದೆಯೆಂದೇ ತೋರುತ್ತದೆ.) ಏಕೆಂದರೆ : ದುರ್ಯೋಧನನ ಸಲುವಾಗಿ ಪಾಂಡವರೊಡನೆ ಯುದ್ಧಮಾಡುವ ಇಚ್ಛೆಯಿಂದ ಈ ಭೂಮಂಡಲದಲ್ಲಿರುವ ಸಕಲರಾಜರೂ, ಸಕಲಯೋಧರೂ ಯುದ್ಧದುರ್ಮದರಾದ ದಂಡನಾಯಕರಿಂದೊಡಗೂಡಿ ಇಲ್ಲಿಗೆ ಆಗಮಿಸಿರುತ್ತಾರೆ. ಅವರೆಲ್ಲರೂ ಯಾರೆಂಬುದು ಗೊತ್ತಿದೆಯೇ? ಕೃಷ್ಣ!

ಸರ್ವೇ ಚೈತೇ ಕೃತವೈರಾಃ ಪುರಸ್ತಾ-
ತ್ತ್ವಯಾ ರಾಜಾನೋ ಹೃತಸಾರಾಶ್ಚ ಕೃಷ್ಣ ।
ತವೋದ್ವೇಗಾತ್ಸಂಶ್ರಿತಾ ಧಾರ್ತರಾಷ್ಟ್ರಾ-
ನ್ಸುಸಂಹತಾಃ ಸಹ ಕರ್ಣೇನ ವೀರಾಃ ॥೨೫॥

ಇಂದು ದುರ್ಯೋಧನನ ಪರವಾಗಿ ಯುದ್ಧಮಾಡಲು ಬಂದಿರುವ ರಾಜರೆಲ್ಲರೂ ಹಿಂದೆ ನಿನ್ನನ್ನು ದ್ವೇಷಿಸುವವರೇ ಆಗಿದ್ದರು. ನೀನವರ ಸರ್ವಸ್ವವನ್ನೂ ಅನೇಕಬಾರಿ ಸೂರೆಗೊಂಡಿದ್ದೆ. ನಿನ್ನ ಭಯದಿಂದಾಗಿ ಅವರಿಂದು ಧೃತರಾಷ್ಟ್ರನ ಮಕ್ಕಳನ್ನು ಆಶ್ರಯಿಸಿದ್ದಾರೆ. ಕರ್ಣನ ಜೊತೆಯಲ್ಲಿ ಸೇರಿಕೊಂಡು ಸಂಘಟಿತರಾಗಿದ್ದಾರೆ.

ತ್ಯಕ್ತಾತ್ಮಾನಃ ಸಹ ದುರ್ಯೋಧನೇನ
ಹೃಷ್ಟಾ ಯೋದ್ಧುಂ ಪಾಣ್ಡವಾನ್ಸರ್ವಯೋಧಾಃ ।

ತೇಷಾಂ ಮಧ್ಯೇ ಪ್ರವಿಶೇಥಾ ಯದಿ ತ್ವಂ
ನ ತನ್ಮತಂ ಮಮ ದಾಶಾರ್ಹ ವೀರ ॥೨೬॥

ಆ ರಾಜರೆಲ್ಲರೂ ತಮ್ಮ ಜೀವದ ಹಂಗನ್ನೇ ತೊರೆದುಬಿಟ್ಟಿದ್ದಾರೆ. ರಣೋತ್ಸಾಹಿಗಳಾದ ಆ ಎಲ್ಲ ಯೋಧರೂ ದುರ್ಯೋಧನನೊಡನೆ ಸೇರಿ ಕೊಂಡು ಪಾಂಡವರೊಡನೆ ಯುದ್ಧಮಾಡಲು ಸಿದ್ಧರಾಗಿದ್ದಾರೆ. ಅಂತಹ ವೈರಿಗಳ ಮಧ್ಯದಲ್ಲಿ ನೀನೇನಾದರೂ ಸಿಕ್ಕಿಕೊಂಡೆಯಾದರೆ ಪರಿಣಾಮವು ಭೀಕರವಾಗಬಹುದು. ಆದುದರಿಂದ, ದಾಶಾರ್ಹಕುಲತಿಲಕನೇ! ನೀನಲ್ಲಿಗೆ ಪುನಃ ಹೋಗುವುದು ನನಗೆ ಸರಿಯೆನಿಸುವುದಿಲ್ಲ.

ಶತ್ರುಕರ್ಶನನೇ! ದುಷ್ಟಬುದ್ಧಿಯವರೇ ಬಹುಸಂಖ್ಯೆಯಲ್ಲಿ ಉಪಸ್ಥಿತ ರಾಗಿರುವ ಶತ್ರುರಾಜರ ಮಧ್ಯದಲ್ಲಿ ನೀನು ಹೇಗೆ ತಾನೇ ಹೋಗುವೆ? ಹೀಗೆ ನಾನು ಹೇಳುತ್ತಿರುವುದರಿಂದ ನಿನ್ನ ಪರಾಕ್ರಮದ ವಿಷಯದಲ್ಲಿ ನಾನು ಸಂದೇಹಿಸುತ್ತಿರುವೆನೆಂದು ಭಾವಿಸಬೇಡ, ಕೃಷ್ಣ! ಮಹಾಬಾಹುವೇ! ಸಕಲ ದೇವತೆಗಳೂ ನಿನ್ನ ಮುಂದೆ ಸರ್ವಥಾ ನಿಲ್ಲಲಾರರೆಂಬುದನ್ನು ನಾನು ತಿಳಿದಿರು ತ್ತೇನೆ. ಶತ್ರುತಾಪಕನೇ! ನಿನ್ನ ಪ್ರಭಾವ, ಪೌರುಷ, ಬುದ್ಧಿ–ಎಲ್ಲವನ್ನೂ ನಾನು ಸಂಪೂರ್ಣವಾಗಿ ತಿಳಿದುಕೊಂಡಿರುತ್ತೇನೆ. ಹೀಗಿದ್ದರೂ ಕೇವಲ ಮಮತೆಯ ಕಾರಣದಿಂದಾಗಿ ನಾನೀ ಮಾತುಗಳನ್ನು ಹೇಳುತ್ತಿದ್ದೇನೆ. ನನಗೆ ಪಾಂಡವರ ಮೇಲೆ ಎಷ್ಟು ಪ್ರೀತಿಯಿದೆಯೋ ಅದಕ್ಕಿಂತಲೂ ಹೆಚ್ಚಿನ ಪ್ರೀತಿಯು ನಿನ್ನ ಮೇಲಿದೆ. ಕೃಷ್ಣ! ಪ್ರೇಮದ ಕಾರಣದಿಂದಲೂ, ನಿನ್ನ ಮೇಲೆ ನನಗಿರುವ ವಿಶೇಷಗೌರವದ ಕಾರಣದಿಂದಲೂ ಮತ್ತು ನಿನ್ನಲ್ಲಿ ನನಗೆ ಹೆಚ್ಚಿನ ಸೌಹಾರ್ದವಿರುವುದರಿಂದಲೂ ನಾನೀಮಾತುಗಳನ್ನು ನಿನಗೆ ಹೇಳುತ್ತಿದ್ದೇನೆ.

ಯಾ ಮೇ ಪ್ರೀತಿಃ ಪುಷ್ಕರಾಕ್ಷ ತ್ವದ್ದರ್ಶನಸಮುದ್ಭವಾ ।
ಸಾ ಕಿಮಾಖ್ಯಾಯತೇ ತುಭ್ಯಮನ್ತರಾತ್ಮಾಸಿ ದೇಹಿನಾಮ್ ॥೩೦॥

ಪುಷ್ಕರಾಕ್ಷ! ಕೃಷ್ಣ! ನಿನ್ನ ದಿವ್ಯದರ್ಶನದಿಂದ ನನ್ನ ಮನಸ್ಸಿ ನಲ್ಲುಂಟಾಗಿರುವ ಸಂತೋಷವೆಷ್ಟೆಂಬುದನ್ನು ವರ್ಣಿಸಲು ಸಾಧ್ಯವಾದೀತೇ? ಅದನ್ನು ನಿನ್ನೊಡನೆ ಹೇಳುವ ಕಾರಣವೂ ಇಲ್ಲ. ನನ್ನ ಮನಸ್ಸಿಗಾದ

ಆನಂದವನ್ನು ನೀನೇ ತಿಳಿದುಕೊಂಡುಬಿಟ್ಟಿರುವೆ. ಸಕಲಪ್ರಾಣಿಗಳ ಅಂತ ರಾತ್ಮನೂ ನೀನೇ ಆಗಿರುವೆಯಲ್ಲವೇ? ಕೃಷ್ಣ!"

೯೨ನೆಯ ಅಧ್ಯಾಯವು ಮುಗಿಯಿತು.

೯೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಸಂಧಿಪ್ರಯತ್ನದ ಔಚಿತ್ಯವನ್ನು ವಿದುರನಿಗೆ ವಿವರಿಸಿದುದು

ಪಾರಿಕ್ಷಿತ! ಭಗವಾನ್ ಶ್ರೀಕೃಷ್ಣನು ವಿದುರನಿಗೆ ಹೇಳುತ್ತಾನೆ :

**ಯಥಾ ಬ್ರೂಯಾನ್ಮಹಾಪ್ರಾಜ್ಞೋ ಯಥಾ ಬ್ರೂಯಾದ್ವಿಚಕ್ಷಣಃ ।**
**ಯಥಾ ವಾಚ್ಯಸ್ತ್ವದ್ವಿಧೇನ ಭವತಾ ಮದ್ವಿಧಃ ಸುಹೃತ್ ॥೧॥**

**ಧರ್ಮಾರ್ಥಯುಕ್ತಂ ತಥ್ಯಂ ಚ ಯಥಾ ತ್ವಯ್ಯುಪಪದ್ಯತೇ ।**
**ತಥಾ ವಚನಮುಕ್ತೋಽಸ್ಮಿ ತ್ವಯೈತತ್ಪಿತೃಮಾತೃವತ್ ॥೨॥**

"ವಿದುರ! ಮಹಾಪ್ರಾಜ್ಞನಾದವನೊಬ್ಬನು ಯಾವ ರೀತಿಯಲ್ಲಿ ಸಲಹೆನೀಡುವನೋ, ದೂರದರ್ಶಿಯಾದವನೊಬ್ಬನು ಯಾವ ರೀತಿಯಲ್ಲಿ ಸಲಹೆನೀಡುವನೋ, ನಿನ್ನಂತಹವರು ನನ್ನಂತಹ ಸುಹೃದರಿಗೆ ಯಾವ ರೀತಿ ಯಲ್ಲಿ ಸಲಹೆ ನೀಡಬೇಕೋ–ಅದೇ ರೀತಿಯಲ್ಲಿ ಅಂತಹ ಅತ್ಯಮೋಘವಾದ ಸಲಹೆಯನ್ನೇ ನೀನು ನೀಡಿರುವೆ. ನಿನ್ನಿಂದ ಸೂಚಿತವಾದ ಸಲಹೆಗಳು ಧರ್ಮಾರ್ಥಯುಕ್ತವಾಗಿವೆ ಮತ್ತು ಯಥಾರ್ಥವಾಗಿವೆ. ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಯಾವ ರೀತಿಯಲ್ಲಿ ಹಿತೋಪದೇಶಮಾಡುತ್ತಾರೆಯೋ– ಹಾಗೆಯೇ ಹಿತೋಪದೇಶದ ಮಾತುಗಳನ್ನೇ ನೀನೂ ಆಡಿರುವೆ, ವಿದುರ!

**ಸತ್ಯಂ ಪ್ರಾಪ್ತಂ ಚ ಯುಕ್ತಂ ವಾಪ್ಯೇವಮೇವ ಯಥಾತ್ಥ ಮಾಮ್ ।**
**ಶೃಣುಷ್ವಾಗಮನೇ ಹೇತುಂ ವಿದುರಾವಹಿತೋ ಭವ ॥೩॥**

ನೀನು ನನಗೆ ಹೇಳಿರುವುದು ಸತ್ಯವಾಗಿಯೂ ಇದೆ ; ಕಾಲೋಚಿತ ವಾಗಿಯೂ ಇದೆ ; ಯುಕ್ತವಾಗಿಯೂ ಇದೆ. ಆದರೆ ನಾನಿಲ್ಲಿಗೆ ಬಂದಿರುವ ಕಾರಣವನ್ನು ಸಾವಧಾನಚಿತ್ತನಾಗಿ ಕೇಳು, ವಿದುರ!

ವಿದುರ! ಧೃತರಾಷ್ಟ್ರನ ಮಗನಾದ ದುರ್ಯೋಧನನ ದುಷ್ಟಭಾವ, ಕ್ಷತ್ರಿಯಯೋಧರ ವೈರಭಾವ–ಈ ಎಲ್ಲ ವಿಷಯಗಳನ್ನೂ ಮನಸ್ಸಿಗೆ ತಂದು ಕೊಂಡೇ ನಾನು ಕೌರವರಲ್ಲಿಗೆ ಬಂದಿರುತ್ತೇನೆ. ನಿನಗೆ ತಿಳಿದಿರುವಂತೆಯೇ ಇಂದು ಅಖಂಡವಿಶ್ವವೇ ಮೃತ್ಯುಮುಖದಲ್ಲಿದೆ. ಗಜಾಶ್ವ-ರಥ-ಪದಾತಿ ಗಳಿಂದ ಕೂಡಿರುವ ಈ ಅಖಂಡಪೃಥ್ವಿಯನ್ನು ಈ ಸಮಯದಲ್ಲಿ ಯಾವನು ಮೃತ್ಯುವಿನಿಂದ ವಿಮೋಚನೆಮಾಡುತ್ತಾನೆಯೋ–ಅವನೇ ಉತ್ತಮೋತ್ತಮ ವಾದ ಧರ್ಮವನ್ನು (ಪುಣ್ಯವನ್ನು) ಪಡೆಯುತ್ತಾನೆ.

**ಧರ್ಮಕಾರ್ಯಂ ಯತಞ್ಛಕ್ತ್ಯಾ ನೋ ಚೇತ್ಪ್ರಾಪ್ನೋತಿ ಮಾನವಃ ।**
**ಪ್ರಾಪ್ತೋ ಭವತಿ ತತ್ಪುಣ್ಯಮತ್ರ ಮೇ ನಾಸ್ತಿ ಸಂಶಯಃ ॥೬॥**

ತನಗೆ ಸಾಧ್ಯವಿದ್ದಷ್ಟು ಧರ್ಮಕಾರ್ಯವನ್ನು ಮಾಡಲು ಪ್ರಯತ್ನಿಸು ವವನ ಶ್ರಮವು ಸಾರ್ಥಕವಾಗದೆಯೇ ಇರಬಹುದು ; ಅರ್ಧದಲ್ಲಿಯೇ ನಿಲ್ಲ ಬಹುದು. ಆದರೆ ಧರ್ಮಕಾರ್ಯವನ್ನು ಮಾಡಬೇಕೆನ್ನುವ ಪ್ರಯತ್ನ ಮಾತ್ರದಿಂದಲೇ ಅವನಿಗೆ ಪುಣ್ಯವು ಲಭಿಸುತ್ತದೆ. ಈ ವಿಷಯದಲ್ಲಿ ನನಗೆ ಸಂಶಯವೇ ಇಲ್ಲ. ಮೃತ್ಯುಮುಖದಲ್ಲಿರುವ ವಿಶ್ವವನ್ನು ಉಳಿಸುವ ಸಲು ವಾಗಿ ನನ್ನ ಕೈಯಲ್ಲಾದಷ್ಟು ಪ್ರಯತ್ನಮಾಡಲು ಬಂದಿರುತ್ತೇನೆ. ನನ್ನ ಪ್ರಯತ್ನವು ಅನೇಕಕಾರಣಗಳಿಂದ ಫಲಿತವಾಗದಿರಬಹುದು. ಆದರೆ ನನ್ನ ಪ್ರಯತ್ನವು ನಿಷ್ಫಲವಾಗುವುದಿಲ್ಲ. ಧರ್ಮಕಾರ್ಯವನ್ನು ಮಾಡಬೇಕೆಂಬ ಧ್ಯೇಯದಿಂದ ಮಾಡಿದ ಪ್ರಯತ್ನಕ್ಕೆ ತಕ್ಕುದಾದ ಪುಣ್ಯವು ನನಗೆ ಲಭಿಸುತ್ತದೆ. (ಶ್ರೀಕೃಷ್ಣನ ದಿವ್ಯವಾಣಿಯಿಂದ ಧರ್ಮಕಾರ್ಯಕ್ಕೆ ಪ್ರಯತ್ನಿಸುವುದೂ ಪುಣ್ಯದಾಯಕವೆಂದು ಸ್ಥಿರಪಟ್ಟಿದೆ.)

**ಮನಸಾ ಚಿನ್ತಯನ್ಪಾಪಂ ಕರ್ಮಣಾ ನಾತಿರೋಚಯನ್ ।**
**ನ ಪ್ರಾಪ್ನೋತಿ ಫಲಂ ತಸ್ಯೇತ್ಯೇವಂ ಧರ್ಮವಿದೋ ವಿದುಃ ॥೭॥**

(ಧರ್ಮಕಾರ್ಯವನ್ನು ಮಾಡಬೇಕೆನ್ನುವ ಪ್ರಯತ್ನ ಅಥವಾ ಮನಸ್ಸಿದ್ದ ಮಾತ್ರದಿಂದಲೇ ಪುಣ್ಯವು ಲಭಿಸುತ್ತದೆ. ಹಾಗೆಯೇ ಪಾಪಕಾರ್ಯವನ್ನು ಮಾಡಬೇಕೆಂದು ಮನಸ್ಸಿನಲ್ಲಿದ್ದರೆ ಪಾಪಸಂಘಟನೆಯಾಗು ತ್ತದೆಯೇ?–ಎಂಬ ಸಮಸ್ಯೆಗೆ ಉತ್ತರವಾಗಿ ಶ್ರೀಕೃಷ್ಣನು ಈ ಮಾತನ್ನು

ಹೇಳುತ್ತಾನೆ.) ಒಬ್ಬನು ಮನಸ್ಸಿನಲ್ಲಿ ಪಾಪಕಾರ್ಯವನ್ನು ಚಿಂತಿಸುತ್ತಿರಬಹುದು. ಆದರೆ ಕಾರ್ಯತಃ ಅದನ್ನು ಮಾಡದಿದ್ದರೆ–ಪಾಪಕಾರ್ಯಮಾಡಬೇಕೆಂಬ ಮನಃಸಂಕಲ್ಪದಿಂದಲೇ–ಪಾಪದ ಫಲವು ಪ್ರಾಪ್ತವಾಗಲಾರದೆಂದು ಧರ್ಮವಿದರಾದವರು ತಿಳಿದುಕೊಂಡಿರುತ್ತಾರೆ.

ವಿದುರ! ಈ ಕಾರಣದಿಂದ ಯುದ್ಧದಲ್ಲಿ ವಿನಾಶಹೊಂದಲಿರುವ ಕೌರವ-ಸೃಂಜಯರ ಮಧ್ಯೆ ಶಾಂತಿಸ್ಥಾಪನೆಗಾಗಿ ನಿಷ್ಕಾಪಟ್ಯದಿಂದ ನಾನು ಪ್ರಯತ್ನಿಸುತ್ತೇನೆ. ಇಂದು ಬಂದೊದಗಿರುವ ವಿಪತ್ತು ಕುರುಗಳಿಂದ ಉದ್ಭೂತವಾದುದು. ಕರ್ಣ-ದುರ್ಯೋಧನರೇ ಈ ವಿಪತ್ತಿಗೆ ಮುಖ್ಯ ಕಾರಣರು. ಇಲ್ಲಿಗೆ ಆಗಮಿಸಿರುವ ರಾಜರೆಲ್ಲರೂ ಅವರನ್ನೇ ಅನುಸರಿಸುತ್ತಿದ್ದಾರೆ.

**ವ್ಯಸನೇ ಕ್ಲಿಶ್ಯಮಾನಂ ಹಿ ಯೋ ಮಿತ್ರಂ ನಾಭಿಪದ್ಯತೇ ।**
**ಅನುನೀಯ ಯಥಾಶಕ್ತಿ ತಂ ನೃಶಂಸಂ ವಿದುರ್ಬುಧಾಃ ॥೧೦॥**

ವ್ಯಸನದಲ್ಲಿರುವ ಅಥವಾ ವಿಪತ್ತಿಗೊಳಗಾಗಿರುವ ಮಿತ್ರನನ್ನು ಯಾವನು ಉದ್ಧರಿಸಲು ಯತ್ನಿಸುವುದಿಲ್ಲವೋ, ಯಥಾಶಕ್ತಿ ಅವನಿಗೆ ಸಮಾಧಾನವನ್ನು ಹೇಳಲು ಹೋಗುವುದಿಲ್ಲವೋ–ಅಂತಹವನನ್ನು ಘಾತಕನೆಂದು ವಿದ್ವಾಂಸರು ಹೇಳುತ್ತಾರೆ.

**ಆಕೇಶಗ್ರಹಣಾನ್ಮಿತ್ರಮಕಾರ್ಯಾತ್ಸಂನಿವರ್ತಯನ್ ।**
**ಅವಾಚ್ಯಃ ಕಸ್ಯಚಿದ್ಭವತಿ ಕೃತಯತ್ನೋ ಯಥಾಬಲಮ್ ॥೧೧॥**

ಅಕಾರ್ಯದಲ್ಲಿ ಪ್ರವೃತ್ತನಾದ ಮಿತ್ರನನ್ನು–ತಲೆಗೂದಲನ್ನು ಹಿಡಿದು ಸೆಳೆದಾದರೂ–ಅಕಾರ್ಯದಿಂದ ಪ್ರತಿನಿವರ್ತಿಸುವವನು ಮತ್ತು ಅವನು ಅಕಾರ್ಯಮಾಡದಂತೆ ಯಥಾಶಕ್ತಿ ಪ್ರಯತ್ನಿಸುವವನು–ಯಾರ ಅಪನಿಂದೆಗೂ ಪಾತ್ರನಾಗುವುದಿಲ್ಲ. (ಮಿತ್ರನ ವಿಷಯದಲ್ಲಿ ತನ್ನ ಕರ್ತವ್ಯವನ್ನು ಮಾಡಲಿಲ್ಲವೆಂದು ಯಾರೂ ನಿಂದಿಸುವುದಿಲ್ಲ.)

ಅಂತಹ ಪ್ರಯತ್ನವನ್ನೇ ನಾನೂ ಈಗ ಮಾಡಲು ಬಂದಿರುತ್ತೇನೆ. ಅಕಾರ್ಯದಲ್ಲಿ ತೊಡಗಲಿರುವವನನ್ನು ಪ್ರತಿಷೇಧಿಸಲು ಬಂದಿರುತ್ತೇನೆ.

ಆದುದರಿಂದ ಅಮಾತ್ಯಸಹಿತನಾದ ದುರ್ಯೋಧನನು–ಯುಕ್ತವಾದ, ಶುಭಾವಹವಾದ, ಧರ್ಮಾರ್ಥಸಹಿತವಾದ, ಹಿತಕರವಾದ–ನನ್ನ ಮಾತನ್ನು ಮನಸ್ಸಿಗೆ ತೆಗೆದುಕೊಳ್ಳಲು ಅರ್ಹನಾಗಿದ್ದಾನೆ. (ಅವನಿಂದು ನನ್ನ ಮಾತಿನಂತೆ ನಡೆದುಕೊಳ್ಳುವುದು ಯುಕ್ತವಾಗಿದೆ.) ಕೇವಲ ಒಬ್ಬನ ಹಿತಾರ್ಥಕ್ಕಾಗಿ ನಾನೀಗ ಈ ಕಾರ್ಯವನ್ನು ಕೈಗೊಂಡಿರುವುದಿಲ್ಲ. ಈ ಕಾರ್ಯವು ಧೃತರಾಷ್ಟ್ರನ ಮಕ್ಕಳಿಗೂ, ಪಾಂಡವರಿಗೂ ಮತ್ತು ಪೃಥ್ವಿಯಲ್ಲಿರುವ ಸರ್ವ ಕ್ಷತ್ರಿಯರಿಗೂ ಹಿತಕರವಾಗುವಂತಹುದು. ಆದುದರಿಂದ ಈ ಕಾರ್ಯದ ಸಾಧನೆಗಾಗಿ ನಾನು ನಿಶ್ಚಲಮನೋಭಾವದಿಂದ ಪ್ರಯತ್ನಿಸುತ್ತೇನೆ.

ಒಂದು ವೇಳೆ ನಿನ್ನ ಅಭಿಪ್ರಾಯದಂತೆ ಸರ್ವರ ಹಿತಕ್ಕೂ ಪ್ರಯತ್ನಿಸುತ್ತಿರುವ ನನ್ನ ವಿಷಯದಲ್ಲಿಯೇ ದುರ್ಯೋಧನನು ಶಂಕೆಪಡುವುದಾದರೆ–ಶಂಕೆಪಟ್ಟು ಸಂಧಿಗೆ ಒಪ್ಪದಿದ್ದರೆ–ಆಗಲೂ ನಾನು ಚಿಂತಿಸುವ ಕಾರಣವಿಲ್ಲ. ಏಕೆಂದರೆ : ನಾನು ನನ್ನ ಕರ್ತವ್ಯವನ್ನು ನಿರ್ವಹಿಸಿದೆನೆಂಬ ಕಾರಣದಿಂದ ನನ್ನ ಮನಸ್ಸಿಗೆ ಸಮಾಧಾನವಾಗುವುದು ಮಾತ್ರವಲ್ಲದೇ–ಆಪತ್ತಿನಲ್ಲಿರುವ ಮಿತ್ರರ ವಿಷಯದಲ್ಲಿ ಮಾಡಬೇಕಾಗಿರುವ ಋಣದಿಂದಲೂ ವಿಮುಕ್ತನಾಗುತ್ತೇನೆ.

**ಜ್ಞಾತೀನಾಂ ಹಿ ಮಿಥೋ ಭೇದೇ ಯನ್ಮಿತ್ರಂ ನಾಭಿಪದ್ಯತೇ ।**
**ಸರ್ವಯತ್ನೇನ ಮಾಧ್ಯಸ್ಥ್ಯಂ ನ ತನ್ಮಿತ್ರಂ ವಿದುರ್ಬುಧಾಃ ॥೧೫॥**

ಅಣ್ಣ-ತಮ್ಮಂದಿರಲ್ಲಿ, ಜ್ಞಾತಿ-ಬಾಂಧವರಲ್ಲಿ ವಿರೋಧವು ಪ್ರಾಪ್ತವಾದಾಗ ಯಾವ ಮಿತ್ರನು ಸರ್ವಪ್ರಯತ್ನದಿಂದಲೂ ಆ ಜ್ಞಾತಿ-ಬಾಂಧವರನ್ನೂ, ಅಣ್ಣ-ತಮ್ಮಂದಿರನ್ನೂ ಒಟ್ಟುಗೂಡಿಸಲು ಪ್ರಯತ್ನಿಸುವುದಿಲ್ಲವೋ–ಅಂತಹವನು ಮಿತ್ರನೇ ಅಲ್ಲವೆಂದು ಪಂಡಿತರಾದವರು ತಿಳಿಯುತ್ತಾರೆ.

**ನ ಮಾಂ ಬ್ರೂಯುರಧರ್ಮಿಷ್ಠಾ ಮೂಢಾ ಹ್ಯಸುಹೃದಸ್ತಥಾ ।**
**ಶಕ್ತೋ ನಾವಾರಯತ್ಕೃಷ್ಣಃ ಸಂರಬ್ಧಾನ್ಕುರುಪಾಣ್ಡವಾನ್ ॥೧೬॥**

'ಕುಪಿತರಾಗಿದ್ದ ಕುರು-ಪಾಂಡವರ ನಡುವೆ ಶಾಂತಿಯನ್ನೇರ್ಪಡಿಸಲು ಕೃಷ್ಣನು ಸಮರ್ಥನಾಗಿದ್ದರೂ–ಅವರಿಬ್ಬರ ನಡುವೆ ಉಂಟಾಗಬಹು

ದಾಗಿದ್ದ ಯುದ್ಧವನ್ನು ತಡೆಯಲು ಸಮರ್ಥನಾಗಿದ್ದರೂ–ಅದಕ್ಕಾಗಿ ಪ್ರಯತ್ನವನ್ನೇ ಮಾಡಲಿಲ್ಲ'–ಎಂದು ಅಧರ್ಮಿಷ್ಠರೂ, ಮೂಢರೂ ಮತ್ತು ನನ್ನನ್ನು ಶತ್ರುಭಾವದಿಂದ ಕಾಣುತ್ತಿರುವವರೂ ಹೇಳುವಂತಾಗಬಾರದು. (ಈ ಕಾರಣದಿಂದಲೂ ನಾನು ಸಂಧಿಕಾರ್ಯಕ್ಕೆ ಬಂದಿರುತ್ತೇನೆ.) ಉಭಯ ಪಕ್ಷಗಳ ಹಿತಸಾಧನೆಗಾಗಿಯೇ ನಾನಿಲ್ಲಿ ಆಗಮಿಸಿದ್ದೇನೆ. ಇಲ್ಲಿಗೆ ಬಂದಿರುವ ನಾನು ಕಾರ್ಯಸಾಧನೆಗೆ ಸಂಪೂರ್ಣವಾಗಿ ಪ್ರಯತ್ನಮಾಡಿ ಹೊರಟುಹೋಗುತ್ತೇನೆ. ಇದರಿಂದ ನಾನು ಹಿಂದೆ ಹೇಳಿದಂತೆ ಯಾರ ನಿಂದೆಗೂ ಪಾತ್ರನಾಗುವುದಿಲ್ಲ. (ಈ ಒಂದು ಪ್ರಯೋಜನವಾದರೂ ಇದ್ದೇ ಇದೆಯಲ್ಲವೇ?)

ಧರ್ಮಾರ್ಥಯುಕ್ತವಾದ, ಕಷ್ಟನಿವಾರಕವಾದ ನನ್ನ ಮಾತನ್ನು ಕೇಳಿದ ಮೇಲೆಯೂ ಬಾಲಬುದ್ಧಿಯುಳ್ಳ ಮೂಢನಾದ ದುರ್ಯೋಧನನು ನನ್ನ ಮಾತಿನಂತೆ ನಡೆದುಕೊಳ್ಳದಿದ್ದರೆ–ಆಗವನು ದೈವವಶನಾಗುತ್ತಾನೆ. (ವಿನಾಶಹೊಂದುತ್ತಾನೆ.)

ಅಹಾಪಯನ್ಪಾಣ್ಡವಾರ್ಥಂ ಯಥಾವ-
ಚ್ಛಮಂ ಕುರೂಣಾಂ ಯದಿ ಚಾಚರೇಯಮ್ ।
ಪುಣ್ಯಂ ಚ ಮೇ ಸ್ಯಾಚ್ಚರಿತಂ ಮಹಾತ್ಮ-
ನ್ಮುಚ್ಯೇರಂಶ್ಚ ಕುರವೋ ಮೃತ್ಯುಪಾಶಾತ್ ॥೧೯॥

ಪಾಂಡವರಿಗೆ ನ್ಯಾಯಬದ್ಧವಾಗಿ ಸಿಕ್ಕಬೇಕಾಗಿರುವ ಐಶ್ವರ್ಯಕ್ಕೆ ಅಪೋಹವಾಗದಂತೆ ಕುರು-ಪಾಂಡವರ ನಡುವೆ ನಾನು ಸಂಧಿಯನ್ನೇರ್ಪಡಿಸಿದ್ದೇ ಆದರೆ–ನನ್ನ ಈ ಸಂಧಿಕಾರ್ಯವು ಪುಣ್ಯಪ್ರದವಾಗುತ್ತದೆ. (ಇದರಿಂದ ನಾನು ಮಹಾಪುಣ್ಯವನ್ನು ಪಡೆಯುತ್ತೇನೆ.) ಕುರುಗಳೂ ಮೃತ್ಯುಪಾಶದಿಂದ ವಿಮುಕ್ತರಾಗುತ್ತಾರೆ. (ಅವರಿಗಿಂದು ಒದಗಿಬಂದಿರುವ ವಿಪತ್ತೂ ದೂರವಾಗುತ್ತದೆ.)

ವಿದುರ! ನಾನವರೊಡನೆ ಆಡುವ ಮಾತು ನಿಶ್ಚಯವಾಗಿಯೂ ಮನೋಜ್ಞವಾಗಿರುತ್ತದೆ. ಧರ್ಮದ ಹಿನ್ನೆಲೆಯಿಂದ ಕೂಡಿರುತ್ತದೆ. ಅರ್ಥವತ್ತಾಗಿರುತ್ತದೆ ಮತ್ತು ಹಿಂಸೆಯಿಂದ ರಹಿತವಾಗಿರುತ್ತದೆ. (ಅತ್ಯಂತ ಮಧುರವಾಗಿಯೂ, ಮೃದುವಾಗಿಯೂ ಇರುತ್ತದೆ. ನಾನು ಶಾಂತಿಸ್ಥಾಪನೆ

ಗಾಗಿ ಹೇಳಲಿರುವ ಮಾತುಗಳನ್ನು ಧೃತರಾಷ್ಟ್ರನ ಮಕ್ಕಳು ಶುದ್ಧಮನಸ್ಕರಾಗಿ ಪರಿಶೀಲಿಸಬಹುದು. ಶಾಂತಿಸಂಧಾನಕ್ಕಾಗಿಯೇ ಇಲ್ಲಿಗೆ ಆಗಮಿಸಿರುವ ನನ್ನನ್ನು ಗೌರವಿಸಲೂಬಹುದು. ಈ ಒಂದು ಆಶಯದಿಂದಲೇ ನಾನಲ್ಲಿಗೆ ಹೋಗುತ್ತೇನೆ.)

ಬಹುಸಂಖ್ಯಾತರಾಗಿರುವ ಅವರು ನನಗೆ ತೊಂದರೆಯನ್ನು ಮಾಡಬಹುದೆಂದು ನಿನಗಿರುವ ಸಂದೇಹದ ವಿಷಯವಾಗಿಯೂ ಹೇಳುತ್ತೇನೆ :

**ನ ಚಾಪಿ ಮಮ ಪರ್ಯಾಪ್ತಾಃ ಸಹಿತಾಃ ಸರ್ವಪಾರ್ಥಿವಾಃ ।**
**ಕ್ರುದ್ಧಸ್ಯ ಪ್ರಮುಖೇ ಸ್ಥಾತುಂ ಸಿಂಹಸ್ಯೇವೇತರೇ ಮೃಗಾಃ ॥**

ಕೋಪಗೊಂಡ ಸಿಂಹದ ಮುಂದೆ ಉಳಿದ ಮೃಗಗಳು ನಿಲ್ಲಲು ಸಾಧ್ಯವಾಗದಂತೆ–ಕುಪಿತನಾದ ನನ್ನ ಮುಂದೆ ನಿಲ್ಲಲು ಅಲ್ಲಿರುವ ರಾಜರು ಖಂಡಿತವಾಗಿಯೂ ಸಮರ್ಥರಲ್ಲ. ಆ ಎಲ್ಲ ರಾಜರೂ ಒಟ್ಟಾಗಿ ಬಂದರೂ ನನಗವರು ಸಾಟಿಯಾಗಲಾರರು, ವಿದುರ! (ಆದುದರಿಂದ, ಅವರಿಂದ ನನಗೆ ಯಾವ ವಿಧದಲ್ಲಿಯೂ ಅಪಾಯವುಂಟಾಗುವುದಿಲ್ಲ. ನನಗೆ ಉಪದ್ರವಕೊಡುವ ಸಾಮರ್ಥ್ಯವೂ ಅವರಲ್ಲಿಲ್ಲ.” )

ಜನಮೇಜಯ! ವೃಷ್ಣಿಗಳಿಗೆ ವೃಷಭಪ್ರಾಯನಾದ ಮತ್ತು ಯದುಕುಲಕ್ಕೆ ಸುಖವನ್ನುಂಟುಮಾಡುವ ಶ್ರೀಕೃಷ್ಣನು ವಿದುರನೊಡನೆ ಹೀಗೆ ಹೇಳಿ ಸುಖಸ್ಪರ್ಶವುಳ್ಳ ಹಂಸತೂಲಿಕಾತಲ್ಪದಲ್ಲಿ ಪವಡಿಸಿದನು.

೯೩ನೆಯ ಅಧ್ಯಾಯವು ಮುಗಿಯಿತು.

೯೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಕೌರವಸಭೆಗೆ ಶ್ರೀಕೃಷ್ಣನ ಪ್ರವೇಶ : ಸ್ವಾಗತ

ಜನಮೇಜಯ! ಮೇಧಾವಿಗಳಾದ ಶ್ರೀಕೃಷ್ಣ-ವಿದುರರು ಅನೇಕ ವಿಧವಾದ ಮಾತುಕತೆಗಳನ್ನಾಡುತ್ತಿರುವಾಗಲೇ ಥಳ-ಥಳಿಸುವ ನಕ್ಷತ್ರಗಳಿಂದ ಸುಶೋಭಿತವಾಗಿದ್ದ ಮತ್ತು ಮಂಗಳಕರವಾಗಿದ್ದ ಆ ರಾತ್ರಿಯೇ ಕಳೆದು ಹೋಯಿತು. ಆದರೆ ಶ್ರೀಕೃಷ್ಣನಿಗೆ ಆ ರಾತ್ರಿಯು ಅಷ್ಟು ಬೇಗ ಕಳೆದು ಹೋಗುವುದು ಇಷ್ಟವಿರಲಿಲ್ಲ. ಧರ್ಮಾರ್ಥಯುಕ್ತವಾದ ವಿಚಿತ್ರಾರ್ಥಗಳ

ನ್ನೊಳಗೊಂಡ ಪದಗಳಿಂದಲೂ ಮತ್ತು ಅಕ್ಷರಗಳಿಂದಲೂ ಯುಕ್ತವಾಗಿದ್ದ, ನಾನಾವಿಧವಾದ ಭಗವದ್ವಾಣಿಯನ್ನು ಕೇಳುತ್ತಿದ್ದ ಮಹಾತ್ಮನಾದ ವಿದುರ ನಿಗೂ ರಾತ್ರಿಯು ಕಳೆದುಹೋಗಬೇಕೆನ್ನುವ ಆಶೆಯಿರಲಿಲ್ಲ. ಅನವರತವಾಗಿ ಅಂತಹ ದಿವ್ಯವಾದ ಭಗವದ್ವಾಣಿಯನ್ನು ಕೇಳುತ್ತಲೇ ಇರಬೇಕೆಂಬ ಆಶಯ ವಿದ್ದಿತು. ಅಂತೆಯೇ ಶ್ರೀಕೃಷ್ಣನೂ ತನ್ನ ಮಾತಿಗೆ ಅನುರೂಪವಾದ ಕಥೆಗಳನ್ನೇ ವಿದುರನ ಮುಖಾರವಿಂದದಿಂದಲೂ ಕೇಳುತ್ತಿದ್ದನು. ಆ ಕಾರಣದಿಂದ ಅಮಿತತೇಜಸ್ಕನಾದ ಶ್ರೀಕೃಷ್ಣನಿಗೂ ಆ ರಾತ್ರಿಯು ಬೇಗ ಕಳೆದುಹೋಗ ಬೇಕೆಂಬ ಇಚ್ಛೆಯಿರಲಿಲ್ಲ. ಅವರಿಬ್ಬರ ಆಶಯಕ್ಕೆ ವಿರುದ್ಧವಾಗಿ ಆ ರಾತ್ರಿಯು ಕಳೆದೇಹೋಯಿತು. (ಅವರಿಬ್ಬರೂ ಮಾತನಾಡುತ್ತಿದ್ದಾಗ ಅವರಿಗೆ ಹೊತ್ತಿನ ಪರಿವೆಯೇ ಇರಲಿಲ್ಲ. ಒಬ್ಬರು ಮತ್ತೊಬ್ಬರ ಮಾತು ಕೇಳುವುದರಲ್ಲಿಯೇ ತಲ್ಲೀನರಾಗಿಬಿಟ್ಟಿದ್ದರು. ಇಬ್ಬರೂ ಧರ್ಮಮೂರ್ತಿಗಳೇ ಆಗಿದ್ದುದರಿಂದ ಅವರು ಆಡುತ್ತಿದ್ದ ಮಾತುಗಳೂ ಧರ್ಮಮೂಲವಾಗಿಯೇ ಇರುತ್ತಿದ್ದುವು. ಯದ್ಯಪಿ ರಾತ್ರಿಯು ಕಡಿಮೆಯಾಗದಿದ್ದರೂ ಅವರಿಬ್ಬರಿಗೂ ಆ ರಾತ್ರಿಯು ಇಷ್ಟು ಬೇಗ ಮುಗಿದುಹೋಯಿತೇ?–ಎಂದೆನಿಸಿತು)

ಅನಂತರದಲ್ಲಿ ಸ್ವರಸಂಪನ್ನರಾದ (ಸುಮಧುರಗಾಯಕರಾದ) ಸೂತ-ಮಾಗಧರು ತಮ್ಮ ಮಧುರವಾದ ಉದಯಗಾನಗಳಿಂದಲೂ, ಶಂಖ-ದುಂದುಭಿ ಗಳ ಸುಮಧುರಘೋಷಗಳಿಂದಲೂ ಶ್ರೀಕೇಶವನನ್ನು ಎಬ್ಬಿಸಿದರು. ಯದು ವಂಶಶಿರೋಮಣಿಯಾದ, ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನು ಹಾಸಿಗೆ ಯಿಂದ ಮೇಲೆದ್ದು ಅವಶ್ಯವಾಗಿ ಮಾಡಬೇಕಾಗಿದ್ದ ಪ್ರಾತಃಕಾರ್ಯಗಳೆಲ್ಲ ವನ್ನೂ ಮಾಡಿ ಮುಗಿಸಿದನು. ಸಂಧ್ಯಾವಂದನೆ, ದೇವರ್ಷಿ-ಪಿತೃತರ್ಪಣ, ಜಪಾದಿಗಳನ್ನು ಮಾಡಿದನಂತರ ಅಗ್ನಿಹೋತ್ರವನ್ನು ಮಾಡಿ ಯಥಾಯೋಗ್ಯವಾಗಿ ಶರೀರವನ್ನು ಅಲಂಕರಿಸಿಕೊಂಡು ಉದಯಕಾಲದಲ್ಲಿ ಮಾಡಬೇಕಾದ ಸೂರ್ಯೋಪಸ್ಥಾನವನ್ನು ಮಾಡಿದನು.

ಆ ಸಮಯಕ್ಕೆ ಸರಿಯಾಗಿ ದುರ್ಯೋಧನನೂ ಸುಬಲನ ಮಗನಾದ ಶಕುನಿಯೂ–ಸಂಧ್ಯೋಪಸ್ಥಾನಮಾಡುತ್ತಿದ್ದ, ಅಪರಾಜಿತನಾದ ದಾಶಾರ್ಹ ಕುಲತಿಲಕನಾದ ಶ್ರೀಕೃಷ್ಣನ ಸಮೀಪಕ್ಕೆ ಬಂದು–ಧೃತರಾಷ್ಟ್ರನೂ ಮತ್ತು

ಭೀಷ್ಮನೇ ಮೊದಲಾದ ಕುರುಗಳೂ, ಸಕಲರಾಜರೂ ಸಭಾಮಂದಿರಕ್ಕೆ ಆಗಮಿಸಿರುವರೆಂದೂ, ಅವರೆಲ್ಲರೂ ಸಭೆಯಲ್ಲಿ ಉಪಸ್ಥಿತರಾಗಿರುವರೆಂದೂ–ಹೇಳಿ ಶ್ರೀಕೃಷ್ಣನನ್ನು ಆದರಪೂರ್ವಕವಾಗಿ ಆಹ್ವಾನಿಸುತ್ತಾ ಹೇಳಿದರು :

**ತ್ವಾಮರ್ಥಯನ್ತೇ ಗೋವಿನ್ದ ದಿವಿ ಶಕ್ರಮಿವಾಮರಾಃ ॥೯॥**

"ಗೋವಿಂದ! ಸ್ವರ್ಗಲೋಕದ ದೇವಸಭೆಯಲ್ಲಿ ದೇವತೆಗಳು ದೇವೇಂದ್ರನ ಆಗಮನವನ್ನು ನಿರೀಕ್ಷಿಸುವಂತೆ–ಇಂದು ನೆರೆದಿರುವ ಧೃತರಾಷ್ಟ್ರನ ಸಭೆಯಲ್ಲಿ ಸೇರಿರುವ ಕುರುಪ್ರಮುಖರೆಲ್ಲರೂ ನಿನ್ನ ದರ್ಶನಾಕಾಂಕ್ಷಿಗಳಾಗಿದ್ದಾರೆ."

ಗೋವಿಂದನು ಶಕುನಿ-ದುರ್ಯೋಧನರು ಹೇಳಿದ ಮಾತನ್ನು ಕೇಳಿ ಅತ್ಯಂತಮೃದುವಾಗಿಯೂ ಮಧುರವಾಗಿಯೂ ಇದ್ದ ಮಾತಿನಿಂದ ಅವರನ್ನು ಅಭಿನಂದಿಸಿದನು.

ಅನಂತರದಲ್ಲಿ ಸೂರ್ಯನು ನಿಷ್ಕಳಂಕವಾದ ಕಾಂತಿಯಿಂದ ಪ್ರಕಾಶಿಸುತ್ತಿರಲಾಗಿ, ಜನಾರ್ದನನು ಬ್ರಾಹ್ಮಣರಿಗೆ ಹಿರಣ್ಯ, ವಸ್ತ್ರ, ಹಸುಗಳು, ಕುದುರೆಗಳು–ಮುಂತಾದುವುಗಳನ್ನು ಯಥೇಚ್ಛವಾಗಿ ದಾನಮಾಡಿದನು. ಬಹುಮುಖ್ಯವಾದ ಅನೇಕ ರತ್ನಾಭರಣಗಳನ್ನೂ ಬ್ರಾಹ್ಮಣರಿಗೆ ದಾನಮಾಡಿ ಪ್ರಫುಲ್ಲವಾದ ಮುಖಾರವಿಂದದಿಂದ ಕೂಡಿ ನಿಂತಿದ್ದ ಅಪರಾಜಿತನಾದ ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನ ಸಮೀಪಕ್ಕೆ ಸಾರಥಿಯು ಬಂದು ನಮಸ್ಕರಿಸಿದನು.

ಸಣ್ಣ-ಸಣ್ಣ ಗಂಟೆಗಳಿಂದ ಕೂಡಿದ್ದ, ಶುಭ್ರವಾಗಿದ್ದ ಶ್ರೇಷ್ಠಾಶ್ವಗಳಿಂದ ಯುಕ್ತವಾಗಿದ್ದ ರಥದೊಡನೆ ಶ್ರೀಕೃಷ್ಣನ ಸಾರಥಿಯಾದ ದಾರುಕನು ಪ್ರಯಾಣಸನ್ನದ್ಧನಾಗಿ ಬಂದು ನಿಂತನು. ಸರ್ವರತ್ನಗಳಿಂದಲೂ ಅಲಂಕೃತವಾಗಿದ್ದ, ಮಹಾಮೇಘದ ಗರ್ಜನೆಗೆ ಸಮಾನವಾದ ನಿರ್ಘೋಷದಿಂದ ಕೂಡಿದ್ದ ಆ ದಿವ್ಯರಥವು ವಿದುರನ ಮನೆಯ ಸಮೀಪದಲ್ಲಿ ಉಪಸ್ಥಿತವಾಗಿರುವುದೆಂಬುದನ್ನು ತಿಳಿದು ಮಹಾಮೇಧಾವಿಯಾದ, ಸರ್ವಯಾದವರಿಗೂ ಆನಂದದಾಯಕನಾದ, ಶೌರಿಯಾದ ಶ್ರೀಕೃಷ್ಣನು ಅಗ್ನಿಯನ್ನೂ–ಬ್ರಾಹ್ಮಣರನ್ನೂ ಪ್ರದಕ್ಷಿಣೆ ಮಾಡಿ, ಕೌಸ್ತುಭಮಣಿಯನ್ನು ಕಂಠದಲ್ಲಿ ಧರಿಸಿ, ಪರಮಶ್ರೇಷ್ಠವಾದ

ಕಾಂತಿಯಿಂದ ಪ್ರಜ್ವಲಿಸುತ್ತಾ, ಕುರುರಾಜಕುಮಾರರಿಂದ ಪರಿವೃತನಾಗಿ, ವೃಷ್ಣಿಕುಲದ ರಾಜಕುಮಾರರಿಂದ ಸಂರಕ್ಷಿತನಾಗಿ, ರಥಾರೋಹಣ ಮಾಡಿದನು. ಸಕಲಪ್ರಾಣಿಗಳಿಗೂ ಶ್ರೇಷ್ಠನಾದ, ಬುದ್ಧಿವಂತರಾದವರೆಲ್ಲರಿಗೂ ಶ್ರೇಷ್ಠನೆನಿಸಿದ, ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನನ್ನು ಅನುಸರಿಸಿ ಸರ್ವ ಧರ್ಮವಿದನಾದ ವಿದುರನೂ ರಥಾರೋಹಣಮಾಡಿದನು. ಅನಂತರದಲ್ಲಿ ದುರ್ಯೋಧನ-ಶಕುನಿಗಳು ಮತ್ತೊಂದು ರಥದಲ್ಲಿ ಕುಳಿತು ಪರಂತಪನಾದ ಶ್ರೀಕೃಷ್ಣನನ್ನೇ ಅನುಸರಿಸಿದರು. ಸಾತ್ಯಕಿ-ಕೃತವರ್ಮರೂ ರಥಗಳಲ್ಲಿ ಕುಳಿತು ಶ್ರೀಕೃಷ್ಣನನ್ನು ಹಿಂಬಾಲಿಸಿದರು. ವೃಷ್ಣಿವಂಶದ ರಾಜಕುಮಾರರ ಇನ್ನೂ ಅನೇಕರಥಗಳು ಶ್ರೀಕೃಷ್ಣನ ರಥದ ಹಿಂದೆ ಹೊರಟವು. ಇನ್ನೂ ಅನೇಕ ವೃಷ್ಣಿಕುಲಯೋಧರು ಆನೆಗಳ ಮೇಲೂ, ಕುದುರೆಗಳ ಮೇಲೂ, ರಥಗಳಲ್ಲಿಯೂ ಕುಳಿತು ಶ್ರೀಕೃಷ್ಣನ ರಥವನ್ನನುಸರಿಸಿ ಹೊರಟರು. ಸ್ವರ್ಣ ಮಯವಾದ ಆಭರಣಗಳಿಂದ ಅಲಂಕೃತವಾಗಿದ್ದ, ಮೇಘದ ಗರ್ಜನೆಯಂತೆ ಗಂಭೀರವಾಗಿ ಶಬ್ದಮಾಡುತ್ತಿದ್ದ ಆ ಯೋಧರ ವಿಚಿತ್ರತರವಾದ ರಥಗಳು ನೇತ್ರಾನಂದಕರವಾಗಿ ಪ್ರಕಾಶಿಸಿದುವು. ಅನೇಕಾನೇಕ ರಾಜರ್ಷಿಗಳಿಂದ ಈ ಹಿಂದೆ ಸಂಚರಿಸಲ್ಪಟ್ಟಿದ್ದ (ರಾಜಸಂಚಾರಯೋಗ್ಯವಾಗಿದ್ದ), ಉದಕಸೇಚನ ದಿಂದ ಧೂಳು ಇಲ್ಲದಂತೆ ಮಾಡಲ್ಪಟ್ಟಿದ್ದ ಮಹಾಮಾರ್ಗವನ್ನು, ಧೀಮಂತ ನಾದ ಶ್ರೀಕೃಷ್ಣನು ತನ್ನ ಉಜ್ವಲವಾದ ದಿವ್ಯಕಾಂತಿಯಿಂದ ಪ್ರಕಾಶಗೊಳಿಸುತ್ತಾ ಪ್ರವೇಶಿಸಿದನು. ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನು ಧೃತರಾಷ್ಟ್ರನ ಸಭೆಗೆ ಹೋಗುತ್ತಿರಲಾಗಿ, ಮದ್ದಳೆ-ಶಂಖಗಳ ಮತ್ತು ಇನ್ನೂ ಅನೇಕ ವಾದ್ಯವಿಶೇಷಗಳ ಘೋಷವು ಏಕಕಾಲದಲ್ಲಿ ಕೇಳಿಬಂದಿತು. ಮಹಾ ಶೂರರೆಂದು ಎಲ್ಲ ಲೋಕಗಳಲ್ಲಿಯೂ ಖ್ಯಾತಿಯನ್ನು ಪಡೆದಿದ್ದ, ಸಿಂಹವಿಕ್ರಮರಾದ, ಶತ್ರುಗಳಿಗೆ ತಾಪವನ್ನುಂಟುಮಾಡಲು ಸಮರ್ಥರಾದ ಯುವಜನರು ಶ್ರೀಕೃಷ್ಣನ ರಥವನ್ನು ಸುತ್ತುಗಟ್ಟಿಕೊಂಡು ಹೋಗುತ್ತಿದ್ದರು. ಶ್ರೀಕೃಷ್ಣನ ಮುಂಭಾಗದಲ್ಲಿ ವಿಚಿತ್ರವಾದ ಮತ್ತು ಅಮೂಲ್ಯವಾದ ಸಮವಸ್ತ್ರಗಳನ್ನು ಧರಿಸಿದ್ದ, ಕತ್ತಿಗಳನ್ನೂ ಮತ್ತು ಪ್ರಾಸಾಯುಧಗಳನ್ನೂ ಹಿಡಿದಿದ್ದ ಸಾವಿರಾರು ಮಂದಿ ಯೋಧರು ಹೋಗುತ್ತಿದ್ದರು.

ಅಲ್ಲಿ ಐದು ನೂರು ಆನೆಗಳಿದ್ದುವು. ಅಸಂಖ್ಯಾತಸಂಖ್ಯೆಯಲ್ಲಿ ರಥ

ಗಳೂ ಇದ್ದುವು. ಅವುಗಳೆಲ್ಲವೂ ಧೃತರಾಷ್ಟ್ರನ ರಾಜಸಭೆಗೆ ಹೋಗುತ್ತಿದ್ದ, ಅಪರಾಜಿತನಾದ, ದಾಶಾರ್ಹಕುಲತಿಲಕನಾದ, ವೀರನಾದ ಶ್ರೀಕೃಷ್ಣನನ್ನು ಅನುಸರಿಸಿ ಹೋಗುತ್ತಿದ್ದುವು. ಆ ಸಮಯದಲ್ಲಿ ನೇತ್ರಾನಂದಕರನಾದ ಶ್ರೀಕೃಷ್ಣನನ್ನು ನೋಡಲು ಪಟ್ಟಣಕ್ಕೆ ಪಟ್ಟಣವೇ ಬೀದಿಗೆ ಬಂದಿತ್ತು. ಬಾಲಕರು, ಸ್ತ್ರೀಯರು, ವೃದ್ಧರು–ಎಲ್ಲರೂ ಕುತೂಹಲಾವಿಷ್ಟರಾಗಿ



ಶ್ರೀಕೃಷ್ಣನು ಬರುತ್ತಿದ್ದ ರಾಜಮಾರ್ಗದಲ್ಲಿ ಉಪಸ್ಥಿತರಾಗಿದ್ದರು. ದಾರಿಯುದ್ದಕ್ಕೂ ಇದ್ದ ಮನೆಗಳ ಉಪ್ಪರಿಗೆಗಳು ಸ್ತ್ರೀಯರಿಂದ ತುಂಬಿಹೋಗಿದ್ದು ಅವರ ಭಾರದಿಂದಾಗಿ ಆ ಮನೆಗಳೇನಾದರೂ ಚಲಿಸುತ್ತಿವೆಯೋ ಎಂಬಂತೆ ಕಾಣುತ್ತಿದ್ದುವು. ರಾಜಮಾರ್ಗದಲ್ಲಿ ಹೋಗುತ್ತಿದ್ದ ಶ್ರೀಕೃಷ್ಣನನ್ನು ಕುರುಗಳು ಹಾರಾದಿಗಳಿಂದ ದಾರಿಯುದ್ದಕ್ಕೂ ಸಮ್ಮಾನಿಸುತ್ತಿದ್ದರು. ಅವರು

ಹೇಳುತ್ತಿದ್ದ ಸಮಯೋಚಿತವಾದ, ಸುಮಧುರವಾದ ಮಾತುಗಳನ್ನು ಶ್ರೀಕೃಷ್ಣನು ಆಲಿಸಿ ಕೇಳುತ್ತಿದ್ದನು. ತನ್ನನ್ನು ಹಾರಾದಿಗಳಿಂದ ಸತ್ಕರಿಸಿದವರನ್ನು ಶ್ರೀಕೃಷ್ಣನೂ ಯಥಾಯೋಗ್ಯವಾಗಿ ಪ್ರತಿಸತ್ಕರಿಸುತ್ತಿದ್ದನು. ತನ್ನನ್ನು ನೋಡಲು ಬಂದಿರುವವರೆಲ್ಲರನ್ನೂ ಶ್ರೀಕೃಷ್ಣನು ಕಟಾಕ್ಷವೀಕ್ಷಣದಿಂದಲೇ ಆನಂದಪಡಿಸುತ್ತಾ ಮೆಲ್ಲ-ಮೆಲ್ಲನೆ ಸಭಾಭವನದ ಬಳಿಗೆ ಹೋದನು. ಕೇಶವನ ಮುಂಭಾಗದಲ್ಲಿ ಹೋಗುತ್ತಿದ್ದ ವಾದ್ಯಗಾರರು ಶ್ರೀಕೃಷ್ಣನು ಸಭಾ ಭವನವನ್ನು ಸಮೀಪಿಸುತ್ತಿದ್ದಂತೆ ಶಂಖ, ವೇಣು, ಮದ್ದಲೆ ಮುಂತಾದ ವಾದ್ಯಗಳ ಘೋಷಗಳಿಂದ ಎಲ್ಲ ದಿಕ್ಕುಗಳನ್ನೂ ತುಂಬಿಬಿಟ್ಟರು. (ಅವರು ಮಾಡಿದ ವಾದ್ಯಘೋಷಗಳು ಎಲ್ಲ ದಿಕ್ಕುಗಳಿಂದಲೂ ಪ್ರತಿಧ್ವನಿತವಾದುವು.) ಸಭಾಭವನದಲ್ಲಿದ್ದ ಅಮಿತತೇಜಸ್ಕರಾದ ರಾಜರ ಸಮೂಹವು ಶ್ರೀಕೃಷ್ಣನು ಆಗಮಿಸುವನೆಂಬ ಆಕಾಂಕ್ಷೆಯಿಂದ ಉಂಟಾದ ಹರ್ಷೋತ್ಸಾಹದಿಂದ ಚಲಿಸಿತು.

ಧೃತರಾಷ್ಟ್ರನ ಸಭೆಯಲ್ಲಿದ್ದ ರಾಜರು ಶ್ರೀಕೃಷ್ಣನ ಆಗಮನವನ್ನು ಬಹಳ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಶ್ರೀಕೃಷ್ಣನು ಸಭಾಭವನ ವನ್ನು ಸಮೀಪಿಸುತ್ತಿದ್ದಂತೆ ಅವರಿಗೆ ತಮ್ಮ-ತಮ್ಮ ಆಸನಗಳಲ್ಲಿ ಕುಳಿತಿರಲು ಸಾಧ್ಯವಾಗಲೇ ಇಲ್ಲ. ಇಡೀ ರಾಜಮಂಡಲವೇ ಅತ್ತಿಂದಿತ್ತ ಚಲಿಸ ತೊಡಗಿತು. (ಬೀದಿಯಲ್ಲಿ ಬರುವ ಸಾಧಾರಣವಾದ ಮೆರವಣಿಗೆಯೇ ಜನರನ್ನು ಸ್ಥಿರಮನಸ್ಸಿನಿಂದ ಮನೆಯಲ್ಲಿರಲು ಬಿಡುವುದಿಲ್ಲ. ಹೀಗಿರುವಾಗ ಶ್ರೀಕೃಷ್ಣನ ಆಗಮನವು ರಾಜರ ಮನಸ್ಸಿನಲ್ಲಿ ಎಂತಹ ಪರಿಣಾಮ ವನ್ನುಂಟುಮಾಡಿತೆಂಬುದನ್ನು ಊಹಿಸಲೂ ಸಾಧ್ಯವಾಗಲಾರದು.)

ಶ್ರೀಕೃಷ್ಣನು ಸಭಾಭವನದ ಸಮೀಪಕ್ಕೆ ಬರಲಾಗಿ ಮೇಘದ ಗರ್ಜನೆಗೆ ಸಮಾನವಾಗಿದ್ದ ರಥದ ಘೋಷವನ್ನು ಕೇಳಿದ ರಾಜರು ರೋಮಾಂಚಿತ ರಾದರು. ಸರ್ವಯಾದವರಲ್ಲಿಯೂ ಶ್ರೇಷ್ಠನಾದ ಶೌರಿಯು ಸಭಾಮಂದಿರದ ಮಹಾದ್ವಾರಕ್ಕೆ ಆಗಮಿಸಿದನಂತರ ಕೈಲಾಸಶಿಖರೋಪಮವಾಗಿದ್ದ ರಥದಿಂದ ಕೆಳಗಿಳಿದು, ನೂತನಮೇಘಸದೃಶವಾಗಿದ್ದ ಸಭಾಮಂದಿರವನ್ನು ಪ್ರವೇಶಿಸಿ ದನು. ತನ್ನ ಒಂದು ಕೈಯಿಂದ ವಿದುರನನ್ನೂ, ಮತ್ತೊಂದು ಕೈಯಿಂದ

ಸಾತ್ಯಕಿಯನ್ನೂ ಹಿಡಿದುಕೊಂಡು ಶ್ರೀಕೃಷ್ಣನು ಸಭಾಮಂದಿರವನ್ನು ಪ್ರವೇಶಿಸಿ–ಆಕಾಶದಲ್ಲಿರುವ ಸೂರ್ಯನು ತನ್ನ ಕಾಂತಿಯಿಂದ ನಕ್ಷತ್ರಗಳನ್ನು ಮುಚ್ಚಿಬಿಡುವಂತೆ–ತನ್ನ ಅನುಪಮವಾದ ದಿವ್ಯಕಾಂತಿಯಿಂದ ಕುರುರಾಜ ಕುಮಾರರನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟನು. ಸಭಾಭವನವನ್ನು ಪ್ರವೇಶಿಸುತ್ತಿದ್ದಾಗ ವಾಸುದೇವನ ಮುಂಭಾಗದಲ್ಲಿ ಕರ್ಣ-ದುರ್ಯೋಧನ



ರಿದ್ದರು. ವೃಷ್ಣಿಗಳೂ ಮತ್ತು ಕೃತವರ್ಮನೂ ಶ್ರೀಕೃಷ್ಣನ ಹಿಂದುಗಡೆ ಯಲ್ಲಿದ್ದರು. ಶ್ರೀಕೃಷ್ಣನು ಸಭಾಮಂದಿರವನ್ನು ಪ್ರವೇಶಿಸಿದೊಡನೆಯೇ ಧೃತರಾಷ್ಟ್ರಪುರಃಸರರಾದ ಭೀಷ್ಮ-ದ್ರೋಣಾದಿಗಳೆಲ್ಲರೂ ಜನಾರ್ದನನನ್ನು ಗೌರವಿಸುವ ಸಲುವಾಗಿ ತಮ್ಮ-ತಮ್ಮ ಆಸನಗಳಿಂದ ಮೇಲೆದ್ದರು.

ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನು ಸಭಾಮಂಟಪಕ್ಕೆ ಬರುತ್ತಿರಲಾಗಿ ಪ್ರಜ್ಞಾಚಕ್ಷುವಾದ, ನರೇಶ್ವರನಾದ, ಮಹಾಯಶೋವಂತನಾದ ಧೃತರಾಷ್ಟ್ರನು ಭೀಷ್ಮ-ದ್ರೋಣಾದಿಗಳೊಡನೆ ಎದ್ದುನಿಂತನು.

ಜನೇಶ್ವರನಾದ ಧೃತರಾಷ್ಟ್ರರಾಜನು ಶ್ರೀಕೃಷ್ಣನು ಆಗಮಿಸಿದೊಡನೆಯೇ ಸಿಂಹಾಸನದಿಂದ ಎದ್ದು ನಿಲ್ಲಲಾಗಿ, ಸುತ್ತಲೂ ಕುಳಿತಿದ್ದ ಸಾವಿರಾರು ಮಂದಿ ರಾಜರೆಲ್ಲರೂ ತಮ್ಮ ಆಸನಗಳಿಂದ ಎದ್ದುನಿಂತರು. ಮರುಕ್ಷಣದಲ್ಲಿಯೇ ಧೃತರಾಷ್ಟ್ರನ ಆಜ್ಞಾನುಸಾರವಾಗಿ ಸುವರ್ಣಭೂಷಿತವಾದ ಸರ್ವತೋಭದ್ರವೆಂಬ ಹೆಸರಿನ ಸಿಂಹಾಸನವು ಸಿದ್ಧವಾಯಿತು. ಧರ್ಮಾತ್ಮನಾದ ಮಾಧವನು ಮುಗುಳ್ನಗೆಯಿಂದ ಕೂಡಿದ ಮುಖಾರವಿಂದದಿಂದ–ರಾಜನಾದ ಧೃತರಾಷ್ಟ್ರನನ್ನೂ, ಭೀಷ್ಮ-ದ್ರೋಣರನ್ನೂ ಮತ್ತು ಅವರವರ ವಯಸ್ಸಿಗೆ ಅನುಗುಣವಾಗಿ ಮತ್ತು ಅನುಕ್ರಮವಾಗಿ ಅಲ್ಲಿ ಉಪಸ್ಥಿತರಾಗಿದ್ದ ರಾಜರನ್ನೂ ಮಾತನಾಡಿಸಿದನು.

(ಈ ಅಧ್ಯಾಯದ ಆರನೆಯ ಶ್ಲೋಕದಿಂದ ಇಲ್ಲಿಯವರೆಗೆ ಶ್ರೀಕೃಷ್ಣನು ವಿದುರನ ಮನೆಯಿಂದ ಕೌರವಸಭಾಭವನಕ್ಕೆ ಆಗಮಿಸಿದುದನ್ನು ವರ್ಣಿಸಿದ್ದಾರೆ. ಈ ಮೆರವಣಿಗೆಯಲ್ಲಿ ಅನುಸರಿಸುವ ನಿಯಮ ಮತ್ತು ಶ್ರೀಕೃಷ್ಣನ ಮುಂಭಾಗದಲ್ಲಿ ಹೋಗುತ್ತಿದ್ದ ವಾದ್ಯಗೋಷ್ಠಿ–ಇತ್ಯಾದಿಗಳನ್ನು ಪರಿಶೀಲಿಸಿದರೆ ಈಗಿನ ವ್ಯವಸ್ಥೆಗಳಿಗಿಂತಲೂ ಹಿಂದಿನ ಉತ್ಸವಗಳ ವ್ಯವಸ್ಥೆಯು ಯಾವ ರೀತಿಯಲ್ಲಿಯೂ ಕಡಿಮೆಯಾಗಿರಲಿಲ್ಲವೆಂದೇ ತೋರುತ್ತದೆ. ಭಾರತೀಯರಿಗಂತೂ ಈ ಉತ್ಸವವ್ಯವಸ್ಥೆಯು ಹೊಸದಲ್ಲ. ಅನಾದಿಕಾಲದಿಂದಲೂ ನಡೆದು ಬಂದಿರುತ್ತದೆ. ಈ ಉತ್ಸವದ ಮುಂಭಾಗದಲ್ಲಿ ವಾದ್ಯಗೋಷ್ಠಿ, ದಾರಿಯುದ್ದಕ್ಕೂ ಹಾರ-ತುರಾಯಿಗಳನ್ನರ್ಪಿಸಿ ಗೌರವಿಸುವುದು, ಸಾವಿರಾರು ಮಂದಿ ಯೋಧರು ಸಮವಸ್ತ್ರಗಳನ್ನು ಧರಿಸಿ ನಿಯಮಿತವಾದ ಹೆಜ್ಜೆಗಳನ್ನಿಡುತ್ತಾ ಹೋಗುವುದು, ಪಥಸಂಚಲನ, ಆನೆ-ಕುದುರೆ ಮತ್ತು ರಥಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವುದು–ಈ ಎಲ್ಲವೂ ಶ್ರೀಕೃಷ್ಣನ ಮೆರವಣಿಗೆಯಲ್ಲಿ ವರ್ಣಿತವಾಗಿವೆ.)

ಸಭೆಗೆ ಆಗಮಿಸಿದ ಶ್ರೀಕೃಷ್ಣನನ್ನು ಅಲ್ಲಿ ನೆರೆದಿದ್ದ ರಾಜರೂ ಮತ್ತು

ಕುರುಗಳೂ ವಿಶೇಷವಾದ ರೀತಿಯಲ್ಲಿ ಗೌರವಿಸಿದರು. ಸಕಲರಾಜರ ಮಧ್ಯದಲ್ಲಿ ನಿಂತಿದ್ದ ಪರಂತಪನಾದ, ಪರಪುರಂಜಯನಾದ ಶ್ರೀಕೃಷ್ಣನು ತಾನು ಕೌರವ ಸಭಾಮಂದಿರದಲ್ಲಿ ಹೇಳಲಿರುವ ಧರ್ಮಾರ್ಥಯುಕ್ತವಾದ ಮಾತುಗಳನ್ನು ಕೇಳುವ ಆಶೆಯಿಂದಲೇ ಅಂತರಿಕ್ಷದಲ್ಲಿ ಉಪಸ್ಥಿತರಾಗಿದ್ದ ಋಷಿಗಳನ್ನು ನೋಡಿದನು. ನಾರದಪ್ರಮುಖರಾದ ಋಷಿಗಳನ್ನು ನೆಟ್ಟದೃಷ್ಟಿಯಿಂದ ಕ್ಷಣಕಾಲ



ನೋಡಿದನಂತರ ದಾಶಾರ್ಹಕುಲತಿಲಕನಾದ ಶ್ರೀಕೃಷ್ಣನು ಶಾಂತನುವಿನ ಮಗನಾದ ಭೀಷ್ಮನೊಡನೆ ಮೆಲ್ಲನೆ ಹೇಳಿದನು : "ಗಾಂಗೇಯ! ಈ ರಾಜಸಭೆಯನ್ನು ನೋಡುವ ಸಲುವಾಗಿ ಋಷಿಗಳೂ ಆಗಮಿಸಿದ್ದಾರೆ. ಅವರನ್ನೀಗಲೇ ಆಹ್ವಾನಿಸಿ, ಆಸನಪ್ರದಾನದಿಂದಲೂ ಅರ್ಘ್ಯ-ಪಾದ್ಯಾದಿಗಳಿಂದಲೂ ಸರಿ

ಯಾಗಿ ಸತ್ಕರಿಸಿರಿ. ಸಭಾಮಂಟಪದ ಮೇಲ್ಭಾಗದಲ್ಲಿ ನಿಂತಿರುವ ಅವರು ಆಸನಗಳಲ್ಲಿ ಕುಳಿತುಕೊಳ್ಳದಿದ್ದರೆ ಇಲ್ಲಿರುವ ನಾವೂ ಕೂಡ ಆಸನಗಳಲ್ಲಿ ಕುಳಿತುಕೊಳ್ಳುವಂತಿಲ್ಲ. ಆದುದರಿಂದ ಪವಿತ್ರವಾದ ಅಂತಃಕರಣದಿಂದ ಕೂಡಿ ರುವ ಋಷಿಗಳ ಸತ್ಕಾರವನ್ನು ಆದಷ್ಟು ಜಾಗ್ರತೆಯಾಗಿ ಮಾಡಿರಿ."

ಶ್ರೀಕೃಷ್ಣನು ಹೀಗೆಂದು ಹೇಳಲಾಗಿ ಸಭಾಮಂಟಪದ ಮೇಲ್ಭಾಗದಲ್ಲಿ ಋಷಿಗಳು ನಿಂತಿರುವುದನ್ನು ಭೀಷ್ಮನೂ ನೋಡಿ, ಒಡನೆಯೇ ಸಭಾಮಂದಿರದ ಮಹಾದ್ವಾರದಲ್ಲಿದ್ದ ದ್ವಾರಪಾಲಕರನ್ನು ಅವಸರದಿಂದ ಕರೆದು ಸಮೀಚೀನ ವಾದ ಆಸನಗಳನ್ನು ಶೀಘ್ರಾತಿಶೀಘ್ರವಾಗಿ ತರುವಂತೆ ಆಜ್ಞಾಪಿಸಿದನು. ರಾಜಭಟರು ಒಡನೆಯೇ ಹೋಗಿ ಅನೇಕವಿಧವಾದ ಮಣಿಗಳ ಜೋಡಣೆ ಯಿಂದ ವಿಚಿತ್ರವಾಗಿ ಕಾಣುತ್ತಿದ್ದ, ಸ್ವರ್ಣಮಯವಾದ, ದೊಡ್ಡದಾಗಿಯೂ ಮತ್ತು ವಿಶಾಲವಾಗಿಯೂ ಇದ್ದ, ಪರಿಶುದ್ಧವಾಗಿದ್ದ ಆಸನಗಳನ್ನು ತಂದರು. ಭೀಷ್ಮನ ಪ್ರಾರ್ಥನೆಯಂತೆ ಋಷಿಗಳೆಲ್ಲರೂ ಪ್ರತ್ಯಕ್ಷರಾಗಿ ಬಂದು ಆಸನಗಳಲ್ಲಿ ಕುಳಿತನಂತರ ಅವರಿಗೆ ಯಥೋಚಿತವಾಗಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಸತ್ಕರಿಸಲಾಯಿತು. ಈ ರೀತಿಯಲ್ಲಿ ಭೀಷ್ಮನಿಂದ ಋಷಿಗಳು ಸತ್ಕೃತರಾದ ನಂತರ ಶ್ರೀಕೃಷ್ಣನೂ ತನಗಾಗಿ ಸಿದ್ಧಪಡಿಸಿದ್ದ ಸರ್ವತೋಭದ್ರಾಸನದಲ್ಲಿ ಕುಳಿತುಕೊಂಡನು. ಬಳಿಕ ರಾಜರೆಲ್ಲರೂ ತಮ್ಮ-ತಮ್ಮ ಆಸನಗಳಲ್ಲಿ ಕುಳಿತುಕೊಂಡರು.

ಶ್ರೀಕೃಷ್ಣನ ಹಿಂಭಾಗದಲ್ಲಿದ್ದ ಸಾತ್ಯಕಿಯನ್ನು, ದುಃಶಾಸನನು ಉತ್ತಮೋತ್ತಮವಾದ ಆಸನವೊಂದರಲ್ಲಿ ಕುಳ್ಳಿರಿಸಿದನು. ಅಂತೆಯೇ ಕೃತವರ್ಮನನ್ನೂ ವಿವಿಂಶತಿಯು ಸ್ವರ್ಣಮಯವಾದ ಆಸನದಲ್ಲಿ ಕುಳ್ಳಿರಿಸಿ ದನು. ಅಸಹನಶೀಲರಾದ ಕರ್ಣ-ದುರ್ಯೋಧನರಿಬ್ಬರೂ ಒಂದೇ ಸಿಂಹಾಸನ ದಲ್ಲಿ ಶ್ರೀಕೃಷ್ಣನು ಕುಳಿತಿದ್ದ ಆಸನಕ್ಕೆ ಬಹುಸಮೀಪದಲ್ಲಿಯೇ ಕುಳಿತು ಕೊಂಡರು. ಗಾಂಧಾರದೇಶದ ಅಂಗರಕ್ಷಕರನ್ನು ಹೊಂದಿದ್ದ ಗಾಂಧಾರರಾಜ ನಾದ ಶಕುನಿಯು ಪುತ್ರಸಹಿತನಾಗಿ ದಿವ್ಯವಾದ ಆಸನದಲ್ಲಿ ಕುಳಿತುಕೊಂಡನು. ಮಹಾಮತಿಯಾದ ವಿದುರನು ಶ್ರೀಕೃಷ್ಣನ ಸರ್ವತೋಭದ್ರಾಸನವನ್ನು

ಒಮ್ಮೆ ಸ್ಪರ್ಶಿಸಿ (ನಮಸ್ಕರಿಸಿ) ಬಿಳಿಯದಾದ ಮತ್ತು ಸುಖಸ್ಪರ್ಶಿಯಾದ ಚರ್ಮದ ಹೊದ್ದಿಕೆಯಿದ್ದ ಮಣಿಮಯವಾದ ಪೀಠದಲ್ಲಿ ಕುಳಿತುಕೊಂಡನು.

**ಚಿರಸ್ಯ ದೃಷ್ಟ್ವಾ ದಾಶಾರ್ಹಂ ರಾಜಾನಃ ಸರ್ವ ಏವ ತೇ ।**
**ಅಮೃತಸ್ಯೇವ ನಾತೃಪ್ಯನ್ಪ್ರೇಕ್ಷಮಾಣಾ ಜನಾರ್ದನಮ್ ॥೫೧॥**

ಅಲ್ಲಿ ನೆರೆದಿದ್ದ ರಾಜರೆಲ್ಲರೂ ಶ್ರೀಕೃಷ್ಣನನ್ನು ನೋಡಿ ಬಹಳ ದಿವಸಗಳಾಗಿತ್ತು. ಇತ್ತೀಚೆಗೆ ಶ್ರೀಕೃಷ್ಣನ ದರ್ಶನವೇ ಅವರಿಗಾಗಿರಲಿಲ್ಲ. ಅಂದು ಜಗದಾನಂದಕಂದನಾದ ಶ್ರೀಕೃಷ್ಣನನ್ನು ಎಷ್ಟು ಬಾರಿ ನೋಡಿದರೂ ಅವರಿಗೆ ತೃಪ್ತಿಯೆಂಬುದೇ ಉಂಟಾಗಲಿಲ್ಲ. ಅಮೃತವನ್ನು ಪಾನಮಾಡುತ್ತಿದ್ದರೆ ಇನ್ನೂ ಪಾನಮಾಡುತ್ತಲೇ ಇರಬೇಕೆಂದೆನಿಸುವಂತೆ–ಶ್ರೀಕೃಷ್ಣನನ್ನು ಸರ್ವದಾ ನೋಡುತ್ತಲೇ ಇರಬೇಕೆಂದು ಆ ರಾಜರಿಗನ್ನಿಸಿತು.

**ಅತಸೀಪುಷ್ಪಸಂಕಾಶಃ ಪೀತವಾಸಾ ಜನಾರ್ದನಃ ।**
**ವ್ಯಭ್ರಾಜತ ಸಭಾಮಧ್ಯೇ ಹೇಮ್ನೀವೋಪಹಿತೋ ಮಣಿಃ ॥೫೨॥**

ಅಗಸೇಹೂವಿನಂತೆ ನೀಲವರ್ಣದ ಕಾಂತಿಯಿಂದ ಬೆಳಗುತ್ತಿದ್ದ ಪೀತಾಂಬರವನ್ನುಟ್ಟಿದ್ದ ಶ್ರೀಕೃಷ್ಣನು ಆ ಸಭಾಮಧ್ಯದಲ್ಲಿ–ಸ್ವರ್ಣದಲ್ಲಿ ಮೆಟ್ಟಿದ್ದ ನೀಲಮಣಿಯಂತೆ–ಕಂಗೊಳಿಸಿದನು. ಆ ಒಂದು ಮುಹೂರ್ತದಲ್ಲಿ ಆ ಸಭಾಭವನದಲ್ಲಿದ್ದ ಸಕಲರ ಮನಸ್ಸೂ ಸಹ ಶ್ರೀಕೃಷ್ಣನಲ್ಲಿಯೇ ಕೇಂದ್ರೀಕೃತವಾಗಿಬಿಟ್ಟಿತು. ಎಲ್ಲವೂ ಸ್ತಬ್ಧವಾಗಿದ್ದಿತು. ಯಾರೊಡನೆಯೂ ಯಾರೂ ಏನೊಂದನ್ನೂ ಮಾತನಾಡುತ್ತಿರಲಿಲ್ಲ. ಎಲ್ಲರ ಕಣ್ಣುಗಳೂ ಶ್ರೀಕೃಷ್ಣನಲ್ಲಿಯೇ ಲೀನವಾಗಿಹೋಗಿದ್ದುವು.

ಆಳನೆಯ ಅಧ್ಯಾಯವು ಮುಗಿಯಿತು.

ಆ೫ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಕೌರವಮಹಾಸಭೆಯಲ್ಲಿ ಶ್ರೀಕೃಷ್ಣನ ಪ್ರಭಾವಯುತವಾದ ಭಾಷಣ

ಜನಮೇಜಯ! ಕೌರವರ ಆ ಮಹಾಸಭೆಯಲ್ಲಿ ಎಲ್ಲ ರಾಜರೂ ಮೌನಧರಿಸಿ ಶ್ರೀಕೃಷ್ಣನನ್ನೇ ದಿಟ್ಟಿಸಿ ನೋಡುತ್ತಾ ಕುಳಿತುಕೊಂಡಿರಲಾಗಿ,

ಶೋಭಾಯಮಾನವಾದ ದಂತಗಳನ್ನು ಹೊಂದಿದ್ದ, ದುಂದುಭಿಯ ಸ್ವರಕ್ಕೆ ಸಮಾನವಾದ ಮಧುರಕಂಠಧ್ವನಿಯಿಂದ ಕೂಡಿದ್ದ ಶ್ರೀಕೃಷ್ಣನು ಮಾತನಾಡಲು ಉಪಕ್ರಮಿಸಿದನು. ಗ್ರೀಷ್ಮರ್ತುವಿನ ಅಂತ್ಯದಲ್ಲಿ ಕಾಣಿಸಿಕೊಳ್ಳುವ ಮೇಘವು ಗರ್ಜನೆಮಾಡುವಂತೆ–ನೆರೆದಿದ್ದ ಸಭಾಸದರೆಲ್ಲರಿಗೂ ಕೇಳಿಸುವ ರೀತಿಯಲ್ಲಿ ಉಚ್ಚಧ್ವನಿಯಿಂದ ಧೃತರಾಷ್ಟ್ರನ ಕಡೆಗೆ ತಿರುಗಿ ಮಾಧವನು ಮಾತನಾಡಲು ಪ್ರಾರಂಭಿಸಿದನು :

“ಭಾರತ! ಉಭಯಪಕ್ಷಗಳಲ್ಲಿಯೂ ಇರುವ ವೀರಾಧಿವೀರರ ವಿನಾಶ ವಾಗದೆಯೇ ಕುರುಗಳಿಗೂ ಮತ್ತು ಪಾಂಡವರಿಗೂ ಸಂಧಿಯಾಗಬೇಕೆಂಬು ದನ್ನು ಪ್ರಾರ್ಥಿಸುವ ಸಲುವಾಗಿ ನಾನಿಲ್ಲಿಗೆ ಆಗಮಿಸಿದ್ದೇನೆ. ಅರಿಂದಮನೇ! ಇದಕ್ಕಿಂತಲೂ ಶ್ರೇಯಸ್ಕರವಾದ ಯಾವ ಮಾತನ್ನೂ ನಾನು ನಿನಗೆ ಹೇಳ ಬೇಕಾಗಿಲ್ಲ. ಏಕೆಂದರೆ: ನಿನಗೆ ಈ ವಿಷಯವಾಗಿ ತಿಳಿಯಬೇಕಾದುದೆಲ್ಲವೂ ತಿಳಿದುಹೋಗಿದೆ. ಇಲ್ಲಿ ನೆರೆದಿರುವ ಎಲ್ಲ ರಾಜರ ಕುಲಕ್ಕಿಂತಲೂ ಈ ಕುರುಕುಲವು ಎಲ್ಲ ಪ್ರಕಾರಗಳಿಂದಲೂ ಶ್ರೇಷ್ಠವಾಗಿದೆ. ಶಾಸ್ತ್ರಜ್ಞಾನ ಮತ್ತು ಸದ್ವೃತ್ತಗಳಿಂದ ಈ ಕುಲವು ಪರಿಪೂರ್ಣವಾಗಿದೆ. ಸಕಲಸದ್ಗುಣಗಳಿಂದಲೂ ಈ ಕುರುವಂಶವು ಸಂಪನ್ನವಾಗಿದೆ.

**ಕೃಪಾನುಕಮ್ಪಾ ಕಾರುಣ್ಯಮಾನೃಶಂಸ್ಯಂ ಚ ಭಾರತ ।**
**ತಥಾರ್ಜವಂ ಕ್ಷಮಾ ಸತ್ಯಂ ಕುರುಷ್ವೇತದ್ವಿಶಿಷ್ಯತೇ ॥೬॥**

ಕೃಪೆ, ಅನುಕಂಪೆ, ಕಾರುಣ್ಯ, ಆನೃಶಂಸ್ಯ, ಋಜುತ್ವ, ಕ್ಷಮೆ, ಸತ್ಯ–ಈ ಎಲ್ಲ ಸದ್ಗುಣಗಳೂ ಇತರ ರಾಜರಿಗಿಂತಲೂ ಕುರುಗಳಲ್ಲಿ ವಿಶಿಷ್ಟ ವಾಗಿವೆ.

**ತಸ್ಮಿನ್ನೇವಂವಿಧೇ ರಾಜನ್ಕುಲೇ ಮಹತಿ ತಿಷ್ಠತಿ ।**
**ತ್ವನ್ನಿಮಿತ್ತಂ ವಿಶೇಷೇಣ ನೇಹ ಯುಕ್ತಮಸಾಮ್ಪ್ರತಮ್ ॥೭॥**

ಇಂತಹ ದೊಡ್ಡ ರಾಜಕುಲದಲ್ಲಿ ಜನ್ಮತಾಳಿದ ನಿನ್ನ ನಿಮಿತ್ತವಾಗಿ ನಿನ್ನ ಹೆಸರಿನಲ್ಲಿ ಅನುಚಿತವಾದೊಂದು ಕಾರ್ಯವು ನಡೆಯುವುದಾದರೆ ಅದು ಖಂಡಿತವಾಗಿಯೂ ಯುಕ್ತವಲ್ಲ. (ಅನುಚಿತಕಾರ್ಯವು ಯಾವುದೆಂಬು

ದನ್ನು ವ್ಯಾಖ್ಯಾನಕಾರರು ವಿವರಿಸಿದ್ದಾರೆ. ಇತರರಿಗೆ ದುಃಖಕೊಡಬೇಕೆಂಬ ಪ್ರಯತ್ನ, ಇತರರು ದುಃಖಪಡುತ್ತಿದ್ದರೆ ಸಂತೋಷಪಡುವುದು, ಇತರರು ಸುಖವಾಗಿದ್ದರೆ ಅವರ ಸುಖವನ್ನು ನಾಶಮಾಡಲು ಯತ್ನಿಸುವುದು, ಕೌಟಿಲ್ಯದ ಮೂಲಕವಾಗಿ ಇತರರನ್ನು ಕಷ್ಟಕ್ಕೆ ಗುರಿಪಡಿಸುವುದು–ಇತ್ಯಾದಿಗಳು ಅಯುಕ್ತವಾದ ಕಾರ್ಯಗಳು. ಇಂತಹ ಕಾರ್ಯಗಳನ್ನು ಮಾಡಲು ಹೋಗಬಾರದು.)

ಕುರುಸತ್ತಮನೇ! ಪ್ರಸಕ್ತಸಮಯದಲ್ಲಿ ನೀನು ಕುರುಗಳಲ್ಲಿ ಶ್ರೇಷ್ಠನಾಗಿರುವೆ. ನೀನು ಚಕ್ರವರ್ತಿಯಾಗಿರುವುದರಿಂದ ಅಂತರಂಗದಲ್ಲೇ ಆಗಲೀ, ಬಹಿರಂಗದಲ್ಲೇ ಆಗಲೀ–ನಿನ್ನ ಪ್ರಜೆಗಳಲ್ಲಿ ಯಾರಾದರೂ ಅಸದ್ವ್ಯವಹಾರವನ್ನು ನಡೆಸಿದ್ದೇ ಆದರೆ–ಅಂತಹವರನ್ನು ನೀನು ಶಿಕ್ಷಿಸಿಯೋ, ಸದ್ಬೋಧನೆಯಿಂದಲೋ ಸನ್ಮಾರ್ಗಕ್ಕೆ ತರುವವನಾಗಿರುವೆ. ಆದರೆ ನಿನ್ನ ಮನೆಯಲ್ಲಿಯೇ ಇದನ್ನು ನೀನು ಆಚರಣೆಗೆ ತಂದಿರುವುದಿಲ್ಲ. ದುರ್ಯೋಧನನೇ ಮೊದಲಾದ ನಿನ್ನ ಮಕ್ಕಳು ಧರ್ಮಾರ್ಥಗಳೆರಡನ್ನೂ ಬದಿಗೊತ್ತಿ ಕೇವಲ ಕ್ರೂರಮನುಷ್ಯರಂತೆ ವರ್ತಿಸುತ್ತಿದ್ದಾರೆ. ಅತಿಮುಖ್ಯರಾದ ತಮ್ಮ ಬಾಂಧವರ ವಿಷಯದಲ್ಲಿಯೇ ಇವರು ಶಿಷ್ಟಾಚರಣೆಯನ್ನಿಟ್ಟುಕೊಂಡಿರುವುದಿಲ್ಲ. ಅಶಿಷ್ಟರಂತೆ, ಅನಾರ್ಯರಂತೆ ವರ್ತಿಸುತ್ತಿದ್ದಾರೆ. ಲೋಭದಿಂದ ಅಪಹೃತವಾದ ಮನಸ್ಸುಳ್ಳ (ಲೋಭಾಭಿಭೂತರಾದ) ಇವರು ಲೋಕಮರ್ಯಾದೆಯನ್ನೂ ಪರಿತ್ಯಜಿಸಿಬಿಟ್ಟಿದ್ದಾರೆ. ಈ ವಿಷಯಗಳೆಲ್ಲವೂ ನಿನಗೆ ಚೆನ್ನಾಗಿ ತಿಳಿದಿವೆ.

ಮಹಾರಾಜ! ತಮ್ಮ ಬಂಧುಗಳಲ್ಲಿಯೇ ದುರ್ವರ್ತನೆಯಿಂದ ವರ್ತಿಸುತ್ತಿರುವ ಕಾರಣದಿಂದಾಗಿ ಕುರುಗಳಿಗೆ ಮಹಾಘೋರವಾದ ಆಪತ್ತು ಸಂಭವಿಸಿದೆ. ಕುರುಗಳ ಮಧ್ಯದಲ್ಲಿ ಹುಟ್ಟಿಕೊಂಡಿರುವ ಈ ಆಪತ್ತನ್ನು ಉದಾಸೀನಮಾಡಿದ್ದೇ ಆದರೆ ಈ ಆಪತ್ತು ಸಮಸ್ತಭೂಮಂಡಲವನ್ನೇ ವಿಧ್ವಂಸನಗೊಳಿಸಿಬಿಡುತ್ತದೆ. ಇಂತಹ ಘೋರವಾದ ಆಪತ್ತನ್ನು ಶಮನಮಾಡಲು ಸಾಧ್ಯವಿಲ್ಲದೇ ಇಲ್ಲ. ನೀನು ಇಚ್ಛಿಸಿದ್ದೇ ಆದರೆ ಈ ಆಪತ್ತನ್ನೂ ಶಾಂತಗೊಳಿಸಲು ಸಾಧ್ಯವಿದೆ. ಬಂಧುಗಳ ಮಧ್ಯದಲ್ಲಿ ತಲೆದೋರಿರುವ ಈ ಘೋರವಾದ ಆಪತ್ತನ್ನು ಶಮನಗೊಳಿಸಲು ದುಷ್ಕರವಾಗಲಾರದೆಂಬುದು

ನನ್ನ ಅಭಿಪ್ರಾಯವಾಗಿದೆ. ಮಹಾರಾಜ! ಇಂದು ಶಾಂತಿಸ್ಥಾಪನೆಯು ನಿನ್ನ ಅಧೀನದಲ್ಲಿದೆ. ನೀನಿಚ್ಛಿಸಿದರೆ ಖಂಡಿತವಾಗಿಯೂ ಶಾಂತಿಯ ಸ್ಥಾಪನೆಯಾಗುತ್ತದೆ. ಶಾಂತಿಸ್ಥಾಪನೆಯು ನಿನ್ನ ಅಧೀನದಲ್ಲಿರುವಂತೆ ನನ್ನ ಅಧೀನದಲ್ಲಿಯೂ ಇದೆ. ಅರ್ಥಾತ್ ಶಾಂತಿಸ್ಥಾಪನೆಗಾಗಿ ನಾವಿಬ್ಬರೂ ಶ್ರಮಿಸಬೇಕಾಗಿದೆ. ನೀನು ನಿನ್ನ ಮಕ್ಕಳನ್ನು ನಿಯಂತ್ರಿಸು. ನಾನು ಪಾಂಡವರನ್ನು ನಿಯಂತ್ರಿಸುತ್ತೇನೆ. ಹೀಗೆ ಮಾಡುವುದರಿಂದ ಮಾತ್ರವೇ ಶಾಂತಿಯು ಸ್ಥಾಪಿತವಾದೀತು. ಮಹಾರಾಜ! ನಿನ್ನ ಆಜ್ಞೆಯು ನಿನ್ನ ಮಕ್ಕಳಿಂದಲೂ ಮತ್ತು ಅವರ ಅನುಯಾಯಿಗಳಿಂದಲೂ ಪರಿಪಾಲಿಸಲ್ಪಡಬೇಕು. ಅವರು ನಿನ್ನ ಆಜ್ಞೆಗೊಳಪಟ್ಟು ನಡೆಯುವುದರಿಂದ ಅವರಿಗೆ ಅಧಿಕವಾದ ಹಿತವೇ ಉಂಟಾಗುತ್ತದೆ. ಶಾಂತಿಗಾಗಿ ಪ್ರಯತ್ನಿಸುವ ನಿನ್ನ ಆಜ್ಞಾನುಸಾರವಾಗಿ ನಿನ್ನ ಮಕ್ಕಳು ನಡೆದುಕೊಂಡಿದ್ದೇ ಆದರೆ, ನಿನ್ನ ಶಾಸನದಲ್ಲಿ ಅವರು ಆಕಾಂಕ್ಷೆಯುಳ್ಳವರಾದರೆ, ಅವರಿಂದ ನಿನ್ನ ಹಿತದ ಸಾಧನೆಯೂ ಆಗುತ್ತದೆ; ಪಾಂಡವರಿಗೂ ಹಿತವಾಗುತ್ತದೆ. ಪಾಂಡವರೊಡನೆ ಯುದ್ಧಮಾಡುವುದು ನಿಷ್ಫಲವೆಂಬುದನ್ನು ಮನಗಂಡು ನೀನೇ ಸಂಧಿಗಾಗಿ ಪ್ರಯತ್ನಿಸು. ನೀನೇ ಸಂಧಿಗಾಗಿ ಪ್ರಯತ್ನಿಸಿ ಉಭಯಪಕ್ಷಗಳಲ್ಲಿಯೂ ಶಾಂತಿಯುಂಟಾಗುವಂತೆ ಮಾಡಿದೆಯಾದರೆ ಮುಂದೆ ಪಾಂಡವರೇ ನಿನಗೆ ಸಹಾಯಭೂತರಾಗಿ ನಿಲ್ಲುವರು. ಪಾಂಡವರಿಂದ ಸಂರಕ್ಷಿತನಾದ ನೀನು ಧರ್ಮಾರ್ಥಗಳನ್ನು ಸಾಧಿಸುತ್ತಿರಬಹುದು. ಎಷ್ಟೇ ಪ್ರಯತ್ನಿಸಿದರೂ ಅಂತಹ ರಕ್ಷಕರು ಬೇರೆಲ್ಲೂ ನಿನಗೆ ಖಂಡಿತವಾಗಿಯೂ ಸಿಗಲಾರರು.

ಮಹಾರಾಜ! ಮಹಾತ್ಮರಾದ ಪಾಂಡವರಿಂದ ಸುರಕ್ಷಿತನಾದ ನಿನ್ನನ್ನು ದೇವತೆಗಳಿಂದ ಕೂಡಿದ ಇಂದ್ರನೂ ಜಯಿಸಲಾರನೆಂದಮೇಲೆ ಸಾಮಾನ್ಯ ನಾದವನೊಬ್ಬ ರಾಜನು ಜಯಿಸುವನೇ? (ಪಾಂಡವರ ರಕ್ಷಣೆಯನ್ನು ಪಡೆದ ನೀನು ನಿರುಪದ್ರವನಾಗಿರಬಹುದಾಗಿದೆ.) ಯಾರ ಪಕ್ಷದಲ್ಲಿ ಭೀಷ್ಮ, ದ್ರೋಣ, ಕೃಪ, ಕರ್ಣ, ವಿವಿಂಶತಿ, ಅಶ್ವತ್ಥಾಮಾ, ವಿಕರ್ಣ, ಸೋಮದತ್ತ, ಬಾಹ್ಲಿಕ, ಸೈಂಧವ, ಕಲಿಂಗರಾಜ, ಕಾಂಬೋಜರಾಜನಾದ ಸುದಕ್ಷಿಣ, ಯುಧಿಷ್ಠಿರ, ಭೀಮಸೇನ, ಸವ್ಯಸಾಚೀ, ನಕುಲ, ಸಹದೇವ, ಮಹಾತೇಜಸ್ವಿ ಯಾದ ಸಾತ್ಯಕಿ, ಮಹಾರಥನಾದ ಯುಯುತ್ಸು–ಇವರುಗಳಿರುತ್ತಾರೆಯೋ

ಅಂತಹವನ ಮೇಲೆ ಯಾವ ರಾಜನು ತಾನೇ ವಿಪರೀತಬುದ್ಧಿಯುಳ್ಳವನಾಗಿ ಯುದ್ಧಮಾಡಲು ಬರುವನು?

**ಲೋಕಸ್ಯೇಶ್ವರತಾಂ ಭೂಯಃ ಶತ್ರುಭಿಶ್ಚಾಪ್ಯಧೃಷ್ಯತಾಮ್ ।**
**ಪ್ರಾಪ್ಸ್ಯಸಿ ತ್ವಮಮಿತ್ರಘ್ನ ಸಹಿತಃ ಕುರುಪಾಣ್ಡವೈಃ ॥೨೭॥**

ಕುರು-ಪಾಂಡವರಿಬ್ಬರಿಂದಲೂ ಕೂಡಿರುವ ನೀನು ಅಖಂಡವಿಶ್ವಕ್ಕೂ ಚಕ್ರವರ್ತಿಯಾಗುವೆ. ಶತ್ರುಗಳಿಂದ ಅಪ್ರಧೃಷ್ಯನಾಗುವೆ. (ಜಯಿಸಲಾಗದವನಾಗುವೆ.)

ಪರಂತಪ! ಪೃಥಿವೀಪಾಲ! ನೀನು ಕುರು-ಪಾಂಡವರಿಂದ ಸಹಿತನಾಗಿರುವೆಯೆಂದು ತಿಳಿದೊಡನೆಯೇ ನಿನಗೆ ಸಮಾನರಾದ ರಾಜರೂ, ನಿನಗಿಂತಲೂ ಹೆಚ್ಚು ಪರಾಕ್ರಮವುಳ್ಳ ರಾಜರೂ ನಿನ್ನೊಡನೆ ಸಂಧಿಮಾಡಿಕೊಳ್ಳಲು ಬರುತ್ತಾರೆ. ಅಂತಹ ನೀನು ಉಪದ್ರವರಹಿತನಾಗಿ ಮಕ್ಕಳಿಂದಲೂ, ಮೊಮ್ಮಕ್ಕಳಿಂದಲೂ, ಪಿತೃಸಮಾನರಾದವರಿಂದಲೂ, ಭ್ರಾತೃಸಮಾನರಾದವರಿಂದಲೂ, ಸುಹೃದರಿಂದಲೂ ಸಂರಕ್ಷಿತನಾಗಿ ನಿನ್ನ ಮುಂದಿನ ಜೀವನವನ್ನು ಬಹಳ ಸುಖದಿಂದ ಕಳೆಯುವೆ. ಹಿಂದಿನಂತೆಯೇ ಈಗಲೂ ಪಾಂಡವರನ್ನು ಯಥಾಯೋಗ್ಯವಾಗಿ ಸತ್ಕರಿಸಿ ಅವರನ್ನೇ ಮುಂದುಮಾಡಿಕೊಂಡು ಸಮಸ್ತವಾದ ಈ ಭೂಮಂಡಲವನ್ನೂ ನಿನ್ನದನ್ನಾಗಿ ಮಾಡಿಕೊಂಡು ಉಪಭೋಗಿಸುವೆ. ಎಲ್ಲ ಪಾಂಡವರಿಂದಲೂ–ನಿನ್ನ ಮಕ್ಕಳಿಂದಲೂ ಒಡಗೂಡಿದವನಾಗಿ ನಿನ್ನನ್ನೆದುರಿಸಲು ಬರುವ ಸಕಲಶತ್ರುಗಳನ್ನೂ ಜಯಿಸುವೆ. ಇದರಲ್ಲಾವ ಸಂಶಯವೂ ಇಲ್ಲ. ಇದರಿಂದಾಗಿ ನಿನ್ನ ಸ್ವಾರ್ಥದ ಸಿದ್ಧಿಯಾಗುವುದು. ಮಹಾರಾಜ! ನೀನು ನಿನ್ನ ಎಲ್ಲ ಮಕ್ಕಳಿಂದಲೂ ಕೂಡಿಕೊಂಡಿದ್ದೇ ಆದರೆ ಮಂತ್ರಿಸಹಿತರಾದ ಅವರಿಂದಲೇ (ಪಾಂಡವರಿಂದಲೇ) ಉಪಾರ್ಜಿತವಾದ ಈ ಭೂಮಂಡಲವನ್ನು ಉಪಭೋಗಿಸುವೆ.

**ಸಂಯುಗೇ ವೈ ಮಹಾರಾಜ ದೃಶ್ಯತೇ ಸುಮಹಾನ್ ಕ್ಷಯಃ ।**
**ಕ್ಷಯೇ ಚೋಭಯತೋ ರಾಜನ್ಕಂ ಧರ್ಮಮನುಪಶ್ಯಸಿ ॥೨೮॥**

ಒಂದು ವೇಳೆ ನಮ್ಮೆಲ್ಲರ ಆಶಯಕ್ಕೂ ವಿರುದ್ಧವಾಗಿ ಯುದ್ಧವೇ

ನಡೆದರೆ ಅದರಿಂದಾಗಿ ಮಹತ್ತಾದ ಕ್ಷಯವೇ ಆಗುತ್ತದೆ. ಲಕ್ಷೋಪಲಕ್ಷ ಸೈನಿಕರು ಮಡಿಯುತ್ತಾರೆ. ಆದರೆ ಆ ಕ್ಷಯವು ಒಂದೇ ಪಕ್ಷಕ್ಕೆ ಸೀಮಿತ ವಾಗಿರುವುದಿಲ್ಲ. ಉಭಯಪಕ್ಷಗಳೂ ಕ್ಷಯಿಸುತ್ತವೆ. ಅಂತಹ ಸರ್ವಕ್ಷಯ ಕರವಾದ ಯುದ್ಧದಿಂದ ನೀನು ಯಾವ ಧರ್ಮವನ್ನು ತಾನೇ ಸಾಧಿಸಲಿರುವೆ?

**ಪಾಣ್ಡವೈರ್ನಿಹತೈಃ ಸಂಖ್ಯೇ ಪುತ್ರೈರ್ವಾಪಿ ಮಹಾಬಲೈಃ ।**
**ಯದ್ವಿನ್ದೇಥಾಃ ಸುಖಂ ರಾಜಂಸ್ತದ್ಬ್ರೂಹಿ ಭರತರ್ಷಭ ॥೨೯॥**

ಒಂದು ವೇಳೆ ಯುದ್ಧದಲ್ಲಿ ಪಾಂಡವರೇ ಮಡಿದಾರು; ಮಹಾಬಲರಾದ ನಿನ್ನ ಮಕ್ಕಳೇ ಮಡಿದಾರು–ಅದರಿಂದ ನಿನಗೆ ಯಾವ ಸುಖವುಂಟಾಗುವುದು? ಹೇಳು ; ಮಹಾರಾಜ! ಪಾಂಡವರೂ, ನಿನ್ನ ಮಕ್ಕಳೂ ಮತ್ತು ನಿನ್ನ ಪಕ್ಷಕ್ಕೆ ಸೇರಿರುವ ರಾಜರೆಲ್ಲರೂ ಶೂರರೂ–ಅಸ್ತ್ರಕೋವಿದರೂ ಆಗಿರುತ್ತಾರೆ. ಅವರೆಲ್ಲರೂ ಯುದ್ಧಮಾಡುವ ಆಕಾಂಕ್ಷೆಯಿಂದಿರುತ್ತಾರೆ. ಆದರೆ ನೀನೀಸಮಯದಲ್ಲಿ ವಿವೇಕಮಾರ್ಗವನ್ನು ಹಿಡಿದು ಮೃತ್ಯುಮುಖದಲ್ಲಿರುವ ಎಲ್ಲರನ್ನೂ ಮೃತ್ಯುವೆಂಬ ಮಹಾಭಯದಿಂದ ಸಂರಕ್ಷಿಸು. ಯುದ್ಧವೇನಾದರೂ ನಡೆದಿದ್ದೇ ಆದರೆ ಯುದ್ಧಾನಂತರದಲ್ಲಿ ಸರ್ವಕುರುಗಳನ್ನೂ, ಅವರ ಅನುಯಾಯಿಗಳನ್ನೂ, ಪಾಂಡವರನ್ನೂ, ಅವರ ಅನುಯಾಯಿಗಳನ್ನೂ ನಾವು ಯಥಾವತ್ತಾಗಿ ಖಂಡಿತವಾಗಿಯೂ ಕಾಣಲಾರೆವು. ಎರಡು ಪಕ್ಷ ಗಳಲ್ಲಿಯೂ ರಥಿಕರಿಂದ ಹತರಾಗುವ ಮಹಾಶೂರರಾದ ರಥಿಕರನ್ನು ನಾವು ಕಾಣುತ್ತೇವೆ.

ರಾಜಸತ್ತಮನೇ! ಭೂಮಂಡಲದ ಸಮಸ್ತರಾಜರೂ ಇಲ್ಲಿ ಸಮ್ಮಿಲಿತ ರಾಗಿದ್ದಾರೆ. ಕ್ರೋಧವಶರಾದ ಇವರೆಲ್ಲರೂ ಈ ಪ್ರಜಾಕೋಟಿಯನ್ನೇ ನಾಶಮಾಡಿಬಿಟ್ಟಾರು.

**ತ್ರಾಹಿ ರಾಜನ್ನಿಮಂ ಲೋಕಂ ನ ನಶ್ಯೇಯುರಿಮಾಃ ಪ್ರಜಾಃ ।**
**ತ್ವಯಿ ಪ್ರಕೃತಿಮಾಪನ್ನೇ ಶೇಷಃ ಸ್ಯಾತ್ಕುರುನನ್ದನ ॥೩೩॥**

ಕುರುನಂದನನೇ! ಮೃತ್ಯುಮುಖದಲ್ಲಿರುವ ಈ ಲೋಕವನ್ನು ಕಾಪಾಡು. ನಿರ್ದೋಷಿಗಳಾದ ಪ್ರಜೆಗಳು ವಿನಾಶಹೊಂದದಿರಲಿ. ನೀನೇನಾದರೂ ನಿನ್ನ

ವಂಶಕ್ಕೆ ಅನುಗುಣವಾದ ಸ್ವಭಾವವನ್ನೇ ಹೊಂದುವುದಾದರೆ (ನಿಷ್ಕಲ್ಮಷತೆಯಿಂದ ವರ್ತಿಸಿದ್ದೇ ಆದರೆ) ಪ್ರಜೆಗಳೆಲ್ಲರೂ ಉಳಿದುಕೊಂಡಾರು.

**ಶುಕ್ಲಾ ವದಾನ್ಯಾ ಹ್ರೀಮನ್ತ ಆರ್ಯಾಃ ಪುಣ್ಯಾಭಿಜಾತಯಃ ।**
**ಅನ್ಯೋನ್ಯಸಚಿವಾ ರಾಜಂಸ್ತಾನ್ಪಾಹಿ ಮಹತೋ ಭಯಾತ್ ॥೩೪॥**

ಇಲ್ಲಿ ಸಮ್ಮಿಳಿತರಾಗಿರುವ ರಾಜರೆಲ್ಲರೂ ಶುದ್ಧರೂ, ಉದಾರರೂ, ಲಜ್ಜಾಶೀಲರೂ, ಶ್ರೇಷ್ಠರೂ, ಪವಿತ್ರಕುಲೋತ್ಪನ್ನರೂ ಮತ್ತು ಪರಸ್ಪರ ಸಹಾಯಕರೂ ಆಗಿರುತ್ತಾರೆ. ನೀನು ಈ ಎಲ್ಲರನ್ನೂ ಸನ್ನಿಹಿತವಾಗಿರುವ ಮಹಾಭಯದಿಂದ ಸಂರಕ್ಷಿಸು.

ಈ ಭೂಮಿಪಾಲರು ಯುದ್ಧಮಾಡುವ ಬದಲು ಪರಸ್ಪರಸೌಹಾರ್ದದಿಂದ ಕುಶಲಪ್ರಶ್ನೆಗಳನ್ನು ಕೇಳಿ, ಜೊತೆಯಲ್ಲೇ ಕುಳಿತು ಶುಚಿ-ರುಚಿಯಾದ ಭೋಜನವನ್ನು ಮಾಡಿ, ಪಾನೀಯಗಳನ್ನೂ ಕುಡಿದು–ಸಂತೋಷದಿಂದ ತಮ್ಮ-ತಮ್ಮ ದೇಶಗಳಿಗೆ ಹಿಂದಿರುಗಲಿ.

ಪರಂತಪನೇ! ಭರತರ್ಷಭ! ಇಲ್ಲಿಗೆ ಆಗಮಿಸಿರುವ ಈ ರಾಜರು ನಿನ್ನಿಂದ ಸತ್ಕೃತರಾಗಿ, ಉತ್ತಮೋತ್ತಮವಾದ ವಸ್ತ್ರಗಳನ್ನೂ–ಹಾರಗಳನ್ನೂ ಧರಿಸಿದವರಾಗಿ, ಅಸಹನೆಯನ್ನೂ–ವೈರವನ್ನೂ ಪರಿತ್ಯಜಿಸಿ, ಇಲ್ಲಿಂದ ಪ್ರಯಾಣಮಾಡಲಿ. ಮಹಾರಾಜ! ಹಿಂದೆ ನಿನಗೆ ಪಾಂಡವರ ವಿಷಯದಲ್ಲಿ ಎಂತಹ ಹಾರ್ದಿಕವಾದ ಮನೋಭಾವವಿದ್ದಿತೋ-ಆಯುಷ್ಯವು ಕ್ಷೀಣಿಸುತ್ತಿರುವ ಈ ಸಮಯದಲ್ಲಿಯೂ (ವೃದ್ಧಾಪ್ಯದಲ್ಲಿಯೂ) ಅಂತಹ ಸೌಹಾರ್ದವೇ ನಿನಗೆ ಅವರ ಮೇಲುಂಟಾಗಲಿ. ಪಾಂಡವರೊಡನೆ ಸಂಧಾನಕ್ಕೆ ಸಮ್ಮತಿಸು. ಹಿಂದಿನದೆಲ್ಲವನ್ನೂ ಸ್ಮರಿಸು, ಮಹಾರಾಜ! ಪಾಂಡವರಿನ್ನೂ ಬಾಲಕರಾಗಿದ್ದಾಗಲೇ ಪಿತೃವಿಹೀನರಾದರು. ನಿನ್ನಿಂದಲೇ ಅವರು ಸಂವರ್ಧಿತರಾದರು. ಆದುದರಿಂದ ಪಾಂಡವರನ್ನೂ ಮತ್ತು ನಿನ್ನ ಮಕ್ಕಳನ್ನೂ ನ್ಯಾಯವಾದ ರೀತಿಯಲ್ಲಿ ಪರಿಪಾಲಿಸು. ನಿನ್ನಿಂದಲೇ ಪಾಂಡವರು ಸುರಕ್ಷಿತರಾಗಬೇಕು. ಮೇಲಾಗಿ ಅವರು ಅನೇಕವಿಧವಾದ ದಾರುಣವಾದ ಸಂಕಷ್ಟಗಳನ್ನು ಅನುಭವಿಸಿ ಬಂದಿರುತ್ತಾರೆ. ಅಂತಹವರ ವಿಷಯದಲ್ಲಿ ನೀನು ಅನುಕಂಪವನ್ನು ತೋರಲೇಬೇಕು. ಅವರ ವಿಷಯದಲ್ಲಿ ನೀನು ಈ ಸಮಯದಲ್ಲಿ ಅನುಕಂಪವನ್ನು ತೋರದಿದ್ದರೆ–ನ್ಯಾಯವಾದ ರೀತಿಯಲ್ಲಿ ನಡೆದುಕೊಳ್ಳದಿದ್ದರೆ–

ಅದರಿಂದ ಹೆಚ್ಚಿನ ಅನರ್ಥವೇ ಉಂಟಾಗುವುದು. ಹಾಗೆಂದಿಗೂ ಮಾಡಬೇಡ. ನಿನ್ನ ಧರ್ಮಾರ್ಥಗಳೆರಡೂ ನಷ್ಟವಾಗದಿರಲಿ. ಧರ್ಮಾರ್ಥಗಳು ನಷ್ಟವಾಗಿ ಹೋಗದ ರೀತಿಯಲ್ಲಿ ವರ್ತಿಸು.

ಮಹಾರಾಜ! ಪಾಂಡವರು ನನ್ನ ಮೂಲಕವಾಗಿ ನಿನಗೆ ಅಭಿವಾದನವನ್ನು ಸಲ್ಲಿಸಿ ನಿನ್ನನ್ನು ಪ್ರಸನ್ನಗೊಳಿಸಿ ಹೀಗೆ ಪ್ರಾರ್ಥಿಸುವಂತೆ ಹೇಳಿರುತ್ತಾರೆ :

**ಭವತಃ ಶಾಸನಾದ್ದುಃಖಮನುಭೂತಂ ಸಹಾನುಗೈಃ ॥೪೦॥**

**ದ್ವಾದಶೇಮಾನಿ ವರ್ಷಾಣಿ ವನೇ ನಿರ್ವ್ಯುಷಿತಾನಿ ನಃ ।**
**ತ್ರಯೋದಶಂ ತಥಾಜ್ಞಾತೈಃ ಸಜನೇ ಪರಿವತ್ಸರಮ್ ॥೪೧॥**

"ತಂದೆಯೇ! ನಿನ್ನ ಆಜ್ಞೆಯನ್ನು ಪಾಲಿಸಲು ನಮ್ಮ ಅನುಯಾಯಿಗಳೊಡನೆ ನಾವು ಅಪಾರವಾದ ದುಃಖವನ್ನು ಅನುಭವಿಸಿದೆವು. ನಿರ್ಜನವಾದ ಅರಣ್ಯದಲ್ಲಿ ಹನ್ನೆರಡು ವರ್ಷಗಳನ್ನು ಕಳೆದೆವು. ಹದಿಮೂರನೆಯ ವರ್ಷವನ್ನು ಜನನಿಬಿಡವಾಗಿದ್ದ ಪ್ರದೇಶದಲ್ಲಿ ಅಜ್ಞಾತರಾಗಿ ಕಳೆದೆವು.

**ಸ್ಥಾತಾ ನಃ ಸಮಯೇ ತಸ್ಮಿನ್ಪಿತೇತಿ ಕೃತನಿಶ್ಚಯಾಃ ।**
**ನಾಹಾಸ್ಮ ಸಮಯಂ ತಾತ ತಚ್ಚ ನೋ ಬ್ರಾಹ್ಮಣಾ ವಿದುಃ ॥೪೨॥**

ನಾವಂದು ಮಾಡಿದ್ದ ಪ್ರತಿಜ್ಞಾನುಸಾರವಾಗಿ ನಡೆದುಕೊಂಡಿರುವೆವು. 'ತಂದೆಯ ಆಜ್ಞೆಯಂತೆ ನಡೆದುಕೊಳ್ಳಬೇಕು. ಹೀಗೆ ನಡೆದುಕೊಂಡರೆ ಜೂಜಿನ ಪಣಕ್ಕನುಗುಣವಾಗಿ ನಮ್ಮ ತಂದೆಯು ನಮ್ಮ ರಾಜ್ಯವನ್ನು ನಮಗೆ ಹಿಂದಿರುಗಿಸುತ್ತಾನೆ'–ಎಂದು ನಿಶ್ಚಯಿಸಿದ ನಾವು ಮಾಡಿದ್ದ ಪ್ರತಿಜ್ಞೆಯನ್ನು ಮೀರಿ ನಡೆದುಕೊಳ್ಳಲಿಲ್ಲ. ಮಾಡಿದ್ದ ಪ್ರತಿಜ್ಞೆಯನ್ನು ಯಥಾವತ್ತಾಗಿ ಪರಿಪಾಲಿಸಿರುತ್ತೇವೆ. ನಾವು ಮಾಡಿದ್ದ ಪ್ರತಿಜ್ಞೆಯಂತೆ ನಾವು ನಡೆದುಕೊಂಡಿರುವೆವೆಂಬ ವಿಷಯವು ನಮ್ಮೊಡನಿದ್ದ ಬ್ರಾಹ್ಮಣರಿಗೂ ತಿಳಿದಿದೆ.

(ನಾವು ಪ್ರತಿಜ್ಞೆಯಂತೆ ನಡೆದುಕೊಂಡಿದ್ದೇವೆಂಬುದಕ್ಕೆ ಬ್ರಾಹ್ಮಣರೇ ಸಾಕ್ಷಿಭೂತರಾಗಿದ್ದಾರೆ.)

**ತಸ್ಮಿನ್ನಃ ಸಮಯೇ ತಿಷ್ಠ ಸ್ಥಿತಾನಾಂ ಭರತರ್ಷಭ ।**
**ನಿತ್ಯಂ ಸಂಕ್ಲೇಶಿತಾ ರಾಜನ್ಸ್ವರಾಜ್ಯಾಂಶಂ ಲಭೇಮಹಿ ॥೪೩॥**

ಸ್ಥಿರಪ್ರತಿಜ್ಞರಾಗಿ, ಮಾಡಿದ ಪ್ರತಿಜ್ಞೆಯನ್ನು ಯಥಾವತ್ತಾಗಿ ಮುಗಿಸಿ ಬಂದಿರುತ್ತೇವೆ. ಈಗ ನೀನು ನಿನ್ನ ಭಾಗದ ಪ್ರತಿಜ್ಞೆಯನ್ನು ಪೂರ್ಣ ಗೊಳಿಸಬೇಕಾಗಿದೆ. ನೀನೂ ಸ್ಥಿರಪ್ರತಿಜ್ಞನಾಗು. ಪ್ರತಿಜ್ಞಾತವಾಗಿದ್ದ ಈ ಹದಿಮೂರು ವರ್ಷಗಳ ಅವಧಿಯಲ್ಲಿ ಅನುದಿನವೂ ನಾವು ಅನೇಕವಿಧವಾದ ಕ್ಲೇಶಗಳನ್ನೇ ಅನುಭವಿಸಿ ಬಂದಿರುತ್ತೇವೆ. ಪ್ರತಿಜ್ಞೆಯನ್ನು ಅಥವಾ ನಿನ್ನ ಆಜ್ಞೆಯನ್ನು ಲೋಪವಿಲ್ಲದೇ ನಿರ್ವಹಿಸಿ ಹಿಂದಿರುಗಿದಲ್ಲಿ ನಾವು ನಮ್ಮ ಭಾಗದ ರಾಜ್ಯವನ್ನು ಪಡೆದುಕೊಳ್ಳಬಹುದೆಂಬ ವಿಷಯವೂ ಅಂದೇ ನಿರ್ಧಾರ ವಾಗಿದ್ದಿತು. ಅದಕ್ಕೆ ನೀನೂ ಒಪ್ಪಿದ್ದೆ. ನಿನ್ನ ಒಪ್ಪಿಗೆಯಂತೆ ಅಥವಾ ಪ್ರತಿಜ್ಞೆಯಂತೆ ನಮ್ಮ ಭಾಗದ ರಾಜ್ಯವನ್ನು ನಾವು ಪಡೆದುಕೊಳ್ಳುವೆವು. (ಪಡೆದುಕೊಳ್ಳುವಂತಾಗಲಿ.)

**ತ್ವಂ ಧರ್ಮಮರ್ಥಂ ಸಂಜಾನನ್ಸಮ್ಯಙ್ನಸ್ತ್ರಾತುಮರ್ಹಸಿ ।**
**ಗುರುತ್ವಂ ಭವತಿ ಪ್ರೇಕ್ಷ್ಯ ಬಹೂನ್ಕ್ಲೇಶಾಂಸ್ತಿತಿಕ್ಷ್ಮಹೇ ।**
**ಸ ಭವಾನ್ಮಾತೃಪಿತೃವದಸ್ಮಾಸು ಪ್ರತಿಪದ್ಯತಾಮ್ ॥೪೪॥**

ನೀನು ಧರ್ಮ ಮತ್ತು ಅರ್ಥಗಳನ್ನು ಚೆನ್ನಾಗಿ ತಿಳಿದುಕೊಂಡಿರುವೆ ಯಾದುದರಿಂದ ನಮ್ಮನ್ನು ವಿಶೇಷರೀತಿಯಲ್ಲಿ ಆದರಿಸಿ ಸಂರಕ್ಷಿಸುವುದು ಸಾಧುವಾಗಿದೆ. (ಕಷ್ಟಪಡುವವರಲ್ಲಿ ಹೆಚ್ಚಿನ ಅನುಕಂಪವನ್ನು ತೋರ ಬೇಕಾದುದು ನಿನ್ನ ಧರ್ಮ. ಈ ಕಾರಣದಿಂದಾಗಿ ನಮ್ಮನ್ನು ಸಂತೈಸಿ ಸಂರಕ್ಷಿಸುವುದು ನಿನಗೆ ಯೋಗ್ಯವಾಗಿದೆ.) ನಿನ್ನಲ್ಲಿ ನಾವು ಗುರುತ್ವಬುದ್ಧಿ ಯುಳ್ಳವರಾಗಿದ್ದೇವೆ. ವಿಶೇಷವಾದ ಗೌರವವನ್ನಿಟ್ಟುಕೊಂಡಿರುತ್ತೇವೆ. ನಿನ್ನಲ್ಲಿ ನಮಗೆ ಗುರುತ್ವದ ಭಾವನೆಯಿದ್ದುದರಿಂದಲೇ ನಿನ್ನ ಆಜ್ಞೆಯನ್ನು ವಿಧೇಯತೆಯಿಂದ ಪರಿಪಾಲಿಸಿದೆವು. ತನ್ಮೂಲಕವಾಗಿ ಬಂದ ಅನೇಕ ಕ್ಲೇಶ ಗಳನ್ನು ಸಹಿಸಿಕೊಂಡೆವು. ವಿಧೇಯರಾದ ನಮ್ಮ ವಿಷಯದಲ್ಲಿ ಯಥಾಯೋಗ್ಯ ವಾಗಿ ವರ್ತಿಸಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಕಷ್ಟಕ್ಕೀಡಾದ ಮಕ್ಕಳ ವಿಷಯದಲ್ಲಿ ತಂದೆ-ತಾಯಿಗಳು ಅನುಕಂಪ ತೋರಿಸುವಂತೆ-ನೀನು ನಮ್ಮ ವಿಷಯದಲ್ಲಿ ನಡೆದುಕೊಳ್ಳಬೇಕಾಗಿದೆ. ತಾಯಿ-ತಂದೆಗಳೋಪಾದಿಯಲ್ಲಿ ಸ್ನೇಹ ದಿಂದ ಮತ್ತು ಪ್ರೀತಿಯಿಂದ ನಮ್ಮ ವಿಷಯದಲ್ಲಿ ವ್ಯವಹರಿಸುವವನಾಗು.

ಗುರೋರ್ಗರೀಯಸೀ ವೃತ್ತಿರ್ಯಾ ಚ ಶಿಷ್ಯಸ್ಯ ಭಾರತ ।
ವರ್ತಾಮಹೇ ತ್ವಯಿ ಚ ತಾಂ ತ್ವಂ ಚ ವರ್ತಸ್ವ ನಸ್ತಥಾ ॥೪೫॥

ಗುರುವಿನ ವಿಷಯದಲ್ಲಿ ಶಿಷ್ಯನಿಗೆ ಯಾವ ಮಹತ್ತರವಾದ ಪೂಜ್ಯ ಭಾವನೆಯಿರುತ್ತದೆಯೋ–ಅಂತಹ ಮಹತ್ತರವಾದ ಪೂಜ್ಯಭಾವನೆಯನ್ನೇ ನಾವು ನಿನ್ನಲ್ಲಿ ಇಟ್ಟುಕೊಂಡಿರುತ್ತೇವೆ. ಗುರುವಾದವನು ಶಿಷ್ಯನನ್ನು ಮಗನಿಗಿಂತಲೂ ಮಿಗಿಲಾಗಿ ಪ್ರೀತಿಸುವಂತೆ–ನೀನು ನಮ್ಮ ವಿಷಯದಲ್ಲಿ ಪ್ರೀತಿಯಿಂದ ವರ್ತಿಸುವವನಾಗು.

ಪಿತ್ರಾ ಸ್ಥಾಪಯಿತವ್ಯಾ ಹಿ ವಯಮುತ್ಪಥಮಾಸ್ಥಿತಾಃ ।
ಸಂಸ್ಥಾಪಯ ಪಥಿಷ್ವಸ್ಮಾಂಸ್ತಿಷ್ಠ ಧರ್ಮೇ ಸುವರ್ತ್ಮನಿ ॥೪೬॥

ನಾವೇನಾದರೂ ಸನ್ಮಾರ್ಗವನ್ನು ಬಿಟ್ಟುಹೋದೆವಾದಪಕ್ಷದಲ್ಲಿ ತಂದೆಯಾದ ನೀನು ನಮ್ಮನ್ನು ಸನ್ಮಾರ್ಗಕ್ಕೆ ತರಬೇಕು. ದಾರಿತಪ್ಪಿದ ಮಗನನ್ನು ತಂದೆಯಾದವನು ಸನ್ಮಾರ್ಗಕ್ಕೆ ತರಬೇಕೆಂದು ಲೋಕನ್ಯಾಯವೂ ಆಗಿದೆ. ನೀನು ನಮ್ಮನ್ನೂ ಒಳ್ಳೆಯಮಾರ್ಗದಲ್ಲಿಡು ; ನೀನೂ ಧರ್ಮಮಾರ್ಗದಲ್ಲಿ ನಿಲ್ಲು."

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ :

"ನಿನಗೆ ತಿಳಿಸುವಂತೆ ಇಷ್ಟು ಮಾತುಗಳನ್ನು ಹೇಳಿದನಂತರ ನಿನ್ನ ಮಕ್ಕಳು (ಪಾಂಡವರು) ಸಭಾಸದರನ್ನೂ ಕುರಿತು ಎರಡು ಮಾತುಗಳನ್ನಾಡಿದ್ದಾರೆ. ಇಲ್ಲಿ ನೆರೆದಿರುವ ಎಲ್ಲ ಭೂಪಾಲಕರೂ ಪಾಂಡವರು ಹೇಳಿರುವ ಆ ಮಾತುಗಳನ್ನು ಆಲಿಸಲಿ :

ಧರ್ಮಜ್ಞೇಷು ಸಭಾಸತ್ಸು ನೇಹ ಯುಕ್ತಮಸಾಮ್ಪ್ರತಮ್ ।
ಯತ್ರ ಧರ್ಮೋ ಹ್ಯಧರ್ಮೇಣ ಸತ್ಯಂ ಯತ್ರಾನೃತೇನ ಚ ।
ಹನ್ಯತೇ ಪ್ರೇಕ್ಷಮಾಣಾನಾಂ ಹತಾಸ್ತತ್ರ ಸಭಾಸದಃ ॥೪೭॥

"ಧರ್ಮಜ್ಞರಾದ ಸಭಾಸದರಿರುವ ಸ್ಥಳದಲ್ಲಿ–ಅಯೋಗ್ಯವಾದ, ಅಯುಕ್ತವಾದ, ಧರ್ಮಹೀನವಾದ ಕಾರ್ಯವೆಂದಿಗೂ ನಡೆಯಬಾರದು. ನಡೆಯುವುದು ಯುಕ್ತವಲ್ಲ. ಯಾವ ಮಹಾಸಭೆಯಲ್ಲಿ ಸಭಾಸದರ ಸಮಕ್ಷ

ದಲ್ಲಿಯೇ ಧರ್ಮವು–ಅಧರ್ಮದಿಂದಲೂ, ಸತ್ಯವು–ಅನೃತದಿಂದಲೂ ಪ್ರತಿಹತವಾಗುತ್ತದೆಯೋ–ಅಂತಹ ಮಹಾಸಭೆಯಲ್ಲಿರುವ ಸಭಾಸದರು ಮೃತಪ್ರಾಯರೇ ಸರಿ. (ಸಭ್ಯರೆಂದರೆ ಧರ್ಮಶಾಸ್ತ್ರಾದಿಗಳನ್ನು ಚೆನ್ನಾಗಿ ತಿಳಿದಿರುವವರು.; ಸತ್ಯಧರ್ಮಪ್ರತಿಪಾದಕರು. ಅಂತಹ ಧರ್ಮಜ್ಞರಾದ ಸಭಾಸದರಿರುವ ಮಹಾಸಭೆಯಲ್ಲಿ ಧರ್ಮಕ್ಕೇ ವಿಜಯವು ಸಿಕ್ಕಬೇಕು. ಸತ್ಯವೇ ಊರ್ಜಿತವಾಗಬೇಕು. ಅದಕ್ಕೆ ಬದಲಾಗಿ ಧರ್ಮಕ್ಕೆ ಪುರಸ್ಕಾರವು ಸಿಕ್ಕದಿದ್ದರೆ–ಸತ್ಯವು ಊರ್ಜಿತವಾಗದಿದ್ದರೆ–ಮಹಾಸಭೆಯಲ್ಲಿರುವ ಸಭಾಸದರು ಮೃತಪ್ರಾಯರಾಗುತ್ತಾರೆ. ಸಭೆಯಲ್ಲಿ ಸದಸ್ಯರಾಗಿರುವ ರಾಜರು ಧರ್ಮಪಕ್ಷಪಾತಿಗಳಾಗಿರಬೇಕು ಮತ್ತು ಸತ್ಯನಿಷ್ಠರಾಗಿರಬೇಕು. ಧರ್ಮದ ಅವಹೇಳನವಾಗುವಾಗ ಸುಮ್ಮನೆ ಕುಳಿತಿರಬಾರದು. ಧರ್ಮಕ್ಕೆ ಮತ್ತು ಸತ್ಯಕ್ಕೆ ಚ್ಯುತಿಯುಂಟಾದಾಗ ಪ್ರತಿಭಟಿಸಲೇಬೇಕು. ಹಾಗೆ ಮಾಡದ ಸಭಾಸದರು ಸತ್ತಂತೆಯೇ ಸರಿ.)

**ವಿದ್ಧೋ ಧರ್ಮೋ ಹ್ಯಧರ್ಮೇಣ ಸಭಾಂ ಯತ್ರ ಪ್ರಪದ್ಯತೇ ।**
**ನ ಚಾಸ್ಯ ಶಲ್ಯಂ ಕೃನ್ತನ್ತಿ ವಿದ್ಧಾಸ್ತತ್ರ ಸಭಾಸದಃ ।**
**ಧರ್ಮ ಏತಾನಾರುಜತಿ ಯಥಾ ನದ್ಯನುಕೂಲಜಾನ್ ॥೫೦॥**

ಧರ್ಮವು ಅಧರ್ಮದಿಂದ ಪ್ರಹೃತವಾಗಿ ಸಭೆಯ ಮುಂದೆ ವಿಮರ್ಶೆಗೆ ಬಂದಾಗ ಅಧರ್ಮದಿಂದ ಪ್ರಹೃತವಾದ ಶಲ್ಯವನ್ನು ತೆಗೆದುಹಾಕಿ ಧರ್ಮವನ್ನು ಊರ್ಜಿತಗೊಳಿಸುವುದು ಸಭಾಸದರ ಮುಖ್ಯಕರ್ತವ್ಯವಾಗಿರುತ್ತದೆ. ಹಾಗೆ ಮಾಡದೇ ಅಧರ್ಮದಿಂದ ಪ್ರಹೃತವಾದ ಶಲ್ಯವು ಧರ್ಮದಲ್ಲಿಯೇ ಉಳಿದು ಧರ್ಮದ ವಿನಾಶಕ್ಕೆ ಅವಕಾಶಮಾಡಿಕೊಟ್ಟಲ್ಲಿ ಅಧರ್ಮದ ಶಲ್ಯಪ್ರಹಾರಕ್ಕೆ ಧರ್ಮದ ಸಂಗಡ ಸಭಾಸದರೂ ಗುರಿಯಾಗುತ್ತಾರೆ. ಅಧರ್ಮದಿಂದ ಪ್ರಹೃತವಾದ ಶಲ್ಯವು ಧರ್ಮದಲ್ಲಿ ಮಾತ್ರವೇ ಉಳಿಯುವುದಿಲ್ಲ. ಸಭಾಸದರನ್ನೂ ಬಾಧಿಸುತ್ತದೆ. ಅಧರ್ಮದಿಂದ ಪ್ರಹೃತವಾದ ಧರ್ಮವು–ನದಿಯು ತನ್ನ ತೀರವನ್ನನುಸರಿಸಿ ಹುಟ್ಟಿಕೊಂಡಿರುವ ವೃಕ್ಷಗಳನ್ನು ಪ್ರವಾಹಕಾಲದಲ್ಲಿ ವಿನಾಶಗೊಳಿಸುವಂತೆ–ತೂಷ್ಣೀಂಭಾವದಿಂದ ಕುಳಿತಿರುವ ಸಭಾಸದರನ್ನೂ ವಿನಾಶಮಾಡುತ್ತದೆ. (ಧರ್ಮಾಧರ್ಮಗಳ ಜಿಜ್ಞಾಸೆಯು ಸಭೆಯ

ಮುಂದೆ ಬಂದಾಗ ಸಭಾಸದರು ಸ್ವಪಕ್ಷ-ಪ್ರತಿಪಕ್ಷಗಳೆಂಬ ಪಕ್ಷಪಾತವಿಲ್ಲದೇ ಧರ್ಮದ ಪಕ್ಷವನ್ನೇ ಸಮರ್ಥಿಸಬೇಕು. ಹಾಗೆ ಮಾಡದ ಪಕ್ಷದಲ್ಲಿ ಧರ್ಮದ ವಿನಾಶವಾಗಿ ಅಧರ್ಮಕ್ಕೇ ಪ್ರಾಬಲ್ಯವು ಸಿಕ್ಕುತ್ತದೆ. ಸಭಾಸದರೆಲ್ಲರೂ ಅಧರ್ಮಿಗಳೇ ಆಗುತ್ತಾರೆ. ಅಧರ್ಮಾವಲಂಬಿಗಳೆಂದಿಗೂ ಶ್ರೇಯೋವಂತ ರಾಗಿ ಬಾಳುವುದಿಲ್ಲ, ಬಹುಬೇಗ ವಿನಾಶಹೊಂದುತ್ತಾರೆ. ಧರ್ಮವನ್ನು ರಕ್ಷಿಸುವವನಿಗೆ ರಕ್ಷಣೆಯು ಸಿಗುತ್ತದೆಯೇ ಹೊರತು ಧರ್ಮವನ್ನು ಕಡೆಗಾಣಿ ಸುವವನಿಗೆ ರಕ್ಷಣೆಯು ಖಂಡಿತವಾಗಿಯೂ ಸಿಕ್ಕುವುದಿಲ್ಲ.) ಹೀಗೆಂಬುದಾಗಿ ಪಾಂಡವರು ಇಲ್ಲಿ ನೆರೆದಿರುವ ಸಭಾಸದರನ್ನು ಕುರಿತು ಹೇಳಿದ್ದಾರೆ.

ಯೇ ಧರ್ಮಮನುಪಶ್ಯಂತಸ್ತೂಷ್ಣೀಂ ಧ್ಯಾಯಂತ ಆಸತೇ ।
ತೇ ಸತ್ಯಮಾಹುರ್ಧರ್ಮ್ಯಂ ಚ ನ್ಯಾಯ್ಯಂ ಚ ಭರತರ್ಷಭ ॥೫೧॥

ಮಹಾರಾಜ! ತಾವು ಮಾಡಿದ ಪ್ರತಿಜ್ಞೆಯನ್ನು ಯಾಥಾತಥ್ಯವಾಗಿ ಮುಗಿಸಿ ತಮ್ಮ ರಾಜ್ಯಾಂಶವನ್ನು ಪಡೆದುಕೊಳ್ಳಲು ಅರ್ಹರಾದ ಪಾಂಡವರು ಧರ್ಮದ ದೃಷ್ಟಿಯಿಂದ ಕೂಡಿದವರಾಗಿದ್ದು ಮುಂದೇನು ಮಾಡಬೇಕೆಂಬ ವಿಷಯವನ್ನು ಸುದೀರ್ಘವಾಗಿ ಯೋಚಿಸುತ್ತಾ ಸುಮ್ಮನೇ ಕುಳಿತಿದ್ದಾರೆ.

ಧರ್ಮಾತ್ಮರಾದ ಅವರು ನಿನ್ನನ್ನೂ ಮತ್ತು ಸಭಾಸದರನ್ನೂ ಕುರಿತು ಹೇಳಿರುವ ಮಾತುಗಳು ಸತ್ಯವಾದ, ಧರ್ಮಸಮ್ಮತವಾದ ಮತ್ತು ನ್ಯಾಯ ಬದ್ಧವಾದ ಮಾತುಗಳೇ ಆಗಿವೆ. (ಸತ್ಯ-ಧರ್ಮ ಮತ್ತು ನ್ಯಾಯಸಮ್ಮತವಾದ ಮಾತುಗಳನ್ನೇ ಅವರು ಆಡಿದ್ದಾರೆ.)

ಶಕ್ಯಂ ಕಿಮನ್ಯದ್ವಕ್ತುಂ ತೇ ದಾನಾದನ್ಯಜ್ಜನೇಶ್ವರ ।
ಬ್ರುವಂತು ತೇ ಮಹೀಪಾಲಾಃ ಸಭಾಯಾಂ ಯೇ ಸಮಾಸತೇ ॥

ಧರ್ಮಾರ್ಥೌ ಸಂಪ್ರಧಾರ್ಯೈವ ಯದಿ ಸತ್ಯಂ ಬ್ರವೀಮ್ಯಹಮ್ ।
ಪ್ರಮುಂಚೇಮಾನ್ಮೃತ್ಯುಪಾಶಾತ್ಕ್ಷತ್ರಿಯಾನ್ಪುರುಷರ್ಷಭ ॥೫೩॥

ಪಾಂಡವರಿಗೆ ಅವರ ರಾಜ್ಯವನ್ನು ಕೊಡಬೇಕೆಂಬುದನ್ನು ಬಿಟ್ಟು ಬೇರೆ ಏನನ್ನು ತಾನೇ ಹೇಳಲು ಸಾಧ್ಯವಿದೆ? ಜನೇಶ್ವರ! ಇದ್ದರೆ ಈ ರಾಜರು ಅದನ್ನು ಹೇಳಲಿ. ಈ ಮಹಾಸಭೆಯಲ್ಲಿ ಯಾವ ಮಹೀಪಾಲರು ಉಪಸ್ಥಿತ

ರಾಗಿರುವರೋ–ಅವರೆಲ್ಲರೂ ಧರ್ಮಾರ್ಥಗಳೆರಡನ್ನೂ ಮನಸ್ಸಿನಲ್ಲಿ ಧಾರಣೆ ಮಾಡಿಕೊಂಡು (ಸಂಪೂರ್ಣವಾಗಿ ವಿವೇಚಿಸಿ) ನಾನು ಸತ್ಯವನ್ನು ನುಡಿದಿರು ವೆನೇ ಇಲ್ಲವೇ–ಎಂಬುದನ್ನು ಸ್ಪಷ್ಟಪಡಿಸಲಿ. ನಾನು ಪುನಃ ಪುನಃ ಒತ್ತಾ ಯಿಸಿ ಹೇಳುತ್ತೇನೆ. ಪುರುಷರ್ಷಭನೇ! ಇಲ್ಲಿ ಉಪಸ್ಥಿತರಾಗಿರುವ ಕ್ಷತ್ರಿಯರನ್ನು ಮೃತ್ಯುಪಾಶದಿಂದ ವಿಮೋಚನಗೊಳಿಸು.

**ಪ್ರಶಾಮ್ಯ ಭರತಶ್ರೇಷ್ಠ**
**ಮಾ ಮನ್ಯುವಶಮನ್ವಗಾಃ ।**
**ಪಿತ್ರ್ಯಂ ತೇಭ್ಯಃ ಪ್ರದಾಯಾಂಶಂ**
**ಪಾಣ್ಡವೇಭ್ಯೋ ಯಥೋಚಿತಮ್ ॥೫೪॥**

**ತತಃ ಸಪುತ್ರಃ ಸಿದ್ಧಾರ್ಥೋ ಭುಂಕ್ಷ್ವ ಭೋಗಾನ್ಪರಂತಪ ।**

ಶಾಂತನಾಗು, ಮಹಾರಾಜ! (ಪಾಂಡವರೊಡನೆ ಸಂಧಿಮಾಡಿಕೋ.) ಕ್ರೋಧಕ್ಕೆ ವಶನಾಗಬೇಡ. ಪಾಂಡವರಿಗೆ ನ್ಯಾಯೋಚಿತವಾದ, ಪಿತ್ರಾರ್ಜಿತ ವಾದ ರಾಜ್ಯಭಾಗವನ್ನು ಕೊಟ್ಟು ಸಿದ್ಧಾರ್ಥನಾಗಿ (ಸಕಲವಿಧವಾದ ಅರ್ಥ ಸಿದ್ಧಿಗಳನ್ನೂ ಪಡೆದುಕೊಂಡು) ಪೂರ್ಣಮನೋರಥನಾಗಿ ಮನಸ್ಸಿಗೆ ಬೇಕು-ಬೇಕಾದ ಭೋಗಗಳನ್ನು ಪುತ್ರರೊಡನೆ ಉಪಭೋಗಿಸು.

**ಅಜಾತಶತ್ರುಂ ಜಾನೀಷೇ ಸ್ಥಿತಂ ಧರ್ಮೇ ಸತಾಂ ಸದಾ ॥೫೫॥**

**ಸಪುತ್ರೇ ತ್ವಯಿ ವೃತ್ತಿಂ ಚ ವರ್ತತೇ ಯಾಂ ನರಾಧಿಪ ।**
**ದಾಹಿತಶ್ಚ ನಿರಸ್ತಶ್ಚ ತ್ವಾಮೇವೋಪಾಶ್ರಿತಃ ಪುನಃ ॥೫೬॥**

ಅಜಾತಶತ್ರುವಾದ ಯುಧಿಷ್ಠಿರನು–ಸತ್ಪುರುಷರು ಆಚರಿಸುವ ಧರ್ಮ ದಲ್ಲಿ ಸರ್ವಕಾಲದಲ್ಲಿಯೂ ಸ್ಥಿರನಾಗಿರತಕ್ಕವನೆಂಬ ವಿಷಯವನ್ನು ನೀನೂ ತಿಳಿದುಕೊಂಡಿರುವೆ. ಪುತ್ರಸಹಿತನಾದ ನಿನ್ನ ವಿಷಯದಲ್ಲಿ ಅವನು ಹೇಗೆ ನಡೆದುಕೊಳ್ಳುತ್ತಿರುವನೆಂಬ ವಿಷಯವೂ ನಿನಗೆ ತಿಳಿದಿದೆ. ಅವನು ನಿನ್ನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿರುವನೆಂಬುದನ್ನು ಒಂದೇ ಮಾತಿನಲ್ಲಿ ಹೀಗೆ ನಿರೂಪಿಸಬಹುದಾಗಿದೆ. ನಿನ್ನಿಂದ ಸುಡಿಸಲ್ಪಟ್ಟರೂ ಮತ್ತು ಅಟ್ಟಿ ಲ್ಪಟ್ಟರೂ ಕೂಡ ಧರ್ಮಮೂರ್ತಿಯಾದ ಧರ್ಮರಾಜನು ಪುನಃ ನಿನ್ನನ್ನೇ ಆಶ್ರಯಿಸಿ ಬಂದಿರುತ್ತಾನೆ. (ಲಾಕ್ಷಾಗೃಹದಲ್ಲಿ ನಿನ್ನ ಅನುಮತಿಯಿಂದಲೇ

ನಿನ್ನ ಮಕ್ಕಳು ಪಾಂಡವರನ್ನು ಸುಟ್ಟೇಹಾಕಲು ಯತ್ನಿಸಿದರು. ಅದೃಷ್ಟ ವಿಶೇಷದಿಂದ ಅವರು ಅಲ್ಲಿಂದ ಪಾರಾದರೂ ದೇಶಭ್ರಷ್ಟರಾಗಬೇಕಾಯಿತು. ನೀನೂ ಮತ್ತು ನಿನ್ನ ಮಕ್ಕಳೂ ಪಾಂಡವರ ವಿಷಯದಲ್ಲಿ ಹೇಯವಾದ ಇಷ್ಟು ಅಪರಾಧಗಳನ್ನು ಮಾಡಿದ್ದರೂ–ಸತ್ಪುರುಷರ ಧರ್ಮಾಚರಣೆಯಲ್ಲಿಯೇ ಸುಸ್ಥಿರನಾಗಿರುವ ಧರ್ಮರಾಜನು ಪುನಃ ನಿನ್ನನ್ನೇ ಆಶ್ರಯಿಸಿ ಬಂದಿರುತ್ತಾನೆ. ಯುಧಿಷ್ಠಿರನು ಧರ್ಮಮೂರ್ತಿಯೇ ಆಗಿರದಿದ್ದರೆ ಇಷ್ಟೊಂದು ಅಪರಾಧವೆಸಗಿದವರ ವಿಷಯದಲ್ಲಿ ಇಷ್ಟು ಸೌಜನ್ಯದಿಂದ ನಡೆದುಕೊಳ್ಳು ತ್ತಿರಲಿಲ್ಲ.)

**ಇನ್ದ್ರಪ್ರಸ್ಥಂ ತ್ವಯೈವಾಸೌ ಸಪುತ್ರೇಣ ವಿವಾಸಿತಃ ।**
**ಸ ತತ್ರ ವಿವಸನ್ಸರ್ವಾನ್ವಶಮಾನೀಯ ಪಾರ್ಥಿವಾನ್ ।**
**ತ್ವನ್ಮುಖಾನಕರೋದ್ರಾಜನ್ನ ಚ ತ್ವಾಮತ್ಯವರ್ತತ ॥೫೭॥**

ಪುತ್ರಸಹಿತನಾದ ನೀನೇ ಯುಧಿಷ್ಠಿರನನ್ನು ಇಲ್ಲಿಂದ ಇಂದ್ರಪ್ರಸ್ಥಕ್ಕೆ ಕಳುಹಿಸಿದೆ. ಅವನು ಅಲ್ಲಿಗೆ ಹೋಗಿ ರಾಜ್ಯವನ್ನು ಸಂಸ್ಥಾಪಿಸಿ ತನ್ನ ಅನುಜರ ಮೂಲಕವಾಗಿ ಸಕಲರಾಜರನ್ನೂ ಗೆದ್ದು ಅವರೆಲ್ಲರೂ ನಿನಗೆ ಆಶ್ರಿತ ರಾಗಿರುವಂತೆಯೇ ಮಾಡಿದನು. ನಿನ್ನನ್ನು ಅತಿಕ್ರಮಿಸಿ ಧರ್ಮರಾಜನು ಯಾವುದೊಂದು ಕಾರ್ಯವನ್ನೂ ಮಾಡಲಿಲ್ಲ.

**ತಸ್ಯೈವಂ ವರ್ತಮಾನಸ್ಯ ಸೌಬಲೇನ ಜಿಹೀರ್ಷತಾ ।**
**ರಾಷ್ಟ್ರಾಣಿ ಧನಧಾನ್ಯಂ ಚ ಪ್ರಯುಕ್ತಃ ಪರಮೋಪಧಿಃ ॥೫೮॥**

ಹೀಗೆಯೇ ಅವನು ನಿನ್ನ ವಿಷಯದಲ್ಲಿ ಗುರುತ್ವಭಾವನೆಯನ್ನೇ ಇಟ್ಟು ಕೊಂಡು ಇರುತ್ತಿರುವಾಗ ನಿರಪರಾಧಿಯಾದ ಅವನ ರಾಷ್ಟ್ರಗಳನ್ನೂ ಧನ-ಧಾನ್ಯಗಳನ್ನೂ ಅಪಹರಣಮಾಡುವ ಇಚ್ಛೆಯುಳ್ಳ ಶಕುನಿಯಿಂದ ಮಹಾ ಮೋಸದ ಪ್ರಕ್ರಿಯೆಯೊಂದು (ದ್ಯೂತವು) ಪ್ರಯುಕ್ತವಾಯಿತು. (ಯುಧಿ ಷ್ಠಿರನು ಆ ಮೋಸದ ಜಾಲಕ್ಕೆ ಅನಿವಾರ್ಯವಾಗಿ ಸಿಕ್ಕಿಹಾಕಿಕೊಂಡು ರಾಜ್ಯ-ಕೋಶಾದಿಗಳೆಲ್ಲವನ್ನೂ ಕಳೆದುಕೊಂಡನು.)

**ಸ ತಾಮವಸ್ಥಾಂ ಸಮ್ಪ್ರಾಪ್ಯ ಕೃಷ್ಣಾಂ ಪ್ರೇಕ್ಷ್ಯ ಸಭಾಗತಾಮ್ ।**
**ಕ್ಷತ್ರಧರ್ಮಾದಮೇಯಾತ್ಮಾ ನಾಕಮ್ಪತ ಯುಧಿಷ್ಠಿರಃ ॥೫೯॥**

ಯುಧಿಷ್ಠಿರನಾದರೋ ರಾಜ್ಯ-ಕೋಶಾದಿಗಳನ್ನು ಕಳೆದುಕೊಂಡು ನಿರ್ಗತಿಕನಾಗಿದ್ದನು. ಅಂತಹ ಪರಮದಾರುಣಾವಸ್ಥೆಯಲ್ಲಿ ತಾನಿದ್ದಾಗ ತನ್ನ ಧರ್ಮಪತ್ನಿಯಾದ ದ್ರೌಪದಿಯು ಅತ್ಯಂತಹೀನವಾದ ಅವಸ್ಥೆಯಲ್ಲಿ ಸಭೆಗೆ ಬಂದುದನ್ನು ನೋಡಿಯೂ ಮಹಾತ್ಮನಾದ ಯುಧಿಷ್ಠಿರನು ಕ್ಷತ್ರಧರ್ಮದಿಂದ ವಿಚಲಿತನಾಗಲಿಲ್ಲ. (ತಾನು ಮಾಡಿದ್ದ ಪ್ರತಿಜ್ಞೆಯನ್ನು ಉಲ್ಲಂಘಿಸಲು ಯತ್ನಿಸಲಿಲ್ಲ.)

**ಅಹಂ ತು ತವ ತೇಷಾಂ ಚ ಶ್ರೇಯ ಇಚ್ಛಾಮಿ ಭಾರತ ।**
**ಧರ್ಮಾದರ್ಥಾತ್ಸುಖಾಚ್ಚೈವ ಮಾ ರಾಜನ್ನೀನಶಃ ಪ್ರಜಾಃ ।**
**ಅನರ್ಥಮರ್ಥಂ ಮನ್ವಾನೋಽಪ್ಯರ್ಥಂ ಚಾನರ್ಥಮಾತ್ಮನಃ ॥೬೧॥**

ಧೃತರಾಷ್ಟ್ರ! ನಾನಾದರೋ ನಿನ್ನ ಮತ್ತು ಪಾಂಡವರ (ಉಭಯ ಪಕ್ಷಗಳ) ಶ್ರೇಯಸ್ಸನ್ನು ಇಚ್ಛಿಸುವವನಾಗಿದ್ದೇನೆ. ಅನರ್ಥವನ್ನು ಅರ್ಥ ಪ್ರಾಪ್ತಿಗೆ ಸಾಧಕವೆಂಬುದಾಗಿಯೂ–ಪ್ರಯೋಜನಕರವಾದ ಮಾರ್ಗವನ್ನು ಅಪ್ರಯೋಜಕವಾದ ಮಾರ್ಗವೆಂಬುದಾಗಿಯೂ ಭಾವಿಸಿ ಪ್ರಜೆಗಳನ್ನು ಧರ್ಮದಿಂದಲೂ, ಅರ್ಥದಿಂದಲೂ ಮತ್ತು ಸುಖದಿಂದಲೂ ವಂಚಿತರನ್ನಾಗಿ ಮಾಡಬೇಡ. (ಧರ್ಮದ ಕಾರಣಕ್ಕಾಗಿ ; ಅರ್ಥದ ಕಾರಣಕ್ಕಾಗಿ ; ಸುಖದ ಕಾರಣಕ್ಕಾಗಿ–ಪಾಂಡವರೊಡನೆ ಸಂಧಿಗೆ ಸಮ್ಮತಿಸು. ಪ್ರಜೆಗಳ ವಿನಾಶಕ್ಕೆಡೆ ಗೊಡಬೇಡ.)

**ಲೋಭೇಽತಿಪ್ರಸೃತಾನ್ಪುತ್ರಾನ್ನಿಗೃಹ್ಣೀಷ್ವ ವಿಶಾಮ್ಪತೇ ।**
**ಸ್ಥಿತಾಃ ಶುಶ್ರೂಷಿತುಂ ಪಾರ್ಥಾಃ ಸ್ಥಿತಾ ಯೋದ್ಧುಮರಿಂದಮಾಃ ।**
**ಯತ್ತೇ ಪಥ್ಯತಮಂ ರಾಜಂಸ್ತಸ್ಮಿಂಸ್ತಿಷ್ಠ ಪರಂತಪ ॥೬೨॥**

ಪರಂತಪನೇ! ಲೋಭದಲ್ಲಿಯೇ ಅತ್ಯಾಸಕ್ತರಾದ (ಕಡುಲೋಭಿಗಳಾದ) ನಿನ್ನ ಮಕ್ಕಳನ್ನು ನಿಯಂತ್ರಿಸುವವನಾಗು. ಅವರು ಎಲ್ಲೆಮೀರಿ ನಡೆಯಲು ಅವಕಾಶವನ್ನೀಯಬೇಡ. ಕುಂತಿಯ ಮಕ್ಕಳಾದರೋ ನಿನ್ನ ಶುಶ್ರೂಷೆಮಾಡಲೂ ಸಿದ್ಧರಾಗಿದ್ದಾರೆ ; ನಿನ್ನೊಡನೆ ಯುದ್ಧಮಾಡಲೂ ಸಿದ್ಧರಾಗಿದ್ದಾರೆ. ಶುಶ್ರೂಷೆಯಲ್ಲಿ ಅಥವಾ ಯುದ್ಧದಲ್ಲಿ ನಿನಗೆ ಯಾವುದು ಪಥ್ಯತರವಾಗಿ ಕಾಣುವುದೋ, ಯಾವುದು ಹಿತವಾಗಿ ಕಾಣುವುದೋ–ಅದನ್ನೇ ಅವಲಂಬಿಸು.”

ಜನಮೇಜಯ! ಶ್ರೀಕೃಷ್ಣನು ಹೇಳಿದ ಮಾತುಗಳನ್ನು ಅಲ್ಲಿ ಉಪಸ್ಥಿತರಾಗಿದ್ದ ರಾಜರೆಲ್ಲರೂ ಮನಸ್ಸಿನಿಂದಲೇ ಅಭಿನಂದಿಸಿದರು. (ಎಲ್ಲರೂ ಮನಸಾರ ಮೆಚ್ಚಿಕೊಂಡರು.) ಆದರೆ ಶ್ರೀಕೃಷ್ಣನ ಮಾತಿಗೆ ಉತ್ತರ ಕೊಡಲಾಗಲೀ–ಶ್ರೀಕೃಷ್ಣನ ಮಾತನ್ನು ಪ್ರಶಂಸೆಮಾಡಲಾಗಲೀ ಯಾರೊಬ್ಬರೂ ಮುಂದೆ ಬರಲಿಲ್ಲ.

(ಈ ಅಧ್ಯಾಯವನ್ನು ರಾಜತಂತ್ರಜ್ಞರು ಸಂಪೂರ್ಣವಾಗಿ ಅಧ್ಯಯನ ಮಾಡಬೇಕು. ಶ್ರೀಕೃಷ್ಣನು ತನ್ನ ಮಾತನ್ನು ಹೇಗೆ ಪ್ರಾರಂಭಿಸುತ್ತಾನೆ ಮತ್ತು ಹೇಗೆ ಮುಗಿಸುತ್ತಾನೆ–ಎಂಬುದನ್ನು ಮನಗಾಣಬೇಕು. ೫೫, ೫೬, ೫೭, ೫೮ ಮತ್ತು ೫೯ನೆಯ ಶ್ಲೋಕಗಳು ಬಹುಮುಖ್ಯವಾದುವುಗಳು. ಈ ಶ್ಲೋಕಗಳಿಂದ ಶ್ರೀಕೃಷ್ಣನು ಮೃದುವಚನಗಳಿಂದಲೇ ಧೃತರಾಷ್ಟ್ರನ ಕೃತ್ರಿಮಗಳೆಲ್ಲವನ್ನೂ ಬಹಿರಂಗಪಡಿಸಿರುತ್ತಾನೆ. ಕೊನೆಯವರೆಗೂ ಅವನು ಹೇಳುವ ಮಾತುಗಳೆಲ್ಲವೂ ಬೆಣ್ಣೆಯಲ್ಲಿ ಕೂದಲು ತೆಗೆದಷ್ಟೇ ಮೃದುವಾಗಿ ಕಾಣುತ್ತವೆ. ರಾಯಭಾರವೆಂದರೆ ಇದೇ. ಇದಕ್ಕಿಂತಲೂ ಉಚ್ಚತರದ ರಾಯಭಾರವನ್ನು ನಾವು ಕಾಣಲಾರೆವು.)

೯೫ನೆಯ ಅಧ್ಯಾಯವು ಮುಗಿಯಿತು.

೯೬ನೆಯ ಅಧ್ಯಾಯ — ಭಗವದ್ಯಾನಪರ್ವ (ಮುಂದುವರಿದಿದೆ.)

## ಪರಶುರಾಮನು ದಂಭೋದ್ಭವನ ಕಥೆಯ ಮೂಲಕವಾಗಿ ನರ–ನಾರಾಯಣರೂಪಿಗಳಾದ ಕೃಷ್ಣಾರ್ಜುನರ ಮಹತ್ತ್ವವನ್ನು ವರ್ಣನೆಮಾಡಿದುದು

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ಆ ಮಹಾಸಭೆಯಲ್ಲಿ ಮಹಾತ್ಮನಾದ ಶ್ರೀಕೇಶವನಿಂದ ದಿವ್ಯವಾದ ಮಹಾವಾಕ್ಯಗಳು ಹೇಳಲ್ಪಟ್ಟ ನಂತರದಲ್ಲಿ ಆ ದಿವ್ಯವಾಕ್ಯಗಳನ್ನು ಕೇಳಿದ ರಾಜರೆಲ್ಲರೂ ರೋಮಾಂಚಿತರಾದರು.

**ಕಶ್ಚಿದುತ್ತರಮೇತೇಷಾಂ ವಕ್ತುಂ ನೋತ್ಸಹತೇ ಪುಮಾನ್ ।**
**ಇತಿ ಸರ್ವೇ ಮನೋಭಿಸ್ತೇ ಚಿನ್ತಯನ್ತಿ ಸ್ಮ ಪಾರ್ಥಿವಾಃ ॥೨॥**

'ಯಾರೊಬ್ಬರೂ ಶ್ರೀಕೃಷ್ಣನ ಈ ಮಾತುಗಳಿಗೆ ಉತ್ತರಕೊಡಲು ಈ ಸಭೆಯಲ್ಲಿ ಉತ್ಸಾಹಿಯಾಗಿರುವುದಿಲ್ಲ. (ಸಮರ್ಥರಾಗಿರುವುದಿಲ್ಲ.') (ಶ್ರೀಕೃಷ್ಣನ ಮಾತಿಗೆ ಉತ್ತರವಾಗಿ ಯಾರೂ ಏನನ್ನೂ ಹೇಳಲಾರರು.) ಹೀಗೆಂಬುದಾಗಿ ಆ ಮಹಾಸಭೆಯಲ್ಲಿ ಉಪಸ್ಥಿತರಾಗಿದ್ದ ರಾಜರೆಲ್ಲರೂ ತಮ್ಮ-ತಮ್ಮ ಮನಸ್ಸಿನಲ್ಲಿಯೇ ಚಿಂತಿಸುತ್ತಿದ್ದರು. ಈ ರೀತಿಯಲ್ಲಿ ಆ ರಾಜರೆಲ್ಲರೂ ಮೌನಧರಿಸಿ ಕುಳಿತಿರಲಾಗಿ, ಆ ಕುರುಮಹಾಸಭೆಯಲ್ಲಿ ಪರಮರ್ಷಿಗಳೊಡನೆ ಉಪಸ್ಥಿತನಾಗಿದ್ದ ಜಮದಗ್ನಿಯ ಮಗನಾದ ಪರಶುರಾಮನು ಮಾತನಾಡಲು ಉಪಕ್ರಮಿಸಿದನು :



"ಮಹಾರಾಜ! ನಾನು ಸೋದಾಹರಣವಾಗಿ ಹೇಳಲಿರುವ ಸತ್ಯವಾದ ಮಾತನ್ನು ನಿಃಶಂಕೆಯಿಂದ ಕೇಳು. ಆ ಮಾತನ್ನು ಕೇಳಿದನಂತರದಲ್ಲಿ

ನಾನು ಹೇಳಿದ ಮಾತು ಶ್ರೇಯಸ್ಕರವಾದುದು ; ಮಂಗಳಕರವಾದುದು ಮತ್ತು ಸಾಧುವಾದುದು–ಎಂದು ನೀನು ಭಾವಿಸಿದೆಯಾದರೆ ಈ ನನ್ನ ಮಾತನ್ನು ಅಂಗೀಕರಿಸು. ಆಗಬಹುದಲ್ಲವೇ?

ಹಿಂದೆ ದಂಭೋದ್ಭವನೆಂಬ ಹೆಸರಿನ ಸಾರ್ವಭೌಮನೊಬ್ಬನು ಈ ಅಖಂಡಭೂಮಂಡಲವನ್ನೂ ತನ್ನದನ್ನಾಗಿ ಮಾಡಿಕೊಂಡು ಉಪಭೋಗಿಸುತ್ತಿದ್ದನೆಂಬುದನ್ನು ನಾವು ಕೇಳಿದ್ದೇವೆ. ಮಹಾರಥಿಯಾದ ಮತ್ತು ಮಹಾಪರಾಕ್ರಮಿಯಾದ ದಂಭೋದ್ಭವನು ಅನುದಿನವೂ ರಾತ್ರಿಯು ಕಳೆದು ಬೆಳಗಾಗುತ್ತಲೇ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬ್ರಾಹ್ಮಣರನ್ನೂ ಮತ್ತು ಕ್ಷತ್ರಿಯರನ್ನೂ ಪ್ರಶ್ನಿಸುತ್ತಿದ್ದನು :

ಅಸ್ತಿ ಕಶ್ಚಿದ್ವಿಶಿಷ್ಟೋ ವಾ
    ಮದ್ವಿಧೋ ವಾ ಭವೇದ್ಯುಧಿ ।
ಶೂದ್ರೋ ವೈಶ್ಯಃ ಕ್ಷತ್ರಿಯೋ ವಾ
    ಬ್ರಾಹ್ಮಣೋ ವಾಪಿ ಶಸ್ತ್ರಭೃತ್ ॥೭॥

"ಸಭಾಸದರೇ! ಯುದ್ಧದಲ್ಲಿ ನನಗೆ ಸಮಾನನಾದ ಅಥವಾ ನನ್ನನ್ನು ಮೀರಿಸುವ ಶಸ್ತ್ರಧಾರಿಯಾದ ಪುರುಷನು ಶೂದ್ರರಲ್ಲಾಗಲೀ, ವೈಶ್ಯರಲ್ಲಾಗಲೀ, ಕ್ಷತ್ರಿಯರಲ್ಲಾಗಲೀ ಅಥವಾ ಬ್ರಾಹ್ಮಣರಲ್ಲಿಯೇ ಆಗಲೀ–ಯಾವನಾದರೂ ಇದ್ದಾನೆಯೇ?"–ಹೀಗೆ ಪ್ರಶ್ನಿಸಿದ ರಾಜನಿಗೆ ಯಾರೊಬ್ಬರೂ ಸ್ವಾಭಾವಿಕವಾಗಿಯೇ ಉತ್ತರಕೊಡುತ್ತಿರಲಿಲ್ಲ. ಅದರಿಂದಾಗಿ ಆ ರಾಜನು ತಾನೇ ಮಹಾಬಲಿಷ್ಠನೆಂದು ಭ್ರಮಿಸಿಬಿಟ್ಟನು. 'ನನಗೆ ಸಮಾನರಾಗಲೀ–ವಿಶಿಷ್ಟರಾಗಲೀ ಈ ಜಗತ್ತಿನಲ್ಲಿಯೇ ಯಾರೂ ಇಲ್ಲ'–ಎಂದು ಹೇಳಿಕೊಂಡೇ ಜಗತ್ತಿನಲ್ಲೆಲ್ಲಾ ಸಂಚಾರಮಾಡಿದನು. ಮಹತ್ತರವಾದ ದರ್ಪದಿಂದ ಕೊಬ್ಬಿಹೋಗಿದ್ದ ಅವನು ತನಗಿಂತಲೂ ವೀರ್ಯವಂತರು ಯಾರಾದರೂ ಇದ್ದಿರಬಹುದೆಂಬುದನ್ನು ಒಮ್ಮೆಯಾದರೂ ಚಿಂತಿಸದೇ ಗರ್ವಿಷ್ಠನಾಗಿ ಪ್ರಪಂಚವನ್ನು ಸುತ್ತುತ್ತಿದ್ದನು.

ಬಾರಿ-ಬಾರಿಗೂ ಆತ್ಮಶ್ಲಾಘನೆಮಾಡಿಕೊಳ್ಳುತ್ತಿದ್ದ ದಂಭೋದ್ಭವನನ್ನು

ವಿದ್ಯಾವಂತರಾದ ಉದಾರಿಗಳಾದ, ಭಯರಹಿತರಾದ ಬ್ರಾಹ್ಮಣರು ಆಗಾಗ ಸಂಧಿಸಿ ಅವನ ದರ್ಪವನ್ನು ಖಂಡಿಸುತ್ತಿದ್ದರು. 'ತನಗೆ ಸಮಾನರು ಅಥವಾ ತನಗಿಂತಲೂ ಮಿಗಿಲಾದವರು ಯಾರೂ ಇಲ್ಲವೆಂದು ಭಾವಿಸಿ ರಾಜನಾದವನು ಅಹಂಕಾರಪಡಬಾರದು'–ಎಂದು ಭಯರಹಿತರಾದ ಬ್ರಾಹ್ಮಣರು ಅನೇಕ ಪ್ರಕಾರವಾಗಿ ಹೇಳಿದರೂ ದಂಭೋದ್ಭವನು–'ನನ್ನ ಸಮಾನರುಂಟೇ?'– ಎಂದು ಪ್ರಶ್ನೆಕೇಳುವುದನ್ನು ನಿಲ್ಲಿಸಲೇ ಇಲ್ಲ. ಮಹಾಮಾನಿಷ್ಠನಾಗಿದ್ದ, ಐಶ್ವರ್ಯದಿಂದ ಮತ್ತನಾಗಿದ್ದ ಮತ್ತು ವಾಚಾಳಿಯಾದ ರಾಜನನ್ನು ಕುರಿತು ಒಮ್ಮೆ ತಪಸ್ವಿಗಳಾದ, ಮಹಾತ್ಮರಾದ, ಧರ್ಮವಿದರಾದ ವೇದಸಿದ್ಧಾಂತದರ್ಶಿಗಳಾದ (ಆತ್ಮದರ್ಶಿಗಳಾದ) ಬ್ರಾಹ್ಮಣರು ಕ್ರೋಧೋದ್ದೀಪ್ತರಾಗಿ ಹೇಳಿದರು :

**ಅನೇಕಜಯಿನೌ ಸಂಖ್ಯೇ ಯೌ ವೈ ಪುರುಷಸತ್ತಮೌ ।**
**ತಯೋಸ್ತ್ವಂ ನ ಸಮೋ ರಾಜನ್ಭವಿತಾಸಿ ಕದಾಚನ ॥೧೨॥**

"ಯುದ್ಧದಲ್ಲಿ ಅನೇಕಾನೇಕ ಮಹಾವೀರರನ್ನು ಜಯಿಸಿರುವ ಇಬ್ಬರು ಪುರುಷಶ್ರೇಷ್ಠರಿದ್ದಾರೆ. ಆ ಇಬ್ಬರಿಗೆ ನೀನು ಯಾವಾಗಲೂ ಸಮಾನ ನೆನಿಸುವುದಿಲ್ಲ."

ದ್ವಿಜಸತ್ತಮರ ಮಾತನ್ನು ಕೇಳಿ ದಂಭೋದ್ಭವನು ಪುನಃ ಅವರನ್ನು ಪ್ರಶ್ನಿಸಿದನು :

**ಕ್ವ ತೌ ವೀರೌ ಕ್ವ ಜನ್ಮಾನೌ ಕಿಂ ಕರ್ಮಾಣೌ ಚ ಕೌ ಚ ತೌ ॥**

"ಆ ಇಬ್ಬರು ವೀರರು ಎಲ್ಲಿದ್ದಾರೆ? ಅವರೆಲ್ಲಿ ಹುಟ್ಟಿದವರು? ಅವರು ಯಾವ ಕೆಲಸವುಳ್ಳವರು? ಅವರು ಯಾರು ಅಥವಾ ಅವರ ನಾಮ ಧೇಯಗಳೇನು?"

**ನರೋ ನಾರಾಯಣಶ್ಚೈವ ತಾಪಸಾವಿತಿ ನಃ ಶ್ರುತಮ್ ।**
**ಆಯಾತೌ ಮಾನುಷೇ ಲೋಕೇ ತಾಭ್ಯಾಂ ಯುಧ್ಯಸ್ವ ಪಾರ್ಥಿವ ॥**

"ಅವರು ನರ-ನಾರಾಯಣನಾಮಕರಾದ ತಪಸ್ವಿಗಳೆಂದು ನಾವು ಕೇಳಿರುತ್ತೇವೆ. ಈ ಸಮಯದಲ್ಲವರು ಮನುಷ್ಯಲೋಕದಲ್ಲಿರುತ್ತಾರೆ. ರಾಜನ್! ಆ ಇಬ್ಬರೊಡನೆ ನೀನು ಯುದ್ಧಮಾಡು. (ಯುದ್ಧಮಾಡಿ ಅವರನ್ನೂ ಜಯಿಸಿ ನಿನಗೆ ಸಮಾನನೂ ನಿನಗೆ ವಿಶಿಷ್ಟನೂ ಈ ಭುವಿಯಲ್ಲಿಲ್ಲ

ವೆಂಬುದನ್ನು ಸ್ಥಿರೀಕರಿಸು. ಅವರನ್ನು ಜಯಿಸುವವರೆಗೂ ನಿನ್ನ ಅದ್ವಿತೀಯತ್ವವು ಸಿದ್ಧವಾಗುವುದಿಲ್ಲ.)

**ಶ್ರೂಯೇತೇ ತೌ ಮಹಾತ್ಮಾನೌ ನರನಾರಾಯಣಾವುಭೌ ।**
**ತಪೋ ಘೋರಮನಿರ್ದೇಶ್ಯಂ ತಪ್ಯೇತೇ ಗನ್ಧಮಾದನೇ ॥೧೫॥**

ಮಹಾತ್ಮರಾದ ಆ ನರ-ನಾರಾಯಣರು ಗಂಧಮಾದನಪರ್ವತದಲ್ಲಿ ಅವರ್ಣನೀಯವಾದ ಮತ್ತು ಘೋರವಾದ ತಪಸ್ಸುಮಾಡುತ್ತಿದ್ದಾರೆಂದು ಕೇಳಿದ್ದೇವೆ."

ಬ್ರಾಹ್ಮಣಸತ್ತಮರು ಹೇಳಿದುದನ್ನು ಸಹಿಸದೇ ದಂಭೋದ್ಭವನು ಷಡಂಗಯುಕ್ತವಾದ (ರಥ, ಆನೆ, ಕುದುರೆ, ಕಾಲಾಳು, ವಾಹನ ಮತ್ತು ಒಂಟೆ) ಮಹಾಸೈನ್ಯವನ್ನು ತೆಗೆದುಕೊಂಡು ಅಪರಾಜಿತರಾದ, ಮಹಾತ್ಮರಾದ ನರ-ನಾರಾಯಣರಿದ್ದೆಡೆಗೆ ಹೊರಟೇಬಿಟ್ಟನು.

ರಾಜನು ದುರ್ಗಮವಾದ ಮತ್ತು ಅನೇಕ ಹಳ್ಳ-ತಿಟ್ಟುಗಳಿಂದ ಕೂಡಿದ್ದ ಗಂಧಮಾದನಪರ್ವತವನ್ನು ಸೈನ್ಯದೊಡನೆ ಸೇರಿ, ಆ ಇಬ್ಬರು ತಪಸ್ವಿಗಳನ್ನು ಹುಡುಕುತ್ತಾ ಕಟ್ಟಕಡೆಗೆ ಗಂಧಮಾದನಪರ್ವತದಲ್ಲಿಯೇ ಒಂದು ವನದಲ್ಲಿದ್ದ ಆ ಇಬ್ಬರು ತಪಸ್ವಿಗಳ ಬಳಿಗೆ ಹೋದನು. ಲೋಕೈಕವೀರರೆಂದು ವಿಖ್ಯಾತರಾಗಿದ್ದ ಆ ಇಬ್ಬರು ನರ-ನಾರಾಯಣರು ಹಸಿವು-ಬಾಯಾರಿಕೆಗಳಿಂದ ಬಳಲಿ ಕೃಶರಾಗಿದ್ದರು. ಅವರು ಬಹಳ ಕೃಶರಾಗಿದ್ದುದರಿಂದ ಅವರ ಶರೀರದಲ್ಲಿದ್ದ ರಕ್ತನಾಳಗಳು ಸ್ಪಷ್ಟವಾಗಿ ಹೊರಗೆ ಕಾಣುತ್ತಿದ್ದುವು. ಚಳಿ-ಗಾಳಿ-ಬಿಸಿಲುಗಳಿಗೆ ಗುರಿಯಾಗಿ ಅತ್ಯಂತಕೃಶರಾಗಿ ಹೋಗಿದ್ದರು. ಅಂತಹ ಪುರುಷೋತ್ತಮರನ್ನು ನೋಡಿ, ಅವರ ಸಮೀಪಕ್ಕೆ ಹೋಗಿ, ಅಭಿವಾದನಪೂರ್ವಕವಾಗಿ ಅವರಿಗೆ ನಮಸ್ಕರಿಸಿ, ಅವರ ಯೋಗ-ಕ್ಷೇಮಗಳನ್ನು ರಾಜನು ವಿಚಾರಿಸಿದನು. ನರ-ನಾರಾಯಣರೂ ರಾಜನ ಕುಶಲವನ್ನು ವಿಚಾರಿಸಿ ಅವನಿಗೆ ಅರ್ಘ್ಯ-ಪಾದ್ಯಾದಿಗಳನ್ನೂ, ಗೆಡ್ಡೆ-ಗೆಣಸು ಮತ್ತು ಹಣ್ಣುಗಳನ್ನೂ ಕೊಟ್ಟು ಯಥೋಚಿತವಾಗಿ ಸತ್ಕರಿಸಿದನಂತರ ರಾಜನನ್ನು ಪ್ರಶ್ನಿಸಿದರು :

" ಕಿಂ ಕಾರ್ಯಂ ಕ್ರಿಯತಾಂ—ನಿನಗಾಗಿ ನಾವು ಯಾವ ಕಾರ್ಯವನ್ನು ಮಾಡಬೇಕಾಗಿದೆ?"

ರಾಜನು ಯಥಾಪೂರ್ವಕವಾಗಿ ತನ್ನ ಪರಾಕ್ರಮದ ವಿಷಯವನ್ನು ಅವರೊಡನೆ ಮೊದಲಿನಿಂದ ಕಡೆಯವರೆಗೂ ಹೇಳಿದನು :

**ಬಾಹುಭ್ಯಾಂ ಮೇ ಜಿತಾ ಭೂಮಿರ್ನಿಹತಾಃ ಸರ್ವಶತ್ರವಃ ।**
**ಭವದ್ಭ್ಯಾಂ ಯುದ್ಧಮಾಕಾಂಕ್ಷನ್ನುಪಯಾತೋಽಸ್ಮಿ ಪರ್ವತಮ್ ।**
**ಆತಿಥ್ಯಂ ದೀಯತಾಮೇತತ್ಕಾಂಕ್ಷಿತಂ ಮೇ ಚಿರಂ ಪ್ರತಿ ॥೨೧॥**

"ನನ್ನ ಈ ಭುಜಗಳ ಪರಾಕ್ರಮದಿಂದ ಅಖಂಡವಾದ ಈ ಭೂಮಿಯನ್ನೇ ಗೆದ್ದಿರುತ್ತೇನೆ. ಶತ್ರುಗಳೆಲ್ಲರೂ ನನ್ನಿಂದ ಧ್ವಂಸಿತರಾಗಿ ಹೋದರು. ನೀವು ಅಜಯ್ಯರೆಂಬ ವಾರ್ತೆಯನ್ನು ಬ್ರಾಹ್ಮಣರಿಂದ ಕೇಳಿದೆನು. ನಿಮ್ಮೊಡನೆ ಯುದ್ಧಮಾಡುವ ಆಕಾಂಕ್ಷೆಯಿಂದ (ಯುದ್ಧಮಾಡಿ ನಿಮ್ಮನ್ನೂ ಗೆದ್ದುಬಿಡಬೇಕೆಂಬ ಆಶೆಯಿಂದ) ಈ ಪರ್ವತಕ್ಕೆ ಬಂದಿರುತ್ತೇನೆ. ನಾನು ಬಹುಕಾಲದಿಂದ ಅಭಿಲಾಷಿಸಿರುವ ಯುದ್ಧರೂಪವಾದ ಆತಿಥ್ಯವನ್ನು ನೀವು ನನಗೆ ದಯಪಾಲಿಸಿರಿ."

ರಾಜನ ಮಾತುಗಳನ್ನು ಕೇಳಿ ನರ-ನಾರಾಯಣರು ಸಾಂತ್ವಪೂರ್ವಕವಾಗಿಯೇ ಈ ಮಾತುಗಳನ್ನು ಹೇಳಿದರು :

**ಅಪೇತಕ್ರೋಧಲೋಭೋಽಯಮಾಶ್ರಮೋ ರಾಜಸತ್ತಮ ।**
**ನ ಹ್ಯಸ್ಮಿನ್ನಾಶ್ರಮೇ ಯುದ್ಧಂ ಕುತಃ ಶಸ್ತ್ರಂ ಕುತೋಽನೃಜುಃ ।**
**ಅನ್ಯತ್ರ ಯುದ್ಧಮಾಕಾಂಕ್ಷ್ವ ಬಹವಃ ಕ್ಷತ್ರಿಯಾಃ ಕ್ಷಿತೌ ॥೨೩॥**

"ಮಹಾರಾಜ! ನಮ್ಮ ಈ ಆಶ್ರಮವು ಕ್ರೋಧ-ಲೋಭಗಳಿಂದ ರಹಿತವಾಗಿದೆ. ಈ ಆಶ್ರಮದಲ್ಲಿ ಯುದ್ಧವೆಂದೂ ನಡೆದಿರುವುದಿಲ್ಲ. ಯುದ್ಧವೇ ಆಗಿಲ್ಲವೆಂದಮೇಲೆ ಇಲ್ಲಿ ಶಸ್ತ್ರಗಳಿರುವ ಸಾಧ್ಯತೆಯೇ ಇಲ್ಲ. ಕುಟಿಲಮನೋವೃತ್ತಿಯವರಾರೂ ಈ ಆಶ್ರಮದಲ್ಲಿರಲಾರರು. ಪ್ರಪಂಚದಲ್ಲಿ ಇನ್ನೂ ಹಲವಾರು ಮಂದಿ ಕ್ಷತ್ರಿಯರಿದ್ದಾರೆ. ಅಲ್ಲಿಗೆ ಹೋಗಿ ಅವರೊಡನೆ ಬೇಕಾದರೆ ನೀನು ಯುದ್ಧವನ್ನಭಿಲಾಷಿಸು. (ಈ ಸ್ಥಳದಲ್ಲಿ ಯುದ್ಧವನ್ನಾಶಿಸುವುದು ನಿನಗೆ ಯೋಗ್ಯವೆನಿಸುವುದಿಲ್ಲ.)"

ಮಹಾತ್ಮರಾದ ನರ-ನಾರಾಯಣ ರಿಂದ ಈ ರೀತಿಯಲ್ಲಿ ಹೇಳಲ್ಪಟ್ಟರೂ ರಾಜನು ಪುನಃ ಅದೇ ಮಾತುಗಳನ್ನೇ ಹೇಳಿದನು. ಯುದ್ಧವನ್ನೇ

ಯಾಚಿಸಿದನು. ಪುನಃ ಪುನಃ ಮಹಾತ್ಮರಾದ ನರ- ನಾರಾಯಣರಿಂದ ರಾಜನು ಕ್ಷಮಿಸಲ್ಪಟ್ಟರೂ (ಸಾಂತ್ವವಚನಗಳಿಂದ ಸಮಾಧಾನ ಮಾಡಲ್ಪಟ್ಟರೂ) ದಂಭೋದ್ಭವನು ಅವರೊಡನೆ ಯುದ್ಧವನ್ನೇ ಅಭಿಲಾಷಿಸಿ ಯುದ್ಧಕ್ಕೆ ಆಹ್ವಾನಿಸುತ್ತಲೇ ಇದ್ದನು. ಕಟ್ಟಕಡೆಗೆ ನರನು ಒಂದು ಮುಷ್ಟಿಯಲ್ಲಿ ಜಂಬುಹುಲ್ಲನ್ನು ಹಿಡಿದುಕೊಂಡು ರಾಜನನ್ನು ಕುರಿತು ಹೇಳಿದನು :



"ಯುದ್ಧಕಾಮನಾದ ಕ್ಷತ್ರಿಯನೇ! ಬಾ! ನನ್ನೊಡನೆ ಯುದ್ಧ ಮಾಡು. ನಿನ್ನಲ್ಲಿರುವ ಸಕಲವಿಧವಾದ ಶಸ್ತ್ರಗಳನ್ನೂ ತೆಗೆದುಕೊಂಡು ಬಾ. ನನ್ನೊಡನೆ ಯುದ್ಧಕ್ಕಾಗಿ ಚತುರಂಗಬಲವನ್ನೂ ಸಿದ್ಧಪಡಿಸಿಕೊಂಡು ಆಗಮಿಸು. ನಿನ್ನಲ್ಲಿರುವ ಯುದ್ಧದ ಮದವನ್ನು ನಾನು ಖಂಡಿತವಾಗಿಯೂ ಹೋಗಲಾಡಿಸು

ತ್ತೇನೆ. (ನೀನು ಪುನಃ ಯಾರೊಡನೆಯೂ ಯುದ್ಧವನ್ನು ಅಪೇಕ್ಷಿಸದಂತೆ ಮಾಡಿಬಿಡುತ್ತೇನೆ.")

ಇದಕ್ಕೆ ದಂಭೋದ್ಭವನು–"ಕೇವಲ ಜಂಬುಹುಲ್ಲಿನಿಂದಲೇ ನನ್ನೊಡನೆ ಯುದ್ಧಮಾಡುವುದು ಯುಕ್ತವೆಂದು ನೀವು ಭಾವಿಸುವುದಾದರೆ ನಾನೂ ಅದನ್ನೇ ಎದುರಿಸಿನಿಂತು ಯುದ್ಧಮಾಡಲಿಚ್ಛಿಸುತ್ತೇನೆ. ನಾನಿಲ್ಲಿಗೆ ಆಗಮಿಸಿರುವುದೇ ಯುದ್ಧಾರ್ಥವಾಗಿ. ನಿಮ್ಮೊಡನೆ ಯುದ್ಧಮಾಡಲೆಂದೇ ನಾನಿಲ್ಲಿಗೆ ಬಂದಿರುತ್ತೇನೆ"–ಹೀಗೆಂಬುದಾಗಿ ಹೇಳಿ ಸೈನ್ಯಸಮೇತನಾಗಿ ಯುದ್ಧಸನ್ನದ್ಧನಾಗಿ ಆ ತಪಸ್ವಿಯನ್ನು ಸಂಹರಿಸುವ ಇಚ್ಛೆಯಿಂದ ಅವನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿ ಅವನನ್ನು ಬಾಣಗಳಿಂದ ಮುಚ್ಚಿಬಿಟ್ಟನು. ಇತರರ ಶರೀರಗಳನ್ನು ಭಿನ್ನ-ಭಿನ್ನ ಮಾಡುವುದರಲ್ಲಿ ಸಮರ್ಥನಾದ ದಂಭೋದ್ಭವನು ಬಿಡುತ್ತಿದ್ದ ಘೋರವಾದ ಬಾಣಗಳನ್ನು ನರನು ಪ್ರಯೋಜನರಹಿತವನ್ನಾಗಿ ಮಾಡಿ, ಕೇವಲ ತೃಣಾಸ್ತ್ರದಿಂದಲೇ ಆ ಘೋರಾಸ್ತ್ರಗಳೆಲ್ಲವನ್ನೂ ನಿರಸನಗೊಳಿಸಿಬಿಟ್ಟನು. ಅನಂತರದಲ್ಲಿ ಅಪರಾಜಿತನಾದ ನರನು ದಂಭೋದ್ಭವನ ಮೇಲೆ ಮತ್ತು ಅವನ ಸೈನ್ಯದ ಮೇಲೆ ಅಪ್ರತಿಹತವಾದ ಐಷೀಕಾಸ್ತ್ರವನ್ನು ಪ್ರಯೋಗಿಸಿದನು. ಜಂಬುಹುಲ್ಲನ್ನೇ ಅಸ್ತ್ರವನ್ನಾಗಿ ಪರಿವರ್ತಿಸಿ ಪ್ರಯೋಗಿಸಿದುದು ರಾಜನಿಗೆ ಪರಮಾದ್ಭುತವಾಗಿ ಕಂಡಿತು. ಎಂತಹ ಲಕ್ಷ್ಯವನ್ನಾದರೂ ಗುರಿಯಿಟ್ಟು ಹೊಡೆಯುವ ಸಾಮರ್ಥ್ಯವಿದ್ದ ನರನು ಮಾಯೆಯ ಮೂಲಕವಾಗಿ ಕೇವಲ ತೃಣಾಸ್ತ್ರಗಳಿಂದಲೇ ದಂಭೋದ್ಭವನ ಕಡೆಯ ಸೈನಿಕರ ಕಣ್ಣುಗಳನ್ನೂ, ಕಿವಿಗಳನ್ನೂ, ಮೂಗುಗಳನ್ನೂ ಮುಚ್ಚಿಬಿಟ್ಟನು. ಆಕಾಶವೆಲ್ಲವೂ ನರನು ಬಿಟ್ಟ ತೃಣಾಸ್ತ್ರಗಳಿಂದಲೇ ಬೆಳ್ಳಗಾಗಿರುವುದನ್ನು ಕಂಡು ಭಯಗೊಂಡ ದಂಭೋದ್ಭವನು ನರನ ಕಾಲಿಗೆ ಬಿದ್ದು–"**ಸ್ವಸ್ತಿ ಮೇಽಸ್ತು**"–ನನಗೆ ಮಂಗಳವಾಗಲಿ; ಮಂಗಳವಾಗುವಂತೆ ಅನುಗ್ರಹಿಸು"–ಎಂದು ನರನನ್ನು ಬೇಡಿಕೊಂಡನು. ಆಶ್ರಯವನ್ನಪೇಕ್ಷಿಸುವವರಿಗೆ ಶರಣ್ಯನಾದ ನರನು, ಕಾಲಿಗೆ ಬಿದ್ದು ಶರಣಾಗತನಾದ ದಂಭೋದ್ಭವನನ್ನು ಕುರಿತು ಹೇಳಿದನು :

**ಬ್ರಹ್ಮಣ್ಯೋ ಭವ ಧರ್ಮಾತ್ಮಾ ಮಾ ಚ ಸ್ಮೈವಂ ಪುನಃ ಕೃಥಾಃ ।**

**ನೈತಾದೃಕ್ಪುರುಷೋ ರಾಜನ್ ಕ್ಷತ್ರಧರ್ಮಮನುಸ್ಮರನ್ ।**
**ಮನಸಾ ನೃಪಶಾರ್ದೂಲ ಭವೇತ್ಪರಪುರಂಜಯಃ ॥೩೪॥**

"ರಾಜನ್! ನೀನು ಬ್ರಾಹ್ಮಣಹಿತೈಷಿಯಾಗು, ಧರ್ಮಾತ್ಮನಾಗು. ಈ ವಿಧವಾದ ಸಾಹಸವನ್ನು ಪುನಃ ಮಾಡಲು ಹೋಗಬೇಡ. ಶತ್ರುಗಳ ನಗರವನ್ನು ಜಯಿಸಲಪೇಕ್ಷಿಸುವ ವೀರಪುರುಷನಾದ ಕ್ಷತ್ರಿಯನು ಕ್ಷತ್ರಿಯ ಧರ್ಮವನ್ನು ಸ್ಮರಿಸಿಕೊಂಡು-ನೀನು ಮಾಡುತ್ತಿರುವಂತಹ ಅಕಾರ್ಯವನ್ನು ಮಾಡಲು ಮನಸ್ಸಿನಿಂದಲೂ ಯೋಚಿಸಹೋಗುವುದಿಲ್ಲ.

**ಮಾ ಚ ದರ್ಪಸಮಾವಿಷ್ಟಃ ಕ್ಷೇಪ್ಸೀಃ ಕಾಂಶ್ಚಿತ್ಕಥಂಚನ ।**
**ಅಲ್ಪೀಯಾಂಸಂ ವಿಶಿಷ್ಟಂ ವಾ ತತ್ತೇ ರಾಜನ್ಸಮಾಹಿತಮ್ ॥೩೫॥**

ಇನ್ನು ಮುಂದೆ ನೀನು ಪುನಃ ದರ್ಪದಿಂದ ಕೊಬ್ಬಿದವನಾಗಿ ನಿನಗಿಂತ ಬಲಿಷ್ಠನಾದವನನ್ನಾಗಲೀ, ನಿನಗಿಂತಲೂ ದುರ್ಬಲನಾದವನನ್ನಾಗಲೀ ಯಾವಾಗಲೂ ಯಾವುದೇ ಕಾರಣದಿಂದಲೂ ತಿರಸ್ಕಾರಭಾವನೆಯಿಂದ ಕಾಣ ಬಾರದು. ಈ ವಿಷಯವನ್ನು ನಾನು ನಿನಗೆ ಸ್ಪಷ್ಟವಾಗಿ ತಿಳಿಸುತ್ತೇನೆ.

**ಕೃತಪ್ರಜ್ಞೋ ವೀತಲೋಭೋ ನಿರಹಂಕಾರ ಆತ್ಮವಾನ್ ।**
**ದಾನ್ತಃ ಕ್ಷಾನ್ತೋ ಮೃದುಃ ಸೌಮ್ಯಃ ಪ್ರಜಾಃ ಪಾಲಯ ಪಾರ್ಥಿವ ।**
**ಮಾ ಸ್ಮ ಭೂಯಃ ಕ್ಷಿಪೇಃ ಕಂಚಿದವಿದಿತ್ವಾ ಬಲಾಬಲಮ್ ॥೩೬॥**

ನೀನು ವಿನೀತಬುದ್ಧಿಯವನಾಗಿರಬೇಕು ; ಲೋಭಶೂನ್ಯನಾಗಿರಬೇಕು ; ಅಹಂಕಾರರಹಿತನಾಗಿರಬೇಕು ; ಮನಸ್ಸನ್ನು ನಿಗ್ರಹಿಸಬೇಕು ; ಜಿತೇಂದ್ರಿಯ ನಾಗಬೇಕು. ತಾಳ್ಮೆಯುಳ್ಳವನಾಗಿ, ಮೃದುವಾಗಿ ಸೌಮ್ಯನಾಗಿರಬೇಕು. ಹೀಗಿದ್ದುಕೊಂಡು ಪ್ರಜೆಗಳನ್ನು ಸಂರಕ್ಷಿಸು. ಮತ್ತೊಬ್ಬನ ಬಲಾಬಲ ಗಳನ್ನು ತಿಳಿದುಕೊಳ್ಳದೇ ಪುನಃ ನೀನು ಬಾಣಪ್ರಯೋಗಮಾಡಲು ಹೋಗಬೇಡ.

**ಅನುಜ್ಞಾತಃ ಸ್ವಸ್ತಿ ಗಚ್ಛ ಮೈವಂ ಭೂಯಃ ಸಮಾಚರೇಃ ।**
**ಕುಶಲಂ ಬ್ರಾಹ್ಮಣಾನ್ಪೃಚ್ಛೇರಾವಯೋರ್ವಚನಾದ್ಭೃಶಮ್ ॥೩೭॥**

ನಮ್ಮಿಂದ ಅನುಜ್ಞೆಯನ್ನು ಪಡೆದ ನೀನಿನ್ನು ನಿನ್ನ ರಾಜ್ಯಕ್ಕೆ ಕ್ಷೇಮ ವಾಗಿ ಹಿಂದಿರುಗು. ಪುನಃ ಎಚ್ಚರಿಸುತ್ತೇನೆ. ಈಗ ಮಾಡಿದಂತೆ ಪುನಃ

ನೀನು ಮುಂದೆ ಮಾಡಲು ಹೋಗಬಾರದು. (ಅನ್ಯರನ್ನು ತಿರಸ್ಕಾರ ಮಾಡಲು ಹೋಗಬಾರದು.) ನಮ್ಮ ಮಾತಿನಂತೆ ನೀನು ಈಗಲೇ ಹೋಗಿ ಬ್ರಾಹ್ಮಣರ ಕುಶಲವನ್ನು ವಿಚಾರಿಸು. ಅವರ ಹಿತರಕ್ಷಣೆಯಲ್ಲಿಯೇ ಸರ್ವದಾ ಆಸಕ್ತನಾಗಿರು."

ಧೃತರಾಷ್ಟ್ರಮಹಾರಾಜ! ನರನು ಹೀಗೆಂದು ಹೇಳಿದನಂತರ ದಂಭೋದ್ಭವನು ಆ ಇಬ್ಬರು ಮಹಾತ್ಮರ ಪಾದಗಳಿಗೂ ಅಭಿವಾದನಪೂರ್ವಕ ವಾಗಿ ನಮಸ್ಕರಿಸಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ನರನು ಹೇಳಿದಂತೆ ಅಲ್ಲಿಂದ ಮುಂದೆ ಆ ರಾಜನು ದುರಹಂಕಾರವನ್ನು ತೊರೆದು ಧರ್ಮ ಮಾರ್ಗಾನುವರ್ತಿಯಾಗಿದ್ದನು.

ಈ ರೀತಿಯಾಗಿ ಹಿಂದಿನ ಕಾಲದಲ್ಲಿ ಮಹಾತ್ಮನಾದ ನರನು ಅನನ್ಯ ಸಾಧಾರಣವಾದ ಮಹಾಕಾರ್ಯವನ್ನು ಮಾಡಿದನೆಂಬುದನ್ನು ನಾವು ಕೇಳಿ ದ್ದೇವೆ. ನಾರಾಯಣನ ವಿಷಯವಾಗಿ ಹೇಳಬೇಕಾದರೆ :

**ತತೋ ಗುಣೈಃ ಸುಬಹುಭಿಃ ಶ್ರೇಷ್ಠೋ ನಾರಾಯಣೋಽಭವತ್ ॥**

ನರನಿಗಿಂತಲೂ ಬಹುವಿಧವಾದ ಸದ್ಗುಣಗಳು ನಾರಾಯಣನಲ್ಲಿರು ವುದರಿಂದ ನರನಿಗಿಂತಲೂ ನಾರಾಯಣನು ಶ್ರೇಷ್ಠನೆನಿಸಿದ್ದಾನೆ.

**ತಸ್ಮಾದ್ಯಾವದ್ಧನುಃಶ್ರೇಷ್ಠೇ ಗಾಣ್ಡೀವೇಽಸ್ತ್ರಂ ನ ಯುಜ್ಯತೇ ।**
**ತಾವತ್ತ್ವಂ ಮಾನಮುತ್ಸೃಜ್ಯ ಗಚ್ಛ ರಾಜನ್ಧನಂಜಯಮ್ ॥೪೧॥**

ಆದುದರಿಂದ, ಮಹಾರಾಜ! ಶ್ರೇಷ್ಠಧನುಸ್ಸೆಂದು ಪ್ರಸಿದ್ಧವಾಗಿರುವ ಗಾಂಡೀವಧನುಸ್ಸಿನಲ್ಲಿ ಧನಂಜಯನು ಅಸ್ತ್ರವನ್ನು ಸಂಯೋಜಿಸುವುದರೊಳ ಗಾಗಿಯೇ ನೀನು ನಿನ್ನ ಅಭಿಮಾನವನ್ನು ಬದಿಗಿಟ್ಟು ಧನಂಜಯನ ಬಳಿಗೆ ಹೋಗು. (ಪಾಂಡವರೊಡನೆ ಸಂಧಾನಮಾಡಿಕೋ.)

**ಕಾಕುದೀಕಂ ಶುಕಂ ನಾಕಮಕ್ಷಿಸಂತರ್ಜನಂ ತಥಾ ।**
**ಸಂತಾನಂ ನರ್ತಕಂ ಘೋರಮಾಸ್ಯಮೋದಕಮಷ್ಟಮಮ್ ॥೪೨॥**

ಕಾಕುದೀಕ (ಪ್ರಸ್ವಾಪನ), ಶುಕ (ಮೋಹನ), ನಾಕ (ಉನ್ಮಾದನ), ಅಕ್ಷಿಸಂತರ್ಜನ (ತ್ರಾಸನ), ಸಂತಾನ (ದೈವತ), ನರ್ತಕ (ಪೈಶಾಚ), ಘೋರ (ರಾಕ್ಷಸ), ಆಸ್ಯಮೋದಕ (ಯಾಮ್ಯ)–ಇವು ಎಂಟು ಪ್ರಕಾರದ ಮಹಾಸ್ತ್ರಗಳು.

(ವ್ಯಾಖ್ಯಾನಕಾರರು ಈ ಅಸ್ತ್ರಗಳ ನಿರೂಪಣೆಯನ್ನು ಹೀಗೆ ಮಾಡಿರುತ್ತಾರೆ : **ಯೇನ ಅಸ್ತ್ರೇಣ ಅಭಿಹತಾಃ ರಥಗಜಾದೀನಾಂ ಕಕುದ್ಯೇವ ಶೇರತೇ ತತ್ ಕಾಕುದೀಕಂ**–ಯಾವ ಅಸ್ತ್ರದಿಂದ ಪ್ರಹೃತರಾದ ಯೋಧರು ರಥ-ಗಜಾದಿಗಳ ಮೇಲೆಯೇ ಮಲಗಿಬಿಡುತ್ತಾರೆಯೋ ಅಥವಾ ಯಾವ ಅಸ್ತ್ರವು ಶತ್ರುಗಳನ್ನು ನಿಂತಲ್ಲಿಯೇ ಪ್ರಜ್ಞಾಹೀನರನ್ನಾಗಿ ಮಾಡಿಬಿಡುವುದೋ–ಅಂತಹ ಅಸ್ತ್ರಕ್ಕೆ ಕಾಕುದೀಕ ಅಥವಾ ಪ್ರಸ್ವಾಪನ ಎಂದು ಹೆಸರು.

**ಯೇನ ಶುಕನಾಲಿಕಾನ್ಯಾಯೇನ ಅಭಯೇಽಪಿ ಭಯದರ್ಶಿನೋ ಹಯರಥಾದಿಪಾದೇಷು ಗಾಢಂ ಶ್ಲಿಷ್ಯನ್ತಿ ತತ್ ಶುಕಂ, ಮೋಹನಂ ವಾ**–ಗಿಣಿಯು ನೀರಿನ ಮೇಲೆ ಇರುವ ಬಿದುರಿನ ನಲಿಕೆಯ ಮೇಲೆ ಕುಳಿತಿರುತ್ತದೆ. ನೀರಿನ ಹೆದರಿಕೆಯಿಂದ ಕಿರುಚುತ್ತಿರುತ್ತದೆ. ನಲಿಕೆಯನ್ನು ಭದ್ರವಾಗಿ ಹಿಡಿದುಕೊಂಡಿರುತ್ತದೆ. ಅದು ಬಂಧಿಸಲ್ಪಟ್ಟಿರುವುದಿಲ್ಲವಾದರೂ ತಾನು ಬಂಧಿಸಲ್ಪಟ್ಟಿರುವೆನೆಂದೇ ತಿಳಿದಿರುತ್ತದೆ. ನಲಿಕೆಯನ್ನು ಭದ್ರವಾಗಿ ಹಿಡಿದುಕೊಂಡೇ ಸುತ್ತುತ್ತಿರುತ್ತದೆ. (ಲಾಗಹಾಕುತ್ತಿರುತ್ತದೆ.) ಈ ಅಸ್ತ್ರಪ್ರಯೋಗದಿಂದ ಸೈನಿಕರು ಭಯಕ್ಕೆ ಕಾರಣವಿಲ್ಲದಿದ್ದರೂ ಭಯದಿಂದ ಕುದುರೆಗಳ ಕಾಲುಗಳನ್ನೂ, ರಥಚಕ್ರಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ಕುಳಿತುಬಿಡುತ್ತಾರೆ. ಆದುದರಿಂದ ಆ ಅಸ್ತ್ರಕ್ಕೆ ಶುಕ ಅಥವಾ ಮೋಹನವೆಂದು ಹೆಸರು.

**ಯೇನ ಸ್ವರ್ಗನಗರಂ ಪಶ್ಯನ್ತಿ ತತ್ ನಾಕಂ, ಉನ್ಮಾದನಂ ವಾ**–ಯಾವ ಅಸ್ತ್ರವನ್ನು ಬಿಡುವುದರಿಂದ ಸೈನಿಕರು ಸ್ವರ್ಗವನ್ನು ಕಾಣುತ್ತಾರೆಯೋ (ಸ್ವರ್ಗದಲ್ಲಿರುವ ಅಪ್ಸರೆಯರು, ನಂದನವನ–ಇತ್ಯಾದಿಗಳನ್ನು ಕಂಡು ಭ್ರಾಂತರಾಗುತ್ತಾರೆಯೋ) ಅಂತಹ ಮಹಾಸ್ತ್ರಕ್ಕೆ ನಾಕ ಅಥವಾ ಉನ್ಮಾದವೆಂದು ಹೆಸರು.

ಯೇನ ಕ್ಷಿಪ್ತಮಾತ್ರೇಣ ಅನುವಿದ್ಧಾಃ ತ್ರಾಸಾತ್ ಶಕೃನ್ಮೂತ್ರಂ ಸ್ರವನ್ತಿ ತತ್ ಅಕ್ಷಿಸನ್ತರ್ಜನಂ, ತ್ರಾಸನಂ ನಾಮ– ಯಾವ ಅಸ್ತ್ರಪ್ರಯೋಗದಿಂದ ಯೋಧರು ಭಯದಿಂದ ಮೂತ್ರ-ಪುರೀಷಗಳನ್ನು ಉತ್ಸರ್ಜನಮಾಡುವರೋ–ಅಂತಹ ಅಸ್ತ್ರಕ್ಕೆ ಅಕ್ಷಿಸಂತರ್ಜನ

ಅಥವಾ ತ್ರಾಸವೆಂದು ಹೆಸರು. ಆ ಅಸ್ತ್ರಪ್ರಯೋಗಮಾಡಿದೊಡನೆಯೇ ಯೋಧರಿಗೆ ಜಲಬಾಧೆ-ಮಲಬಾಧೆಗಳು ಪ್ರಾರಂಭವಾಗುತ್ತವೆ. ಇದರಿಂದ-ವರು ಸಂಕಟಪಡುವಂತಾಗುತ್ತದೆ.

ಸನ್ತಾನಂ ಅವಿಚ್ಛೇದೇನ ಶಸ್ತ್ರಾಣಾಂ ವೃಷ್ಟಿಕರಂ ಐನ್ದ್ರಾದಿ ದಿವ್ಯಂ–ಯಾವ ಅಸ್ತ್ರವನ್ನು ಪ್ರಯೋಗಿಸುವುದರಿಂದ ಯೋಧರ ಮೇಲೆ ಅವಿಚ್ಛಿನ್ನವಾಗಿ ಶಸ್ತ್ರಗಳ ಮಳೆಸುರಿಯುವುದೋ, ಯಾವ ಅಸ್ತ್ರಗಳು ಪುಂಖಾನುಪುಂಖವಾಗಿ ಅವಿಜ್ಞಾತಸ್ಥಳದಲ್ಲಿ ಹುಟ್ಟಿ ಬರುತ್ತಿರುತ್ತವೆಯೋ–ಅಂತಹ ಮಹಾಸ್ತ್ರಕ್ಕೆ ಸಂತಾನ ಅಥವಾ ದಿವ್ಯವೆಂದು ಹೆಸರು. ಐಂದ್ರ-ವಾಯವ್ಯಾದಿಗಳು ಈ ದಿವ್ಯಾಸ್ತ್ರಗಳು.

ನರ್ತಕಂ ನರ್ತನಕರಂ, ಪೈಶಾಚಂ–ಯಾವ ಅಸ್ತ್ರವು ಪ್ರಹರಣ ಮಾತ್ರದಿಂದ ಯೋಧರನ್ನು ತಕ-ತಕನೆ ಕುಣಿಯುವಂತೆ ಮಾಡುತ್ತದೆಯೋ, ಯಾವ ಅಸ್ತ್ರಪ್ರಹಾರದ ಯಾತನೆಯನ್ನು ತಾಳಲಾರದೇ ಯೋಧರು ಕಿರುಚಾಡುತ್ತಾ ಕುಣಿಯುತ್ತಾರೆಯೋ–ಅಂತಹ ಮಹಾಸ್ತ್ರಕ್ಕೆ ನರ್ತಕ ಅಥವಾ ಪೈಶಾಚವೆಂದು ಹೆಸರು.

**ಯೇನ ಅಭಿಹತಾಃ ಮುಖೇ ಪಾಷಾಣಂ ದತ್ವಾ ಮರಣಾರ್ಥ ಮೇವ ಪ್ರತಿಷ್ಠನ್ತೇ ತತ್ ಆಸ್ಯಮೋದಕಂ, ಯಾಮ್ಯಂ ವಾ**–ಯಾವ ಅಸ್ತ್ರದಿಂದ ಪ್ರಹರಿಸಲ್ಪಟ್ಟ ಯೋಧರು ಬಾಯಿಗೆ ಕಲ್ಲುಹಾಕಿಕೊಂಡು ಸಾಯುವ ಸಲುವಾಗಿಯೇ ಹೊರಟುಬಿಡುತ್ತಾರೆಯೋ ಅದಕ್ಕೆ ಆಸ್ಯಮೋದಕ ಅಥವಾ ಯಾಮ್ಯವೆಂದು ಹೆಸರು.

(ಯಾಮ್ಯವೆಂಬ ಪದದ ಅರ್ಥದಿಂದ ಆಸ್ಯಮೋದಕಂ–ಎಂಬುದಕ್ಕೆ ಬಾಯಲ್ಲಿ ಕಲ್ಲುಹಾಕಿಕೊಂಡು ಸಾಯಲು ಹೋಗುವುದು ಎಂದು ಅರ್ಥಮಾಡಿರುವಂತೆ ತೋರುತ್ತದೆ. ಯಾಮ್ಯವೆಂದರೆ ಯಮನ ಸಂಬಂಧ ಅರ್ಥಾತ್ ಮರಣ. ಮೋದಕವೆಂಬುದಕ್ಕೆ ಕಲ್ಲು ಎಂಬ ಅರ್ಥ ಬರುವುದಿಲ್ಲ. ಯಾವುದಾದರೂ ಸಿಹಿ ಪದಾರ್ಥ ಅಥವಾ ತಿನ್ನುವ ಪದಾರ್ಥ ಎಂದು ಅರ್ಥವಾಗುತ್ತದೆ. ಸಾಯುವ ಕಾಲದಲ್ಲಿ ಅಕ್ಕಿಕಾಳನ್ನು ಬಾಯಿಗೆ ಹಾಕುತ್ತಾರೆ. ಆದುದರಿಂದ ಬಾಯಿಗೆ ಅಕ್ಕಿಕಾಳು ಹಾಕಿಕೊಂಡು ಯೋಧರು ಸಾಯಲು ಸಿದ್ಧರಾಗುತ್ತಾರೆ–ಎಂದು ಅರ್ಥಮಾಡುವುದು ಸೂಕ್ತವಾಗಿ ಕಾಣುತ್ತದೆ.)

ಏತೈರ್ವಿದ್ಧಾಃ ಸರ್ವ ಏವ ಮರಣಂ ಯಾನ್ತಿ ಮಾನವಾಃ ।
ಕಾಮಕ್ರೋಧೌ ಲೋಭಮೋಹೌ ಮದಮಾನೌ ತಥೈವ ಚ ।
ಮಾತ್ಸರ್ಯಾಹಂಕೃತೀ ಚೈವ ಕ್ರಮಾದೇವ ಉದಾಹೃತಾಃ ॥೪೪॥

ಹಿಂದೆ ಹೇಳಿದ ಎಂಟು ಅಸ್ತ್ರಗಳಿಂದ ಪ್ರಹೃತರಾದ ಮನುಷ್ಯರೆಲ್ಲರೂ ಮರಣಹೊಂದುತ್ತಾರೆ. ಎಂಟು ಅಸ್ತ್ರಗಳಂತೆ ಮನುಷ್ಯರಲ್ಲಿಯೇ ಎಂಟು ಶತ್ರುಗಳೂ ಇದ್ದಾರೆ. ಆ ಶತ್ರುಗಳ ವಶನಾದವನು ವಿನಾಶಹೊಂದುತ್ತಾನೆ.

ಕಾಮ-ಕ್ರೋಧ-ಲೋಭ-ಮೋಹ-ಮದ-ಮಾನ- ಮಾತ್ಸರ್ಯ-ಅಹಂಕಾರ–ಇವುಗಳೇ ಆ ಎಂಟು ಶತ್ರುಗಳು. ಎಂಟು ಅಸ್ತ್ರಗಳಿಗೆ ಈ ಎಂಟು ಪ್ರತಿಸ್ವರೂಪಗಳಾಗಿವೆಯೆಂದೂ ಹೇಳಬಹುದು.

ಉನ್ಮತ್ತಾಶ್ಚ ವಿಚೇಷ್ಟನ್ತೇ ನಷ್ಟಸಂಜ್ಞಾ ವಿಚೇತಸಃ ।
ಸ್ವಪನ್ತಿ ಚ ಪ್ಲವನ್ತೇ ಚ ಛರ್ದಯನ್ತಿ ಚ ಮಾನವಾಃ ।
ಮೂತ್ರಯನ್ತೇ ಚ ಸತತಂ ರುದನ್ತಿ ಚ ಹಸನ್ತಿ ಚ ॥೪೫॥

ಮೇಲೆ ಹೇಳಿದ ಅಸ್ತ್ರಗಳ ಪ್ರಹಾರಗಳಿಂದ ಯೋಧರು ಉನ್ಮತ್ತರಾಗುತ್ತಾರೆ. ಕುಣಿಯುತ್ತಾರೆ. ಸಂಜ್ಞಾಹೀನರಾಗುತ್ತಾರೆ. ಚೇತನಾರಹಿತರಾಗುತ್ತಾರೆ. ಮಲಗುತ್ತಾರೆ. ಅತ್ತಲಿತ್ತ ಹಾರಾಡುತ್ತಾರೆ. ವಮನಮಾಡಿಕೊಳ್ಳುತ್ತಾರೆ. ಸರ್ವದಾ ಮೂತ್ರೋತ್ಸರ್ಜನೆ ಮಾಡುತ್ತಿರುತ್ತಾರೆ. ಅಳುತ್ತಿರುತ್ತಾರೆ ಅಥವಾ ನಗುತ್ತಿರುತ್ತಾರೆ.

ನಿರ್ಮಾತಾ ಸರ್ವಲೋಕಾನಾಮೀಶ್ವರಃ ಸರ್ವಕರ್ಮವಿತ್ ।
ಯಸ್ಯ ನಾರಾಯಣೋ ಬನ್ಧುರರ್ಜುನೋ ದುಃಸಹೋ ಯುಧಿ ॥೪೬॥

ಸಕಲಲೋಕಗಳಿಗೂ ನಿರ್ಮಾತೃವಾದ, ಸಕಲಕರ್ಮಜ್ಞನಾದ, ಸರ್ವೇಶ್ವರನಾದ ಶ್ರೀಮನ್ನಾರಾಯಣನು ಯಾರಿಗೆ ಬಂಧುವೋ–ಅಂತಹ ಅರ್ಜುನನು ಯುದ್ಧದಲ್ಲಿ ಖಂಡಿತವಾಗಿಯೂ ದುಃಸಹನೇ ಸರಿ. (ಅವನನ್ನೆದುರಿಸಿ ನಿಲ್ಲಲು ಯಾರಿಂದಲೂ ಸಾಧ್ಯವಾಗದು.)

ಕಸ್ತಮುತ್ಸಹತೇ ಜೇತುಂ ತ್ರಿಷು ಲೋಕೇಷು ಭಾರತ ।
ವೀರಂ ಕಪಿಧ್ವಜಂ ಜಿಷ್ಣುಂ ಯಸ್ಯ ನಾಸ್ತಿ ಸಮೋ ಯುಧಿ ॥೪೭॥

ಯುದ್ಧಮಾಡುವುದರಲ್ಲಿ ಯಾವನಿಗೆ ಸಮಾನರೇ ಯಾರೂ ಇರುವುದಿಲ್ಲವೋ–ಅಂತಹ ವೀರನಾದ, ಕಪಿಧ್ವಜನಾದ ಜಿಷ್ಣುವನ್ನು ಜಯಿಸಲು ಮೂರು ಲೋಕಗಳಲ್ಲಿಯೂ ಯಾವನು ತಾನೇ ಉತ್ಸುಕನಾಗುತ್ತಾನೆ? (ಅವನೆದುರಾಗಿ ನಿಂತು ಯುದ್ಧಮಾಡಲು ಯಾರಿಗೆ ತಾನೇ ಉತ್ಸಾಹವುಂಟಾಗುತ್ತದೆ?)

**ಅಸಂಖ್ಯೇಯಾ ಗುಣಾಃ ಪಾರ್ಥೇ ತದ್ವಿಶಿಷ್ಟೋ ಜನಾರ್ದನಃ ।**
**ತ್ವಮೇವ ಭೂಯೋ ಜಾನಾಸಿ ಕುನ್ತಿಪುತ್ರಂ ಧನಂಜಯಮ್ ॥೪೮॥**

**ನರನಾರಾಯಣೌ ಯೌ ತೌ ತಾವೇವಾರ್ಜುನಕೇಶವೌ ।**
**ವಿಜಾನೀಹಿ ಮಹಾರಾಜ ಪ್ರವೀರೌ ಪುರುಷೋತ್ತಮೌ ॥೪೯॥**

ಮಹಾರಾಜ! ಅರ್ಜುನನಲ್ಲಿ ಅಸಂಖ್ಯಾತಗುಣಗಳಿವೆ. ಜನಾರ್ದನನು ಅರ್ಜುನನನ್ನೂ ಮೀರಿಸಿದ ಗುಣಗಳುಳ್ಳವನು. ಕುಂತೀಪುತ್ರನಾದ ಧನಂಜಯನ ವಿಷಯವು ನಮಗಿಂತಲೂ ಹೆಚ್ಚಾಗಿ ನಿನಗೇ ತಿಳಿದಿರುವುದು. ಈ ಹಿಂದೆ ನಾನು ನರ-ನಾರಾಯಣರ ಕಥೆಯನ್ನು ಹೇಳಿದೆನಲ್ಲವೇ? ಆ ನರ-ನಾರಾಯಣರೇ ಇಂದು ಅರ್ಜುನ-ಕೃಷ್ಣರಾಗಿ ಅವತರಿಸಿದ್ದಾರೆ. ಅವರಿಬ್ಬರೂ ಪುರುಷಶ್ರೇಷ್ಠರೆಂಬುದನ್ನೂ ವೀರಶ್ರೇಷ್ಠರೆಂಬುದನ್ನೂ ಈಗಲಾದರೂ ತಿಳಿ. ದಂಭೋದ್ಭವನ ಕಥೆಯಿಂದಾದರೂ ಮನಗಾಣು.

ನಾನು ಇಷ್ಟು ಹೇಳಿದ ಮೇಲಾದರೂ ಮಹಾಪುರುಷರಾದ ಮಹಾವೀರರಾದ ನರ-ನಾರಾಯಣರೇ ಅರ್ಜುನ-ಕೃಷ್ಣರೆಂದು ನೀನು ತಿಳಿದುಕೊಂಡಿದ್ದೇ ಆದರೆ, ನಾನು ಹೇಳಿದ ಮಾತುಗಳಲ್ಲಿ ಸಂಶಯಪಡದಿರುವುದೇ ಆದರೆ, ಶ್ರೇಷ್ಠವಾದ ಬುದ್ಧಿಯ ಆಶ್ರಯವನ್ನು ಪಡೆದು (ಸದ್ಬುದ್ಧಿಯನ್ನು ಹೊಂದಿದವನಾಗಿ) ಪಾಂಡವರೊಡನೆ ಸಂಧಿಗೆ ಸಮ್ಮತಿಸು. 'ನನ್ನ ಕುಟುಂಬದಲ್ಲಿ ಭೇದವುಂಟಾಗುವುದು ಬೇಡ' ಎಂದು ನೀನು ಭಾವಿಸುವೆಯಾದರೆ, ಕುಟುಂಬದಲ್ಲಿ ಭೇದಭಾವವಿಲ್ಲದಿರುವುದು ಶ್ರೇಯಸ್ಕರವೆಂದು ನೀನು ಭಾವಿಸುವೆಯಾದರೆ–ಪಾಂಡವರೊಡನೆ ಸಂಧಿಮಾಡಿಕೊಂಡು ಶಾಂತನಾಗಿರು. ಅವರೊಡನೆ ಯುದ್ಧಮಾಡಲು ಖಂಡಿತವಾಗಿಯೂ ಮನಸ್ಸುಮಾಡಬೇಡ. ಈ ಪ್ರಪಂಚದಲ್ಲಿ ನಿಮ್ಮ ಕುಲದ ಪ್ರತಿಷ್ಠೆಯು ಸರ್ವತ್ರ ವ್ಯಾಪಿಸಿದೆ. ಅದು

ಶಾಶ್ವತವಾಗಿಯೇ ಉಳಿಯಲಿ. (ಈ ನಿಮ್ಮ ಕುಲದಲ್ಲಿಯೇ ಒಡಕುಂಟಾದರೆ ಕುಲಗೌರವವು ಶಾಶ್ವತವಾಗಿ ಉಳಿಯಲಾರದು.) ನಿನಗೆ ಮಂಗಳವಾಗಲಿ, ಮಹಾರಾಜ! ಕೇವಲ ಸ್ವಾರ್ಥಕ್ಕಾಗಿಯೇ ಆದರೂ ನೀನು ಸಂಧಿಮಾಡಿಕೋ ; ಸ್ವಾರ್ಥಸಾಧನೆಯು ಯಾವುದರಿಂದಾಗುವುದೆಂಬುದನ್ನು ಸುದೀರ್ಘವಾಗಿ ಸಮಾಲೋಚಿಸು."

೯೬ನೆಯ ಅಧ್ಯಾಯವು ಮುಗಿಯಿತು.

೯೭ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಕಣ್ವಮಹರ್ಷಿಯು ದುರ್ಯೋಧನನಿಗೆ ಸಂಧಿಮಾಡಿಕೊಳ್ಳುವಂತೆ ಸಲಹೆ ನೀಡಿದುದು : ಮಾತಲಿಯ ಉಪಾಖ್ಯಾನ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳಿದರು :

"ಜನಮೇಜಯ! ಜಮದಗ್ನಿಯ ಮಗನಾದ ಪರಶುರಾಮನ ಮಾತನ್ನು ಕೇಳಿ ಭಗವಾನ್ ಕಣ್ವಮಹರ್ಷಿಯು ಕುರುಸಭೆಯಲ್ಲಿ ದುರ್ಯೋಧನನನ್ನು ಕುರಿತು ಈ ಮಾತನ್ನು ಹೇಳಿದನು :

**ಅಕ್ಷಯಶ್ಚಾವ್ಯಯಶ್ಚೈವ ಬ್ರಹ್ಮಾ ಲೋಕಪಿತಾಮಹಃ ।**
**ತಥೈವ ಭಗವನ್ತೌ ತೌ ನರನಾರಾಯಣಾವೃಷೀ ॥೨॥**

"ದುರ್ಯೋಧನ! ಲೋಕಪಿತಾಮಹನಾದ ಬ್ರಹ್ಮನು ಅಕ್ಷಯನೂ (ಕ್ಷಯರಹಿತನೂ) ಅವ್ಯಯನೂ (ಅವಿನಾಶಿಯೂ) ಆಗಿರುವಂತೆ ಭಗವಂತರಾದ ನರ-ನಾರಾಯಣರೆಂಬ ಋಷಿಗಳು ಕ್ಷಯರಹಿತರೂ ಅವ್ಯಯರೂ ಆಗಿರುತ್ತಾರೆ.

**ಆದಿತ್ಯಾನಾಂ ಹಿ ಸರ್ವೇಷಾಂ ವಿಷ್ಣುರೇಕಃ ಸನಾತನಃ ।**
**ಅಜಯ್ಯಶ್ಚಾವ್ಯಯಶ್ಚೈವ ಶಾಶ್ವತಃ ಪ್ರಭುರೀಶ್ವರಃ ॥೩॥**

ಅದಿತಿಯ ಮಕ್ಕಳಲ್ಲಿ ಅಥವಾ ದ್ವಾದಶಾದಿತ್ಯರಲ್ಲಿ ವಿಷ್ಣುವೊಬ್ಬನೇ ಅಜಯ್ಯನೂ, ಅವ್ಯಯನೂ, ಶಾಶ್ವತನೂ, ಪ್ರಭುವೂ, ಈಶ್ವರನೂ, ಸನಾತನನೂ ಆಗಿರುತ್ತಾನೆ.

**ನಿಮಿತ್ತಮರಣಾಶ್ಚಾನ್ಯೇ ಚನ್ದ್ರಸೂರ್ಯೌ ಮಹೀ ಜಲಮ್ ।**
**ವಾಯುರಗ್ನಿಸ್ತಥಾಕಾಶಂ ಗ್ರಹಾಸ್ತಾರಾಗಣಾಸ್ತಥಾ ॥೪॥**

ಚಂದ್ರ, ಸೂರ್ಯ, ಭೂಮಿ, ನೀರು, ವಾಯು, ಅಗ್ನಿ, ಆಕಾಶ, ಗ್ರಹಗಳು, ನಕ್ಷತ್ರಸಮೂಹಗಳು–ಈ ಎಲ್ಲವೂ ಯಾವುದಾದರೂ ಕಾರಣದಿಂದ ಯಾವಾಗಲಾದರೊಮ್ಮೆ ಮೃತ್ಯುಪರವಶವಾಗತಕ್ಕುವುಗಳೇ ಆಗಿವೆ.

**ತೇ ಚ ಕ್ಷಯಾನ್ತೇ ಜಗತೋ ಹಿತ್ವಾ ಲೋಕತ್ರಯಂ ಸದಾ ।**
**ಕ್ಷಯಂ ಗಚ್ಛನ್ತಿ ವೈ ಸರ್ವೇ ಸೃಜ್ಯನ್ತೇ ಚ ಪುನಃ ಪುನಃ ॥೫॥**

ಚಂದ್ರ-ಸೂರ್ಯಾದಿ ಗ್ರಹ-ನಕ್ಷತ್ರಗಳೆಲ್ಲವೂ ಜಗತ್ತು ವಿನಾಶಹೊಂದಿದ ನಂತರ (ಜಗತ್ಪ್ರಳಯವಾದನಂತರ) ಮೂರುಲೋಕಗಳನ್ನೂ ಪರಿತ್ಯಜಿಸಿ ಎಲ್ಲವೂ ವಿನಾಶಹೊಂದುತ್ತವೆ. ಸೃಷ್ಟಿಕಾಲದಲ್ಲಿ ಪುನಃ ಎಲ್ಲದರ ಸೃಷ್ಟಿಯೂ ಆಗುತ್ತದೆ.

**ಮುಹೂರ್ತಮರಣಾಸ್ತ್ವನ್ಯೇ ಮಾನುಷಾ ಮೃಗಪಕ್ಷಿಣಃ ।**
**ತೈರ್ಯಗ್ಯೋನ್ಯಾಶ್ಚ ಯೇ ಚಾನ್ಯೇ ಜೀವಲೋಕಚರಾಸ್ತಥಾ ॥೬॥**

ಜೀವಲೋಕಚರರಾದ (ಜೀವಲೋಕದಲ್ಲಿ ಜನಿಸುವ) ಮನುಷ್ಯರು, ಮೃಗಗಳು, ಪಕ್ಷಿಗಳು, ತಿರ್ಯಗ್ಯೋನಿಯಲ್ಲಿ ಹುಟ್ಟಿದ ಪ್ರಾಣಿಗಳು–ಈ ಎಲ್ಲರೂ ಮುಹೂರ್ತಮಾತ್ರಜೀವಿಗಳು. ಅಲ್ಪಾಯುಗಳು. ದೇವತೆಗಳ ದೃಷ್ಟ್ಯಾ ಅತ್ಯಲ್ಪಜೀವಿಗಳು.

**ಭೂಯಿಷ್ಠೇನ ತು ರಾಜಾನಃ ಶ್ರಿಯಂ ಭುಕ್ತ್ವಾಽಽಯುಷಃ ಕ್ಷಯೇ ।**
**ತರುಣಾಃ ಪ್ರತಿಪದ್ಯನ್ತೇ ಭೋಕ್ತುಂ ಸುಕೃತದುಷ್ಕೃತೇ ॥೭॥**

ಪ್ರಾಯಶಃ ರಾಜರೂ ಕೂಡ ಆಯುಷ್ಯವು ಕ್ಷೀಣಿಸುವವರೆಗೂ ಸುಖೋಪಭೋಗಗಳನ್ನು ಅನುಭವಿಸುತ್ತಿದ್ದು, ಆಯುಷ್ಯವು ಕ್ಷೀಣಿಸಿ ಮೃತ್ಯುಪರವಶರಾದನಂತರ ತಾವು ಹಿಂದಿನ ಜನ್ಮದಲ್ಲಿ ಮಾಡಿದ ಪಾಪ-ಪುಣ್ಯಗಳ ಫಲವನ್ನು ಅನುಭವಿಸುವ ಸಲುವಾಗಿ ನೂತನಜನ್ಮಗಳನ್ನು ಪಡೆಯುತ್ತಾರೆ.

ಅಂತಹ ಕ್ಷೀಣಾಯುಷ್ಯನಾಗಿರುವ ನೀನೂ ಕೂಡ ಧರ್ಮಪುತ್ರ

ನೊಡನೆ ಸಂಧಿಯನ್ನು ಮಾಡಿಕೊಳ್ಳುವುದೇ ಸಾಧುವಾಗಿದೆ. ಪಾಂಡವ-ಕೌರವರಿಬ್ಬರೂ ಸೇರಿ ಈ ವಸುಂಧರೆಯನ್ನು ಸಂರಕ್ಷಿಸಲಿ.

**ಬಲವಾನಹಮಿತ್ಯೇವ ನ ಮನ್ತವ್ಯಂ ಸುಯೋಧನ ।**
**ಬಲವನ್ತೋ ಬಲಿಭ್ಯೋ ಹಿ ದೃಶ್ಯನ್ತೇ ಪುರುಷರ್ಷಭ ॥೯॥**

ಸುಯೋಧನ! ನೀನು–'ನಾನು ಎಲ್ಲರಿಗಿಂತಲೂ ಬಲಿಷ್ಠನಾಗಿದ್ದೇನೆ. ಯಾರೊಡನೆಯೂ ಸಂಧಿಮಾಡಿಕೊಳ್ಳಬೇಕಾದ ಕಾರಣವಿಲ್ಲ. ರಾಜ್ಯವು ಬೇಕಾದರೆ ಯುದ್ಧಮಾಡಿಯೇ ಪಡೆದುಕೊಳ್ಳಲಿ'–ಎಂಬ ಅಭಿಪ್ರಾಯವುಳ್ಳವನಾಗಿರಬಹುದು. ಏಕೆಂದರೆ, ಪುರುಷರ್ಷಭನೇ! ಬಲಿಷ್ಠರಿಗಿಂತಲೂ ಬಲಿಷ್ಠರಾದವರೂ ಅನೇಕರಿದ್ದಾರೆ. ಅಂತಹವರನ್ನೂ ನಾವು ಕಾಣುತ್ತಿದ್ದೇವೆ. ನಿನ್ನ ಕಡೆಯಲ್ಲಿ ಬಹುಸಂಖ್ಯಾತರಾದ ಸೈನಿಕರಿರಬಹುದು. ಮಹಾಬಲಿಷ್ಠರೂ, ಮಹಾಪರಾಕ್ರಮಿಗಳೂ ಇರಬಹುದು. ಆದರೆ, ದುರ್ಯೋಧನ!

**ನ ಬಲಂ ಬಲಿನಾಂ ಮಧ್ಯೇ ಬಲಂ ಭವತಿ ಕೌರವ ।**
**ಬಲವನ್ತೋ ಹಿ ತೇ ಸರ್ವೇ ಪಾಣ್ಡವಾ ದೇವವಿಕ್ರಮಾಃ ॥೧೦॥**

ಬಲಿಷ್ಠರಾದವರ ಮಧ್ಯದಲ್ಲಿ ಸೈನ್ಯದ ಬಲವು ಗಣನೆಗೆ ಬರುವುದಿಲ್ಲ. ದೇವವಿಕ್ರಮರಾದ ಎಲ್ಲ ಪಾಂಡವರೂ ಮಹಾಬಲಿಷ್ಠರೆಂದು ಪ್ರಸಿದ್ಧರಾಗಿರುತ್ತಾರೆ. ಅಂತಹ ಅತುಲಪರಾಕ್ರಮಿಗಳ ಮುಂದೆ ನಿನ್ನ ಅಸಂಖ್ಯಾತವಾದ ಸೈನ್ಯಬಲವು ಖಂಡಿತವಾಗಿಯೂ ನಿಲ್ಲದು.

ಈ ವಿಷಯದಲ್ಲಿ ತನ್ನ ಮಗಳಿಗೆ ವರನನ್ನು ಹುಡುಕಲು ಯತ್ನಿಸಿದ ಮಾತಲಿಯ ಪುರಾತನವಾದ ಇತಿಹಾಸವನ್ನು ಉದಾಹರಿಸುತ್ತಾರೆ. ಅದನ್ನೇ ನಾನು ನಿನಗೂ ಹೇಳುವೆನು ಕೇಳು, ದುರ್ಯೋಧನ!

ತ್ರೈಲೋಕ್ಯಾಧಿಪತಿಯಾದ ಇಂದ್ರನಿಗೆ ಬಹುಪ್ರಿಯನಾದ ಮಾತಲಿ ಎಂಬ ಹೆಸರಿನ ಸಾರಥಿಯಿದ್ದನು. ಅವನ ಕುಲದಲ್ಲಿ ಒಬ್ಬಳೇ ಒಬ್ಬ ಕನ್ಯೆಯಿದ್ದಳು. ಅವಳು ಮಹಾರೂಪವತಿಯೆಂದು ಲೋಕಪ್ರಸಿದ್ಧಳಾಗಿದ್ದಳು. ದೇವರೂಪಿಣಿಯಾದ ಅವಳು ಗುಣಕೇಶೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಳು. ಕಾಂತಿಯಿಂದಲೂ, ಶರೀರಸೌಂದರ್ಯದಿಂದಲೂ ಅವಳು ಎಲ್ಲ ಸ್ತ್ರೀಯರನ್ನೂ

ಅತಿಶಯಿಸಿದ್ದಳು. ಅವಳು ಪ್ರೌಢೆಯಾಗಲಾಗಿ ಮಾತಲಿಯು ಅವಳನ್ನು ವಿವಾಹಮಾಡಿಕೊಡುವ ಕಾಲವು ಸನ್ನಿಹಿತವಾಯಿತೆಂಬುದನ್ನು ಮನಗಂಡವನಾಗಿ ತದೇಕಧ್ಯಾನದಿಂದ ಗುಣಕೇಶಿಯ ವಿವಾಹದ ವಿಷಯವನ್ನೇ ಯಾವಾಗಲೂ ಚಿಂತಿಸುತ್ತಿದ್ದು ತನ್ನ ಪತ್ನಿಯೊಡನೆಯೂ ಈ ವಿಷಯವಾಗಿ ಪ್ರಸ್ತಾಪ ಮಾಡಿದನು.

**ಧಿಕ್ಖಲ್ವಲಘುಶೀಲಾನಾಮುಚ್ಛ್ರಿತಾನಾಂ ಯಶಸ್ವಿನಾಮ್ ।**
**ನರಾಣಾಂ ಮೃದುಸತ್ತ್ವಾನಾಂ ಕುಲೇ ಕನ್ಯಾಪ್ರರೋಹಣಮ್ ॥೧೫॥**

"ಯಾರು ಶ್ರೇಷ್ಠವಾದ ಶೀಲಸ್ವಭಾವದವರಾಗಿರುತ್ತಾರೆಯೋ, ಶಿಷ್ಟಾಚಾರಸಂಪನ್ನರೆಂಬ ಯಶಸ್ಸನ್ನು ಪಡೆದಿರುತ್ತಾರೆಯೋ, ಯಾರು ಮೃದು ಸ್ವಭಾವದವರಾಗಿರುತ್ತಾರೆಯೋ, ಅಂತಹವರ ಕುಲದಲ್ಲಿ ಅಥವಾ ಮನೆಯಲ್ಲಿ ಕನ್ಯೆಯರ ಜನನಕ್ಕೆ ಧಿಕ್ಕಾರವಿರಲಿ. (ಅಂತಹ ಸತ್ಪುರುಷರ ಮನೆಯಲ್ಲಿ ಹೆಣ್ಣುಮಕ್ಕಳು ಹುಟ್ಟಿದರೆ ಅವರು ಕುಲದ ಅಥವಾ ತಂದೆ-ತಾಯಿಗಳ ದುಃಖಕ್ಕೆ ಕಾರಣರಾಗುತ್ತಾರೆ.)

**ಮಾತುಃ ಕುಲಂ ಪಿತೃಕುಲಂ ಯತ್ರ ಚೈವ ಪ್ರದೀಯತೇ ।**
**ಕುಲತ್ರಯಂ ಸಂಶಯಿತಂ ಕುರುತೇ ಕನ್ಯಕಾ ಸತಾಮ್ ॥೧೬॥**

ಸತ್ಪುರುಷರ ಮನೆಯಲ್ಲಿ ಹುಟ್ಟುವ ಹೆಣ್ಣು–ಮಾತೃಕುಲ, ಪಿತೃಕುಲ ಮತ್ತು ತಾನು ಸೇರುವ ಪತಿಕುಲ–ಈ ಮೂರು ಕುಲಗಳನ್ನೂ ಸಂಶಯಗ್ರಸ್ತ ವನ್ನಾಗಿ ಮಾಡುತ್ತಾಳೆ." (ಕನ್ಯೆಯ ತಾಯಿಯಾದವಳು ಮತ್ತು ತಾಯಿಗೆ ಸಂಬಂಧಿಸಿದ ಅಜ್ಜ, ಅಜ್ಜಿ, ಸೋದರಮಾವ ಮುಂತಾದ ಬಂಧುಜನರು 'ತಮ್ಮ ಚೆಲುವೆಯಾದ ಹೆಣ್ಣುಮಗಳು ಯಾರ ಕೈಹಿಡಿಯುವಳೋ! ಇವಳಿಗೆ ಒಳ್ಳೆಯ ವರನು ಸಿಕ್ಕುತ್ತಾನೋ–ಇಲ್ಲವೋ! ಒಳ್ಳೆಯ ವರ ಸಿಕ್ಕದಿದ್ದರೆ ಇವಳು ಹೇಗೆ ತಾನೇ ಜೀವಿಸಿಯಾಳು?' ಇವೇ ಮುಂತಾಗಿ ಯೋಚಿಸುತ್ತಾರೆ. ಅಂತೆಯೇ ತಂದೆಯ ಕಡೆಯ ತಾತ, ಚಿಕ್ಕಪ್ಪ, ದೊಡ್ಡಪ್ಪ ಇವರೂ ಕೂಡ ಇದನ್ನೇ ಯೋಚಿಸುತ್ತಾರೆ. ಅವಳು ಸೇರಲಿರುವ ಮನೆಯವರೂ ಅವಳಲ್ಲಿರ ಬಹುದಾದ ಗುಣ-ದೋಷಗಳ ವಿಷಯವಾಗಿ ತರ್ಕಿಸುತ್ತಿರುತ್ತಾರೆ. 'ನಮ್ಮ ಹುಡುಗನಿಗೆ ಎಂತಹವಳು ಸಿಕ್ಕಿಬಿಡುತ್ತಾಳೋ? ಅತ್ತೆ-ಮಾವಂದಿರ ಸೇವೆ

ಮಾಡುವಳೇ? ನಾದಿನಿಯರೊಂದಿಗೆ ಸೌಜನ್ಯದಿಂದಿರುವಳೇ? ಮೈದುನರೊಂದಿಗೆ ಹೊಂದಾಣಿಕೆಯಿಂದಿರುವಳೇ? ಅಥವಾ ಬಂದೊಡನೆಯೇ ಮನೆಯನ್ನೇ ಒಡೆದುಬಿಡುವಳೇ?'–ಈ ಎಲ್ಲವನ್ನೂ ವರನ ಮನೆಯವರು ಯೋಚಿಸುತ್ತಾರೆ. ಈ ರೀತಿಯಲ್ಲಿ ಒಂದು ಹೆಣ್ಣು ಮೂರು ಕುಲದವರ ಯೋಚನೆಗೂ ಕಾರಣಳಾಗುತ್ತಾಳೆ.)

ಮಾತಲಿಯು ಮುಂದುವರಿದು ತನ್ನ ಪತ್ನಿಯನ್ನು ಕುರಿತು ಹೇಳುತ್ತಾನೆ : "ಮಾನವರು ವರನನ್ನು ಹುಡುಕುವ ರೀತಿಯಲ್ಲಿಯೇ ನಾನೂ ದೇವ-ಮನುಷ್ಯಲೋಕಗಳೆರಡನ್ನೂ ಸುತ್ತಿ ನಮ್ಮ ಮಗಳಿಗೆ ಅನುರೂಪನಾದ ವರನನ್ನು ಹುಡುಕಾಡಿದೆನು. ಆದರೆ ಈ ಎರಡು ಲೋಕಗಳಲ್ಲಿಯೂ ನಮ್ಮ ಮಗಳಿಗನುರೂಪನಾದ ವರನು ಎಲ್ಲೂ ಸಿಕ್ಕಲಿಲ್ಲ."

ನಿಶ್ಚಯವಾಗಿಯೂ ದುರ್ಯೋಧನ! ದೇವತೆಗಳಲ್ಲಾಗಲೀ, ದೈತ್ಯರಲ್ಲಾಗಲೀ, ಗಂಧರ್ವರಲ್ಲಾಗಲೀ, ಮಾನವರಲ್ಲಾಗಲೀ, ಋಷಿಸಮೂಹದಲ್ಲಿಯೇ ಆಗಲೀ–ಮಾತಲಿಯು ತನ್ನ ಮಗಳಾದ ಗುಣಕೇಶಿಗೆ ಅನುರೂಪನಾದ ವರನನ್ನು ಕಾಣಲೇ ಇಲ್ಲ. ಅವನು ವರಾನ್ವೇಷಣಮಾಡದಿದ್ದ ಸ್ಥಳವೆಂದರೆ ನಾಗಲೋಕವು ಮಾತ್ರ. ಅನಂತರದಲ್ಲಿ ಮಾತಲಿಯು ತನ್ನ ಧರ್ಮಪತ್ನಿಯಾದ ಸುಧರ್ಮೆಯೊಂದಿಗೆ ರಾತ್ರಿಯಲ್ಲಿ ಸಮಾಲೋಚಿಸಿ ಕಡೆಯದಾಗಿ ಉಳಿದಿದ್ದ ನಾಗಲೋಕಕ್ಕೂ ಹೋಗಿ ವರಾನ್ವೇಷಣಮಾಡಲು ನಿಶ್ಚಯಿಸಿದನು.

**ನ ಮೇ ದೇವಮನುಷ್ಯೇಷು ಗುಣಕೇಶ್ಯಾಃ ಸಮೋ ವರಃ ।**
**ರೂಪತೋ ದೃಶ್ಯತೇ ಕಶ್ಚಿನ್ನಾಗೇಷು ಭವಿತಾ ಧ್ರುವಮ್ ॥೨೦॥**

"ದೇವ-ಮಾನವಲೋಕಗಳಲ್ಲಿ ಗುಣಕೇಶಿಗೆ ಅನುರೂಪನಾದ ರೂಪವಂತನಾದ ವರನು ನನಗೆ ಸಿಕ್ಕಲಿಲ್ಲ. ಕನ್ಯೆಗೊಬ್ಬ ವರನಿದ್ದೇ ಇರಬೇಕೆಂಬ ನ್ಯಾಯದ ಮೇಲೆ ನಾಗಲೋಕದಲ್ಲಾದರೂ ಇವಳಿಗೆ ಅನುರೂಪನಾದ, ರೂಪವಂತನಾದ ಒಬ್ಬಾನೊಬ್ಬ ವರನು ಸಿಕ್ಕಿಯಾನು. ಸಿಕ್ಕಿಯೇ ಸಿಕ್ಕುತ್ತಾನೆ." ಹೀಗೆಂಬುದಾಗಿ ಸುಧರ್ಮೆಯೊಡನೆ ಸಮಾಲೋಚಿಸಿ, ಇಷ್ಟ

ದೇವತೆಗೆ ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರಮಾಡಿ, ಮಗಳ ನೆತ್ತಿಯನ್ನು ಆಘ್ರಾಣಿಸಿ, ಭೂಲೋಕವನ್ನು ಪ್ರವೇಶಿಸಿದನು."

೯೭ನೆಯ ಅಧ್ಯಾಯವು ಮುಗಿಯಿತು.

೯೮ನೆಯ ಅಧ್ಯಾಯ ಭಗವದ್ಯಾನಪರ್ವ(ಮುಂದುವರಿದಿದೆ.)

## ಮಾತಲಿಯು ವರಾನ್ವೇಷಣಕ್ಕಾಗಿ ನಾರದರೊಡನೆ ವರುಣಲೋಕದಲ್ಲಿ ಸಂಚರಿಸುತ್ತಿದ್ದಾಗ ಅನೇಕಾನೇಕ ಆಶ್ಚರ್ಯಜನಕವಾದ ವಸ್ತುಗಳನ್ನು ಕಂಡುದು

ಪಾರಿಕ್ಷಿತ! ಕಣ್ವರು ಮುಂದುವರಿದು ಹೇಳಿದರು :

"ದುರ್ಯೋಧನ! ಮಾತಲಿಯು ವರಾನ್ವೇಷಣಕ್ಕಾಗಿ ಭೂಲೋಕದ ಮೂಲಕವಾಗಿ ನಾಗಲೋಕಕ್ಕೆ ಹೋಗುತ್ತಿದ್ದಾಗ ಆತನಿಗೆ ಆಕಸ್ಮಿಕವಾಗಿ, ವರುಣನನ್ನು ಕಾಣುವ ಸಲುವಾಗಿ ಹೋಗುತ್ತಿದ್ದ ನಾರದರ ಸಮಾಗಮ ವಾಯಿತು. ಇಂದ್ರನ ಸಾರಥಿಯಾದ ಮಾತಲಿಯನ್ನು ಕಂಡೊಡನೆಯೇ ನಾರದರೇ ಮೊದಲು ಪ್ರಶ್ನಿಸಿದರು : "ನೀನೆಲ್ಲಿಗೆ ಪ್ರಯಾಣಮಾಡುತ್ತಿರುವೆ? ನಿನ್ನ ಸ್ವಂತಕಾರ್ಯದ ಸಲುವಾಗಿ ಪ್ರಯಾಣಮಾಡುತ್ತಿರುವೆಯೋ? ಅಥವಾ ದೇವೇಂದ್ರನ ಆಜ್ಞಾಧಾರಕನಾಗಿ ಪ್ರಯಾಣಮಾಡುತ್ತಿರುವೆಯೋ?"

ನಾರದರ ಆ ಪ್ರಶ್ನೆಗೆ ಮಾತಲಿಯು ಸ್ವವಿಷಯವನ್ನು ಆಮೂಲಾಗ್ರ ವಾಗಿ ಅವರಿಗೆ ತಿಳಿಯಪಡಿಸಿದನು. ವರಾನ್ವೇಷಣದ ವಿಷಯವೆಲ್ಲವನ್ನೂ ಮಾತಲಿಯು ಸವಿಸ್ತರವಾಗಿ ಹೇಳಿದನಂತರ ನಾರದರು ಅವನನ್ನು ಕುರಿತು ಹೇಳಿದರು :

"ಮಾತಲೇ! ನಾವಿಬ್ಬರೂ ಜೊತೆಗೂಡಿಯೇ ಅಲ್ಲಿಗೆ ಹೋಗೋಣ. ನಾನೂ ಸಹ ಸಲಿಲೇಶನಾದ ವರುಣನನ್ನು ಕಾಣುವ ಸಲುವಾಗಿ ದೇವಲೋಕ ದಿಂದ ಬರುತ್ತಿದ್ದೇನೆ. ನಾನು ನಿನ್ನನ್ನು ಪಾತಾಳಲೋಕಕ್ಕೆ ಕರೆದೊಯ್ದು ಅಲ್ಲಿರುವ ವಸ್ತುಗಳೆಲ್ಲವನ್ನೂ ತೋರಿಸಿ ಅವುಗಳೆಲ್ಲದರ ಪರಿಚಯವನ್ನೂ ನಿನಗೆ ಮಾಡಿಕೊಡುತ್ತೇನೆ. ಅಲ್ಲಿಯಾದರೂ ಒಬ್ಬ ಯೋಗ್ಯನಾದ ವರನನ್ನು ನೋಡಿ ಸಂತೋಷಿಸೋಣ."

ದುರ್ಯೋಧನ! ಹೀಗೆಂಬುದಾಗಿ ಮಹಾತ್ಮರಾದ ನಾರದ-ಮಾತಲಿಗಳು ಮಾತನಾಡಿಕೊಂಡು ಭೂಮಿಯೊಳಗಿಳಿದು ಅಪಾಂಪತಿಯಾದ, ಲೋಕಪಾಲನಾದ ವರುಣದೇವನನ್ನು ಸಂದರ್ಶಿಸಿದರು.

ವರುಣಲೋಕದಲ್ಲಿ ದೇವರ್ಷಿಗಳಿಗೆ ಅರ್ಹವಾದ ಸತ್ಕಾರವನ್ನು ನಾರದರು ಪಡೆದರು. ದೇವೇಂದ್ರನಿಗೆ ಅರ್ಹವಾದ ಸತ್ಕಾರವನ್ನು ಮಾತಲಿಯೂ ಪಡೆದನು. ವರುಣನು ಮಾಡಿದ ಸತ್ಕಾರದಿಂದ ಸುಪ್ರೀತರಾದ ನಾರದ-ಮಾತಲಿಗಳು ತಾವು ಬಂದ ಮುಖ್ಯೋದ್ದೇಶವನ್ನು ವರುಣನಿಗೂ ಯಥೋಚಿತವಾಗಿ ಸೂಚಿಸಿ ಅವನ ಅನುಮತಿಯನ್ನು ಪಡೆದು ನಾಗಲೋಕದಲ್ಲಿ ಸಂಚರಿಸಲುಪಕ್ರಮಿಸಿದರು. ಪಾತಾಳಲೋಕದಲ್ಲಿ ವಾಸಮಾಡುತ್ತಿದ್ದ ಸಕಲಪ್ರಾಣಿಗಳ ವಿಷಯವನ್ನೂ ನಾರದರು ತಿಳಿದವರಾಗಿದ್ದುದರಿಂದ ಇಂದ್ರನ ಸಾರಥಿಯಾದ ಮಾತಲಿಗೆ ಅಲ್ಲಿಯ ಎಲ್ಲ ವಿಷಯಗಳನ್ನೂ ಹೇಳಲುಪಕ್ರಮಿಸಿದರು.

“ಸೂತ! ಪುತ್ರ-ಪೌತ್ರರಿಂದ ಸಮಾವೃತನಾದ ವರುಣನನ್ನು ನೀನು ನೋಡಿದೆಯಲ್ಲವೇ ? ಇಲ್ಲಿ ನೋಡು. ಇದು ವರುಣನ ಸಂಪತ್ಸಮೃದ್ಧಿಯಿಂದ ಕೂಡಿರುವ ಸರ್ವತೋಭದ್ರವೆಂಬ ಹೆಸರಿನ ನಿವಾಸಸ್ಥಾನವಾಗಿದೆ. ಇಲ್ಲಿ ಕಾಣುತ್ತಿರುವವನು ಗೋಪತಿಯಾದ ವರುಣನ ಮಗನು. ಮಹಾಪ್ರಾಜ್ಞನಾಗಿರುತ್ತಾನೆ. ಉತ್ತಮಸ್ವಭಾವ, ಸದ್ವೃತ್ತಿ ಮತ್ತು ಸದಾಚಾರಗಳಲ್ಲಿ ಎಲ್ಲರನ್ನೂ ಮೀರಿಸಿದವನಾಗಿರುತ್ತಾನೆ.

**ಏಷೋಽಸ್ಯ ಪುತ್ರೋಽಭಿಮತಃ ಪುಷ್ಕರಃ ಪುಷ್ಕರೇಕ್ಷಣಃ ।**
**ರೂಪವಾನ್ದರ್ಶನೀಯಶ್ಚ ಸೋಮಪುತ್ರ್ಯಾ ವೃತಃ ಪತಿಃ ॥೧೨॥**

**ಜ್ಯೋತ್ಸ್ನಾಕಾಲೀತಿ ಯಾಮಾಹುರ್ದ್ವಿತೀಯಾಂ ರೂಪತಃ ಶ್ರಿಯಮ್ ।**
**ಅದಿತ್ಯಾಶ್ಚೈವ ಯಃ ಪುತ್ರೋ ಜ್ಯೇಷ್ಠಃ ಶ್ರೇಷ್ಠಃ ಕೃತಃ ಸ್ಮೃತಃ ॥**

ವರುಣದೇವನಿಗೆ ಅತ್ಯಂತಪ್ರಿಯಸುತನಾದ ಇವನ ಹೆಸರು ಪುಷ್ಕರ. ಹೆಸರಿಗೆ ತಕ್ಕಂತೆ ಪುಷ್ಕರೇಕ್ಷಣನೂ ಅಗಿರುತ್ತಾನೆ. ಅವನ ಕಣ್ಣುಗಳು ಕಮಲದಂತೆ ವಿಶಾಲವಾಗಿವೆ. ರೂಪವಂತನು. ಒಮ್ಮೆ ನೋಡಿದರೆ

ಮತ್ತೊಮ್ಮೆ ನೋಡಬೇಕೆನ್ನಿಸುತ್ತದೆ. ಅಷ್ಟು ಚೆಲುವನಾಗಿದ್ದಾನೆ. ಸೋಮನ ಮಗಳು ಇವನನ್ನು ಪತಿಯನ್ನಾಗಿ ವರಿಸಿದ್ದಾಳೆ. ಸೋಮನ ಎರಡನೆಯ ಮಗಳಾದ ಯಾವಳನ್ನು 'ಜ್ಯೋತ್ಸ್ನಾಕಾಲೀ' ಎಂಬುದಾಗಿ ಕರೆಯುತ್ತಾರೆಯೋ, ಯಾವಳು ರೂಪದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಗೆ ಸಮಾನಳೆನಿಸಿರುವಳೋ ಅವಳನ್ನು ಅದಿತಿಯ ಹಿರಿಯಮಗನಾದ ಸೂರ್ಯನು ವರಿಸಿದನೆಂದು ನಾವು ಕೇಳಿದ್ದೇವೆ."

(ಇಲ್ಲಿ ಬಂದಿರುವ ಜ್ಯೋತ್ಸ್ನಾಕಾಲಿಯ ವಿಷಯವಾಗಿ ಒಂದು ಜಿಜ್ಞಾಸೆಯಿದೆ. ಜ್ಯೋತ್ಸ್ನಾಕಾಲಿಯ ಪ್ರಸ್ತಾಪವೇಕೆ ಬಂತೆಂಬುದೇ ಜಿಜ್ಞಾಸೆಗೆ ಮೂಲ. ಸಂದರ್ಭಾನುಸಾರವಾಗಿ ಜ್ಯೋತ್ಸ್ನಾಕಾಲಿಯನ್ನು ಪುಷ್ಕರನ ಪತ್ನಿಯೆಂದೇ ಕೆಲವರು ಹೇಳಿರುತ್ತಾರೆ.

ಸಂಸ್ಕೃತ-ಕನ್ನಡ ನಿಘಂಟುಕಾರರು 'ಜ್ಯೋತ್ಸ್ನಾಕಾಲೀ' ಎಂಬ ಶಬ್ದಕ್ಕೆ 'ಚಂದ್ರನ ಮಗಳು. ವರುಣನ ಮಗನಾದ ಪುಷ್ಕರನ ಪತ್ನೀ' ಎಂದು ಹೇಳಿ 'ಏಷೋಽಸ್ಯ' ಎಂಬುದರಿಂದ 'ದ್ವಿತೀಯಾಂ ರೂಪತಃ ಶ್ರಿಯಮ್' ಎಂಬುವವರೆಗೆ ಮಾತ್ರ ಶ್ಲೋಕವನ್ನುದ್ಧರಿಸಿದ್ದಾರೆ. ಜ್ಯೋತ್ಸ್ನಾಕಾಲೀತಿ ಶ್ಲೋಕಕ್ಕೆ ಉತ್ತರಾರ್ಧವನ್ನು (ಅದಿತ್ಯಾಶ್ಚೈವ) ಸೇರಿಸದಿದ್ದರೆ ಉತ್ತರಾರ್ಧಕ್ಕೆ ಅರ್ಥವೇ ಆಗುವುದಿಲ್ಲ. ಉತ್ತರಾರ್ಧವನ್ನು ಸೇರಿಸಿಯೇ ಅರ್ಥಮಾಡಬೇಕಾಗಿದೆ. ಆದುದರಿಂದ ನಿಘಂಟುಕಾರರು ಉತ್ತರಾರ್ಧವನ್ನು ಬಿಟ್ಟು ಈ ಶ್ಲೋಕವನ್ನು ಏಕೆ ಉದ್ಧರಿಸಿದರೆಂಬುದಕ್ಕೆ ಕಾರಣ ತಿಳಿಯದು. ಪುರಾಣನಾಮಚೂಡಾಮಣಿಕಾರರು ಜ್ಯೋತ್ಸ್ನಾಕಾಲೀ = ಚಂದ್ರನ ಮಗಳು : ವರುಣನ ಪುತ್ರನಾದ ಪುಷ್ಕರನ ಹೆಂಡತಿ–ಎಂದೇ ನಿರೂಪಣೆಮಾಡಿರುತ್ತಾರೆ. ಇವರ ಈ ಅರ್ಥಕ್ಕೆ ಮುಖ್ಯಕಾರಣ ಸಂದರ್ಭ ಮತ್ತು ಉತ್ತರಾರ್ಧವನ್ನು ಗಮನಿಸದಿರುವುದು ; ಪುಷ್ಕರನ ಹೆಂಡತಿಯಾಗ ದಿದ್ದರೆ ಇಲ್ಲಿ ಈ ಪ್ರಕರಣವೇ ಬರುತ್ತಿರಲಿಲ್ಲವೆಂಬ ಭಾವನೆ–ಇವುಗಳು ಕಾರಣವಾಗಿವೆ. ಸಂಸ್ಕೃತ ಭಾರತದ ಆಂಗ್ಲಭಾಷಾಂತರಕಾರರು ಜ್ಯೋತ್ಸ್ನಾಕಾಲಿಯು ಪುಷ್ಕರನ ಹೆಂಡತಿಯೆಂದೇ ಅರ್ಥಮಾಡಿ ಉತ್ತರಾರ್ಧಕ್ಕೆ (ಅದಿತ್ಯಾಶ್ಚೈವ) ವಿಶೇಷಾರ್ಥವನ್ನು ಕಲ್ಪಿಸಿದ್ದಾರೆ.

Possessed of eyes like lotus leaves this Pushkara is indeed, Varuna's much loved son. Endued with great beauty and delightful to behold, he was chosen by Soma's daughter as her husband. That daughter of Soma equal in beauty unto a second Sree is known by name of Jyotsnakali. Indeed it is said that she had once before chosen the eldest and foremost of Aditi's sons as her Lord.

'ಜ್ಯೋತ್ಸ್ನಾಕಾಲಿಯು ಮೊದಲು ಜ್ಯೇಷ್ಠನೂ ಮತ್ತು ಶ್ರೇಷ್ಠನೂ ಆದ ಅದಿತಿಯ ಪುತ್ರನನ್ನು ಪತಿಯನ್ನಾಗಿ ವರಿಸಲು ನಿಶ್ಚಯಿಸಿದ್ದಳೆಂದು ನಾವು ಕೇಳಿದ್ದೇವೆ.'–ಈ ಅರ್ಥವನ್ನು ಆಂಗ್ಲಭಾಷಾಂತರಕಾರರು ಮಾಡಿರುತ್ತಾರೆ. ದ್ವಿತೀಯಾಂ ಎಂಬುದನ್ನು ಯಾವುದಕ್ಕೆ ಅನ್ವಯಿಸಿಕೊಳ್ಳ ಬೇಕೆಂಬುದು ಒಂದು ಪ್ರಶ್ನೆ.

ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿರುತ್ತಾರೆ :

**ದ್ವಿತೀಯಾಂ ಸೋಮಪುತ್ರೀಂ ತಯಾ ಅದಿತ್ಯಾಃ ಪುತ್ರಃ ಸೂರ್ಯಃ, ಶ್ರೇಷ್ಠಃ ಕೃತಃ ಭರ್ತಾ ಕೃತಃ**

ಸೋಮನ ಎರಡನೆಯ ಮಗಳಾದ ಯಾವಳನ್ನು ಜ್ಯೋತ್ಸ್ನಾಕಾಲೀ ಎಂದು ಕರೆಯುತ್ತಾರೆಯೋ ಅವಳಿಂದ ಅದಿತಿಯ ಹಿರಿಯಮಗನಾದ ಸೂರ್ಯನು ಪತಿಯಾಗಿ ವರಿಸಲ್ಪಟ್ಟನು. ಇದರಂತೆಯೇ ನಾವೂ ಇಲ್ಲಿ ಅರ್ಥ ಮಾಡಿರುತ್ತೇವೆ. ಗೋರಖಪುರದ ಗೀತಾಪ್ರೆಸ್ಸಿನವರೂ ಹೀಗೆಯೇ ಅರ್ಥ ಮಾಡಿರುತ್ತಾರೆ.

'ರೂಪತಃ ದ್ವಿತೀಯಾಂ ಶ್ರಿಯಮ್'–'ರೂಪದಲ್ಲಿ ಲಕ್ಷ್ಮಿಗೆ ಎರಡನೆಯವಳಾಗಿರತಕ್ಕ'–ಎಂದೂ ಸಹ ಅನ್ವಯವಾಗುತ್ತದೆ. ಹೀಗೆ ಅರ್ಥಮಾಡಿ ಆಂಗ್ಲಭಾಷಾಂತರಕಾರರು ಉತ್ತರಾರ್ಧಕ್ಕೆ ವಿಶೇಷಾರ್ಥವನ್ನು ಮಾಡಿರುತ್ತಾರೆ.

ನಾರದರು ಹೇಳುತ್ತಿರುವುದು ವರುಣನ ಸಂಸಾರದ ವಿಷಯ–'ವರುಣನ ಮಗನಾದ ಪುಷ್ಕರನು ಸೋಮನ ಮಗಳನ್ನು ಮದುವೆಮಾಡಿಕೊಂಡನು.' ಹೀಗೆ ಹೇಳಿದನಂತರ ಪುಷ್ಕರನ ಹೆಂಡತಿಯ ಹೆಸರನ್ನು ಹೇಳಬೇಕು. ಅದನ್ನು ಬಿಟ್ಟು ಸೋಮನ ಎರಡನೆಯ ಮಗಳ ಪ್ರಸ್ತಾಪವೇಕೆ ಬಂತು? ಪುಷ್ಕರನ ಹೆಂಡತಿಯ ಅರ್ಥಾತ್ ಸೋಮನ ಮೊದಲ ಮಗಳ ಹೆಸರು ಹೇಳದೇ ಎರಡನೆಯ ಮಗಳ ಹೆಸರೇಕೆ ಹೇಳಿದರು? ಅವಳು ಸೂರ್ಯನನ್ನು ಮದುವೆಯಾಗುವುದಕ್ಕೂ ಪ್ರಕೃತಕ್ಕೂ ಯಾವ ಸಂಬಂಧವಿದೆ?–ಈ ಕಾರಣದಿಂದಾಗಿ ಪುಷ್ಕರನ ಹೆಂಡತಿಯೇ ಜ್ಯೋತ್ಸ್ನಾಕಾಲೀ ಎಂದು ಹೇಳಲೂ ಅವಕಾಶವಿದೆ. ಹಾಗೆ ಹೇಳಿದರೆ ಉತ್ತರಾರ್ಧಕ್ಕೆ ಅರ್ಥಮಾಡುವುದು ಬಲು ಕಷ್ಟ. ಆಂಗ್ಲಭಾಷಾಂತರಕಾರರಂತೆ 'ಅದಿತಿಯ ಹಿರಿಯ ಮಗನನ್ನು ಮೊದಲವಳು ವರಿಸಲು ನಿಶ್ಚಯಿಸಿದ್ದಳು' ಎಂದು ಪುರಾಣಪ್ರಮೇಯಗಳಿಲ್ಲದೇ ಹೇಳಲಾಗುವುದಿಲ್ಲ. ಜ್ಯೋತ್ಸ್ನಾಕಾಲಿಯ ಹೆಸರು ಬೇರೆಯ ಪುರಾಣಗಳಲ್ಲಿ ಬಂದಂತೆ ಕಾಣುವುದಿಲ್ಲ. ಪುರಾಣನಾಮಚೂಡಾಮಣಿಕಾರರು ಮಹಾಭಾರತವೊಂದನ್ನೇ ಉದ್ಧರಿಸಿ ಈ ಪದವನ್ನು ಕೊಟ್ಟಿರುತ್ತಾರೆ. ಈ ಕಾರಣದಿಂದಾಗಿ ವ್ಯಾಖ್ಯಾನಕಾರರ ಅರ್ಥವೇ ಸಮಂಜಸವೆನಿಸುತ್ತದೆ. ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯವರು ಸಂಪಾದಿಸಿರುವ ಮಹಾಭಾರತದಲ್ಲಿ ಈ ಶ್ಲೋಕದ ಉತ್ತರಾರ್ಧವು ಪಾಠಭೇದದಿಂದ ಕೂಡಿದೆ :

**ಅದಿತ್ಯಸ್ಯೈವ ಗೋಃಪುತ್ರೋ ಜ್ಯೇಷ್ಠಃ ಪುತ್ರಃ ಕೃತಃ ಸ್ಮೃತಃ ।**

ಇದರಿಂದಲೂ ನಾವು ಸ್ಪಷ್ಟಾರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದುದರಿಂದ ಪ್ರಾಚೀನವಾದ ವ್ಯಾಖ್ಯೆಯನ್ನೇ ಅನುಸರಿಸುವುದು ಯುಕ್ತವಾಗಿ ಕಾಣುತ್ತದೆ.)

ನಾರದರು ಮುಂದುವರಿದು ಮಾತಲಿಯನ್ನು ಕುರಿತು ಹೇಳಿದರು :

**ಭವನಂ ವಾರುಣಂ ಪಶ್ಯ ಯದೇತತ್ಸರ್ವಕಾಞ್ಚನಮ್ ।**
**ಯತ್ಪ್ರಾಪ್ಯ ಸುರತಾಂ ಪ್ರಾಪ್ತಾಃ ಸುರಾಃ ಸುರಪತೇಃ ಸಖೇ ॥**

"ಸುರಪತಿಯಾದ ಇಂದ್ರನ ಸಖನೇ! ವರುಣದೇವನ ಈ ಭವನ

ವನ್ನಾದರೂ ನೋಡು. ಈ ಭವನವು ಸುವರ್ಣಮಯವಾಗಿದೆ. ಯಾವ ಈ ದಿವ್ಯಭವನವನ್ನು ಪ್ರವೇಶಿಸಿದ ಸುರರೆಲ್ಲರೂ (ದೇವತೆಗಳೆಲ್ಲರೂ) ಸುರತ್ವವನ್ನು (ದೇವತ್ವವನ್ನು) ಪಡೆದರೋ–ಅಂತಹ ದಿವ್ಯಭವನವನ್ನು ಸಂದರ್ಶಿಸು. (ವಾರುಣ ಎಂದರೆ ನೀರು ಅಥವಾ ಸಮುದ್ರವೂ ಆಗುತ್ತದೆ. ಸಮುದ್ರಮಥನಕಾಲದಲ್ಲಿ ಬಂದ ಸುರೆಯನ್ನು ಪ್ರತಿಗ್ರಹಿಸಿದ್ದರಿಂದ ದೇವತೆ ಗಳಿಗೆ ಸುರರೆಂದು ಹೆಸರಾಯಿತು. ಸುರೆಯನ್ನು ಪ್ರತಿಗ್ರಹಿಸದೇ ಇದ್ದುದರಿಂದ ದೈತ್ಯರಿಗೆ ಅಸುರರೆಂದು ಹೆಸರಾಯಿತು.

**ಸುರಾಪ್ರತಿಗ್ರಹಾದ್ದೇವಾಃ ಸುರಾ ಇತ್ಯಭಿವಿಶ್ರುತಾಃ ।**
**ಅಪ್ರತಿಗ್ರಹಣಾತ್ತಸ್ಯಾ ದೈತೇಯಾಶ್ಚಾಸುರಾಸ್ತಥಾ ॥** (ರಾಮಾಯಣ)

ಅರ್ಥಾತ್ ದೇವತೆಗಳು ಸಮುದ್ರದಲ್ಲಿ ಹುಟ್ಟಿದ ಸುರೆಯನ್ನು ಈ ವರುಣನ ಭವನದಲ್ಲಿ ಪಡೆದುಕೊಂಡು ಸುರರಾದರು.)

ಇದೋ ಇಲ್ಲಿ ಕಾಣುತ್ತಿವೆಯಲ್ಲಾ ದೇದೀಪ್ಯಮಾನವಾದ ಆಯುಧ ಗಳು, ಮಾತಲೇ! ಇವುಗಳೆಲ್ಲವೂ ಯುದ್ಧದಲ್ಲಿ ರಾಜ್ಯ-ಕೋಶಗಳನ್ನು ಕಳೆದು ಕೊಂಡ ದೈತ್ಯರ ಆಯುಧಗಳು. ಈ ಅಸ್ತ್ರ-ಶಸ್ತ್ರಗಳೆಲ್ಲವೂ ಅಕ್ಷಯವಾಗ ತಕ್ಕುವುಗಳು. ಪ್ರಭಾವದಿಂದ ಪ್ರಯೋಗಿಸಲ್ಪಟ್ಟ ಈ ಆಯುಧಗಳು ಶತ್ರು ಗಳನ್ನು ಸಂಹರಿಸಿ ಪುನಃ ಪ್ರಯೋಕ್ತೃವಿನ ಬಳಿಗೇ ಬಂದುಬಿಡುತ್ತಿದ್ದುವು. ದೇವತೆಗಳು ದೈತ್ಯರನ್ನು ಗೆದ್ದು ಈ ದಿವ್ಯಾಯುಧಗಳನ್ನು ತಮ್ಮ ವಶಮಾಡಿ ಕೊಂಡರು. ಈ ವರುಣಾಲಯದಲ್ಲಿ ಅನೇಕ ರಾಕ್ಷಸರು ಮತ್ತು ದೈತ್ಯರು ನಿವಾಸಮಾಡಿಕೊಂಡಿದ್ದರು. ಪೂರ್ವದೇವತೆಗಳಿಂದ ಎಂದರೆ ದೈತ್ಯರಿಂದ ನಿರ್ಮಿತವಾದ ಅನೇಕಾನೇಕ ದಿವ್ಯಾಸ್ತ್ರಗಳೂ ಇಲ್ಲಿದ್ದುವು. ವರುಣದೇವನ ಈ ಸರೋವರದಲ್ಲಿ ಮಹಾಜ್ವಾಲೆಯಿಂದ ಕೂಡಿರುವ ಅಗ್ನಿದೇವನು ಸರ್ವದಾ ಜಾಗ್ರತನಾಗಿಯೇ ಇರುತ್ತಾನೆ. ಧೂಮರಹಿತನಾದ ಈ ಯಜ್ಞೇಶ್ವರನಿಂದ ವಿಷ್ಣುವಿನ ಚಕ್ರವೂ ಇಲ್ಲಿ ನಿರೋಧಿಸಲ್ಪಡುತ್ತದೆ. ಅರ್ಥಾತ್ ಇಲ್ಲಿ ಸರ್ವಾ ಯುಧಗಳಿಗೂ ಶ್ರೇಷ್ಠವೆನಿಸಿದ ವಿಷ್ಣುಚಕ್ರದ ಭಯವೂ ಇರುವುದಿಲ್ಲ.

**ಏಷ ಗಾಣ್ಡೀಮಯಶ್ಚಾಪೋ ಲೋಕಸಂಹಾರಸಮ್ಭೃತಃ ।**
**ರಕ್ಷ್ಯತೇ ದೈವತೈರ್ನಿತ್ಯಂ ಯತಸ್ತದ್ಗಾಣ್ಡಿವಂ ಧನುಃ ॥೧೯॥**

ಇಲ್ಲಿ ನೋಡು, ಮಾತಲೇ! ಈ ಧನುಸ್ಸು ಗಾಂಡೀಮಯವಾಗಿರುವುದರಿಂದ, (ವಜ್ರದ) ಗ್ರಂಥಿಗಳಿಂದ ಕೂಡಿರುವುದರಿಂದ ಅಥವಾ ಗಾಂಡೀಖಡ್ಗವೆಂಬ ಮೃಗದ ಮೂಳೆಗಳಿಂದ ನಿರ್ಮಿತವಾಗಿರುವುದರಿಂದ ಈ ಧನುಸ್ಸಿಗೆ ಗಾಂಡೀವಧನುಸ್ಸೆಂಬ ಹೆಸರು ಬಂದಿದೆ. ಈ ಧನುಸ್ಸು ಲೋಕಸಂಹಾರಾರ್ಥವಾಗಿಯೇ ನಿರ್ಮಿತವಾಗಿದೆ. ಆದುದರಿಂದಲೇ ಇದು ನಿತ್ಯವೂ ದೇವತೆಗಳಿಂದ ರಕ್ಷಿಸಲ್ಪಡುತ್ತಿದೆ.

**ಏಷ ಕೃತ್ಯೇ ಸಮುತ್ಪನ್ನೇ ತತ್ತದ್ಧಾರಯತೇ ಬಲಮ್ ।**
**ಸಹಸ್ರಶತಸಂಖ್ಯೇನ ಪ್ರಾಣೇನ ಸತತಂ ಧ್ರುವಃ ॥೨೦॥**

ಈ ಧನುಸ್ಸು ಮಹತ್ತ್ವಪೂರ್ಣವಾದುದು, ಮಾತಲೇ! ಅಭೇದ್ಯವಾದುದನ್ನೂ ಭೇದಿಸಬೇಕಾದ ಸಂದರ್ಭವೊದಗಿದಾಗ ಅದಕ್ಕನುಗುಣವಾಗಿ ಈಗಿರುವ ಬಲಕ್ಕಿಂತಲೂ ಲಕ್ಷಪಟ್ಟು ಹೆಚ್ಚಾದ ಬಲವನ್ನು ಸ್ವತಃ ಇದು ಪಡೆದುಕೊಳ್ಳುತ್ತದೆ ಮತ್ತು ಯಾವಾಗಲೂ ಸುಸ್ಥಿರವಾಗಿರುತ್ತದೆ. ಈ ಧನುಸ್ಸಿಗೆ ನಾಶವೆಂಬುದೇ ಇಲ್ಲ.

ರಾಕ್ಷಸಸದೃಶರಾದ ರಾಜರಲ್ಲಿ ದಂಡನೆಗೆ ಶಕ್ಯರಲ್ಲದವರನ್ನೂ ಈ ಧನುಸ್ಸು ದಂಡಿಸುತ್ತದೆ, ಮಾತಲೇ! ಈ ಪ್ರಚಂಡಧನುಸ್ಸು ಮೊದಲು ಬ್ರಹ್ಮವಾದಿಯಾದ ಬ್ರಹ್ಮನಿಂದಲೇ ಸೃಷ್ಟಿಸಲ್ಪಟ್ಟಿತು. ಚಕ್ರದಂತೆ ಭಾಸಮಾನವಾಗಿರುವ ಈ ಧನುಸ್ಸು ರಾಜರಿಗೆ ಮಹಾಶಸ್ತ್ರರೂಪವಾಗಿದೆ. ಪರಮಾಭ್ಯುದಯಕಾರಿಯಾದ ಈ ಧನುಸ್ಸನ್ನು ಸಮುದ್ರರಾಜನಾದ ವರುಣನ ಮಕ್ಕಳು ಧರಿಸಿರುತ್ತಾರೆ. ಇಲ್ಲಿ ನೋಡು, ಮಾತಲೇ! ಇದು ವರುಣನ ಛತ್ರ (ಛತ್ರಿ). ಇದನ್ನಿಡುವ ಸಲುವಾಗಿಯೇ ನಿರ್ಮಿಸಿರುವ ಈ ಛತ್ರಗೃಹದಲ್ಲಿದು ಉಪಸ್ಥಿತವಾಗಿದೆ. ಮೇಘದೋಪಾದಿಯಲ್ಲಿ ಈ ಛತ್ರವು ತನ್ನ ಸುತ್ತಲೂ ಶೀತಲವಾದ ನೀರನ್ನು ಯಾವಾಗಲೂ ಸುರಿಸುತ್ತಿರುತ್ತದೆ. ಚಂದ್ರನಂತೆ ನಿರ್ಮಲವಾಗಿರುವ ನೀರು ಸುತ್ತಲೂ ಸುರಿಯುತ್ತಿರುತ್ತದೆ. ಛತ್ರಿಯೊಳಗೆ ಇರುವವರಿಗೆ ಇದೇ ನೀರು ತೆರೆಯ ರೂಪದಲ್ಲಿರುತ್ತದೆ. ಕತ್ತಲೆಯಿಂದ ಆವೃತವಾಗಿರುವಂತೆ ಭಾಸವಾಗುತ್ತದೆ. ಈ ಕಾರಣದಿಂದಾಗಿ ಛತ್ರಿಯೊಳಗಿದ್ದವರಿಗೆ ಹೊರಗಡೆ ಇರುವವರ ದರ್ಶನವಾಗುವುದಿಲ್ಲ. ಹೊರ

ಗಡೆಯಿಂದ ನೋಡುವವರಿಗೂ ಛತ್ರಿಯೊಳಗೆ ಯಾರಿದ್ದಾರೆಂಬುದು ತಿಳಿಯುವುದಿಲ್ಲ. ಹೀಗೆಯೇ ಇನ್ನೂ ಅನೇಕವಾದ ಅದ್ಭುತದೃಶ್ಯಗಳೆಲ್ಲವನ್ನೂ ನೋಡುವುದಿದೆ. ಆದರೆ ಅವುಗಳೆಲ್ಲವನ್ನೂ ನೋಡುತ್ತಾ ಕುಳಿತರೆ ನಿನ್ನ ಕಾರ್ಯಕ್ಕೆ ತಡೆಯುಂಟಾಗುತ್ತದೆ. ಆದುದರಿಂದ ಈ ಕೂಡಲೇ ಮುಂದೆ ಪ್ರಯಾಣ ಮಾಡೋಣ. ಆಗಬಹುದಲ್ಲವೇ?”

೯೮ನೆಯ ಅಧ್ಯಾಯವು ಮುಗಿಯಿತು.

೯೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಮಾತಲಿಯು ನಾರದರೊಡನೆ ಪಾತಾಳಲೋಕವನ್ನು ಸಂದರ್ಶಿಸಿದುದು

ನಾರದರು ಮುಂದುವರಿದು ಹೇಳುತ್ತಾರೆ :

“ಮಾತಲೇ! ದೈತ್ಯ-ದಾನವನಿಷೇವಿತವಾದ, ಪಾತಾಳವೆಂದು ವಿಖ್ಯಾತವಾಗಿರುವ ಈ ಪ್ರದೇಶವು ನಾಗಲೋಕದ ನಾಭೀಸ್ಥಾನದಲ್ಲಿ (ಮಧ್ಯಭಾಗದಲ್ಲಿ) ಉಪಸ್ಥಿತವಾಗಿದೆ. ಭೂಲೋಕದಲ್ಲಿರುವ ಯಾವುದಾದರೂ ಪ್ರಾಣಿಗಳು ನೀರಿನ ಪ್ರವಾಹದೊಡನೆ ಸೇರಿ ಈ ಪಾತಾಳಲೋಕವನ್ನು ಪ್ರವೇಶಮಾಡಿದ್ದೇ ಆದರೆ, ಅವುಗಳು ಭಯದಿಂದ ಪೀಡಿತವಾಗಿ ಗಟ್ಟಿಯಾಗಿ ಚೀತ್ಕಾರಮಾಡುತ್ತವೆ. ಇಲ್ಲಿಯೇ ಸರ್ವದಾ ಜಲಪಾನಮಾಡುತ್ತಿರುವ ಅಸುರಾಗ್ನಿಯು (ಬಡಬಾಗ್ನಿಯು) ಸರ್ವದಾ ಪ್ರಜ್ವಲಿಸುತ್ತಿರುತ್ತಾನೆ. ಇವನೇನಾದರೂ ವಿಚಲಿತನಾದರೆ ಸಮುದ್ರವನ್ನೇ ಶೋಷಿಸಬಹುದೆಂಬ, ಪ್ರಪಂಚವನ್ನೇ ದಹಿಸಿಬಿಡಬಹುದೆಂಬ ಭಯದಿಂದ ಪ್ರಯತ್ನಪೂರ್ವಕವಾಗಿ ಈ ಬಡಬಾಗ್ನಿಯನ್ನಿಲ್ಲಿ ಸ್ಥಾಪಿಸಲಾಗಿದೆ. ಇದರಿಂದ ಬಡಬಾಗ್ನಿಯು ‘ತಾನಿಲ್ಲಿ ಬಂಧಿತನಾಗಿರುವೆನು ; ದೇವತೆಗಳು ತನ್ನನ್ನಿಲ್ಲಿ ಬಂಧಿಸಿಬಿಟ್ಟಿದ್ದಾರೆ’–ಎಂದೇ ಭಾವಿಸಿದ್ದಾನೆ.

**ಅತ್ರಾಮೃತಂ ಸುರೈಃ ಪೀತ್ವಾ ನಿಹಿತಂ ನಿಹತಾರಿಭಿಃ ।**
**ಅತಃ ಸೋಮಸ್ಯ ಹಾನಿಶ್ಚ ವೃದ್ಧಿಶ್ಚೈವ ಪ್ರದೃಶ್ಯತೇ ॥೪॥**

ದೇವತೆಗಳು ತಮ್ಮ ಶತ್ರುಗಳನ್ನು ಸಂಹರಿಸಿ ಅಮೃತಪಾನಮಾಡಿ

ಅವಶಿಷ್ಟವನ್ನು ಇಲ್ಲಿಯೇ ಇಟ್ಟಿರುತ್ತಾರೆ. ಈ ಕಾರಣದಿಂದಲೇ ಸೋಮನ ವೃದ್ಧಿ ಮತ್ತು ಕ್ಷಯಗಳು ಪ್ರಪಂಚಕ್ಕೆ ಗೋಚರವಾಗುತ್ತವೆ. (ಅಮೃತ ಎಂದರೆ ಚಂದ್ರ ಎಂದೂ ಅರ್ಥವಾಗುತ್ತದೆ. ಚಂದ್ರನಿಗೆ ಅಮೃತಾಂಶು ಎಂದೂ ಹೆಸರು. ಅಮೃತಸೂಃ 'ಅಮೃತವನ್ನು ಹಡೆಯುತ್ತಾನೆ' ಎಂಬುದಾಗಿಯೂ ಇವನಿಗೆ ಹೆಸರಿದೆ. ಇವನು ಅಮೃತಾಂಶುವಾದುದರಿಂದ ಅವನ ಅಮೃತಮಯವಾದ ಕಿರಣಗಳನ್ನು ದೇವತೆಗಳು ಕೃಷ್ಣಪಕ್ಷದಲ್ಲಿ ಅನುಕ್ರಮ ವಾಗಿ ತಿನ್ನುತ್ತಾರೆಂಬುದು ಪುರಾಣಪ್ರಸಿದ್ಧವಾಗಿದೆ. ಕೃಷ್ಣಪಕ್ಷದ ಪಾಡ್ಯ ಮಿಯ ಮೊದಲುಗೊಂಡು ಹದಿನೈದುದಿನಗಳಲ್ಲಿ ಅಗ್ನಿಯೇ ಮೊದಲಾದ ಹದಿ ನೈದು ದೇವತೆಗಳು ಅಮೃತಮಯವಾದ ಚಂದ್ರನ ಕಲೆಗಳನ್ನು ಪಾನ ಮಾಡುವುದರಿಂದ ಚಂದ್ರನ ಕಲೆಗಳು ಕ್ರಮೇಣ ಕಡಿಮೆಯಾಗುತ್ತಾ ಬಂದು ಪುನಃ ಪಕ್ಷಾಂತ್ಯದಲ್ಲಿ ಯಾಗಗಳಲ್ಲಿ ಹುತವಾದ ಹವಿಸ್ಸುಗಳು ಅಮೃತರೂಪ ದಿಂದ ಕ್ರಮೇಣ ಕಲೆಗಳಾಗಿ ಚಂದ್ರನನ್ನು ಸೇರುವುವು. ಹೀಗೆ ಅಮಾವಾಸ್ಯೆಯ ವರೆಗೂ ಕಲೆಗಳು ಕ್ಷಯಹೊಂದಿ ಪೂರ್ಣಿಮೆಯ ವೇಳೆಗೆ ತುಂಬಿಕೊಂಡು ಚಂದ್ರಬಿಂಬವು ಪೂರ್ಣವಾಗುವುದು.

ಪ್ರಥಮಾಂ ಪಿಬತೇ ವಹ್ನಿಃ ದ್ವಿತೀಯಾಂ ಪಿಬತೇ ರವಿಃ ।
ವಿಶ್ವೇದೇವಾಸ್ತೃತೀಯಾಂ ತು ಚತುರ್ಥೀಂ ಸಲಿಲಾಧಿಪಃ ॥

ಪಞ್ಚಮೀಂ ತು ವಷಟ್ಕಾರಃ ಷಷ್ಠೀಂ ಪಿಬತಿ ವಾಸವಃ ।
ಸಪ್ತಮೀಮೃಷಯೋ ದಿವ್ಯಾ ಅಷ್ಟಮೀಮಜ ಏಕಪಾತ್ ॥

ನವಮೀಂ ಕೃಷ್ಣಪಕ್ಷೇಽಸ್ಯ ಯಮಃ ಪ್ರಾಶ್ನಾತಿ ವೈ ಕಲಾಮ್ ।
ದಶಮೀಂ ಪಿಬತೇ ವಾಯುಃ ಪಿಬತ್ಯೇಕಾದಶೀಮುಮಾ ॥

ದ್ವಾದಶೀಂ ಪಿತರಃ ಸರ್ವೇ ಸಮಂ ಪ್ರಾಶ್ನನ್ತಿ ಭಾಗಶಃ ।
ತ್ರಯೋದಶೀಂ ಧನಾಧ್ಯಕ್ಷಃ ಕುಬೇರಃ ಪಿಬತೇ ಕಲಾಮ್ ॥

ಚತುರ್ದಶೀಂ ಪಶುಪತಿಃ ಪಞ್ಚದಶೀಂ ಪ್ರಜಾಪತಿಃ ।
ನಿಷ್ಪೀತಃ ಕಲಯಾ ಶೇಷಶ್ಚನ್ದ್ರಮಾ ನ ಪ್ರಕಾಶತೇ ॥

**ಕಲಾ ಷೋಡಶಿಕಾ ಯಾ ಸಾ ತ್ವಪಃ ಪ್ರವಿಶತೇ ಸದಾ ।**
**ಅಮಾಯಾಂ ತು ಸದಾ ಸೋಮ ಓಷಧೀಃ ಪ್ರತಿಪದ್ಯತೇ ॥**

**ತಮೋಷಧಿಗತಂ ಗಾವಃ ಪಿಬತ್ಯಮ್ಬುಗತಂ ಚ ಯತ್ ।**
**ತತ್ ಕ್ಷೀರಮಮೃತಂ ಭೂತ್ವಾ ಮನ್ತ್ರಪೂತಂ ದ್ವಿಜಾತಿಭಿಃ ॥**

**ಹುತಮಗ್ನಿಷು ಯಜ್ಞೇಷು ಪುನರಾಪ್ಯಾಯತೇ ಶಶೀ ।**
**ದಿನೇ ದಿನೇ ಕಲಾವೃದ್ಧಿಃ ಪೌರ್ಣಮಾಸ್ಯಾಂ ತು ಪೂರ್ಣತಾ ॥**

ಮೊದಲನೆಯ ಕಲೆಯನ್ನು ಅಗ್ನಿಯು ಕುಡಿಯುತ್ತಾನೆ. ಎರಡನೆಯ ದಿವಸ ಎರಡನೆಯ ಕಲೆಯನ್ನು ಸೂರ್ಯನು ಕುಡಿಯುತ್ತಾನೆ. ಮೂರನೆಯ ದಿವಸ ಮೂರನೆಯ ಕಲೆಯನ್ನು ಅರ್ಥಾತ್ ಅಮೃತಭಾಗವನ್ನು ವಿಶ್ವೇದೇವರು ಕುಡಿಯುತ್ತಾರೆ. ನಾಲ್ಕನೆಯ ದಿವಸ ನಾಲ್ಕನೆಯ ಕಲಾಭಾಗವನ್ನು ವರುಣನೂ, ಐದನೆಯ ದಿವಸ ಐದನೆಯ ಕಲಾಭಾಗವನ್ನು ವಷಟ್ಕಾರನೂ, ಆರನೆಯ ದಿವಸ ಆರನೆಯ ಕಲಾಭಾಗವನ್ನು ಇಂದ್ರನೂ, ಏಳನೆಯ ದಿವಸ ಏಳನೆಯ ಕಲಾಭಾಗವನ್ನು ದೇವರ್ಷಿಗಳೂ, ಎಂಟನೆಯ ದಿವಸ ಎಂಟನೆಯ ಕಲಾಭಾಗವನ್ನು ಅಜ ಏಕಪಾತ್ ಎಂಬುವನೂ, ಒಂಬತ್ತನೆಯ ದಿವಸ ಒಂಬತ್ತನೆಯ ಕಲಾಭಾಗವನ್ನು ಯಮನೂ, ಹತ್ತನೆಯ ದಿವಸ ಹತ್ತನೆಯ ಕಲಾಭಾಗವನ್ನು ವಾಯುವೂ, ಏಕಾದಶಿಯ ದಿವಸ ಹನ್ನೊಂದನೆಯ ಕಲಾ ಭಾಗವನ್ನು ಎಲ್ಲ ಪಿತೃದೇವತೆಗಳೂ ಸಮವಾಗಿ ಹಂಚಿಕೊಂಡು ತಿನ್ನುತ್ತಾರೆ. ತ್ರಯೋದಶಿಯ ದಿವಸ ಹದಿಮೂರನೆಯ ಕಲಾಭಾಗವನ್ನು ಧನಾಧ್ಯಕ್ಷನಾದ ಕುಬೇರನೂ, ಚತುರ್ದಶಿಯ ದಿವಸ ಹದಿನಾಲ್ಕನೆಯ ಕಲಾಭಾಗವನ್ನು ಪಶು ಪತಿಯೂ, ಅಮಾವಾಸ್ಯೆಯ ದಿವಸ ಹದಿನೈದನೆಯ ಕಲಾಭಾಗವನ್ನು ಪ್ರಜಾ ಪತಿಯೂ ತಿನ್ನುತ್ತಾರೆ. ಒಂದೇ ಒಂದು ಕಲೆಯಿಂದ ಕೂಡಿರುವ ಚಂದ್ರನು ಅಂದು (ಅಮಾವಾಸ್ಯೆಯಂದು) ಪ್ರಕಾಶಿಸುವುದಿಲ್ಲ. ಆ ಸಮಯದಲ್ಲಿ ಉಳಿ ದಿರುವ ಹದಿನಾರನೆಯ ಕಲೆಯೂ ಸಹ ಅಂಬುಧಿಯ ನೀರನ್ನು ಪ್ರವೇಶಿಸು ತ್ತದೆ. ಅಮಾವಾಸ್ಯೆಯಲ್ಲಿ ಚಂದ್ರನು ಓಷಧಿಲತೆಗಳೊಡನೆ ಸೇರಿರುತ್ತಾನೆ. ಹದಿನಾರನೆಯ ಕಲೆಯಿಂದ ಕೂಡಿರುವ ನೀರನ್ನೂ ಮತ್ತು ಚಂದ್ರನಿಂದ ಕೂಡಿ

ರುವ ಓಷಧಿಲತೆಗಳನ್ನೂ ಹಸುಗಳು ಕುಡಿದು ಮತ್ತು ತಿಂದು ಅಮೃತಕ್ಕೆ ಸಮಾನವಾದ ಹಾಲನ್ನು ಕೊಡುತ್ತವೆ. ಅದೇ ಹಾಲು ತುಪ್ಪವಾಗಿ, ಮಂತ್ರ ಪೂತವಾಗಿ ಬ್ರಾಹ್ಮಣರಿಂದ ಯಜ್ಞ-ಯಾಗಾದಿಗಳಲ್ಲಿ ಹೋಮದ್ರವ್ಯವಾಗಿ ಉಪಯೋಗಿಸಲ್ಪಡುತ್ತದೆ. ಈ ಕಾರಣದಿಂದ ನಶಿಸಿಹೋದ ಸೋಮನ ಕಲೆಗಳು ದಿನ-ದಿನಕ್ಕೂ ಅನುಕ್ರಮವಾಗಿ ವೃದ್ಧಿಹೊಂದಿ ಪೂರ್ಣಿಮೆಯ ವೇಳೆಗೆ ಚಂದ್ರನು ಷೋಡಶಕಲಾಪೂರ್ಣನಾಗುತ್ತಾನೆ.)

**ಅತ್ರಾದಿತ್ಯೋ ಹಯಶಿರಾಃ ಕಾಲೇ ಪರ್ವಣಿ ಪರ್ವಣಿ ।**
**ಉತ್ತಿಷ್ಠತಿ ಸುವರ್ಣಾಖ್ಯೋ ವಾಗ್ಭಿರಾಪೂರಯಞ್ಜಗತ್ ॥೫॥**

ಇಲ್ಲಿಯೇ ಅದಿತಿಯ ಮಗನಾದ ಮಹಾವಿಷ್ಣುವು ಹಯಗ್ರೀವ ನಾಮಾಂಕಿತನಾಗಿ, ಸುವರ್ಣಕ್ಕೆ ಸಮನಾದ ಕಾಂತಿಯಿಂದ ಕೂಡಿದವನಾಗಿ, ಪರ್ವಕಾಲಗಳಲ್ಲಿ ವೇದಘೋಷಗಳಿಂದ ಜಗತ್ತನ್ನು ತುಂಬುತ್ತಾ ಎದ್ದುನಿಲ್ಲುತ್ತಾನೆ.

**ಯಸ್ಮಾದಲಂ ಸಮಸ್ತಾಸ್ತಾಃ ಪತನ್ತಿ ಜಲಮೂರ್ತಯಃ ।**
**ತಸ್ಮಾತ್ಪಾತಾಲಮಿತ್ಯೇವ ಖ್ಯಾಯತೇ ಪುರಮುತ್ತಮಮ್ ॥೬॥**

ಯಾವ ಕಾರಣದಿಂದ ಈಶ್ವರನೇ ಮೊದಲಾದ ಸಮಸ್ತಜಲಮೂರ್ತಿಗಳೂ–ಪತನ್ತಿ ಅಲಂ–ಪುನಃ ಪುನಃ ಬೀಳುತ್ತಾರೆಯೋ (ಪರ್ಯಾಪ್ತವಾಗಿ ನೀರನ್ನು ಸುರಿಸುತ್ತಾರೆಯೋ) ಆ ಕಾರಣದಿಂದಾಗಿ ಈ ಉತ್ತಮೋತ್ತಮವಾದ ಪಟ್ಟಣವು ಪಾತಾಲವೆಂಬ ಖ್ಯಾತಿಯನ್ನು ಪಡೆದಿದೆ. (ಯಸ್ಮಾದತ್ರ ಎಂಬ ಪಾಠದ ರೀತ್ಯಾ: ಯಾವ ಕಾರಣದಿಂದ ಇಲ್ಲಿ ಎಲ್ಲ ಜಲಮೂರ್ತಿಗಳೂ ಬೀಳುತ್ತಾರೆಯೋ–ಆ ಕಾರಣದಿಂದ ಇದು ಪಾತಾಲವೆಂದು ಪ್ರಖ್ಯಾತವಾಗಿದೆ.)

**ಐರಾವಣೋಽಸ್ಮಾತ್ಸಲಿಲಂ ಗೃಹೀತ್ವಾ ಜಗತೋ ಹಿತಃ ।**
**ಮೇಘೇಷ್ವಾಮುಞ್ಚತೇ ಶೀತಂ ಯನ್ಮಹೇನ್ದ್ರಃ ಪ್ರವರ್ಷತಿ ॥೭॥**

ಪ್ರಪಂಚಕ್ಕೆ ಹಿತಕರವಾದ, ಸಮುದ್ರದಲ್ಲಿಯೇ ಹುಟ್ಟಿದ ಐರಾವಣ ಅಥವಾ ಐರಾವತವೆಂಬ ಆನೆಯು ಇಲ್ಲಿಂದಲೇ ಶೀತೋದಕವನ್ನು ತೆಗೆದುಕೊಂಡು (ಹೀರಿಕೊಂಡು) ಮೇಘಗಳಲ್ಲಿ ಬಿಡುತ್ತದೆ. ಇದೇ ಸಮುದ್ರದ

ನೀರನ್ನು ದೇವೇಂದ್ರನು ಮೇಘಗಳ ಮೂಲಕವಾಗಿ ಪ್ರಪಂಚದ ಮೇಲೆ ಮಳೆಯ ರೂಪದಲ್ಲಿ ಸುರಿಸುತ್ತಾನೆ. ಇಲ್ಲಿ ನಾನಾವಿಧವಾದ ಆಕಾರಗಳುಳ್ಳ ಮತ್ತು ನಾನಾರೂಪಗಳುಳ್ಳ ಜಲಚರಗಳಾದ ತಿಮಿ-ತಿಮಿಂಗಿಲಗಳು ನೀರಿನಲ್ಲಿರುವ ಚಂದ್ರನ ಕಿರಣಗಳನ್ನು ಕುಡಿಯುತ್ತಾ ವಾಸಮಾಡುತ್ತಿವೆ.

**ಅತ್ರ ಸೂರ್ಯಾಂಶುಭಿರ್ಭಿನ್ನಾಃ ಪಾತಾಲತಲಮಾಶ್ರಿತಾಃ ।**
**ಮೃತಾ ಹಿ ದಿವಸೇ ಸೂತ ಪುನರ್ಜೀವನ್ತಿ ವೈ ನಿಶಿ ॥೯॥**

ಪಾತಾಲತಲದಲ್ಲಿ ವಾಸಮಾಡುವ ಜೀವಜಂತುಗಳು ಹಗಲಿನಲ್ಲಿ ಸೂರ್ಯನ ತೀಕ್ಷ್ಣಕಿರಣಗಳಿಂದ ಪರಿತಪ್ತವಾಗಿ ಮೃತಪ್ರಾಯಗಳಾಗಿರುತ್ತವೆ. ರಾತ್ರಿಯಾದೊಡನೆಯೇ ಅಮೃತಮಯವಾದ ಚಂದ್ರನ ಕಿರಣಗಳ ಸಂಪರ್ಕದಿಂದ ಪುನಃ ಜೀವಿಸುತ್ತವೆ.

**ಉದಯನ್ನಿತ್ಯಶಶ್ಚಾತ್ರ ಚನ್ದ್ರಮಾ ರಶ್ಮಿಬಾಹುಭಿಃ ।**
**ಅಮೃತಂ ಸ್ಪೃಶ್ಯ ಸಂಸ್ಪರ್ಶಾತ್ಸಂಜೀವಯತಿ ದೇಹಿನಃ ॥೧೦॥**

ಪ್ರತಿನಿತ್ಯವೂ ಚಂದ್ರನು ಉದಯಿಸಿದೊಡನೆಯೇ ರಶ್ಮಿಗಳೆಂಬ ತನ್ನ ಬಾಹುಗಳಿಂದ ನೀರಿನಲ್ಲಿರುವ ಅಮೃತವನ್ನು ಸ್ಪರ್ಶಿಸಿ (ತನ್ಮೂಲಕವಾಗಿ ತನ್ನ ಕಿರಣಗಳನ್ನು ಅಮೃತಮಯವನ್ನಾಗಿ ಮಾಡಿಕೊಂಡು) ಅಮೃತಮಯವಾದ ರಶ್ಮಿಗಳಿಂದ, ಸೂರ್ಯನ ತೀಕ್ಷ್ಣಕಿರಣಗಳಿಂದ ಪರಿತಪಿಸಿ ಪ್ರಾಣತೊರೆದ ಪ್ರಾಣಿಗಳನ್ನು ಸಂಸ್ಪರ್ಶಿಸಿ ಪುನಃ ಬದುಕಿಸುತ್ತಾನೆ. (ಜೀವಯುಕ್ತವನ್ನಾಗಿ ಮಾಡುತ್ತಾನೆ.)

ಇಂದ್ರನಿಂದ ಅಪಹೃತಸಂಪದರಾದ, ಅಧರ್ಮನಿರತರಾದ ದೈತ್ಯರು ಕಾಲ ಪರವಶರಾಗಿ ಮತ್ತು ಕಾಲನಿಂದ ಪೀಡಿತರಾಗಿ ಈ ಪಾತಾಲತಲದಲ್ಲಿ ನಿವಾಸ ಮಾಡುತ್ತಿದ್ದಾರೆ.

**ಅತ್ರ ಭೂತಪತಿರ್ನಾಮ ಸರ್ವಭೂತಮಹೇಶ್ವರಃ ।**
**ಭೂತಯೇ ಸರ್ವಭೂತಾನಾಮಚರತ್ತಪ ಉತ್ತಮಮ್ ॥೧೨॥**

ಸರ್ವಭೂತಮಹೇಶ್ವರನು ಈ ಪಾತಾಲಲೋಕದಲ್ಲಿಯೇ ಭೂತಪತಿ ಎಂಬ ಹೆಸರಿನಿಂದ ಸಕಲಪ್ರಾಣಿಗಳ ಕಲ್ಯಾಣಾರ್ಥವಾಗಿ ಉತ್ತಮೋತ್ತಮವಾದ ತಪಸ್ಸುಮಾಡಿದನು.

**ಅತ್ರ ಗೋವ್ರತಿನೋ ವಿಪ್ರಾಃ ಸ್ವಾಧ್ಯಾಯಾಮ್ನಾಯಕರ್ಶಿತಾಃ ।**
**ತ್ಯಕ್ತಪ್ರಾಣಾ ಜಿತಸ್ವರ್ಗಾ ನಿವಸನ್ತಿ ಮಹರ್ಷಯಃ ॥೧೩॥**

ನಿರಂತರವೂ ವೇದಗಳ ಪುನರಾವರ್ತನೆಯಿಂದ ಬಹುಕೃಶರಾದ, ಪ್ರಾಣತ್ಯಾಗಕ್ಕೂ ಸಿದ್ಧರಾದ, ತಪಸ್ಸಿನಿಂದ ಸ್ವರ್ಗವನ್ನು ಜಯಿಸಿರುವ, ಗೋವ್ರತಿಗಳಾದ ಮತ್ತು ಮಹರ್ಷಿಗಳಾದ ವಿಪ್ರರು ಇಲ್ಲಿ ವಾಸಮಾಡುತ್ತಾರೆ.

**ಯತ್ರ ತತ್ರ ಶಯೋ ನಿತ್ಯಂ ಯೇನ ಕೇನಚಿದಾಶಿತಃ ।**
**ಯೇನ ಕೇನಚಿದಾಚ್ಛನ್ನಃ ಸ ಗೋವ್ರತ ಇಹೋಚ್ಯತೇ ॥೧೪॥**

ಎಲ್ಲೆಂದರಲ್ಲಿ ಮಲಗುವುದು ; ಏನು ಸಿಕ್ಕಿದರೆ ಅದನ್ನೇ ತಿನ್ನುವುದು ಮತ್ತು ಯಾವುದು ಸಿಕ್ಕಿದರೆ ಅದನ್ನೇ ಹೊದೆದುಕೊಂಡು ಮಲಗುವುದು–ಹೀಗೆ ಮಾಡುವುದಕ್ಕೆ ಗೋವ್ರತವೆಂದೂ, ಹೀಗೆ ಮಾಡುವವರನ್ನು ಗೋವ್ರತಿಗಳೆಂದೂ ಇಲ್ಲಿ ಹೇಳುತ್ತಾರೆ.

**ಐರಾವಣೋ ನಾಗರಾಜೋ ವಾಮನಃ ಕುಮುದೋಽಞ್ಜನಃ ।**
**ಪ್ರಸೂತಾಃ ಸುಪ್ರತೀಕಸ್ಯ ವಂಶೇ ವಾರಣಸತ್ತಮಾಃ ॥೧೫॥**

ಸುಪ್ರತೀಕನ ವಂಶದಲ್ಲಿ ನಾಗರಾಜನಾದ ಐರಾವಣ, ವಾಮನ, ಕುಮುದ ಮತ್ತು ಅಂಜನ–ಎಂಬ ಗಜಶ್ರೇಷ್ಠರು ಹುಟ್ಟಿರುತ್ತಾರೆ. ಮಾತಲೇ! ಇಲ್ಲೇನಾದರೂ ನಿನ್ನ ಮಗಳಿಗೆ ಅನುರೂಪನಾದ ವರನಿದ್ದಾನೆಯೇ ಎಂಬುದನ್ನು ನೋಡಿ ಹೇಳು. ನಿನ್ನ ಮನಸ್ಸಿಗೆ ಹಿಡಿಸಿರುವ ವರನು ಯಾವನಾದರೂ ಆಗಿರಲಿ–ನಾನೇ ಅವನಲ್ಲಿಗೆ ಪ್ರಯತ್ನಪೂರ್ವಕವಾಗಿ ಹೋಗಿ ನಿನ್ನ ಮಗಳನ್ನು ಮದುವೆಮಾಡಿಕೊಳ್ಳುವಂತೆ ಅವನಿಗೆ ಹೇಳುತ್ತೇನೆ.

**ಅಣ್ಡಮೇತಜ್ಜಲೇ ನ್ಯಸ್ತಂ ದೀಪ್ಯಮಾನಮಿವ ಶ್ರಿಯಾ ।**
**ಅಪ್ರಜಾನಾಂ ನಿಸರ್ಗಾದ್ವೈ ನೋದ್ಭಿದ್ಯತಿ ನ ಸರ್ಪತಿ ॥೧೬॥**

ಮಾತಲೇ! ಈ ನೀರಿನಲ್ಲಿ ವಿಚಿತ್ರವಾದೊಂದು ಅಂಡವು ಇಡಲ್ಪಟ್ಟಿದೆ. ತನ್ನದೇ ಆದ ಕಾಂತಿಯಿಂದಲೋ ಎಂಬಂತೆ ದೇದೀಪ್ಯಮಾನವಾಗಿ ಬೆಳಗುತ್ತಿದೆ. ಪ್ರಜೆಗಳ ಸೃಷ್ಟಿಯಾದಾಗಿನಿಂದಲೂ ಈ ಅಂಡವು ಹೀಗೆಯೇ ನೀರಿನಲ್ಲಿದೆ. ಆದರೆ ಇಷ್ಟುಕಾಲವಾದರೂ ಈ ಅಂಡವು ಒಡೆದೂ ಇಲ್ಲ.; ಚಲಿಸಿಯೂ ಇಲ್ಲ.

**ನಾಸ್ಯ ಜಾತಿಂ ನಿಸರ್ಗಂ ವಾ ಕಥ್ಯಮಾನಂ ಶೃಣೋಮಿ ವೈ ।**
**ಪಿತರಂ ಮಾತರಂ ಚಾಪಿ ನಾಸ್ಯ ಜಾನಾತಿ ಕಶ್ಚನ ॥೧೯॥**

ಯಾರೊಬ್ಬರೂ ಇದುವರೆಗೆ ಈ ಅಂಡದ ಜಾತಿಯ ವಿಷಯವಾಗಿಯೇ ಆಗಲೀ, ಸ್ವಭಾವದ ವಿಷಯವಾಗಿಯೇ ಆಗಲೀ–ಮಾತನಾಡಿರುವುದನ್ನು ನಾನು ಕೇಳಿಲ್ಲ. ಇಷ್ಟು ಮಾತ್ರವಲ್ಲ ; ಈ ಅಂಡದ ತಾಯಿಯು ಯಾರೆಂದಾಗಲೀ, ತಂದೆಯು ಯಾರೆಂದಾಗಲೀ–ಯಾರಿಗೂ ತಿಳಿದಿರುವುದಿಲ್ಲ. ಯಾರೊಬ್ಬರೂ ಈ ರಹಸ್ಯವನ್ನು ತಿಳಿಯರು. ಮಾತಲೇ! ಅದರ ವಿಷಯವಾಗಿ ಈ ಒಂದು ಅಂಶವನ್ನು ಮಾತ್ರ ನಾನು ತಿಳಿದುಕೊಂಡಿರುತ್ತೇನೆ. ಯುಗಾಂತ್ಯವು ಸನ್ನಿಹಿತವಾದೊಡನೆಯೇ ಈ ಅಂಡದಿಂದ ಹುಟ್ಟಿದ ಪ್ರಳಯಾಗ್ನಿಯು ಚರಾಚರಸಹಿತವಾದ ಈ ಮೂರು ಲೋಕಗಳನ್ನೂ ಭಸ್ಮಮಾಡಿಬಿಡುತ್ತದೆ."

ದುರ್ಯೋಧನ! ನಾರದರು ಹೇಳಿದ ಆ ಮಾತುಗಳನ್ನು ಕೇಳಿ ಮಾತಲಿಯು ಹೇಳಿದನು :

**ನ ಮೇಽತ್ರ ರೋಚತೇ ಕಶ್ಚಿದನ್ಯತೋ ವ್ರಜ ಮಾಚಿರಮ್ ॥೨೦॥**

"ಇಲ್ಲಿರುವವರಲ್ಲಿ ಯಾರೊಬ್ಬರೂ ನನಗೆ ಹಿಡಿಸಲಿಲ್ಲ. (ಇಲ್ಲಿರುವವರಲ್ಲಿ ಯಾರನ್ನೂ ನನ್ನ ಮಗಳಿಗೆ ಅನುರೂಪನಾದ ವರನೆಂದು ನಾನು ಭಾವಿಸುವುದಿಲ್ಲ.) ಆದುದರಿಂದ ಶೀಘ್ರವಾಗಿ ಬೇರೆಯೆಡೆಗೆ ಹೋಗಿರಿ, ನಾರದರೇ!"

೯೯ನೆಯ ಅಧ್ಯಾಯವು ಮುಗಿಯಿತು.

೧೦೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಹಿರಣ್ಯಪುರದ ವರ್ಣನೆ

ದೇವರ್ಷಿಗಳಾದ ನಾರದರು ಮುಂದುವರಿದು ಹೇಳಿದರು :

"ಇಗೋ ಇಲ್ಲಿ ನೋಡು ಮಾತಲೇ! ಪಟ್ಟಣಗಳಲ್ಲೆಲ್ಲಾ ಶ್ರೇಷ್ಠವೆಂದು ಪ್ರಖ್ಯಾತವಾಗಿರುವ ಹಿರಣ್ಯಪುರವೆಂಬ ಹೆಸರಿನ ವಿಶಾಲವಾದ ಪಟ್ಟಣವಿದು. ನೂರಾರು ವಿಧವಾದ ಮಾಯೆಗಳನ್ನು ತಿಳಿದುಕೊಂಡಿರುವ ದೈತ್ಯರ ಮತ್ತು

ದಾನವರ ನಿವಾಸಸ್ಥಾನವಾಗಿದೆ. ಪಾತಾಳದ ತಳದಲ್ಲಿ ಆಶ್ರಯಹೊಂದಿರುವ ಈ ಹಿರಣ್ಯಪುರವು ಅಸುರರ ವಿಶ್ವಕರ್ಮನೆನಿಸಿದ ಮಯನಿಂದ ಮೊದಲು ಮನಸ್ಸಿನಲ್ಲಿ ಕಲ್ಪಿತವಾಗಿ ಅನಂತರ ಬಹುಪ್ರಯತ್ನದಿಂದ ಪ್ರತ್ಯಕ್ಷವಾಗಿ ನಿರ್ಮಿಸ ಲ್ಪಟ್ಟಿತು. (ಪಟ್ಟಣವು ಹೇಗಿರಬೇಕೆಂಬುದನ್ನು ಮಯನು ಮೊದಲು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಅನಂತರ ಬಹುಪ್ರಯತ್ನದಿಂದ ಮನೋನಿರ್ಮಿತವಾಗಿದ್ದ ನಗರಿಯನ್ನೇ ಪಾತಾಳತಳದಲ್ಲಿ ನಿರ್ಮಿಸಿದನು.) ಶೂರರಾದ, ಮಹೌಜಸ್ಕರಾದ, ಅನೇಕವಿಧವಾದ ವರಗಳನ್ನು ತಪಸ್ಸಿನ ಮೂಲಕವಾಗಿ ನಾನಾದೇವತೆಗಳಿಂದ ಪಡೆದುಕೊಂಡಿದ್ದ ದಾನವರು ಸಾವಿರಾರು ಮಾಯೆಗಳನ್ನು ಮಾಡುತ್ತಾ ಇಲ್ಲಿ ವಾಸವಾಗಿದ್ದರು. ಇವರನ್ನು ಇಂದ್ರನಾಗಲೀ, ಯಮನಾಗಲೀ, ವರುಣನಾಗಲೀ, ಕುಬೇರನಾಗಲೀ, ಬೇರೆ ಯಾವ ಪ್ರಭಾವಶಾಲಿಯಾದ ದೇವತೆಯೇ ಆಗಲೀ, ಜಯಿಸಲು ಅಥವಾ ಇವರನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ವಿಷ್ಣುಪದೋದ್ಭವ ರಾದ ಕಾಲಖಂಜರೆಂಬ ರಾಕ್ಷಸರು, ಬ್ರಹ್ಮಪದೋದ್ಭವರಾದ ಯಾತುಧಾನರೆಂಬ ರಾಕ್ಷಸರು, ಕೋರೆ ದಾಡೆಗಳನ್ನು ಹೊಂದಿರತಕ್ಕವರು, ಭಯಂಕರವೇಗದಿಂದ ಕೂಡಿರತಕ್ಕವರು, ವಾಯುವಿಗೆ ಸಮಾನವಾದ ವೇಗ ಮತ್ತು ಪರಾಕ್ರಮವುಳ್ಳವರು, ಅನೇಕ ವಿಧವಾದ ಮಾಯಾವಿದ್ಯೆಗಳಿಂದ ಸಂಪನ್ನರಾಗಿರತಕ್ಕವರು ಇಲ್ಲಿ ವಾಸಮಾಡು ತ್ತಿದ್ದಾರೆ. ನಿವಾತಕವಚರೆಂಬ ಹೆಸರಿನ ಯುದ್ಧೋನ್ಮತ್ತರಾದ ರಾಕ್ಷಸರೂ ವಾಸಮಾಡುತ್ತಿದ್ದಾರೆ. ಇಂದ್ರನೂ ಇವರನ್ನು ಬಾಧೆಪಡಿಸಲು ಅಥವಾ ಪರಾಜಯಗೊಳಿಸಲು ಅಸಮರ್ಥನೆಂಬುದನ್ನು ನೀನೂ ತಿಳಿದಿರುವೆಯಲ್ಲವೇ? ನೀನು, ನಿನ್ನ ಮಗ ಗೋಮುಖ, ಪುತ್ರಸಹಿತನಾದ ಶಚೀಪತಿಯಾದ ದೇವೇಂದ್ರನೇ ಮೊದಲಾಗಿ ದೇವತೆಗಳೆಲ್ಲರೂ ಇವರೊಡನೆ ಯುದ್ಧಮಾಡಲು ಬಂದು ಪರಾಜಿತರಾಗಿ ಭಗ್ನಮನೋರಥರಾಗಿ ಅನೇಕ ಬಾರಿ ಹಿಂದಿರುಗಿದು ದುಂಟು. ಇಲ್ಲಿರುವ ಮನೆಗಳ ಸೊಬಗನ್ನು ನೋಡು ಮಾತಲೇ! ಹಲವು ಮನೆಗಳು ಸ್ವರ್ಣಮಯವಾಗಿವೆ. ಹಲವಾರು ಮನೆಗಳು ರಜತಮಯ ವಾಗಿದ್ದು ಥಳಥಳಿಸುತ್ತಿವೆ. ಇವೆಲ್ಲವೂ ಶಿಲ್ಪಶಾಸ್ತ್ರಾನುಸಾರವಾಗಿಯೇ ಕಟ್ಟಲ್ಪಟ್ಟ ಮನೆಗಳು. ಈ ಮನೆಗಳೆಲ್ಲವೂ ಒಂದಕ್ಕೊಂದು ಸೇರಿ ಕೊಂಡಂತೆಯೇ ಇವೆ. ಈ ಮನೆಗಳೆಲ್ಲವೂ ವೈಡೂರ್ಯದಿಂದ ಚಿತ್ರ-ವಿಚಿತ್ರ

ವಾಗಿ ನಿರ್ಮಿಸಲ್ಪಟ್ಟಿವೆ. ಹವಳಗಳಿಂದ ಅಲಂಕೃತವಾಗಿರುವುದರಿಂದ ಬಹು ಶೋಭಾಯಮಾನವಾಗಿ ಕಾಣುತ್ತವೆ. ಅರ್ಕಪುಷ್ಪ–(ಸೂರ್ಯಕಾಂತ) ಸ್ಫಟಿಕಮಣಿಗಳಂತೆ ಬಹುಶುಭ್ರವಾಗಿವೆ. ವಜ್ರದ ಸಾರದಂತೆ ಉಜ್ವಲವಾದ ದೀಪ್ತಿಯಿಂದ ಪ್ರಕಾಶಿಸುತ್ತಿವೆ. ಇಲ್ಲಿರುವ ಸೌಧಗಳಲ್ಲಿ ಕೆಲವು ಮಣ್ಣಿನಿಂದ ನಿರ್ಮಿತವಾದುವುಗಳಂತೆ ಕಾಣುತ್ತವೆ. ಪದ್ಮರಾಗಮಣಿಯಿಂದಲೇ ನಿರ್ಮಿಸಿರು ವರೋ ಎಂಬಂತೆ ಕೆಲವು ಕಾಣುತ್ತವೆ. ಮತ್ತೆ ಕೆಲವು ಕಲ್ಲಿನಿಂದ ನಿರ್ಮಿಸಲ್ಪಟ್ಟಿರುವಂತೆ ಕಾಣುತ್ತವೆ. ಇವುಗಳೆಲ್ಲವೂ ಸೂರ್ಯಸದೃಶ ವಾಗಿಯೂ, ಪ್ರಜ್ವಲಿಸುವ ಯಜ್ಞೇಶ್ವರನಂತೆಯೂ ಕಾಣುತ್ತವೆ. ನಾನಾ ವಿಧವಾದ ಮಣಿಗಳಿಂದ ಈ ಸೌಧಗಳ ಗೋಡೆಗಳನ್ನೂ, ಬಾಗಿಲುಗಳನ್ನೂ ಅಲಂಕರಿಸಿರುವುದರಿಂದ ಈ ಸೌಧಗಳು ಚಿತ್ರ-ವಿಚಿತ್ರವಾಗಿಯೂ ಇವೆ. ನಿಶ್ಚಯವಾಗಿ ಹೇಳುವುದಾದರೆ, ಮಾತಲೇ! ಈ ಹಿರಣ್ಯಪುರದಲ್ಲಿರುವ ಸೌಧ ಗಳ ಸೌಂದರ್ಯವು ಹೀಗೇ ಇದೆಯೆಂದು ನಿರ್ಧರಿಸಿ ಹೇಳುವ ಸಾಧ್ಯತೆಯೇ ಇಲ್ಲ. ಯಾವ ಯಾವ ದ್ರವ್ಯಗಳಿಂದ ಈ ಸೌಧಗಳನ್ನು ನಿರ್ಮಿಸಿದ್ದಾರೆಂದೂ ಹೇಳುವ ಸಾಧ್ಯತೆಯಿಲ್ಲ. ಇವುಗಳೆಲ್ಲವೂ ಉತ್ತಮಗುಣ-ಲಕ್ಷಣಗಳಿಂದ ಕೂಡಿವೆಯೆಂದೂ, ಸರ್ವಲಕ್ಷಣಗಳಿಂದ ಕೂಡಿವೆಯೆಂದೂ ಜಗತ್ಪ್ರಸಿದ್ಧವಾಗಿವೆ. ಈ ಸೌಧಗಳೆಲ್ಲವೂ ಸರ್ವಲಕ್ಷಣಗಳಿಂದಲೂ ಕೂಡಿರುವುದರಿಂದ ಪ್ರಶಂಸಾರ್ಹವಾಗಿವೆ. ನೋಡು, ಮಾತಲೇ! ಈ ದೈತ್ಯರ ಕ್ರೀಡೋದ್ಯಾನವೂ ಎಷ್ಟು ಸುಂದರವಾಗಿದೆ! ಇವುಗಳಂತೆಯೇ ಇವರ ಶಯನಾಗಾರಗಳೂ ನಯನಮನೋಹರವಾಗಿವೆ. ಇವರ ಆಸನ-ಭಾಜನಗಳೂ ರತ್ನಮಯವಾಗಿದ್ದು ಬಹುಮೂಲ್ಯವಾದ ವಸ್ತುಗಳಾಗಿವೆ.

ಇಲ್ಲಿಯ ಶೈಲಗಳನ್ನು ನೋಡು, ಮಾತಲೇ! ಇವುಗಳು ಮೇಘಸದೃಶ ವಾಗಿವೆ. ಈ ಶೈಲಗಳಿಂದ ಸಣ್ಣ ಸಣ್ಣ ಚಿಲುಮೆಗಳು ಉಕ್ಕಿ ಹರಿಯುತ್ತಿವೆ. ಇಲ್ಲಿರುವ ವೃಕ್ಷಗಳನ್ನಾದರೂ ನೋಡು, ಸೂತ! ಇವುಗಳು ಇಚ್ಛೆಬಂದೆಡೆಗೆ ಹೋಗಬಲ್ಲುವು. ಇಚ್ಛೆಬಂದಂತೆ ಹೂಗಳನ್ನೂ ಫಲಗಳನ್ನೂ ನೀಡಬಲ್ಲುವು. ಇಲ್ಲಿಯಾದರೂ ನಿನ್ನ ಮಗಳಿಗೆ ಸುಂದರನಾದ ವರನೊಬ್ಬನು ಸಿಕ್ಕಿಯಾನೇ? ಅಥವಾ ಈ ಭೂಮಿಯ ಪ್ರದೇಶದ ಬೇರೆ ದಿಕ್ಕನ್ನು ಕುರಿತು ವರಾನ್ವೇ

ಷಣಕ್ಕಾಗಿ ಹೋಗಬೇಕೆಂದು ನೀನು ಇಚ್ಛಿಸುವೆಯಾದರೆ ಹಾಗೆಯೇ ಮಾಡೋಣ.”

ಹೀಗೆಂದು ಹೇಳಿದ ದೇವರ್ಷಿಗಳನ್ನು ಕುರಿತು ಮಾತಲಿಯು ಹೇಳಿದನು :

**ದೇವರ್ಷೇ ನೈವ ಮೇ ಕಾರ್ಯಂ ವಿಪ್ರಿಯಂ ತ್ರಿದಿವೌಕಸಾಮ್ ॥**

“ದೇವರ್ಷಿಗಳೇ! ದೇವತೆಗಳಿಗೆ ಪ್ರಿಯವಾಗದಂತಹ ಕಾರ್ಯವು ನನ್ನಿಂದ ಮಾಡಲ್ಪಡಕೂಡದು.

**ನಿತ್ಯಾನುಷಕ್ತವೈರಾ ಹಿ ಭ್ರಾತರೋ ದೇವದಾನವಾಃ ।**
**ಪರಪಕ್ಷೇಣ ಸಮ್ಬನ್ಧಂ ರೋಚಯಿಷ್ಯಾಮ್ಯಹಂ ಕಥಮ್ ॥೧೮॥**

ಯದ್ಯಪಿ ದೇವ-ದಾನವರು ಅಣ್ಣ-ತಮ್ಮಂದಿರೇ ಆದರೂ ಇವರಿಬ್ಬರಲ್ಲಿ ಶಾಶ್ವತವಾದ ವೈರವು ನೆಲೆಸಿಬಿಟ್ಟಿದೆ. ಹೀಗಿರುವಾಗ ನಾನು ದೇವತೆಗಳಿಗೆ ನಿತ್ಯಶತ್ರುಗಳಾದ ದೈತ್ಯ-ದಾನವರೊಡನೆ ಸಂಬಂಧವನ್ನು ಹೇಗೆ ತಾನೇ ಒಪ್ಪಿಕೊಳ್ಳಲಿ? ಇದು ಸಾಧ್ಯವಾಗತಕ್ಕುದಲ್ಲ.

ಆದುದರಿಂದ ನಾವೀಗಲೇ ಬೇರೆಯಕಡೆಗೆ ಹೊರಟುಹೋಗೋಣ. ದಾನವರನ್ನು ಸಂದರ್ಶಿಸಲು ಕೂಡ ನಾನು ಇಚ್ಛಿಸುವುದಿಲ್ಲ. ಈ ವಿಷಯ ದಲ್ಲಿ ನಿಮ್ಮ ಮನಸ್ಸು ಹಿಂಸಾತ್ಮಕವಾಗಿರುವುದೆಂಬುದನ್ನು ನಾನು ಬಲ್ಲೆನು. (ನಿಮ್ಮ ಮನಸ್ಸು ಯುದ್ಧಕ್ಕೆ ಪ್ರಚೋದಿಸುತ್ತಿದೆಯೆಂದು ನಾನು ತಿಳಿದಿರು ತ್ತೇನೆ. ಪರಸ್ಪರ ಜಗಳವನ್ನು ತಂದಿಡುವುದರಲ್ಲಿ ಯಾವಾಗಲೂ ನಿಮ್ಮ ಮನಸ್ಸು ತವಕಪಡುತ್ತಿರುತ್ತದೆ.)”

೧೦೦ನೆಯ ಅಧ್ಯಾಯವು ಮುಗಿಯಿತು.

೧೦೧ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಗರುಡಲೋಕದ ಮತ್ತು ಗರುಡಸಂತತಿಯ ವರ್ಣನೆ

ನಾರದರು ಮಾತಲಿಯು ಹೇಳಿದುದಕ್ಕೆ ನಸುನಕ್ಕು ಅವನನ್ನು ಕರೆದು ಕೊಂಡು ಗರುಡಲೋಕಕ್ಕೆ ಹೋಗಿ ಅದನ್ನು ತೋರಿಸುತ್ತಾ ಇಂದ್ರಸೂತನನ್ನು ಕುರಿತು ಹೇಳಿದರು :

“ಮಾತಲೇ! ಈ ಲೋಕವು ಸುಂದರವಾದ ರೆಕ್ಕೆಗಳನ್ನು ಹೊಂದಿರುವ ಸರ್ಪಾಶಿಗಳಾದ ಗರುಡಪಕ್ಷಿಗಳ ಲೋಕವಾಗಿರುತ್ತದೆ. ಪರಾಕ್ರಮವನ್ನು ಪ್ರಕಟಿಸುವುದರಲ್ಲಿ, ಒಂದೆಡೆಯಿಂದ ಮತ್ತೊಂದೆಡೆಗೆ ಹಾರಿಹೋಗುವುದರಲ್ಲಿ ಮತ್ತು ಭಾರವನ್ನು ಹೊರುವುದರಲ್ಲಿ ಇವುಗಳಿಗೆ ಯಾವ ವಿಧವಾದ ಶ್ರಮವೂ ಉಂಟಾಗುವುದಿಲ್ಲ. ವೈನತೇಯನ ಆರು ಮಕ್ಕಳಿಂದ ಈ ಪಕ್ಷಿಕುಲವು ವೃದ್ಧಿಹೊಂದಿರುತ್ತದೆ. ಸುಮುಖ, ಸುನಾಮ, ಸುವೇತ್ರ, ಸುವರ್ಚಸ, ಸುರುಚ ಮತ್ತು ಪಕ್ಷಿರಾಜನಾದ ಸುಬಲ–ಇವರೇ ಆರು ಮಂದಿ ವೈನತೇಯ ಸುತರು. ವಿನತೆಯ ಕುಲವರ್ಧಕರಾದ, ಕಶ್ಯಪಕುಲೋತ್ಪನ್ನರಾದ, ಐಶ್ವರ್ಯ ವರ್ಧಕರಾದ ಈ ಆರು ವೈನತೇಯಪುತ್ರರಿಂದ ಲಕ್ಷೋಪಲಕ್ಷ ಪಕ್ಷಿಸಂತಾನವು ಬೆಳೆಯಿತು. ಈ ಎಲ್ಲ ಪಕ್ಷಿಗಳೂ ಕಾಂತಿಯುಕ್ತವಾಗಿವೆ. ಶ್ರೀವತ್ಸಚಿಹ್ನೆಗಳಿಂದ ಭೂಷಿತವಾಗಿವೆ. ಈ ಎಲ್ಲವೂ ಧನಸಂಪತ್ತಿಯನ್ನು ಪಡೆಯಬೇಕೆಂಬ ಅಭಿಲಾಷೆಯನ್ನು ಹೊಂದಿವೆ ಮತ್ತು ಅಪಾರವಾದ ಶಕ್ತಿಯನ್ನೂ ಹೊಂದಿವೆ.

**ಕರ್ಮಣಾ ಕ್ಷತ್ರಿಯಾಶ್ಚೈತೇ ನಿರ್ಘೃಣಾ ಭೋಗಿಭೋಜಿನಃ ।**
**ಜ್ಞಾತಿಸಂಕ್ಷಯಕರ್ತೃತ್ವಾದ್ಬ್ರಾಹ್ಮಣ್ಯಂ ನ ಲಭನ್ತಿ ವೈ ॥೬॥**

ಯದ್ಯಪಿ ಈ ಪಕ್ಷಿಗಳು ಬ್ರಾಹ್ಮಣಕುಲೋತ್ಪನ್ನಗಳೇ ಆದರೂ, ಕರ್ಮದಲ್ಲಿ ಕ್ಷತ್ರಿಯಜಾತಿಗೆ ಸೇರಿವೆ. ಈ ಪಕ್ಷಿಗಳು ದಯೆಯಿಲ್ಲದುವುಗಳೂ, ಹಾವುಗಳೇ ಆಹಾರವಾಗಿ ಇರತಕ್ಕುವುಗಳೂ ಆಗಿವೆ ಮತ್ತು ಜ್ಞಾತಿಗಳಾದ ಸರ್ಪಗಳನ್ನೇ ಆಹಾರಕ್ಕಾಗಿ ಉಪಯೋಗಿಸಿ ಅವುಗಳ ಕ್ಷಯಕ್ಕೆ ಕಾರಣ ಗಳಾಗಿರುವುದರಿಂದ ಇವುಗಳಿಗೆ ಬ್ರಾಹ್ಮಣ್ಯವು ಲಭ್ಯವಾಗುವುದಿಲ್ಲ.

**ನಾಮಾನಿ ಚೈಷಾಂ ವಕ್ಷ್ಯಾಮಿ ಯಥಾ ಪ್ರಾಧಾನ್ಯತಃ ಶೃಣು ।**
**ಮಾತಲೇ ಶ್ಲಾಘ್ಯಮೇತದ್ಧಿ ಕುಲಂ ವಿಷ್ಣುಪರಿಗ್ರಹಮ್ ॥೭॥**

ಮಾತಲೇ! ಈ ವೈನತೇಯರ ಕುಲದಲ್ಲಿ ಪ್ರಧಾನಭೂತರಾದವರ ನಾಮಧೇಯಗಳನ್ನು ಹೇಳುವೆನು ಕೇಳು. ಈ ಕುಲವು ಮಹಾವಿಷ್ಣುವಿನಿಂದ ಪರಿಗೃಹೀತವಾಗಿರುವುದರಿಂದ ಅಥವಾ ಈ ಕುಲದವರು ಮಹಾವಿಷ್ಣುವಿನ ಪಾರ್ಷದರಾಗಿರುವುದರಿಂದ ಪ್ರಶಂಸನೀಯರಾಗಿದ್ದಾರೆ.

ದೈವತಂ ವಿಷ್ಣುರೇತೇಷಾಂ ವಿಷ್ಣುರೇವ ಪರಾಯಣಮ್ ।
ಹೃದಿ ಚೈಷಾಂ ಸದಾವಿಷ್ಣುರ್ವಿಷ್ಣುರೇವ ಸದಾ ಗತಿಃ ॥೮॥

ವೈನತೇಯರಿಗಿಂತಲೂ ವಿಶಿಷ್ಟರಾದ ವಿಷ್ಣುಭಕ್ತರು ಬೇರೊಬ್ಬರಿಲ್ಲ. ಶ್ರೀವಿಷ್ಣುವೇ ಇವರಿಗೆ ಕುಲದೈವ ; ಶ್ರೀವಿಷ್ಣುವೇ ಈ ಕುಲದವರಿಗೆ ಪರಾಯಣನು. ಇವರ ಹೃದಯಗಳಲ್ಲಿ ಸದಾಕಾಲದಲ್ಲಿಯೂ ಶ್ರೀವಿಷ್ಣುವೇ ವಿರಾಜಿಸುತ್ತಿರುತ್ತಾನೆ ಮತ್ತು ಶ್ರೀಮಹಾವಿಷ್ಣುವೇ ಈ ಕುಲದವರಿಗೆ ದಿಕ್ಕು ಅಥವಾ ಆಶ್ರಯನು.

ಸುವರ್ಣಚೂಡೋ ನಾಗಾಶೀ ದಾರುಣಶ್ಚಣ್ಡತುಣ್ಡಕಃ ।
ಅನಿಲಶ್ಚಾನಲಶ್ಚೈವ ವಿಶಾಲಾಕ್ಷೋಽಥ ಕುಣ್ಡಲೀ ॥೯॥

ಪಙ್ಕಜಿದ್ವಜ್ರವಿಷ್ಕಮ್ಭೋ ವೈನತೇಯೋಽಥ ವಾಮನಃ ।
ವಾತವೇಗೋ ದಿಶಾಚಕ್ಷುರ್ನಿಮೇಷೋಽನಿಮಿಷಸ್ತಥಾ ॥೧೦॥

ತ್ರಿರಾವಃ ಸಪ್ತರಾವಶ್ಚ ವಾಲ್ಮೀಕಿರ್ದ್ವೀಪಕಸ್ತಥಾ ।
ದೈತ್ಯದ್ವೀಪಃ ಸರಿದ್ದ್ವೀಪಃ ಸಾರಸಃ ಪದ್ಮಕೇತನಃ ॥೧೧॥

ಸುಮುಖಶ್ಚಿತ್ರಕೇತುಶ್ಚ ಚಿತ್ರಬರ್ಹಸ್ತಥಾನಘಃ ।
ಮೇಷಹೃತ್ಕುಮುದೋ ದಕ್ಷಃ ಸರ್ಪಾನ್ತಃ ಸಹಭೋಜನಃ ॥೧೨॥

ಗುರುಭಾರಃ ಕಪೋತಶ್ಚ ಸೂರ್ಯನೇತ್ರಶ್ಚಿರಾನ್ತಕಃ ।
ವಿಷ್ಣುಧರ್ಮಾ ಕುಮಾರಶ್ಚ ಪರಿಬರ್ಹೋ ಹರಿಸ್ತಥಾ ॥೧೩॥

ಸುಸ್ವರೋ ಮಧುಪರ್ಕಶ್ಚ ಹೇಮಪರ್ಣಸ್ತಥೈವ ಚ ।
ಮಾಲಯೋ ಮಾತರಿಶ್ವಾ ಚ ನಿಶಾಕರದಿವಾಕರೌ ॥೧೪॥

ಸುವರ್ಣಚೂಡ, ನಾಗಾಶೀ, ದಾರುಣ, ಚಂಡತುಂಡಕ, ಅನಿಲ, ಅನಲ, ವಿಶಾಲಾಕ್ಷ, ಕುಂಡಲೀ, ಪಂಕಜಿತ್, ವಜ್ರವಿಷ್ಕಂಭ, ವೈನತೇಯ, ವಾಮನ, ವಾತವೇಗ, ದಿಶಾಚಕ್ಷು, ನಿಮೇಷ, ಅನಿಮಿಷ, ತ್ರಿರಾವ, ಸಪ್ತರಾವ, ವಾಲ್ಮೀಕಿ, ದ್ವೀಪಕ, ದೈತ್ಯದ್ವೀಪ, ಸರಿದ್ದ್ವೀಪ, ಸಾರಸ, ಪದ್ಮಕೇತನ, ಸುಮುಖ, ಚಿತ್ರಕೇತು, ಚಿತ್ರಬರ್ಹ, ಅನಘ, ಮೇಷಹೃತ್, ಕುಮುದ, ದಕ್ಷ, ಸರ್ಪಾಂತ, ಸಹಭೋಜನ, ಗುರುಭಾರ, ಕಪೋತ, ಸೂರ್ಯನೇತ್ರ, ಚಿರಾಂತಕ, ವಿಷ್ಣುಧರ್ಮಾ, ಕುಮಾರ, ಪರಿಬರ್ಹ, ಹರಿ,

ಸುಸ್ವರ, ಮಧುಪರ್ಕ, ಹೇಮವರ್ಣ, ಮಾಲಯ, ಮಾತರಿಶ್ವಾ, ನಿಶಾಕರ ಮತ್ತು ದಿವಾಕರ–ಇವರೇ ವೈನತೇಯವಂಶೀಯರಲ್ಲಿ ಮುಖ್ಯರಾದವರು. ಬಹುಸಂಕ್ಷೇಪವಾಗಿ ಗರುಡನ ಪುತ್ರರಲ್ಲಿ ಕೆಲವರನ್ನು ಮಾತ್ರವೇ ಹೇಳಿದ್ದೇನೆ. ಇವರೆಲ್ಲರೂ ಯಶೋವಂತರೆಂದೂ ಮತ್ತು ಬಲಿಷ್ಠರೆಂದೂ ಕೀರ್ತಿಯನ್ನು ಪಡೆದಿರುತ್ತಾರೆ. ಒಂದು ವೇಳೆ ಇವರಲ್ಲಿಯೂ ನಿನ್ನ ಮಗಳಿಗೆ ಅನುರೂಪನಾದ ವರನು ಸಿಕ್ಕದಿದ್ದರೆ ಮುಂದೆ ಹೋಗೋಣ. ನಿನ್ನ ಮಗಳಿಗೆ ಅನುರೂಪನಾದ ವರನು ಎಲ್ಲಿ ಸಿಕ್ಕುತ್ತಾನೆಯೋ ಆ ಪ್ರದೇಶಕ್ಕೆ ನಾನು ನಿನ್ನನ್ನು ಕರೆದೊಯ್ಯುತ್ತೇನೆ."

೧೦೧ನೆಯ ಅಧ್ಯಾಯವು ಮುಗಿಯಿತು.

೧೦೨ನೆಯ ಅಧ್ಯಾಯ ಭಗವದ್ಯಾನಪರ್ವ(ಮುಂದುವರಿದಿದೆ.)

## ಸುರಭಿ ಮತ್ತು ಅವಳ ಸಂತಾನದ ವರ್ಣನೆ : ರಸಾತಲದ ಸುಖದ ವರ್ಣನೆ

ನಾರದರು ಮುಂದುವರಿದು ಹೇಳಿದರು :

"ಇಗೋ ಇದನ್ನು ನೋಡು, ಮಾತಲೇ! ಇದು ರಸಾತಲ ಎಂಬ ಹೆಸರಿನ ಭೂಮಿಯ ಕೆಳಭಾಗದಲ್ಲಿರುವ ಮತ್ತೊಂದು ಲೋಕ. ಇಲ್ಲಿಯೇ ಅಮೃತೋದ್ಭವಳಾದ, ಗೋಮಾತೆಯಾದ ಸುರಭಿಯಿದ್ದಾಳೆ. ಪೃಥ್ವಿಯ ಸಾರದಿಂದ ಉತ್ಪನ್ನವಾಗಿರುವ ಆರು ರಸಗಳ ಸಾರದಿಂದ ಕೂಡಿದ್ದು, ಉತ್ತಮೋತ್ತಮವಾದ ಒಂದೇ ರಸವಾಗಿರುವ ಹಾಲನ್ನು ಸದಾಕಾಲದಲ್ಲಿಯೂ ತನ್ನ ಕೆಚ್ಚಲಿನಿಂದ ಸುರಿಸುತ್ತಿರುತ್ತಾಳೆ.

**ಅಮೃತೇನಾಭಿತೃಪ್ತಸ್ಯ ಸಾರಮುದ್ಗಿರತಃ ಪುರಾ ।**
**ಪಿತಾಮಹಸ್ಯ ವದನಾದುದತಿಷ್ಠದನಿನ್ದಿತಾ ॥೩॥**

ಪೂರ್ವಕಾಲದಲ್ಲಿ ಬ್ರಹ್ಮನು ಅಮೃತಪಾನಮಾಡಿ ತೃಪ್ತನಾಗಿ ಕುಳಿತಿದ್ದನು. ಆ ಸಮಯದಲ್ಲಿ ಅಮೃತಸಾರವು ಅವನ ಬಾಯಿಂದ ಹೊರಬರುತ್ತಿದ್ದಿತು. ಸಂತುಷ್ಟನಾದ ಬ್ರಹ್ಮನ ಬಾಯಿಂದ ಹೊರಬರುತ್ತಿದ್ದ ಅಮೃತಸಾರದಿಂದಲೇ ಅನಿಂದಿತೆಯಾದ ಈ ಸುರಭಿಯು ಪ್ರಾದುರ್ಭೂತಳಾದಳು.

ಧಾರಾಕಾರವಾಗಿ ಇವಳ ಕೆಚ್ಚಲಿನಿಂದ ಭೂಮಿಯ ಮೇಲೆ ಸುರಿಯುತ್ತಿದ್ದ ಹಾಲಿನ ಧಾರೆಯಿಂದಲೇ ಒಂದು ದೊಡ್ಡದಾದ ಸರೋವರವು ನಿರ್ಮಿತವಾಯಿತು. ಇದೇ ಕ್ಷೀರನಿಧಿ ಅಥವಾ ಕ್ಷೀರಸಾಗರ. ಇದು ಪರಮಪವಿತ್ರವಾದುದೆಂದೂ ಹೇಳಲ್ಪಟ್ಟಿದೆ. ಈ ಕ್ಷೀರಸಾಗರದ ತೀರಪ್ರದೇಶವು ಪುಷ್ಪದೋಪಾದಿಯಲ್ಲಿ ಕಾಣುವ ಹಾಲಿನ ನೊರೆಯಿಂದ ಆವೃತವಾಗಿದೆ. ಪುಷ್ಪರೂಪವಾಗಿ ಕಾಣುವ ಹಾಲಿನ ನೊರೆಯನ್ನೇ ಕುಡಿಯುತ್ತಾ ಅನೇಕ ಮುನಿಶ್ರೇಷ್ಠರು ಇಲ್ಲಿ ವಾಸಮಾಡಿಕೊಂಡಿರುತ್ತಾರೆ. ಹಾಲಿನ ನೊರೆಯನ್ನೇ ಆಹಾರವನ್ನಾಗಿ ಸೇವಿಸುತ್ತಿರುವ ಇವರು ಫೇನಪರೆಂದೇ ಖ್ಯಾತರಾಗಿರುತ್ತಾರೆ. ಇವರೆಲ್ಲರೂ ಅತ್ಯುಗ್ರವಾದ ತಪಸ್ಸಿನಲ್ಲಿ ಮಗ್ನರಾಗಿರುತ್ತಾರೆ. ಉಗ್ರತಪಸ್ಕರಾದ ಇವರನ್ನು ಕಂಡರೆ ದೇವತೆಗಳೂ ಭಯಪಡುತ್ತಾರೆ. ಗೋಮಾತೆಯಾದ ಈ ಸುರಭಿಗೆ ನಾಲ್ಕು ಗೋವುಗಳು ಹುಟ್ಟಿವೆ. ಈ ನಾಲ್ಕು ಗೋವುಗಳೇ ನಾಲ್ಕು ದಿಕ್ಕುಗಳಲ್ಲಿಯೂ ಇವೆ. ಇವುಗಳು ತಾವಿರುವ ದಿಕ್ಕುಗಳನ್ನು ಧಾರಣೆಮಾಡಿಕೊಂಡಿರುವುವಲ್ಲದೇ–ಪೋಷಿಸುತ್ತಲೂ ಇವೆ.

**ಪೂರ್ವಾಂ ದಿಶಂ ಧಾರಯತೇ ಸುರೂಪಾ ನಾಮ ಸೌರಭೀ ।**
**ದಕ್ಷಿಣಾಂ ಹಂಸಿಕಾ ನಾಮ ಧಾರಯತ್ಯಪರಾಂ ದಿಶಮ್ ॥೮॥**

**ಪಶ್ಚಿಮಾ ವಾರುಣೀ ದಿಕ್ಚ ಧಾರ್ಯತೇ ವೈ ಸುಭದ್ರಯಾ ।**
**ಮಹಾನುಭಾವಯಾ ನಿತ್ಯಂ ಮಾತುಲೇ ವಿಶ್ವರೂಪಯಾ ॥೯॥**

**ಸರ್ವಕಾಮದುಘಾ ನಾಮ ಧೇನುರ್ಧಾರಯತೇ ದಿಶಮ್ ।**
**ಉತ್ತರಾಂ ಮಾತಲೇ ಧರ್ಮ್ಯಾಂ ತಥೈಲಬಿಲಸಂಜ್ಞಿತಾಮ್ ॥೧೦॥**

ಸುರೂಪಾ ಎಂಬ ಸುರಭಿಯ ಮಗಳು ಪೂರ್ವದಿಕ್ಕನ್ನು ಧರಿಸಿ ನಿಂತಿದ್ದಾಳೆ. ಎರಡನೆಯದಾದ ದಕ್ಷಿಣದಿಕ್ಕನ್ನು ಹಂಸಿಕಾ ಎಂಬ ಸುರಭಿಯ ಎರಡನೆಯ ಮಗಳು ಧಾರಣೆಮಾಡಿದ್ದಾಳೆ. ವರುಣನ ದಿಕ್ಕಾದ ಪಶ್ಚಿಮವು ಮಹಾನುಭಾವೆಯಾದ, ವಿಶ್ವರೂಪಿಣಿಯಾದ ಸುಭದ್ರಾ ಎಂಬ ಸುರಭಿಯ ಮೂರನೆಯ ಮಗಳಿಂದ ಧರಿಸಲ್ಪಟ್ಟಿದೆ. ಇಲಬಿಲೆಯ ಮಗನಾದ ಕುಬೇರನ ಸಂಬಂಧಿಯಾದ ಧರ್ಮಯುಕ್ತವಾದ ಉತ್ತರದಿಕ್ಕನ್ನು ಸರ್ವಕಾಮದುಘಾ ಎಂಬ ಹೆಸರಿನ ಸುರಭಿಯ ನಾಲ್ಕನೆಯ ಮಗಳು ಧರಿಸಿರುತ್ತಾಳೆ. ಮಾತಲೇ!

ದೇವತೆಗಳು ಅಸುರರೊಡನೆ ಸೇರಿಕೊಂಡವರಾಗಿ ಮಂದರಪರ್ವತವನ್ನೇ ಕಡೆಗೋಲನ್ನಾಗಿಯೂ, ವಾಸುಕಿಯನ್ನೇ ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು ನಾನು ಈ ಹಿಂದೆ ಹೇಳಿದ ಸುರಭಿಯ ನಾಲ್ಕು ಹೆಣ್ಣುಮಕ್ಕಳ (ಹಸುಗಳ) ಹಾಲನ್ನು ಕ್ಷೀರಸಾಗರದಲ್ಲಿದ್ದ ಸುರಭಿಯ ಹಾಲಿನೊಡನೆ ಬೆರೆಸಿ ಕಡೆದರು.

ಹೀಗೆ ಕ್ಷೀರಸಾಗರವನ್ನು ಕಡೆಯುತ್ತಿದ್ದಾಗ ವಾರುಣೀ, ಲಕ್ಷ್ಮೀ, ಅಮೃತ, ಅಶ್ವಗಳಲ್ಲೆಲ್ಲಾ ಶ್ರೇಷ್ಠವೆನಿಸಿದ ಉಚ್ಚೈಃಶ್ರವಸ್ಸೆಂಬ ಕುದುರೆ ಮತ್ತು ಮಣಿಗಳಲ್ಲೆಲ್ಲಾ ಶ್ರೇಷ್ಠವೆನಿಸಿದ ಕೌಸ್ತುಭಮಣಿ–ಇವುಗಳು ಪ್ರಾದು ರ್ಭೂತವಾದುವು.

**ಸುಧಾಹಾರೇಷು ಚ ಸುಧಾಂ ಸ್ವಧಾಭೋಜಿಷು ಚ ಸ್ವಧಾಮ್ ।**
**ಅಮೃತಂ ಚಾಮೃತಾಶೇಷು ಸುರಭೀ ಕ್ಷರತೇ ಪಯಃ ॥೧೩॥**

ಈ ಸುರಭಿಯು ಸುಧಾಹಾರಿಗಳಾದವರಿಗೆ ಸುಧಾರೂಪವಾದ ಹಾಲನ್ನು ಕೊಡುತ್ತದೆ. ಸ್ವಧಾಹಾರಿಗಳಾದ ಪಿತೃಗಳಿಗೆ ಸ್ವಧಾರೂಪವಾದ ಹಾಲನ್ನೇ ಕೊಡುತ್ತದೆ. ಅಮೃತಾಹಾರಿಗಳಾದ ದೇವತೆಗಳಿಗೆ ಅಮೃತರೂಪವಾದ ಹಾಲನ್ನೇ ಕೊಡುತ್ತದೆ.

(‘ಸರ್ಪಗಳು, ಪಿತೃದೇವತೆಗಳು ಮತ್ತು ದೇವತೆಗಳಿಗೆ ಸುರಭಿಯು ಅನುಕ್ರಮವಾಗಿ ಸುಧಾರೂಪವಾದ, ಸ್ವಧಾರೂಪವಾದ ಮತ್ತು ಅಮೃತರೂಪ ವಾದ ಹಾಲನ್ನು ಕೊಡುತ್ತದೆ’–ಎಂದು ವ್ಯಾಖ್ಯಾನಕಾರರು ಅರ್ಥಮಾಡಿ ದ್ದಾರೆ. ಸುಧಾಹಾರಿಗಳು–ಅಮೃತಾಹಾರಿಗಳು ಅರ್ಥಾತ್ ದೇವತೆಗಳು ಎಂದಾಗುತ್ತದೆಯೇ ಹೊರತು ನಾಗಗಳೆಂದು ಅರ್ಥವಾಗುವುದಿಲ್ಲ ಮತ್ತು ನಾಗಗಳು ಅಮೃತಾಹಾರಿಗಳೆಂಬುದೂ ಪ್ರಸಿದ್ಧವಾಗಿಲ್ಲ. ಸುಧಾ ಎಂಬುದಕ್ಕೆ ಹಾಲು ಎಂಬ ಅರ್ಥವನ್ನಿಟ್ಟುಕೊಂಡು ‘ಕ್ಷೀರಪಾನಮಾಡುವ ಸರ್ಪಗಳಿಗೆ’ ಎಂದು ಅರ್ಥವನ್ನು ಹೇಳಬಹುದಾಗಿದೆ. ಸುಧಾಶಬ್ದಕ್ಕೆ ಕ್ಷೀರವೆಂದೇ ಅರ್ಥ ಮಾಡುವುದಾದರೆ ಅದನ್ನು ಮನುಷ್ಯರಿಗೂ ಅನ್ವಯಿಸಬಹುದಾಗಿದೆ. ದೇವ-ಮನುಷ್ಯ-ಪಿತೃಗಳಿಗೆ ಸುರಭಿಯು ಅಮೃತರೂಪವಾದ ಸುಧಾರೂಪವಾದ ಹಾಲನ್ನು ಕೊಡುತ್ತದೆ–ಎಂದು ಅರ್ಥಮಾಡಬಹುದಾಗಿದೆ. ‘ಸ್ವಧಾ

ಭುಜರು' ಎಂದರೆ ಪಿತೃದೇವತೆಗಳು. ಪಿತೃಗಳ ಪ್ರೀತ್ಯರ್ಥವಾಗಿ ಕೊಡುವ ಭೋಜನಕ್ಕೆ ಸ್ವಧಾ ಎಂದು ಹೆಸರು. "ಪಿತೃಭ್ಯಃ ಸ್ವಧಾ' (ಶ್ರುತಿಃ). ದೇವತೆಗಳಿಗೆ ಬೇಕಾದ ಅಮೃತವನ್ನೂ, ಮನುಷ್ಯರಿಗೆ ಬೇಕಾದ ಹಾಲನ್ನೂ (ಸುಧೆಯನ್ನೂ), ಪಿತೃಗಳಿಗೆ ಬೇಕಾದ ಸ್ವಧೆಯನ್ನೂ ಸುರಭಿಯು ಕೊಡುತ್ತಾಳೆ.)

ಮಾತಲೇ! ಹಿಂದೆ ಈ ರಸಾತಲನಿವಾಸಿಗಳು ಯಾವ ಒಂದು ಪದ್ಯವನ್ನು ಹಾಡುತ್ತಿದ್ದರೋ ಅದೇ ಪುರಾತನಪದ್ಯವನ್ನು ಲೋಕದಲ್ಲಿ ಎಲ್ಲರೂ ಕೇಳಿದ್ದಾರೆ. ಅದನ್ನೇ ನಾನು ನಿನಗೆ ಹೇಳುತ್ತೇನೆ :

**ನ ನಾಗಲೋಕೇ ನ ಸ್ವರ್ಗೇ ನ ವಿಮಾನೇ ತ್ರಿವಿಷ್ಟಪೇ ।**
**ಪರಿವಾಸಃ ಸುಖಸ್ತಾದೃಗ್ರಸಾತಲತಲೇ ಯಥಾ ॥೧೫॥**

"ರಸಾತಲತಲದಲ್ಲಿ ವಾಸಮಾಡುತ್ತಿದ್ದು ಅನುಭವಿಸಬಹುದಾದ ಸುಖವನ್ನು–ನಾಗಲೋಕದಲ್ಲಾಗಲೀ, ಸ್ವರ್ಗಲೋಕದಲ್ಲಾಗಲೀ, ಸ್ವರ್ಗಲೋಕದ ವ್ಯೋಮಯಾನಗಳಲ್ಲಾಗಲೀ ವಾಸಮಾಡುವುದರಿಂದ ಅನುಭವಿಸಲು ಸಾಧ್ಯವಾಗುವುದಿಲ್ಲ."

ಳ೦೨ನೆಯ ಅಧ್ಯಾಯವು ಮುಗಿಯಿತು.

೧೦೩ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ನಾಗಲೋಕದಲ್ಲಿ ನಾಗಗಳ ವರ್ಣನೆ : ಮಾತಲಿಯು ನಾಗಕುಮಾರನಾದ ಸುಮುಖನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಲು ನಿಶ್ಚಯಿಸಿದುದು

ನಾರದರು ಮಾತಲಿಯನ್ನು ಕುರಿತು ಹೇಳಿದರು :

"ಮಾತಲೇ! ಇದೋ ನೋಡು! ಈ ಪಟ್ಟಣವು ಭೋಗವತೀ ಎಂಬ ಹೆಸರಿನ ಪಟ್ಟಣವಾಗಿದೆ ಮತ್ತು ಇದು ಸರ್ಪಶ್ರೇಷ್ಠನಾದ ವಾಸುಕಿಯಿಂದ ಪರಿಪಾಲಿತವಾಗಿದೆ. ದೇವರಾಜನ ಪಟ್ಟಣವಾದ ಅಮರಾವತಿಯು ಎಷ್ಟು ಸೊಬಗಿನಿಂದ ಮತ್ತು ಸಮೃದ್ಧಿಯಿಂದ ಕೂಡಿರುವುದೋ ಈ ಪಟ್ಟಣವೂ ಅಷ್ಟೇ ಸೊಬಗಿನಿಂದ ಮತ್ತು ಸಂಪತ್ಸಮೃದ್ಧಿಯಿಂದ ಕೂಡಿದೆ. ಇಲ್ಲಿಯೇ ಶೇಷನಾಗನೂ ಇದ್ದಾನೆ. ಇವನು ಲೋಕಪ್ರಸಿದ್ಧನಾದವನು. ಇವನು ತನ್ನ

ತಪೋಬಲದಿಂದ ಪ್ರಭಾವಿತಳಾದ ಭೂದೇವಿಯನ್ನೇ ತನ್ನ ಶಿರಸ್ಸಿನಲ್ಲಿ ಧಾರಣೆ ಮಾಡಿರುತ್ತಾನೆ. ಇವನು ಶ್ವೇತಪರ್ವತಸದೃಶವಾದ ಆಕೃತಿಯುಳ್ಳವನಾಗಿ ರುತ್ತಾನೆ. ದಿವ್ಯವಾದ ಆಭರಣಗಳನ್ನು ಧರಿಸಿದ್ದಾನೆ. ಇವನಿಗೆ ಸಾವಿರ ಹೆಡೆಗಳಿವೆ. ಮಹಾಬಲನಾದ ಇವನ ಎರಡು ಸಾವಿರ ನಾಲಿಗೆಗಳು ಯಜ್ಞೇ ಶ್ವರನ ಜ್ವಾಲೆಗಳೋಪಾದಿಯಲ್ಲಿ ಕಾಣುತ್ತವೆ. ಇಲ್ಲಿ ನಾನಾವಿಧವಾದ ಆಕಾರ ಗಳುಳ್ಳ, ನಾನಾವಿಧವಾದ ಆಭರಣಗಳಿಂದ ಭೂಷಿತವಾಗಿರುವ ಸುರಸೆಯ ಮಕ್ಕಳು ಯಾವ ವಿಧವಾದ ಚಿಂತೆಯೂ ಇಲ್ಲದೆ ವಾಸಮಾಡುತ್ತಿವೆ. ಇವು ಗಳಲ್ಲಿ ಕೆಲವು ಸರ್ಪಗಳ ಶರೀರಗಳ ಮೇಲೆ ಮಣಿಗಳ ಚಿಹ್ನೆಗಳಿವೆ. ಮತ್ತೆ ಕೆಲವು ನಾಗಗಳ ಶರೀರಗಳ ಮೇಲೆ ಸ್ವಸ್ತಿಕದ ಚಿಹ್ನೆಗಳಿವೆ. ಕೆಲವು ಚಕ್ರಾಂಕಿತವಾಗಿವೆ. ಮತ್ತೆ ಕೆಲವು ಕಮಂಡಲುಚಿಹ್ನೆಗಳಿಂದ ಕೂಡಿವೆ. ಸಾವಿರಾರು ಸಂಖ್ಯೆಯಲ್ಲಿರುವ ಇವುಗಳು ಬಹುಬಲಶಾಲಿಗಳಾಗಿವೆ. ಇವು ಗಳೆಲ್ಲವೂ ಸಾಮಾನ್ಯವಾಗಿ ಕ್ರೂರಸ್ವಭಾವದುವುಗಳು. ಇವುಗಳಲ್ಲಿ ಕೆಲವಕ್ಕೆ ಸಾವಿರ ಹೆಡೆಗಳಿವೆ. ಮತ್ತೆ ಕೆಲವಕ್ಕೆ ಐದುನೂರು ಹೆಡೆಗಳಿವೆ. ಕೆಲವು ನೂರು ಹೆಡೆಗಳಿಂದ ಕೂಡಿವೆ. ಮತ್ತೆ ಕೆಲವಕ್ಕೆ ಕೇವಲ ಮೂರು ಹೆಡೆಗಳಿವೆ. ಎರಡು ಹೆಡೆಗಳಿರುವ ಸರ್ಪಗಳೂ ಉಂಟು. ಐದು ಹೆಡೆಗಳಿರುವ ಮತ್ತು ಏಳು ಹೆಡೆಗಳಿರುವ ಸರ್ಪಗಳೂ ಇವೆ. ಕೆಲವಕ್ಕೆ ಬಹುದೊಡ್ಡದಾದ ಹೆಡೆಗಳಿವೆ. ಕೆಲವು ಪರ್ವತದಂತೆ ಬೃಹತ್ತಾಗಿಯೂ ಉದ್ದವಾಗಿಯೂ ಇವೆ. ಮತ್ತೆ ಕೆಲವು ದೊಡ್ಡ ಶರೀರವುಳ್ಳವುಗಳಾಗಿವೆ. ಅನೇಕಾನೇಕ ಜಾತಿಸಮೂಹದಿಂದ ಕೂಡಿರುವ ಈ ಸರ್ಪಸಮೂಹದಲ್ಲಿ ಒಂದು ಜಾತಿಯ ಸರ್ಪಗಳು ದಶಲಕ್ಷಸಂಖ್ಯಾಕವಾಗಿವೆ. ಮತ್ತೊಂದು ಜಾತಿಯ ಸರ್ಪಗಳು ದಶಕೋಟಿ ಸಂಖ್ಯಾಕವಾಗಿವೆ. ಈ ಸರ್ಪಗಳಲ್ಲಿ ಇವುಗಳ ಶ್ರೇಷ್ಠತೆಗೆ ಅನುಗುಣವಾಗಿ ಕೆಲವು ಸರ್ಪಗಳ ನಾಮಧೇಯಗಳನ್ನು ಹೇಳುವೆನು ಕೇಳು ಮಾತಲೇ!

**ವಾಸುಕಿಸ್ತಕ್ಷಕಶ್ಚೈವ ಕರ್ಕೋಟಕಧನಂಜಯೌ ।**
**ಕಾಲಿಯೋ ನಹುಷಶ್ಚೈವ ಕಮ್ಬಲಾಶ್ವತರಾವುಭೌ ॥೯॥**

**ಬಾಹ್ಯಕುಣ್ಡೋ ಮಣಿರ್ನಾಗಸ್ತಥೈವಾಪೂರಣಃ ಖಗಃ ।**
**ವಾಮನಶ್ಚೈಲಪತ್ರಶ್ಚ ಕುಕುರಃ ಕುಕುಣಸ್ತಥಾ ॥೧೦॥**

**ಆರ್ಯಕೋ ನನ್ದಕಶ್ಚೈವ ತಥಾ ಕಲಶಪೋತಕೌ ।**
**ಕೈಲಾಸಕಃ ಪಿಞ್ಜರಕೋ ನಾಗಶ್ಚೈರಾವತಸ್ತಥಾ ॥೧೧॥**

**ಸುಮನೋಮುಖೋ ದಧಿಮುಖಃ ಶಙ್ಖೋ ನನ್ದೋಪನನ್ದಕೌ ।**
**ಆಪ್ತಃ ಕೋಟರಕಶ್ಚೈವ ಶಿಖೀ ನಿಷ್ಠೂರಿಕಸ್ತಥಾ ॥೧೨॥**

**ತಿತ್ತಿರಿರ್ಹಸ್ತಿಭದ್ರಶ್ಚ ಕುಮುದೋ ಮಾಲ್ಯಪಿಣ್ಡಕಃ ।**
**ದ್ವೌ ಪದ್ಮೌ ಪುಣ್ಡರೀಕಶ್ಚ ಪುಷ್ಪೋ ಮುದ್ಗರಪರ್ಣಕಃ ॥೧೩॥**

**ಕರವೀರಃ ಪೀಠರಕಃ ಸಂವೃತ್ತೋ ವೃತ್ತ ಏವ ಚ ।**
**ಪಿಣ್ಡಾರೋ ಬಿಲ್ವಪತ್ರಶ್ಚ ಮೂಷಿಕಾದಃ ಶಿರೀಷಕಃ ॥೧೪॥**

**ದಿಲೀಪಃ ಶಙ್ಖಶೀರ್ಷಶ್ಚ ಜ್ಯೋತಿಷ್ಕೋಽಥಾಪರಾಜಿತಃ ।**
**ಕೌರವ್ಯೋ ಧೃತರಾಷ್ಟ್ರಶ್ಚ ಕುಹುರಃ ಕೃಶಕಸ್ತಥಾ ॥೧೫॥**

**ವಿರಜಾ ಧಾರಣಶ್ಚೈವ ಸುಬಾಹುರ್ಮುಖರೋ ಜಯಃ ।**
**ಬಧಿರಾನ್ಧೌ ವಿಶುಣ್ಡಿಶ್ಚ ವಿರಸಃ ಸುರಸಸ್ತಥಾ ॥೧೬॥**

ವಾಸುಕಿ, ತಕ್ಷಕ, ಕರ್ಕೋಟಕ, ಧನಂಜಯ, ಕಾಲಿಯ, ನಹುಷ, ಕಂಬಲ, ಅಶ್ವತರ, ಬಾಹ್ಯಕುಂಡ, ಮಣಿನಾಗ, ಆಪೂರಣ, ಖಗ, ವಾಮನ, ಏಲಪತ್ರ, ಕುಕುರ, ಕುಕುಣ, ಆರ್ಯಕ, ನಂದಕ, ಕಲಶ, ಪೋತಕ, ಕೈಲಾಸಕ, ಪಿಂಜರಕ, ಐರಾವತ, ಸುಮನೋಮುಖ, ದಧಿಮುಖ, ಶಂಖ, ನಂದ, ಉಪನಂದ, ಆಪ್ತ, ಕೋಟರಕ, ಶಿಖೀ, ನಿಷ್ಠೂರಿಕ, ತಿತ್ತಿರಿ, ಹಸ್ತಿಭದ್ರ, ಕುಮುದ, ಮಾಲ್ಯಪಿಣ್ಡಕ, ಪದ್ಮ ಎಂಬ ಹೆಸರಿನ ಎರಡು ನಾಗಗಳು, ಪುಂಡರೀಕ, ಪುಷ್ಪ, ಮುದ್ಗರಪರ್ಣಕ, ಕರವೀರ, ಪೀಠರಕ, ಸಂವೃತ್ತ, ವೃತ್ತ, ಪಿಂಡಾರ, ಬಿಲ್ವಪತ್ರ, ಮೂಷಿಕಾದ, ಶಿರೀಷಕ, ದಿಲೀಪ, ಶಂಖಶೀರ್ಷ, ಜ್ಯೋತಿಷ್ಕ, ಅಪರಾಜಿತ, ಕೌರವ್ಯ, ಧೃತರಾಷ್ಟ್ರ, ಕುಹುರ, ಕೃಶಕ, ವಿರಜಸ, ಧಾರಣ, ಸುಬಾಹು, ಮುಖರ, ಜಯ, ಬಧಿರ, ಅಂಧ, ವಿಶುಂಡಿ, ವಿರಸ ಮತ್ತು ಸುರಸ–ಇವುಗಳು ಮುಖ್ಯ-ಮುಖ್ಯವಾದ ನಾಗಗಳು. ಕಶ್ಯಪರಿಗೆ ಸುರಸೆಯಲ್ಲಿ ಹುಟ್ಟಿದ ವಂಶವು ಕೋಟ್ಯನುಕೋಟಿ ಸಂಖ್ಯೆಯಲ್ಲಿ ಬೆಳೆದುಹೋಗಿದೆ. ಅವರಲ್ಲಿ ಮುಖ್ಯರಾದ ಕೆಲವರನ್ನು ಮಾತ್ರವೇ ನಾನು ಹೇಳಿದ್ದೇನೆ. ನೋಡು, ಮಾತಲೇ! ಇಲ್ಲಿ ಯಾವನಾದರೂ ನಿನ್ನ ಮನಸ್ಸಿಗೆ

ಒಪ್ಪಿಗೆಯಾದವನು ನಿನ್ನ ಮಗಳಿಗೆ ಅನುರೂಪನಾದವನು ಇದ್ದಾನೆಯೇ? ನೋಡು."

ದುರ್ಯೋಧನ! ನಾರದರು ಮಾತಲಿಯನ್ನು ಕುರಿತು ಹೀಗೆಂದು ಹೇಳಿದೊಡನೆಯೇ ಮಾತಲಿಯು ನಾಗಸಮೂಹದಲ್ಲಿದ್ದ ಒಬ್ಬನನ್ನು ಏಕಾಗ್ರ ಚಿತ್ತನಾಗಿ ನೋಡಿ–ತನ್ನ ಮಗಳಿಗೆ ಅನುರೂಪನಾದವನು ಇವನೊಬ್ಬನಿದ್ದಾನೆಂಬುದನ್ನು ಮನಸ್ಸಿನಲ್ಲಿ ಸ್ಥಿರಪಡಿಸಿಕೊಂಡು–ಆನಂದಭರಿತನಾಗಿ ನಾರದರನ್ನು ಪ್ರಶ್ನಿಸಿದನು :

**ಸ್ಥಿತೋ ಯ ಏಷ ಪುರತಃ ಕೌರವ್ಯಸ್ಯಾರ್ಯಕಸ್ಯ ತು ।**
**ದ್ಯುತಿಮಾನ್ದರ್ಶನೀಯಶ್ಚ ಕಸ್ಯೈಷ ಕುಲನನ್ದನಃ ॥೧೯॥**

"ನಾರದರೇ! ಆರ್ಯನಾದ ಕೌರವ್ಯನ ಮುಂದೆ ಕುಳಿತಿರುವ ಇವನು ಯಾರು? ತೇಜಸ್ವಿಯೂ ದರ್ಶನೀಯನೂ ಆಗಿರುವ ಈತನು ಯಾವ ಕುಲಕ್ಕೆ ಆನಂದದಾಯಕನಾಗಿದ್ದಾನೆ?

**ಕಃ ಪಿತಾ ಜನನೀ ಚಾಸ್ಯ ಕತಮಸ್ಯೈಷ ಭೋಗಿನಃ ।**
**ವಂಶಸ್ಯ ಕಸ್ಯೈಷ ಮಹಾನ್ಕೇತುಭೂತ ಇವ ಸ್ಥಿತಃ ॥೨೦॥**

ಇವನ ತಂದೆಯು ಯಾರು? ತಾಯಿಯು ಯಾರು? ಇವನು ಯಾವ ಮಹಾನುಭಾವನಾದ ನಾಗನಿಗೆ ಪೌತ್ರನಾಗಿರುತ್ತಾನೆ? ಯಾವ ಮಹಾ ವಂಶಕ್ಕಿವನು ಧ್ವಜದೋಪಾದಿಯಲ್ಲಿ ಅಲಂಕಾರಪ್ರಾಯನಾಗಿರುತ್ತಾನೆ?

**ಪ್ರಣಿಧಾನೇನ ಧೈರ್ಯೇಣ ರೂಪೇಣ ವಯಸಾ ಚ ಮೇ ।**
**ಮನಃ ಪ್ರವಿಷ್ಟೋ ದೇವರ್ಷೇ ಗುಣಕೇಶ್ಯಾಃ ಪತಿರ್ವರಃ ॥೨೧॥**

ಇವನ ಏಕಾಗ್ರತೆ, ಧೈರ್ಯ, ರೂಪ ಮತ್ತು ವಯಸ್ಸು–ಇವುಗಳು ನನ್ನ ಮನಸ್ಸಿಗೆ ಒಪ್ಪಿಗೆಯಾಗಿವೆ. ಗುಣಕೇಶಿಗೆ ಇವನು ಶ್ರೇಷ್ಠನಾದ ವರನಾಗಿದ್ದಾನೆ, ನಾರದರೇ!"

ದುರ್ಯೋಧನ! ನಾಗಶ್ರೇಷ್ಠನೊಬ್ಬನನ್ನು (ಸುಮುಖನನ್ನು) ನೋಡಿ ಮಾತಲಿಯು ಸುಪ್ರೀತನಾಗಿರುವುದನ್ನು ಅವನ ಪ್ರಸನ್ನಮುಖಭಾವದಿಂದಲೇ ತಿಳಿದು ಆ ನಾಗಶ್ರೇಷ್ಠನ ಮಾಹಾತ್ಮ್ಯವನ್ನೂ, ಅವನ ವಂಶಾವಳಿಯನ್ನೂ

ಮತ್ತು ಅವನು ಮಾಡುತ್ತಿರುವ ಕಾರ್ಯವನ್ನೂ ನಾರದರು ಮಾತಲಿಗೆ ವಿವರಿಸಿ ಹೇಳಿದರು :

**ಐರಾವತಕುಲೇ ಜಾತಃ ಸುಮುಖೋ ನಾಮ ನಾಗರಾಟ್ ।**
**ಆರ್ಯಕಸ್ಯ ಮತಃ ಪೌತ್ರೋ ದೌಹಿತ್ರೋ ವಾಮನಸ್ಯ ಚ ॥೨೩॥**

**ಏತಸ್ಯ ಹಿ ಪಿತಾ ನಾಗಶ್ಚಿಕುರೋ ನಾಮ ಮಾತಲೇ ।**
**ನಚಿರಾದ್ವೈನತೇಯೇನ ಪಞ್ಚತ್ವಮುಪಪಾದಿತಃ ॥೨೪॥**

“ಈ ನಾಗರಾಜನ ಹೆಸರು ಸುಮುಖ. ಈತನು ಐರಾವತನ ಕುಲದಲ್ಲಿ ಹುಟ್ಟಿರುತ್ತಾನೆ. ಆರ್ಯಕನ ಪೌತ್ರನಿವನು. ವಾಮನನೆಂಬುವನ ಮಗಳ ಮಗ (ದೌಹಿತ್ರ.)

ಚಿಕುರ ಎಂಬ ನಾಗನು ಇವನ ತಂದೆ. ಕೇವಲ ಸ್ವಲ್ಪಕಾಲದ ಹಿಂದೆ ವೈನತೇಯನ ದೆಸೆಯಿಂದಾಗಿ ಅವನು ಪ್ರಾಣತೊರೆದನು. (ಗರುಡನು ಚಿಕುರನನ್ನು ತಿಂದುಬಿಟ್ಟನು.)”

ತನ್ನ ನಿರ್ಧಾರವನ್ನು ಪುನಃ ವ್ಯಕ್ತಪಡಿಸುತ್ತಾ ವರನ ವಿಷಯದಲ್ಲಿ ಪರಮಪ್ರೀತನಾಗಿದ್ದ ಮಾತಲಿಯು ಹೇಳಿದನು :

“ನಾರದರೇ! ನಾನೀ ಭುಜಗೋತ್ತಮನನ್ನು ಅಳಿಯನನ್ನಾಗಿ ಮಾಡಿ ಕೊಳ್ಳಲು ಒಪ್ಪಿದ್ದೇನೆ. ಇವನು ನನ್ನ ಮನಸ್ಸಿಗೆ ಹಿಡಿಸಿದ್ದಾನೆ. ಇವನ ವಿಷಯದಲ್ಲಿ ನಾನು ಸುಪ್ರೀತನಾಗಿರುತ್ತೇನೆ. ಈ ನಾಗಶ್ರೇಷ್ಠನಿಗೇ ನನ್ನ ಪ್ರೀತಿಯ ಮಗಳಾದ ಗುಣಕೇಶಿಯನ್ನು ಕೊಟ್ಟು ಮದುವೆಮಾಡಲು ಸಾಧ್ಯವಾಗುವಂತೆ ಪ್ರಯತ್ನಿಸಿರಿ.”

ಿ೧೦೩ನೆಯ ಅಧ್ಯಾಯವು ಮುಗಿಯಿತು.

೧೦೪ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ನಾರದರು ಆರ್ಯಕನ ಬಳಿಗೆ ಹೋಗಿ ಸುಮುಖನಿಗೆ ಮಾತಲಿಯ ಮಗಳನ್ನು ಕೊಟ್ಟು ಮದುವೆಮಾಡುವ ಪ್ರಸ್ತಾಪಮಾಡಿದುದು : ಮಾತಲಿ, ನಾರದರು, ಆರ್ಯಕ ಮತ್ತು ಸುಮುಖರು ಇಂದ್ರನ ಬಳಿಗೆ ಹೋದುದು : ಇಂದ್ರನು ಸುಮುಖನಿಗೆ ದೀರ್ಘಾಯುಷ್ಯವನ್ನು ಕೊಟ್ಟುದು : ಸುಮುಖ-ಗುಣಕೇಶಿಯರ ವಿವಾಹ

ನಾರದರು ಆರ್ಯಕನನ್ನು ಸಂಧಿಸಿ ಮಾತನಾಡಲು ಪ್ರಾರಂಭಿಸಿದರು :

(ಮಧ್ಯಸ್ಥರಾದವರು ಹೆಣ್ಣುಕೊಡಲು ಬರುವವರನ್ನು ಪರಿಚಯ ಮಾಡಿಕೊಡುವಾಗ ಅವರ ಕುಲ, ಗೋತ್ರ, ಅಧಿಕಾರ, ಸಂಪತ್ತು–ಈ ಎಲ್ಲವನ್ನೂ ಸವಿಸ್ತರವಾಗಿ ಹೇಳುವುದು ಇಂದೂ ರೂಢಿಯಲ್ಲಿದೆಯಲ್ಲವೇ? ಗಣ್ಯವ್ಯಕ್ತಿಗಳೊಡನೆ ಅವರಿಗಿರುವ ಸಂಬಂಧವನ್ನೂ ಹೇಳಿ ಮಾತುಕತೆಗೆ ಪ್ರಾರಂಭಿಸುವರು. ಅಂತೆಯೇ ನಾರದರೂ ಇಂದ್ರನೊಡನೆ ಮಾತಲಿಗೆ ಸಂಬಂಧವಿರುವುದನ್ನೇ ಮೊದಲು ಪ್ರಸ್ತಾಪಿಸಿ ಆರ್ಯಕನೊಡನೆ ಮಾತನಾಡುತ್ತಾರೆ.)

**ಸೂತೋಽಯಂ ಮಾತಲಿರ್ನಾಮ ಶಕ್ರಸ್ಯ ದಯಿತಃ ಸುಹೃತ್ ।**
**ಶುಚಿಃ ಶೀಲಗುಣೋಪೇತಸ್ತೇಜಸ್ವೀ ವೀರ್ಯವಾನ್ಬಲೀ ॥೧॥**

**ಶಕ್ರಸ್ಯಾಯಂ ಸಖಾ ಚೈವ ಮನ್ತ್ರೀ ಸಾರಥಿರೇವ ಚ ।**
**ಅಲ್ಪಾನ್ತರಪ್ರಭಾವಶ್ಚ ವಾಸವೇನ ರಣೇ ರಣೇ ॥೨॥**

**ಅಯಂ ಹರಿಸಹಸ್ರೇಣ ಯುಕ್ತಂ ಚೈತ್ರಂ ರಥೋತ್ತಮಮ್ ।**
**ದೇವಾಸುರೇಷು ಯುದ್ಧೇಷು ಮನಸೈವ ನಿಯಚ್ಛತಿ ॥೩॥**

**ಅನೇನ ವಿಜಿತಾನಶ್ವೈರ್ದೋರ್ಭ್ಯಾಂ ಜಯತಿ ವಾಸವಃ ।**
**ಅನೇನ ಬಲಭಿತ್ಪೂರ್ವಂ ಪ್ರಹೃತೇ ಪ್ರಹರತ್ಯುತ ॥೪॥**

"ಆರ್ಯಕ! ಇವನು ಇಂದ್ರನಿಗೆ ಬಹುಪ್ರಿಯನಾದ ಸ್ನೇಹಿತನೂ ಮತ್ತು ಸಾರಥಿಯೂ ಆಗಿರುತ್ತಾನೆ. ಇವನ ಹೆಸರು ಮಾತಲಿ. ಇವನು ಪರಿಶುದ್ಧನು (ಶುದ್ಧಾಂತಃಕರಣನು,) ಸುಶೀಲನು, ಸರ್ವಸದ್ಗುಣಸಂಪ

ನ್ನನು, ಮಹಾತೇಜಸ್ವಿಯು, ವೀರ್ಯವಂತನು, ಮತ್ತು ಬಲಿಷ್ಠನು. ಇಂದ್ರನಿಗಿವನು ಪರಮಮಿತ್ರನೂ, ಮಂತ್ರಿಯೂ ಮತ್ತು ಸಾರಥಿಯೂ ಆಗಿರುತ್ತಾನೆ. ಇಂದ್ರನು ಮಾಡುವ ಪ್ರತಿಯೊಂದು ಯುದ್ಧದಲ್ಲಿಯೂ ಇವನು ಅವನ ಜೊತೆಯಲ್ಲಿಯೇ ಇರುತ್ತಾನೆ. ಪ್ರಭಾವದಲ್ಲಿ ಅಥವಾ ಪರಾಕ್ರಮದಲ್ಲಿ ಇವನು ಇಂದ್ರನಿಗಿಂತ ಸ್ವಲ್ಪಮಾತ್ರ ಕಡಿಮೆಯವನಾಗಿರಬಹುದು. ಹೆಚ್ಚೇನೂ ಅಂತರವಿಲ್ಲ. ದೇವಾಸುರರ ಯುದ್ಧದಲ್ಲಿವನು ಸಾವಿರ ಕುದುರೆಗಳಿಂದ ಯುಕ್ತವಾದ ಇಂದ್ರನ ಪರಮಶ್ರೇಷ್ಠವಾದ ಚೈತ್ರರಥವನ್ನು ತನ್ನ ಮನಸ್ಸಿನಿಂದಲೇ ನಿಯಂತ್ರಣಮಾಡಿರುತ್ತಾನೆ. ಅರ್ಥಾತ್ ಮಾತಲಿಯು, ಜಿತೇಂದ್ರಿಯನೂ, ಜಿತಮನಸ್ಕನೂ ಆಗಿರುತ್ತಾನೆ. ಮನಸ್ಸಿನ ನಿಯಂತ್ರಣವು ಬಹಳ ಕಷ್ಟತರವಾದುದು. ಅಂತೆಯೇ ಸಾವಿರ ಕುದುರೆಗಳನ್ನು ನಿಯಂತ್ರಿಸುವ ಕಾರ್ಯವೂ ಬಹುಕಷ್ಟತರವಾದುದು. ಚಂಚಲವಾದ ಮನಸ್ಸನ್ನೂ ಇವನು ನಿಯಂತ್ರಣಮಾಡುವ ಸಾಮರ್ಥ್ಯವುಳ್ಳವನಾಗಿರುವುದರಿಂದ ಮನಸ್ಸಿನ ನಿಯಂತ್ರಣದಂತೆಯೇ ಸಾವಿರ ಕುದುರೆಗಳನ್ನೂ ನಿಯಂತ್ರಣಮಾಡುತ್ತಾನೆ. ಅಶ್ವಗಳ ಮೂಲಕವಾಗಿ ಮಾತಲಿಯಿಂದ ಜಯಿಸಲ್ಪಟ್ಟ ಶತ್ರುಗಳನ್ನು ವಾಸವನು ಭುಜಬಲದಿಂದ ಪರಾಜಯಗೊಳಿಸುತ್ತಾನೆ. ಮಾತಲಿಯಿಂದ ಶತ್ರುಗಳು ಮೊದಲ ಬಾರಿಗೆ ಪ್ರಹೃತರಾದನಂತರ ಇಂದ್ರನು ಅವರನ್ನು ಪ್ರಹರಿಸುತ್ತಾನೆ.

ಇವನಿಗೆ ಚೆಲುವೆಯಾದ, ಶ್ರೇಷ್ಠವಾದ ಕಟಿಪ್ರದೇಶದಿಂದ ಕೂಡಿರುವ, ಸತ್ಯನಿಷ್ಠಳಾದ, ಸದ್ಗುಣಸಂಪನ್ನಳಾದ ಗುಣಕೇಶೀ ಎಂಬ ಪ್ರಸಿದ್ಧ ನಾಮಕಳಾದ ಮಗಳಿದ್ದಾಳೆ. ಅವಳಿಗೆ ಸದೃಶವಾದ ರೂಪವುಳ್ಳವರು ಪ್ರಪಂಚದಲ್ಲಿಯೇ ಮತ್ತಾರೂ ಇರುವುದಿಲ್ಲ. ಅಮರದ್ಯುತಿಯೇ! ಅವಳಿಗೆ ವರನನ್ನು ಹುಡುಕುವ ಸಲುವಾಗಿ ಮಾತಲಿಯು ಮೂರು ಲೋಕಗಳಲ್ಲಿಯೂ ಸಂಚರಿಸುತ್ತಿದ್ದಾಗ ನಿನ್ನ ಪೌತ್ರನು ಇವನ ಕಣ್ಣಿಗೆ ಬಿದ್ದನು. ತನ್ನ ಮಗಳಿಗೆ ಅನುರೂಪನಾದ ವರನು ನಿನ್ನ ಮೊಮ್ಮಗನಾದ ಸುಮುಖನೇ ಎಂದು ಮಾತಲಿಯು ನಿರ್ಧರಿಸಿದ್ದಾನೆ. ಸುಮುಖನನ್ನಿವನು ಒಪ್ಪಿ ಕೊಂಡಿರುತ್ತಾನೆ. ನಿನಗೂ ಮಾತಲಿಯ ಸಂಬಂಧವನ್ನು ಬೆಳೆಸಬೇಕೆನ್ನುವ ಇಚ್ಛೆಯಿರುವುದಾದರೆ ಸಾವಕಾಶಮಾಡದೇ ಕನ್ಯಾಪ್ರತಿಗ್ರಹಕ್ಕೆ ಸಮ್ಮತಿಸು. ಗುಣಕೇಶಿಯನ್ನು ನಿನ್ನ ಮೊಮ್ಮಗನಿಗೆ ತಂದುಕೊಳ್ಳುವೆನೆಂದು ನಿಶ್ಚಯಮಾಡು.

**ಯಥಾ ವಿಷ್ಣುಕುಲೇ ಲಕ್ಷ್ಮೀರ್ಯಥಾ ಸ್ವಾಹಾ ವಿಭಾವಸೋಃ ।**
**ಕುಲೇ ತವ ತಥೈವಾಸ್ತು ಗುಣಕೇಶೀ ಸುಮಧ್ಯಮಾ ॥೮॥**

ವಿಷ್ಣುವಿನ ಮನೆಯಲ್ಲಿ ಲಕ್ಷ್ಮಿಯು ಹೇಗೆ ಬೆಳಗುತ್ತಿದ್ದಾಳೆಯೋ– ಯಜ್ಞೇಶ್ವರನ ಜೊತೆಯಲ್ಲಿ ಸ್ವಾಹಾದೇವಿಯು ಹೇಗಿದ್ದಾಳೆಯೋ– ಹಾಗೆಯೇ ನಿನ್ನ ಕುಲದಲ್ಲಿ (ಮನೆಯಲ್ಲಿ) ಸುಮಧ್ಯಮೆಯಾದ ಗುಣಕೇಶಿಯು ಸುಪ್ರತಿಷ್ಠಿತಳಾಗಲಿ. (ನಿನ್ನ ಮನೆಯನ್ನವಳು ಬೆಳಗಲಿ.)

ನಿನ್ನ ಮೊಮ್ಮಗನಾದ ಸುಮುಖನ ಸಲುವಾಗಿ ಮಾತಲಿಯ ಮಗಳಾದ ಗುಣಕೇಶಿಯನ್ನು ಪರಿಗ್ರಹಿಸು. ಶಚೀದೇವಿಯು ಇಂದ್ರನಿಗೆ ಅನುರೂಪಳಾದ ಪತ್ನಿಯಾಗಿರುವಂತೆ–ಗುಣಕೇಶಿಯು ನಿನ್ನ ಮೊಮ್ಮಗನಿಗೆ ಅನುರೂಪಳಾದ ಪತ್ನಿಯಾಗುತ್ತಾಳೆ. ಆದರೆ ಸುಮುಖನಲ್ಲಿ ಪಿತೃಹೀನತ್ವ ದೋಷವಿದೆ. (ಕನ್ಯೆಯನ್ನು ಕೊಡಬೇಕಾದರೆ ಅತ್ತೆ-ಮಾವಂದಿರೂ ಇರಬೇಕು. ಅಂತಹ ಮನೆಯನ್ನೇ ನೋಡಿಕೊಡಬೇಕು.) ಆದರೆ ಈ ದೋಷವನ್ನು ನಾವು ಪರಿಗಣಿಸಹೋಗುವುದಿಲ್ಲ. ನಿಮ್ಮ ಸಂಬಂಧದಲ್ಲಿ ನಮಗೆ ಈ ಒಂದು ದೋಷಕ್ಕಿಂತಲೂ ಗುಣಗಳೇ ಹೆಚ್ಚು ಕಂಡುಬಂದಿವೆ. ನಾವು ಹೆಣ್ಣುಕೊಡಲು ನಿಶ್ಚಯಿಸಿದ್ದೇವೆ. ಮೊದಲನೆಯದಾಗಿ ನೀವು ಸತ್ಕುಲಪ್ರಸೂತರು. ನಿನ್ನ ವಿಷಯದಲ್ಲಿಯೂ ಮತ್ತು ನಿಮ್ಮ ಮೂಲಪುರುಷನಾದ ಐರಾವತನ ವಿಷಯದಲ್ಲಿಯೂ ನಮಗೆ ಅಪಾರವಾದ ಗೌರವವಿದೆ. ಸುಮುಖನಲ್ಲಿ ಶೀಲ-ಶೌಚ-ದಮಾದಿ ಗುಣಗಳಿರುವುದರಿಂದ ನಾವವನನ್ನು ಮೆಚ್ಚಿಕೊಂಡಿರುತ್ತೇವೆ. ಈ ಕಾರಣಗಳಿಂದಾಗಿ ನಿಮ್ಮ ಸಂಬಂಧದಲ್ಲಿರುವ ಪಿತೃಹೀನತೆಯ ದೋಷವನ್ನೂ ನಾವು ಪರಿಗಣಿಸುತ್ತಿಲ್ಲ. ಇಂದ್ರಸಖನಾದ ಮಾತಲಿಯು ತಾನಾಗಿಯೇ ನಿಮ್ಮ ಸಮೀಪಕ್ಕೆ ಬಂದು ಕನ್ಯಾದಾನಮಾಡಲು ಉದ್ಯುಕ್ತನಾಗಿದ್ದಾನೆ. ಇವನನ್ನು ಯಥಾಯೋಗ್ಯವಾಗಿ ಸಮ್ಮಾನಮಾಡುವುದು ನಿನಗೆ ಯೋಗ್ಯವಾಗಿದೆ.”

(ಆಧುನಿಕರು ವಾಕ್ಚತುರರೆಂದು ಹೇಳಿಕೊಂಡರೂ ಯಾವ ಸಮಯ

ದಲ್ಲಿ ಹೇಗೆ ಮಾತನಾಡಬೇಕೆನ್ನುವ ಚಾತುರ್ಯವನ್ನು ನಾವು ನಾರದರಿಂದಲೇ ಕಲಿಯಬೇಕಾಗಿದೆ. ಮೊದಲವರು ಕನ್ಯಾದಾತೃವಿನ ಸ್ಥಾನ-ಮಾನಗಳನ್ನು ಬಹುವಾಗಿ ವರ್ಣಿಸಿದರು. ವರನ ಕಡೆಯವರಿಗೆ ಕನ್ಯಾಪಿತೃವು ತಮಗಿಂತಲೂ ಶ್ರೇಷ್ಠನೆಂಬ ಭಾವನೆಯುಂಟಾಗುವಂತೆ ಮಾಡಿದರು. ಅನಂತರ ಕನ್ಯೆಯನ್ನೂ ಯಥಾಯೋಗ್ಯವಾಗಿ ಹೊಗಳಿದರು. ಮೂರನೆಯದಾಗಿ ವರನ ಕಡೆಯಲ್ಲಿದ್ದ ಒಂದು ದೋಷವನ್ನೂ ಸಹ ಪ್ರಕಟಪಡಿಸಿದರು. ವರನಿಗೆ ತಂದೆಯಿಲ್ಲವೆಂಬುದೂ ಒಂದು ದೋಷವಾಗಿ ಪರಿಣಮಿಸುತ್ತದೆ. ತಂದೆಯು ಆಢ್ಯನಾಗಿದ್ದರೆ ಜನರು ವರನ ಸ್ಥಾನ-ಮಾನಗಳ ವಿಷಯವಾಗಿ ಹೆಚ್ಚು ಯೋಚಿಸಹೋಗುವುದಿಲ್ಲ. ತಂದೆಯೂ ಇಲ್ಲದೇ ತಂದೆಯ ಸಂಬಂಧವಾದ ಐಶ್ವರ್ಯವೂ ಇಲ್ಲದಿದ್ದರೆ ಹೆಣ್ಣಿನ ಕಡೆಯವರು ಹಿಂದು-ಮುಂದು ನೋಡುವುದು ಸ್ವಾಭಾವಿಕ.)

ಕಣ್ವರು ದುರ್ಯೋಧನನನ್ನು ಕುರಿತು ಹೇಳಿದರು :

"ದುರ್ಯೋಧನ! ಆರ್ಯಕನಿಗೆ ನಾರದರ ಮಾತನ್ನು ಕೇಳಿ ಸಂತೋಷವಾಯಿತು. ಪ್ರಹೃಷ್ಟನಾದರೂ ದೀನನಾಗಿದ್ದನು. ಮಾತಲಿಯು ತನ್ನ ಮಗಳಾದ ಗುಣಕೇಶಿಯನ್ನು ತನ್ನ ಮೊಮ್ಮಗನಿಗೆ ಕೊಡಲು ಬಂದಿರುವುದರಿಂದ ಬಹುಸಂತೋಷವಾದರೂ ಸುಮುಖನ ಭವಿತವ್ಯವನ್ನು ಯೋಚಿಸಿ ಆರ್ಯಕನು ಚಿಂತಾಮಗ್ನನಾದನು. ಅಂತೆಯೇ ನಾರದರನ್ನು ಕುರಿತು ಹೇಳಿದನು :

**ವ್ರಿಯಮಾಣೇ ತಥಾ ಪೌತ್ರೇ ಪುತ್ರೇ ಚ ನಿಧನಂ ಗತೇ ।**
**ಕಥಮಿಚ್ಛಾಮಿ ದೇವರ್ಷೇ ಗುಣಕೇಶೀಂ ಸ್ನುಷಾಂ ಪ್ರತಿ ॥೧೩॥**

"ದೇವರ್ಷಿಗಳಾದ ನಾರದರೇ! ನನ್ನ ಪುತ್ರನು ಮರಣಹೊಂದಿರಲಾಗಿ, ಪೌತ್ರನೂ ಮೃತ್ಯುವಿಗೆ ವಶನಾಗುವುದರಲ್ಲಿರುವಾಗ ಗುಣಕೇಶಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಲು ಹೇಗೆ ತಾನೇ ಇಚ್ಛಿಸಲಿ? (ಹೇಗೆ ತಾನೇ ಒಪ್ಪಲಿ?) ನಿಮ್ಮ ಮಾತಿಗೆ ನಾನು ಗೌರವಕೊಡುವುದಿಲ್ಲವೆಂದಲ್ಲ. ನಾರದರೇ! ಮಾತಲಿಯು ಇಂದ್ರನೊಡನೆ ಇರತಕ್ಕವನು. ಇಂದ್ರನ ಮಿತ್ರನು. ಇಂತಹವನ ಸಂಬಂಧವನ್ನು ಬೆಳೆಸಲು ಯಾರು ತಾನೇ ಇಚ್ಛಿಸುವುದಿಲ್ಲ? ಕಾರಣದ ದೌರ್ಬಲ್ಯವಿರುವುದರಿಂದ ಅದನ್ನೇ ಕುರಿತು ಚಿಂತಿಸು

ತ್ತಿದ್ದೇನೆ. ನಾರದರೇ! (ಯಾವುದೊಂದು ಇಲ್ಲದಿದ್ದರೆ ಕಾರ್ಯವಾಗುವುದಿಲ್ಲವೋ ಅದೇ ಕಾರಣ. ಮದುವೆಯು 'ಕಾರ್ಯ' ; ವರನು 'ಕಾರಣ'– ಇಲ್ಲಿ ವರನಲ್ಲಿಯೇ ದೌರ್ಬಲ್ಯವಿದೆ. 'ಆದುದರಿಂದ ನಾನು ಯೋಚಿಸುತ್ತಿದ್ದೇನೆ' ಎಂದು ಆರ್ಯಕನು ಹೇಳುತ್ತಾನೆ.) ನಾರದರೇ! ಇವನ ದೇಹೋತ್ಪತ್ತಿಗೆ ಕಾರಣನಾದ ನನ್ನ ಮಗನು ವೈನತೇಯನಿಂದ ಭಕ್ಷಿಸಲ್ಪಟ್ಟನು. ಅದರಿಂದ ನಾವೆಲ್ಲರೂ ಬಹಳ ದುಃಖಿತರಾಗಿದ್ದೇವೆ. ನಮ್ಮ ನಿರಂತರ ದುಃಖಕ್ಕೆ ಕಾರಣವೂ ಇದೆ. ಇವನ ತಂದೆಯನ್ನು ಭಕ್ಷಿಸಿದ ಗರುಡನು ಇಲ್ಲಿಂದ ಹೊರಟುಹೋಗುತ್ತಿದ್ದಾಗ–'**ಮಾಸೇನಾನ್ಯೇನ ಸುಮುಖಂ ಭಕ್ಷಯಿಷ್ಯೇ**''– 'ಮುಂದಿನ ಒಂದು ತಿಂಗಳಿನಲ್ಲಿಯೇ ಪುನಃ ಇಲ್ಲಿಗೆ ಬಂದು ಸುಮುಖನನ್ನೂ ತಿನ್ನುತ್ತೇನೆ'–ಎಂದು ಹೇಳಿ ಹೊರಟುಹೋಗಿದ್ದಾನೆ. ಅವನ ದೃಢನಿರ್ಧಾರದ ಪರಿಣಾಮವೇನೆಂಬುದನ್ನೂ ನಾವು ತಿಳಿದವರಾಗಿದ್ದೇವೆ. ಅವನು ಹೇಳಿದಂತೆಯೇ ಆಗುತ್ತದೆ. ಮುಂದಿನ ಒಂದು ಮಾಸದಲ್ಲಿ ವೈನತೇಯನು ಪುನಃ ಬಂದು ಸುಮುಖನನ್ನು ತಿನ್ನುವುದಂತೂ ನಿಶ್ಚಯ. ಸುಪರ್ಣನು ಹೇಳಿದ್ದ ಆ ಮಾತನ್ನು ನಾನು ನೆನೆಸಿಕೊಂಡಿದ್ದರಿಂದ ಗುಣಕೇಶಿಯನ್ನು ಸೊಸೆಯನ್ನಾಗಿ ಮಾಡಿಕೊಳ್ಳುವಂತೆ ಹೇಳಿದುದರಿಂದುಂಟಾದ ಸಂತೋಷವೂ ವಿನಷ್ಟವಾಗಿ ಹೋಯಿತು."

ಆರ್ಯಕನು ಹೇಳಿದ ಮಾತುಗಳನ್ನು ಕೇಳಿ ಮಾತಲಿಯು ಅಧೀರನಾಗಲಿಲ್ಲ. ಆರ್ಯಕನನ್ನು ಕುರಿತು ಹೇಳಿದನು : "ಆರ್ಯಕ! ನಾನೀವಿಷಯದಲ್ಲಿ ಒಂದು ಯೋಚನೆಯನ್ನು ಮಾಡುತ್ತಿದ್ದೇನೆ. ಅದರಂತೆ ಮಾಡಿದರೆ ಸುಮುಖನು ಅಪಾಯದಿಂದ ಪಾರಾಗಬಹುದು. ನಾನು ಮಾತ್ರ ನಿನ್ನ ಪೌತ್ರನನ್ನು ಅಳಿಯನನ್ನಾಗಿ ಮಾಡಿಕೊಂಡುಬಿಟ್ಟಿದ್ದೇನೆ. ಇದು ನಿಶ್ಚಯ. ಈ ನಿನ್ನ ನಾಗಕುಮಾರನು ನನ್ನ ಮತ್ತು ನಾರದರ ಜೊತೆಯಲ್ಲಿ ತ್ರಿಲೋಕೇಶನಾದ, ಸುರಪತಿಯಾದ ವಾಸವನನ್ನು ಸಂದರ್ಶಿಸಲಿ. ಕಟ್ಟಕಡೆಯದಾಗಿ ನಾನೂ ಇವನ ಆಯುಃಪ್ರಮಾಣವೆಷ್ಟೆಂಬುದನ್ನು ತಿಳಿದುಕೊಳ್ಳುತ್ತೇನೆ. ವೈನತೇಯನ ಕಾರ್ಯಕ್ಕೆ ವಿಘಾತವನ್ನುಂಟುಮಾಡಲೂ ಪ್ರಯತ್ನಿಸುತ್ತೇನೆ."

(ಇಲ್ಲಿ ಮಾತಲಿಯು 'ಸುಮುಖನ ಆಯುಃಪ್ರಮಾಣವೆಷ್ಟೆಂದು ತಿಳಿದುಕೊಳ್ಳುವೆನು'–ಎಂದು ಹೇಳಿರುವುದು ವಿಚಾರಣೀಯವಾಗಿದೆ. ಪ್ರತಿ ಯೊಬ್ಬರಿಗೂ ಅವರವರ ಜಾತಕದ ಪ್ರಕಾರ ಆಯುಃಪ್ರಮಾಣ ಎಷ್ಟೆಂದು ನಿರ್ಣಯವಾಗಿರುತ್ತದೆ. ಮನುಷ್ಯಮಾತ್ರದವನಿಗೆ ನೂರ ಇಪ್ಪತ್ತು ವರ್ಷಗಳ ಆಯುಷ್ಯ–ಎಂಬ ವಿಷಯ ಬೇರೆ. ಸಾಮಾನ್ಯವಾಗಿ ಹುಟ್ಟಿದವರ ಅಂತ್ಯವು ಎಂದಾಗಬಹುದೆಂಬುದನ್ನು ಜಾತಕದಿಂದ ತಿಳಿಯಬಹುದು. ಅಂದರೆ ಅದರೊಳಗಾಗಿ ಸಾಯುವುದೇ ಇಲ್ಲವೆಂದಲ್ಲ. ಅವನಿಗೆ ಪ್ರಾಪ್ತವಾಗತಕ್ಕ ಅಪಘಾತಗಳನ್ನೂ ಜಾತಕವು ಸೂಚಿಸುತ್ತದೆ. ಅಂತಹ ಅಪಘಾತಗಳ ಪರಿಹಾರವನ್ನು ಗ್ರಹಗಳ ಜಪ-ಹೋಮಾರ್ಚನಾದಿಗಳ ಮೂಲಕವಾಗಿ ಪರಿಹರಿಸಿಕೊಳ್ಳಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಒಬ್ಬನ ಆಯುಷ್ಯವೇ ಅಲ್ಪವಾಗಿದ್ದ ಪಕ್ಷದಲ್ಲಿ ಜಪ-ಹೋಮಾದಿಗಳೂ ಪ್ರಯೋಜನಕ್ಕೆ ಬರಲಾರವು. ಯಮನು ಸತ್ಯವಾನನಿಗೆ ಆಯುಷ್ಯವನ್ನು ಹೆಚ್ಚಿಸಿಕೊಟ್ಟಂತೆ ವಿಶೇಷಶಕ್ತಿಯು ಮಾತ್ರ ಅಲ್ಪಾಯುವನ್ನು ದೀರ್ಘಾಯುವನ್ನಾಗಿ ಮಾಡ ಬಲ್ಲುದು. ಈ ಕಾರಣದಿಂದಾಗಿ ಮಾತಲಿಯೂ ಈ ಮಾತನ್ನು ಹೇಳಿದ್ದಾನೆ. ಸುಮುಖನು ಅಲ್ಪಾಯುವೇ ಆಗಿದ್ದ ಪಕ್ಷದಲ್ಲಿ ವಿಶೇಷಶಕ್ತಿಯ ಮೂಲಕವಾಗಿ ಅವನ ಆಯುಷ್ಯವನ್ನು ಹೆಚ್ಚಿಸಬೇಕಾಗಿದೆ. ದೀರ್ಘಾಯುಷ್ಯವಿದ್ದು ಕಂಟಕಾದಿ ಗಳು ಇರುವುದಾದಲ್ಲಿ ಜಪ-ಹೋಮಾರ್ಚನಾದಿಗಳಿಂದ ಪರಿಹರಿಸ ಬಹುದು. ಇದೇ ಮಾತಲಿಯ ಅಭಿಪ್ರಾಯವೂ ಆಗಿರಬಹುದು.)

ಮಾತಲಿಯು ಮುಂದುವರಿದು ಹೇಳುತ್ತಾನೆ :

"ಆರ್ಯಕ! ನಿನಗೆ ಮಂಗಳವಾಗಲಿ. ಕಾರ್ಯದ ಸಾಧನೆಗಾಗಿ ಸುಮುಖನೂ ನನ್ನೊಡನೆ ದೇವರಾಜನಲ್ಲಿಗೆ ಬರಲಿ."

ಮಾತಲಿಯು ಹೇಳಿದ ಮಾತುಗಳನ್ನು ಎಲ್ಲರೂ ಒಪ್ಪಿದರು. ಮಹೌಜಸ್ಕರಾದ ಮಾತಲಿ-ನಾರದ-ಆರ್ಯಕರು ಸುಮುಖನನ್ನು ಕರೆದು ಕೊಂಡು ಸ್ವರ್ಗಲೋಕಕ್ಕೆ ಹೋಗಿ ಮಹಾದ್ಯುತಿಮಂತನಾದ, ದೇವರಾಜ ನಾದ, ಸಿಂಹಾಸನಾಧಿರೂಢನಾಗಿದ್ದ ಶಕ್ರನನ್ನು ಸಂದರ್ಶಿಸಿದರು. ದೈವಯೋಗ ದಿಂದಾಗಿ ಅದೇ ಸಮಯದಲ್ಲಿ ಚತುರ್ಭುಜನಾದ, ಭಗವಂತನಾದ ವಿಷ್ಣುವೂ ಅಲ್ಲಿಯೇ ಇದ್ದನು. ಮಾತಲಿಯು ವರಾನ್ವೇಷಣಕ್ಕಾಗಿ ಪಾತಾಲ-ರಸಾತಲಗಳ

ಪ್ರವಾಸವನ್ನು ಕೈಗೊಂಡುದು; ಸುಮುಖನನ್ನು ವರನನ್ನಾಗಿ ಆರಿಸಿಕೊಂಡುದು ; ಸುಮುಖನಿಗೊದಗಲಿರುವ ಮೃತ್ಯು–ಈ ಎಲ್ಲ ವಿಷಯಗಳನ್ನೂ ಸವಿಸ್ತಾರವಾಗಿ ನಾರದರು ಇಂದ್ರೋಪೇಂದ್ರರಿಗೆ ಹೇಳಿದರು. ಅನಂತರದಲ್ಲಿ ಮಹಾವಿಷ್ಣುವು ಭುವನೇಶ್ವರನಾದ ಪುರಂದರನನ್ನು ಕುರಿತು ಹೇಳಿದನು :

**ಅಮೃತಂ ದೀಯತಾಮಸ್ಮೈ ಕ್ರಿಯತಾಮಮರೈಃ ಸಮಃ ।**
**ಮಾತಲಿರ್ನಾರದಶ್ಚೈವ ಸುಮುಖಶ್ಚೈವ ವಾಸವ ।**
**ಲಭನ್ತಾಂ ಭವತಃ ಕಾಮಾತ್ಕಾಮಮೇತಂ ಯಥೇಪ್ಸಿತಮ್ ॥**

"ದೇವರಾಜ! ಈಗಲೇ ಈ ಸುಮುಖನಿಗೆ ಅಮೃತವನ್ನು ಕೊಟ್ಟು ಅಮರರಿಗೆ ಸಮಾನನನ್ನಾಗಿ ಮಾಡು. ನಿನ್ನ ಇಚ್ಛಾನುಸಾರವಾಗಿ (ಅನುಗ್ರಹದಿಂದಾಗಿ) ಮಾತಲಿ-ನಾರದ-ಸುಮುಖರು ತಮ್ಮ ಅಭೀಷ್ಟಗಳನ್ನು ಪಡೆದುಕೊಳ್ಳಲಿ. (ಅವರ ಅಭೀಷ್ಟದಂತೆ ಸುಮುಖ-ಗುಣಕೇಶಿಯರ ವಿವಾಹಮಹೋತ್ಸವವು ನೆರವೇರಲಿ.)"

ಸರ್ವಲೋಕೇಶ್ವರನಾದ ಮಹಾವಿಷ್ಣುವೇ ಆ ಮಾತನ್ನು ಹೇಳಿದುದೇನೋ ನಿಜ. ಆದರೆ ಗರುಡನ ಅಮಿತಪರಾಕ್ರಮವನ್ನು ನೆನೆದು ಇಂದ್ರನಿಗೆ ಭಯವಾಯಿತು. ಅಂತೆಯೇ ಅವನು ವಿಷ್ಣುವನ್ನೇ ಕುರಿತು ಹೇಳಿದನು : "'ಭವಾನೇವ ದದಾತು'–'ನೀನೇ ಸುಮುಖನಿಗೆ ಅಮೃತವನ್ನು ಕೊಟ್ಟುಬಿಡು' (ನನ್ನ ಕೈಯಿಂದ ಕೊಡಿಸಬೇಡ. ನಿನ್ನ ಮೇಲೆ ಕೋಪಗೊಳ್ಳುವ ಸಾಮರ್ಥ್ಯವು ಗರುಡನಿಗಿರಲಾರದು. ಆದರೆ ನಾನೇನಾದರೂ ಅಮೃತವನ್ನು ಸುಮುಖನಿಗೆ ಕೊಟ್ಟುಬಿಟ್ಟರೆ ಅವನು ನನ್ನ ಮೇಲೆ ಯುದ್ಧಕ್ಕೆ ಬಂದುಬಿಡಬಹುದು.")

(ಯಾರು ಯಾವ ಕಾರ್ಯವನ್ನು ಮಾಡಬೇಕೆಂಬ ನಿಯಮವಿದೆ. ಅಂತೆಯೇ ಅಮೃತಕ್ಕೆ ಒಡೆಯನಾದ ಇಂದ್ರನಿಗೆ ಅಮೃತವನ್ನು ತನಗಿಚ್ಛೆ ಬಂದವರಿಗೆ ಕೊಡುವ ಅಧಿಕಾರವಿದೆ. ಅದನ್ನೇ ವಿಷ್ಣುವು ಹೇಳಿ ಇಂದ್ರನನ್ನು ಪ್ರೋತ್ಸಾಹಿಸುತ್ತಾನೆ.)

**ಈಶಸ್ತ್ವಂ ಸರ್ವಲೋಕಾನಾಂ ಚರಾಣಾಮಚರಾಶ್ಚ ಯೇ ।**
**ತ್ವಯಾ ದತ್ತಮದತ್ತಂ ಕಃ ಕರ್ತುಮುತ್ಸಹತೇ ವಿಭೋ ॥೨೭॥**

(ಈ ಸಮಯದಲ್ಲಿ ವಿಷ್ಣುವು ಇಂದ್ರನನ್ನು ವಿಭೋ! (ಪ್ರಭುವೇ) ಎಂದೇ ಸಂಬೋಧಿಸುತ್ತಾನೆ.)

"ವಿಭುವೇ! ಸರ್ವಲೋಕಗಳಲ್ಲಿಯೂ ಎಷ್ಟು ಚರಾಚರಪ್ರಾಣಿಗಳಿವೆಯೋ–ಆ ಎಲ್ಲಕ್ಕೂ ನೀನೇ ಈಶ್ವರನಾಗಿರುವೆ. ನೀನು ಕೊಟ್ಟುದನ್ನು ಕೊಟ್ಟೇ ಇಲ್ಲದಂತೆ ಮಾಡಲು (ನಿರರ್ಥಕಗೊಳಿಸಲು) ಯಾರಿಗೆ ತಾನೇ ಸಾಮರ್ಥ್ಯವಿದೆ? ಯಾವನು ನಿನ್ನ ಕಾರ್ಯವನ್ನು ನಿರರ್ಥಕಗೊಳಿಸುವ ಸಾಹಸವನ್ನು ಮಾಡುತ್ತಾನೆ?) ನೀನು ಸ್ವೇಚ್ಛೆಯಿಂದ ಸುಮುಖನಿಗೆ ಅಮೃತವನ್ನು ಕೊಟ್ಟೆಯಾದರೆ ಅದನ್ನು ಪ್ರಶ್ನಿಸುವ ಅಧಿಕಾರವಾದರೂ ಯಾವನಿಗಿದೆ? ಆದುದರಿಂದ ಧೈರ್ಯಗೆಡದೆ ಅಮೃತ ಕೊಡುವುದರ ಮೂಲಕ ನಿನ್ನ ಸರ್ವೇಶ್ವರತ್ವವನ್ನು ಸ್ಥಿರೀಕರಿಸು."

ಆದರೆ ವಿಷ್ಣುವು ಹೀಗೆಂದು ಹೇಳಿದರೂ ಇಂದ್ರನು ಸುಮುಖನಿಗೆ ಅಮೃತವನ್ನು ಕೊಡಲಿಲ್ಲ. ಬಲಾಸುರ-ವೃತ್ರಾಸುರರ ಸಂಹಾರಕನಾದ ಇಂದ್ರನು ಮಹಾವಿಷ್ಣುವಿನ ಅಭಿಪ್ರಾಯದಂತೆ ಸುಮುಖನಿಗೆ ದೀರ್ಘಾಯುಷ್ಯವನ್ನು ಮಾತ್ರ ಅನುಗ್ರಹಿಸಿದನು.

ಸುಮುಖನು ಅಲ್ಪಾಯುವೇ ಆಗಿದ್ದರೂ ಇಂದ್ರನ ಪರಮಾನುಗ್ರಹದಿಂದ ದೀರ್ಘಾಯುವಾದನು. ಇಂದ್ರನಿಂದ ವರಪಡೆದ ಸುಮುಖನು ಪ್ರಸನ್ನವದನನಾಗಿ ತನ್ನ ಹೆಸರನ್ನು ಸಾರ್ಥಕಗೊಳಿಸಿದನು. ಯಥಾಶಾಸ್ತ್ರವಾಗಿ ಗುಣಕೇಶೀ-ಸುಮುಖರ ವಿವಾಹಮಹೋತ್ಸವವೂ ನೆರವೇರಿತು. ತನ್ನ ಇಚ್ಛಾನುಸಾರವಾಗಿ ಸುಮುಖನು ಪತ್ನೀಸಮೇತನಾಗಿ ನಾಗಲೋಕಕ್ಕೂ ತೆರಳಿದನು.

ನಾರದರಿಗೂ ಮತ್ತು ಆರ್ಯಕನಿಗೂ ಆದ ಆನಂದಕ್ಕೆ ಪಾರವೇ ಇರಲಿಲ್ಲ. ಅವರೂ ಕೃತಕೃತ್ಯರಾಗಿ ಸಂತೋಷಭರಿತರಾಗಿ ಮಹಾದ್ಯುತಿಮಂತನಾದ ದೇವರಾಜನನ್ನು ಯಥಾಯೋಗ್ಯವಾಗಿ ಸಂಪೂಜಿಸಿ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು."

೧೦೪ನೆಯ ಅಧ್ಯಾಯವು ಮುಗಿಯಿತು.

## ಮಹಾವಿಷ್ಣುವಿನಿಂದ ಗರುಡನ ಗರ್ವಭಂಗವಾದುದು : ದುರ್ಯೋಧನನು ಕಣ್ವಮುನಿಯ ಉಪದೇಶವನ್ನು ಅವಹೇಳನಮಾಡಿದುದು

**ಕಣ್ವರು ಮುಂದುವರಿದು ಹೇಳುತ್ತಾರೆ :**

"ದುರ್ಯೋಧನ! ಇಂದ್ರನು ಸುಮುಖನಿಗೆ ದೀರ್ಘಾಯುಷ್ಯವನ್ನು ಅನುಗ್ರಹಿಸಿರುವನೆಂಬ ವಿಷಯವನ್ನು ಮಹಾಬಲನಾದ ಗರುಡನು ಯಥಾನು ಕ್ರಮವಾಗಿ ಕೇಳಿದನು. ಆ ವಿಷಯವನ್ನು ಕೇಳಿದೊಡನೆಯೇ ಗರುಡನಿಗೆ ಮಹಾಕ್ರೋಧವುಂಟಾಯಿತು. ಪರಮಕ್ರುದ್ಧನಾದ ಗರುಡನು ಶೀಘ್ರಾತಿ ಶೀಘ್ರವಾಗಿ ಇಂದ್ರನ ಸಮೀಪಕ್ಕೆ ಹೋದನು. ಅವನು ಅಂತರಿಕ್ಷದಲ್ಲಿ ಹಾರಿ ಹೋಗುತ್ತಿದ್ದಾಗ ಅವನ ರೆಕ್ಕೆಗಳಿಂದ ಸಮುದ್ಭೂತವಾದ ಚಂಡಮಾರುತವು ಮೂರು ಲೋಕಗಳನ್ನೂ ಪ್ರತಿರೋಧಿಸಿತು. (ಚಂಡಮಾರುತದಿಂದ ಮೂರು ಲೋಕಗಳೂ ಪ್ರಕಂಪಿಸಿದುವು.) ಗರುಡನು ಇಂದ್ರನ ಸಮೀಪಕ್ಕೆ ಹೋಗಿ ಗಡುಸಾದ ಧ್ವನಿಯಿಂದಲೇ ಪ್ರಶ್ನಿಸಿದನು :

**ಭಗವನ್ಕಿಮವಜ್ಞಾನಾದ್ವೃತ್ತಿಃ ಪ್ರತಿಹತಾ ಮಮ ।**
**ಕಾಮಕಾರವರಂ ದತ್ತ್ವಾ ಪುನಶ್ಚಲಿತವಾನಸಿ ॥೩॥**

"ಭಗವನ್ ವಾಸವ! ನನ್ನನ್ನು ಅನಾದರಣೆಮಾಡಿ ನನ್ನ ವೃತ್ತಿಗೆ ಪ್ರತಿಬಂಧವನ್ನುಂಟುಮಾಡಿದುದೇಕೆ? ಮೊದಲು ಸ್ವೇಚ್ಛೆಯಿಂದಿರುವಂತೆ ನೀನೇ ನನಗೆ ವರವನ್ನು ದಯಪಾಲಿಸಿ ಈಗ ಆ ವರಕ್ಕೆ ನ್ಯೂನತೆಯುಂಟಾಗುವ ರೀತಿ ಯಲ್ಲಿ ವರ್ತಿಸಿದೆಯಲ್ಲವೇ? ನೀನಿಂದು ಮಾಡಿರುವ ಕಾರ್ಯದಿಂದ ನಿನ್ನ ವರವೇ ಸುಳ್ಳಾಗಿ ಹೋಯಿತಲ್ಲವೇ?

**ನಿಸರ್ಗಾತ್ಸರ್ವಭೂತಾನಾಂ ಸರ್ವಭೂತೇಶ್ವರೇಣ ಮೇ ।**
**ಆಹಾರೋ ವಿಹಿತೋ ಧಾತ್ರಾ ಕಿಮರ್ಥಂ ವಾರ್ಯತೇ ತ್ವಯಾ ॥೪॥**

"ಎರಡನೆಯದಾಗಿ : ಸರ್ವಪ್ರಾಣಿಗಳಿಗೂ ಈಶ್ವರನಾದ ಬ್ರಹ್ಮನಿಂದ ಪ್ರಾಣಿಗಳನ್ನು ಸೃಷ್ಟಿಮಾಡುವ ಸಮಯದಲ್ಲಿಯೇ–ನನ್ನ ಆಹಾರವು ಇಂತ

ಹುದೇ –ಎಂದು ನಿರ್ಣಯಿಸಲ್ಪಟ್ಟಿದೆ. ಅದನ್ನು ನೀನಿಂದು ನನಗೆ ಸಿಕ್ಕದಂತೆ ಮಾಡಿದುದೇಕೆ? ವಾಸವ!

**ವೃತಶ್ಚೈಷ ಮಹಾನಾಗಃ ಸ್ಥಾಪಿತಃ ಸಮಯಶ್ಚ ಮೇ ।**
**ಅನೇನ ಚ ಮಯಾ ದೇವ ಭರ್ತವ್ಯಃ ಪ್ರಸವೋ ಮಹಾನ್ ॥೫॥**

ಮೇಲಾಗಿ ಈ ವಿಷಯವು ನಿನಗೆ ತಿಳಿಯದುದೇನೂ ಅಲ್ಲ. ಆ ಮಹಾ ನಾಗನನ್ನೇ ನಾನು ನನ್ನ ಮುಂದಿನ ಆಹಾರಕ್ಕಾಗಿ ಆರಿಸಿಕೊಂಡಿದ್ದೆನು. ಇಂತಹ ದಿವಸವೇ ಹೋಗಿ ಅವನನ್ನು ಭುಂಜಿಸಬೇಕೆನ್ನುವ ನಿರ್ಧಾರವೂ ಆಗಿದ್ದಿತು. ಆ ಮಹಾನಾಗನ ಮಾಂಸದಿಂದಲೇ ನಾನು ನನ್ನ ದೊಡ್ಡ ಸಂಸಾರವನ್ನೂ ಪೋಷಿಸಬೇಕಾಗಿದೆ. ಹೀಗಿದ್ದರೂ ನೀನು ನನ್ನ ಆಹಾರಕ್ಕೆ ಪ್ರತಿಬಂಧಕವನ್ನು ತಂದೊಡ್ಡಿರುವೆ.

**ಏತಸ್ಮಿಂಸ್ತು ತಥಾಭೂತೇ ನಾನ್ಯಂ ಹಿಂಸಿತುಮುತ್ಸಹೇ ।**
**ಕ್ರೀಡಸೇ ಕಾಮಕಾರೇಣ ದೇವರಾಜ ಯಥೇಚ್ಛಕಮ್ ॥೬॥**

ನಾನು ಆರಿಸಿಕೊಂಡ ಆಹಾರಕ್ಕೆ ನೀನು ಪ್ರತಿಬಂಧಕವನ್ನು ಹಾಕಿರುವಾಗ ನಾನು ಬೇರೆಯ ನಾಗಗಳನ್ನು ಭಕ್ಷಿಸಲು ಹೋಗುವುದೆಂತು? ಈ ನಾಗಕ್ಕೆ ರಕ್ಷಣೆಕೊಟ್ಟವನು ಮುಂದೆ ಮತ್ತೊಂದು ನಾಗಕ್ಕೂ ರಕ್ಷಣೆಕೊಡಬಹುದು. ಅಥವಾ ನನ್ನ ಆಹಾರರೂಪವಾಗಿರುವ ಎಲ್ಲ ನಾಗಗಳಿಗೂ ನೀನು ದೀರ್ಘಾಯುಷ್ಯವನ್ನು ದಯಪಾಲಿಸಬಹುದು. ಪರಿಣಾಮವೇನಾಗುವುದೆಂಬುದನ್ನು ಮನಗಂಡಿರುವೆಯಾ? ದೇವರಾಜ! ಮನಸ್ಸಿಗೆ ತೋರಿದಂತೆ ಸ್ವೇಚ್ಛೆಯಿಂದ ವರ್ತಿಸುತ್ತಿರುವೆಯಾ? ನಿನಗೆ ನಿನ್ನ ಕರ್ತವ್ಯದ ಅರಿವೇ ಇಲ್ಲವೇ? ಒಂದು ವೇಳೆ ನಾನು ಬದುಕಿರುವುದೇ ನಿನಗೆ ಇಷ್ಟವಿಲ್ಲವಾದರೆ :

**ಸೋಽಹಂ ಪ್ರಾಣಾನ್ವಿಮೋಕ್ಷ್ಯಾಮಿ ತಥಾ ಪರಿಜನೋ ಮಮ ।**
**ಯೇ ಚ ಭೃತ್ಯಾ ಮಮ ಗೃಹೇ ಪ್ರೀತಿಮಾನ್ಭವ ವಾಸವ ॥೭॥**

ನಾನೂ ಪ್ರಾಣಗಳನ್ನು ತೊರೆದುಬಿಡುತ್ತೇನೆ. ನನ್ನ ಪರಿಜನರೂ ಪ್ರಾಣತೊರೆಯುತ್ತಾರೆ. ನನ್ನ ಮನೆಯಲ್ಲಿರುವ ನನ್ನ ಸೇವಕರೂ ಪ್ರಾಣ ತೊರೆಯುತ್ತಾರೆ. ನೀನೊಬ್ಬನೇ ಸುಖ-ಸಂತೋಷಗಳಿಂದಿರು. ಆಗಬಹುದೇ?

**ಏತಚ್ಚೈವಾಹಮರ್ಹಾಮಿ ಭೂಯಶ್ಚ ಬಲವೃತ್ರಹನ್ ।**
**ತ್ರೈಲೋಕ್ಯಸ್ಯೇಶ್ವರೋ ಯೋಽಹಂ ಪರಭೃತ್ಯತ್ವಮಾಗತಃ ॥೮॥**

ಬಲ-ವೃತ್ರಸಂಹಾರಕನೇ! ಹೀಗೆ ಪರಿವಾರಸಮೇತನಾಗಿ ಪ್ರಾಣಬಿಡುವುದೇ ನನಗೆ ಯೋಗ್ಯವಾಗಿದೆಯೆಂದು ಭಾವಿಸುತ್ತೇನೆ. ಏಕೆಂದರೆ : ಮೂರು ಲೋಕಗಳಿಗೂ ಈಶ್ವರನಾಗುವ ಸಾಮರ್ಥ್ಯದಿಂದ ಕೂಡಿರುವ ನಾನು ಮತ್ತೊಬ್ಬರ ಭೃತ್ಯನಾಗಿರುವೆನಲ್ಲವೇ? ನಿನ್ನ ಸೇವಾವೃತ್ತಿಯನ್ನು ಅಂಗೀಕರಿಸಿರುವೆನಲ್ಲವೇ? ನಿನ್ನನ್ನೇ ಇಂದ್ರನೆಂದೂ, ನನ್ನ ಯಜಮಾನನೆಂದೂ ಒಪ್ಪಿಕೊಂಡಿರುವೆನಲ್ಲವೇ?

**ತ್ವಯಿ ತಿಷ್ಠತಿ ದೇವೇಶ ನ ವಿಷ್ಣುಃ ಕಾರಣಂ ಮಮ ।**
**ತ್ರೈಲೋಕ್ಯರಾಜ ರಾಜ್ಯಂ ಹಿ ತ್ವಯಿ ವಾಸವ ಶಾಶ್ವತಮ್ ॥೯॥**

ವಿಷ್ಣುವೇ ಹೇಳಿದನೆಂದೂ, ಇದರಲ್ಲಿ ನನ್ನದೇನೂ ಅಪರಾಧವಿಲ್ಲವೆಂದೂ ನೀನು ಹೇಳಿಬಿಡಬಹುದು. ಆದರೆ ನೀನಿರುವಾಗ ಇದಕ್ಕೆ ವಿಷ್ಣುವು ಕಾರಣನಾಗುವುದಿಲ್ಲ. ಏಕೆಂದರೆ : ಮೂರು ಲೋಕಗಳ ಆಡಳಿತವೂ ನಿನ್ನಲ್ಲಿಯೇ ಪ್ರತಿಷ್ಠಿತವಾಗಿದೆ. ಶಾಶ್ವತವಾಗಿ ಉಳಿದಿದೆ. ಮೂರು ಲೋಕಗಳಲ್ಲಿನ ಆಗು-ಹೋಗುಗಳು ನಿನಗೇ ನೇರವಾಗಿ ಸಂಬಂಧಿಸಿವೆಯೇ ಹೊರತು ಇದರಲ್ಲಿ ವಿಷ್ಣುವಿನ ಪಾತ್ರವೇನೂ ಇರುವುದಿಲ್ಲ. ಒಂದು ವೇಳೆ ವಿಷ್ಣುವು ನಿನಗೆ ನನ್ನ ವಿರೋಧವಾಗಿ ಸಲಹೆ ನೀಡಿದ್ದರೂ ಮೂರು ಲೋಕಗಳ ಆಡಳಿತದ ಭಾರವನ್ನು ವಹಿಸಿರುವ ನೀನು ಯುಕ್ತಾಯುಕ್ತತೆಯನ್ನು ವಿವೇಚಿಸಬೇಕಾಗಿದ್ದಿತು. ಹಾಗೆ ಮಾಡದೇ ನೀನು ನನ್ನನ್ನು ಅನಾದರಣೆಮಾಡಿರುವೆ.

ವಾಸವ! ನೀನು ಇಂದ್ರನೆಂದು ನಿನಗೆ ನಾನು ಪುರಸ್ಕಾರಕೊಟ್ಟಿರುವೆನೇ ಹೊರತು ನಿನಗೂ ನನಗೂ ಯಾವುದರಲ್ಲಿಯೂ ವ್ಯತ್ಯಾಸವೇ ಇಲ್ಲ.

**ಮಮಾಪಿ ದಕ್ಷಸ್ಯ ಸುತಾ ಜನನೀ ಕಶ್ಯಪಃ ಪಿತಾ ।**
**ಅಹಮಪ್ಯುತ್ಸಹೇ ಲೋಕಾನ್ಸಮನ್ತಾದ್ವೋಢುಮಞ್ಜಸಾ ॥೧೦॥**

ದಕ್ಷನ ಮಗಳಾದ ಅದಿತಿಯು ನಿನಗೆ ತಾಯಿಯಾಗಿರುವಂತೆ ದಕ್ಷನ ಮಗಳೇ ಆದ ವಿನತೆಯು ನನಗೆ ತಾಯಿ. ಕಶ್ಯಪನು ನಿನಗೆ ತಂದೆಯಾಗಿರು

ವಂತೆ ನನಗೂ ತಂದೆಯಾಗಿದ್ದಾನೆ. ಪರಾಕ್ರಮದ ವಿಷಯದಲ್ಲಿ ಹೇಳುವುದಾದರೆ ನಾನು ಸಕಲಲೋಕಗಳನ್ನೂ ಅನಾಯಾಸವಾಗಿ ಧರಿಸುವ ಉತ್ಸಾಹವುಳ್ಳವ ನಾಗಿರುತ್ತೇನೆ. (ಧರಿಸಲು ಸಮರ್ಥನಾಗಿರುತ್ತೇನೆ.)

**ಅಸಹ್ಯಂ ಸರ್ವಭೂತಾನಾಂ ಮಮಾಪಿ ವಿಪುಲಂ ಬಲಮ್ ।**
**ಮಯಾಪಿ ಸುಮಹತ್ಕರ್ಮ ಕೃತಂ ದೈತೇಯವಿಗ್ರಹೇ ॥೧೧॥**

ಪ್ರಪಂಚದ ಎಲ್ಲ ಪ್ರಾಣಿಗಳೂ ಸೇರಿದರೂ ಅವರಾರಿಗೂ ಸಹಿಸಿ ಕೊಳ್ಳಲು ಅಸಾಧ್ಯವಾದ (ಎದುರಿಸಲು ಅಸಾಧ್ಯವಾದ) ವಿಪುಲಬಲವು ನನಗೂ ಇದೆ. ದೈತ್ಯರೊಡನೆ ಯುದ್ಧಮಾಡುವ ಸಮಯಗಳಲ್ಲಿ ನಾನೂ ಕೂಡ ದೇವತೆಗಳಿಗೆ ಸಹಾಯಕನಾಗಿ ನಿಂತು ಅನೇಕಮಹಾಕಾರ್ಯಗಳನ್ನು ಮಾಡಿರುತ್ತೇನೆ. (ಯುದ್ಧದಲ್ಲಿ ದೇವತೆಗಳಿಗೆ ಜಯಗಳಿಸಿಕೊಟ್ಟಿರುತ್ತೇನೆ.)

ದೈತ್ಯರಲ್ಲಿ ಯಾರು ಯಾರು ನನ್ನಿಂದ ಹತರಾದರೆಂಬುದನ್ನು ಹೇಳುವೆನು ಅಥವಾ ಸ್ಮರಣೆಗೆ ತರುವೆನು ಕೇಳು, ವಾಸವ!

**ಶ್ರುತಶ್ರೀಃ ಶ್ರುತಸೇನಶ್ಚ ವಿವಸ್ವಾನ್ರೋಚನಾಮುಖಃ ।**
**ಪ್ರಸೃತಃ ಕಾಲಕಾಕ್ಷಶ್ಚ ಮಯಾಪಿ ದಿತಿಜಾ ಹತಾಃ ॥೧೨॥**

ಶ್ರುತಶ್ರೀ, ಶ್ರುತಸೇನ, ವಿವಸ್ವಂತ, ರೋಚನಾಮುಖ, ಪ್ರಸೃತ ಮತ್ತು ಕಾಲಕಾಕ್ಷ–ಈ ದೈತ್ಯರು ನನ್ನಿಂದ ಹತರಾಗಿದ್ದಾರೆ.

**ಯತ್ತು ಧ್ವಜಸ್ಥಾನಗತೋ ಯತ್ನಾತ್ಪರಿಚರಾಮ್ಯಹಮ್ ।**
**ವಹಾಮಿ ಚೈವಾನುಜಂ ತೇ ತೇನ ಮಾಮವಮನ್ಯಸೇ ॥೧೩॥**

ನಾನಿಷ್ಟು ಬಲಿಷ್ಠನಾಗಿದ್ದರೂ, ನಿನಗೆ ಸಮಾನನಾಗಿದ್ದರೂ ನಿನ್ನ ತಮ್ಮನ ರಥದ ಧ್ವಜಪಟದಲ್ಲಿ ಕುಳಿತು ಪ್ರಯತ್ನಪೂರ್ವಕವಾಗಿ ಅವನನ್ನು ಉಪಚರಿಸುತ್ತೇನೆ. (ಅವನ ರಕ್ಷಣೆಯನ್ನು ಮಾಡುತ್ತೇನೆ.) ಸಮಯಗಳಲ್ಲಿ ನಿನ್ನ ತಮ್ಮನಿಗೆ ವಾಹನವೂ ಆಗುತ್ತೇನೆ. ನಾನಿಷ್ಟು ತಗ್ಗಿ ನಡೆಯುತ್ತಿರುವುದರಿಂದಲೇ ನೀನು ನನಗೆ ಅವಮಾನವನ್ನೆಸಗಿದೆಯಲ್ಲವೇ?

**ಕೋಽನ್ಯೋ ಭಾರಸಮೋ ಹ್ಯಸ್ತಿ ಕೋಽನ್ಯೋಽಸ್ತಿ ಬಲವತ್ತರಃ ।**
**ಮಯಾ ಯೋಽಹಂ ವಿಶಿಷ್ಟಃ ಸನ್ವಹಾಮೀಮಂ ಸಬಾನ್ಧವಮ್ ॥೧೪॥**

ವಿಷ್ಣುವಿನ ಮಹಾಭಾರವನ್ನು ಹೊರತಕ್ಕವರು ಮತ್ತು ಹೊತ್ತು

ಸ್ವಲ್ಪವೂ ಆಯಾಸವಿಲ್ಲದೇ ಹಾರತಕ್ಕವರು ನನ್ನನ್ನು ಬಿಟ್ಟರೆ ಈ ಮೂರು ಲೋಕಗಳಲ್ಲಿ ಮತ್ತಾರಿದ್ದಾರೆ? ನನಗಿಂತಲೂ ಬಲಿಷ್ಠರಾದವರು ಈ ತ್ರಿಭುವನಗಳಲ್ಲಿ ತಾನೇ ಯಾರಿದ್ದಾರೆ? ಬಲದಲ್ಲಿ ನಾನು ಸಕಲರನ್ನೂ ಮೀರಿಸಿದ್ದರೂ ಸೇವಕನಂತೆ ಬಂಧುಗಳಿಂದೊಡಗೂಡಿದ ಮಹಾವಿಷ್ಣುವನ್ನು ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಹೊತ್ತು ತಿರುಗುತ್ತೇನೆ.

**ಅವಜ್ಞಾಯ ತು ಯತ್ತೇಽಹಂ ಭೋಜನಾದ್ವ್ಯಪರೋಪಿತಃ ।**
**ತೇನ ಮೇ ಗೌರವಂ ನಷ್ಟಂ ತ್ವತ್ತಶ್ಚಾಸ್ಮಾಚ್ಚ ವಾಸವ ॥೧೫॥**

ನಿನ್ನ ತಿರಸ್ಕಾರಭಾವನೆಯಿಂದ ನಾನು ನನ್ನ ಭೋಜನದಿಂದ ವಂಚಿತನಾದೆನು. (ನನ್ನ ಭೋಜನವನ್ನು ನೀನು ಕಿತ್ತುಕೊಂಡೆ.) ಇದರಿಂದಾಗಿ ನನ್ನ ಗೌರವವೇ ಹಾಳಾಗಿಹೋಯಿತು. ಇದಕ್ಕೆ ಕಾರಣರು ನೀನು ಮತ್ತು ಮಹಾವಿಷ್ಣು. (ನಿಮ್ಮಿಬ್ಬರಿಂದ ನನ್ನ ಭೋಜನವು ಅಪಹೃತವಾಯಿತಲ್ಲವೇ? ನನ್ನ ಮರ್ಯಾದೆಯೂ ಹೋಯಿತು.)

ಈಗ ಬೇಕಾದರೂ ನಮ್ಮಿಬ್ಬರ ಬಲವೆಷ್ಟೆಂಬುದನ್ನು ತುಲನೆ ಮಾಡೋಣ.

**ಅದಿತ್ಯಾಂ ಯ ಇಮೇ ಜಾತಾ ಬಲವಿಕ್ರಮಶಾಲಿನಃ ।**
**ತ್ವಮೇಷಾಂ ಕಿಲ ಸರ್ವೇಷಾಂ ಬಲೇನ ಬಲವತ್ತರಃ ॥೧೬॥**

ಅದಿತಿಯ ಹೊಟ್ಟೆಯಲ್ಲಿ ಮಹಾಪರಾಕ್ರಮಶಾಲಿಗಳಾದ ಯಾವ ಮಕ್ಕಳು ಹುಟ್ಟಿರುತ್ತಾರೆಯೋ–ಆ ಎಲ್ಲ ಮಕ್ಕಳ ನಡುವೆ ನೀನು ಪರಾಕ್ರಮದ ದೃಷ್ಟಿಯಿಂದ ಮಹಾಬಲಿಷ್ಠನು. (ದೇವತೆಗಳಲ್ಲೆಲ್ಲಾ ಅತ್ಯಂತ ಬಲಿಷ್ಠನು ನೀನೇ ಆಗಿರುವೆ.) ಅಹುದಲ್ಲವೇ? ದೇವೇಂದ್ರ!

**ಸೋಽಹಂ ಪಕ್ಷೈಕದೇಶೇನ ವಹಾಮಿ ತ್ವಾಂ ಗತಕ್ಲಮಃ ।**
**ವಿಮೃಶ ತ್ವಂ ಶನೈಸ್ತಾತ ಕೋ ನ್ವತ್ರ ಬಲವಾನಿತಿ ॥೧೭॥**

ಪ್ರಿಯನೇ! ಅಂತಹ ಅತುಲಪರಾಕ್ರಮಿಯಾದ ನಿನ್ನನ್ನು ನನ್ನ ರೆಕ್ಕೆಯ ಏಕದೇಶಮಾತ್ರದಿಂದ ಹೊತ್ತುಕೊಳ್ಳುವಷ್ಟು ಸಾಮರ್ಥ್ಯವು ನನಗಿದೆ. ನನ್ನ ರೆಕ್ಕೆಯ ಒಂದು ಭಾಗದಿಂದ ನಿನ್ನನ್ನು ಸ್ವಲ್ಪವಾದರೂ ಶ್ರಮವಿಲ್ಲದೆಯೇ ಹೊರಬಲ್ಲೆನು. ನಿನ್ನ ಪರಾಕ್ರಮವೆಷ್ಟೆಂಬುದನ್ನು ಸಾವಕಾಶ

ವಾಗಿ ಪರ್ಯಾಲೋಚಿಸು. ನಮ್ಮಿಬ್ಬರಲ್ಲಿ ಬಲಿಷ್ಠರಾರೆಂಬುದನ್ನು ನೀನೇ ನಿರ್ಧರಿಸು.”

ದುರ್ಯೋಧನ! ಭೀಕರಪರಿಣಾಮವನ್ನುಂಟುಮಾಡುವಂತಹ ವೈನತೇಯನ ಆತ್ಮಪ್ರಶಂಸೆಯ ಮಾತುಗಳನ್ನು ಕೇಳಿ ಚಕ್ರಪಾಣಿಯಾದ ಮಹಾವಿಷ್ಣುವು ದುರ್ಧರ್ಷನಾದ ಗರುಡನನ್ನೂ ಕಳವಳಗೊಳಿಸುತ್ತಾ ಹೇಳಿದನು :

**ಗರುತ್ಮನ್ಮನ್ಯಸೇಽತ್ಮಾನಂ ಬಲವನ್ತಂ ಸುದುರ್ಬಲಮ್ ।**
**ಅಲಮಸ್ಮತ್ಸಮಕ್ಷಂ ತೇ ಸ್ತೋತುಮಾತ್ಮಾನಮಣ್ಡಜ ॥೧೯॥**

“ಗರುತ್ಮನ್! ನಮ್ಮ ದೃಷ್ಟಿಯಿಂದ ನೀನು ಅತಿದುರ್ಬಲನಾಗಿರುವೆ. ಹೀಗಿದ್ದರೂ ನೀನೇ ಮಹಾಬಲವಂತನೆಂದು ಜಂಬಕೊಚ್ಚಿಕೊಳ್ಳುತ್ತಿರುವೆ. ನಮ್ಮ ಮುಂದೆ ನಿನ್ನ ಆತ್ಮಶ್ಲಾಘನೆಯನ್ನು ಸಾಕುಮಾಡು, ಅಂಡಜ!

**ತ್ರೈಲೋಕ್ಯಮಪಿ ಮೇ ಕೃತ್ಸ್ನಮಶಕ್ತಂ ದೇಹಧಾರಣೇ ।**
**ಅಹಮೇವಾತ್ಮನಾತ್ಮಾನಂ ವಹಾಮಿ ತ್ವಾಂ ಚ ಧಾರಯೇ ॥೨೦॥**

ಮೂರು ಲೋಕಗಳೂ ಒಂದಾಗಿ ಸೇರಿಬಂದರೂ ನನ್ನ ಶರೀರವನ್ನು ಧರಿಸಲು ಸಮರ್ಥವಾಗುವುದಿಲ್ಲ. ಹೀಗಿರುವಾಗ ನೀನೊಬ್ಬನೇ ನನ್ನನ್ನು ಧರಿಸುವೆಯೆಂಬುದರಲ್ಲಿ ಅರ್ಥವೇನಿದೆ? ನಾನು ನಿನ್ನ ಮೇಲೆ ಕುಳಿತಂತೆ ಕಂಡಮಾತ್ರಕ್ಕೆ ನನ್ನನ್ನು ನೀನು ಧರಿಸಿರುವೆನೆಂದು ಭ್ರಾಂತನಾಗಬೇಡ. ವೈನತೇಯ! ಮೂರು ಲೋಕಗಳಿಂದಲೂ ಧರಿಸಲಾಗದ ನನ್ನ ಶರೀರವನ್ನು ನಾನೇ ಧಾರಣೆಮಾಡಿಕೊಳ್ಳುತ್ತೇನೆ. ಅದರ ಜೊತೆಗೆ ನಿನ್ನನ್ನೂ ಧರಿಸಿರುತ್ತೇನೆ. (ಕಿರೀಟ, ಕೌಸ್ತುಭ, ಶಂಖ-ಚಕ್ರಗಳ ರೀತಿಯಲ್ಲಿ ನಿನ್ನನ್ನೂ ಅಲಂಕಾರಕ್ಕಾಗಿ ವಾಹನರೂಪದಲ್ಲಿ ನಾನು ಧರಿಸಿರುತ್ತೇನೆ. ಆದುದರಿಂದ ‘ನಾನು ವಿಷ್ಣುವನ್ನು ಹೊತ್ತು ತಿರುಗುತ್ತೇನೆ’–ಎಂಬ ಆತ್ಮಶ್ಲಾಘನೆಯನ್ನು ಇನ್ನಾದರೂ ನಿಲ್ಲಿಸು. ಇದನ್ನೇ ನಾನಿಂದು ಪ್ರಮಾಣೀಕರಿಸಿ ನಿನಗೆ ಮನದಟ್ಟಾಗುವಂತೆ ಮಾಡುತ್ತೇನೆ.)

**ಇಮಂ ತಾವನ್ಮಮೈಕಂ ತ್ವಂ ಬಾಹುಂ ಸವ್ಯೇತರಂ ವಹ ।**
**ಯದ್ಯೇನಂ ಧಾರಯಸ್ಯೇಕಂ ಸಫಲಂ ತೇ ವಿಕತ್ಥಿತಮ್ ॥೨೧॥**

ಈಗ ನೀನು ನನ್ನ ಶರೀರವನ್ನು ಹೊರುವುದು ಬೇಡ. ನನ್ನ ಈ ದಕ್ಷಿಣಬಾಹುವನ್ನು ಮಾತ್ರ ಧಾರಣೆಮಾಡು. ಇದನ್ನು ನೀನು ಧಾರಣೆ

ಮಾಡಿದೆಯಾದರೆ ನಿನ್ನ ಆತ್ಮಪ್ರಶಂಸೆಗೂ ಒಂದು ಅರ್ಥವಿದೆಯೆಂದು ನಾನೇ ಒಪ್ಪಿಕೊಳ್ಳುತ್ತೇನೆ. ನೀನು ಇದುವರೆಗೂ ಮಾಡಿಕೊಂಡ ಆತ್ಮಶ್ಲಾಘನೆಯೆಲ್ಲವೂ ಯಥಾರ್ಥವಾದುದೆಂದೂ ನಾವು ಒಪ್ಪಿಕೊಳ್ಳುತ್ತೇವೆ."

ಮಹಾವಿಷ್ಣುವು ಹೀಗೆ ಹೇಳಿ ವೈನತೇಯನ ಹೆಗಲಿನ ಮೇಲೆ ತನ್ನ ಬಲತೋಳನ್ನಿಟ್ಟನು. ಮರುಕ್ಷಣದಲ್ಲಿಯೇ, ವಿಶ್ವದಲ್ಲಿ ತಾನೇ ಮಹಾಬಲಿಷ್ಠನೆಂದು ಕೆಲವು ಕ್ಷಣಗಳ ಹಿಂದೆ ಆತ್ಮಶ್ಲಾಘನೆಮಾಡಿಕೊಂಡಿದ್ದ ವೈನತೇಯನು, ವಿಷ್ಣುವಿನ ಒಂದು ತೋಳಿನ ಭಾರವನ್ನೇ ಸಹಿಸಿಕೊಳ್ಳಲಾಗದೇ ವ್ಯಾಕುಲಗೊಂಡವನಾಗಿ ಒಂದೆರಡು ಕ್ಷಣಗಳು ಸಂಕಟಪಡುತ್ತಿದ್ದು ಗತಪ್ರಜ್ಞನಾಗಿ ಬಿದ್ದುಬಿಟ್ಟನು. ವೈನತೇಯನಿಗೆ ಭಗವಾನ್ ಮಹಾವಿಷ್ಣುವಿನ ಕೇವಲ ಒಂದು ತೋಳಿನ ಭಾರವೆಷ್ಟೆಂಬುದರ ಅರಿವಾಯಿತು.

**ಯಾವಾನ್ಹಿ ಭಾರಃ ಕೃತ್ಸ್ನಾಯಾಃ ಪೃಥಿವ್ಯಾಃ ಪರ್ವತೈಃ ಸಹ ।**
**ಏಕಸ್ಯಾ ದೇಹಶಾಖಾಯಾಸ್ತಾವದ್ಭಾರಮಮನ್ಯತ ॥೨೩॥**

ಪರ್ವತಗಳಿಂದ ಕೂಡಿರುವ ಸಂಪೂರ್ಣಭೂಮಂಡಲದ ಭಾರವೆಷ್ಟಿರುವುದೋ ಅಷ್ಟು ಭಾರವು ಮಹಾವಿಷ್ಣುವಿನ ದೇಹದಲ್ಲಿನ ಒಂದು ಶಾಖೆಗಿರುವುದೆಂದು (ತೋಳಿಗಿರುವುದೆಂದು) ವೈನತೇಯನು ಈ ಅನುಭವದಿಂದ ತಿಳಿದುಕೊಂಡನು. ಬಲಿಷ್ಠರಲ್ಲಿ ಅತ್ಯಂತ ಬಲಿಷ್ಠನಾದ ಮತ್ತು ದಯಾಮಯನಾದ ಭಗವಾನ್ ಮಹಾವಿಷ್ಣುವು ಗರುಡನನ್ನು ಪುನಃ ಪೀಡಿಸಹೋಗಲಿಲ್ಲ. ಪುನಃ ಪೀಡಿಸಿದ್ದರೆ ವೈನತೇಯನು ಜೀವದಿಂದ ಉಳಿಯುವ ಸಾಧ್ಯತೆಯೇ ಇರಲಿಲ್ಲ. ಅವನ ಗರ್ವಭಂಗವನ್ನು ಮಾಡಬೇಕೆಂಬ ಒಂದೇ ಉದ್ದೇಶವನ್ನು ಹೊಂದಿದ್ದ ಅಚ್ಯುತನು ಅವನ ಜೀವಿತವನ್ನೇ ನಾಶಮಾಡಿಬಿಡಲಿಲ್ಲ. ಒಂದು ಭುಜದ ಭಾರವನ್ನೇ ಹೊರಲು ಅಸಮರ್ಥನಾದ ಗರುಡನು ಮಹಾಪ್ರಯಾಸದಿಂದ ಮೂಗಿನಲ್ಲಿ ಉಸಿರುಬಿಡಲಾಗದೇ ಬಾಯಲ್ಲಿ ಉಸಿರುಬಿಡಲಾರಂಭಿಸಿದನು. ಅವನ ಶರೀರವು ಜರ್ಝರಿತವಾಗಿಹೋಯಿತು. ಗರುಡನು ಬಹುದುಃಖಿತನೂ, ಪ್ರಜ್ಞಾಹೀನನೂ ಆದನು. ಮಹಾಭಾರದಿಂದ ಪೀಡಿತನಾದ ಗರುಡನು ವಿಷ್ಣುವಿನ ಭುಜವನ್ನು ಬಹುಕಷ್ಟದಿಂದ ಹೊತ್ತಿದ್ದ ರೆಕ್ಕೆಗಳನ್ನೇ ಕಳಚಿ ಕೆಳಕ್ಕೆ ಹಾಕಿಬಿಟ್ಟನು.

ವಿಸಂಜ್ಞನಾಗಿದ್ದ, ಬಳಲಿದ್ದ ಮತ್ತು ದೀನನಾಗಿದ್ದ ವಿನತಾಸುತನಾದ ಗರುಡನು–ಬಿದ್ದಿದ್ದ ಸ್ಥಳದಿಂದಲೇ ವಿಷ್ಣುವಿಗೆ ತಲೆಬಾಗಿ ನಮಿಸಿ ಒಂದೆರಡು ಮಾತುಗಳನ್ನಾಡಿದನು :

**ಭಗವಲ್ಲೋಕಸಾರಸ್ಯ ಸದೃಶೇನ ವಪುಷ್ಮತಾ ।**
**ಭುಜೇನ ಸ್ವೈರಮುಕ್ತೇನ ನಿಷ್ಪಿಷ್ಟೋಽಸ್ಮಿ ಮಹೀತಲೇ ॥೨೭॥**

"ಭಗವನ್! ಈ ಪ್ರಪಂಚದ ಸಾರಸರ್ವಸ್ವವೇ ನಿನ್ನ ಶರೀರದ ಭುಜರೂಪದಲ್ಲಿದೆ. (ಪ್ರಪಂಚವನ್ನೇ ಧರಿಸುವ ಮಹಾಶಕ್ತಿಯನ್ನು ನೀನು ಪಡೆದಿರುವೆ.) ಇಂತಹ ಪರಮಾದ್ಭುತವಾದ ಆಕಾರವನ್ನು ಹೊಂದಿರುವ ನಿನ್ನ ಒಂದು ಭುಜದ ನಿಕ್ಷೇಪಮಾತ್ರದಿಂದ ನಾನು ಈ ಭೂಮಿಯ ಮೇಲೆ ಪಿಷ್ಟಸಮಾನವಾಗಿ (ಹಿಟ್ಟಿನ ಮುದ್ದೆಯಾಗಿ) ಪರಿವರ್ತನಹೊಂದಿ ಬಿದ್ದು ಬಿಟ್ಟಿದ್ದೇನೆ. (ಶರೀರದಲ್ಲಿರುವ ಮೂಳೆಗಳೆಲ್ಲವೂ ನುಚ್ಚುನೂರಾಗಿವೆ.)

**ಕ್ಷನ್ತುಮರ್ಹಸಿ ಮೇ ದೇವ ವಿಹ್ವಲಸ್ಯಾಲ್ಪಚೇತಸಃ ।**
**ಬಲದಾಹವಿದಗ್ಧಸ್ಯ ಪಕ್ಷಿಣೋ ಧ್ವಜವಾಸಿನಃ ॥೨೮॥**

ನಿನ್ನ ಧ್ವಜದಲ್ಲಿ ವಾಸಮಾಡುತ್ತಿರುವ, ಅಲ್ಪಪ್ರಾಣಿಯಾಗಿರುವ, ನಿನ್ನ ಬಲವೆಂಬ ಅಗ್ನಿಯಿಂದ ದಗ್ಧನಾಗಿಹೋಗಿರುವ, ಬಹುವಾಗಿ ಗಾಬರಿಗೊಂಡಿರುವ ನನಗೆ ರಕ್ಷಣೆ ನೀಡು, ದೇವ! ನನ್ನ ಅಪರಾಧವನ್ನು ಕ್ಷಮಿಸಿಬಿಡು, (ಬಲದರ್ಪವಿದಗ್ಧಸ್ಯ–ಎಂಬ ಪಾಠಾಂತರದ ಪ್ರಕಾರ : ಮಹಾಬಲಿಷ್ಠನೆಂಬ ದರ್ಪದಿಂದ ಮತ್ತನಾಗಿಹೋಗಿದ್ದ ನನ್ನನ್ನು ಕ್ಷಮಿಸಲು ಅರ್ಹನಾಗಿರುವೆ.)

**ನ ಹಿ ಜ್ಞಾತಂ ಬಲಂ ದೇವ ಮಯಾ ತೇ ಪರಮಂ ವಿಭೋ ।**
**ತೇನ ಮನ್ಯೇ ಹ್ಯಹಂ ವೀರ್ಯಮಾತ್ಮನೋ ನ ಸಮಂ ಪರೈಃ ॥೨೯॥**

ನಿನ್ನಲ್ಲಿರುವ ಮಹಾಬಲದ ಪರಿಮಿತಿಯೆಷ್ಟೆಂಬುದರ ಅರಿವೇ ಈವರೆಗೆ ನನಗಿರಲಿಲ್ಲ. ಇದರಿಂದಾಗಿ ನಾನೇ ಎಲ್ಲರಿಗಿಂತಲೂ ಹೆಚ್ಚು ಬಲಿಷ್ಠನೆಂದು ಭಾವಿಸಿಕೊಂಡುಬಿಟ್ಟಿದ್ದೆನು. (ಈಗ ನಿನ್ನ ಬಲವೆಷ್ಟೆಂಬುದರ ಅರಿವಾಯಿತು. ನಿನ್ನ ಮುಂದೆ ನಾನು ಕೇವಲ ಅಲ್ಪಪ್ರಾಣಿಯು. ದೀನನಾದ ನನ್ನನ್ನು ದಯಮಾಡಿ ಕ್ಷಮಿಸಿ ಅನುಗ್ರಹಿಸು.")

ವೈನತೇಯನು ಹೀಗೆ ಪ್ರಾರ್ಥಿಸಿದನಂತರ ದಯಾಮಯನಾದ ಭಗವಾನ್ ಮಹಾವಿಷ್ಣುವು ಗರುಡನ ವಿಷಯದಲ್ಲಿ ಪ್ರಸನ್ನನಾದನು. 'ಮೈವಂ ಭೂಯಃ' 'ಮುಂದೆಂದೂ ಹೀಗೆ ಮಾಡಬೇಡ. ಅಹಂಕಾರಿಯಾಗಬೇಡ' ಎಂದು ಸ್ನೇಹಪೂರ್ವಕವಾಗಿ ಹೇಳಿದನು. ಅನಂತರದಲ್ಲಿ ಮಹಾವಿಷ್ಣುವು ತನ್ನ ಕಾಲಿನ ಅಂಗುಷ್ಠದಿಂದ ಸುಮುಖನನ್ನೆತ್ತಿ ವೈನತೇಯನ ವಕ್ಷಃಸ್ಥಳದಲ್ಲಿಟ್ಟನು. ಅಂದು ಮೊದಲ್ಗೊಂಡು ವೈನತೇಯನ ಜೊತೆಯಲ್ಲೇ ನಾಗರಾಜನಾದ ಸುಮುಖನಿದ್ದಾನೆ. ರಾಜೇಂದ್ರ! ಈ ರೀತಿಯಾಗಿ ಮಹಾಯಶೋವಂತನಾದ, ಮಹಾಬಲಿಷ್ಠನಾದ ಗರುಡನೂ ವಿಷ್ಣುವಿನ ಬಲದಿಂದ ಆಕ್ರಮಿತನಾಗಿ ವಿಶ್ವದಲ್ಲೇ ತಾನು ಮಹಾಬಲಿಷ್ಠನೆಂಬ ಅಹಂಕಾರವನ್ನು ತೊರೆದನು. ಅದೇ ರೀತಿಯಲ್ಲಿ ನೀನೂ ಕೂಡ ಇಂದು ಬಲದರ್ಪದಗ್ಧನಾಗಿರುವೆ. ಮಹಾವೀರರಾದ ಪಾಂಡುಕುಮಾರರನ್ನು ಎಂದಿನವರೆಗೆ ನೀನು ಯುದ್ಧಭೂಮಿಯಲ್ಲಿ ಎದುರಿಸುವುದಿಲ್ಲವೋ–ಅಂದಿನವರೆಗೆ ಮಾತ್ರ ನೀನು ಜೀವಂತನಾಗಿರುವೆ. ವಾಯುಪುತ್ರನಾದ, ಮಹಾಬಲನಾದ ಭೀಮಸೇನನು ಯೋಧಶ್ರೇಷ್ಠನೆಂದು ವಿಖ್ಯಾತನಾಗಿದ್ದಾನೆ. ಧನಂಜಯನಾದರೋ ಸಾಕ್ಷಾತ್ ಇಂದ್ರನ ಮಗನೇ ಆಗಿರುತ್ತಾನೆ. ಆ ಇಬ್ಬರೂ ಸೇರಿ ಯುದ್ಧವನ್ನು ಪ್ರಾರಂಭಿಸಿದರೆ ಅವರಿಗೆದುರಾಗಿ ಬರುವ ಯಾರನ್ನು ತಾನೇ ಕೊಲ್ಲದೇ ಬಿಟ್ಟಾರು?

ವಿಷ್ಣು (ಶ್ರೀಕೃಷ್ಣ), ವಾಯು, ಇಂದ್ರ, ಯಮಧರ್ಮ ಮತ್ತು ಅಶ್ವಿನೀದೇವತೆಗಳು–ಇವರೆಲ್ಲರೂ ಪಾಂಡವರೊಡನೆ ನೇರವಾದ ಸಂಬಂಧವನ್ನಿಟ್ಟುಕೊಂಡಿರುತ್ತಾರೆ. (ವಾಯುವೇ ಮೊದಲಾದ ದೇವತೆಗಳು ಪಾಂಡವರಿಗೆ ಪಿತೃಸಮಾನರು. ನಮ್ಮ ಮಧ್ಯದಲ್ಲಿರುವ ಈ ಶ್ರೀಕೃಷ್ಣನೇ ಆ ಮಹಾವಿಷ್ಣು.) ಅಂತಹ ದೇವತೆಗಳ ನಿಕಟಸಂಬಂಧಿಗಳಾದ ಪಾಂಡವರೊಡನೆ ಯುದ್ಧಮಾಡುವುದಂತಿರಲಿ ; ಅವರನ್ನು ನೀನು ದಿಟ್ಟಿಸಿ ನೋಡಲಾದರೂ ಸಾಧ್ಯವಾಗುವುದೇ?

**ತದಲಂ ತೇ ವಿರೋಧೇನ ಶಮಂ ಗಚ್ಛ ನೃಪಾತ್ಮಜ ।**
**ವಾಸುದೇವೇನ ತೀರ್ಥೇನ ಕುಲಂ ರಕ್ಷಿತುಮರ್ಹಸಿ ॥೩೬॥**

ಆದುದರಿಂದ ಪಾಂಡವರೊಡನೆ ಶತ್ರುತ್ವವನ್ನು ಸಾಕುಮಾಡು. ಅವ

ರೊಡನೆ ಸಂಧಾನಮಾಡಿಕೋ, ರಾಜಕುಮಾರ! ತೀರ್ಥಸ್ವರೂಪನಾದ (ಪವಿತ್ರಾತ್ಮನಾದ) ವಾಸುದೇವನ ಸಹಾಯವನ್ನು ಅಥವಾ ಸಲಹೆ ಯನ್ನು ಪಡೆದು ಅದರಂತೆ ನಡೆದು ನಿನ್ನ ಕುಲವನ್ನು ರಕ್ಷಿಸಿಕೊಳ್ಳುವುದು ಸಾಧುವಾಗಿದೆ.

ನಾನು ಈ ಹಿಂದೆ ಹೇಳಿದ ಗರುಡಗರ್ವಭಂಗದ ಪ್ರತ್ಯಕ್ಷದರ್ಶಿಗಳು ಈ ನಾರದರು. ಇವರ ಸಮ್ಮುಖದಲ್ಲಿಯೇ ನಾನು ಹೇಳಿದ ಇತಿಹಾಸವು ನಡೆ ಯಿತು. ಮಹಾತ್ಮನಾದ ಮಹಾವಿಷ್ಣುವಿನ ಮಾಹಾತ್ಮ್ಯವನ್ನಿವರು ಪ್ರತ್ಯಕ್ಷ ವಾಗಿಯೇ ನೋಡಿರುವರು. ಚಕ್ರಗದಾಧರನಾಗಿದ್ದ ಮಹಾವಿಷ್ಣುವೇ ಇಂದು ನಮ್ಮ ಮಧ್ಯದಲ್ಲಿ ಕುಳಿತಿರುವ ಶ್ರೀಕೃಷ್ಣನಾಗಿದ್ದಾನೆ."

**(ಬಲವಾನಹಮಿತ್ಯೇವ ನ ಮನ್ತವ್ಯಂ ಸುಯೋಧನ ।**
**ಬಲವನ್ತೋ ಬಲಿಭ್ಯೋ ಹಿ ದೃಶ್ಯನ್ತೇ ಪುರುಷರ್ಷಭ ॥**

ತೊಂಭತ್ತೇಳನೆಯ ಅಧ್ಯಾಯದಲ್ಲಿ ಕಣ್ವರು ಈ ಶ್ಲೋಕವನ್ನು ಪೀಠಿಕಾ ರೂಪವಾಗಿ ಹೇಳಿ ಮಹಾಬಲಿಷ್ಠನೆಂದು ಬಹುದರ್ಪಿತನಾಗಿದ್ದ ಗರುಡನ ಸ್ಥಿತಿ ಯೇನಾಯಿತೆಂಬುದನ್ನು ಹೃದಯಂಗಮವಾಗಿಯೂ, ಯುಕ್ತಿಯುಕ್ತ ವಾಗಿಯೂ ವಿವರಿಸಿ ಹೇಳಿದ್ದಾರೆ.)

ಜನಮೇಜಯ! ವಿಧಿಚೋದಿತನಾಗಿದ್ದ ದುರ್ಯೋಧನನಿಗೆ ಅವರ ಮಾತು ಸ್ವಲ್ಪವಾದರೂ ಪಥ್ಯವಾಗಲಿಲ್ಲ. ಕೋಪವೇ ಬಂದಿತು. ಹುಬ್ಬು ಗಳನ್ನು ಗಂಟಿಕ್ಕಿ ವೇಗವಾಗಿ ನಿಟ್ಟುಸಿರುಬಿಡುತ್ತಾ ರಾಧೇಯನನ್ನು ನೋಡಿ ಗಟ್ಟಿಯಾಗಿ ಗಹ-ಗಹಿಸಿ ನಕ್ಕನು. ಅಷ್ಟರಿಂದಲೇ ಅವನು ತೃಪ್ತನಾಗಲಿಲ್ಲ. ಕಣ್ವರ ಮಾತನ್ನು ಮತ್ತೂ ಅವಹೇಳನಮಾಡಬೇಕೆನ್ನಿಸಿತು. ದುರ್ಮತಿ ಯಾದ, ದುರ್ವಿದಗ್ಧನಾದ ದುರ್ಯೋಧನನು ಆನೆಯ ಸೊಂಡಿಲಿಗೆ ಸಮಾನವಾಗಿದ್ದ ತನ್ನ ತೊಡೆಯನ್ನು ಕೈಯಿಂದ ತಟ್ಟಿಕೊಳ್ಳುತ್ತಾ ಹೇಳಿದನು :

**ಯಥೈವೇಶ್ವರಸೃಷ್ಟೋಽಸ್ಮಿ ಯದ್ಭಾವಿ ಯಾ ಚ ಮೇ ಗತಿಃ ।**
**ತಥಾ ಮಹರ್ಷೇ ವರ್ತಾಮಿ ಕಿಂ ಪ್ರಲಾಪಃ ಕರಿಷ್ಯತಿ ॥೪೦॥**

"ಮಹರ್ಷೇ! ಈಶ್ವರನು ನನ್ನನ್ನು ಹೇಗೆ ಸೃಷ್ಟಿಸಿದ್ದಾನೆಯೋ

ಹಾಗೆಯೇ ನಾನೂ ಇದ್ದೇನೆ. ಹೇಗಾಗಬೇಕೆಂದಿದೆಯೋ ಅದು ಹಾಗೆಯೇ ಆಗುತ್ತದೆ. ನಾನು ಹೇಗೆ ವರ್ತಿಸಬೇಕೆಂದು ವಿಧಿವಿಹಿತವಾಗಿರುವುದೋ ಹಾಗೆಯೇ ವರ್ತಿಸುತ್ತೇನೆ. ನನಗಾಗಿ ನೀನೇಕಿಷ್ಟು ಪ್ರಲಾಪಿಸುವೆ? ನಿನ್ನ ಪ್ರಲಾಪವನ್ನು ಇನ್ನಾದರೂ ಸಾಕುಮಾಡು."

೧೦೫ನೆಯ ಅಧ್ಯಾಯವು ಮುಗಿಯಿತು.

೧೦೬ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ನಾರದರು ದುರ್ಯೋಧನನನ್ನು ಸಮಾಧಾನಮಾಡಲು ಯತ್ನಿಸಿದುದು : ಯಮಧರ್ಮನ ಮೂಲಕವಾಗಿ ವಿಶ್ವಾಮಿತ್ರನ ಪರೀಕ್ಷೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಅನರ್ಥೇ ಜಾತನಿರ್ಬನ್ಧಂ ಪರಾರ್ಥೇ ಲೋಭಮೋಹಿತಮ್ ।**
**ಅನಾರ್ಯಕೇಷ್ವಭಿರತಂ ಮರಣೇ ಕೃತನಿಶ್ಚಯಮ್ ॥೧॥**

**ಜ್ಞಾತೀನಾಂ ದುಃಖಕರ್ತಾರಂ ಬನ್ಧೂನಾಂ ಶೋಕವರ್ಧನಮ್ ।**
**ಸುಹೃದಾಂ ಕ್ಲೇಶದಾತಾರಂ ದ್ವಿಷತಾಂ ಹರ್ಷವರ್ಧನಮ್ ॥೨॥**

**ಕಥಂ ನೈನಂ ವಿಮಾರ್ಗಸ್ಥಂ ವಾರಯನ್ತೀಹ ಬಾನ್ಧವಾಃ ।**
**ಸೌಹೃದಾದ್ವಾ ಸುಹೃತ್ಸ್ನಿಗ್ಧೋ ಭಗವಾನ್ವಾ ಪಿತಾಮಹಃ ॥೩॥**

"ವೈಶಂಪಾಯನರೇ! ನನ್ನ ಅಭಿಪ್ರಾಯದಲ್ಲಿ ದುರ್ಯೋಧನನು ಅನರ್ಥಕಾರಿಗಳಾದ ಕಾರ್ಯಗಳನ್ನೇ ಪ್ರಯತ್ನಪೂರ್ವಕವಾಗಿ ಮಾಡತಕ್ಕವನು : ಪರರ ಸ್ವತ್ತಿಗೆ ಆಸೆಪಡತಕ್ಕವನು ಮತ್ತು ಪರರ ಸ್ವತ್ತನ್ನು ತನ್ನದನ್ನಾಗಿ ಮಾಡಿಕೊಂಡುಬಿಡುತ್ತೇನೆಂದು ಭ್ರಾಂತನಾಗಿರತಕ್ಕವನು; ದುರ್ಜನರಲ್ಲಿಯೇ ಹೆಚ್ಚು ವಿಶ್ವಾಸವಿಟ್ಟಿರತಕ್ಕವನು ; 'ಸತ್ತರೂ ಚಿಂತೆಯಿಲ್ಲ, ಪರರ ಸ್ವತ್ತನ್ನು ಅಪಹರಿಸಲೇಬೇಕು'-ಎಂಬ ಛಲವಿರತಕ್ಕವನು ; ಅರ್ಥಾತ್ ಸಾಯಲು ನಿಶ್ಚಯಿಸಿರುವವನು ; ಅಣ್ಣ-ತಮ್ಮಂದಿರಿಗೆ, ಕುಟುಂಬವರ್ಗದವರಿಗೆ ದುಃಖವನ್ನುಂಟುಮಾಡತಕ್ಕವನು ; ಬಂಧುಗಳ ಶೋಕವನ್ನು ವರ್ಧಿಸ

ತಕ್ಕವನು ; ಸುಹೃದರಿಗೆ ಕ್ಲೇಶದಾಯಕನಾಗಿರತಕ್ಕವನು ; ಶತ್ರುಗಳಿಗೆ ಹರ್ಷವನ್ನುಂಟುಮಾಡತಕ್ಕವನು–ಇಂತಹ ವಿಪರ್ಯಸ್ತವಾದ ಬುದ್ಧಿಯಿರತಕ್ಕ ಸುಯೋಧನನನ್ನು ಅವನ ಬಂಧುಗಳೇಕೆ ನಿರೋಧಿಸಲಿಲ್ಲ? ಪಾಂಡವರಿಗೆ ಹಿತೈಷಿಗಳೂ ಪಿತಾಮಹರೂ ಆದ ಭಗವಾನ್ ವ್ಯಾಸರು ಸಹೃದಯತೆಯಿಂದ ಲಾದರೂ ದುರ್ಯೋಧನನ ದುಷ್ಕಾರ್ಯಗಳನ್ನೇಕೆ ಪ್ರತಿರೋಧಿಸಲಿಲ್ಲ?"

"ಜನಮೇಜಯ! ದುರ್ಯೋಧನನ ದುರ್ವ್ಯಾಪಾರವನ್ನು ಪ್ರತಿರೋಧಿಸದೇ ಯಾರೂ ಸುಮ್ಮನೆ ಕುಳಿತುಕೊಂಡಿರಲಿಲ್ಲ. ಭಗವಾನ್ ವ್ಯಾಸರೂ ದುರ್ಯೋಧನನಿಗೆ ಹಿತವಚನಗಳನ್ನೇ ಹೇಳಿದರು. ಭೀಷ್ಮನೂ ಸಮಯೋಚಿತವಾದ ಮಾತುಗಳನ್ನೇ ಹೇಳಿದನು. ನಾರದರೂ ಬಹುವಿಧದಲ್ಲಿ ದುರ್ಯೋಧನನಿಗೆ ಹಿತೋಕ್ತಿಗಳನ್ನು ಹೇಳಿದರು. ನಾರದರೇನು ಹೇಳಿದರೆಂಬುದನ್ನು ಹೇಳುವೆನು ಕೇಳು.

**ದುರ್ಲಭೋ ವೈ ಸುಹೃಚ್ಛ್ರೋತಾ ದುರ್ಲಭಶ್ಚ ಹಿತಃ ಸುಹೃತ್ ।**
**ತಿಷ್ಠತೇ ಹಿ ಸುಹೃದ್ಯತ್ರ ನ ಬನ್ಧುಸ್ತತ್ರ ತಿಷ್ಠತೇ ॥೫॥**

"ಯಾವ ವಿಧವಾದ ಉಪಕಾರವನ್ನೂ ಅಪೇಕ್ಷಿಸದೇ ಕೇವಲ ಹಿತಕ್ಕಾಗಿಯೇ ಹೇಳುವ ಮಾತನ್ನು ಕೇಳುವವರೂ ಸುಲಭವಾಗಿ ಸಿಕ್ಕಲಾರರು. (ಉಪಕಾರವನ್ನು ಅಪೇಕ್ಷಿಸದ ಸುಹೃದನು ತನ್ನ ಮಿತ್ರನಿಗೆ ಕಟುವೆನಿಸಿದರೂ ಸತ್ಯಸ್ಥಿತಿಯನ್ನು ಹೇಳಲು ಹಿಂಜರಿಯುವುದಿಲ್ಲ. ತನ್ನ ಮಿತ್ರನು ಕೋಪಿಸಿಕೊಂಡು ತನಗೆ ಮುಂದೆ ಉಪಕರಿಸದಿರಬಹುದೆಂಬ ಭಯವೂ ಅವನಿಗಿರುವುದಿಲ್ಲ. ತನ್ನ ಮಾತುಗಳು ತಾತ್ಕಾಲಿಕವಾಗಿ ತನ್ನ ಮಿತ್ರನಿಗೆ ಅಪಥ್ಯವೆನಿಸಿದರೂ–ಆ ಮಾತಿನಿಂದವನು ಕ್ಷುಬ್ಧನೇ ಆದರೂ–ತನ್ನ ಕರ್ತವ್ಯವೆಂದು ತಿಳಿದು, ಸುಹೃದನದನ್ನು ಹೇಳಿಯೇ ಬಿಡುತ್ತಾನೆ. ಆದರೆ ಹೀಗೆ ಹೇಳುವವರು ವಿರಳ. ಕಟುವಾದರೂ ಹಿತಕರವಾದ ಮಾತನ್ನು ಕೇಳುವವರೂ ವಿರಳ. ಅಹಿತವಾದರೂ ಮನಸ್ಸಿಗೆ ಪ್ರಿಯವಾಗುವುದನ್ನು ಕೇಳಲು ಅಪೇಕ್ಷಿಸುತ್ತಾರೆಯೇ ಹೊರತು ಮನಸ್ಸಿಗೆ ಬೇಡವಾದುದನ್ನು ಕೇಳಲು ಯಾರೂ ಇಚ್ಛಿಸಲಾರರು. ತನ್ನ ಪ್ರಯೋಜನವನ್ನೂ ಬದಿಗೊತ್ತಿ ಸ್ನೇಹಿತನ ಕೋಪಕ್ಕೂ ಪಾತ್ರನಾಗಬೇಕಾದ ಸಂದರ್ಭದಲ್ಲಿಯೂ ಅವನಿಗೆ ಹಿತವಚನ ಹೇಳಲು ಹೋಗುವವನೂ

ದುರ್ಲಭನು. ಮಿತ್ರನ ಮನೋಧರ್ಮಕ್ಕನುಗುಣವಾಗಿ ಮಾತನಾಡಿ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಯತ್ನಿಸುವವರೇ ಹೆಚ್ಚು. ಆದರೆ ಯಾವ ವಿಧವಾದ ಉಪಕಾರವನ್ನೂ ಅಪೇಕ್ಷಿಸದೇ ಸಮಯಗಳಲ್ಲಿ ಸತ್ಯಾಂಶವನ್ನು ಮುಂದಿಟ್ಟು ತನ್ನ ಮಿತ್ರನಿಗೆ ಹಿತವನ್ನೇ ಹೇಳಿ ಹಿತವನ್ನೇ ಮಾಡುವ ಸುಹೃದನ ಪಾತ್ರವು ಮಹತ್ತ್ವಪೂರ್ಣವಾದುದು.) ಆಪ್ತಬಂಧುವೂ ಕೈಬಿಡುವಂತಹ ಸಂಕಟಸಮಯದಲ್ಲಿಯೂ ಇಂತಹ ಸುಹೃದನೇ ನೆರವಾಗುತ್ತಾನೆ.

**ಶ್ರೋತವ್ಯಮಪಿ ಪಶ್ಯಾಮಿ ಸುಹೃದಾಂ ಕುರುನನ್ದನ ।**
**ನ ಕರ್ತವ್ಯಶ್ಚ ನಿರ್ಬನ್ಧೋ ನಿರ್ಬನ್ಧೋ ಹಿ ಸುದಾರುಣಃ ॥೬॥**

ಕುರುನಂದನನೇ! ದುರ್ಯೋಧನ! ನಿಃಸ್ವಾರ್ಥಿಗಳಾದ, ಸರ್ವಕಾಲ ದಲ್ಲಿಯೂ ನಿನ್ನ ಅಥವಾ ಕುರುವಂಶದವರ ಹಿತದಲ್ಲಿಯೇ ಆಸಕ್ತರಾಗಿರುವ ಅಂತಹ ಸುಹೃದರ ಮಾತುಗಳನ್ನು ನೀನೀಗ ಕೇಳುವ ಅವಶ್ಯಕತೆಯಿದೆಯೆಂದು ನಾನು ಭಾವಿಸುತ್ತೇನೆ. ಈ ಸಮಯದಲ್ಲಿ ನೀನು ನಿನ್ನ ಅಭಿಪ್ರಾಯವನ್ನೇ ಒತ್ತಾಯಿಸಬಾರದು. ನಿನ್ನ ಅಭಿಪ್ರಾಯವನ್ನೇ ನೀನು ಬಲಾತ್ಕಾರದಿಂದಲೇ ಆದರೂ ಕಾರ್ಯರೂಪಕ್ಕೆ ತರಲು ಯತ್ನಿಸಿದರೆ ಪರಿಣಾಮವು ಬಹಳ ದಾರುಣವಾಗುತ್ತದೆ. ಈ ವಿಷಯದಲ್ಲಿ–ಹಿತೈಷಿಗಳ ಮಾತನ್ನು ಕೇಳದೇ ಒತ್ತಾಯಿಸಿದುದರಿಂದ ಗಾಲವಮಹರ್ಷಿಯು ಹೇಗೆ ಪರಾಜಯಹೊಂದಿದನೆಂಬ ಒಂದು ಇತಿಹಾಸವನ್ನು ಹಿರಿಯರು ಉದಾಹರಿಸುತ್ತಾರೆ. ಅದನ್ನೇ ನಾನು ನಿನಗೂ ಹೇಳುತ್ತೇನೆ :

ವಿಶ್ವಾಮಿತ್ರಮಹರ್ಷಿಯು ಹಿಂದೊಮ್ಮೆ ಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಅವನನ್ನು ಪರೀಕ್ಷಿಸುವ ಸಲುವಾಗಿ ಯಮಧರ್ಮನು ವಸಿಷ್ಠಮಹರ್ಷಿಗಳ ರೂಪವನ್ನು ತಾಳಿ ವಿಶ್ವಾಮಿತ್ರಮಹರ್ಷಿಯ ಬಳಿಗೆ ಹೋದನು. ಸಪ್ತರ್ಷಿಗಳಲ್ಲೊಬ್ಬರಾದ ವಸಿಷ್ಠಮಹರ್ಷಿಗಳ ವೇಷವನ್ನು ಧರಿಸಿದ್ದ ಯಮಧರ್ಮನು ಹಸಿವಿನಿಂದ ಪೀಡಿತನಾಗಿ ಭೋಜನಮಾಡಬೇಕೆಂಬ ಆಶಯದಿಂದ ಕೌಶಿಕನ ಆಶ್ರಮವನ್ನು ಪ್ರವೇಶಿಸಿದನು.

ತಾನು ಬಹುವಾಗಿ ದ್ವೇಷಿಸುತ್ತಿದ್ದ ವಸಿಷ್ಠಮಹರ್ಷಿಗಳೇ ಸಾಕ್ಷಾತ್ತಾಗಿ ತನ್ನ ಆಶ್ರಮಕ್ಕೆ ಬಂದುದನ್ನು ಕಂಡು ವಿಶ್ವಾಮಿತ್ರನಿಗೆ ಗಾಬರಿಯೇ ಆಯಿತು. ಪ್ರಯತ್ನಪೂರ್ವಕವಾಗಿ ಒಳ್ಳೆಯ ಮೃಷ್ಟಾನ್ನವನ್ನೇ ಸಿದ್ಧಪಡಿಸ ಬೇಕೆಂಬ ಆಶಯದಿಂದ ವಿಶ್ವಾಮಿತ್ರನು ಪರಮಾನ್ನದ ಚರುವನ್ನು ಸಿದ್ಧಪಡಿಸಿದನು. ಆದರೆ ಪರಮಾನ್ನವನ್ನು ಸಿದ್ಧಪಡಿಸುವ ಸಡಗರದಲ್ಲಿ ಬಂದ ಅತಿಥಿಯ ಕುಶಲಪ್ರಶ್ನೆಮಾಡಿ ಅರ್ಘ್ಯ-ಪಾದ್ಯಾಸನಾದಿಗಳನ್ನು ಕೊಟ್ಟು ವಸಿಷ್ಠರನ್ನು ಆದರಿಸಲಿಲ್ಲ. ವಸಿಷ್ಠರು ತಮ್ಮ ಆಶ್ರಮದ ಪರಿಸರಕ್ಕೆ ಬಂದುದನ್ನು ನೋಡಿ ವಿಶ್ವಾಮಿತ್ರನ ಆಶ್ರಮದ ಸಮೀಪದಲ್ಲಿಯೇ ಇದ್ದ ಇತರ ಮಹರ್ಷಿಗಳು ವಸಿಷ್ಠರನ್ನುಪಚರಿಸಿ ಭೋಜನಮಾಡಿಸಿಬಿಟ್ಟರು. ಆ ವೇಳೆಗೆ ಸರಿಯಾಗಿ ವಿಶ್ವಾಮಿತ್ರನೂ ತಾನು ಸಿದ್ಧಪಡಿಸಿದ ಪರಮಾನ್ನದ ಚರುವನ್ನು ಪಾತ್ರೆಯಲ್ಲಿ ತೆಗೆದುಕೊಂಡು ವಸಿಷ್ಠರಿಗೆ ಭೋಜನಮಾಡಿಸುವುದಕ್ಕಾಗಿ ಆಗಮಿಸಿದನು. ಪರಮಾನ್ನದ ಚರುವಿನ್ನೂ ಹೆಚ್ಚು ಬಿಸಿಯಾಗಿಯೇ ಇದ್ದಿತು. ಪರಮಾನ್ನದ ಚರುವನ್ನು ತಂದ ವಿಶ್ವಾಮಿತ್ರನನ್ನು ನೋಡಿ ವಸಿಷ್ಠರು–'ವಿಶ್ವಾಮಿತ್ರ! ನಾನೀಗಾಗಲೇ ಭೋಜನಮಾಡಿಯಾಯಿತು. ಇಲ್ಲಿಯೇ ಇರು"–ಎಂದು ಇಷ್ಟುಮಾತ್ರ ಹೇಳಿ ಹೊರಟೇಹೋದರು. ಮಹಾದ್ಯುತಿಮಂತನಾದ ವಿಶ್ವಾಮಿತ್ರನು ಅದೇ ಅವಸ್ಥೆಯಲ್ಲಿಯೇ ನಿಂತುಬಿಟ್ಟನು.

**ಭಕ್ತಂ ಪ್ರಗೃಹ್ಯ ಮೂರ್ಧ್ನಾ ವೈ ಬಾಹುಭ್ಯಾಂ ಸಂಶಿತವ್ರತಃ ।**
**ಸ್ಥಿತಃ ಸ್ಥಾಣುರಿವಾಭ್ಯಾಶೇ ನಿಶ್ಚೇಷ್ಟೋ ಮಾರುತಾಶನಃ ॥೧೩॥**

ಕಠೋರವ್ರತನಿಷ್ಠನಾದ ವಿಶ್ವಾಮಿತ್ರನು ವಸಿಷ್ಠರಿಗಾಗಿ ತಂದಿದ್ದ ಪಾಯಸದ ಪಾತ್ರೆಯನ್ನು ತನ್ನೆರಡು ಕೈಗಳಿಂದಲೂ ಹಿಡಿದು ತಲೆಯ ಮೇಲಿಟ್ಟುಕೊಂಡು ಆಶ್ರಮದ ಸಮೀಪದಲ್ಲಿ ಮೋಟುಮರದಂತೆ ನಿಶ್ಚೇಷ್ಟ ನಾಗಿಯೂ, ಕೇವಲ ಗಾಳಿಯನ್ನೇ ಆಹಾರವನ್ನಾಗಿ ಸೇವಿಸುತ್ತಲೂ ನಿಂತಿದ್ದನು.

ಆ ಸಮಯದಲ್ಲಿ ಗಾಲವನೆಂಬ ಋಷಿಯು ವಿಶ್ವಾಮಿತ್ರಮಹರ್ಷಿಯ ವಿಷಯದಲ್ಲಿ ತನಗಿದ್ದ ಗೌರವದ ಕಾರಣದಿಂದಲೂ, ಗುರುತ್ವದ ಕಾರಣ ದಿಂದಲೂ, ವಿಶ್ವಾಮಿತ್ರನು ಲೋಕಪೂಜ್ಯನಾಗಿದ್ದುದರಿಂದಲೂ ಮತ್ತು ಅವನ

ಮೇಲಿನ ವಿಶೇಷಪ್ರೀತಿಯಿಂದಲೂ ವಿಶ್ವಾಮಿತ್ರನನ್ನು ಪ್ರಸನ್ನಗೊಳಿಸುವ ಆಶಯದಿಂದ ವಿಶ್ವಾಮಿತ್ರನ ಶುಶ್ರೂಷೆಮಾಡಲು ಉಪಕ್ರಮಿಸಿದನು.

ಒಂದು ನೂರು ವರ್ಷಗಳು ಕಳೆದನಂತರದಲ್ಲಿ ಯಮಧರ್ಮನೇ ಪುನಃ ವಸಿಷ್ಠರ ರೂಪವನ್ನು ಧರಿಸಿಕೊಂಡು ಭೋಜನಮಾಡುವ ಸಲುವಾಗಿಯೇ ವಿಶ್ವಾಮಿತ್ರನ ಆಶ್ರಮದ ಬಳಿಗೆ ಆಗಮಿಸಿದನು. ಆ ಸಮಯದಲ್ಲಿಯೂ ಪಾಯಸದ ಪಾತ್ರೆಯನ್ನು ತಲೆಯ ಮೇಲಿಟ್ಟುಕೊಂಡು ಎರಡು ಕೈಗಳಿಂದಲೂ ಅದನ್ನು ಹಿಡಿದುಕೊಂಡು ವಾಯುಭಕ್ಷನಾಗಿ ಸ್ಥಾಣುವಿನಂತೆ ನಿಂತಿದ್ದ ವಿಶ್ವಾಮಿತ್ರನಿಂದ–ನೂರು ವರ್ಷಗಳಾಗಿದ್ದರೂ ನೂತನವಾಗಿಯೂ ಬಿಸಿ-ಬಿಸಿಯಾಗಿಯೂ ಇದ್ದ ಪಾಯಸದ ಚರುವನ್ನು–ಪ್ರತಿಗ್ರಹಿಸಿ ಭೋಜನಮಾಡಿ ಸಂತುಷ್ಟನಾಗಿ–'ಪ್ರೀತೋಽಸ್ಮಿ ವಿಪ್ರರ್ಷೇ' 'ಬ್ರಹ್ಮರ್ಷಿಯೇ! ನಿನ್ನ ಈ ಸತ್ಕಾರದಿಂದ ಸುಪ್ರೀತನಾಗಿದ್ದೇನೆ'–ಎಂದು ಹೇಳಿ ಮುನಿವೇಷಧರನಾದ ಯಮಧರ್ಮನು ಹೊರಟುಹೋದನು.

**ಕ್ಷತ್ರಭಾವಾದಪಗತೋ ಬ್ರಾಹ್ಮಣತ್ವಮುಪಾಗತಃ ।**
**ಧರ್ಮಸ್ಯ ವಚನಾತ್ಪ್ರೀತೋ ವಿಶ್ವಾಮಿತ್ರಸ್ತದಾಭವತ್ ॥೧೮॥**

ಪ್ರತೀಕಾರಸ್ವಭಾವದ ಕ್ಷಾತ್ರಭಾವವನ್ನು ಕಳೆದುಕೊಂಡು ಶಾಂತ ಸ್ವಭಾವದ ಬ್ರಾಹ್ಮಣತ್ವವನ್ನು ಹೊಂದಿದ್ದ ವಿಶ್ವಾಮಿತ್ರನು ಯಮಧರ್ಮನು ಹೇಳಿದ ಮಾತಿನಿಂದ ಸುಪ್ರೀತನಾದನು.

ನೂರು ವರ್ಷಗಳ ಪರ್ಯಂತವಾಗಿ ಶುಶ್ರೂಷೆಮಾಡುತ್ತಿದ್ದು ಅಚ್ಚು ಮೆಚ್ಚಿನ ಶಿಷ್ಯನಾಗಿದ್ದ, ತಪಸ್ವಿಯಾದ ಗಾಲವನ ಶುಶ್ರೂಷೆಗೂ ಮತ್ತು ಭಕ್ತಿಗೂ ವಿಶ್ವಾಮಿತ್ರನು ಮೆಚ್ಚಿ ಅವನನ್ನು ಕುರಿತು ಹೇಳಿದನು :

**ಅನುಜ್ಞಾತೋ ಮಯಾ ವತ್ಸ ಯಥೇಷ್ಟಂ ಗಚ್ಛ ಗಾಲವ ।**

"ಗಾಲವ! ನನ್ನಿಂದ ನೀನು ಅನುಜ್ಞಾತನಾಗಿರುವೆ. ನಿನ್ನ ಇಚ್ಛೆಬಂದೆಡೆಗೆ ನೀನಿನ್ನು ಹೋಗಬಹುದು, ಮಗು!"

ವಿಶ್ವಾಮಿತ್ರನ ಅನುಜ್ಞೆಯನ್ನು ಪಡೆದ ಗಾಲವನು ಬಹುಸಂತುಷ್ಟ

ನಾಗಿ ಮಹಾದ್ಯುತಿಮಂತನಾದ, ಮುನಿಶ್ರೇಷ್ಠನಾದ ವಿಶ್ವಾಮಿತ್ರಮಹರ್ಷಿಯನ್ನು ಕುರಿತು ಸುಮಧುರವಾದ ಈ ಮಾತುಗಳನ್ನು ಹೇಳಿದನು :

**ದಕ್ಷಿಣಾಃ ಕಾಃ ಪ್ರಯಚ್ಛಾಮಿ ಭವತೇ ಗುರುಕರ್ಮಣಿ ॥೨೧॥**

"ಭಗವನ್! ನನ್ನ ಬ್ರಹ್ಮಚರ್ಯವ್ರತದ ಸಮಾಪ್ತಿಗಾಗಿ ಗುರುದಕ್ಷಿಣಾರೂಪವಾಗಿ ನಾನೇನನ್ನು ತಮಗೆ ತಂದುಕೊಡಲಿ?"

(ಇದೊಂದು ವಿಚಿತ್ರಸನ್ನಿವೇಶ. ಗಾಲವನು ನೂರು ವರ್ಷಗಳ ಕಾಲ ಅವಿಚ್ಛಿನ್ನವಾಗಿ ವಿಶ್ವಾಮಿತ್ರನನ್ನು ಶುಶ್ರೂಷೆಮಾಡಿರುತ್ತಾನೆ. ಅವನ ಶುಶ್ರೂಷೆಗೆ ಮೆಚ್ಚಿ ವಿಶ್ವಾಮಿತ್ರನು ಅವನನ್ನು ಯಥೋದ್ದಿಷ್ಟಸ್ಥಳಕ್ಕೆ ಹೋಗಲು ಅನುಮತಿಯನ್ನು ನೀಡುತ್ತಾನೆ. ಅರ್ಥಾತ್ ಅವನು ಅಪೇಕ್ಷಿಸಿದ್ದ ವಿದ್ಯೆಯನ್ನು ಅನುಗ್ರಹಿಸಿ ಗಾಲವನು ತನ್ನ ಊರಿಗೆ ಹೋಗಲು ಅನುಮತಿಯನ್ನು ನೀಡುತ್ತಾನೆ. ಆ ಸಮಯದಲ್ಲಿ ಗುರುದಕ್ಷಿಣೆಯನ್ನು ಸಮರ್ಪಿಸಬೇಕಾದುದು ತನ್ನ ಕರ್ತವ್ಯವೆಂದು ಭಾವಿಸಿದ ಗಾಲವನು ವಿಶ್ವಾಮಿತ್ರನನ್ನು ಪ್ರಶ್ನಿಸುತ್ತಾನೆ. 'ತಾನು ಮಾಡಿದ ಶುಶ್ರೂಷೆಯಿಂದ ತನಗೆ ವಿದ್ಯೆಯು ಪ್ರಾಪ್ತವಾಯಿತು'–ಎಂದವನು ಕ್ಷಣಮಾತ್ರವೂ ಭಾವಿಸುವುದಿಲ್ಲ. ಶಿಷ್ಯನಾದವನಿಗೆ ಗುರುಶುಶ್ರೂಷೆಯು ಒಂದು ಮುಖ್ಯಕರ್ತವ್ಯವಾಗಿರುತ್ತದೆ. ವಿದ್ಯೆಯನ್ನು ಗುರುಗಳಿಂದ ಪಡೆದುಕೊಂಡನಂತರ 'ಆಚಾರ್ಯಾಯ ಪ್ರಿಯಂ ಧನಮಾಹೃತ್ಯ' ಎಂಬ ಉಪನಿಷದ್ವಾಕ್ಯದಂತೆ ಆಚಾರ್ಯನಿಗೆ ಪ್ರಿಯವಾದ ಗುರುದಕ್ಷಿಣೆಯನ್ನು ಕೊಡಬೇಕಾಗುತ್ತದೆ. ಆಚಾರ್ಯನೇ ಇದನ್ನು ಹೇಳುತ್ತಾನೆ. ಗುರುವಿಗೆ ಪ್ರಿಯವಾದ ದಕ್ಷಿಣೆಯನ್ನು ಕೊಡುವುದೂ ಶಿಷ್ಯನ ಮುಖ್ಯಕರ್ತವ್ಯವಾಗಿರುತ್ತದೆ. 'ಕೇವಲ ಗುರುಶುಶ್ರೂಷೆಯಿಂದಲೇ ಪರ್ಯಾಪ್ತವಾಯಿತು'–ಎನ್ನುವಂತಿಲ್ಲ. ಇಂತಹ ಗುರುಶುಶ್ರೂಷಾಸಹಿತವಾದ ವಿದ್ಯಾಭ್ಯಾಸವು ಈಗ ಇಲ್ಲದೇ ಇರುವುದರಿಂದ ಈ ಪ್ರಕರಣವು ನಮಗೆ ಆಶ್ಚರ್ಯಕರವಾಗಿಯೂ ಕಾಣಬಹುದು. ಏಕೆಂದರೆ : ನೂರು ವರ್ಷಗಳ ಅವಿಚ್ಛಿನ್ನವಾದ ಶುಶ್ರೂಷೆಗೆ ಗಾಲವನಿಗೆ ಸಿಕ್ಕಿದ ಫಲವೇನೆಂಬುದನ್ನು ನಮ್ಮ ಮನಸ್ಸು ತರ್ಕಿಸುತ್ತಿರುತ್ತದೆಯಲ್ಲವೇ?)

ಗಾಲವನು ಮುಂದುವರಿದು ಹೇಳಿದನು :

**ದಕ್ಷಿಣಾಭಿರುಪೇತಂ ಹಿ ಕರ್ಮ ಸಿಧ್ಯತಿ ಮಾನದ ।**
**ದಕ್ಷಿಣಾನಾಂ ಹಿ ದಾತಾ ವೈ ಅಪವರ್ಗೇಣ ಯುಜ್ಯತೇ ॥೨೨॥**

**ಸ್ವರ್ಗೇ ಕ್ರತುಫಲಂ ತದ್ಧಿ ದಕ್ಷಿಣಾ ಶಾನ್ತಿರುಚ್ಯತೇ ।**
**ಕಿಮಾಹರಾಮಿ ಗುರ್ವರ್ಥಂ ಬ್ರವೀತು ಭಗವಾನಿತಿ ॥೨೩॥**

"ಯಾವ ಕರ್ಮವು ಸಿದ್ಧಿಸಬೇಕಾದರೂ ಅದು ದಕ್ಷಿಣಾಸಹಿತವಾಗಿದ್ದರೆ ಮಾತ್ರವೇ ಸಿದ್ಧಿಸುತ್ತದೆ. ಕೇವಲ ಕರ್ಮಮಾಡಿಬಿಟ್ಟರೆ ಆ ಕರ್ಮವು ಖಂಡಿತವಾಗಿಯೂ ಸಿದ್ಧಿಸುವುದಿಲ್ಲ. ದಕ್ಷಿಣೆಯನ್ನು ಕೊಟ್ಟವನು ಮೋಕ್ಷವನ್ನು ಪಡೆಯುತ್ತಾನೆ. ದಕ್ಷಿಣೆಯನ್ನು ಕೊಡತಕ್ಕವನು, ಯಜ್ಞಮಾಡಿದ ಫಲಕ್ಕೆ ಅನುಗುಣವಾದ ಫಲವನ್ನು ಸ್ವರ್ಗದಲ್ಲಿ ಪಡೆಯುತ್ತಾನೆ. ವೇದದಲ್ಲಿ ದಕ್ಷಿಣೆಯು ಶಾಂತಿಪ್ರದವಾದುದೆಂದು ಹೇಳಿದೆ. ಆದುದರಿಂದ, ಭಗವನ್! ಗುರುವಿನ ಸಲುವಾಗಿ ಯಾವುದನ್ನು ತಂದೊಪ್ಪಿಸಲಿ? ಯಾವುದನ್ನು ಗುರು ದಕ್ಷಿಣೆಯಾಗಿ ತಂದುಕೊಡಲಿ? ದಯಮಾಡಿ ಹೇಳಿರಿ."

ಆದರೆ ನೂರು ವರ್ಷಗಳಕಾಲ ಅವಿಚ್ಛಿನ್ನವಾಗಿ ಶುಶ್ರೂಷೆಮಾಡಿ ಗಾಲವಮುನಿಯು ವಿಶ್ವಾಮಿತ್ರನನ್ನು ಗೆದ್ದುಬಿಟ್ಟನು. ಅದರಿಂದಾಗಿ ವಿಶ್ವಾಮಿತ್ರನಿಗೆ ಗುರುದಕ್ಷಿಣೆಯನ್ನು ಕೇಳುವ ಸಂಭವವೇ ಇರಲಿಲ್ಲ. ಅವನು ಮಾಡಿದ ಉಪಕಾರವನ್ನು ಬಾರಿ-ಬಾರಿಗೂ ಸ್ಮರಿಸುತ್ತಾ ವಿಶ್ವಾಮಿತ್ರನು ಹೇಳಿದನು : "ಹೋಗಿ ಬಾ, ಗಾಲವ! ನೀನು ಮಾಡಿದ ಶುಶ್ರೂಷೆಯೇ ಪರ್ಯಾಪ್ತವಾಗಿದೆ. ಗುರುದಕ್ಷಿಣೆಯನ್ನು ಕೊಡಬೇಕಾದ ಅವಶ್ಯಕತೆಯಿಲ್ಲ. ಹೋಗಿ ಬಾ, ಮಗು!"

ವಿಶ್ವಾಮಿತ್ರನು ಅನೇಕಬಾರಿ-'ಹೋಗಿಬಾ, ಹೋಗಿಬಾ'-ಎಂದು ಹೇಳುತ್ತಲೇ ಇದ್ದನು. ಗಾಲವನೂ-'ಕಿಂ ದದಾನಿ?-ಏನನ್ನು ಕೊಡಲಿ? ಗುರುದಕ್ಷಿಣಾರೂಪವಾಗಿ ಏನನ್ನು ತಂದು ಸಮರ್ಪಿಸಲಿ?'-ಎಂದು ಕೇಳು ತ್ತಿದ್ದನೇ ಹೊರತು ವಿಶ್ವಾಮಿತ್ರನ ಮಾತಿನಂತೆ ಆಶ್ರಮವನ್ನು ಬಿಟ್ಟು ಹೊರ ಡಲೇ ಇಲ್ಲ. ತಪಸ್ವಿಯಾದ ಗಾಲವನ ಬಹುವಾದ ಬಲಾತ್ಕಾರದಿಂದಾಗಿ ವಿಶ್ವಾಮಿತ್ರನಿಗೆ ಸ್ವಲ್ಪ ಕೋಪವೇ ಬಂದಿತು. ನೂರು ವರ್ಷಗಳ ಪರ್ಯಂತ

ವಾಗಿ ತಾಳ್ಮೆಯಿಂದಿದ್ದು ನಿಂತಲ್ಲಿಯೇ ಸ್ಥಾಣುವಿನಂತೆ ನಿಂತಿದ್ದ ವಿಶ್ವಾಮಿತ್ರನಿಗೆ ಗಾಲವನ ಹಠದ ಕಾರಣದಿಂದಾಗಿ ಕ್ಷಮೆಯು ಸ್ವಲ್ಪದೂರ ಸರಿಯಿತು. ವಿಶ್ವಾಮಿತ್ರನು ಗಾಲವನನ್ನು ಕುರಿತು ಹೇಳಿದನು : "ಗುರುದಕ್ಷಿಣೆಯನ್ನು ಸಮರ್ಪಿಸಿಯೇ ಹೋಗಬೇಕೆನ್ನುವೆಯಾ? ಹಾಗಾದರೆ ಗುರುದಕ್ಷಿಣಾರೂಪವಾಗಿ ಈ ಲಕ್ಷಣದ ಕುದುರೆಗಳನ್ನು ತಂದುಕೊಟ್ಟು ಹೋಗು :

**ಏಕತಃ ಶ್ಯಾಮಕರ್ಣಾನಾಂ ಹಯಾನಾಂ ಚನ್ದ್ರವರ್ಚಸಾಮ್ ।**
**ಅಷ್ಟೌ ಶತಾನಿ ಮೇ ದೇಹಿ ಗಚ್ಛ ಗಾಲವ ಮಾಚಿರಮ್ ॥೨೭॥**

ನೀನು ನನಗೆ ಎಂಟು ನೂರು ಕುದುರೆಗಳನ್ನು ತಂದುಕೊಡಬೇಕು. ಅವುಗಳೆಲ್ಲವೂ ಚಂದ್ರನಂತೆ ಬಿಳಿಯ ಬಣ್ಣದುವುಗಳಾಗಿರಬೇಕು. ಆದರೆ ಅವುಗಳ ಒಂದೊಂದು ಕಿವಿಯು ಮಾತ್ರ ಕಪ್ಪಗಿರಬೇಕು. ಇಂತಹ ಲಕ್ಷಣಗಳಿಂದ ಕೂಡಿರುವ ಎಂಟು ನೂರು ಕುದುರೆಗಳನ್ನು ನನಗೆ ತಂದುಕೊಡು. ಬೇಗ ಹೋಗು. ಸಾವಕಾಶಮಾಡಬೇಡ."

೧೦೬ನೆಯ ಅಧ್ಯಾಯವು ಮುಗಿಯಿತು.

೧೦೭ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಗಾಲವನ ಚಿಂತೆ : ಗರುಡನು ಬಂದು ಗಾಲವನಿಗೆ ಆಶ್ವಾಸನೆಯನ್ನು ನೀಡಿದುದು

ವಿದ್ಯಾಭ್ಯಾಸಾನಂತರ ಗಾಲವನು ತನ್ನ ಕರ್ತವ್ಯವನ್ನು ಮುಗಿಸಿಕೊಂಡು ಹೋಗಬೇಕೆಂಬ ಆಶಯದಿಂದ ವಿಶ್ವಾಮಿತ್ರನನ್ನು ಪದೇ ಪದೇ ಒತ್ತಾಯಿಸಿದನೇ ಹೊರತು ವಿಶ್ವಾಮಿತ್ರನು ತನಗೆ ಕೊಡಲು ಅಸಾಧ್ಯವಾದ ಗುರುದಕ್ಷಿಣೆಯನ್ನೇ ಅಪೇಕ್ಷಿಸುವನೆಂಬ ಭಾವನೆಯು ಗಾಲವನಿಗಿರಲಿಲ್ಲ. ಧೀಮಂತನಾದ ವಿಶ್ವಾಮಿತ್ರನ ಅಪೇಕ್ಷೆಯನ್ನು ಕೇಳಿದೊಡನೆಯೇ ಗಾಲವನು ಭ್ರಾಂತನಾದನು. ಅಶಕ್ಯವಾಗಿ ತೋರುವ ಈ ಗುರುದಕ್ಷಿಣೆಯನ್ನು ತನ್ನಿಂದ ಕೊಡಲು ಸಾಧ್ಯವಿಲ್ಲವೆಂದು ಗುರುಗಳಲ್ಲಿ ಹೇಳುವಂತೆಯೂ ಇರಲಿಲ್ಲ. ಒಂದು ಕಿವಿಯು ಮಾತ್ರ ಕರಿಯದಾದ ಎಂಟು ನೂರು ಕುದುರೆಗಳನ್ನು ತರುವ ವಿಧಾನವೂ ತಿಳಿಯದು. ಆ ಜಾತಿಯ ಕುದುರೆಗಳು ವಿಶ್ವದಲ್ಲಿ ಸಿಕ್ಕುವುವೇ?–

ಎಂಬುದೂ ಸಂಶಯದ ಮಾತೇ ಸರಿ. ಹೀಗಾಗಿ ಗಾಲವನಿಗೆ ಕುಳಿತಲ್ಲಿ ಕುಳಿತುಕೊಳ್ಳಲಾಗುತ್ತಿರಲಿಲ್ಲ. ನಿದ್ರೆಮಾಡಲೂ ಸಾಧ್ಯವಾಗುತ್ತಿರಲಿಲ್ಲ. ಆಹಾರವನ್ನು ತೆಗೆದುಕೊಳ್ಳಲೂ ಮನಸ್ಸಿರಲಿಲ್ಲ. ಕುಳಿತಲ್ಲಿ ಕುಳಿತುಕೊಳ್ಳದೇ, ನಿದ್ರೆಯನ್ನೂ ಮಾಡದೇ, ಆಹಾರವನ್ನೂ ತೆಗೆದುಕೊಳ್ಳದೇ ಗಾಲವನು ಅತ್ಯಂತ ಚಿಂತಾಕ್ರಾಂತನಾದನು. ಹೀಗೆಯೇ ಅನೇಕ ದಿವಸಗಳವರೆಗೆ ಅಶ್ವಪ್ರಾಪ್ತಿಯ ಹಾದಿಯನ್ನು ಕಾಣದೇ ನಿದ್ರಾಹಾರಗಳನ್ನು ವಿವರ್ಜಿಸಿ ಚಿಂತಾ-ಶೋಕ ಪರಾಯಣನಾಗಿದ್ದ ಗಾಲವನು ಕೃಶನಾಗಿಹೋದನು. ಚರ್ಮ ಮತ್ತು ಮೂಳೆಗಳು ಮಾತ್ರವೇ ಅವನಲ್ಲಿ ಉಳಿದಿದ್ದುವು. ಶರೀರದಲ್ಲಿ ರಕ್ತವೇ ಇರಲಿಲ್ಲ. ಅದರಿಂದಾಗಿ ಅವನ ಶರೀರವು ಬಿಳಿಚಿಕೊಂಡುಹೋಯಿತು. ಗಾಲವನು ಬಹುವಾಗಿ ಶೋಕಿಸಿದನು. ಶೋಕವೆಂಬ ಅಗ್ನಿಯಿಂದ ಅಥವಾ ಚಿಂತೆಯೆಂಬ ಅಗ್ನಿಯಿಂದ ದಗ್ಧನಾಗಿಹೋದನು. ದುಃಖಿತನಾದ ಗಾಲವನು ತನ್ನ ದುಃಖವನ್ನು ತಡೆಯಲಾರದೇ ಗಳ-ಗಳನೆ ಅತ್ತುಬಿಟ್ಟನು. ಅಳುತ್ತಳುತ್ತಲೇ ಗದ್ಗದಧ್ವನಿಯಿಂದ ತನ್ನಲ್ಲಿಯೇ ಹೇಳಿಕೊಂಡನು :

**ಕುತಃ ಪುಷ್ಟಾನಿ ಮಿತ್ರಾಣಿ ಕುತೋಽರ್ಥಾಃ ಸಂಚಯಃ ಕುತಃ ।**
**ಹಯಾನಾಂ ಚನ್ದ್ರಶುಭ್ರಾಣಾಂ ಶತಾನ್ಯಷ್ಟೌ ಕುತೋ ಮಮ ॥೩॥**

"ಧನಿಕರಾದ ಮಿತ್ರರು ನನಗೆ ಯಾರಿದ್ದಾರೆ? ಐಶ್ವರ್ಯವೆಲ್ಲಿದೆ? ನಾನು ಐಶ್ವರ್ಯವನ್ನು ಹೇಗೆ ಸಂಗ್ರಹಿಸಲಿ? ಚಂದ್ರನಂತೆ ಶುಭ್ರವಾದ ಎಂಟು ನೂರು ಕುದುರೆಗಳು ನನಗೆ ಹೇಗೆ ತಾನೇ ಸಿಕ್ಕುವುವು? ಎಲ್ಲಿ ತಾನೇ ಸಿಕ್ಕುವುವು?

**ಕುತೋ ಮೇ ಭೋಜನೇ ಶ್ರದ್ಧಾ ಸುಖಶ್ರದ್ಧಾ ಕುತಶ್ಚ ಮೇ ।**
**ಶ್ರದ್ಧಾ ಮೇ ಜೀವಿತಸ್ಯಾಪಿ ಛಿನ್ನಾಂ ಕಿಂ ಜೀವಿತೇನ ಮೇ ॥೪॥**

ನನಗೆ ಈ ಪರಿಸ್ಥಿತಿಯಲ್ಲಿ ಊಟಮಾಡುವ ಇಚ್ಛೆಯು ಹೇಗೆ ತಾನೇ ಇದ್ದೀತು? ಸುಖವಾಗಿರಬೇಕೆಂಬ ಅಪೇಕ್ಷೆಯು ತಾನೇ ಹೇಗೆ ಬರುತ್ತದೆ? ನಾನು ಬದುಕಬೇಕೆಂಬ ನಿಶ್ಚಯವೂ ನಷ್ಟವಾಗಿ ಹೋಯಿತು. ನಾನು ಮುಂದೆ ಬದುಕಿದ್ದೂ ಪಡೆಯುವ ಪ್ರಯೋಜನವಾದರೂ ಏನು? ನನಗೆ

ಊಟವೂ ಬೇಕಾಗಿಲ್ಲ. ಸುಖವೂ ಬೇಕಾಗಿಲ್ಲ. ಯಾವ ಕಾರ್ಯದಲ್ಲಿಯೂ ನನಗೆ ಆಸಕ್ತಿಯೇ ಇಲ್ಲ. ನನ್ನ ಜೀವನದ ಆಸೆಗಳೆಲ್ಲವೂ ಮಣ್ಣುಪಾಲಾದುವು. ನನಗಿಂದು ಜೀವನವೇ ಬೇಡವಾಗಿದೆ. ಗುರುಗಳು ಕೇಳಿರುವ ದಕ್ಷಿಣೆಯನ್ನು ಕೊಡಲು ನನಗೆ ಸಾಧ್ಯವೇ ಇಲ್ಲ. ಗುರುಗಳು ಹೊರಟುಹೋಗುವಂತೆ ಬಾರಿ-ಬಾರಿಗೂ ಹೇಳಿದರು. ನಾನೇ ಗುರುದಕ್ಷಿಣೆಯು ಯಾವ ರೂಪದ್ದಾಗಿರ ಬೇಕೆಂದು ಪದೇ-ಪದೇ ಗುರುಗಳನ್ನು ಒತ್ತಾಯಪಡಿಸಿದೆನು. ಗುರುದಕ್ಷಿಣೆ ಯನ್ನು ಸಲ್ಲಿಸಬೇಕಾದುದು ನನ್ನ ಕರ್ತವ್ಯವೆಂಬ ಭಾವನೆಯಿಂದ ಗುರುಗಳನ್ನು ಒತ್ತಾಯಪಡಿಸಿದೆನು. ಆದರೆ ಕುಪಿತರಾದ ಗುರುಗಳು ನನ್ನ ಶಕ್ತಿಗೆ ಮೀರಿ ದುದನ್ನು ಕೇಳಿಬಿಟ್ಟಿದ್ದಾರೆ. ಅದರಲ್ಲೂ ಶೀಘ್ರಾತಿಶೀಘ್ರವಾಗಿ ತರುವಂತೆ ಹೇಳಿಬಿಟ್ಟಿದ್ದಾರೆ. ನನಗೆ ಈಗಿರುವ ಒಂದೇ ಒಂದು ಮಾರ್ಗವೆಂದರೆ :

**ಅಹಂ ಪಾರೇ ಸಮುದ್ರಸ್ಯ ಪೃಥಿವ್ಯಾ ವಾ ಪರಮ್ಪರಾತ್ ।**
**ಗತ್ವಾತ್ಮಾನಂ ವಿಮುಞ್ಚಾಮಿ ಕಿಂ ಫಲಂ ಜೀವಿತೇನ ಮೇ ॥೫॥**

ಪ್ರಾಣಗಳನ್ನು ತೊರೆಯುವುದೊಂದೇ ನನಗುಳಿದಿರುವ ಮಾರ್ಗ. ಸಮುದ್ರದ ಆಚೆಯ ದಡವನ್ನು ಸೇರಲು ಯತ್ನಿಸಿಯಾದರೂ ಪ್ರಾಣಬಿಡು ತ್ತೇನೆ. ಭೂಮಿಯಲ್ಲಿ ಯಾವುದಾದರೂ ದಿಕ್ಕಿನೆಡೆಗೆ ಹಗಲಿರುಳೆನ್ನದೇ ಹೋಗುತ್ತಲೇ ಇದ್ದು ಈ ಶರೀರವನ್ನು ತೊರೆಯುತ್ತೇನೆ. ನಾನು ಇನ್ನು ಮುಂದೆ ಜೀವಿಸುವುದರಿಂದೇನು ಪ್ರಯೋಜನ?

**ಅಧನಸ್ಯಾಕೃತಾರ್ಥಸ್ಯ ತ್ಯಕ್ತಸ್ಯ ವಿವಿಧೈಃ ಫಲೈಃ ।**
**ಋಣಂ ಧಾರಯಮಾಣಸ್ಯ ಕುತಃ ಸುಖಮನೀಹಯಾ ॥೬॥**

ಹಣವಿಲ್ಲದ ದರಿದ್ರನಿಗೆ, ಮನಸ್ಸಿನ ಆಶಯವನ್ನು ಸಾಧಿಸಿಕೊಳ್ಳಲು ಅಸಮರ್ಥನಾದವನಿಗೆ (ಕೃತಾರ್ಥನಾಗದವನಿಗೆ), ನಾನಾವಿಧವಾದ ಶುಭ ಫಲಗಳಿಂದ ವಂಚಿತನಾದವನಿಗೆ, ಸಾಲವನ್ನು ಹೊತ್ತುಕೊಂಡಿರುವವನಿಗೆ ಸುಖವು ಪ್ರಯತ್ನವಿಲ್ಲದೆ ಹೇಗೆ ತಾನೇ ಲಭಿಸುತ್ತದೆ? (ಪ್ರಯತ್ನವೇ ಸುಖಕ್ಕೆ ಮೂಲ. ಪ್ರಯತ್ನಶೀಲನಾದವನು ಕಾರ್ಯದಲ್ಲಿ ಪ್ರವೃತ್ತನಾಗು ತ್ತಾನೆ. ಮಾಡಿದ ಕಾರ್ಯಕ್ಕೆ ತಕ್ಕುದಾದ ಫಲವನ್ನೂ ಪಡೆಯುತ್ತಾನೆ.

ಆದರೆ ಮಾಡಿದ ಪ್ರಯತ್ನವು ಅನೇಕ ವೇಳೆ ಸಂದರ್ಭಾಧೀನವಾಗಿ ಫಲಿಸುವುದಿಲ್ಲ. ಮನುಷ್ಯನು ಚಿಂತಾಪರನಾದಾಗ ಪ್ರಯತ್ನವೆಂಬುದು ಸಂಪೂರ್ಣವಾಗಿ ನಿಂತೇ ಹೋಗುತ್ತದೆ. ಯಾವ ಕಾರ್ಯವನ್ನು ಮಾಡಲೂ ಮನಸ್ಸಿರುವುದಿಲ್ಲ. ಅಂತೆಯೇ ಕಾರ್ಯಮಾಡುವುದರಿಂದುಂಟಾಗುವ ಫಲಗಳೂ ಅವನಿಗೆ ಸಿಕ್ಕಲಾರವು. ಫಲದಿಂದ ವಂಚಿತನಾಗುತ್ತಾನೆ. ಅರ್ಥಾತ್ ಸರ್ವಸುಖದಿಂದಲೂ ವಂಚಿತನಾಗುತ್ತಾನೆ. ಆದುದರಿಂದ ಮನುಷ್ಯನು ಯಾವಾಗಲೂ ಪ್ರಯತ್ನಮಾಡುತ್ತಲೇ ಇರಬೇಕು. ಮರಳಿ ಯತ್ನವ ಮಾಡು ಮರಳಿ ಯತ್ನವ ಮಾಡು–ಎಂಬ ಕನ್ನಡ ಕವಿಯ ಹಿತೋಕ್ತಿಯನ್ನು ನೆನೆಯುತ್ತಲೇ ಇರಬೇಕು.)

**ಸುಹೃದಾಂ ಹಿ ಧನಂ ಭುಕ್ತ್ವಾ ಕೃತ್ವಾ ಪ್ರಣಯಮೀಪ್ಸಿತಮ್ ।**
**ಪ್ರತಿಕರ್ತುಮಶಕ್ತಸ್ಯ ಜೀವಿತಾನ್ಮರಣಂ ವರಮ್ ॥೭॥**

ಅಪೇಕ್ಷಾನುಸಾರವಾಗಿ ಪ್ರೇಮಸಂಬಂಧವನ್ನು ಅಥವಾ ಸ್ನೇಹ ಸಂಬಂಧವನ್ನು ಬೆಳೆಸಿಕೊಂಡು ಸುಹೃದರ ಧನವನ್ನು ಉಪಭುಂಜಿಸಿದ ನಂತರ ತಾನು ಉಪಭುಂಜಿಸಿದ ಧನಕ್ಕೆ ಪ್ರತಿಯಾಗಿ ಉಪಕಾರವನ್ನು ಮಾಡಲು ಅಶಕ್ತನಾದವನಿಗೆ ಜೀವಿಸಿರುವುದಕ್ಕಿಂತಲೂ ಮರಣವೇ ಲೇಸು. (ಗಾಲವನು ವಿಶ್ವಾಮಿತ್ರರನ್ನು ಶುಶ್ರೂಷೆಮಾಡಿದುದು ಸ್ವೇಚ್ಛೆಯಿಂದ. ವಿಶ್ವಾಮಿತ್ರರ ಅನುಗ್ರಹದಿಂದಾಗಿ ಧನರೂಪವಾದ ವಿದ್ಯೆಯನ್ನು ಗಾಲವನು ಪಡೆದುಕೊಂಡನು. ಅದಕ್ಕೆ ಪ್ರತಿಯಾಗಿ ವಿಶ್ವಾಮಿತ್ರರು ಅಪೇಕ್ಷಿಸಿದ ಗುರುದಕ್ಷಿಣಾರೂಪವಾದ ಕುದುರೆಗಳನ್ನು ಕೊಡಲು ಗಾಲವನು ಅಶಕ್ತ ನಾಗಿರುತ್ತಾನೆ. ಈ ಕಾರಣದಿಂದಾಗಿ ಗಾಲವನು ಜೀವಿಸಿರುವುದಕ್ಕಿಂತಲೂ ಸಾಯುವುದೇ ಮೇಲೆಂಬ ನಿರ್ಧಾರಕ್ಕೆ ಬರುತ್ತಾನೆ.)

**ಪ್ರತಿಶ್ರುತ್ಯ ಕರಿಷ್ಯೇತಿ ಕರ್ತವ್ಯಂ ತದಕುರ್ವತಃ ।**
**ಮಿಥ್ಯಾವಚನದಗ್ಧಸ್ಯ ಇಷ್ಟಾಪೂರ್ತಂ ಪ್ರಣಶ್ಯತಿ ॥೮॥**

'ನಾನು ಈ ಕಾರ್ಯವನ್ನು ಮಾಡುತ್ತೇನೆ'–ಎಂಬುದಾಗಿ ಪ್ರತಿಜ್ಞಾವಚನವನ್ನಿತ್ತು ಅನಂತರದಲ್ಲಿ ಆ ಕರ್ತವ್ಯವನ್ನು ಮಾಡದಿರುವ ಮಿಥ್ಯಾವಚನದಗ್ಧನಾದ (ಸುಳ್ಳುಮಾತೆಂಬ ಅಗ್ನಿಯಿಂದ ದಗ್ಧನಾದ) ಮನು

ಷ್ಯನ *ಇಷ್ಟಾ-ಪೂರ್ತಗಳು (ಧರ್ಮಕಾರ್ಯಗಳು ಅಥವಾ ಧರ್ಮಕಾರ್ಯ ಗಳ ಫಲವು) ನಷ್ಟವಾಗಿ ಹೋಗುವುವು.

**ನ ರೂಪಮನೃತಸ್ಯಾಸ್ತಿ ನಾನೃತಸ್ಯಾಸ್ತಿ ಸಂತತಿಃ ।**
**ನಾನೃತಸ್ಯಾಧಿಪತ್ಯಂ ಚ ಕುತ ಏವ ಗತಿಃ ಶುಭಾ ॥೯॥**

ಸತ್ಯಚ್ಯುತನಾದವನಿಗೆ ಸ್ವರೂಪವೆಂಬುದೇ ಇರದು. ಸುಳ್ಳುಗಾರನು ಬದುಕಿದ್ದರೂ ಸತ್ತಂತೆಯೇ ಸರಿ. ಸುಳ್ಳುಗಾರನಿಗೆ ಸಂತಾನವೇ ಆಗುವುದಿಲ್ಲ. (ಒಂದು ವೇಳೆ ಆದರೂ ಸತ್ಸಂತಾನದ ಪ್ರಾಪ್ತಿಯಿಲ್ಲ.) ಸುಳ್ಳುಗಾರನು ಯಾವುದೊಂದಕ್ಕೂ ಅಧಿಪತಿಯಾಗಲು ಅರ್ಹನಾಗುವುದಿಲ್ಲ. ಪ್ರಪಂಚದಲ್ಲಿಯೇ ಸುಳ್ಳುಗಾರನು ಯಾವುದೊಂದು ಕಾರ್ಯಕ್ಕೂ ಅನರ್ಹ ನೆಂದ ಮೇಲೆ ಅವನಿಗೆ ಉತ್ತಮಗತಿಯು ಹೇಗೆ ತಾನೇ ಸಿಕ್ಕೀತು?

**ಕುತಃ ಕೃತಘ್ನಸ್ಯ ಯಶಃ ಕುತಃ ಸ್ಥಾನಂ ಕುತಃ ಸುಖಮ್ ।**
**ಅಶ್ರದ್ಧೇಯಃ ಕೃತಘ್ನೋ ಹಿ ಕೃತಘ್ನೇ ನಾಸ್ತಿ ನಿಷ್ಕೃತಿಃ ॥೧೦॥**

ನಾನು ಸುಳ್ಳುಗಾರನಾಗಿರುವುದರ ಜೊತೆಗೆ ಕೃತಘ್ನನೂ ಆಗಿರು ತ್ತೇನೆ. ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಲಿಲ್ಲ. ಕೃತ ಘ್ನತೆಯು ಇನ್ನೂ ಹೆಚ್ಚಿನ ದೋಷದಿಂದ ಯುಕ್ತವಾದುದು. ಕೃತಘ್ನನಿಗೆ ಯಶಸ್ಸು ಹೇಗೆ ತಾನೇ ಲಭಿಸೀತು? ಕೃತಘ್ನನಿಗೆ ಸ್ಥಾನ-ಮಾನಗಳು ಹೇಗೆ ತಾನೇ ಸಿಕ್ಕಿಯಾವು? ಕೃತಘ್ನನಿಗೆ ಸುಖವೆಂಬುದೆಲ್ಲಿಯದು? **ಕೃತಘ್ನನು ಎಂದಿಗೂ ಯಾರ ವಿಶ್ವಾಸಕ್ಕೂ ಪಾತ್ರನಾಗುವುದಿಲ್ಲ. ಆದುದ

---

* ಇಷ್ಟಾ-ಪೂರ್ತಗಳು :

ಅಗ್ನಿಹೋತ್ರಂ ತಪಃ ಸತ್ಯಂ ವೇದಾನಾಂ ಚಾನುಪಾಲನಮ್।
ಆತಿಥ್ಯಂ ವೈಶ್ವದೇವಂ ಚ ಪ್ರಾಹುರಿಷ್ಟಮಿತಿ ಸ್ಮೃತಮ್ ॥

ವಾಪೀಕೂಪತಟಾಕಾದಿ ದೇವತಾಯತನಾನಿ ಚ
ಅನ್ನಪ್ರದಾನಮಾರಾಮಃ ಪೂರ್ತಮಿತ್ಯಭಿಧೀಯತೇ॥

ಅಗ್ನಿಹೋತ್ರ, ತಪಸ್ಸು, ಸತ್ಯ, ವೇದಾನುಪಾಲನೆ, ಆತಿಥ್ಯ, ವೈಶ್ವದೇವ– ಮುಂತಾದುವು ಇಷ್ಟವೆನಿಸುವುವು. ಬಾವಿ, ಕೆರೆ, ದೇವಾಲಯ, ಅನ್ನಸತ್ರ, ತೋಪು– ಮುಂತಾದುವುಗಳ ನಿರ್ಮಾಣವು ಪೂರ್ತವೆನಿಸುವುದು.

**ಕೃತಘ್ನಃ : ಮಾಡಿದ ಉಪಕಾರವನ್ನು ಮರೆತಿರುವವನು, ಮಾಡಿದ ಉಪ

ರಿಂದ ಕೃತಘ್ನನ ಉದ್ಧಾರವೆಂದಿಗೂ ಆಗುವುದಿಲ್ಲ. ಕೃತಘ್ನನಿಗೆ ಪ್ರಾಯಶ್ಚಿತ್ತವೇ ಇಲ್ಲ.

**ನ ಜೀವತ್ಯಧನಃ ಪಾಪಃ ಕುತಃ ಪಾಪಸ್ಯ ತನ್ತ್ರಣಮ್ ।**
**ಪಾಪೋ ಧ್ರುವಮವಾಪ್ನೋತಿ ವಿನಾಶಂ ನಾಶಯನ್ಕೃತಮ್ ॥೧೧॥**

ನಿರ್ಧನನಾದ ಮತ್ತು ಪಾಪಿಷ್ಠನಾದ ಮನುಷ್ಯನು ಖಂಡಿತವಾಗಿಯೂ ಜೀವಿಸಲಾರನು. ಪಾಪಿಷ್ಠನಾದವನು ಅಥವಾ ನಿರ್ಧನನು ಕುಟುಂಬದ ರಕ್ಷಣೆಯನ್ನಾದರೂ ಹೇಗೆತಾನೇ ಮಾಡಬಲ್ಲನು? ಪಾಪಿಷ್ಠನಾದವನು ಅಥವಾ ನಿರ್ಧನನು ತಾನು ಮಾಡಿದ ಸತ್ಕರ್ಮಗಳ ಫಲವನ್ನು ಹಾಳು ಮಾಡಿಕೊಂಡು ತಾನೂ ಸಹ ವಿನಾಶಹೊಂದುತ್ತಾನೆ. ಇದು ನಿಶ್ಚಯ.

**ಸೋऽಹಂ ಪಾಪಃ ಕೃತಘ್ನಶ್ಚ ಕೃಪಣಶ್ಚಾನೃತೋऽಪಿ ಚ ।**
**ಗುರೋರ್ಯಃ ಕೃತಕಾರ್ಯಃ ಸಂಸ್ತತ್ಕರೋಮಿ ನ ಭಾಷಿತಮ್ ॥೧೨॥**

ಗುರುವಿನ ಅನುಗ್ರಹದಿಂದ ಕೃತಾರ್ಥನಾಗಿ ಅಂತಹ ಪರಮಗುರುವಿಗೆ ಕೊಟ್ಟ ಒಂದು ಮಾತನ್ನು ನಡೆಸಿಕೊಡಲು ಅಸಮರ್ಥನಾಗಿರುತ್ತೇನೆ. ಇದೇ ಕಾರಣದಿಂದ ಅಂತಹ ನಾನಿಂದು ಪಾಪಿಯಾಗಿದ್ದೇನೆ ; ಕೃತಘ್ನನಾಗಿದ್ದೇನೆ ; ಕೃಪಣನಾಗಿದ್ದೇನೆ ; ಮಿಥ್ಯಾವಾದಿಯೂ ಆಗಿದ್ದೇನೆ.

ಗುರುಗಳಿಗಿತ್ತ ಮಾತನ್ನು ನಡೆಸಿಕೊಡಲಾಗದ ನಾನಿಂದು ಪ್ರಯತ್ನಪೂರ್ವಕವಾಗಿಯೇ ಪ್ರಾಣಗಳನ್ನು ತೊರೆಯುತ್ತೇನೆ. (ಆತ್ಮಹತ್ಯೆಯನ್ನು

---

ಕಾರಕ್ಕೆ ಬದಲಾಗಿ ಅಪಕಾರಮಾಡುವವನು; ಉಪಕಾರಮಾಡಿದವನನ್ನೂ ಹಿಂಸಿಸುವವನು.

ಭರ್ತೃಪಿಣ್ಡಾಪಹರ್ತಾ ಚ ಪಿತೃಪಿಣ್ಡಾಪಹಾರಕಃ।
ಯಸ್ಮಾದ್ಗೃಹೀತ್ವಾ ವಿದ್ಯಾಂ ಚ ದಕ್ಷಿಣಾಂ ನ ಪ್ರಯಚ್ಛತಿ॥

ಪುತ್ರಾನ್ ಸ್ತ್ರಿಯಂ ಚ ಯೋ ದ್ವೇಷ್ಟಿ ಯಶ್ಚೈತಾನ್ಘಾತಯೇನ್ನರಃ।
ಕೃತಸ್ಯ ದೋಷಂ ವದತಿ ಸಕಾಮಾನ್ನ ಕರೋತಿ ಯಃ॥

ನ ಸ್ಮರೇಚ್ಚ ಕೃತಂ ಯಶ್ಚ ಆಶ್ರಮಾನ್ ಯಶ್ಚ ದೂಷಯೇತ್ ।
ಸರ್ವಾಂಸ್ತಾನೃಷಿಭಿಃ ಸಾರ್ಧಂ ಕೃತಘ್ನಾನಬ್ರವೀನ್ಮನುಃ॥

ಯಜಮಾನನಿಗಿಟ್ಟಿದ್ದ ಅನ್ನವನ್ನು ಅಪಹರಿಸಿ ತಿನ್ನುವವನು.; ತಂದೆಗೆಂದು ಇಟ್ಟಿರುವುದನ್ನು ಅಪಹರಿಸಿ ತಿನ್ನುವವನು.; ವಿದ್ಯೆಯನ್ನು ಕಲಿತು ಕಡೆಯಲ್ಲಿ ಗುರುದಕ್ಷಿಣೆ

ಮಾಡಿಕೊಳ್ಳುತ್ತೇನೆ.) ಮಾಡಬಹುದಾದ ಪ್ರಯತ್ನಮಾಡುತ್ತೇನೆ. ಆದರೆ ನಾನು ಈ ಹಿಂದೆ ಯಾವಾಗಲೂ ದೇವತೆಗಳನ್ನು ಯಾವುದಕ್ಕೂ ಪ್ರಾರ್ಥನೆಮಾಡಿರುವುದಿಲ್ಲ. ಮೇಲಾಗಿ ಎಲ್ಲ ದೇವತೆಗಳೂ ಯಜ್ಞಸಮಯದಲ್ಲಿ ನನ್ನನ್ನೇ ಗೌರವಿಸುತ್ತಾರೆ.

ವೃಥಾ ಪ್ರಾಣತೊರೆಯುವುದಕ್ಕೆ ಬದಲಾಗಿ ದೇವತೆಗಳ ಅಧಿಪತಿಯನ್ನೇ ಒಮ್ಮೆ ಪ್ರಾರ್ಥಿಸಲೇ?–ಎಂದೂ ಯೋಚಿಸುತ್ತಿದ್ದೇನೆ. ಉಳಿದ ದೇವತೆಗಳ ಬಳಿಗೆ ನಾನು ಹೋಗಲಾರೆನು.

**ಅಹಂ ತು ವಿಬುಧಶ್ರೇಷ್ಠಂ ದೇವಂ ತ್ರಿಭುವನೇಶ್ವರಮ್ ।**
**ವಿಷ್ಣುಂ ಗಚ್ಛಾಮ್ಯಹಂ ಕೃಷ್ಣಂ ಗತಿಂ ಗತಿಮತಾಂ ವರಮ್ ॥೧೪॥**

ವಿಬುಧಶ್ರೇಷ್ಠನಾದ, ತ್ರಿಭುವನೇಶ್ವರನಾದ, ದೇವದೇವನಾದ, ಜೀವರುಗಳಿಗೆ ಸರ್ವಶ್ರೇಷ್ಠಾಶ್ರಯನಾದ ಮಹಾವಿಷ್ಣುವನ್ನು–ಕೃಷ್ಣ ಸ್ವರೂಪಿಯಾದ ಸಚ್ಚಿದಾನಂದಪರಮಾತ್ಮನನ್ನು ಶರಣುಹೋಗುತ್ತೇನೆ.

**ಭೋಗಾ ಯಸ್ಮಾತ್ಪ್ರತಿಷ್ಠನ್ತೇ ವ್ಯಾಪ್ಯ ಸರ್ವಾನ್ಸುರಾಸುರಾನ್ ।**
**ಪ್ರಣತೋ ದ್ರಷ್ಟುಮಿಚ್ಛಾಮಿ ಕೃಷ್ಣಂ ಯೋಗಿನಮವ್ಯಯಮ್ ॥೧೫॥**

ಯಾವ ಮಹಾನುಭಾವನ ಕೃಪೆಯಿಂದಾಗಿ ಸುರರನ್ನೂ ಮತ್ತು ಅಸುರರನ್ನೂ ವ್ಯಾಪಿಸಿ, ಸಕಲಸುಖೋಪಭೋಗಗಳೂ ಪ್ರತಿಷ್ಠಿತವಾಗಿರು

---

ಯನ್ನು ಕೊಡದವನು: ಮಕ್ಕಳನ್ನೂ, ಸ್ತ್ರೀಯರನ್ನೂ ದ್ವೇಷಿಸತಕ್ಕವನು ಮತ್ತು ಮಕ್ಕಳನ್ನೂ ಸ್ತ್ರೀಯರನ್ನೂ ಹಿಂಸಿಸತಕ್ಕವನು ; ಉಪಕಾರಮಾಡಿದವನಲ್ಲಿ ದೋಷವೆಣಿಸತಕ್ಕವನು; ಶ್ರದ್ಧೆಯಿಲ್ಲದೆ ಕಾರ್ಯಮಾಡುವವನು; ಮಾಡಿದ ಉಪಕಾರವನ್ನು ಸ್ಮರಿಸದಿರುವವನು; ವರ್ಣಾಶ್ರಮಧರ್ಮಗಳನ್ನು ದೂಷಿಸತಕ್ಕವನು–ಈ ಎಲ್ಲರೂ ಕೃತಘ್ನರೆಂಬುದಾಗಿ ಋಷಿಗಳೊಡಗೂಡಿದ ಮನುವು ಹೇಳಿರುವನು.

ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಚ ಗುರುತಲ್ಪಗೇ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ॥

ಬ್ರಹ್ಮಹತ್ಯೆಯನ್ನು ಮಾಡಿದವನಿಗೆ, ಸುರಾಪಾನವನ್ನು ಮಾಡಿದವನಿಗೆ, ಕಳ್ಳತನವನ್ನು ಮಾಡಿದವನಿಗೆ, ಗುರುಪತ್ನೀಗಮನವನ್ನು ಮಾಡಿದವನಿಗೆ–ಸತ್ಪುರುಷರಿಂದ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ. ಆದರೆ ಕೃತಘ್ನನಿಗೆ ಮಾತ್ರ ಪ್ರಾಯಶ್ಚಿತ್ತವೇ ಇಲ್ಲ.

ವುವೋ (ಯಾವನ ಕೃಪೆಯಿಂದ ಸುರಾಸುರರು ಸುಖೋಪಭೋಗಗಳನ್ನು ಅನುಭವಿಸುತ್ತಿರುವರೋ)–ಅಂತಹ ಯೋಗಿಯಾದ, ಅವ್ಯಯನಾದ (ಕ್ಷಯ ರಹಿತನಾದ) ಶ್ರೀಕೃಷ್ಣನನ್ನು ವಿನೀತನಾಗಿ ನೋಡಲಿಚ್ಛಿಸುತ್ತೇನೆ."

ಗಾಲವನು ಹೀಗೆ ಹೇಳಿಕೊಳ್ಳುತ್ತಿರಲಾಗಿ, ಅವನ ಗೆಳೆಯನಾದ ವಿನತೆಯ ಮಗನಾದ ಗರುಡನು ಸಂತೋಷಗೊಂಡವನಾಗಿ ತನ್ನ ಗೆಳೆಯನಿಗೆ ಮತ್ತು ಶ್ರೀಕೃಷ್ಣಭಕ್ತನಿಗೆ ಆ ಸಮಯದಲ್ಲಿ ಪ್ರಿಯವಾದ ಕಾರ್ಯವನ್ನು ಮಾಡಿಕೊಡಬೇಕೆಂಬ ಆಶಯದಿಂದ ಗಾಲವನ ಮುಂದೆ ಪ್ರತ್ಯಕ್ಷನಾಗಿ ಬಂದು ಹೇಳಿದನು :

**ಸುಹೃದ್ಭವಾನ್ಮಮ ಮತಃ ಸುಹೃದಾಂ ಚ ಮತಃ ಸುಹೃತ್ ।**
**ಈಪ್ಸಿತೇನಾಭಿಲಾಷೇಣ ಯೋಕ್ತವ್ಯೋ ವಿಭವೇ ಸತಿ ॥೧೭॥**

"ಗಾಲವ! ನೀನು ನನಗೆ ಅತ್ಯಂತಪ್ರಿಯನಾದ ಸ್ನೇಹಿತನಾಗಿರುವೆ. ಇಷ್ಟು ಮಾತ್ರವಲ್ಲ ; ನನ್ನ ಅನೇಕಸುಹೃದರಲ್ಲಿ ನೀನೇ ಪ್ರಿಯನಾದ ಗೆಳೆಯ ನಾಗಿರುವೆ. ಸ್ನೇಹಿತರು ವೈಭವಪೂರ್ಣರಾಗಿದ್ದರೆ, ಐಶ್ವರ್ಯವಂತ ರಾಗಿದ್ದರೆ–ಅವರು ಮಾಡಬೇಕಾದ ಒಂದು ಕರ್ತವ್ಯವಿದೆ. ತಮ್ಮ ಸ್ನೇಹಿತರ ಇಚ್ಛೆಯನ್ನವರು ನೆರವೇರಿಸಿಕೊಡಬೇಕು.

ನಿನ್ನ ಗೆಳೆಯನಾದ ನನ್ನಲ್ಲೀಗ ಮಹೈಶ್ವರ್ಯವಿದೆ. ನಿನ್ನ ವಿಷಯವಾಗಿ ನಾನು ಈ ಹಿಂದೆಯೇ ಇಂದ್ರಾವರಜನಾದ ವಿಷ್ಣುವಿನಲ್ಲಿ ನಿವೇದಿಸಿಕೊಂಡಿದ್ದೆನು. ಅವನೂ ನನ್ನ ಪ್ರಾರ್ಥನೆಯನ್ನು ಅಂಗೀಕರಿಸಿ ನನ್ನ ಅಭಿಲಾಷೆಯನ್ನು ಪೂರ್ಣಗೊಳಿಸಿದ್ದಾನೆ. ಆದುದರಿಂದ ನಾವಿಬ್ಬರೂ ಜೊತೆಯಲ್ಲಿಯೇ ಹೋಗೋಣ. ನಾನು ನಿನ್ನನ್ನು ಸುಖವಾಗಿ ಕರೆದುಕೊಂಡು ಹೋಗುತ್ತೇನೆ. ಭೂಮಿಯ ಕೊನೆಯವರೆಗಾದರೂ (ಕೆಳಭಾಗದಲ್ಲಿರುವ ಪಾತಾಳಕ್ಕಾದರೂ) ಒಯ್ಯುತ್ತೇನೆ. ಬೇಗ ಹೊರಡು, ಸಾವಕಾಶಮಾಡಬೇಡ."

೧೦೭ನೆಯ ಅಧ್ಯಾಯವು ಮುಗಿಯಿತು.

## ಗರುಡನು ಪೂರ್ವದಿಕ್ಕಿನ ವರ್ಣನೆಯನ್ನು ಮಾಡಿದುದು

ಸುಯೋಧನ! ಗರುಡನು ಗಾಲವನನ್ನು ಕುರಿತು ಹೇಳುತ್ತಾನೆ :

"ಗಾಲವ! ಯಾವಾಗ ಎಲ್ಲಿ ಹೇಗೆ ಹುಟ್ಟಿದನೆಂಬುದೇ ಯಾರಿಗೂ ತಿಳಿಯದ ಅನಾದಿದೇವನಾದ ಮಹಾವಿಷ್ಣುವಿನಿಂದ ನಾನು ಆಜ್ಞಪ್ತನಾಗಿದ್ದೇನೆ. ನಿನಗೆ ಸಹಾಯಮಾಡಬೇಕೆಂದು ಅವನು ನನಗೆ ಹೇಳಿರುತ್ತಾನೆ. ಆದುದರಿಂದ ನೀನೀಗ ಯಾವ ದಿಕ್ಕಿನ ಕಡೆಗೆ ಪ್ರಯಾಣ ಮಾಡಲಿಚ್ಛಿಸಿರುವೆಯೆಂಬುದನ್ನು ಹೇಳು. ಮೊದಲು ಯಾವ ದಿಕ್ಕಿಗೆ ನಿನ್ನನ್ನು ಕರೆದೊಯ್ಯಲಿ? ಪೂರ್ವದಿಕ್ಕಿಗೆ ಪ್ರಯಾಣಮಾಡೋಣವೇ? ಅಥವಾ ಕುಬೇರನ ದಿಕ್ಕಾದ ಉತ್ತರಕ್ಕೇ ಮೊದಲು ಹೋಗೋಣವೇ? ಬ್ರಾಹ್ಮಣೋತ್ತಮ! ಯಾವ ಯಾವ ದಿಕ್ಕಿಗೆ ಹೋಗಬೇಕೆಂಬುದನ್ನು ಒಡನೆಯೇ ನಿರ್ಧರಿಸಿ ಹೇಳು. ನಿನ್ನನ್ನಲ್ಲಿಗೆ ಈ ಕೂಡಲೇ ಒಯ್ಯುತ್ತೇನೆ.

**ಯಸ್ಯಾಮುದಯತೇ ಪೂರ್ವಂ ಸರ್ವಲೋಕಪ್ರಭಾವನಃ ।**
**ಸವಿತಾ ಯತ್ರ ಸಂಧ್ಯಾಯಾಂ ಸಾಧ್ಯಾನಾಂ ವರ್ತತೇ ತಪಃ ॥೩॥**

**ಯಸ್ಯಾಂ ಪೂರ್ವಂ ಮತಿರ್ಯಾತಾ ಯಯಾ ವ್ಯಾಪ್ತಮಿದಂ ಜಗತ್ ।**
**ಚಕ್ಷುಷೀ ಯತ್ರ ಧರ್ಮಸ್ಯ ಯತ್ರ ಚೈಷ ಪ್ರತಿಷ್ಠಿತಃ ॥೪॥**

**ಕೃತಂ ಯತೋ ಹುತಂ ಹವ್ಯಂ ಸರ್ಪತೇ ಸರ್ವತೋದಿಶಮ್ ।**
**ಏತದ್ದ್ವಾರಂ ದ್ವಿಜಶ್ರೇಷ್ಠ ದಿವಸಸ್ಯ ತಥಾಧ್ವನಃ ॥೫॥**

ಗಾಲವ! ನಿನಗೆ ದಿಕ್ಕುಗಳ ಪರಿಚಯವನ್ನು ಮಾಡಿಕೊಡುತ್ತೇನೆ.

ಸರ್ವಲೋಕಗಳಿಗೂ ವರ್ಚಸ್ಸನ್ನು ಬೀರುವ ಸೂರ್ಯನು ಯಾವ ದಿಕ್ಕಿನಲ್ಲಿ ಮೊದಲು ಹುಟ್ಟುತ್ತಾನೆಯೋ, ಯಾವ ದಿಕ್ಕಿನಲ್ಲಿ ಪ್ರಾತಃಸಂಧ್ಯಾ ಸಮಯದಲ್ಲಿ ಸಾಧ್ಯರು ತಪಸ್ಸನ್ನು ಮಾಡುತ್ತಿರುತ್ತಾರೆಯೋ, ಯಾವ ದಿಕ್ಕಿನಲ್ಲಿ (ಪ್ರಾತಃಕಾಲದಲ್ಲಿ) ಮೊದಲು ಗಾಯತ್ರೀಮಂತ್ರಪುನಶ್ಚರಣೆ

ಮಾಡುವವರ ಬುದ್ಧಿಯು ಹೋಗುತ್ತದೆಯೋ, ಯಾವ ದಿಕ್ಕಿನಿಂದ ಈ ಜಗತ್ತು ವ್ಯಾಪ್ತವಾಗಿರುವುದೋ, ಧರ್ಮಪುರುಷನಿಗೆ ನೇತ್ರಸ್ವರೂಪರಾದ, ಸೂರ್ಯ-ಚಂದ್ರರು ಮೊದಲು ಯಾವ ದಿಕ್ಕಿನಲ್ಲಿ ಹುಟ್ಟುತ್ತಾರೆಯೋ, ಯಾವ ದಿಕ್ಕಿನಲ್ಲಿ ಆ ಧರ್ಮಪುರುಷನೇ ಪ್ರತಿಷ್ಠಿತನಾಗಿರುವನೋ, ಯಾವ ದಿಕ್ಕಿನಲ್ಲಿ ಮೊದಲು ಮಾಡಿದ ಹೋಮ-ಹವನಾದಿಗಳು ಅನಂತರದಲ್ಲಿ ಎಲ್ಲ ದಿಕ್ಕುಗಳಿಗೂ ವ್ಯಾಪಿಸುವುವೋ–ಅಂತಹ ಈ ಪೂರ್ವದಿಕ್ಕು ದಿವಸದ ಮತ್ತು ಸೂರ್ಯಮಾರ್ಗದ ಬಾಗಿಲಿನ ರೂಪವಾಗಿದೆ.

**ಅತ್ರ ಪೂರ್ವಂ ಪ್ರಸೂತಾ ವೈ ದಾಕ್ಷಾಯಣ್ಯಃ ಪ್ರಜಾಃ ಸ್ತ್ರಿಯಃ ।**
**ಯಸ್ಯಾಂ ದಿಶಿ ಪ್ರವೃದ್ಧಾಶ್ಚ ಕಶ್ಯಪಸ್ಯಾತ್ಮಸಮ್ಭವಾಃ ॥೬॥**

ಇದೇ ದಿಕ್ಕಿನಲ್ಲಿಯೇ ದಕ್ಷಪ್ರಜಾಪತಿಯ ಮಕ್ಕಳಾದ ಅದಿತಿಯೇ ಮೊದಲಾದ ಸ್ತ್ರೀಯರು ಪ್ರಜೆಗಳನ್ನು ಪ್ರಸವಿಸಿದರು. ಕಶ್ಯಪನ ಆತ್ಮಸಂಭವರಾದ ಆ ಮಕ್ಕಳೆಲ್ಲರೂ ಇಲ್ಲಿಯೇ ವೃದ್ಧಿಯನ್ನೂ ಹೊಂದಿದರು. (ದಕ್ಷಪ್ರಜಾಪತಿಯು ತನ್ನ ಮಕ್ಕಳಾದ ಅದಿತಿ, ದಿತಿ, ದನು, ಕಾಷ್ಠಾ–ಮೊದಲಾದ ಹದಿಮೂರು ಹೆಣ್ಣುಮಕ್ಕಳನ್ನು ಕಶ್ಯಪನಿಗೆ ಕೊಟ್ಟು ಮದುವೆಮಾಡಿದನು. ಕಶ್ಯಪನಿಂದಲೇ ದೇವ-ದಾನವ-ದೈತ್ಯರೆಲ್ಲರೂ ಪ್ರಾದುರ್ಭೂತರಾದರು.)

**ಅದೋಮೂಲಾ ಸುರಾಣಾಂ ಶ್ರೀರ್ಯತ್ರ ಶಕ್ರೋಽಭ್ಯಷಿಚ್ಯತ ।**
**ಸುರರಾಜ್ಯೇನ ವಿಪ್ರರ್ಷೇ ದೇವೈಶ್ಚಾತ್ರ ತಪಶ್ಚಿತಮ್ ॥೭॥**

ದೇವತೆಗಳ ಸಾಮ್ರಾಜ್ಯಲಕ್ಷ್ಮಿಯ ಮೂಲಸ್ಥಾನವು ಪೂರ್ವದಿಕ್ಕೇ ಆಗಿರುವುದು. ಪೂರ್ವದಿಕ್ಕಿನಲ್ಲಿಯೇ ಇಂದ್ರನು ದೇವರಾಜ್ಯಕ್ಕೆ ರಾಜನಾಗಿ ಅಭಿಷಿಕ್ತನಾದನು. ಈ ದಿಕ್ಕಿನಲ್ಲಿಯೇ ದೇವತೆಗಳು ಅನೇಕ ವರ್ಷಗಳವರೆಗೆ ತಪಸ್ಸನ್ನು ಮಾಡಿದರು.

ಬ್ರಾಹ್ಮಣೋತ್ತಮ! ಈ ಕಾರಣದಿಂದ ಈ ದಿಕ್ಕನ್ನು 'ಪೂರ್ವಾಪೂರ್ವ' ಎಂದು ಕರೆಯುತ್ತಾರೆ.

**ಯಸ್ಮಾತ್ಪೂರ್ವತರೇ ಕಾಲೇ ಪೂರ್ವಮೇವಾವೃತಾ ಸುರೈಃ ।**
**ಅತ ಏವ ಚ ಸರ್ವೇಷಾಂ ಪೂರ್ವಮಾಶಾಂ ಪ್ರಚಕ್ಷತೇ ॥೮॥**

ಯಾವ ಕಾರಣದಿಂದ ಬಹಳ ಹಿಂದಿನ ಕಾಲದಲ್ಲಿ ಈ ದಿಕ್ಕು ದೇವತೆಗಳಿಂದ ಪ್ರಥಮವಾಗಿ ಆವೃತವಾಗಿದ್ದಿತೋ–ಆ ಕಾರಣದಿಂದ ದಿಕ್ಕುಗಳಲ್ಲಿ ಇದನ್ನು 'ಪೂರ್ವಾ' (ಮೊದಲನೆಯದು) ಎಂದು ಕರೆಯುತ್ತಾರೆ. (ಪೂರ್ವೋಽನ್ಯಲಿಙ್ಗಃ ಪ್ರಾಗಾಹ ಪುಂಬಹುತ್ವೇಽಪಿ ಪೂರ್ವಜಾನ್ (ಅಮರಃ) ಪೂರ್ವ=ಹಿಂದಿನಕಾಲ, ಪೂರ್ವದಲ್ಲಿ ಹುಟ್ಟಿದ, ಹಿಂದಿನ ಕಾಲದಲ್ಲಿ ಹುಟ್ಟಿದ, ಮೊದಲು ಹುಟ್ಟಿದ.)

**ಪೂರ್ವಂ ಸರ್ವಾಣಿ ಕಾರ್ಯಾಣಿ ದೈವಾನಿ ಸುಖಮೀಪ್ಸತಾ ॥೯॥**

ಸುಖಾಭಿಲಾಷಿಯಾದವನು ದೇವತಾಸಂಬಂಧವಾದ ಸಕಲಕಾರ್ಯಗಳನ್ನೂ ಮೊದಲು ಈ ದಿಕ್ಕಿನಲ್ಲಿಯೇ ಮಾಡಬೇಕು.

ಲೋಕಸ್ರಷ್ಟುವಾದ ಭಗವಾನ್ ಬ್ರಹ್ಮದೇವನು ಮೊದಲಬಾರಿಗೆ ಇಲ್ಲಿಯೇ ವೇದಗಳನ್ನು ಪಠನಮಾಡಿದನು. ಸವಿತೃವು ಮೊದಲನೆಯ ಬಾರಿಗೆ ಇದೇ ಪೂರ್ವದಿಕ್ಕಿನಲ್ಲಿಯೇ ಬ್ರಹ್ಮನಿಷ್ಠರಾದ ಋಷಿಗಳಿಗೆ ಸಾವಿತ್ರೀಮಂತ್ರವನ್ನು ಉಪದೇಶಮಾಡಿದನು. ಇದೇ ಪೂರ್ವದಿಕ್ಕಿನಲ್ಲಿಯೇ ಸೂರ್ಯದೇವನು ಯಾಜ್ಞವಲ್ಕ್ಯಮಹರ್ಷಿಗಳಿಗೆ ಶುಕ್ಲಯಜುರ್ವೇದವನ್ನು ಉಪದೇಶಿಸಿದನು. ವರದಾನದಿಂದ ಪ್ರಾಪ್ತವಾದ ಸೋಮರಸವು ದೇವತೆಗಳಿಂದ ಇದೇ ದಿಕ್ಕಿನಲ್ಲಿ ಮೊದಲು ಕುಡಿಯಲ್ಪಟ್ಟಿತು. ಯಜ್ಞದ ಮೂಲಕವಾಗಿ ತೃಪ್ತಿಹೊಂದಿದ ಅಗ್ನಿಗಳು ಇದೇ ಪೂರ್ವದಿಕ್ಕಿನಲ್ಲಿಯೇ ನೀರಿನಲ್ಲಿ ಸೇರಿಕೊಳ್ಳುತ್ತವೆ. ಇದೇ ದಿಕ್ಕಿನಲ್ಲಿ ವರುಣದೇವನು ಪಾತಾಳಕ್ಕೆ ಹೋಗಿ ಅಲ್ಲಿ ಆಶ್ರಯವನ್ನು ಪಡೆದು ಅತುಲವಾದ ಐಶ್ವರ್ಯವನ್ನು ಪಡೆದುಕೊಂಡನು. ಪುರಾಣರ್ಷಿಗಳಾದ ವಸಿಷ್ಠರು ಈ ದಿಕ್ಕಿನಲ್ಲಿಯೇ ಜನ್ಮತಾಳಿದರು ಮತ್ತು ಇದೇ ದಿಕ್ಕಿನಲ್ಲಿ ಅವರು ಸಪ್ತರ್ಷಿಗಳಲ್ಲೊಬ್ಬರಾಗಿ ಅತ್ಯುಚ್ಚವಾದ ಸ್ಥಾನವನ್ನೂ ಪಡೆದರು. ನಿಮಿಯ ಯಜ್ಞಕಾಲದಲ್ಲಿ ನಿಮಿಯ ಶಾಪದಿಂದಾಗಿ ಇದೇ ದಿಕ್ಕಿನಲ್ಲಿಯೇ ವಸಿಷ್ಠರು ನಿಧನಹೊಂದಿದರು.

(ನಿಮಿಯು ವಿದೇಹವಂಶದ ಮೂಲಪುರುಷ. ಅವನೊಮ್ಮೆ ಯಜ್ಞಮಾಡಲು ನಿಶ್ಚಯಿಸಿ ಕುಲಗುರುಗಳಾದ ವಸಿಷ್ಠರನ್ನು ಆಹ್ವಾನಿಸಿದನು. ವಸಿಷ್ಠರು ಇಂದ್ರನಿಗೆ ಯಜ್ಞಮಾಡಿಸಿದ ನಂತರ ಬರುವುದಾಗಿ ಹೇಳಿದರು.

ಆದರೆ ನಿಮಿಯು ಗೌತಮರನ್ನು ಪೌರೋಹಿತ್ಯಕ್ಕೆ ನಿಯಮಿಸಿಕೊಂಡು ಯಜ್ಞ ವನ್ನು ಆರಂಭಿಸಿಯೇ ಬಿಟ್ಟನು. ಇಂದ್ರನ ಯಜ್ಞವನ್ನು ಮುಗಿಸಿಕೊಂಡು ವಸಿಷ್ಠರೂ ನಿಮಿಯ ಬಳಿಗೆ ಬಂದರು. ಆ ಸಮಯದಲ್ಲಿ ನಿಮಿಯು ನಿದ್ರಿಸು ತ್ತಿದ್ದನು. ಗೌತಮರ ಮೂಲಕ ಆರಂಭಿಸಿದ ಯಜ್ಞವು ಮುಗಿಯುವುದ ರಲ್ಲಿತ್ತು. ಅದರಿಂದ ಕೋಪಗೊಂಡ ವಸಿಷ್ಠರು ದೇಹತ್ಯಾಗಮಾಡುವಂತೆ ನಿಮಿಗೆ ಶಾಪವನ್ನಿತ್ತರು. ಮಲಗಿ ನಿದ್ರಿಸುತ್ತಿದ್ದವನಿಗೆ ಶಾಪಕೊಟ್ಟುದಕ್ಕಾಗಿ ನಿಮಿಯೂ ವಸಿಷ್ಠರಿಗೆ ದೇಹತ್ಯಾಗಮಾಡುವಂತೆ ಶಾಪಕೊಟ್ಟನು. ವಸಿಷ್ಠರೂ ದೇಹತ್ಯಾಗಮಾಡಿದರು. ಈ ಕಥೆಯು ರಾಮಾಯಣದ ಉತ್ತರಕಾಂಡದಲ್ಲಿ ಉಕ್ತವಾಗಿದೆ. ಸರ್ಗ ೫೫ ರಿಂದ ೮೭.)

ಗಾಲವ! ಈ ದಿಕ್ಕಿನಿಂದಲೇ ಸಾವಿರಾರು ಪ್ರಣವಗಳು ಅರ್ಥಾತ್ ವೇದ ಗಳ ಸಾವಿರಾರು ಶಾಖೆಗಳು ಪ್ರಾದುರ್ಭೂತವಾಗುತ್ತವೆ. ಧೂಮವನ್ನೇ ಪಾನಮಾಡುವ ಮುನಿಗಳು ಈ ದಿಕ್ಕಿನಲ್ಲಿಯೇ ಹವಿರ್ಧೂಮವನ್ನು ಪಾನ ಮಾಡುತ್ತಾರೆ. ಪೂರ್ವದಿಕ್ಕಿನಲ್ಲಿರುವ ವರಾಹಾದಿ ವನ್ಯಮೃಗಗಳು ದೇವತೆ ಗಳಿಗೆ ಯಜ್ಞದ ಹವಿರ್ಭಾಗವನ್ನು ಕೊಡುವ ಸಲುವಾಗಿ ಇಂದ್ರನಿಂದ ಪ್ರೋಕ್ಷಿ ಸಲ್ಪಟ್ಟುವು. (ಇಂದ್ರನು ಆ ದಿಕ್ಕಿನಲ್ಲಿದ್ದ ವನ್ಯಮೃಗಗಳನ್ನು ಸಂಪ್ರೋಕ್ಷಿಸಿ ಯಜ್ಞಪಶುಗಳನ್ನಾಗಿ ಮಾಡಿಕೊಂಡನು.)

ಮಾನವರಲ್ಲಿಯೇ ಆಗಲೀ, ಅಸುರರಲ್ಲಿಯೇ ಆಗಲೀ–ಈ ದಿಕ್ಕಿನಲ್ಲಿ ಯಾರು ಮತ್ತೊಬ್ಬರಿಗೆ ಅಹಿತವನ್ನು ಮಾಡುತ್ತಾರೆಯೋ, ಮಾಡಿದ ಉಪಕಾರವನ್ನು ಸ್ಮರಿಸದೇ ಇರುತ್ತಾರೆಯೋ–ಅಂತಹವರೆಲ್ಲರನ್ನೂ ಈ ದಿಕ್ಕಿನಲ್ಲಿಯೇ ಉದಯಿಸುವ ಸೂರ್ಯದೇವನು ಕೋಪದಿಂದ ಹಿಂಸೆಗೆ ಗುರಿಪಡಿಸುತ್ತಾನೆ. ಈ ಪೂರ್ವದಿಕ್ಕು ಮೂರು ಲೋಕಗಳಿಗೂ, ಸ್ವರ್ಗಕ್ಕೂ ಮತ್ತು ಸುಖಕ್ಕೂ ಹೆಬ್ಬಾಗಿಲಿನಂತಿದೆ. ನೀನೇನಾದರೂ ಇಚ್ಛೆಪಡುವುದಾದರೆ ನಿನ್ನ ಮನಸ್ಸಿನ ಅಭಿಲಾಷೆಯನ್ನು ಪೂರೈಸಿಕೊಳ್ಳಲು ಪೂರ್ವದಿಕ್ಕಿಗೆ ಪ್ರಯಾಣ ಮಾಡೋಣ. ನಾನು ಯಾವನ ಆಜ್ಞಾಧಾರಕನಾಗಿರುವೆನೋ ಆ ಮಹಾ ವಿಷ್ಣುವಿಗೆ ಪ್ರಿಯವನ್ನು ಮಾಡುವುದು ನನ್ನ ಕರ್ತವ್ಯವಾಗಿರುತ್ತದೆ. ಆದುದ

ರಿಂದ ಹೇಳು, ಗಾಲವ! ನಿನ್ನನ್ನು ಪೂರ್ವದಿಕ್ಕಿಗೆ ಕರೆದುಕೊಂಡು ಹೋಗಲೇ? ಅಥವಾ ಮತ್ತೊಂದು ದಿಕ್ಕಿನ ವರ್ಣನೆಯನ್ನು ಮಾಡಲೇ?" ಗಾಲವನು ಮೌನವಾಗಿರಲಾಗಿ ಗರುಡನು ಮುಂದುವರಿದು ಹೇಳಿದನು : "ಮತ್ತೊಂದು ದಿಕ್ಕಿನ ವರ್ಣನೆಯನ್ನು ಮಾಡುತ್ತೇನೆ. ಕೇಳು ಗಾಲವ!"

೧೧೦ಲನೆಯ ಅಧ್ಯಾಯವು ಮುಗಿಯಿತು.

೧೧೯ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಗರುಡನು ದಕ್ಷಿಣದಿಕ್ಕಿನ ವರ್ಣನೆಮಾಡಿದುದು

**ಇಯಂ ವಿವಸ್ವತಾ ಪೂರ್ವಂ ಶ್ರೌತೇನ ವಿಧಿನಾ ಕಿಲ ।**
**ಗುರವೇ ದಕ್ಷಿಣಾ ದತ್ತಾ ದಕ್ಷಿಣೇತ್ಯುಚ್ಯತೇ ಚ ದಿಕ್ ॥೧॥**

"ಗಾಲವ! ಪೂರ್ವಕಾಲದಲ್ಲಿ ಸೂರ್ಯದೇವನು ಶ್ರೌತವಿಧಿಗೆ (ವೇದೋಕ್ತವಿಧಿಗೆ) ಅನುಸಾರವಾಗಿ ಯಜ್ಞಮಾಡಿ ಆಚಾರ್ಯನಾದ ಕಶ್ಯಪನಿಗೆ ಈ ದಿಕ್ಕನ್ನೇ ದಾನರೂಪದಲ್ಲಿ ಕೊಟ್ಟುಬಿಟ್ಟನು. ಯಜ್ಞದ ದಕ್ಷಿಣಾರೂಪವಾಗಿ ಈ ದಿಕ್ಕನ್ನು ದಾನಮಾಡಿದುದರಿಂದ ಈ ದಿಕ್ಕು ಅಂದಿನಿಂದಲೂ 'ದಕ್ಷಿಣಾ' ಎಂದೇ ಕರೆಯಲ್ಪಡುತ್ತಿದೆ. ಮೂರು ಲೋಕಗಳ ಪಿತೃದೇವತೆಗಳೂ ಈ ದಿಕ್ಕಿನಲ್ಲಿಯೇ ಪ್ರತಿಷ್ಠಿತರಾಗಿದ್ದಾರೆ. ಈ ದಿಕ್ಕಿನಲ್ಲಿಯೇ *ಊಷ್ಮಪರೆಂಬ ಪಿತೃದೇವತೆಗಳೂ ವಾಸಮಾಡುತ್ತಿದ್ದಾರೆಂದು ನಾವು ಕೇಳಿದ್ದೇವೆ.

ಈ ದಕ್ಷಿಣದಿಕ್ಕಿನಲ್ಲಿ ವಿಶ್ವೇದೇವತೆಗಳು ಸದಾಕಾಲದಲ್ಲಿಯೂ ಪೂಜಿತರಾಗಿ ಶ್ರಾದ್ಧಗಳಲ್ಲಿ ಪಿತೃಗಳಿಗೆ ಸಮಾನವಾದ ಭಾಗವನ್ನು ಪಡೆಯುತ್ತಾರೆ. ಗಾಲವ! ಎರಡನೆಯದಾದ ಈ ದಕ್ಷಿಣದಿಕ್ಕನ್ನು ಧರ್ಮದೇವತೆಯ ಎರಡ

---

*ಊಷ್ಮಪರೆಂದರೆ ಬಿಸಿ-ಬಿಸಿಯಾದ ಆಹಾರವನ್ನು ತಿನ್ನುವವರು. 'ಯಾವದುಷ್ಣಂ ಭವತ್ಯನ್ನಂ ಪಿತರಸ್ತಾವದಶ್ನನ್ತಿ–ಎಷ್ಟು ಹೊತ್ತಿನವರೆಗೆ ಅನ್ನವು ಬಿಸಿಯಾಗಿರುತ್ತದೆಯೋ ಅಲ್ಲಿಯವರೆಗೆ ಮಾತ್ರ ಪಿತೃಗಳು ಭೋಜನಮಾಡುತ್ತಾರೆ'–ಎಂದಶ್ರುತಿವಾಕ್ಯವಿರುವುದರಿಂದ ಊಷ್ಮಪರೆಂಬುದಕ್ಕೆ ಪಿತೃದೇವತೆಗಳೆಂದು ಅರ್ಥಮಾಡಲಾಗಿದೆ.

ನೆಯ ಬಾಗಿಲೆಂದೇ ಹೇಳುತ್ತಾರೆ. *'ತ್ರುಟಿ' 'ಲವ' ಇತ್ಯಾದಿ ಕಾಲದ ಸೂಕ್ಷ್ಮಾಂಶಗಳನ್ನೂ ಪರಿಗಣಿಸಿ ಪ್ರಾಣಿಗಳ ಆಯುಃಪ್ರಮಾಣವು ಈ ದಿಕ್ಕಿನಲ್ಲಿ ನಿಶ್ಚಯಿಸಲ್ಪಡುತ್ತದೆ. ಈ ದಕ್ಷಿಣದಿಕ್ಕಿನಲ್ಲಿಯೇ ದೇವರ್ಷಿಗಳೂ, ಪಿತೃಲೋಕದ ಋಷಿಗಳೂ ಮತ್ತು ರಾಜರ್ಷಿಗಳೂ ಗತವ್ಯಥರಾಗಿ (ದುಃಖರಹಿತರಾಗಿ) ವಾಸಮಾಡಿಕೊಂಡಿರುತ್ತಾರೆ. ಇಲ್ಲಿಯೇ ಪ್ರತಿಯೊಂದು ಪ್ರಾಣಿಯೂ ಮಾಡಿದ ಧರ್ಮ, ಸತ್ಯನಿಷ್ಠೆ ಮತ್ತು ಕರ್ಮಗಳು ಚಿತ್ರಗುಪ್ತನಿಂದ ಹೇಳಲ್ಪಡುತ್ತವೆ. ಮೃತರಾದವರಿಗೆ ಅವರವರ ಕರ್ಮಾನುಗುಣವಾದ ಫಲಾಫಲಗಳಿಗೆ ಈ ದಿಕ್ಕೇ ಆಶ್ರಯಭೂತವಾಗಿರುತ್ತದೆ. ಕರ್ಮಫಲವು ಈ ದಿಕ್ಕಿನಲ್ಲಿಯೇ ನಿರ್ಧರಿಸಲ್ಪಡುತ್ತದೆ. ಯಾವ ದಿಕ್ಕಿನ ಕಡೆಗೆ ಎಲ್ಲ ಪ್ರಾಣಿಗಳೂ ಅವಸಾನಾನಂತರದಲ್ಲಿ ಹೋಗುತ್ತವೆಯೋ–ಅಂತಹ ದಕ್ಷಿಣದಿಕ್ಕೇ ಇದಾಗಿರುತ್ತದೆ. ಗಾಲವ! ಸಾಮಾನ್ಯವಾಗಿ ಎಲ್ಲ ಪ್ರಾಣಿಗಳೂ ಅಜ್ಞಾನದಿಂದ ಆವೃತವಾಗಿರುತ್ತವೆ. ಈ ಕಾರಣದಿಂದಾಗಿ ಈ ದಿಕ್ಕನ್ನು ಕುರಿತು ಮಾಡುವ ಪ್ರಯಾಣವು ಸುಖಕರವಲ್ಲ. (ಅವಸಾನಾನಂತರದಲ್ಲಿ ಎಲ್ಲ ಪ್ರಾಣಿಗಳೂ ಇದೇ ದಿಕ್ಕನ್ನು ಕುರಿತು ಹೋಗಬೇಕಾದುದು ಅನಿವಾರ್ಯ. ಆದರೂ ಪ್ರಾಣಿಗಳು ಅಜ್ಞಾನ ಮತ್ತು ಕರ್ಮಗಳ ವಾಸನೆಯಿಂದ ಕೂಡಿರುವುದರಿಂದ ಅವುಗಳು ಇಲ್ಲಿ ಸುಖವಾಗಿ ಪ್ರಯಾಣಮಾಡಲಾರವು.)

ಪ್ರಯಾಣವು ಏಕೆ ಸುಗಮವಾಗಿಲ್ಲವೆಂಬ ವಿಷಯವಾಗಿ ಗರುಡನು ಹೇಳು

---

*ತ್ರುಟಿಃ–ಕಾಲದ ಅತಿಸೂಕ್ಷ್ಮವಾದ ಒಂದು ಭಾಗ.(⁄5 ಸೆಕೆಂಡ್)

ತ್ರಸರೇಣುತ್ರಯಂ ಭುಙ್ಕ್ತೆಯಃ ಕಾಲಃ ಸ ತುಟಃ ಸ್ಮೃತಾ ॥

ಮೂರು ತ್ರಸರೇಣುಗಳನ್ನು ಎಷ್ಟು ಕಾಲದಲ್ಲಿ ಭುಂಜಿಸಲು ಸಾಧ್ಯವಾಗುವುದೋ ಅಷ್ಟು ಕಾಲಕ್ಕೆ ತ್ರುಟಿ ಎಂದು ಹೆಸರು. 'ತ್ರಸರೇಣುಃ' ಕಿಟಕಿಯ ಸಂದಿನಲ್ಲಿ ಬೀಳುವ ಸೂರ್ಯಕಿರಣದ ಮಧ್ಯದಲ್ಲಿ (ಬಿಸಿಲುಕೋಲಿನಲ್ಲಿ) ಕಾಣುವ ಸಣ್ಣಧೂಳಿನ ಕಣ.

ಜಾಲಾನ್ತರಗತೇ ಭಾನೌ ಸೂಕ್ಷ್ಮಂ ಯದ್ದೃಶ್ಯತೇ ರಜಃ ।
ಪರಮಂ ತತ್ಪ್ರಮಾಣಾನಾಂ ತ್ರಸರೇಣುಂ ಪ್ರಚಕ್ಷತೇ॥ ಮನುಸ್ಮೃತಿಃ ೮-೧೩೨

ಸೂರ್ಯನ ಬಿಸಿಲು ಕಿಟಕಿಯಲ್ಲಿ ಬಿದ್ದಾಗ ಅದರಲ್ಲಿ ಕಾಣುವ ಸೂಕ್ಷ್ಮಾತಿಸೂಕ್ಷ್ಮವಾದ ಕಣಗಳಿಗೆ 'ತ್ರಸರೇಣು' ಎಂದು ಹೇಳುತ್ತಾರೆ.

ತ್ತಾನೆ : “ಗಾಲವ! ಈ ದಿಕ್ಕಿನಲ್ಲಿ ಪ್ರತಿಕೂಲಸ್ವಭಾವದವರಾದ ಅನೇಕ ಸಹಸ್ರರಾಕ್ಷಸರನ್ನು ಬ್ರಹ್ಮನು ಸೃಷ್ಟಿಸಿದ್ದಾನೆ. ಜಿತೇಂದ್ರಿಯರಲ್ಲದವರು, ಅಂತಃಕರಣಶುದ್ಧಿಯಿಲ್ಲದವರು ಅರ್ಥಾತ್ ಅಜ್ಞಾನಿಗಳು ತಮ್ಮ ಅಂತಿಮ ಪ್ರಯಾಣಕಾಲದಲ್ಲಿ ಆ ರಾಕ್ಷಸರನ್ನು ಕಾಣುತ್ತಾರೆ. (ಅವರ ಪ್ರಯಾಣಕ್ಕೆ ರಾಕ್ಷಸರು ಅನೇಕವಿಧವಾದ ಪ್ರತಿಬಂಧಕಗಳನ್ನುಂಟುಮಾಡುತ್ತಾರೆ.) ಮಂದರಪರ್ವತದ ಲತಾಗೃಹಗಳಲ್ಲಿ ಮತ್ತು ಬ್ರಹ್ಮರ್ಷಿಗಳ ಆಶ್ರಮಗಳಲ್ಲಿ ಗಂಧರ್ವರು ಚಿತ್ತ-ಬುದ್ಧಿಹಾರಕಗಳಾದ (ಮನಸ್ಸನ್ನು ಪಲ್ಲಟಗೊಳಿಸುವ) ಪದ್ಯಗಳನ್ನು ಗಾಯನಮಾಡುತ್ತಾರೆ. ಈ ದಿಕ್ಕಿನಲ್ಲಿಯೇ ಹಿಂದೆ ರೈವತನೆಂಬ ರಾಜನು ವರ್ಣಮಯವಾದ ಮಂತ್ರಗಳನ್ನೂ ಮತ್ತು ಮಂತ್ರಗಳ ಸಾಮಗಾನ ವನ್ನೂ ಕೇಳುತ್ತಲಿದ್ದು ಕಾಲದ ಪರಿವೆಯೇ ಇಲ್ಲದೆ ಪತ್ನೀ, ಮಂತ್ರಿ ಮತ್ತು ರಾಜ್ಯ-ಕೋಶಗಳನ್ನೂ ಕಳೆದುಕೊಂಡು ಪುನಃ ಅರಣ್ಯಕ್ಕೆ ಹೊರಟುಹೋದ ನೆಂಬ ಕಥೆಯನ್ನು ನಾವು ಕೇಳಿದ್ದೇವೆ.

ಈ ದಿಕ್ಕಿನಲ್ಲಿಯೇ ಸಾವರ್ಣಿಯೆಂಬ ಮನುವಿನಿಂದಲೂ ಯವಕ್ರೀತನ ಮಗನಿಂದಲೂ ಸೂರ್ಯನ ಗತಿಯು ನಿಯಮನಮಾಡಲ್ಪಟ್ಟಿದೆ. ಇಂತಹುದೇ ಮಾರ್ಗವಾಗಿ ಸೂರ್ಯನು ಹೋಗಬೇಕೆಂಬ ನಿಯಮವನ್ನು ಇವರು ಮಾಡಿ ರುತ್ತಾರೆ. ಈ ನಿಯಮವನ್ನು ಸೂರ್ಯನು ಯಾವಾಗಲೂ ಉಲ್ಲಂಘಿಸು ವುದಿಲ್ಲ.

ಈ ದಿಕ್ಕಿನಲ್ಲಿಯೇ ಪುಲಸ್ತ್ಯನ ಮೊಮ್ಮಗನಾದ ರಾಕ್ಷಸರಾಜನಾದ ರಾವಣೇಶ್ವರನು ಘೋರವಾದ ತಪಸ್ಸುಮಾಡಿ ತಾನು ದೇವತೆಗಳಿಂದ ವಧ್ಯ

---

*ಗಂಧರ್ವರ ಗಾಯನವು ಚಿತ್ತಾಪಹಾರಕವೆಂಬುದನ್ನು ದೃಢಪಡಿಸಲು ಹೇಳಿರುವ ಕಥೆಯಿದು. ಸತ್ಯಯುಗದಲ್ಲಿ ರೈವತನೆಂಬ ರಾಜನು ಕುಶಸ್ಥಲೀ ಎಂಬಲ್ಲಿ ರಾಜ್ಯ ವಾಳುತ್ತಿದ್ದನು. ಅವನಿಗೆ ರೇವತೀ ಎಂಬ ಮಗಳಿದ್ದಳು. ಮಗಳಿಗೆ ಅನುರೂಪ ನಾದ ವರನಾರೆಂಬುದನ್ನು ಕೇಳಲು ರೈವತನು ಮಗಳೊಡನೆ ಬ್ರಹ್ಮನಲ್ಲಿಗೆ ಹೋದನು. ಬ್ರಹ್ಮನಿಗೆ ಮಾತ್ರ ಆ ರಹಸ್ಯವು ತಿಳಿದಿತ್ತು. ಬ್ರಹ್ಮನೊಡನೆ ವರನ ವಿಷಯವಾಗಿ ಸಮಾಲೋಚಿಸಿ ಹಿಂದಿರುಗಿ ಬರುತ್ತಿದ್ದಾಗ ಮಂದರಪರ್ವತದ ಲತಾ ಗೃಹಗಳಲ್ಲಿ ಗಂಧರ್ವರು ಕಿವಿಗಳಿಗಿಂಪಾಗುವಂತೆ ಹಾಡುತ್ತಿದ್ದ ಗಾಯನವನ್ನು ಕೇಳಿ ರೈವತನು ಮೈಮರೆತನು. ಸ್ವಲ್ಪಕಾಲಾನಂತರ ತನ್ನ ಕಾರ್ಯವನ್ನು ಸ್ಮರಿಸಿಕೊಂಡು

ನಾಗಕೂಡದೆಂಬ ವರವನ್ನು ಪಡೆದನು. ಈ ದಿಕ್ಕಿನಲ್ಲಿ ನಡೆದ ಒಂದು ಘಟನೆಯಿಂದಾಗಿ ವೃತ್ರಾಸುರನು ಇಂದ್ರನೊಡನೆ ದ್ವೇಷವನ್ನು ಕಟ್ಟಿಕೊಂಡನು. (ಇಂದ್ರನ ಶತ್ರುವಾದನು.) ದೇಹತ್ಯಾಗಮಾಡಿದ ಎಲ್ಲ ಪ್ರಾಣಿಗಳ ಪ್ರಾಣಗಳೂ ಈ ದಿಕ್ಕಿಗೇ ಬಂದು ಪುನಃ ಪ್ರಾಣಾಪಾನಾದಿ ಐದು ರೂಪಗಳಾಗುತ್ತವೆ. (ಐದು ರೂಪಗಳಾಗಿ ಮತ್ತೊಂದು ದೇಹದಲ್ಲಿ ಸೇರಿಕೊಳ್ಳುತ್ತವೆ.) ಈ ದಿಕ್ಕಿನಲ್ಲಿಯೇ ದುಷ್ಕೃತಿಗಳಾದ ಮಾನವರು ನರಕದ ಅಗ್ನಿಯಲ್ಲಿ ಬೇಯಿಸಲ್ಪಡುತ್ತಾರೆ. ಇಲ್ಲಿಯೇ ಇರುವ ವೈತರಣೀನದಿಯು ನರಕಗಾಮಿಗಳಾದ ದುಷ್ಕೃತಿಗಳಿಂದ ತುಂಬಿಹೋಗಿರುತ್ತದೆ. ಈ ದಿಕ್ಕಿಗೆ ಹೋದವನು ಸುಖ-ದುಃಖಗಳೆರಡರ ಅಂತ್ಯವನ್ನೂ ಹೊಂದುತ್ತಾನೆ. ಅರ್ಥಾತ್ ಸುಖಕ್ಕೆ ಅಂತ್ಯವಾದ ನರಕವನ್ನೂ, ದುಃಖಕ್ಕೆ ಅಂತ್ಯವಾದ ಸ್ವರ್ಗವನ್ನೂ ಅವನವನ ಕರ್ಮಾನುಸಾರವಾಗಿ ಹೊಂದುತ್ತಾನೆ. ಸೂರ್ಯನು ಉತ್ತರದಿಂದ ಈ ದಿಕ್ಕಿಗೆ ತಿರುಗಿದಾಗ (ಉತ್ತರಾಯಣವು ಕಳೆದು ದಕ್ಷಿಣಾಯನವು ಪ್ರಾರಂಭವಾದಾಗ) ರಸಯುಕ್ತವಾದ ಮಳೆಯನ್ನು ಸುರಿಸುತ್ತಾನೆ. ಅದೇ ಸಮಯದಲ್ಲಿ ಸಾಮಾನ್ಯವಾಗಿ ವರ್ಷಾಕಾಲವು ಪ್ರಾರಂಭವಾಗುತ್ತದೆ. ಪುನಃ ಸೂರ್ಯನು ವಸಿಷ್ಠರ ದಿಕ್ಕಾದ ಉತ್ತರಕ್ಕೆ ತಿರುಗಿದಾಗ (ಉತ್ತರಾಯಣವು ಪ್ರಾರಂಭವಾದಾಗ) ಹಿಮವನ್ನು ಸುರಿಸುತ್ತಾನೆ. (ಹೇಮಂತರ್ತುವಿನಲ್ಲಿ ಉತ್ತರಾಯಣವು ಪ್ರಾರಂಭವಾಗುತ್ತದೆ.)

ಗಾಲವ! ನಾನೊಮ್ಮೆ ಈ ದಿಕ್ಕಿನಲ್ಲಿ ಕ್ಷುಧಾರ್ತನಾಗಿ ಆಹಾರಕ್ಕೇನು ಮಾಡಬೇಕೆಂದು ಚಿಂತಿಸುತ್ತಾ ಕುಳಿತಿದ್ದೆನು. ಆ ಸಮಯದಲ್ಲಿ ನಾನು ಪರಸ್ಪರವಾಗಿ ಕಾದಾಡುತ್ತಿದ್ದ ಬಹುದೊಡ್ಡದಾಗಿದ್ದ ಆನೆ ಮತ್ತು ಆಮೆಗಳನ್ನು ನನ್ನ ಆಹಾರವನ್ನಾಗಿ ಪಡೆದುಕೊಂಡೆನು.

---

ಭೂಲೋಕಕ್ಕೆ ಮಗಳೊಡನೆ ಬಂದನು. ಆ ವೇಳೆಗೆ ಕೃತ-ತ್ರೇತಾಯುಗಗಳು ಮುಗಿದು ದ್ವಾಪರಯುಗವೂ ಮುಗಿಯುವುದರಲ್ಲಿತ್ತು. ತಾನು ವಾಸಿಸುತ್ತಿದ್ದ ಅರಮನೆಯಾಗಲೀ, ತನ್ನ ಪತ್ನೀ-ಪುರೋಹಿತ-ಮಂತ್ರಿವರ್ಗದವರಾಗಲೀ ಯಾರೂ ಇರಲಿಲ್ಲ. ತನ್ನ ರಾಜಧಾನಿಯಾದ ಕುಶಸ್ಥಲಿಯಿದ್ದ ಸ್ಥಳದಲ್ಲಿ ದ್ವಾರಕಾಪಟ್ಟಣವಿದ್ದಿತು. ಗಂಧರ್ವಗಾಯನದ ಶ್ರವಣದಿಂದಾದ ಕಾಲಹರಣಕ್ಕೆ ಅಚ್ಚರಿಗೊಂಡ ರೈವತನು

*ಸೂರ್ಯನಿಂದ ಹುಟ್ಟಿದ ಚಕ್ರಧನುಷನೆಂಬ ಹೆಸರಿನ ಮಹಾಮುನಿಯು ಇಲ್ಲಿಯೇ ಇದ್ದಾನೆ. ಇವನನ್ನು ಎಲ್ಲರೂ ಕಪಿಲದೇವನೆಂದು ತಿಳಿದುಕೊಂಡಿರುತ್ತಾರೆ. (ಕಪಿಲನೆಂಬ ಹೆಸರಿನಿಂದ ಇವನು ಲೋಕದಲ್ಲಿ ಪ್ರಸಿದ್ಧಿಹೊಂದಿದ್ದಾನೆ.) ಇವನಿಂದಲೇ ಸಗರನ ಮಕ್ಕಳೆಲ್ಲರೂ ಭಸ್ಮೀಭೂತರಾಗಿ ಹೋದರು.

ಗಾಲವ! ಇಲ್ಲಿ 'ಶಿವ' ಎಂಬ ಹೆಸರಿನ ವೇದ-ವೇದಾಂಗಪಾರಂಗತರಾದ ಸಿದ್ಧಬ್ರಾಹ್ಮಣರಿದ್ದರು. ಅವರು ಸಕಲವೇದಗಳನ್ನೂ ಅಧ್ಯಯನಮಾಡಿ ತತ್ತ್ವಜ್ಞಾನವನ್ನು ಪಡೆದುಕೊಂಡು ಕ್ಷಯರಹಿತವಾದ ಮೋಕ್ಷವನ್ನು ಪಡೆದರು. ಈ ದಿಕ್ಕಿನಲ್ಲಿಯೇ ಸರ್ಪರಾಜನಾದ ವಾಸುಕಿಯಿಂದಲೂ, ತಕ್ಷಕನಿಂದಲೂ, ಐರಾವತನಿಂದಲೂ ಪರಿಪಾಲಿತವಾದ ಭೋಗವತೀ ಎಂಬ ಪಟ್ಟಣವೂ ಇದೆ.

**ಅತ್ರ ನಿರ್ಯಾಣಕಾಲೇಽಪಿ ತಮಃ ಸಮ್ಪ್ರಾಪ್ಯತೇ ಮಹತ್ ।**
**ಅಭೇದ್ಯಂ ಭಾಸ್ಕರೇಣಾಪಿ ಸ್ವಯಂ ವಾ ಕೃಷ್ಣವರ್ತ್ಮನಾ ॥೨೦॥**

ಪ್ರಾಣಿಗಳು ನಿರ್ಯಾಣಹೊಂದಿದನಂತರ (ಮರಣಾನಂತರ) ಇದೇ ದಿಕ್ಕನ್ನು ಕುರಿತು ಪ್ರಯಾಣಮಾಡಬೇಕಾಗುತ್ತದೆಂದು ಹಿಂದೆಯೇ ಹೇಳಿದೆನಲ್ಲವೇ? ಆ ಸಮಯದಲ್ಲಿ ಪ್ರಾಣಿಗಳು ಹೋಗುವ ಮಾರ್ಗದಲ್ಲಿ ದಟ್ಟವಾದ ಕತ್ತಲೆಯು ಕವಿದಿರುತ್ತದೆ. ಆ ಕತ್ತಲೆಯನ್ನು ಸೂರ್ಯನಿಂದಾಗಲೀ–ಸ್ವತಃ ಅಗ್ನಿಯಿಂದಾಗಲೀ ಭೇದಿಸಲು ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ. ನೀನು ನನ್ನಿಂದ ಸೇವೆಮಾಡಿಸಿಕೊಳ್ಳಲು ಯೋಗ್ಯನಾಗಿರುವೆ. ಗಾಲವ!

---

ದ್ವಾರಕೆಯಲ್ಲಿದ್ದ ಬಲರಾಮನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ತಾನು ತಪಸ್ಸಿಗಾಗಿ ಕಾಡಿಗೆ ಹೊರಟುಹೋದನು.

*ಈ ಶ್ಲೋಕದಲ್ಲಿ 'ಸೂರ್ಯಾಜ್ಜಾತಃ ಚಕ್ರಧನುಃ ಮಹಾನೃಷಿಃ'–ಚಕ್ರಧನುಷನೆಂಬ ಮಹರ್ಷಿಯು ಸೂರ್ಯನಿಂದ ಹುಟ್ಟಿದನೆಂಬ ವಿಷಯುವು ಸ್ಪಷ್ಟವಾಗಿದೆ. ಆದರೆ ಪುರಾಣಗಳಲ್ಲಿ ಕರ್ದಮ ಪ್ರಜಾಪತಿಯಿಂದ ಸ್ವಾಯಂಭುವನ ಪುತ್ರಿಯಾದ ದೇವಹೂತಿಯಲ್ಲಿ ಕಪಿಲನು ಹುಟ್ಟಿದನೆಂದು ಉಕ್ತವಾಗಿದೆ. ಈ ಕಾರಣದಿಂದಾಗಿ ಒಬ್ಬರು ವ್ಯಾಖ್ಯಾನಕಾರರು 'ಸೂರ್ಯಾಜ್ಜಾತಃ' ಎಂಬುದಕ್ಕೆ 'ಸೂರ್ಯನಿಗೆ ಸಮಾನತೇಜಸ್ಕನಾದ ಕರ್ದಮಮಹರ್ಷಿಯಿಂದ ಹುಟ್ಟಿದ'–ಎಂದು ಅರ್ಥಮಾಡಿರುತ್ತಾರೆ.

ಆದುದರಿಂದ ಈ ದಕ್ಷಿಣದಿಕ್ಕಿನ ವಿವರಣೆಯನ್ನು ನಿನಗೆ ಸಂಪೂರ್ಣವಾಗಿ ತಿಳಿಸಿರುತ್ತೇನೆ. ಈ ದಿಕ್ಕಿಗೆ ನಿನ್ನನ್ನು ಕರೆದೊಯ್ಯಲೇ? ತಿಳಿಸು. ಈ ದಿಕ್ಕಿಗೆ ಹೋದರೆ ನಿನ್ನ ಕಾರ್ಯವು ಸಿದ್ಧಿಯಾಗುವುದೇ?–ಎಂಬುದನ್ನೂ ವಿವೇಚಿಸು ಅಥವಾ ಮುಂದೆ ಮೂರನೆಯದಾದ ಪಶ್ಚಿಮದಿಕ್ಕಿನ ವರ್ಣನೆಯನ್ನಾದರೂ ಲಾಲಿಸು."

೧೦೯ನೆಯ ಅಧ್ಯಾಯವು ಮುಗಿಯಿತು.

೧೧೦ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಪಶ್ಚಿಮದಿಕ್ಕಿನ ವರ್ಣನೆ

ಪಶ್ಚಿಮದಿಕ್ಕಿನ ವರ್ಣನೆಯನ್ನೂ ಕೇಳಬೇಕೆಂಬ ಆಶಯದಿಂದ ಗಾಲವನು ಮೌನವಾಗಿಯೇ ಇದ್ದನು. ಅದರಿಂದಾಗಿ ಗರುಡನು ಪಶ್ಚಿಮದಿಕ್ಕಿನ ವರ್ಣನೆ ಯನ್ನು ಮಾಡಲು ಉಪಕ್ರಮಿಸಿದನು.

**ಇಯಂ ದಿಗ್ದಯಿತಾ ರಾಜ್ಞೋ ವರುಣಸ್ಯ ತು ಗೋಪತೇಃ ।**
**ಸದಾ ಸಲಿಲರಾಜಸ್ಯ ಪ್ರತಿಷ್ಠಾ ಚಾದಿರೇವ ಚ ॥೧॥**

"ಬ್ರಾಹ್ಮಣೋತ್ತಮ! ಈ ದಿಕ್ಕು ಅಪಾಂಪತಿಯಾದ ವರುಣರಾಜ ನಿಗೆ ಸದಾಕಾಲದಲ್ಲಿಯೂ ಅತ್ಯಂತಪ್ರಿಯತಮವಾದ ದಿಕ್ಕಾಗಿರುತ್ತದೆ. ಜಲಾಧಿಪತಿಯಾದ ವರುಣನಿಗೆ ಇದು ಉಗಮಸ್ಥಾನವೂ ಮತ್ತು ಆಶ್ರಯ ಸ್ಥಾನವೂ ಆಗಿರುತ್ತದೆ.

**ಅತ್ರ ಪಶ್ಚಾದಹಃ ಸೂರ್ಯೋ ವಿಸರ್ಜಯತಿ ಗಾಃ ಸ್ವಯಮ್ ।**
**ಪಶ್ಚಿಮೇತ್ಯಭಿವಿಖ್ಯಾತಾ ದಿಗಿಯಂ ದ್ವಿಜಸತ್ತಮ ॥೨॥**

ಬ್ರಾಹ್ಮಣೋತ್ತಮ! ಹಗಲು ಕಳೆದನಂತರ ಸೂರ್ಯನು ಈ ದಿಕ್ಕಿನಲ್ಲಿ ತನ್ನ ರಶ್ಮಿಗಳನ್ನು ವಿಸರ್ಜಿಸುತ್ತಾನಾದುದರಿಂದ ಈ ದಿಕ್ಕು 'ಪಶ್ಚಿಮಾ' ಎಂಬ ಹೆಸರಿನಿಂದಲೇ ವಿಖ್ಯಾತವಾಗಿದೆ. ಪೂರ್ವಕಾಲದಲ್ಲಿ ಜಲಚರಗಳ ಮೇಲೆ ಆಧಿಪತ್ಯವನ್ನು ನಡೆಸುವ ಸಲುವಾಗಿಯೂ ಮತ್ತು ನೀರಿನ ರಕ್ಷಣೆಗಾಗಿಯೂ ಭಗವಾನ್ ಕಶ್ಯಪಮಹರ್ಷಿಯು ವರುಣನನ್ನು ಈ ದಿಕ್ಕಿಗೆ

ಒಡೆಯನನ್ನಾಗಿ ಮಾಡಿದನು. ಅಂಧಕಾರನಾಶಕನಾದ ಚಂದ್ರನು ಈ ದಿಕ್ಕಿನಲ್ಲಿ ವರುಣನ ಸಮೀಪದಲ್ಲಿದ್ದು ಆರು ವಿಧವಾದ ರಸಗಳನ್ನು ಸಂಪೂರ್ಣವಾಗಿ ಪಾನಮಾಡಿ ಶುಕ್ಲಪಕ್ಷದ ಪ್ರಥಮೆಯ ದಿನ ತಾರುಣ್ಯವನ್ನು ಪಡೆದು ಉದಯಿಸುತ್ತಾನೆ. ಹಿಂದೊಮ್ಮೆ ಈ ದಿಕ್ಕಿನಲ್ಲಿಯೇ ವಾಯುವಿಗೂ–ದೈತ್ಯರಿಗೂ ಮಹಾಯುದ್ಧವಾಯಿತು. ವಾಯುವಿನೊಡನೆ ಯುದ್ಧಮಾಡುತ್ತಿದ್ದ ದೈತ್ಯರು ವಾಯುವಿನ ವೇಗದಿಂದ (ಝುಂಝಾವಾತದಿಂದ) ಬಹುಪೀಡಿತರಾಗಿ ಪರಾಙ್ಮುಖರಾದುದು ಮಾತ್ರವಲ್ಲದೇ ಯುದ್ಧದ ಆಯಾಸದಿಂದ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ನೆಲದ ಮೇಲೆ ಬಿದ್ದುಕೊಂಡರು. ಯಾವ ಅಸ್ತಾಚಲದಿಂದ ಪಶ್ಚಿಮಸಂಧ್ಯೆಯ ಪ್ರಸಾರವಾಗುತ್ತದೆಯೋ, ಆ ಅಸ್ತಾಚಲವು ಅನುದಿನವೂ ತನಗೆ ಅತ್ಯಂತಪ್ರೀತಿಪಾತ್ರನಾದ ಸೂರ್ಯನನ್ನು ಪರಿಗ್ರಹಿಸುತ್ತದೆ. (ಸ್ವಾಗತಿಸಿ ತನ್ನಲ್ಲಿ ಐಕ್ಯಮಾಡಿಕೊಳ್ಳುತ್ತದೆ.) ದಿವಸವು ಕಳೆದೊಡನೆಯೇ ಈ ದಿಕ್ಕಿನಿಂದಲೇ ರಾತ್ರಿದೇವಿ ಮತ್ತು ನಿದ್ರಾದೇವಿಯರು ಪ್ರಾದುರ್ಭವಿಸಿ ಜೀವಕೋಟಿಯ ಅರ್ಧಾಯುಷ್ಯವನ್ನು ಅಪಹರಿಸುವ ಆಶಯದಿಂದಲೋ ಎಂಬಂತೆ ಸರ್ವತ್ರ ವ್ಯಾಪಿಸಿರುತ್ತಾರೆ. ಗಾಲವ! ಹಿಂದೊಮ್ಮೆ ಈ ದಿಕ್ಕಿನಲ್ಲಿಯೇ ಗರ್ಭವತಿಯಾದ ದಿತಿದೇವಿಯು ಮಲಗಿ ನಿದ್ರಿಸುತ್ತಿದ್ದಳು. ಇಂದ್ರನು ಅವಳ ಉದರದಲ್ಲಿ ಪ್ರವೇಶಿಸಿ ಗರ್ಭವನ್ನೇ ಭೇದಿಸಿಬಿಟ್ಟನು. ಹೀಗೆ ಭೇದಿಸಿದ ಗರ್ಭಪಿಂಡದಿಂದ ಮರುದ್ಗಣಗಳು ಹುಟ್ಟಿದುವು.*

---

*ಮರುತ್ತುಗಳ ಕಥೆಯು ಭಾಗವತದಲ್ಲಿ ಹೀಗೆ ಬಂದಿದೆ–

ಇಂದ್ರನು ದಿತಿಯ ಮಕ್ಕಳೆಲ್ಲರನ್ನೂ ಕೊಂದುಬಿಟ್ಟನು. ಇಂದ್ರನನ್ನೇ ಕೊಲ್ಲತಕ್ಕ ಮಗನು ತನ್ನಲ್ಲಿ ಹುಟ್ಟಬೇಕೆಂಬ ಅಭಿಲಾಷೆಯಿಂದ ದಿತಿಯು ಕಶ್ಯಪನನ್ನು ಪ್ರಾರ್ಥಿಸಿ ಅವನ ಅನುಗ್ರಹದಿಂದ ಗರ್ಭವತಿಯಾದಳು. ಅವಳು ಒಂದು ಸಾವಿರ ವರ್ಷಗಳ ಕಾಲ ನಿಯಮವನ್ನು ಪರಿಪಾಲಿಸಬೇಕಾಗಿತ್ತು. ಇಂದ್ರನು ಆ ಸಮಾಚಾರವನ್ನು ಕೇಳಿ ದಿತಿಯ ಬಳಿಗೆ ಬಂದು ಆಕೆಯನ್ನು ಅನುದಿನವೂ ಶುಶ್ರೂಷೆಮಾಡುತ್ತಿರುವಲ್ಲಿ ಒಂದು ದಿನ ದಿತಿಯು ಹಗಲು ಹೊತ್ತಿನಲ್ಲಿ ನಿದ್ರೆಮಾಡುತ್ತಿದ್ದುದರಿಂದ ಅಶುಚಿಯಾದಳು. ಸಮಯವನ್ನು ಕಾಯುತ್ತಿದ್ದ ಇಂದ್ರನು ಒಡನೆಯೇ ದಿತಿಯ ಗರ್ಭವನ್ನು ಏಳು ಭಾಗಗಳನ್ನಾಗಿ ಕತ್ತರಿಸಿಬಿಟ್ಟನು. ಆಗ ಆ ಗರ್ಭಶಕಲಗಳು ರೋದನ ಮಾಡತೊಡಗಿದುವು. ರೋದನಮಾಡುತ್ತಿದ್ದ ಏಳು ಭಾಗಗಳನ್ನು 'ಮಾ ರುದ= ಅಳಬೇಡ' ಎಂದೆನ್ನುತ್ತಾ ಪುನಃ ಇಂದ್ರನು ಏಳೇಳು ಭಾಗಗಳಾಗಿ ಕತ್ತರಿಸಿದನು.

ಹಿಮವತ್ಪರ್ವತದ ಮೂಲಭಾಗವು ಸಮುದ್ರದಲ್ಲಿ ಮುಳುಗಿರುವ ಮಂದರಪರ್ವತದವರೆಗೂ ವ್ಯಾಪಿಸಿದ್ದು ಅಲ್ಲಿಯೇ ಚಿರಸ್ಥಾಯಿಯಾಗಿದೆ. ಅರ್ಥಾತ್ ಪಶ್ಚಿಮದಿಕ್ಕಿನಲ್ಲಿ ಸಮುದ್ರದಲ್ಲಿ ಮುಳುಗಿರುವ ಮಂದರ ಪರ್ವತವು ಹಿಮವತ್ಪರ್ವತಕ್ಕೆ ಮೂಲರೂಪವಾಗಿದೆ. ಬೇರಿನ ರೂಪ ದಲ್ಲಿದೆ. ಆ ಬೇರು (ಮಂದರಪರ್ವತವು) ಸಮುದ್ರದಲ್ಲಿ ಎಲ್ಲಿಯವರೆಗೂ ವ್ಯಾಪಿಸಿದೆಯೆಂಬುದನ್ನು ತಿಳಿಯಲು ಸಾವಿರ ವರ್ಷಗಳವರೆಗೆ ಸಮುದ್ರ ದೊಳಗೆ ಹೋದರೂ ಮೂಲವನ್ನು ತಿಳಿಯುವುದು ಅಥವಾ ನೋಡುವುದು ಅಸಾಧ್ಯವೇ ಸರಿ. ಹಿಮವಂತನ ಮೂಲವೂ ಅಪ್ರಮೇಯವಾದುದು ; ಸಮುದ್ರವೂ ಅಪ್ರಮೇಯವಾದುದು. ಗೋಮಾತೆಯಾದ ಸುರಭಿಯು ಸುವರ್ಣಮಯವಾದ ಮಂದರಪರ್ವತದಿಂದಲೂ ಮತ್ತು ಸುವರ್ಣಮಯ ವಾದ ಕಮಲಪುಷ್ಪಗಳಿಂದಲೂ ಸುಶೋಭಿತವಾದ ಕ್ಷೀರಸಾಗರಕ್ಕೆ ಹೋಗಿ ಹಾಲನ್ನು ಸುರಿಸುತ್ತಾಳೆ. ಈ ಪಶ್ಚಿಮದಿಕ್ಕಿನಲ್ಲಿಯೇ ಸಮುದ್ರಮಧ್ಯದಲ್ಲಿ ಸೂರ್ಯಸಮಾನತೇಜಸ್ವಿಯಾದ ರಾಹುವಿನ ಮುಂಡವು (ತಲೆಯಿಲ್ಲದ ಶರೀರವು) ಕಾಣುತ್ತಿರುತ್ತದೆ. ರಾಹುವು ಯಾವಾಗಲೂ ಚಂದ್ರ-ಸೂರ್ಯ ರನ್ನು ನುಂಗಿಹಾಕುವ ಇಚ್ಛೆಯಿಂದಿರುತ್ತಾನೆ. ಈ ಪಶ್ಚಿಮದಿಕ್ಕಿನಲ್ಲಿ ಕಂದು (ಹಸಿರು) ಬಣ್ಣದ ಕೂದಲುಗಳುಳ್ಳ, ಅಗೋಚರನಾದ, ಅಪ್ರಮೇಯ ನಾದ, ಸರ್ವದಾ ಸಾಮಗಾನಮಾಡುವ ಸುವರ್ಣಶಿರಸನ ವಿಪುಲವಾದ ಧ್ವನಿಯು ಬಹುಸ್ಪಷ್ಟವಾಗಿ ಕೇಳುತ್ತದೆ.

ಈ ಪಶ್ಚಿಮದಿಕ್ಕಿನಲ್ಲಿಯೇ ಹರಿಮೇಧನೆಂಬ ಋಷಿಯ ಮಗಳಾದ ಧ್ವಜವತಿಯೆಂಬುವಳು ಸೂರ್ಯದೇವನ 'ತಿಷ್ಠ-ತಿಷ್ಠ' 'ನಿಲ್ಲು-ನಿಲ್ಲು' ಎಂಬ ಆಜ್ಞಾನುಸಾರವಾಗಿ ಆಕಾಶದಲ್ಲಿಯೇ ನಿಂತುಬಿಟ್ಟಿದ್ದಾಳೆ. ಈ ದಿಕ್ಕಿನಲ್ಲಿ ವಾಯು, ಅಗ್ನಿ, ಜಲ ಮತ್ತು ಆಕಾಶಗಳು ಹಗಲಿನ ಮತ್ತು

---

ಅಷ್ಟರಲ್ಲಿ ದಿತಿಯು ಎಚ್ಚೆತ್ತು ಇಂದ್ರನ ಕೃತ್ಯವನ್ನು ನೋಡಿ ತನ್ನ ಅಜಾಗರೂಕತೆ ಗಾಗಿ ಬಹಳ ಕೊರಗಿ ಈ ಮಕ್ಕಳನ್ನು ನೀನೇ ಕಾಪಾಡಬೇಕೆಂದು–ಇಂದ್ರನನ್ನು ಬೇಡಿ ಕೊಂಡಳು. ಇಂದ್ರನೊಪ್ಪಿ ನಲವತ್ತೊಂಬತ್ತು ವಿಭಾಗಗಳಾಗಿ ಕತ್ತರಿಸಲ್ಪಟ್ಟಿದ್ದರೂ ಜೀವಸಹಿತವಾಗಿದ್ದ ಅವುಗಳಿಗೆ ದೇವತ್ವವನ್ನು ಕೊಟ್ಟು ಮಾರುತರು ಅಥವಾ ಮರುತ್ತುಗಳೆಂದು ಹೆಸರಿಸಿದನು.

ರಾತ್ರಿಯ ದುಃಖಸ್ಪರ್ಶವನ್ನು ಬಿಟ್ಟಿರುತ್ತವೆ. (ಈ ದಿಕ್ಕಿನ ವಾಯುಗುಣವು ಅತ್ಯಂತಹಿತಕರವಾಗಿರುತ್ತದೆ.) ಈ ದಿಕ್ಕಿಗೆ ಬಂದನಂತರ ಸೂರ್ಯನ ಗತಿಯು ವಕ್ರವಾಗಿ ಪರಿಭ್ರಮಿತವಾಗುತ್ತದೆ. (ಮೇರುಪರ್ವತವನ್ನು ಪ್ರದಕ್ಷಿಣೆಮಾಡುವ ಸೂರ್ಯನು ಯಾವಾಗಲೂ ವಕ್ರಗತಿಯುಳ್ಳ ವನೇ ಆಗಿರುತ್ತಾನೆ. ಆದರೆ ಲೋಕದೃಷ್ಟಿಯಲ್ಲವನು ಕೆಳಗೆ ಹುಟ್ಟಿ ಮೇಲಕ್ಕೇರಿ ಪುನಃ ಪಶ್ಚಿಮದಿಕ್ಕಿನಲ್ಲಿ ಕೆಳಕ್ಕಿಳಿಯುವಂತೆ ಕಾಣುತ್ತಾನೆ. ಈ ಪಶ್ಚಿಮ ದಿಕ್ಕಿನಲ್ಲಿಯೇ ಎಲ್ಲ ನಕ್ಷತ್ರಗಳೂ ಸೂರ್ಯಮಂಡಲವನ್ನು ಪ್ರವೇಶಿಸುತ್ತವೆ. ಸೂರ್ಯಮಂಡಲವನ್ನು ಪ್ರವೇಶಿಸಿದ ನಕ್ಷತ್ರಗಳು ಇಪ್ಪತ್ತೆಂಟು ರಾತ್ರಿಗಳವರೆಗೆ ಸೂರ್ಯನೊಡನೆ ತಿರುಗುತ್ತಲಿದ್ದು ಚಂದ್ರ ಸಂಪರ್ಕದ ಯೋಗದಿಂದಾಗಿ ಸೂರ್ಯನಿಂದ ಹೊರಬೀಳುತ್ತವೆ. ಈ ದಿಕ್ಕಿನಲ್ಲಿ ಹುಟ್ಟಿ ಪ್ರವಹಿಸಿ ಸಾಗರವನ್ನು ಸೇರುವ ಸಾವಿರಾರು ನದಿಗಳಿಂದಲೇ ಸಮುದ್ರವು ಪೂರ್ಣವಾಗುತ್ತದೆ. ಪಶ್ಚಿಮ ದಿಕ್ಕಿನಲ್ಲಿರುವ ಸಮುದ್ರದಲ್ಲಿ ಮೂರು ಲೋಕಗಳಿಗೂ ಪ್ರಯೋಜನಕಾರಿಯಾದ ಮಹಾನ್ ಜಲರಾಶಿಯಿದೆ. ಈ ಪಶ್ಚಿಮದಿಕ್ಕಿನಲ್ಲಿಯೇ ಪನ್ನಗರಾಜನಾದ ಅನಂತನ ನಿವಾಸಸ್ಥಾನವಿದೆ. ಆದಿ ಮತ್ತು ಅಂತ್ಯಗಳಿಂದ ರಹಿತನಾದ ಭಗವಾನ್ ವಿಷ್ಣುವಿನ ಸರ್ವೋತ್ಕೃಷ್ಟವಾದ ಸ್ಥಾನವೂ ಈ ದಿಕ್ಕಿನಲ್ಲಿಯೇ ಇದೆ. ಈ ದಿಕ್ಕಿನಲ್ಲಿ ಅಗ್ನಿಯ ಸಖನಾದ ವಾಯುದೇವನ ಸ್ಥಾನವಿದೆ. ಮರೀಚಿಯ ಮಗನಾದ ಕಶ್ಯಪನ ಆಶ್ರಮವೂ ಈ ದಿಕ್ಕಿನಲ್ಲಿಯೇ ಇದೆ.

ಗಾಲವ! ನಾನು ನಿನಗೆ ಈ ಪಶ್ಚಿಮದಿಕ್ಕಿನ ವಿಷಯವಾಗಿ ಸೂಕ್ಷ್ಮವಾಗಿ ಹೇಳಿರುತ್ತೇನೆ. ನಿನ್ನ ಕಾರ್ಯಸಿದ್ಧಿಗಾಗಿ ಈ ದಿಕ್ಕನ್ನೇ ಕುರಿತು ಹೋಗೋಣವೇ? ನಿನ್ನ ಮನಸ್ಸು ಹೇಗಿದೆ? ನೀನು ಇಚ್ಛಿಸಿದಂತೆ ನಡೆಯಲು ಸಿದ್ಧನಿದ್ದೇನೆ."

೧೧೦ನೆಯ ಅಧ್ಯಾಯವು ಮುಗಿಯಿತು.

೧೧೧ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಉತ್ತರದಿಕ್ಕಿನ ವರ್ಣನೆ

ಗಾಲವನು ಪಶ್ಚಿಮದಿಕ್ಕಿಗೆ ಹೋಗುವ ಅಭಿಪ್ರಾಯವನ್ನೇನೂ ಸೂಚಿ

ಸದೇ ಇದ್ದುದರಿಂದ ಗರುಡನು ನಾಲ್ಕನೆಯದಾದ ಉತ್ತರದಿಕ್ಕಿನ ವರ್ಣನೆಯನ್ನು ಮಾಡಲು ಉಪಕ್ರಮಿಸಿದನು.:

**ಯಸ್ಮಾದುತ್ತಾರ್ಯತೇ ಪಾಪಾದ್ಯಸ್ಮಾನ್ನಿಃಶ್ರೇಯಸೋಽಶ್ನುತೇ ।**
**ಅಸ್ಮಾದುತ್ತಾರಣಬಲಾದುತ್ತರೇತ್ಯುಚ್ಯತೇ ದ್ವಿಜ ॥೧॥**

“ಗಾಲವ! ಯಾವ ಕಾರಣದಿಂದ ಈ ದಿಕ್ಕು ತನ್ನ ಕಡೆಗೆ ಬಂದವರನ್ನು ಪಾಪದಿಂದ ವಿಮುಕ್ತರನ್ನಾಗಿ ಮಾಡುವುದೋ, ಯಾವ ಕಾರಣದಿಂದ ಈ ದಿಕ್ಕಿಗೆ ಅಭಿಮುಖವಾಗಿ ಹೋದ ಮಾನವನು ಸ್ವರ್ಗೀಯಸುಖಗಳನ್ನು ಉಪಭೋಗಿಸುತ್ತಾನೆಯೋ–ಅಂತಹ ಉತ್ತಾರಣಬಲವು (ಸಂಸಾರಸಾಗರವನ್ನು ದಾಟಿಸುವ ಬಲವು) ಈ ದಿಕ್ಕಿಗಿರುವುದರಿಂದ ಇದನ್ನು ‘ಉತ್ತರಾ’ ಎಂದು ಕರೆಯುತ್ತಾರೆ. ಶ್ರೇಷ್ಠವಾದ ಸುವರ್ಣದ ಸ್ಥಾನವೂ ಇದಾಗಿರುವುದರಿಂದಲೂ ಈ ದಿಕ್ಕನ್ನು ಉತ್ತರದಿಕ್ಕೆಂದು ಕರೆಯುತ್ತಾರೆ. ಈ ಉತ್ತರದಿಕ್ಕು ಪೂರ್ವ ಮತ್ತು ಪಶ್ಚಿಮಮಾರ್ಗಗಳ ಮಧ್ಯವರ್ತಿಯಾದ ಮಾರ್ಗವೆಂದು ಹೇಳುತ್ತಾರೆ. ದ್ವಿಜರ್ಷಭನೇ! ಶ್ರೇಷ್ಠವಾದ ಈ ಉತ್ತರದಿಕ್ಕಿನಲ್ಲಿ ಸೌಮ್ಯಸ್ವಭಾವವಿಲ್ಲದವನೂ, ಜಿತೇಂದ್ರಿಯನಲ್ಲದವನೂ ಅಥವಾ ಧರ್ಮಮಾರ್ಗವನ್ನವಲಂಬಿಸದವನೂ ವಾಸಮಾಡಲಾರನು.

**ಅತ್ರ ನಾರಾಯಣಃ ಕೃಷ್ಣೋ ವಿಷ್ಣುಶ್ಚೈವ ನರೋತ್ತಮಃ ।**
**ಬದರ್ಯಾಮಾಶ್ರಮಪದೇ ತಥಾ ಬ್ರಹ್ಮಾ ಚ ಶಾಶ್ವತಃ ॥೪॥**

ಈ ದಿಕ್ಕಿನಲ್ಲಿಯೇ ಬದರಿಕಾಶ್ರಮವಿದೆ. ಈ ಶುಭಾಶ್ರಮದಲ್ಲಿ ಸಚ್ಚಿದಾನಂದಸ್ವರೂಪನಾದ ನಾರಾಯಣನೂ, ನರನೂ ಮತ್ತು ಸನಾತನನಾದ ಬ್ರಹ್ಮನೂ ವಾಸಮಾಡುತ್ತಿದ್ದಾರೆ.

**ಅತ್ರ ವೈ ಹಿಮವತ್ಪೃಷ್ಠೇ ನಿತ್ಯಮಾಸ್ತೇ ಮಹೇಶ್ವರಃ ।**
**ಪ್ರಕೃತ್ಯಾ ಪುರುಷಃ ಸಾರ್ಧಂ ಯುಗಾನ್ತಾಗ್ನಿಸಮಪ್ರಭಃ ॥೫॥**

ಇಲ್ಲಿಯೇ ಹಿಮವತ್ಪರ್ವತವಿದೆ. ಇದರ ಶಿಖರದಲ್ಲಿ ಪ್ರಳಯಕಾಲದ ಅಗ್ನಿಗೆ ಸಮಾನವಾದ ತೇಜಸ್ಸಿನಿಂದ ವಿಜೃಂಭಿಸುತ್ತಿರುವ ಪುರುಷಶ್ರೇಷ್ಠನಾದ ಮಹೇಶ್ವರನು–ಪ್ರಕೃತಿಸ್ವರೂಪಳಾದ ಉಮಾದೇವಿಯೊಡನೆ ಅನಾದಿಕಾಲದಿಂದಲೂ ವಾಸಮಾಡುತ್ತಿದ್ದಾನೆ.

**ನ ಸ ದೃಶ್ಯೋ ಮುನಿಗಣೈಸ್ತಥಾ ದೇವೈಃ ಸವಾಸವೈಃ ।**
**ಗನ್ಧರ್ವಯಕ್ಷಸಿದ್ಧೈರ್ವಾ ನರನಾರಾಯಣಾದೃತೇ ॥೬॥**

ಅನಾದಿಕಾಲದಿಂದಲೂ ಹಿಮವತ್ಪರ್ವತದ ಶಿಖರದಲ್ಲಿಯೇ ಉಮೆಯೊಡನಿರುವ ಮಹೇಶ್ವರನು, ನರ-ನಾರಾಯಣರನ್ನುಳಿದು–ಮತ್ತಾವ ಮುನಿಗಣಕ್ಕಾಗಲೀ, ಇಂದ್ರಪ್ರಮುಖರಾದ ದೇವತೆಗಳಿಗಾಗಲೀ, ಗಂಧರ್ವ-ಯಕ್ಷ-ಸಿದ್ಧರಿಗಾಗಲೀ ಗೋಚರನಾಗತಕ್ಕವನಲ್ಲ. ನರ-ನಾರಾಯಣರು ಮಾತ್ರವೇ ಇಚ್ಛಿಸಿದಾಗ ಉಮಾ-ಮಹೇಶ್ವರರನ್ನು ದರ್ಶನಮಾಡಬಲ್ಲರು.

**ಅತ್ರ ವಿಷ್ಣುಃ ಸಹಸ್ರಾಕ್ಷಃ ಸಹಸ್ರಚರಣೋಽವ್ಯಯಃ ।**
**ಸಹಸ್ರಶಿರಸಃ ಶ್ರೀಮಾನೇಕಃ ಪಶ್ಯತಿ ಮಾಯಯಾ ॥೭॥**

ಸಹಸ್ರಶೀರ್ಷನಾದ, ಸಹಸ್ರಾಕ್ಷನಾದ, ಸಹಸ್ರಚರಣನಾದ, ಅವ್ಯಯನಾದ, ಶ್ರೀಮಂತನಾದ ಮಹಾವಿಷ್ಣುವೊಬ್ಬನು ಮಾಯಾವಿಶಿಷ್ಟನಾದ ಮಹೇಶ್ವರನನ್ನು ಕಾಣುತ್ತಾನೆ.

ಈ ದಿಕ್ಕಿನಲ್ಲಿಯೇ ಬ್ರಾಹ್ಮಣರಿಗೆ ರಾಜನಾಗಿ ಚಂದ್ರನು ಪಟ್ಟಾಭಿಷಿಕ್ತನಾದನು. ಈ ದಿಕ್ಕಿನಲ್ಲಿಯೇ ಆಕಾಶದಿಂದ ಚ್ಯುತಳಾಗಿ ಕೆಳಗೆ ಬೀಳುತ್ತಿದ್ದ ಗಂಗಾದೇವಿಯನ್ನು ಮಹಾದೇವನು ಶಿರಸ್ಸಿನಲ್ಲಿ ಧಾರಣೆಮಾಡಿಕೊಂಡು ಅನಂತರದಲ್ಲಿ ಮನುಷ್ಯಲೋಕಕ್ಕೆ ಕಳುಹಿಸಿದನು. (ಜಟೆಯಲ್ಲಡಗಿದ್ದ ಗಂಗಾದೇವಿಯು ಭೂಲೋಕದಲ್ಲಿ ಹರಿಯತೊಡಗಿದಳು.) ಮಹೇಶ್ವರನನ್ನು ಪತಿಯನ್ನಾಗಿ ಪಡೆಯುವ ಅಪೇಕ್ಷೆಯಿಂದ ಉಮಾದೇವಿಯು ಇಲ್ಲಿಯೇ ಘೋರವಾದ ತಪಸ್ಸನ್ನು ಮಾಡಿದಳು. ಮಹಾದೇವನನ್ನು ವ್ಯಾಮೋಹಗೊಳಿಸಲು ಕಾಮದೇವನೂ ಇಲ್ಲಿಗೆ ಆಗಮಿಸಿದನು. ಕಾಮದೇವನ ಪುಷ್ಪಬಾಣಗಳ ಪ್ರಹಾರದಿಂದಾಗಿ ಮಹೇಶ್ವರನು ರುಷ್ಟನಾದನು. ಆ ಸಮಯದಲ್ಲಿ ಹಿಮವಂತ ಮತ್ತು ಉಮಾದೇವಿ ಇಬ್ಬರೂ ಇಲ್ಲಿಯೇ ಇದ್ದರು. ಈ ಉತ್ತರ ದಿಕ್ಕಿನಲ್ಲಿಯೇ ಗಂಧರ್ವ-ಯಕ್ಷ-ರಾಕ್ಷಸರ ಅಧಿಪತಿಯಾಗಿ ಕುಬೇರನು ಅಭಿಷಿಕ್ತನಾದನು. ಈ ಉತ್ತರದಿಕ್ಕಿನಲ್ಲಿಯೇ ಚೈತ್ರರಥವೆಂಬ ಉದ್ಯಾನವನವಿದೆ. ವೈಖಾನಸಮಹರ್ಷಿಗಳ ಆಶ್ರಮವಿದೆ. ಈ ದಿಕ್ಕಿನಿಂದಲೇ ಮಂದಾಕಿನೀ ನದಿಯು ಹುಟ್ಟಿ ಹರಿಯುತ್ತದೆ. ಮಂದರಪರ್ವತವೂ ಈ ದಿಕ್ಕಿನಲ್ಲಿಯೇ ಇದೆ. ಇಲ್ಲಿ ರಾಕ್ಷಸರಿಂದ ಅಭಿರಕ್ಷಿತವಾದ ಸೌಗಂಧಿಕವನವಿದೆ.

**ಶಾದ್ವಲಂ ಕದಲೀಸ್ಕನ್ಧಮತ್ರ ಸಂತಾನಕಾ ನಗಾಃ ।**
**ಅತ್ರ ಸಂಯಮನಿತ್ಯಾನಾಂ ಸಿದ್ಧಾನಾಂ ಸ್ವೈರಚಾರಿಣಾಮ್ ॥೧೩॥**

ಈ ಉತ್ತರದಿಕ್ಕಿನಲ್ಲಿ ಹಚ್ಚಹಸಿರಾದ ಚಿಗುರುಹುಲ್ಲಿನ ಮೈದಾನ ಪ್ರದೇಶವಿದೆ. *ವೈಜಯಂತೀಧ್ವಜಸ್ತಂಭವಿದೆ. 'ಸಂತಾನಕ' ಎಂಬ ದೇವತಾವೃಕ್ಷಗಳಿವೆ. ಧ್ಯಾನ-ಧಾರಣಾದಿಗಳಿಂದ ಅವಿರತರಾದ, ಸ್ವೇಚ್ಛಾ ಸಂಚಾರಿಗಳಾದ ಸಿದ್ಧರ (ಸಂಯಮಶೀಲರಾದ ದೇವತಾವಿಶೇಷಗಳ) ಮನೋನುಕೂಲವಾದ, ಅವರಿಚ್ಛಿಸಬಹುದಾದ ಎಲ್ಲ ಭೋಗವಸ್ತುಗಳಿಂದಲೂ ಸುಸಂಪನ್ನವಾಗಿರುವ ವಿಮಾನಗಳೂ ಈ ಪ್ರದೇಶದಲ್ಲಿ ಸಂಚರಿಸುತ್ತಿರುತ್ತವೆ. ಈ ದಿಕ್ಕಿನಲ್ಲಿಯೇ ಸಪ್ತರ್ಷಿಗಳೂ ಮತ್ತು ಅರುಂಧತೀದೇವಿಯೂ ನಕ್ಷತ್ರ ರೂಪದಲ್ಲಿದ್ದಾರೆ. ಇಲ್ಲಿಯೇ ಸ್ವಾತೀನಕ್ಷತ್ರವೂ ಇದೆ. ಈ ಉತ್ತರದಿಕ್ಕಿನಲ್ಲಿ ಯಜ್ಞವನ್ನಾರಂಭಿಸಿದ ಪಿತಾಮಹನು ಇಲ್ಲಿಯೇ ಸುಸ್ಥಿರನಾಗಿ ನೆಲೆಸಿಬಿಟ್ಟಿದ್ದಾನೆ. ಈ ದಿಕ್ಕಿನಲ್ಲಿ ಚಂದ್ರ-ಸೂರ್ಯರೂ ಮತ್ತು ನಕ್ಷತ್ರಗಳೂ ಅನುದಿನವೂ ಪರಿಭ್ರಮಿಸುತ್ತಾರೆ. ಗಾಲವ! ಉತ್ತರದಿಕ್ಕಿನಲ್ಲಿಯೇ ಗಂಗಾ ಮಹಾದ್ವಾರವಿದೆ. ಈ ಗಂಗಾಮಹಾದ್ವಾರವನ್ನು ಧಾಮ ಎಂಬ ಹೆಸರಿನ ಸತ್ಯವಾದಿಗಳಾದ, ಮಹಾತ್ಮರಾದ ಮುನಿಗಳು ಸಂರಕ್ಷಿಸುತ್ತಿದ್ದಾರೆ. ಆದರೆ ಇವರ ಶರೀರಗಳು ಹೇಗಿವೆ? ಇವರು ಎಲ್ಲಿ ತಪಸ್ಸುಮಾಡುತ್ತಾರೆ? ಯಾವಾಗ ತಪಸ್ಸುಮಾಡುತ್ತಾರೆ? ಎಷ್ಟು ವರ್ಷಗಳ ಕಾಲ ಇವರು ತಪಸ್ಸು

---

*ಶಾದ್ವಲಂ ಕದಲೀಸ್ಕನ್ದಂ : ಕದಲೀಸ್ಕನ್ದಂ-ಎಂಬ ಪದಕ್ಕೆ ಅರ್ಥಮಾಡುವುದು ಸ್ವಲ್ಪ ಕಷ್ಟವೇ ಸರಿ. ಒಬ್ಬರು ಕದಲೀವನವೆಂದು ಅರ್ಥಮಾಡಿದ್ದಾರೆ. ಆದರೆ ಸ್ಕಂದಶಬ್ದಕ್ಕೆ ವನಾರ್ಥವು ಎಲ್ಲಿಯೂ ಕಂಡುಬರುವುದಿಲ್ಲ. ಕದಲೀ ಎಂಬುದಕ್ಕೆ ವ್ಯಾಖ್ಯಾನಕಾರರು ವೈಜಯನ್ತೀಪತಾಕಾ, ತಸ್ಯಾಃ ಸ್ಕನ್ದವದುಚ್ಛ್ರಿತಂ, ವೈಜಯಂತೀಪತಾಕೆಯ ದಂಡದಂತೆ ಅಥವಾ ಧ್ವಜಸ್ತಂಭದಂತೆ ಉದ್ದವಾದ–ಎಂದು ವಿಶೇಷಣ ಮಾಡಿದ್ದಾರೆ. ಯಾವುದಕ್ಕಿದು ವಿಶೇಷಣವೆಂಬುದನ್ನು ನಿರೂಪಿಸಿಲ್ಲ. ಆದುದರಿಂದ ಕದಲೀ ಎಂಬುದಕ್ಕೆ ವೈಜಯನ್ತೀಧ್ವಜವೆಂದೇ ಅರ್ಥಮಾಡಿ ಕದಲೀಸ್ಕನ್ಧವೆಂಬುದಕ್ಕೆ ವೈಜಯನ್ತೀಧ್ವಜಸ್ತಂಭ ಎಂದು ಅರ್ಥಮಾಡಲಾಗಿದೆ.

ಶಾದ್ವಲಂ ಕದಲೀಸ್ಪರ್ಶಂ–ಎಂದು ಮತ್ತೊಂದು ಪಾಠಾಂತರವಿದೆ. 'ಜಿಂಕೆಯ ಸ್ಪರ್ಶದಂತೆ ಹೆಚ್ಚು ನವುರಾದ ಸ್ಪರ್ಶಸುಖವನ್ನು ಕೊಡುವ ಗರಿಕೇಹುಲ್ಲಿನ ಮೈದಾನವು ಈ ಉತ್ತರದಿಕ್ಕಿನಲ್ಲಿದೆ' ಎಂದು ಇದಕ್ಕೆ ಅರ್ಥಮಾಡಬಹುದಾಗಿದೆ.

ಮಾಡಿದರು?–ಎಂಬ ಯಾವ ಅಂಶಗಳೂ ಯಾರಿಗೂ ತಿಳಿಯವು. ಸಾವಿರಾರು ಯುಗಗಳ ಪರ್ಯಂತವಾಗಿಯೂ ಸಹ ಇವರು ತಮ್ಮ ಆಯುಷ್ಯವನ್ನು ತಮ್ಮ ಇಚ್ಛಾನುಸಾರವಾಗಿ ಹೆಚ್ಚಿಸಿಕೊಳ್ಳುತ್ತಲೇ ಇದ್ದಾರೆ. ಈ ಗಂಗಾದ್ವಾರದಿಂದ ಮುಂದಕ್ಕೆ ಮನುಷ್ಯನು ಹೇಗೆ ಹೋಗುತ್ತಾನೆಯೋ ಹಾಗೆಯೇ ಅವನು ಹಿಮದಲ್ಲಿ ವಿಲೀನನಾಗಿಬಿಡುತ್ತಾನೆ. ಸಾಕ್ಷಾತ್ ಭಗವಾನ್ ನಾರಾಯಣ ಮತ್ತು ಜಯಶೀಲನಾದ ನರ–ಈ ಇಬ್ಬರನ್ನು ಬಿಟ್ಟು ಬೇರೆ ಯಾರೂ ಈ ಮಾರ್ಗವಾಗಿ ಮುಂದೆ ಹೋಗಿರುವುದಿಲ್ಲ. ಗಂಗಾದ್ವಾರದಿಂದ ಮುಂದೆ ಹೋದರೆ ಇದೇ ದಿಕ್ಕಿನಲ್ಲಿಯೇ ಕೈಲಾಸಪರ್ವತವಿದೆ. ಇದು ಕುಬೇರನ ಸ್ಥಾನವೂ ಆಗಿರುತ್ತದೆ. ಈ ದಿಕ್ಕಿನಲ್ಲಿಯೇ ವಿದ್ಯುತ್ಪ್ರಭಾ ಎಂಬ ಹೆಸರಿನ ಹತ್ತು ಮಂದಿ ಅಪ್ಸರೆಯರು ಪ್ರಾದುರ್ಭವಿಸಿದರು. ಮೂರು ಲೋಕಗಳನ್ನೂ ತನ್ನ ಪಾದಗಳಿಂದ ಅಳೆಯಲು ಹೋದ ವಿಷ್ಣುವು ಈ ಉತ್ತರದಿಕ್ಕಿನಲ್ಲಿಯೇ ತನ್ನ ಮೊದಲನೆಯ ಕಾಲನ್ನಿಟ್ಟನು. ಹೀಗೆ ಅಳೆಯಲು ಹೋಗಿ ಮಹಾವಿಷ್ಣುವು ವಿಷ್ಣುಪದವೆಂಬ ಸ್ಥಾನವನ್ನಿಲ್ಲಿ ಕಲ್ಪಿಸಿದ್ದಾನೆ. ತ್ರಿವಿಕ್ರಮಾವತಾರವನ್ನು ಧರಿಸಿದಾಗ ಅವನಿಟ್ಟ ಮೊದಲನೆಯ ಹೆಜ್ಜೆಯು ಈಗಲೂ ಈ ಉತ್ತರದಿಕ್ಕಿನಲ್ಲಿ ಹಾಗೆಯೇ ಇದೆ. ಇದನ್ನು ವಿಷ್ಣುಪದವೆಂದೇ ಕರೆಯುತ್ತಾರೆ. ಈ ಉತ್ತರದಿಕ್ಕಿನಲ್ಲಿಯೇ ಉಶೀರಬೀಜವೆಂಬ ಒಂದು ಸ್ಥಾನವಿದೆ. ಇಲ್ಲಿ ಜಾಂಬೂನದವೆಂಬ ಸರೋವರವಿದೆ. ಇಲ್ಲಿಯೇ ಮರುತ್ತರಾಜನು ಯಜ್ಞದಿಂದ ದೇವತೆಗಳನ್ನು ತೃಪ್ತಿಪಡಿಸಿದನು. ಸಾಕ್ಷಾತ್ ಹಿಮವಂತನ ಪವಿತ್ರವಾದ ಮತ್ತು ನಿರ್ಮಲವಾದ ಸುವರ್ಣನಿಧಿಯು–ತಪಸ್ಸುಮಾಡುತ್ತಿದ್ದ, ವಿಪ್ರರ್ಷಿಯಾದ, ಮಹಾತ್ಮನಾದ ಜೀಮೂತನ ಸಮೀಪಕ್ಕೆ ಹೋಗಿ ನಿಂತುಕೊಂಡಿತು. (ತಪಸ್ಸುಮಾಡುತ್ತಿದ್ದ ಜೀಮೂತನಿಗೆ ಸ್ವರ್ಣನಿಧಿಯೇ ಇಲ್ಲಿ ಸಿಕ್ಕಿತು.) ಸ್ವರ್ಣನಿಧಿಯು ತನ್ನ ಸಮೀಪಕ್ಕೆ ಬರಲಾಗಿ ಮಹರ್ಷಿಯು ಆ ಸ್ವರ್ಣನಿಧಿಯೆಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡಿ ಸದುಪಯೋಗಮಾಡಿದನು. ಅದಕ್ಕೆ ಪ್ರತಿಯಾಗಿ ಜೀಮೂತನು ಬ್ರಾಹ್ಮಣರಿಂದ 'ನಾನು ದಾನಮಾಡಿರುವ ಸುವರ್ಣವು ನನ್ನ ಹೆಸರಿನಿಂದಲೇ ಪ್ರಸಿದ್ಧಿಹೊಂದಬೇಕು' ಎಂದು ಒಂದೇ ಒಂದು ವರವನ್ನು ಬೇಡಿದನು. ಬ್ರಾಹ್ಮಣರು 'ತಥಾಸ್ತು' ಎಂದರು.

ಅಂದಿನಿಂದ ಸುವರ್ಣಕ್ಕೆ ಜೈಮೂತವೆಂದೂ ಹೆಸರಾಯಿತು. ಗಾಲವ! ಉತ್ತರದಿಕ್ಕಿನಲ್ಲಿ ಅಷ್ಟದಿಕ್ಪಾಲಕರೂ ಪ್ರಾತಃಕಾಲ-ಸಾಯಂಕಾಲಗಳಲ್ಲಿ ಒಟ್ಟಾಗಿ ಸೇರಿ ನಿಂತು 'ಕಸ್ಯ ಕಾರ್ಯಂ ಕಿಂ'–'ಯಾರಿಗೆ ಯಾವ ಕೆಲಸವಾಗಬೇಕಾಗಿದೆ?'– ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಾರೆ.

**ಏವಮೇಷಾ ದ್ವಿಜಶ್ರೇಷ್ಠ ಗುಣೈರನ್ಯೈರ್ದಿಗುತ್ತರಾ ।**
**ಉತ್ತರೇತಿ ಪರಿಖ್ಯಾತಾ ಸರ್ವಕರ್ಮಸು ಚೋತ್ತರಾ ॥೨೬॥**

ದ್ವಿಜಶ್ರೇಷ್ಠನೇ! ಈ ಎಲ್ಲ ಕಾರಣಗಳಿಂದ ಇತರ ದಿಕ್ಕುಗಳಲ್ಲಿರುವ ಗುಣಗಳಿಗಿಂತಲೂ ಈ ಉತ್ತರದಿಕ್ಕಿನ ಗುಣಗಳು ಅಧಿಕವಾಗಿರುವುದರಿಂದಲೂ ಸಮಸ್ತಶುಭಕರ್ಮಗಳಿಗೂ ಈ ದಿಕ್ಕೇ ಶ್ರೇಷ್ಠವಾಗಿರುವುದರಿಂದಲೂ ಇದು 'ಉತ್ತರಾ' ಎಂಬ ಅನ್ವರ್ಥನಾಮವನ್ನೇ ಪಡೆದುಕೊಂಡಿದೆ.

ಈ ಪ್ರಕಾರವಾಗಿ ನಾನು ನಿನಗೆ ದಿಕ್ಕುಗಳ ಗುಣಗಳೆಲ್ಲವನ್ನೂ ಅನುಕ್ರಮವಾಗಿ ಸವಿಸ್ತರವಾಗಿ ಹೇಳಿರುತ್ತೇನೆ. ಈ ನಾಲ್ಕು ದಿಕ್ಕುಗಳಲ್ಲಿ ನೀನು ನಿನ್ನ ಕಾರ್ಯಸಿದ್ಧಿಗಾಗಿ ಯಾವ ದಿಕ್ಕನ್ನು ಕುರಿತು ಪ್ರಯಾಣ ಮಾಡಲಿಚ್ಛಿಸುವೆ? ನಾನು ನಿನಗೆ ಅಖಂಡಭೂಮಂಡಲವನ್ನೂ ತೋರಿಸಲು ಸಿದ್ಧನಾಗಿದ್ದೇನೆ. ಆದುದರಿಂದ ನೀನೀಗಲೇ ನನ್ನ ಮೇಲೆ ಹತ್ತಿ ಕುಳಿತುಕೋ."

೧೧೧ನೆಯ ಅಧ್ಯಾಯವು ಮುಗಿಯಿತು.

೧೧೨ನೆಯ ಅಧ್ಯಾಯ ಭಗವದ್ಯಾನಪರ್ವ (ಮುಂದುವರಿದಿದೆ.)

## ಗಾಲವನು ಗರುಡನ ಮೇಲೆ ಕುಳಿತು ಪೂರ್ವದಿಕ್ಕಿಗೆ ಪ್ರಯಾಣಮಾಡಿದುದು : ಗರುಡನ ವೇಗದಿಂದಾಗಿ ಗಾಲವನು ವ್ಯಾಕುಲಿತನಾದುದು

ಗರುಡನು ಹೇಳಿದ ಮಾತನ್ನು ಕೇಳಿ ಗಾಲವನು ಹೇಳಿದನು :

**ಗರುತ್ಮನ್ಭುಜಗೇನ್ದ್ರಾರೇ ಸುಪರ್ಣ ವಿನತಾತ್ಮಜ ।**
**ನಯ ಮಾಂ ತಾರ್ಕ್ಷ್ಯ ಪೂರ್ವೇಣ ಯತ್ರ ಧರ್ಮಸ್ಯ ಚಕ್ಷುಷೀ ॥೧॥**

"ಪ್ರಶಸ್ತವಾದ ರೆಕ್ಕೆಗಳುಳ್ಳವನೇ! ಸರ್ಪರಾಜನ ಶತ್ರುವೇ! ಸುಪರ್ಣನೇ! ವಿನತಾಪುತ್ರನೇ! ತಾರ್ಕ್ಷ್ಯ! ಯಾವ ದಿಕ್ಕಿನಲ್ಲಿ ಧರ್ಮಕ್ಕೆ

ನೇತ್ರಸ್ವರೂಪರಾದ ಸೂರ್ಯ-ಚಂದ್ರರು ಪ್ರಕಾಶಿಸುತ್ತಿರುವರೋ (ವ್ಯಾಖ್ಯಾನಕಾರರ ಪ್ರಕಾರ : ಅಗ್ನೀಷೋಮರು ಪ್ರಕಾಶಿಸುತ್ತಿರುವರೋ) ಅಂತಹ ಪೂರ್ವದಿಕ್ಕಿಗೆ ನನ್ನನ್ನು ಕರೆದುಕೊಂಡುಹೋಗು.

ನೀನು ಯಾವ ದಿಕ್ಕಿನ ವಿಷಯವಾಗಿ ಮೊದಲು ವರ್ಣನೆಮಾಡಿದೆಯೋ ಅಂತಹ ಪೂರ್ವದಿಕ್ಕಿಗೆ ಮೊದಲು ನನ್ನನ್ನು ಕರೆದುಕೊಂಡುಹೋಗು. ಅಲ್ಲಿ ದೇವತೆಗಳ ಸಾನ್ನಿಧ್ಯವು ಸರ್ವದಾ ಇರುವುದೆಂದು ನೀನು ಹೇಳಿರುವೆ. ಅಲ್ಲಿ ಸತ್ಯ ಮತ್ತು ಧರ್ಮಗಳು ಸುಪ್ರತಿಷ್ಠಿತವಾಗಿವೆಯೆಂದೂ ಹೇಳಿರುವೆ. ಅರುಣಾನುಜನೇ! ನಾನು ಅಲ್ಲಿರುವ ಎಲ್ಲ ದೇವತೆಗಳನ್ನೂ ಸಂಧಿಸಲು ಮತ್ತು ಸಂದರ್ಶಿಸಲು ಇಚ್ಛಿಸಿದ್ದೇನೆ.”

ಹೀಗೆ ಹೇಳಿದ ಗಾಲವನನ್ನು ಕುರಿತು ಗರುಡನು– ‘ಆರೋಹಸ್ವ’ ‘ನನ್ನ ಮೇಲೆ ಕುಳಿತುಕೋ’–ಎಂದು ಹೇಳಿದನು. ಗರುಡನ ಮಾತಿನಂತೆ ಗಾಲವನು ಅವನ ಮೇಲೆ ಕುಳಿತುಕೊಂಡನು. ಗರುಡನು ರಭಸದಿಂದ ಹಾರಲು ಉಪಕ್ರಮಿಸಿದನಂತರ ಗರುಡನನ್ನು ಕುರಿತು ಗಾಲವನು ಹೇಳಿದನು :

**ಕ್ರಮಮಾಣಸ್ಯ ತೇ ರೂಪಂ ದೃಶ್ಯತೇ ಪನ್ನಗಾಶನ ।**
**ಭಾಸ್ಕರಸ್ಯೇವ ಪೂರ್ವಾಹ್ಣೇ ಸಹಸ್ರಾಂಶೋರ್ವಿವಸ್ವತಃ ॥೫॥**

“ಪನ್ನಗಾಶನನೇ! ಆಕಾಶದಲ್ಲಿ ಹಾರುತ್ತಿರುವಾಗ ನಿನ್ನ ರೂಪವು ಪ್ರಾತಃಕಾಲದಲ್ಲಿ ಉದಯಿಸಿದ ಸಹಸ್ರಾಂಶುವಾದ ವಿವಸ್ವಂತನ ಅಥವಾ ಭಾಸ್ಕರನ ರೂಪದಂತೆಯೇ ಕಾಣುತ್ತಿದೆ. ಈಗ ನೀನು ಸಾಕ್ಷಾತ್ ಬಾಲ ಸೂರ್ಯನಂತೆಯೇ ಪ್ರಕಾಶಿಸುತ್ತಿರುವೆ.

ನೀನು ನಿನ್ನ ರೆಕ್ಕೆಗಳನ್ನು ಬಡಿಯುವಾಗ ಉಂಟಾದ ಗಾಳಿಯ ವೇಗದಿಂದ ಅನೇಕವೃಕ್ಷಗಳು ಬುಡಮೇಲಾಗುವುದು ಮಾತ್ರವಲ್ಲದೇ–ಪಕ್ಷಗಳಿಂದ ಉದ್ಭೂತವಾದ ಗಾಳಿಯಿಂದಲೇ ಸೆಳೆಯಲ್ಪಟ್ಟುವುಗಳಾಗಿ ನಮ್ಮೊಡನೆಯೇ ಬರುತ್ತಿವೆ. ಇದನ್ನು ನೋಡಿದ ನನಗೆ ಅವುಗಳೂ ನಮ್ಮೊಡನೆ ಹಾರಿಕೊಂಡು ಹೊರಟುಬಿಟ್ಟಿವೆಯೋ ಎಂಬಂತೆಯೇ ಕಾಣುತ್ತದೆ. ಇಷ್ಟು ಮಾತ್ರವಲ್ಲ, ಗರುಡ! ನಿನ್ನ ರೆಕ್ಕೆಗಳಿಂದ ಉದ್ಭೂತವಾಗುವ ಚಂಡ ಮಾರುತದಿಂದ ಸಮುದ್ರದ ಜಲರಾಶಿಯಿಂದಲೂ, ಗಿರಿ-ದುರ್ಗ-ಪರ್ವತ

ಗಳಿಂದಲೂ, ವನ-ಕಾನನಗಳಿಂದಲೂ ಪರಿವೃತಳಾದ ಈ ಭೂಮಿಯನ್ನೇ ನೀನು ಆಕರ್ಷಿಸುತ್ತಿರುವೆಯೋ ಎಂಬಂತೆ ನನಗೆ ಭಾಸವಾಗುತ್ತಿದೆ. ನೀನು ಸಮುದ್ರದ ಮೇಲೆ ಹಾರುತ್ತಿರುವಾಗ ಮೀನು, ನೀರಾನೆ ಮತ್ತು ಮೊಸಳೆಗಳಿಂದ ಕೂಡಿರುವ ಸಮುದ್ರದ ನೀರು ನಿನ್ನ ರೆಕ್ಕೆಗಳ ಝಂಝಾವಾತಕ್ಕೆ ಸಿಕ್ಕಿ (ಅಲೆಯ ರೂಪವಾಗಿ) ಆಕಾಶದ ಕಡೆಗೆ ಪದೇ ಪದೇ ಸೆಳೆಯಲ್ಪಡುತ್ತಿರುತ್ತದೆ. ನಿನ್ನ ರೆಕ್ಕೆಗಳ ಬಡಿತದಿಂದ ಉದ್ಭೂತವಾದ ಚಂಡಮಾರುತದಿಂದ ಆಕಾಶದ ಕಡೆಗೆ ಸೆಳೆಯಲ್ಪಡುವ ಸಮುದ್ರದ ನೀರಿನಲ್ಲಿ ನಾನು ಒಂದೇ ಆಕಾರದ ಮೀನುಗಳನ್ನೂ, ತಿಮಿ-ತಿಮಿಂಗಿಲಗಳನ್ನೂ, ಆನೆ-ಕುದುರೆ ಮತ್ತು ಮನುಷ್ಯರ ಮುಖಗಳನ್ನು ಹೊಂದಿರುವ ಪ್ರಾಣಿಗಳನ್ನೂ ಕಾಣುತ್ತಿದ್ದೇನೆ. ಇವೆಲ್ಲವೂ ಪೀಡಿತವಾದುವುಗಳಂತೆ ನನಗೆ ಕಾಣುತ್ತಿದೆ.

ನಿನ್ನ ರೆಕ್ಕೆಗಳ ಬಡಿತದಿಂದುಂಟಾದ ಚಂಡಮಾರುತದಿಂದ ಮೇಲಕ್ಕೆ ಅಲೆಗಳ ರೂಪದಲ್ಲಿ ಸೆಳೆಯಲ್ಪಟ್ಟ ಸಮುದ್ರರಾಜನ ಭೋರ್ಗರೆಯುವ ಶಬ್ದಗಳಿಂದ ನನ್ನೆರಡು ಕಿವಿಗಳೂ ಕಿವುಡಾಗಿಬಿಟ್ಟಿವೆ. ಈ ಸಮಯದಲ್ಲಿ ನನಗೆ ಯಾವುದೂ ಕೇಳಿಸುತ್ತಲೂ ಇಲ್ಲ. ಮುಂದೇನಿರುವುದೆಂಬುದು ಕಾಣಿಸುತ್ತಲೂ ಇಲ್ಲ. ನಾನೆಲ್ಲಿಗೆ ಹೋಗುತ್ತಿದ್ದೇನೆ? ಏಕೆ ಹೋಗುತ್ತಿದ್ದೇನೆ?–ಎಂಬುದೇ ನನಗೆ ಮರೆತುಹೋಗಿದೆ. ನಾನಿನ್ನು ಉಳಿಯಲಾರೆನೆಂದು ಭಯವಾಗುತ್ತಿದೆ. ನಾನೇನಾದರೂ ಪ್ರಾಣತೊರೆದರೆ ನಿನಗೆ ಬ್ರಹ್ಮಹತ್ಯಾದೋಷವು ಬಂದುಬಿಡುತ್ತದೆ. ಇದನ್ನು ಸ್ಮರಿಸಿಯಾದರೂ ನೀನು ಸ್ವಲ್ಪ ನಿಧಾನವಾಗಿ ಹೋಗು, ಗರುಡ! ಈಗ ನನಗೆ ಸೂರ್ಯನೂ ಕಾಣುತ್ತಿಲ್ಲ ; ದಿಕ್ಕುಗಳೂ ಕಾಣುತ್ತಿಲ್ಲ. ಆದರೆ ನಿನ್ನ ಕಣ್ಣುಗಳು ಮಾತ್ರ ಉತ್ತಮಜಾತಿಯ ಎರಡು ರತ್ನಗಳಂತೆ ಫಳ-ಫಳನೆ ಹೊಳೆಯುತ್ತಿರುವುದನ್ನು ಕಾಣುತ್ತಿದ್ದೇನೆ, ಅಂಡಜ! ನಿನ್ನ ಶರೀರವನ್ನು ನೋಡದಿರುವುದು ಮಾತ್ರವಲ್ಲ, ನನ್ನ ಶರೀರವನ್ನೇ ನಾನು ಕಂಡುಕೊಳ್ಳುತ್ತಿಲ್ಲ. ನನ್ನ ಶರೀರವೂ ನನಗೆ ಕಾಣಿಸದಾಗಿದೆ. ಆದರೆ ಪದೇ-ಪದೇ ನಿನ್ನ ಶರೀರದಿಂದ ಹುಟ್ಟುತ್ತಿರುವ ಅಗ್ನಿಯನ್ನು ಮಾತ್ರ ಕಾಣುತ್ತಿದ್ದೇನೆ. ವೈನತೇಯ! ನಿನ್ನ ಶರೀರದಿಂದ ಹುಟ್ಟುತ್ತಿರುವ ಅಗ್ನಿಯನ್ನು ಬೇಗ ಶಮನಗೊಳಿಸು. ನಿನ್ನ

ಕಣ್ಣುಗಳ ಪ್ರಕಾಶವಂತೂ ನೋಡಲಶಕ್ಯವಾಗಿದೆ. ಅದನ್ನೂ ಶಾಂತಗೊಳಿಸು. ನಿನ್ನ ಗಮನದಲ್ಲಿರುವ ಈ ವೇಗವನ್ನು ಕಡಿಮೆಮಾಡು. ಪನ್ನಗಾಶನನೇ! ನಿನ್ನ ಈ ವೇಗಪ್ರಯಾಣದಿಂದ ನನಗಾವ ಪ್ರಯೋಜನವೂ ಇಲ್ಲ. ಆದುದರಿಂದ ಕೂಡಲೇ ಹಿಂದಿರುಗು. ನಾನು ನಿನ್ನ ಈ ವೇಗವನ್ನು ಸಹಿಸಿಕೊಳ್ಳಲು ಅಸಮರ್ಥನಾಗಿದ್ದೇನೆ. ಈಗ ನನಗೆ ಬೇಕಾಗಿರುವುದು ಇಷ್ಟೆ : ಶುಭ್ರವಾಗಿ ಚಂದ್ರನಿಗೆ ಸಮಾನವಾದ ಕಾಂತಿಯಿಂದ ಕೂಡಿರಬೇಕು.; ಅವುಗಳಿಗಿರುವ ಎರಡು ಕಿವಿಗಳಲ್ಲಿ ಒಂದು ಕಿವಿಯು ಮಾತ್ರ ಕಪ್ಪುಛಾಯೆಯಿಂದ ಕೂಡಿರಬೇಕು–ಅಂತಹ ಎಂಟು ನೂರು ಕುದುರೆಗಳನ್ನು ಗುರುದಕ್ಷಿಣೆಯಾಗಿ ಕೊಡುವೆನೆಂದು ನಾನು ಗುರುಗಳಿಗೆ ಪ್ರಮಾಣವಚನವನ್ನಿತ್ತಿದ್ದೇನೆ. ಆದರೆ ಅವುಗಳನ್ನು ಹುಡುಕಿ ತರುವ ಕಾರ್ಯವು ಫಲಪ್ರದವಾಗುವ ಮಾರ್ಗವನ್ನೇ ನಾನು ಕಾಣೆನಾಗಿದ್ದೇನೆ. ಆದುದರಿಂದ ನಾನು ಜೀವಿತತ್ಯಾಗವೆಂಬ ಒಂದೇ ಒಂದು ಮಾರ್ಗವನ್ನು ಕಂಡುಕೊಂಡಿರುತ್ತೇನೆ. (ಕುದುರೆಗಳನ್ನು ತಂದು ಗುರುಗಳಿಗೊಪ್ಪಿಸುವುದರಲ್ಲಿ ಅಶಕ್ತನಾದ ನನಗೆ ಉಳಿದಿರುವುದು ಪ್ರಾಣಾರ್ಪಣೆಯೊಂದೇ.)

**ನೈವ ಮೇಽಸ್ತಿ ಧನಂ ಕಿಂಚಿನ್ನ ಧನೇನಾನ್ವಿತಃ ಸುಹೃತ್ ।**
**ನ ಚಾರ್ಥೇನಾಪಿ ಮಹತಾ ಶಕ್ಯಮೇತದ್ವ್ಯಪೋಹಿತುಮ್ ॥೧೯॥**

ನನ್ನ ಬಳಿಯಲ್ಲಾದರೋ ಕಿಂಚಿತ್ತಾದರೂ ಹಣವಿಲ್ಲ. ಅಪಾರಧನವಿರುವ ಸ್ನೇಹಿತನೂ ನನಗಿರುವುದಿಲ್ಲ. ಮೇಲಾಗಿ ಅಪಾರಧನದಿಂದಲೂ ಈ ಕಾರ್ಯವು ಸಾಧಿತವಾಗುವುದಿಲ್ಲ."

ಇವೇ ಮುಂತಾಗಿ ಬಹುದೈನ್ಯದ ಮಾತುಗಳನ್ನು ಗಾಲವನು ಹೇಳುತ್ತಿದ್ದರೂ ವೈನತೇಯನು ಗಾಲವನ ಮಾತಿನಂತೆ ಪ್ರಯಾಣವನ್ನು ನಿಲ್ಲಿಸದೇ ಮುಂದೆ ಮುಂದೆ ಹಾರುತ್ತಲೇ ನಸುನಗುತ್ತಾ ಗಾಲವನನ್ನು ಕುರಿತು ಹೇಳಿದನು :

**ನಾತಿಪ್ರಜ್ಞೋಽಸಿ ವಿಪ್ರರ್ಷೇ ಯೋಽತ್ಮಾನಂ ತ್ಯಕ್ತುಮಿಚ್ಛಸಿ ।**
**ನ ಚಾಪಿ ಕೃತ್ರಿಮಃ ಕಾಲಃ ಕಾಲೋ ಹಿ ಪರಮೇಶ್ವರಃ ॥೨೦॥**

"ವಿಪ್ರರ್ಷಿಯೇ! ಆತ್ಮಹತ್ಯವನ್ನು ಮಾಡಿಕೊಳ್ಳಲಿಚ್ಛಿಸಿರುವ ನೀನು ನಿಶ್ಚಯವಾಗಿಯೂ ಬುದ್ಧಿವಂತನಲ್ಲ. ಮೃತ್ಯುವಾದರೂ ಕೃತ್ರಿಮವಾಗಿ

ಬರತಕ್ಕುದಲ್ಲ. (ಜನನ-ಮರಣಗಳು ಅವರವರು ಇಚ್ಛಿಸಿದಂತೆ ಲಭ್ಯವಾಗ ತಕ್ಕುವುಗಳಲ್ಲ.) ಕಾಲವು ಪರಮೇಶ್ವರಸ್ವರೂಪವಾಗಿದೆ.

('ನಾವು ಹುಟ್ಟುವುದು ನಮ್ಮ ಇಚ್ಛೆಯಿಂದಲ್ಲ. ನಮ್ಮ ಹುಟ್ಟಿನಲ್ಲಿ ನಮ್ಮ ಕೈವಾಡವಿಲ್ಲ' ಎಂಬುದನ್ನು ಅನೇಕರು ಒಪ್ಪುವರು. ಆದರೆ ಮರಣವೂ ನಮ್ಮ ಕೈಯ್ಯಲ್ಲಿಲ್ಲ ಎಂಬುದನ್ನು ಕೆಲವರಾದರೂ ಒಪ್ಪದಿರಬಹುದು. ದಿನ ಬೆಳಗಾದರೆ ಆತ್ಮಹತ್ಯೆಮಾಡಿಕೊಂಡವರ ವಾರ್ತೆಯನ್ನು ಕೇಳುತ್ತಿರುವುದೇ ಇದಕ್ಕೆ ಕಾರಣ. ಆದರೆ ಆತ್ಮಹತ್ಯೆಯೂ ಸುಲಭವಲ್ಲ. ಇದು ಅನೇಕ ವೇಳೆಯಲ್ಲಿ ನೈಜವಾದ ಸ್ವೇಚ್ಛೆಯಿಂದ ಕೂಡಿರುವುದಿಲ್ಲ. ಪ್ರಾಣಹತ್ಯೆಮಾಡಿಕೊಳ್ಳಲು ಪ್ರಯತ್ನಿಸಿದ ಅನೇಕರು ಬದುಕಿರುವುದನ್ನೂ ನಾವು ಕೇಳಿದ್ದೇವೆ. ಆತ್ಮಹತ್ಯೆ ಮತ್ತು ಆಕಸ್ಮಿಕಗಳಿಂದ ಪ್ರಾಣಬಿಡುವುದೂ ಒಂದು ದುರ್ಯೋಗವೆಂದೇ ತಿಳಿದವರು ಹೇಳುತ್ತಾರೆ. ಕೇವಲ ಅತ್ಯಲ್ಪ ಕಾರಣಕ್ಕಾಗಿ ಪ್ರಾಣಹತ್ಯೆಮಾಡಿಕೊಳ್ಳುವವರೂ ಇರುತ್ತಾರೆ. ಆ ಸಮಯದಲ್ಲಿ ಅವರ ಗ್ರಹಗಳು ಅಷ್ಟು ದುಷ್ಟವಾಗಿರುತ್ತವೆ. ಆ ಕಾಲವನ್ನು ಮೀರಿಬಿಟ್ಟರೆ ಅದಕ್ಕಿಂತಲೂ ಮಹತ್ತ್ವಪೂರಿತವಾದ ಕಾರಣಕ್ಕಾದರೂ ಮನುಷ್ಯನು ಆತ್ಮಹತ್ಯೆಮಾಡಿಕೊಳ್ಳುವುದಿಲ್ಲ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಇದರ ಅರಿವಾ ಗುವುದು. ಈ ಕಾರಣದಿಂದ ಆತ್ಮಹತ್ಯೆಯೂ ಕೃತ್ರಿಮವಲ್ಲ–ಎಂದರೆ ಸ್ವೇಚ್ಛೆಯಿಂದ ಸಾಧಿತವಾಗತಕ್ಕುದ್ದಲ್ಲ. ಇದರ ಹಿನ್ನೆಲೆಯಲ್ಲಿ ಅವನ ಜಾತಕಕ್ಕೆ ಸಂಬಂಧಿಸಿದಂತೆ ಗ್ರಹಗಳು ಬಹುದುಷ್ಟವಾಗಿರುವುದೇ ಇದಕ್ಕೆ ಕಾರಣವಾಗು ತ್ತದೆ. ಗ್ರಹಗಳೆಂದರೆ ಅರ್ಥಾತ್ ಪರಮೇಶ್ವರ. ಪರಮೇಶ್ವರನೇ ಎಲ್ಲ ವಿಧವಾದ ಮೃತ್ಯುವಿಗೂ ಕಾರಣನಾಗಿರುತ್ತಾನೆ. ಅವನ ನಿಯಮದಂತೆ ಜನನ-ಮರಣಗಳು ನಡೆಯುತ್ತವೆ. ಇದರಲ್ಲಿ ಮನುಷ್ಯನ ಅಥವಾ ಪ್ರಾಣಿಯ ಸ್ವಾತಂತ್ರ್ಯವೇನೂ ಇರುವುದಿಲ್ಲ.)

ಗಾಲವ! ಗುರುದಕ್ಷಿಣೆಗಾಗಿ ಎಂಟು ನೂರು ಕುದುರೆಗಳು ಬೇಕೆಂಬ ವಿಷಯವನ್ನು ಈ ಮೊದಲೇ ನೀನು ನನ್ನೊಡನೆ ಏಕೆ ಹೇಳಲಿಲ್ಲ? (ನೀನು ಯಾವುದೋ ಆಪತ್ತಿನಲ್ಲಿರುವೆಯೆಂಬುದನ್ನು ತಿಳಿದು ನಾನು ನಿನಗೆ ಸಹಾಯ ಮಾಡಲು ಬಂದೆನು. ಆದರೆ ನಿನ್ನ ದುಃಖಕ್ಕೆ ಮುಖ್ಯಕಾರಣವೇನೆಂಬುದು ನನಗೆ ತಿಳಿಯದು.) ಆದರೆ ನೀನು ಇದಕ್ಕಾಗಿ ಪರಿತಪಿಸಬೇಕಾಗಿಲ್ಲ. ನಿನ್ನ

ಅಭಿಲಾಷೆಯನ್ನು ಪೂರೈಸಿಕೊಳ್ಳುವುದಕ್ಕೆ ಒಂದು ದೊಡ್ಡ ಉಪಾಯವೇ ಇದೆ. ಆ ಉಪಾಯದಿಂದ ನಿನ್ನ ಕಾರ್ಯಸಿದ್ಧಿಯಾಗುತ್ತದೆ. (ನೀನಿಚ್ಛಿಸಿರುವ ಕುದುರೆಗಳನ್ನು ನೀನು ಪಡೆದುಕೊಳ್ಳುವೆ.) ಗಾಲವ! ಮುಂದೆ ಕಾಣುವ ಋಷಭವೆಂಬ ಪರ್ವತವು ಸಮುದ್ರದ ಅಂಚಿನಲ್ಲಿದೆ. ಅಲ್ಲಿ ನಾವು ಸ್ವಲ್ಪಕಾಲ ವಿಶ್ರಮಿಸಿಕೊಂಡು ಊಟಮಾಡಿ ಅನಂತರ ಹಿಂದಿರುಗೋಣ. ಆಗಬಹುದಲ್ಲವೇ?"

೧೧೨ನೆಯ ಅಧ್ಯಾಯವು ಮುಗಿಯಿತು.

ಹತ್ತನೆಯ ಸಂಪುಟವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು

ಶ್ರೀ ಸದ್ಗುರುಚರಣಾರವಿನ್ದಾರ್ಪಣಮಸ್ತು

ಓಂ ತತ್ಸತ್

